ಮಲ್ಲಕವಿ ಸಂಯೋಜಿತಂ

# ಕಾವ್ಯಸಾರಂ

ಎನ್. ಅನಂತರಂಗಾಚಾರ್, ಎಂ.ಎ., ಬಿ.ಟಿ.



ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ
ಚಾಮರಾಜ ಪೇಟೆ, ಬೆಂಗಳೂರು-510018

ತ್ರೈವಾರ್ಷಿಕ ಯೋಜನೆಯ ಪುಸ್ತಕಮಾಲೆ ೭೧

ಮಲ್ಲಕವಿ ಸಂಯೋಜಿತಂ

# ಕಾವ್ಯಸಾರಂ

ಸಂಪಾದಕ

ಎನ್. ಅನಂತರಂಗಾಚಾರ್, ಎಂ.ಎ., ಬಿ.ಟಿ.





ಕನ್ನಡ ಸಾಹಿತ್ಯ ಪರಿಷತ್ತು
ಪಂಪ ಮಹಾಕವಿ ರಸ್ತೆ
ಚಾಮರಾಜಪೇಟೆ, ಬೆಂಗಳೂರು - 510018

# ಪ್ರಸ್ತಾವನೆ

ಕನ್ನಡ ನಾಡು ನುಡಿ ಸಂಸ್ಕೃತಿಯ ಪುರೋಭಿವೃದ್ಧಿಗಾಗಿ ಕನ್ನಡ ಸಾಹಿತ್ಯಪರಿಷತ್ತು ಕನ್ನಡಾಭಿಮಾನಿಗಳ ಸಲಹೆ ಸಹಕಾರ ಪಡೆದು ತ್ರೈವಾರ್ಷಿಕ ಯೋಜನೆಯನ್ನು ರೂಪಿಸಿದೆ. ಈ ಯೋಜನೆಯಲ್ಲಿ ಅಡಕ ವಾಗಿರುವ ಅಂಶಗಳನ್ನು ೧೯೭೦ನೆಯ ಜನವರಿಯಿಂದ ಮೂರು ವರ್ಷಗಳ ಕಾಲಾವಧಿಯಲ್ಲಿ ಕಾರ್ಯಗತ ಮಾಡಬೇಕಾಗಿದ್ದು ಈ ಯೋಜನೆಗೆ ತಗಲುವ ವೆಚ್ಚವು ಇಪ್ಪತ್ತು ಲಕ್ಷ ರೂಪಾಯಿಗಳೆಂದು ಅಂದಾಜಾಗಿದೆ. ಈ ಮೊತ್ತದ ಮೂರನೆಯ ಒಂದು ಭಾಗದಷ್ಟು ಹಣವನ್ನು ಪುಸ್ತಕಗಳ ಪ್ರಕಟಣೆಗಾಗಿ ಯೋಜನೆ ಯಲ್ಲಿ ವಿನ್ಯಾಸಲಾಗಿರಿಸಿದೆ.

ಪರಿಷತ್ತು ಪ್ರಾರಂಭವಾದ ತರುವಾಯ ಕನ್ನಡದಲ್ಲಿ ಅನೇಕಾನೇಕ ವಿದ್ವತ್ಪೂರ್ಣ ಗ್ರಂಥಗಳನ್ನು ಪ್ರಕಟಿಸಿದ್ದು ಅವು ಓದುಗರ ಮನ್ನಣೆಗೆ ಪಾತ್ರ ವಾಗಿವೆಯಷ್ಟೆ. ಇವುಗಳ ಜೊತೆಗೆ ಪರಿಷತ್ತಿನ ತ್ರೈವಾರ್ಷಿಕ ಯೋಜನೆಯ ಅವಧಿಯಲ್ಲಿ ಒಂದು ನೂರು ಪುಸ್ತಕಗಳನ್ನಾದರೂ ಹೊರತರಬೇಕೆಂದು ನಿಯೋಜಿಸಲಾಗಿದೆ. ಪುನರ್ಮುದ್ರಣವಾಗಬೇಕಾದ ಕೆಲವು ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವುದಲ್ಲದೆ ಶಾಸ್ತ್ರ, ಸಾಹಿತ್ಯ, ಕಲೆ, ವಿಜ್ಞಾನ ಮೊದ ಲಾದ ನಾನಾ ವಿಷಯಗಳನ್ನು ಕುರಿತ ಗ್ರಂಥಗಳನ್ನೂ ಭಾಷಾಂತರ ಕೃತಿಗಳನ್ನೂ ಜೊತೆಗೆ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಸಂಕ್ಷಿಪ್ತ ಶಬ್ದಕೋಶವನ್ನೂ ಆದಷ್ಟು ಜಾಗ್ರತೆ ಪ್ರಕಟಿಸಬೇಕೆಂದು ತೀರ್ಮಾನಿಸಿದೆ.

ಓದುಗರ ದೃಷ್ಟಿಯಿಂದ ಪುಸ್ತಕದ ಬೆಲೆ ದುಬಾರಿಯಾಗದಂತೆ ನೋಡಿ ಕೊಳ್ಳುವುದೂ ಕೆಲವು ಪುಸ್ತಕಗಳನ್ನು ಸಹಾಯಧನ ಪಡೆದು ಕಡಮೆ ಬೆಲೆಗೆ ಮಾರಾಟ ಮಾಡುವುದೂ ಪರಿಷತ್ತಿನ ಆಶಯಗಳಾಗಿವೆ.

ಪ್ರಕಟಣೆಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಗಮನದಲ್ಲಿಟ್ಟು ಕೊಂಡು ಪ್ರಕಟಣೆಯ ಕಾರ್ಯವನ್ನು ಕಾರ್ಯಗತ ಮಾಡಲು ಗ್ರಂಥಪ್ರಕಟಣ ಸಲಹಾಸಮಿತಿಯೊಂದನ್ನು ರಚಿಸಿದೆ. ಆ ಸಮಿತಿಯಲ್ಲಿ ಡಾ || ಹಾ. ಮಾ. ನಾಯಕ, ಡಾ || ಜಿ. ಎಸ್. ಶಿವರುದ್ರಪ್ಪ, ಡಾ || ಆರ್. ಸಿ. ಹಿರೇಮಠ, ಪ್ರೊ || ಎಂ. ಮರಿಯಪ್ಪಭಟ್ಟ, ಶ್ರೀ ಎಚ್. ಎಲ್. ನಾಗೇಗೌಡ ಮತ್ತು ಶ್ರೀ ಸಿದ್ಧಯ್ಯ ಪುರಾಣಿಕ ಇವರುಗಳು ಸದಸ್ಯರಾಗಿದ್ದಾರೆ. ಡಾ || ರಂ. ಶ್ರೀ. ಮುಗುಳಿಯವರು ಪ್ರಧಾನ ಸಂಪಾದಕತ್ವದ ಹೊಣೆ ಹೊತ್ತಿದ್ದಾರೆ. ಪರಿಷತ್ತಿನ ಗೌರವ ಕಾರ್ಯದರ್ಶಿಗಳಾದ ಶ್ರೀ ವೆಂಕಟೇಶ ಸಾಂಗ್ಲಿ, ಶ್ರೀ ಹಂಪ

ನಾಗರಾಜಯ್ಯ ಅವರುಗಳು ಈ ಸಮಿತಿಯ ಕಾರ್ಯದರ್ಶಿಗಳಾಗಿದ್ದಾರೆ. ಇವರೆಲ್ಲರಿಗೂ ಪರಿಷತ್ತು ಆಭಾರಿಯಾಗಿದೆ.

ಈ ಸಮಿತಿಯ ಸಹಕಾರದಿಂದ ಪ್ರಕಟವಾಗುವ ಪರಿಷತ್ತಿನ ಪ್ರಕಟಣೆಗಳನ್ನು ಕನ್ನಡಾಭಿಮಾನಿಗಳು ಆದರದಿಂದ ಬರಮಾಡಿಕೊಂಡು ಶ್ರದ್ಧೆಯಿಂದ ಓದಬೇಕಾಗಿ ಪ್ರಾರ್ಥನೆ.

ದೇಶಹಳ್ಳಿ ಜಿ. ನಾರಾಯಣ

ಬೆಂಗಳೂರು
ಅಧ್ಯಕ್ಷ
೧೫–೮–೧೯೬೩
ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

ಮಲ್ಲಕವಿ ಸಂಯೋಜಿತವಾದ 'ಕಾವ್ಯಸಾರ' ಕನ್ನಡ ಸಾಹಿತ್ಯದಲ್ಲಿ ನಮಗೆ ದೊರೆತಿರುವ ಮೂರನೆಯ ಸಂಕಲನ ಗ್ರಂಥ. ಮೊದಲನೆಯದು ಮಲ್ಲಿಕಾರ್ಜುನನ 'ಸೂಕ್ತಿ ಸುಧಾರ್ಣವ: ಅವನಿಗೂ ಮಲ್ಲಕವಿ ಎಂಬ ಹೆಸರಿದ್ದಂತೆ ಕಾಣಿಸುತ್ತದೆ. ,ಮಲ್ಲಬುಧ' ಎಂದು ತಾನೇ ಹೇಳಿಕೊಂಡಿದ್ದಾನೆ. ಇವನೇ ಪ್ರಸಕ್ತ ಕಾವ್ಯಸಾರದ ಕರ್ತೃ ವೊ ಎಂಬ ಸಂಶಯಕ್ಕೂ ಅವಕಾಶವಿದೆ. ಆದರೆ ಎರಡನೆಯ 'ಕಾವ್ಯಸಾರ'ವನ್ನು ಸಂಕಲಿಸಿದ ಅಭಿನವವಾದಿವಿದ್ಯಾನಂದನ ಗ್ರಂಥವಲ್ಲಿರುವ ಪದ್ಯಗಳು ಮತ್ತು ಹೆಚ್ಚಿನ ಪದ್ಯಗಳು ಬಹುಶಃ ಅವನ ಕಾಲದಿಂದೀಚಿನ ಪದ್ಯಗಳು ಪ್ರಸಕ್ತ ಕಾವ್ಯಸಾರದಲ್ಲಿ ದೊರಕುವುದರಿಂದ ಈತನು ಅವನಿಗಿಂತ ಈಚಿನವನೂ ಮಲ್ಲಿಕಾರ್ಜುನನಿಂದ ಭಿನ್ನನೂ ಆಗಿರಬೇಕು. ಸಂಕಲನದಲ್ಲಿ ಎಲ್ಲಿಯೂ ಕವಿಯ ಕಾಲ, ದೇಶ, ಜೀವನಗಳ ಬಗ್ಗೆ ಏನೊಂದು ಅಂಶವೂ ದೊರಕುವುದಿಲ್ಲ. ಆದರೆ ಗ್ರಂಥದ ಮೌಲ್ಯ ಮಾತ್ರ ಹಿಂದಿನ ಎರಡು ಸಂಕಲನಗಳಿಗಿಂತ ಅಧಿಕವಾಗಿದೆ.

ಪೂರ್ವ ಕಾವ್ಯಸಂಪ್ರದಾಯದ ರೀತ್ಯ ಕಾವ್ಯದ ಹದಿನೆಂಟು ವರ್ಣನೆಗಳಿಗನುಸಾರವಾಗಿ ಗ್ರಂಥ ಸಂಕಲನವಾಗಿದೆ. ಮಲ್ಲಿಕಾರ್ಜುನನ ಕ್ರಮವನ್ನೇ ಮಲ್ಲಕವಿಯೂ ಅನುಸರಿಸಿರುತ್ತಾನೆ. ಈ ಸಂಗ್ರಹದಲ್ಲಿ ವಾದಿವಿದ್ಯಾನಂದನ ಕಾವ್ಯಸಾರದ ಪದ್ಯಗಳೂ ಸರಿಸುಮಾರು ದೊರಕುತ್ತವೆ. ಆ ಪದ್ಯಗಳನ್ನೂ ಬಿಟ್ಟು ಹೆಚ್ಚಿನ ಪದ್ಯಗಳ ಸಂಖ್ಯೆ ಸುಮಾರು ೨೦೦೦. ಇವುಗಳಿಗೆ 'ಆಕರ'ವನ್ನು ಕಂಡುಹಿಡಿಯುವುದು ಬಹು ಶ್ರಮ. ಸಾಧ್ಯವಾದ ಕೆಲಸ. ಇಲ್ಲಿನ ಪದ್ಯ ಸಂಖ್ಯೆಯ ದೃಷ್ಟಿಯಿಂದ ಆಲೋಚಿಸಿದರೆ ಕನ್ನಡದಲ್ಲಿ ನಷ್ಟವಾಗಿರುವ ಗ್ರಂಥಗಳೆಷ್ಟೆಂಬುದನ್ನು ಊಹಿಸಬಹುದು.

ಕನ್ನಡ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ, ಕಾವ್ಯ ಪ್ರೌಢಿಮೆಯ ದೃಷ್ಟಿಯಿಂದ ಪರಿಶೀಲಿಸಿದರೆ ಈ ಸಂಗ್ರಹ ತುಂಬ ಪ್ರಯೋಜನಕರವಾದದ್ದು. ಕನ್ನಡ ಸಾಹಿತ್ಯ ಸಂಶೋಧಕರಿಗೆ ಇದೊಂದು ಗಣಿ ಆಗುವುದರಲ್ಲಿ ಸಂಶಯವಿಲ್ಲ. ಇದರಲ್ಲಿ ಬರುವ ಆಕರ ತಿಳಿಯುವ ಪದ್ಯರಾಶಿಗಳನ್ನು ಗುರುತಿಸಿ ಹಿಂದಿನ ಕವಿಕಾವ್ಯ ಪರಿಚಯದ ಸಂಶೋಧನೆ ನಡೆಯಬೇಕಾಗಿದೆ.

ಈ ಗ್ರಂಥದ ಅನುಬಂಧದಲ್ಲಿ ಒಂದು ವಿಶೇಷವಿದೆ. ಮೂರು 'ಕಾವ್ಯಸಾರ'ಗಳಲ್ಲಿ ಸಂಗ್ರಹಿಸಿರುವ ಪದ್ಯಗಳ ಆಕರಗಳನ್ನು ಗುರುತಿಸುವಾಗ ಎಷ್ಟೋ ಪದ್ಯಗಳ ಆಕರಗಳು ದೊರೆಯದೆ ಇರುವುದು ಸರಿಯಷ್ಟೆ. ಹಾಗೆಯೇ 'ಕವಿರಾಜಮಾರ್ಗ' 'ಶಬ್ದಮಣಿದರ್ಪಣ' 'ಭಾಷಾಭೂಷಣ' ಮತ್ತು 'ಕಾವ್ಯಾವಲೋಕನ'ಗಳಲ್ಲಿ ಉದಾಹರಿಸಿರುವ ಅನೇಕ ಪದ್ಯಗಳಿಗೆ ಆಕರಗಳು ದೊರಕಿಲ್ಲ. ಹಾಗೆ ಆಕರಗಳನ್ನು ಗುರುತಿಸಲಾಗದೆ ಇರುವ ಪದ್ಯ

ಗಳ ಅಕಾರಾದಿಯನ್ನು ಈ ಅನುಬಂಧದಲ್ಲಿ ಕೊಟ್ಟಿರುವುದು ಸಂಶೋಧಕರಿಗೆ ಸಹಾಯಕ ಅಂಶ. ಈ ಎಲ್ಲ ಗ್ರಂಥಗಳಲ್ಲಿ ಎಷ್ಟು ಪದ್ಯಗಳಿಗೆ ಆಕರ ದೊರಕುವುದಿಲ್ಲ ಎಂಬುದನ್ನು ಗಮನಿಸಿದರೆ, ಕನ್ನಡ ಸಾಹಿತ್ಯದಲ್ಲಿ ಎಷ್ಟು ಹಳೆಯ ಗ್ರಂಥಗಳು ಕಣ್ಮರೆಯಾಗಿ ನಿಂತಿವೆ ಎಂದು ಮನವರಿಕೆ ಆಗದೆ ಇರದು. ಇಂಥ ಅನುಬಂಧದ ಆವಶ್ಯಕತೆ ತುಂಬ ಅಗತ್ಯವಾಗಿತ್ತು. ಅದನ್ನು ಕನ್ನಡಿಗರಿಗೆ ಆಚಾರ್ಯರು ಈ ಪುಸ್ತಕದ ಮೂಲಕ ಒದಗಿಸಿ ಕೊಟ್ಟಿದ್ದಾರೆ.

ಈ ಗ್ರಂಥ ಹಸ್ತಪ್ರತಿಗಳಿಂದ ಇದೀಗ ಮೊದಲಬಾರಿಗೆ ಪ್ರಕಟವಾಗಿ ಕನ್ನಡಿಗರಿಗೆ ದೊರೆಯುವಂತಾಗಿದೆ. ವಿದ್ವಾಂಸರು, ಸಾಹಿತ್ಯಾಭ್ಯಾಸಿಗಳು ಇದರ ಪೂರ್ಣ ಪ್ರಯೋಜನವನ್ನು ಪಡೆಯುತ್ತಾರೆಂದು ನಂಬಿದ್ದೇವೆ. ನಿವೃತ್ತ ಕನ್ನಡ ಪ್ರಾಧ್ಯಾಪಕರಾದ ಶ್ರೀ ಎನ್. ಅನಂತರಂಗಾಚಾರ್ಯರು ಅನೇಕ ಹಳಗನ್ನಡ ಕಾವ್ಯಗಳನ್ನು ಸಂಪಾದಿಸಿರುವರಲ್ಲದೆ 'ಸಾಹಿತ್ಯ ಭಾರತಿ' ಎಂಬ ಭಾರತೀಯ ಸಾಹಿತ್ಯವನ್ನು ಪರಿಚಯ ಮಾಡಿಕೊಡುವ ಬೃಹದ್ ಗ್ರಂಥವನ್ನು ರಚಿಸಿ ಕನ್ನಡ ಸಾರಸ್ವತಸಂಪತ್ತನ್ನು ಹೆಚ್ಚಿಸಿದ್ದಾರೆ. ಅವರು ಈ ಕಾವ್ಯಸಾರ ಗ್ರಂಥವನ್ನು ಸಂಪಾದಿಸಿ ತಮ್ಮ ವಿದ್ವತ್ಪೂರ್ಣ ಮುನ್ನುಡಿಯೊಡನೆ ಪ್ರಕಟಿಸಲು ಕನ್ನಡ ಸಾಹಿತ್ಯ ಪರಿಷತ್ತಿಗೆ ಅನುವು ಮಾಡಿಕೊಟ್ಟಿದ್ದಾರೆ.

ಅವರಿಗೆ ನಮ್ಮ ಹಾರ್ದಿಕ ವಂದನೆಗಳು ಸಲ್ಲುತ್ತವೆ. ಅವರು ಪಟ್ಟಿರುವ ಪರಿಶ್ರಮವು ಸಾರ್ಥಕವಾಗಲಿ ಎಂದು ಹಾರೈಸುತ್ತೇವೆ.

ಬೆಂಗಳೂರು
೧೫–೮–೬೩

ರಂ. ಶ್ರೀ. ಮುಗಳಿ
ಗ್ರಂಥಪ್ರಕಟಣ ಸಲಹಾಸಮಿತಿ

# ಸಂಪಾದಕರ ಮಾತು

ಪ್ರಸಕ್ತ ಗ್ರಂಥವಾದ 'ಕಾವ್ಯಸಾರ'ವು ಕಾವ್ಯಾಂಗಗಳಾದ ಅಷ್ಟಾದಶ ವರ್ಣನೆಗಳನ್ನು ಕುರಿತ ಒಂದು ಸಂಕಲನ ಗ್ರಂಥ. ಇದನ್ನು ರಚಿಸಿದವನು ಮಲ್ಲಕವಿ. ಇದು ಆಶ್ವಾಸಾಂತ್ಯದಲ್ಲಿ ಬರುವ 'ಇದು ಸರಸ್ವತೀಸರ್ವಾಂಗ ದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣಸುಕವಿಪುಂಗವಮಲ್ಲನಿರ್ವಿತ ಕಾವ್ಯಸಾರ ಮಹಾಪ್ರಬಂಧದೊಳ್' ಎಂಬ ವಚನಭಾಗದಿಂದ ಮಾತ್ರ ಸೂಚಿತವಾಗಿದೆ. ಇದು ಬಿಟ್ಟರೆ 'ಕಾವ್ಯಸಾರ'ವು ಏತತ್ಕೃತವಾದುದೆಂದು ಹೇಳುವುದಕ್ಕೆ ಕಾವ್ಯದ ಶರೀರದಲ್ಲಿ ಮತ್ತೆಲ್ಲಿಯೂ ಯಾವ ಆಧಾರವೂ ಇಲ್ಲ. ಹಾಗೆಯೇ ಕವಿಯ ಕಾಲ, ದೇಶ, ಜೀವನ ವಿಷಯಗಳನ್ನು ತಿಳಿಯುವುದಕ್ಕೂ ಗ್ರಂಥದಲ್ಲಿ ಯಾವ ಸೂಚನೆಗಳೂ ಇಲ್ಲ.

ಆದರೆ ಇದು ಮಲ್ಲಿಕಾರ್ಜುನನಿಂದ ಸಂಯೋಜಿತವಾದ 'ಸೂಕ್ತಿ ಸುಧಾರ್ಣವ'ದ ಆಧಾರದ ಮೇಲೆ ರಚಿತವಾಗಿರುವುದು ನಿರ್ವಿವಾದವಾದ ವಿಷಯ. ಆಶ್ವಾಸಗಳ ವಿಭಾಗ ಕ್ರಮ, ಆದಿ ಅಂತ್ಯ ಪದ್ಯಗಳು, ಗ್ರಂಥಶರೀರದಲ್ಲಿ ಬರುವ ಭಾಗಗಳು ಎಲ್ಲವೂ ಬಹು ಮಟ್ಟಿಗೆ ಒಂದೇ ರೀತಿಯಾಗಿವೆ. ಆಶ್ವಾಸಾಂತ್ಯದಲ್ಲಿ ಬರುವ 'ಓರಂತೆ ಮೆಚ್ಚಿದಂ ಕೃತಿ ಸಾರಂ........ಹೊಯ್ಸಳ ವಂಶೋದ್ಧಾರಂ ನರಸಿಂಹಸುತಂ ದೋರಸಮುದ್ರಾಧಿನಾಯಕಂ ಸೋಮನೃಪಂ' ಎಂಬ ಭಾಗವು ಈ ಅಭಿಪ್ರಾಯವನ್ನು ಸ್ಥಿರಪಡಿಸುತ್ತದೆ. ಮಲ್ಲಿಕಾರ್ಜುನನು ಈ ಸಂಕಲನವನ್ನು ವೀರಹೊಯ್ಸಳ ಸೋಯಿದೇವರಾಯ ವಿನೋದಾಕರ್ಣನ ಕೌತುಕೋತ್ಪಾದನೆಗಾಗಿಯೇ ರಚಿಸಿದುದೆಂಬುದನ್ನು ಪ್ರತಿಯೊಂದು ಆಶ್ವಾಸದ ಕೊನೆಯಲ್ಲಿಯೂ ಸ್ಪಷ್ಟಪಡಿಸಿದ್ದಾನೆ. ಅಲ್ಲದೆ 'ಯಾದವಕಟಕಾಚಾರ್ಯ ಸುಕವಿ ಸುಮನೋಬಾಣಜಾಮಾತೃ ಪರಮಚಿದಾನಂದಮಲ್ಲಿಕಾರ್ಜುನ ಸಂಯೋಜಿತಂ' ಎಂದೂ 'ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣ ಕವಿಪುಂಗವ ಪ್ರಣೀತ ಮಹಾಪ್ರಬಂಧಸಾರೋದ್ಧಾರಂ' ಎಂದೂ ಸ್ಪಷ್ಟವಾಗಿ ತಿಳಿಸಿದ್ದಾನೆ. ಪ್ರಸಕ್ತಮಲ್ಲಕವಿಯು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣ ಎಂಬುದನ್ನು ತನಗೆ ವಿಶೇಷಣವನ್ನಾಗಿಯೇ ಉಪಯೋಗಿಸಿಕೊಂಡು 'ಸುಕವಿಮಲ್ಲನಿರ್ಮಿತ' ಕಾವ್ಯಸಾರ ಮಹಾಪ್ರಬಂಧದೊಳ್ ಎಂದು ಹೇಳಿದ್ದಾನೆ. ಇದು ಅರ್ಥವಿಲ್ಲದ ಮಾತು. ಇದು ಯಾವ ಒಬ್ಬ ಕವಿಯ ನಿರ್ಮಿತವಲ್ಲ. ಮಹಾಕವಿಪುಂಗವಪ್ರಣೀತ ಮಹಾಪ್ರಬಂಧಸಾರೋದ್ಧಾರ. ಹಾಗೆಯೇ ಆಶ್ವಾಸಾಂತ್ಯದಲ್ಲಿ ಹೊಯ್ಸಳವಂಶೋದ್ಧಾರಂ ನರಸಿಂಹಸುತಂ ದೋರಸಮುದ್ರಾಧಿನಾಯಕಂ ಸೋಮನೃಪಂ ಮೆಚ್ಚಿದಂ ಎಂಬ ಭಾಗವನ್ನು ಸ್ಪಷ್ಟವಾಗಿ ಹೇಳಿ ವೀರಹೊಯ್ಸಳ ಸೋಯಿದೇವರಾಯವಿನೋದಾಕರ್ಣನಕೌತುಕೋತ್ಪಾದನ ಎಂಬ ಭಾಗವನ್ನು ಏಕೆ ಬಿಟ್ಟಿದ್ದಾನೆಂಬುದೂ ತಿಳಿಯದು. ಅಲ್ಲದೆ ಮಲ್ಲಿಕಾರ್ಜುನನಿಗೆ ಮಲ್ಲ,

ಮಲ್ಲಪ, ಮಲ್ಲಿಕಾರ್ಜುನ, ಚಿದಾನಂದಮಲ್ಲಿಕಾರ್ಜುನ ಎಂಬ ಪರ್ಯಾಯನಾಮಗಳಿದ್ದುದರಿಂದ ಮಲ್ಲಿಕವಿಯೆಂಬುದು ಆತನ ಹೆಸರೇ ಇದ್ದರೂ ಇರಬಹುದು. ಆದುದರಿಂದ ಈ ಕೃತಿಯ ಸಂಕಲನಕಾರನ ಹೆಸರನ್ನು ಸ್ಪಷ್ಟವಾಗಿ ನಿಷ್ಕರ್ಷೆಮಾಡುವುದು ಕಷ್ಟಸಾಧ್ಯವಾದ ಕೆಲಸವಾಗಿದೆ. ಮಲ್ಲಿಕಾರ್ಜುನನಿಂದ ಇತ್ತೀಚಿನವನಾದ (ಎಷ್ಟು ಈಚಿಗೆ ಎಂಬುದನ್ನು ಸ್ಪಷ್ಟವಾಗಿ ತಿಳಿಸಲು ಸಾಧ್ಯವಿಲ್ಲ) ಒಬ್ಬನು ಮಲ್ಲಿಕಾರ್ಜುನನ ಸಂಕಲನದಿಂದ ಪ್ರೇರಿತನಾಗಿ ಅದನ್ನೇ ಮಾದರಿಯಾಗಿಟ್ಟುಕೊಂಡು ಅದರಲ್ಲಿರುವ ಕೆಲವು ಪದ್ಯಗಳನ್ನೂ ಕ್ರಮವನ್ನೂ ಉಳಿಸಿಕೊಂಡು ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಅನೇಕ ಕನ್ನಡ ಚಂಪೂ ಗ್ರಂಥಗಳಿಂದ ತನ್ನ ಅಭಿರುಚಿಗೆ ತಕ್ಕಂತೆ ಅನೇಕ ಪದ್ಯಗಳನ್ನು ಆಯ್ದುಕೊಂಡು ಈ ಸಂಕಲನವನ್ನು ರಚಿಸಿದ್ದಾನೆಂದು ಊಹಿಸಬಹುದು. ಆದುದರಿಂದ ಕೃತಿಕಾರನೇ ಸ್ಪಷ್ಟವಾಗಿ ನಿರ್ದಿಷ್ಟವಿಲ್ಲದಿರುವಾಗ ಅವನ ಕಾಲ ದೇಶ ಗೋತ್ರಗಳ ವಿಷಯವಾಗಿ ವಿಚಾರ ಮಾಡಲು ಅವಕಾಶವೇ ಇಲ್ಲ. ಆಕರಗಳ ದೃಷ್ಟಿಯಿಂದ ಸಂಕಲನದ ಆದ್ಯಂತಮಿತಿಯನ್ನು ಸೂಚಿಸಬಹುದು. ಒಂದನೆಯ ಗುಣವರ್ಮನ 'ಶೂದ್ರಕ'ದಿಂದ ಅಭಿನವವಾದಿ ವಿದ್ಯಾನಂದನ 'ಕಾವ್ಯಸಾರದ' ವರೆಗಿರುವ ಕೃತಿಗಳಿಂದ ಪದ್ಯಗಳು ಅನುವಾದವಾಗಿರುವುದರಿಂದ ಈ ಗ್ರಂಥದ ವ್ಯಾಪ್ತಿ ೧೦ನೆಯ ಶತಮಾನದಿಂದ ೧೬ ನೆಯ ಶತಮಾನದವರೆಗೆಂದು ಊಹಿಸಬಹುದು.

ಪೀಠಿಕಾಪ್ರಕರಣದಿಂದಲೂ ಕವಿಯ ವಿಷಯವೇನೂ ತಿಳಿಯುವಂತಿಲ್ಲ. ಮೊದಲನೆಯ ನಾಂದೀಪದ್ಯ ಆದಿಪರಮೇಶ್ವರನ ವಿಷಯಕವಾದುದು. ಇದರ ಆಧಾರದ ಮೇಲೆಯೆ ಪಂಡಿತರು ಮೂಲಸಂಕಲನಕಾರನಾದ ಮಲ್ಲಿಕಾರ್ಜುನನು ಜೈನನಿರಬಹುದೆಂದು ಊಹಿಸಿರುವರು. ಇದು ಕವಿಯ ಸ್ವಂತ ರಚನೆಯೋ ಬೇರೆಲ್ಲಿಂದಲಾದರೂ ಉದ್ಧರಣವೋ ಹೇಳುವಂತಿಲ್ಲ. ಮುಂದೆ ಈಶ್ವರನ ವಿಷಯಕವಾದ ನಾಲ್ಕು ಪ್ರಾರ್ಥನಾ ಪದ್ಯಗಳಿವೆ. ಇವುಗಳಲ್ಲೊಂದು 'ಛಂದೋಂಬುಧಿ'ಯಿಂದಲೂ ಮತ್ತೊಂದು 'ಜಗನ್ನಾಥ ವಿಜಯ'ದಿಂದಲೂ ಉದ್ಧೃತವಾದುದು. ಮುಂದೆ ಪಾರ್ವತೀಸ್ತೋತ್ರರೂಪವಾದ ಒಂದು ಪದ್ಯವೂ ವಿನಾಯಕನ ಪರವಾದ ಎರಡು ಪದ್ಯಗಳೂ ಸರಸ್ವತಿಯನ್ನು ಕುರಿತ ಒಂದು ಪದ್ಯವೂ ಇವೆ. ವಿನಾಯಕನ ಪ್ರಾರ್ಥನೆಯಲ್ಲಿ ಒಂದು 'ಜಗನ್ನಾಥ ವಿಜಯ'ಕ್ಕೆ ಸೇರಿದುದು. ಮುಂದೆ ವೀರಸೋಮೇಶ್ವರನ ಸ್ತುತಿ ಇದೆ. ಈ ಪದ್ಯವೂ 'ಸೂಕ್ತಿಸುಧಾರ್ಣವ'ದಿಂದ ಆರಿಸಿಕೊಂಡಿರುವುದು. ಕಾವ್ಯದ ಪ್ರೌಢಿಮೆಯನ್ನೂ ಕೃತಿನಿರ್ಮಾಣಕ್ಕೆ ಕಾರಣವನ್ನೂ ಸೂಚಿಸುವ ಪದ್ಯಗಳೂ ಅಲ್ಲಿಯ ಭಾಗಗಳೇ. ಪೂರ್ವಕವಿಸಮೂಹವನ್ನು ಸ್ತುತಿಸುವ 'ರನ್ನನ ದೇಸಿ ಪಂಪನ ಗುಣಂ' ಎಂದು ಪ್ರಾರಂಭವಾಗುವ ಪದ್ಯವೂ 'ಸೂಕ್ತಿಸುಧಾರ್ಣವ'ದ ಆಕರವನ್ನುಳ್ಳದ್ದು. ಈ ಪದ್ಯಗಳಲ್ಲೆಲ್ಲ ಮಲ್ಲಿಕಾರ್ಜುನನನ್ನು ಅಥವಾ ಕೃತಿಕಾರನನ್ನು ಕವಿಮಲ್ಲನೆಂದೇ ಸಂಬೋ

ಧಿಸಿದೆ.* ಮುಂದೆ ಸುಕವಿ ದುಷ್ಕವಿಗಳ ಸ್ತೋತ್ರ ನಿಂದೆಗಳು ಬರುತ್ತವೆ. ಅವುಗಳಲ್ಲಿ ಅನೇಕವುಗಳಿಗೆ ಆಕರವೇ ಸಿಕ್ಕಿಲ್ಲ. ಈ ಭಾಗದಲ್ಲಿ ಮಧುರನ ಧರ್ಮನಾಥನ ಪುರಾಣ ಗಳಿಂದ ಹೆಚ್ಚಿನ ಪದ್ಯಗಳು ಅನುವಾದವಾಗಿವೆ.

ಪೀಠಿಕಾ ಪ್ರಕರಣದ

ವಾರಿಧಿ ಪರ್ವತಂ ಪುರನರೇಶ್ವರರುದ್ವಹನಂ ಕುಮಾರರಂ
ಭೋರುಹವೈರಿಮಿತ್ರರುದಯಂ ಋತುನಂದನವಂಬು ಸೀಧು ಕಾಂ
ತಾರತಿ ಮಂತ್ರ ಚಿಂತೆ ಚರಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟುಮನೆಯ್ದೆ ಬಣ್ಣಿಪರ್

ಎಂಬ ಪದ್ಯದಲ್ಲಿ ವರ್ಣಿತವಾಗಿರುವ ೧೮ ಅಂಗಗಳಲ್ಲಿ ಕೊನೆಯ ಯುದ್ಧ (ವಿರೋಧಿ ಜಯ) ವಿಷಯವನ್ನುಳಿದು ೧೭ ಅಂಗಗಳು 'ಸೂಕ್ತಿಸುಧಾರ್ಣವ'ದಲ್ಲಿ ವರ್ಣಿತವಾಗಿವೆ. 'ಕಾವ್ಯಸಾರ'ವಾದರೋ ೧೪ನೆಯ ವರ್ಣನೆಯಾದ ವಿಪ್ರಲಂಬದಲ್ಲಿ ಕೊನೆಗೊಂಡು ಉಳಿದ ಮಂತ್ರ ದೂತ ಯಾನ ವಿರೋಧಿಜಯಗಳೆಂಬ ನಾಲ್ಕುವರ್ಣನೆಗಳಿಂದ ಲುಪ್ತವಾಗಿದೆ.

ಈ 'ಕಾವ್ಯಸಾರ'ಕ್ಕೆ ಸೂಕ್ತಿಸುಧಾರ್ಣವೇ ಆಕರವಾಗಿದ್ದರೂ ಇವೆರಡಕ್ಕೂ ಸಮವಾದಿಯಾದ ಪದ್ಯಗಳು ಸುಮಾರು ೭೩೦ ಮಾತ್ರ. 'ಸೂಕ್ತಿಸುಧಾರ್ಣವ'ದ ೧೮ ಆಶ್ವಾಸಗಳ ಪದ್ಯಸಂಖ್ಯೆ ಸುಮಾರು ೨೨೦೦. 'ಕಾವ್ಯಸಾರ'ದಲ್ಲಿ ಮಾತ್ರ ಉಪ ಲಬ್ಧವಾಗಿರುವ ೧೫ ಆಶ್ವಾಸಗಳಿಗೆ ಸಮನಾದ ಪದ್ಯಸಂಖ್ಯೆ ೨೦೦೮ ಅಲ್ಲಿ ಆಕರ ಸಿಕ್ಕಿರುವುದು ಸು ೧೦೦೦ ಪದ್ಯಗಳಿಗೆ ಮಾತ್ರ. 'ಕಾವ್ಯಸಾರ'ದಲ್ಲಿಯಾದರೋ ೧೫ ಆಶ್ವಾಸಗಳ ಪದ್ಯಸಂಖ್ಯೆ ಸು ೩೫೫೫. ಅವುಗಳಲ್ಲಿ ಆಕರ ಸಿಕ್ಕಿರುವುದು ಸು ೧೫೦೦ ಪದ್ಯಗಳಿಗೆ ಮಾತ್ರ. ಉಳಿದ ಸುಮಾರು ೨೦೦೦ ಪದ್ಯಗಳಿಗೆ ಆಕರವೇ ಸಿಕ್ಕಿಲ್ಲ. ಈ ಸಂಖ್ಯೆಯೇ 'ಕಾವ್ಯಸಾರ'ದ ಮಹತ್ವವನ್ನು ಒಂದು ದೃಷ್ಟಿಯಿಂದ ಸೂಚಿಸುತ್ತದೆ. ಆಕರ ಸಿಕ್ಕಿರುವ ೧೫೦೦ ಪದ್ಯಗಳು ಸುಮಾರು ೩೦ ಗ್ರಂಥಗಳಿಂದ ಆಯ್ದುಕೊಂಡ ವಾದುದರಿಂದ ಆಕರಸಿಕ್ಕದ ಉಳಿದ ೨೦೦೦ ಪದ್ಯಗಳು ಅಷ್ಟೇ ಸಂಖ್ಯೆಯ ಗ್ರಂಥಗಳಿಂದ ಲಾದರೂ ಆರಿಸಿಕೊಂಡಿರಬೇಕು. ಅಂದಮೇಲೆ ಕನ್ನಡ ಸಾಹಿತ್ಯದಲ್ಲಿ ಅಷ್ಟು ಗ್ರಂಥಗ ಳಾದರೂ ನಷ್ಟವಾಗಿರಬೇಕು. ಅದರ ಅಸ್ತಿತ್ವವನ್ನು ನಾಮನಿರ್ದೇಶಮಾಡುವುದಕ್ಕಾಗ ದಿದ್ದರೂ ಕೆಲವು ಪದ್ಯಗಳು ಇದನ್ನು ದೃಢೀಕರಿಸುತ್ತವೆ.

ಆಕರಗಳ ದೃಷ್ಟಿಯಿಂದ 'ಕಾವ್ಯಸಾರ'ದಲ್ಲಿ 'ಸೂಕ್ತಿಸುಧಾರ್ಣವ'ದಲ್ಲಿಲ್ಲದ 'ಧರ್ಮ ನಾಥಪುರಾಣ', 'ಅಭಿನವ ದಶಕುಮಾರಚರಿತೆ', 'ಪಂಪಾವಿರೂಪಾಕ್ಷಸ್ಥಾನವರ್ಣನ,

---

*ಮಲ್ಲಿಕಾರ್ಜುನ ಮತ್ತು 'ಸೂಕ್ತಿಸುಧಾರ್ಣವ'ದ ವಿಷಯಕವಾದ ವಿವರಗಳನ್ನು ಮೈಸೂರು ಪ್ರಾಚ್ಯಕೋಶಾಗಾರದಿಂದ ಸಂಪಾದಕರು ಪ್ರಕಟಿಸಿರುವ ಮುನ್ನುಡಿಯಲ್ಲಿ ವಿಶದಪಡಿಸಿದೆ.

'ಶಾಂತೀಶ್ವರಪುರಾಣ' ಇವುಗಳ ಕೆಲವು ಪದ್ಯಗಳು ಅನುವಾದವಾಗಿವೆ. ಅಲ್ಲಿ ಉಪಯೋಗಿಸಿರುವ 'ಉದಯಾದಿತ್ಯಾಲಂಕಾರ', 'ಧರ್ಮಾಮೃತ', ರಸರತ್ನಾಕರ, 'ಲೋಕೋಪಕಾರ', 'ವರ್ಧಮಾನ ಪುರಾಣ'ಗಳಿಂದ ಯಾವ ಪದ್ಯಗಳನ್ನೂ ಆರಿಸಿಕೊಂಡಿಲ್ಲ. ಪದ್ಯಸಂಖ್ಯೆಯ ದೃಷ್ಟಿಯಿಂದ ಸೂಕ್ತಿಸುಧಾರ್ಣವದಲ್ಲಿ ಅನಂತನಾಥಪುರಾಣ (೨೦೭) ಲೀಲಾವತಿ (೨೦೪) ಚಂದ್ರಪ್ರಭಪುರಾಣ, ಜಗನ್ನಾಥವಿಜಯಗಳಿಗೆ ಕ್ರಮವಾಗಿ ಪ್ರಾಮುಖ್ಯವಿದ್ದರೆ ಕಾವ್ಯಸಾರದಲ್ಲಿ ಲೀಲಾವತಿ (೨೬೨), ಜಗನ್ನಾಥವಿಜಯ (೨೩೬), ಗಿರಿಜಾಕಲ್ಯಾಣ (೧೭೨) ಗಳಿಗೆ ಆದ್ಯತೆ ದೊರಕಿದೆ.

'ಕಾವ್ಯಸಾರ'ವು 'ಸೂಕ್ತಿಸುಧಾರ್ಣವ'ಕ್ಕಿಂತ ಈಚಿನದಾದರೂ ಕನ್ನಡಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಬಹು ಮುಖ್ಯವಾಗಿದೆ. ಇದರಲ್ಲಿ ನಮಗೆ ಇದುವರೆಗೂ ತಿಳಿಯದ ಎಷ್ಟೋ ವಿಷಯಗಳು ಪ್ರಕಾಶಕ್ಕೆ ಬರುವುವು. ಈ ಗ್ರಂಥದಲ್ಲಿ ಮೊದಲನೆಯ ಆಶ್ವಾಸದಿಂದ ಕ್ರಮವಾಗಿ ಮಧುರನ 'ಧರ್ಮನಾಥಪುರಾಣ'ದಿಂದ ಪದ್ಯಗಳನ್ನು ಉದ್ಧರಿಸಿದೆ. ಈಗ ಉಪಲಬ್ಧವಾಗಿರುವ ಐಯ್ದು ಆಶ್ವಾಸಗಳಿಂದಲೇ ಸುಮಾರು ೫೬ ಪದ್ಯಗಳು ಉದ್ಧೃತವಾಗಿವೆ. ಮುಂದೆ ಇದೇ ರೀತಿ ಆ ಗ್ರಂಥದ ಅನೇಕ ಪದ್ಯಗಳು ಇಲ್ಲಿ ದೊರೆಯಬಹುದು. ಈ ಗ್ರಂಥದಲ್ಲಿ ನರಸಿಂಹ ಮತ್ತು ಸೋಮಶೇಖರರ (ಶಶಿಶೇಖರ ಮತ್ತು ಚಂದ್ರಶೇಖರ) ವಿಷಯವಾಗಿ ಅನೇಕ ಪದ್ಯಗಳು ಸಿಕ್ಕುವುವು. ಸೋಮಶೇಖರ, ಶಶಿಶೇಖರ, ಚಂದ್ರಶೇಖರ ಎಂಬುವು ಸೋಮೇಶ್ವರನ ಪರ್ಯಾಯನಾಮಗಳಿರಬೇಕು. ಈ ಪದ್ಯಗಳೆಲ್ಲವೂ ಕೇಶಿರಾಜನ 'ಚೋಳಪಾಲಕಚರಿತೆ'ಯಿಂದ ಉದ್ಧೃತವಾಗಿರಬಹುದು. ಕೆಲವು ಪದ್ಯಗಳಲ್ಲಿ ಕುಸುಮಪುರ, ಅವಂತಿಕಾಪುರಿ, ಮಿಥಿಲೆ, ಚಂಪಾಪುರ ವಾಸಂತಿಕಾಪುರ, ಸುಮನಃಪುರಗಳ ವರ್ಣನೆಯಿದೆ. ಮತ್ತೆ ಕೆಲವುಗಳಲ್ಲಿ ಪುಷ್ಪಪುರೇಶ ರಾಜಹಂಸ, ವಿಜಯಾಧಿಪ ಭೂಪ, ಬಾಗೆಯ ವಿಭುಮಲ್ಲ, ಶ್ರೀ ಗಂಡಮಾರ್ತಾಂಡ, ಪ್ರೌಢದೇವ ಮೊದಲಾದವರ ವಿಷಯ ಉಕ್ತವಾಗಿದೆ. ಕಲಾವಿಲಾಸನ ವಿಷಯಕವಾದ ಐಯ್ದು ಪದ್ಯಗಳಿವೆ. (ಅವು ಈಗ ಅಚ್ಚಾಗಿರುವ ಅಭಿನವವಾದಿ ವಿದ್ಯಾನಂದನ 'ಕಾವ್ಯಸಾರ'ದ ಕೊನೆಯಲ್ಲಿರುವ ಕಲಾವಿಲಾಸನೆಂಬ ಅಂಕಿತವಿರುವ ಪದ್ಯಗಳಿಗಿಂತ ಭಿನ್ನವಾದುವು.) ಕವಿಪಂಚಮಾರ್ಗಣ ಅಥವಾ ಕವಿಪಂಚಬಾಣನ ವಿಷಯ ಮೂರು ನಾಲ್ಕು ಪದ್ಯಗಳಲ್ಲಿ ಉಕ್ತವಾಗಿದೆ. (ಸಾಂಗತ್ಯದಲ್ಲಿ 'ಭುಜಬಲಚರಿತೆ'ಯನ್ನು ಸು ೧೬೧೦ ರಲ್ಲಿ ರಚಿಸಿರುವ ಪಂಚಬಾಣ ಈತನಲ್ಲ.) ಮುಗ್ಧಮೋಹನ, ವಿಕ್ರಮತಿಮಿಂಗಿಲ, ಛಲದಂಕಮಲ್ಲ, ಅಕಳಂಕಮಲ್ಲ, ನಿಕಳಂಕಮಲ್ಲ, ಜಗದೇಕಮಲ್ಲ ಅರುಹಂತದೇವ, ಸುಚರಿತ್ರಕೋವಿದ ಮೊದಲಾದ ಅಂಕಿತಗಳಿಂದ ಮುಗಿಯುವ ಪದ್ಯಗಳು ಮಧ್ಯೆ ಮಧ್ಯೆ ಬರುವುವು. ಇವುಗಳಲ್ಲಿ ಕೆಲವಾದರೂ ನರಸಿಂಹ ಮತ್ತು ಸೋಮೇಶ್ವರರ ಬಿರುದುಗಳಿರಬೇಕು. (ಸೂಕ್ತಿಸುಧಾರ್ಣವದ ೫-೨೬ ರಲ್ಲಿ ಮಲ್ಲಿಕಾರ್ಜುನನು ಸೋಮೇಶ್ವರನನ್ನು 'ಛಲದಂಕರಾಮ ಸೋಮನೃಪಾಲಂ' ಎಂದು ಸಂಬೋಧಿಸಿರುವುದನ್ನು ಗಮನಿಸಬಹುದು.) ೫-೧೯೦ ರಲ್ಲಿ ಒಬ್ಬ ನಾಗವರ್ಮನ ಕೀರ್ತಿಯು ವರ್ಣಿತ

ವಾಗಿದೆ. (ಈಗ ಉಪಲಬ್ಧವಾಗಿರುವ ನಾಗವರ್ಮ ಕೃತಿಗಳಲ್ಲಿ ಅದು ಉಪಲಬ್ಧವಾಗುವುದಿಲ್ಲ). ಹರಿಯ ವಿಷಯವಾಗಿ ಈಗ ದೊರೆತಿರುವ ಯಾವ ಗ್ರಂಥಗಳಲ್ಲಿಯೂ ಇಲ್ಲದ ಅಚ್ಯುತ, ಕೃಷ್ಣರ ವಿಷಯಕವಾದ ಪದ್ಯಗಳು ಅಲ್ಲಲ್ಲಿ ಹೇರಳವಾಗಿರುವುವು. ಉಷಾಪರಿಣಯಕ್ಕೆ ಸಂಬಂಧಪಟ್ಟ ಎರಡು ಪದ್ಯಗಳು ಆರನೆಯ ಆಶ್ವಾಸದಲ್ಲಿವೆ. 'ಕುಮಾರಸಂಭವ'ದ ಭಾಗವಿರಬಹುದಾದ ಗಿರಿರಾಜನ ಆಸ್ಥಾನ, ಪಾರ್ವತಿಯ ಬಾಲ್ಯ, ರತೀಮನ್ಮಥರ ರೂಪಲಾವಣ್ಯ, ಗಿರಿಜಾಕಲ್ಯಾಣ ಮೊದಲಾದುವುಗಳಿಗೆ ಸಂಬಂಧಪಟ್ಟ ಪದ್ಯಗಳು ಎಡೆ ಎಡೆಯಲ್ಲಿಯೇ ಗೋಚರವಾಗುವುವು. ಇವು ಹರಿಹರನ 'ಗಿರಿಜಾ ಕಲ್ಯಾಣ'ದಲ್ಲಿಯ ಭಾಗಗಳಲ್ಲ. ಅಸಗನು ಕನ್ನಡದಲ್ಲಿ 'ಕುಮಾರ ಸಂಭವ'ವೆಂಬ ಗ್ರಂಥವನ್ನು ರಚಿಸಿರುವನೆಂದು ಈಚೆಗೆ ತಿಳಿದು ಬಂದಿರುವುದರಿಂದ ಇವು ಅದರ ಭಾಗಗಳೇನಾದರೂ ಆಗಿರಬಹುದೇನೊ ? ಇವೆಲ್ಲ ಇದುವರೆಗೆ ಪರಿಚಿತವಾಗಿರುವ ಕನ್ನಡ ಸಾಹಿತ್ಯ ಚರಿತ್ರೆಗೆ ಅಗೋಚರವಾಗಿರುವುವು. 'ಸೂಕ್ತಿಸುಧಾರ್ಣವ'ದಂತೆ ಇದರಲ್ಲಿಯೂ ರನ್ನನ 'ಗದಾಯುದ್ಧ' ಅಥವಾ 'ಸಾಹಸ ಭೀಮವಿಜಯ'ದಿಂದ ಪದ್ಯಗಳು ಉದ್ಧಾರವಾಗದೇ ಇರುವುದು ಆಶ್ಚರ್ಯಕರವಾಗಿದೆ. ಕವಿಸ್ತವಾವಸರದಲ್ಲಿ ಮೊದಲು ಆತನ ಹೆಸರಿದೆ. ಆತನ 'ಅಜಿತಪುರಾಣ'ದಿಂದ ಪದ್ಯಗಳು ಉದ್ಧೃತವಾಗಿವೆ. 'ಕಾವ್ಯಸಾರ'ದ ಸಂಕಲನದ ಕಾಲಕ್ಕೆ 'ಗದಾಯುದ್ಧ'ದ ಪರಿಚಯವಾಗಿರಲಿಲ್ಲವೆ ? ಅಥವಾ ಅದರ ಪ್ರತಿಗಳು ಉಪಲಬ್ಧವಾಗಿರಲಿಲ್ಲವೇ ? ಗ್ರಂಥವು ಸಂಯೋಜನಕಾರನ ಮೆಚ್ಚಿಗೆಯನ್ನು ಪಡೆದಿರಲಾರದೆಂಬುದು ಮಾತ್ರ ಅಸಂಭಾವ್ಯ.

ಬೇರೆಯ ದೃಷ್ಟಿಯಿಂದಲೂ ಪ್ರಸಕ್ತ ಗ್ರಂಥದ ಮಹತ್ವವನ್ನು ಗುರುತಿಸಬಹುದು. ಕನ್ನಡ ಸಾಹಿತ್ಯರಾಶಿಯಲ್ಲಿ ಉಪಲಬ್ಧವಾಗಿರುವ ಮೂರು ಸಂಕಲನಗಳಲ್ಲಿ ಇದೇ ಬೃಹದಾಕಾರವನ್ನುಳ್ಳದು. 'ಸೂಕ್ತಿಸುಧಾರ್ಣವ'ದಂತೆಯೇ ಇದೂ ಕನ್ನಡ ಕವಿಕಾವ್ಯಗಳ ಕಾಲನಿಷ್ಕರ್ಷೆಗೆ ಒಂದು ಗಡಿಗಲ್ಲಾಗಿದೆ. ಹಾಗೆಯೇ ಅನೇಕ ಕನ್ನಡ ಕಾವ್ಯಗಳ ಸಂಶೋಧನಾಕಾರ್ಯದಲ್ಲಿ ಇದರ ಪಾಠಾಂತರಗಳೂ ಬಹುಮಟ್ಟಿಗೆ ಸಹಾಯಕವಾಗಿವೆ. ಇಲ್ಲಿ ಬರುವ ಅನೇಕ ವರ್ಣನೆಗಳು ಪರಿಚಿತ ಕನ್ನಡ ಚಂಪೂಕಾವ್ಯಗಳಲ್ಲಿ ಉಪಲಬ್ಧವಲ್ಲದವು ಅವು ಪ್ರಾಚೀನ ಕನ್ನಡ ಚಂಪೂಕಾರರ ಅಭಿರುಚಿಯನ್ನೂ ಸ್ವಲ್ಪಮಟ್ಟಿಗೆ ಪರಿಚಯ ಮಾಡಿಸುತ್ತವೆ.

ವಾಚಕರ ಸೌಲಭ್ಯದೃಷ್ಟಿಯಿಂದ ಪ್ರಸಕ್ತಸಂಶೋಧನೆಯಲ್ಲಿ ಕೆಲವು ಅನುಬಂಧಗಳನ್ನು ಕೊಟ್ಟಿದೆ. ಇವುಗಳಲ್ಲಿ ಮೊದಲನೆಯದು 'ಕಾವ್ಯಸಾರ'ದ ಪದ್ಯಗಳ ಅಕಾರಾದಿ. ಇದರಲ್ಲಿ ಉಪಲಬ್ಧವಾದ ಆಕರಗಳ ವಿವರಗಳು ಸೂಚಿತವಾಗಿವೆ. (ಮೂಲಪ್ರತಿಯಲ್ಲಿ ಯಾವ ಪದ್ಯದ ಆಕರವೂ ಸೂಚಿತವಾಗಿಲ್ಲ. ಸಾಧ್ಯವಾದಷ್ಟು ಆಕರಗಳನ್ನು ಗುರುತಿಸಿ ಆಯಾ ಪದ್ಯಗಳಡಿಯಲ್ಲಿಯೂ ನಮೂದಿಸಿದೆ) ಆಕರ ಸಿಕ್ಕದ ಪದ್ಯಗಳ ಪ್ರಾರಂಭದಲ್ಲಿ ನಕ್ಷತ್ರ ಚಿಹ್ನೆಯನ್ನು ಸುಲಭ ಗ್ರಹಣಕ್ಕಾಗಿ ಸೇರಿಸಿದೆ.

ಮುಂದಿನ ಸಂಶೋಧಕರ ದೃಷ್ಟಿಯಿಂದ ಆಕರ ಸಿಕ್ಕದ ಪದ್ಯಗಳ ಪ್ರತ್ಯೇಕವಾದ ಅಕಾರಾದಿಯನ್ನು ಎರಡನೆಯ ಅನುಬಂಧವಾಗಿ ಸೇರಿಸಿದೆ. ಇಲ್ಲಿಯ ಪದ್ಯಗಳ ಪ್ರಾರಂಭದಲ್ಲಿ ಒಂದು ನಕ್ಷತ್ರ ಚಿಹ್ನೆಯಿದ್ದರೆ 'ಸೂಕ್ತಿಸುಧಾರ್ಣವ'ದಲ್ಲಿ ಉಕ್ತವಾದ ಆಕರ ಸಿಕ್ಕದ ಪದ್ಯವೆಂದೂ, ಎರಡು ನಕ್ಷತ್ರಗಳ 'ಚಿಹ್ನೆಯಿದ್ದರೆ ಕಾವ್ಯಾವಲೋಕನ'ದ ಉದಾಹರಣ ಪದ್ಯಗಳಲ್ಲಿ ಆಕರಸಿಕ್ಕದ ಪದ್ಯಗಳೆಂದೂ ತಿಳಿಯಬೇಕು. ಪ್ರಸಕ್ತ 'ಕಾವ್ಯಸಾರ'ದ ಆಕರಗಳ ಪಟ್ಟಿಯನ್ನೂ ಅದರ ಸಂಶೋಧನೆಯಲ್ಲಿ ಉಪಯೋಗಿಸಿರುವ ಅಚ್ಚಿನ ಪುಸ್ತಕಗಳ ಅಕಾರಾದಿಯನ್ನೂ 'ಸೂಕ್ತಿಸುಧಾರ್ಣವ' ಮತ್ತು 'ಕಾವ್ಯಸಾರ'ಗಳ ಆಕರಗಳ ತೋಲನನನ್ನು ಸೂಚಿಸುವ ಪಟ್ಟಿಯನ್ನು ಮುಂದಿನ ಅನುಬಂಧಗಳಾಗಿ ಕೊಟ್ಟಿದೆ. ಸಂಶೋಧನಾದೃಷ್ಟಿಯಿಂದ ಕನ್ನಡ ಸಾಹಿತ್ಯದಲ್ಲಿ ಆಕರವಿಲ್ಲದ ಪದ್ಯಗಳು ಒಂದೆಡೆ ದೊರೆತರೆ ಹೆಚ್ಚು ಸೌಲಭ್ಯವಾಗಬಹುದೆಂಬ ದೃಷ್ಟಿಯಿಂದ ಅಭಿನವವಾದಿ ವಿದ್ಯಾನಂದನನ 'ಕಾವ್ಯಸಾರ', ಕೇಶಿರಾಜನ 'ಶಬ್ದಮಣಿ ದರ್ಪಣ' ನಾಗವರ್ಮನ 'ಭಾಷಾಭೂಷಣ' ಮತ್ತು 'ಕಾವ್ಯಾವಲೋಕನ' ಮತ್ತು ನೃಪತುಂಗನ 'ಕವಿರಾಜಮಾರ್ಗ'ಗಳ ಉದಾಹರಣ ಪದ್ಯಗಳ ಅಕಾರಾದಿಗಳನ್ನು ಮುಂದಿನ ಅನುಬಂಧಗಳಾಗಿ ಕೊಟ್ಟಿದೆ. ಇದರಿಂದ ಕನ್ನಡದಲ್ಲಿ ಆಕರ ಸಿಕ್ಕದ ಪದ್ಯಗಳ ಸಂಖ್ಯೆ ಸುಮಾರು ೪೦೦೦ಗಳಾಗುತ್ತವೆ. ಈ ಗ್ರಂಥರಾಶಿ ಪ್ರಾಚೀನ ಕನ್ನಡ ಸಾಹಿತ್ಯದ ಬೃಹತ್ಪ್ರಮಾಣವನ್ನು ಕಣ್ಣಿಗೆ ಕಟ್ಟುತ್ತದೆ.

ಗ್ರಂಥಸಂಪಾದನಾದೃಷ್ಟಿಯಿಂದ ಈ ಗ್ರಂಥಕ್ಕೆ ಹೆಚ್ಚು ಸಾಧನ ಸೌಕರ್ಯಗಳು ದೊರೆತಿಲ್ಲ. ಮೈಸೂರು ಪ್ರಾಚ್ಯಸಂಶೋಧನಾಲಯದ ಕೆ. ಎ ೧೫೦ ನೆಯ ನಂಬರಿನ ಎರಡು ಸಂಪುಟಗಳುಳ್ಳ ಕಾಗದಪ್ರತಿಯೂ ಬೇಲೂರು ತಾಲ್ಲೋಕ್ ಬಿಕ್ಕೋಡು ಹೋಬಳಿ ಹೊನ್ನವಳ್ಳಿ ಜೋಡೀದಾರ್ ನಾರಾಯಣಭಟ್ಟರ ಓಲೆಯ ಪ್ರತಿಯೂ ಸಂಪಾದಕರಲ್ಲಿದ್ದ ಕಾಗದ ಪ್ರತಿಯೂ (ಇದು ನಾರಾಯಣಭಟ್ಟರ ಪ್ರತಿಗೆ ಬಹು ನಿಕಟವಾದ ಸಂಬಂಧವುಳ್ಳದು) ಪ್ರಸಕ್ತ ಸಂಶೋಧನೆಗೆ ಉಪಯುಕ್ತವಾದ ಸಾಧನಗಳು. ನಾರಾಯಣ ಭಟ್ಟರ ಪ್ರತಿಯನ್ನು ಸಂಪಾದಕರ ಪ್ರತಿಯೊಂದಿಗೆ ತೋಲನಮಾಡಿದೆ. ಹೆಚ್ಚು ವ್ಯತ್ಯಾಸವೇನೂ ಕಂಡುಬಂದಿಲ್ಲ. ಪ್ರಾಚ್ಯಸಂಶೋಧನಾಲಯದ ಪ್ರತಿ ಬಹಳ ಸ್ಖಾಲಿತ್ಯವುಳ್ಳದೂ ದೋಷಪೂರಿತವಾದುದೂ ಆದುದರಿಂದ ಅದರಿಂದ ಹೆಚ್ಚು ಪ್ರಯೋಜನವಾಗಲಿಲ್ಲ. ಪಾಠವು ಬಹುಮಟ್ಟಿಗೆ ಸಂಪಾದಕರ ಕಾಗದದ ಪ್ರತಿಯನ್ನೇ ಅವಲಂಬಿಸಿದೆ. ಆಕರ ಉಪಲಬ್ಧವಾದುವುಗಳಿಗೆಲ್ಲ ಪ್ರಾಚ್ಯಕೋಶಾಗಾರದಿಂದ ಸಂಪಾದಕರು ಪ್ರಕಾಶಪಡಿಸಿದ 'ಸೂಕ್ತಿ ಸುಧಾರ್ಣವ' ಮತ್ತು ಆಕರಗಳ ಪಟ್ಟಿಯಲ್ಲಿ ಸೂಚಿತವಾಗಿರುವ ಇತರ ಮುದ್ರಿತ ಗ್ರಂಥಗಳ ಸಹಾಯವನ್ನು ಪಡೆದಿದೆ. ಸಂಪಾದಕರ ಕಾಗದ ಪ್ರತಿಯ ಪಾಠಕ್ಕೆ (ಸ) ಎಂದೂ 'ಸೂಕ್ತಿಸುಧಾರ್ಣವ'ದ ಪಾಠಕ್ಕೆ (ಸೂ) ಎಂದೂ ಅಚ್ಚಿನ ಪ್ರತಿಗಳ ಪಾಠಕ್ಕೆ (ಅ) ಎಂದೂ ಸಂಕೇತವನ್ನು ಕೊಟ್ಟಿದೆ. ಅಚ್ಚಿನ ಪಾಠಗಳು ಆಯಾ ಮುದ್ರಿತ ಗ್ರಂಥಗಳಲ್ಲಿ ದೊರೆತಿರುವ ಪಾಠಗಳೆಂದು ತಿಳಿಯಬೇಕು. ಆಕರ ಸಿಕ್ಕದ ಸು. ೨೦೦೦ ಪದ್ಯಗಳಿಗೆ ಸಂಪಾದಕರ ಕಾಗದ ಪ್ರತಿಯೊಂದೇ ಆಧಾರವಾದುದರಿಂದ ಅಲ್ಲಿ ಅರ್ಥವಾಗದ

ಪದ್ಯಗಳಿಗೆಲ್ಲ ಅನಿವಾರ್ಯವಾಗಿ ಪ್ರಶ್ನಾರ್ಥಕ ಚಿಹ್ನೆಯನ್ನು ಹಾಕಲಾಗಿದೆ. ಆಕರಗಳನ್ನು ಸಾಧ್ಯವಾದಷ್ಟು ಕ್ರಮದಿಂದಲೂ ಎಚ್ಚರಿಕೆಯಿಂದಲೂ ನಿರ್ದೇಶಿಸಲು ಪ್ರಯತ್ನ ಪಟ್ಟಿದೆ. ಪದ್ಯಗಳ ಆದಿಭಾಗಗಳ ಪಾಠಾಂತರಗಳಿಂದ ಕೆಲವು ಗುರುತಿಸಲಾಗದಿರಬಹುದು. ಪಾಠಕರು ಅವುಗಳನ್ನು ತಿಳಿಯಪಡಿಸಿದರೆ ಕೃತಜ್ಞತೆಯಿಂದ ಅಂಗೀಕರಿಸಲಾಗುವುದು.

ಈ ಬೃಹದ್ಗ್ರಂಥದ ಪ್ರಕಾಶನದ ಭಾರವನ್ನು ವಹಿಸಿಕೊಂಡ ಕನ್ನಡಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರಿಗೂ ಇದನ್ನು ಅಂದವಾಗಿಯೂ ಶೀಘ್ರವಾಗಿಯೂ ಮುದ್ರಿಸಿದ ಮೈಸೂರಿನ ಮಂಗಳೂರು ಪ್ರೆಸ್ಸಿನ ಮಾಲೀಕರಾದ ಶ್ರೀಪತಿರಾಯರಿಗೂ ಕೃತಜ್ಞನಾಗಿದ್ದೇನೆ.

ನೃಸಿಂಹಪ್ರಾಸಾದಂ
ಸರಸ್ವತೀಪುರಂ, ಮೈಸೂರು ೯. ಎನ್. ಅನಂತರಂಗಾಚಾರ್
ಪ್ರಮಾದೀಚ ಸಂ। ಆಷಾಢ। ಶು। ೫.

# ವಿಷಯಸೂಚಿ

## ಶ್ರೀ ಮಲ್ಲಿಕವಿ ಸಂಯೋಜಿತಂ

# ಕಾವ್ಯಸಾರಂ

## ಪೀಠಿಕಾ ಪ್ರಕರಣಂ

ಶ್ರೀ ದಿವಿಜೇಂದ್ರವಂದಿತಪದಾಂಬುಜನಾನತಹೃತ್ಪಯೋಜಮಿ
ತ್ರೋದಯನತ್ಯನೂನ ಸಕಲಾಗಮಶಾಸ್ತ್ರವಿರಾಜತೇಜಬೋ
ಧೋದಯನುನ್ನತೋನ್ನತದಯಾರತಧರ್ಮಸುದಾಬ್ಧಿಪೂರ್ಣಚಂ
ದ್ರೋದಯನಾದನಾದಿಪರಮೇಶ್ವರನೀಗೆಮಗಿಷ್ಟಸಿದ್ಧಿಯಂ ೧

ಶ್ರೀಮದ್ಗಂಗಾತರಂಗಪ್ರಕರವಿಲಸಿತಂ ಚಂದ್ರರೇಖಾಂಕಿತಜೂಟೋ
ದ್ದಾಮಂ ಸುತ್ರಾಮರಮುಖ್ಯಾಮರಗಣವಿನತಶ್ರೀಪದಾಂಭೋಜಯುಗ್ಮಂ
ಭೂಮಿವ್ಯೋಮಾರ್ಕಸೋಮಾನಲಜಲಮರುದಾತ್ಮ್ಯಕರೂಪಂ ಭವಾನೀ
ಪ್ರೇಮಂ ಶ್ರೀ ಸೋಮನಾಥಂ ನಮಗಭಿಮತಮಂ ಮಾಳ್ಕೆ ಸಂತೋಷದಿಂದಂ ೨

ಪಸುಗೆಂಪೇಡೊಪ್ಪುವೆತ್ತೊಪ್ಪುವ ಜಡೆಮುಡಿಗಳ್ ಭೂಷಣಾಹಿಸ್ಫುರದ್ರ
ತ್ನಸಹಸ್ರಜ್ಯೋತಿಶತದ್ಯುತಿಕರಿವರಚರ್ಮಾಂಬರಂ ಸಂಜೆಗೆಂಪುಂ
ಬಿಸಿಲುಂ ಬೆಳ್ದಿಂಗಳುಂ ಕಿಚ್ಚಿಲಿಯುಮೆಸೆವ ಜೋದ್ಯಕ್ಕೆ ಪಕ್ಕಾಗೆ ಪ್ರತ್ಯೈಂ
ಪ್ರಸುರೇಂದ್ರಸ್ತೋತ್ರಪಾತ್ರಂ ಪ್ರಮುದದೆ ಪರಿರಕ್ಷಿಕ್ಕೆ ನಮ್ಮಂ ತ್ರಿಣೇತ್ರಂ ೩

ಅರಿಕಾಮಧ್ವಂಸಿ ನಾಗಪ್ರಜಮಯಕಟಕಂ ರಾಜರಾಜ ಪ್ರತಿಷ್ಠಾ
ನಿರತಂ ಲೀಲಾಕ್ರಮೋದಂಚಿತಸಿರವಧಿಗಾಂಗೇಯಕಂ ದ್ವಿಟ್ಪುರಧ್ವಂ
ಸರತಕ್ರೋಧಂ ವೃಷಾಂಕಂ ವಿಬುಧನುತನುಮಾಕಾಮಿನೀಜೀವಿತೇಶಂ
ಪರಮೈಶ್ವರ್ಯಾಸ್ಪದಂ ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ ೪

(ಜಗನ್ನಾಥವಿಜಯಂ ೧–೨)

ಜಡೆಗಳ ಬಂಬಲೊಪ್ಪುವಳಕಾವಳಿ ಭೀಷಣಮಪ್ಪ ಪಾವಿನೊ
ಳ್ದುಡುಗೆ ಪೊದಟ್ಟಿ ಪೊಂದುಡುಗೆಯಿಂಡೆ ವಿರಾಜಿಸೆ ಶಕ್ತಿ ಶೂಲಮೊ
ಳ್ಪಿಡಿದ ಕರಾಸಿ ಗೌರಿ ನಿಜವಲ್ಲಭೆಯಾಗಿರೆಯೊಪ್ಪುತಿರ್ಪ ಸ
ಮ್ಮೃಡಿಸು ಪಿನಾಕಿ ಕೂರ್ತು ನಮಗೀಗೆ ವರಂಗಳನಾನಕಾಲದೊಳ್ ೫

(ಛಂದೋಂಬುಧಿ ೧–೨)

ಆವಳಪೊಂದು ಚೆಲ್ಪಿಕೆ ಮಹೇಶನ ನಲ್ಮೆಗೆ ಜನ್ಮಭೂಮಿ ತಾ
ನಾವಳ ಲಲ್ಲೆವಾತು ಪರಮೇಶನ ಕರ್ಣಕೆ ಭೂಷಣಾರ್ಥ[ಮೋ
ಆ]ವಳ ಬಟ್ಟಪೆರ್ಮೊಲೆಗಳೀಶನ ವಕ್ಷಕೆ ಸಿಂಗರಂ ಮಹಾ
ದೇವಿ ಸರಾಗದಿಂ ಬಿಡದೆ ಪಾಲಿಸುಗೆನ್ನ(ನ)ದಾವ ಕಾಲಪೊಳ್ ೭

ಅರಿರೌದ್ರಂ ಕರಪೈಶ್ವರ್ಯಮುಲ್ಲಸದಹೀನಾಲಂಕೃತಂ ಮೂರ್ತಿ ಸಾ
ಕ್ಷರಸೇವ್ಯಂ ನಿಜವಿದ್ಯೆ ವಿಶ್ವವಿನುತಂ ಪಾದಂ ಸದಾಳಿಪ್ರಿಯಂ
ವರದಾನಂ[1]ನು[1]ತಭದ್ರ ಲಕ್ಷಣಪದಂ ಪದ್ಮಾನುಷಂಗಿತ್ವಮಾ
ಗಿರೆ ಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ ೭
(ಜಗನ್ನಾಥವಿಜಯಂ ೧-೫)

ಸುರಿವ ಮದಕ್ಕೆ ಸುತ್ತಿ ಸುಳಿವಾಳಿಡಿವಿಂಡು ನವಾಭ್ರದಂತೆ ಕೇ
ಕರರುಚಿ ಮಿಂಚಿನಂತೆ ಮಕುಟಾಂಕಿತ ರತ್ನಮಯೂಖಲೇಖೆ ನಿ
ರ್ಜರ(ವರ)ಚಾಪದಂತೆ ಕರಸೀಕರಮುಣ್ಮುವ ವರ್ಷದಂತೆ ತೋ
ಱರೆ ಮಳೆಗಾಲದಂತೆಸೆವ ಸಿದ್ಧಿವಿನಾಯಕನೀಗೆ ಮನೋನುರಾಗಮಂ ೮

ವಾಣಿ ಜಗತ್ಪಿತಾಮಹನರಾಣಿಯತೀವಸುಖಪ್ರದೈಕಕ
ಲ್ಯಾಣಿ ಸುನೀಲರತ್ನನಿಭವೇಣಿ ಪದದ್ವಿತಯಾಬ್ಜನಮ್ರಗೀ
ರ್ವಾಣಿ ವಿಕರ್ಮವಲ್ಲರಿಕೃಪಾಣಿ ದಯಾಂಚಿತಗೌಣಿ ಗೌರವ
ಶ್ರೇಣಿ ಸರೋಜಪಾಣಿ ದಯೆಯಿಂದೆಮಗೀಗೆ ವಚೋವಿಲಾಸಮಂ ೯

ಕೃತಿಯಂ ನಿರ್ಮಿಸಿ ಮುನ್ನಮಾದರಿಳೆಯೊಳ್ ಶ್ರೀ ಹರ್ಷನುಂ ಭೋಜಭೂ
ಪತಿಯುಂ ಸತ್ಕವಿ ವಜ್ರಹಸ್ತನೃಪನುಂ ಸರ್ವಜ್ಞಸೋಮೇಶನು
ನ್ನತಿವೆತ್ತಂ ಧರೆಗಿಂದು ಮಲ್ಲಬುಧನಿಂದಂ ಕಾವ್ಯಸಾರಂ ಜಗ
ನ್ನುತಮಾಯ್ತೆಂದೆನೆ ಮಾಡಿ ಕೀರ್ತಿವಡೆದಂ ಶ್ರೀ ವೀರಸೋಮೇಶ್ವರಂ ೧೦
(ಸೂಕ್ತಿಸುಧಾರ್ಣವಂ ೧-೨೪)

ಚದುರರ ಮೆಚ್ಚು ಭಾವುಕರ ಕೈಪಿಡಿ ಜಾಣರ ಬಯ್ಕೆ ಸತ್ಕಲಾ
ವಿದರ ವಿಲಾಸಮುಕ್ಕರಿಗರಾಭರಣಂ ಬುಧರಿಚ್ಚೆಯಚ್ಚು ವೀ
ರದ ಕಣಿ ಕೂರ್ತರ್ಗೆ ಕೂರಿಸಿದ ನಲ್ಲಳೆ ಪೈಸಿರಿ ತಾನೆನಿಪ್ಪ ಸ
ಮ್ಮದಪೊಳೆ ಬಣ್ಣಿಕುಂ ಧರಣಿ ಸತ್ಕವಿಮಲ್ಲನ ಕಾವ್ಯಸಾರಮಂ ೧೧
(ಸೂಕ್ತಿಸುಧಾರ್ಣವಂ, ೧-೨೫)

---

[1] ನ (ಅ)

ಕರೆದು ಬುಧವ್ರಜಂ ಸುಕವಿಮಲ್ಲಿಪನಂ ಮನದಚ್ಚಿಱಿಂದನಾ
ದರಿಸಿ ಸುಧಾರ್ಣವಾಖ್ಯಕೃತಿಯಂ ರಚಿಯಿಪ್ಪುದೆನಲ್ಕೆ ಲೋಕವ
ಜ್ಞರಿವಡೆ ಸಜ್ಜನರ್ ಪೊಗಟ್ಟೆ ಸೋಲನುಗುಂಪಲೆಯಾಗೆ ಬಿಚ್ಚತಂ
ಪರಿಣತರಪ್ಪರೊಲ್ದಿಳಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ ೧೨

(ಸೂಕ್ತಿಸುಧಾರ್ಣವಂ ೧-೭೫)

ಇಸಿಯುಳ ಸೋಂಕಿನಂತೆ ಪೊಸಮಾವಿನ ಪೂವಿನ ಜೊಂಪದಂತೆ ಚಂ
ದನರಸದಣ್ಪಿನಂತೆ ನಸೆಯೇಱಿದ ಮಲ್ಲಿಗೆಯಂತೆ ಪೂರ್ಣಚಂ
ದ್ರನ ಸಿರಿಯಂತೆ ಬಂದೆಸಪ ತೆಂಕಣ ತಂಬೆಲರಂತೆ ರುದ್ರಭ
ಟ್ಟನ ಕವಿತಾರಸಂ ಮನಮನಿರ್ಕುಳಿಗೊಳ್ಳದೆ ಸಜ್ಜನರ್ಕಳಾ ೧೩

(ಜಗನ್ನಾಥವಿಜಯಂ ೧-೧೬)

ಪ್ರಿಯವಚನಂತೆ ಪುಣ್ಯತತಿಯಂತೆ ಸುಧಾಕರನಂತೆ ಕೀರ್ತಿ ಮು
ಗ್ಧೆಯ ಕಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ
ಲೆಯ ಪೊಸಗಂಪಿನಂತೆ ಮಲಯಾನಿಲನಂತೆ ಮರಾಳನಂತೆ ಹಂ
ಸೆಯ ಹರಿದೇವಸನ್ನುತಕೃತಿಪ್ರಚುರಂ ಭುವನೈಕಪೂಜಿತಂ ೧೪

(ಗಿರಿಜಾಕಲ್ಯಾಣಂ, ೧-೧೮)

ಎಳೆಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ ಕೆಂ
ದಳಿರ್ಗಳ ತೊಂಗಲಂತೆ ನಡೆನೋಡುವ ಪೆಂಡಿರ ನೋಟದಂತೆ ಪೂ
ಗಳ ಪೊಸಗಂಪಿನೊಳ್ ಪೊರೆದು ತೀಡುವ ತೆಂಬೆಲರಂತೆ ತೋರ್ಪ ತಿಂ
ಗಳ ಸಿರಿಯಂತೆ ಸೋಲಿಸದೆ ಕಾವನ ಕಬ್ಬಮುದಾರನಾದೊಡಂ ೧೫

(ಕಬ್ಬಿಗರಕಾವಂ, ೧-೧೪)

[1]ರನ್ನನ ದೇಸಿ ಪಂಪನ ಗುಣಂ ಗುಣನಂದಿಯ ತೊಂಡು ಪೊನ್ನನೋಳ್
ಸನ್ನಿದವಾದ ಜಾಣ್ಣುಡಿ ಗಜಾಂಕುಶನೊಳ್ಪು ಮನೋಜನೋಜೆ ಲೋ
ಕೋನ್ನತಮಾಗಿ ಸಂದ ಗುಣವರ್ಮನ ಜಾತಿ ಸಮಾಸುರಕ್ತಿಯಿಂ
ದನ್ನೆಲಸಿರ್ಪುವೀ ಸುಕವಿಮಲ್ಲನ ಕಾವ್ಯವಿಳಾಸ[2]ಪೇಟಿಕ್ಕ್ರಿಯೊಳ್[3] ೧೬

(ಸೂಕ್ತಿಸುಧಾರ್ಣವಂ, ೧-೨೬)

---

೧ ಛನ್ನದು (ಅ) ೨ ನೊಪ್ಪಿರೆ ಸವಿಂಚರ್ಪದ ಕಾವ್ಯಸುಳಾ ಜನೋತ್ಸವಂ (ಅ) ೩ ಜ (ಸೂ)
೪ ಗೇಹದೊಳ್ (ಸೂ)

ತುಡುಕಿದ ದೋಷಿಯನಲ್ಲದೆ
ಪಿಡಿಯದು ಘಟಸರ್ಪನಂತುಟಲ್ಲಿದು ತನ್ನಂ
ತುಡುಕದ ನಿರ್ದೋಷಿಯುಮಂ
ಪಿಡಿಪುದು ಖಳಮುಖಘಟೋಗ್ರ ಜಿಹ್ವಾಸರ್ಪಂ ೧೭
(ಜಗನ್ನಾಥವಿಜಯಂ, ೧-೧೨)

ಪಡೆದಂ ರಜೋಧಿಕಂ ವಿಧಿ
ಪೆಡೆವಣಿಯಂ ಫಣಿಯನಮೃತರಸಮಂ ವಿಷಮಂ
ಕಡಲಂ ಸುೞಿಯಂ ಮುೞಿತಯಂ
ಸಿಡಿಲಂ ಪಡೆದಂತೆ ಸುಜನರಂ ದುರ್ಜನರಂ ೧೮
(ಪಂಪರಾಮಾಯಣಂ, ೧-೩೨ : ಮಲ್ಲಿನಾಥಪುರಾಣಂ, ೧-೫೨)

ಅಂಗುಳೊಳಡಸಿದ ವಿಷಮುಂ[1]
ಭಂಗುರತರ ವಿಷಮ ದೃಷ್ಟಿಯುಂ[2] ವ್ಯಾಳಸಮಾ
ಸಂಗಮುಮಮರ್ದಿರೆ ಮದನಹ
ರಂಗೆಣೆಯೆನಿಪುದಱನೆಮಗೆ ಖಳರಭಿನಂದ್ಯರ್ ೧೯
(ಕಾವ್ಯಾವಲೋಕನಂ, ೭೬೩)

ಚಾಡಿಯನೆ ಕೇಳ್ದ ಕಿವಿಯೊಳ್
ಮೂಡುವುವಂತದು ಕಪಾಲದೊಳ್ ಕುಱುಹಕಟಾ
ಕೂಡಿ ಭೂಪಾಲರೌಷಧಿ
ಮಾಡುವುದೊಂದುಂಟು ಖಳರ ಜಿಹ್ವಾಮೂಲಂ ೨೦

ಪಿಸುಣನ ನಾಲಗೆಗಡಲಿಂ
ಪೆಸೆವಾ ಮಥನಕ್ಕೆನಂದೊಡಾವಿಷಮುದಯಿಸಿ
ವಸುಧೆಯನುರಿಪಲ್ಕಂದಿನ
ಪಶುಪಂ ಕಾಯಲ್ಕೆವಾರನೆಲ್ಲರ್ ಜತ್ತನಂ ೨೧

ಆರಯೆ ಬಾಯ್ದೆಱೆಕುಂಡಂ
ಸಾರಸಮಿತ್ತ್ರೈಯ್ದೆ ಸೋಡಲಾ (ಕೃ)ತಿ ಲಂಚಂ
ಕ್ರೂರಾಗ್ನಿಗೆ ಸಿಡುನಾಲಗೆ
ಮಾರಣಹೋಮದವೊಲಾದುದಾ ಖಳನ ಮೊಗಂ ೨೨

---

೧ ದಿಂ (ಬ) ೨ ಯಿಂ (ಬ)

ವಿರಸವಿದ್ದಲ್ಲಿ ಪಟುವಾ
ಗುರಿಪುದ್ದಂ ಬಪ್ಪುದಮುಮ ರಸವಿರ್ದುದಜೞಂ
ಕರಮೆ ಕಿಱಿದಾಗಿ ಕುಗ್ಗಿದ
ಜರಹಿಯ ನಾಲಗೆಗೆ ಖಳನ ನಾಲಗೆ ನಂಟುಂ ? ೨೩

ಸ್ಥಾವರತತಿ ಬಿಱುಗಾಳಿಗೆ
ಜೀವಿಸದಿರೆ ಕಠಿನಪಿಶುನನನುಸಿರ್ಗಾಳಿ ಕರಂ
ಕಾವುದೆ ಜಂಗಮ ಜೀವಿಯ
ನೋಪ್ಪೊ ಹರಂ ಪ್ರಳಯುಕನವನಂಡೇ ಪೆತ್ರಂ (?) ೨೪

ವರ ಧೂರ್ತಕನೊಂದೆಸೆಗಲ್
ಪುರಕೆಲ್ಲಾ ಕೇಡು ಬರ್ಪುದಿದು ಸಿದ್ಧಾಂತಂ
ಉರಗಂ ಕಚ್ಚುತೆ ಪುತ್ತುಮ
ನಿಱದೆ ಪುಗಲ್ ಪುತ್ತನಗೆದು ಪಾಪಮ ಕೊಲ್ವರ್ ೨೫

ಪಟು[1]ಯೆಂ[1]ದೊಡಂಜುಗುಂ (ಪೇ
ಕು) ಳಿ ನಾಯೊಳಗಾಗಿ ಖಳನದೇಂ ಕಷ್ಟನೊ ಚೀ
ಪಟುಯೆಂದೊಡಗಿದ ಸಜ್ಜನ
ಕುಳಿವಂ ಕಂಡಾಗಳು[2]ಗುಳ್ದು ಪೂಣದೆ ಬಾಟಿಂ[2] ೨೬
(ಧರ್ಮನಾಥಪುರಾಣಂ- ೧-೬೩)

ಮಾಡಿದನೇಕೆಯೊ ಮೇಲಂ
ನೋಡದೆ ಬಿದಿ[3](ಯುಪಮ ಫಣಿಗಳಣಲ್ಗಳ)[3] ಪಲ್ಲಂ
(ರೂಢಿಸಿದ ತೇಟಿಗ್ಗ ಮುಳ್ಳಂ)
ನಾಡಜೞಕೆಯ ದುರ್ಜನಂಗೆ [4]ತುದಿ[4]ನಾಲಗೆಯುಂ ೨೭
(ಧರ್ಮನಾಥಪುರಾಣಂ, ೧-೬೨)

ನ್ಯಾಯಮಿದು ಧರೆಗೆ ದುರಭಿ
ಪ್ರಾಯದ ದುರ್ಜನನ ಮೋರೆಯುಂ ಕಂಡೊಡೆ ತುಃ
ಛೀಯೆಂಬುದುಱತಿ ಬಗುಳ್ವನ
ಬಾಯೊಳಗುಗುಳೆಂಬ ನಾಡಗಾಡೆಯ ಬಲದಿಂ ೨೮
(ಧರ್ಮನಾಥಪುರಾಣಂ, ೧-೬೪)

---

೧ ಯೊಂ (ಅ) ೨ ಳುಪ್ಪುಮೂಳಂ ಜಾಳಂ (ಅ) ೩ ವಿಷಸಂಘಣ ಗುಣಲ್ಗಳ (ಅ)
೪ ಸಿಡು (ಅ)

ಹರಹರ ನಾರಸಿಂಹ ಮದದಂತಿ ತರಕ್ಷು ಮಹೋರಗವ್ರಜಂ
ಪರವೃಕ ಭಲ್ಲುಕಂ ಶುನಕ ಜಂಬುಕ ವೃಶ್ಚಿಕ ರಾಕ್ಷಸಾದಿ ದು
ಷ್ಟರ ಖಳವಂಶಮುಂದಜನಿನಂ ಬಲಮಾಗಿಯೆ ಮಾಡಿಕೊಟ್ಟೊಡ
ಲ್ಲಿರದೆ ಜಗತ್ರಯಂಗಳನೆ ನುಂಗದೆ ತಾಂ ಬಿಡನೆಂತು ದುರ್ಜನಂ (?) ೨೯

ಪುರವರಮೆಂಬ ಸದ್ವಿಪಿನಮಧ್ಯದೊಳೊಪ್ಪುವ ತನ್ನ ಗೇಹಮೆಂ
ಬುರು ಗುಹೆಯಲ್ಲಿ ಸತಿಯೆಂಬುಜಿತ ಪೆರ್ಬುಲಿ ಗರ್ಜಿಸುತ್ತೆ ಪೋ
ಹೊರಡುತೆ ರಾಜನಾಣತಿಯ ಮಂತ್ರದೆ ಬಾಯನೆ ಕಟ್ಟದಿರ್ದೊಡೀ
ನರಪಶುವೆಲ್ಲಮಂ ಖಳತರಕ್ಷುಕನೊರ್ಮೆಯೆ ತಿಂದು ತೇಗದೇ ೩೦

ಮಾತೆಯ ಪಿಂಡದಲ್ಲಿ ಖಳಪಿಂಡಕಜಂ ಬರೆಯಲ್ಕೆ ಪೋಗಲಾ
ಬೂತುಗಳಿಂದಲಂತದಜಸಂ ಮಿಗೆ ಬೈದೊಡನರ್ಥದಾಯುಮಂ
ಪಾತಕ ಕರ್ಮಮಂ ಪರರ ವಿತ್ತಮುಮಂ ಪಿಸುನತ್ವವಿದ್ಯೆಯಂ
ಜಾತಿಗೆ ಕೇಡುಮಂ ಬಗೆವನಾ ಖಳನುದ್ಭವ ಕಂಡು ಪದ್ಮಜಂ (?) ೩೧

ಸ್ಫೂರ್ಜದು ಘೋಷಣಂ ಘುಮುಘುಮಂ ಘುಮುದಂಡಮುಡಂಮೆನುತ್ತಿರ
ಲ್ಕಾರ್ಜಗದಲ್ಲಿ ಕೇಳ್ದು ಮಿಗೆ ಕಂಪನ ವಾರ್ಧಿಯೊಳಾಟಿವದ್ಭುತಂ
ದುರ್ಜನ ವಾಣಿಯೆಂಬ ಸಿಡಿಲಾ ನೃಪಕರ್ಣಸುಮೇಘದಲ್ಲಿ ಪೋ
ಗರ್ಜಿಸೆ ಕೇಳದೇ ಧರಣಿ ಕಂಪನವಾಳದುದೇನಘಾಟಮೋ (?) ೩೨

ವಿಲಸಿತ ಕೊಂಕಣಾಲಯದ ಸನ್ಮಹಿಷವ್ರಜವಾ ಕೊಡಂತಿಯಿಂ
ಸಲೆ ಬಡಿದಲ್ಲದಾ ಕಜತಯುವ್ರೊಂಟೆಗಳರ್ಥದ ಹೇಜನಾಂತ ೧ಹೊ
ನ್ನಿಲ ಬಳಿ೧ ಮೆಯ್ಯನೆಲ್ಲಮನೆ ಸೊಪ್ಪಿಸೆ ಸಂತಸಮೀಗು ಲೋಕದೊಳ್
ಖಳನಘು ದುರ್ಜನರ್ಗೆ ಬಡಿ(ತಂ) ಮೊದಲಾಗಿರಲೀಸನೀಯರೋ (?) ೩೩

ಪರತರ ದಂಡಪೋಷವೆನಿಪಾ ಸಲೆ ತೊಂಡುಗಳೆಯ್ದದಿರ್ದೊಡಂ
ನರ ಖಳರೆಂಬ ಸತ್ಕಳಿಗಳಂ ಬುಡಮುಟ್ಟುಜಿತಕಿತ್ತು ಕೊಟ್ಟೊಡಂ
ಧರೆಯೊಳೆ ಸಜ್ಜನ ಪ್ರತತಿಯೆಂಬುಜು ಬಲ್ಪಸಿ ಸಂಚಯಂ ನರೇಂ
ದ್ರರ ಮನೆ ದೀಪದಂತೆ ಧನರಾಸಿಯುನಾ ಪುಲಿಸಿಂದಲೀಯದೇ (?) ೩೪

---

೧ ಹೋ ಬೆಳೆವುದು (ಸ)

ಚಾರು ಗುಣಾಢ್ಯರಂತೆ ನಯಮುಂ ನುಡಿವರ್ ವಿವಿಧೋಪಚಾರದಿಂ
ವಾರವಧೂಜನಂಗಳ ವಿಳಾಸಮನಾಂತಿರುತನ್ಯರರ್ಥಮುಂ
ಪಾರುವರಂನ್ನೆಯುಂ ಜೆರಸಿ ಶೈವರ ವೈಷ್ಣವ ಶಾಸ್ತ್ರಬದ್ಧರಂ
ಸಾರುವ ಚೋರರಿಂಗಿತಮನೆಂತಱಿಯಲ್ಕದು ಸಾಧ್ಯಮಪ್ಪುದೇ (?) ೩೫

ತೊಂಡಂಗಿಲ್ಲದ ಕಾಲದಲ್ಲಿ ಮಿಗೆ ಲೇಸಂ ಮಾಡಲಾ ಲೇಸುಮಂ
ತುಂಡಂ ಮಾಡದೆ ಮಾಣನಾವ ತೆಱದಿಂದೀ ಲೋಕದೊಳ್ ಸಂತತಂ
ತೊಂಡಂಗೊಳ್ಪಿನ ಸೀರೆಯಿತ್ತಡುಱಿ ಕಲ್ಲಿಂ ಕಟ್ಟಿ ಕೀಲ್ವಿಂತದೇಂ
ಕೊಂಡಾಡಲ್ ಸಲೆ ಲಂಡಭಂಡರಡೆಗಂ ಕೂರ್ತೀರ್ವರೇ ಸಜ್ಜನರ್ (?) ೩೬

ಕೂಡಿರ್ದೊಂದಂ ಬಗೆಯಲ
ದಾಡರ್ ನೋಯಿಸಿದೊಡೊಪ್ಪೆ ಚಿತ್ರಕೆ ತಾರರ್
ಕಾಡಿದೊಡಾ ನೆಲೆಯುಂ ತೊಱಿ
ದೋಡುವರಾ ಪುಣ್ಯವಂತರೇಂ ಪುರಡಿಪರೇ ೩೭

ಸುಜನರ್ ಲೇಸಿಗೆ ಲೇಸಂ
ಸೃಜಿಸುವರಟಿಲಿಸಲು ಮತ್ತೆ ಲೇಸಂ ಮಾಟ್ಪಿರ್
ನಿಜಮಣಿಯ ಬೆಳಗೆ ಛಿದ್ರಿಸೆ
ಋಜುಗುಣಮುಂ ತಾಳ್ದು ಕಂಠಮುಖಕಳಿವಡುಗುಂ ೩೮

ಕೊಟ್ಟವರುಂ ಕೊಡದವರುಂ
ನೆಟ್ಟನೆ ಲೇಸುಳ್ಳರಾದರೆಂಬುದು ಚೋದ್ಯಂ
ಕೊಟ್ಟವರ್ಗಂ ಕೊಡದವರ್ಗಂ
ಮುಟ್ಟೆ ಮಹಾಕೀರ್ತಿ ಪಸರಿಸಿತು ಚಿತ್ರತರಂ ೩೯

ಕ್ರೂರರ್ ಕೆಟ್ಟೊಡೆ ಕೆಟ್ಟುದು
ಸಾರಂ ಪೂಗಕ್ಕೆ ಸುಟಿಯೆ ಕೆಟ್ಟುದು ನಾಶಂ
ಸಾರರ್ ಕೆಟ್ಟೊಡೆ ಕೆಡ....ದ
ಸಾರಂ ರಂಭಾಳಿ ಕೆಡುವುದೇ ಸುಟಿ ಕೆಡಲುಂ (?) ೪೦

ಪರಪುರುಷಾರ್ಥಂಗೆಯ್ಯಲ್
ಧರೆಯೊಳಗಮ ತನ್ನಸೆಯ್ದೆ ಸುತ್ತುವುದನಿಶಂ
ವರ ದೈವಕೆ ಧೂಪಂಗೊಡೆ
ಪೊರೆಯುವೆ ಮಾಣ್ದಪುದೆ ಕೊಟ್ಟ ಪೂಜಕನಿರವಂ ೪೧

ಒಡನಿರ್ದಗಲ್ಕೆಯಾದೊಂ
ದೆಡೆಯೊಳು ದುಃಖಮನಸಹ್ಯಮಂ ಮಾಳ್ಪುದಜಸ್ರಂ
ಸುಡು ಸುಡು ಸಜ್ಜನರೆಂಬವ
ರೊಡಗೂಟಮನಕ್ಕೆ ಖಳರ ಕೂಟಮೆ ಸುಖದಂ ೪೨

ಗುಣದಿಂ ದುರ್ಗುಣಮಿಕ್ಕುವರ್ ಸ್ತುತಿಗಳಿಂ ಸ್ತೋತ್ರಂಗಳಂ ಗೆಯ್ಯುವರ್
ಮಣಿದೊಲ್ದೇ ಮಣಿವಂತೆ ಮಾಳ್ಪನಿಶಂ ತಾವಳ್ಕಿಮೇಣಳ್ಕಿಪರ್
ಸೆಣಸಂ ಮೆಟ್ಟುವರೊಸ್ಮೃ ಸ್ವೈರಣೆಗಳಿಂ ಚಾರಿತ್ರದಿಂ ಕೇಡನೊ
ರ್ಮೆಣಿಸಲ್ಕೀಯರದಾಗಿ ಲೋಕದೊಳೆ ತಾನಿಂತಪ್ಪವರ್ ಸಜ್ಜನರ್ ೪೩

ಪುಣ್ಯಮೆ ಪೂರ್ವಪಾಪತತಿಯಂ ಪೊಡೆದಿಕ್ಕುವುದೆಂಬ ಮಾತದೇಂ
ಗಣ್ಯಮೆ ಸೂರ್ಯನಿಂದೆ ತಮಮೋಡದೆ ಲೋಕದೊಳಂತದಾಗಿಯುಂ
ಪುಣ್ಯಮನೊಂದನೇ ಗಳಿಸೆ ಮುಂದೆ ಸುಜನ್ಮಮನಾಳ್ವನೀಗಲಾ
ರಣ್ಯದೊಳಿರ್ದೊಡಂ ಸುಖಮನೀವುದು ಮಾಳ್ಕೆ ವರೇಣ್ಯಪುಣ್ಯಮಂ (?) ೪೪

ಸತತಂ ಪೂಜ್ಯಮನಾತ್ಮದೇಹಹಿತಮಂ ಸ್ವರ್ಗಾಪವರ್ಗೈಕಪ
ದ್ಧತಿಯಂ ಪಾವನವಸ್ತುವಂ ಪರಮರಕ್ಷಾಸಿದ್ಧಿಯಂ ದೋಷವ
ರ್ಜಿತಮಂ ಜ್ಞಾನಲತಾಭಿವೃದ್ಧಿಯನಶೇಷಪ್ರೀತಿಯಂ ಲೋಕವಿ
ಶ್ರುತಮಂ ಧರ್ಮಮನೇಕೆ ಮಿಕ್ಕ ಪುರುಷಾರ್ಥಕ್ಕಂ ಸಮಂ ಮಾಳ್ಪಿರೋ ೪೫

ಗಾಡಿಯೊಳರ್ಥ ಕಾಮಮೆರಡಂ ಗಳಿಸಲ್ ಬಗೆದೊಂದಧರ್ಮಮಂ
[೧]ಮಾ[೧]ಡಿದೊಡಂತವೆಲ್ಲಿಯವು ಸಂತತ ನಿರ್ಮಳಮಪ್ಪ ಧರ್ಮಮಂ
ಮಾಡುವರರ್ಥ ಕಾಮಮೆರಡುಂ ಕೆಡೆದೆಂದಿರದಿರ್ದು ಧರ್ಮದೊಳ್
ಕೂಡುವರೇಕೆ ಮಿಕ್ಕ ಪುರುಷಾರ್ಥವ ಲೋಕದೊಳಜ್ಞಮಾನವರ್ ೪೬

---

೧ ನೋ (ಸ)

ಪಶುಗಳನೋವುತೊಸ್ಸೆ ಕೃಷಿಯಂ ಬೆಸಹಾರಮನೊಲ್ದುಮಾಡಿಯಾ
ರ್ಜಿಸುವುದು ವಿತ್ತಮಂ ಪಡೆದು ಸದ್ವ್ಯಯದೊಳ್ ಸಲಿಸಿಟ್ಟು ಕೂರ್ತು ಸಾ
ಧಿಸುವುದು ಧರ್ಮಮಂ ಧರೆಯೊಳೀ ಕ್ರಮವರ್ಥದ ಸಿದ್ಧಿಯೆಂದು ಭಾ
ವಿಸುವುದಿದೀಗ ಧರ್ಮದಣಿಯುಪ್ಪುದು ಲೋಕದೊಳುಂಟೆ ಸಂತತಂ (?) ೪೬

ಉತ್ತಮ ಸಾಧುಸಂತತಿಗೆ ಮುನ್ನಮೆ ತಾಂ ಗಳಿಸಿಟ್ಟವಿತ್ತಮಂ
[ಬಿ]ತ್ತರ ಹಸ್ತದಾ ಧನಮನೋವದೆ ಧಾರೆಯೊಳಿತ್ತವರ್ಗಳಂ
ಮತ್ತೆ ವಿಚಾರಿಸಲ್ ಬಗೆಯದಿರ್ದೊಡದೇಂ ಫಲಮೊಲ್ದು ಬೀಜಮಂ
ಬಿತ್ತಿ ಬಳಿಕ್ಕಮಾರಯದೆ ಸುಮ್ಮನಿರಲ್ಕದು ಕೆಟ್ಟುಪೋಗದೇ (?) ೪೭

ಪಡೆದುಚಿತಾರ್ಥಮಂ ಸುಕೃತಿ ಪಣ್ಣಿದ ಪುಣ್ಯನಿಬಂಧನಾರ್ಥ ಮಿ
ತ್ತೊಡೆ ಕೆಡದೇಕೆ ಲೋಕದೊಳನೇಕ ನವಪ್ರಸವಾದ್ಯ ಗಂಧಮಂ
ಪಡೆದನುರಾಗದಿಂದಮೊಡನಾಡುವ ಪಾಡುವ[೧][ಗೀ]ರ[೧] ದುಂಬಿಗಿ
ತ್ತೊಡೆ ಕಮದಣ್ಪುಮೆತ್ತೊಲೆವ ತೆಂಕಣಗಾಳಿಯ ಕಂಪು ತೀರ್ವುದೇ ೪೮

ಕುಡಿಯರನಾವ ಮಾಳ್ಕೆಯೊಳೆ ಬಿತ್ತಮನೊಂದಿರದೀವೆನೆಂದು ತ
ನ್ನೆಡೆಗೆಡೆಯಾತದುಗ್ರನೊಳೆ ಕಾದಿಸಿ ಸೋಲ್ತೊಡನತ್ತಲರ್ಥಮಂ
ಕುಡುದುಱಿ ಕೊಂಡಪೋಪ ಪವಮಾಶುಗನಾ ಗಿರಿಜೇಶಮಿತ್ರನಂ
ಬಿಡದಿರೆ ಬಿಟ್ಟರಾ ನಿಧಿಯನೀಯದೆ ಮಾಣ್ಬರೆ ಚಾಗಬಲ್ಲವರ್ (?) ೪೯

ಕವಿತಾಪ್ರೌಢನೆ ಸೋಲ್ಪವೋಲ್ ಕೃತಿಯೊಳಜ್ಞಂ ಸೋ[೨]ಲ್ಗುಮೇ[೨] ಚಂದ್ರಕಾಂ
ತವೊಸರ್ವಂತಿರೆ ಗೋರಿಕಲ್ಲೊಸರ್ಗುಮೇ ಬೆಳ್ದಿಂಗಳೊಳ್ ತುಂಬಿ ಪೀ
ರ್ದವೊಲೇಂ ಪೀರ್ದಪುದೇ ಕಡಂದುಱುತೆ ಸದ್ಯಾಮೋದಮಂ ಪೂಗಳೊಳ್
ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ ೫೦
(ಜಗನ್ನಾಥವಿಜಯಂ, ೧–೧೩)

ತನಗೆ ಕವಿತ್ವಮಿಲ್ಲ ಪೆಱರಂ ಪಳಿದಲ್ಲದೆ ನಿಲ್ಲನಾತನೊಳ್
ಮುನಿಸಿವುದಸೀತಿ ಪಂದಿ ಡುಱುಕೆಂದೆನೆ ತಾಂ ಡುಱುಕೆಂಬುದೆ ಮಹಾ
ವನಕರಿಯಂ ವಿದಾರಸುವ ಸಿಂಹಮದಂ[೩]ತುಟು[೩]ದೋಷಿಯಪ್ಪ ದು
ರ್ಜನನ ಕಟೂಕ್ತಿಗಂಜದೆ ಲಸತ್ಕೃತಿಯಂ ಸಲೆ ಮಾಳ್ಕೆ ಸಜ್ಜನರ್ ೫೧
(ಗಿರಿಜಾಕಲ್ಯಾಣಂ, ೧–೨೯)

---

೧ ನೀ (ಅ) ೨ ಲ್ವನೆ (ಅ) ೩ ತತಿ (ಅ)

ಕನಕಂ ನಿರ್ಭಾಗ್ಯರಾಳೋಕಿಪುದುಮವನ ದುಷ್ಕರ್ಮದುದ್ರೇಕದಿಂದಂ ಕ
ಬ್ಬುನ ಮಾಗಿರ್ಪಂತೆ ಪಿತ್ತಜ್ವರನಿರತನ ಬಾಯ್ಗಿಂಪನಾಳ್ದಿರ್ದಪಾಲ್ ಬೇ
ವಿನ ಪಣ್ಣೊಲ್[1] ಕೈಪೆಯೆಂತಂತಿರೆ ಸುಕವಿಜಗತ್ಸೇವ್ಯ ಕಾವ್ಯಾಮೃತಂ ದು
ರ್ಜನ ಚೇತೋವೃತ್ತಿಯೊಳ್ ದುಸ್ಸಹ ಕಟುಕರಸಾಭಾ[2]ಸ[2]ಮಂ [3]ಬೀ[3]ಱುತಿರ್ಕುಂ ೫೨
(ಸೂಕ್ತಿಸುಧಾರ್ಣವಂ, ೧-೪೪)

ರಸವತ್ಕಾವ್ಯಮನೞ್ತಿವಟ್ಟು ಸುಜನಂ ಕೇಳ್ದಪ್ಪುಕೈವಂತೆ ಸಂ
ತಸಮುಂ ದುರ್ಜನನೇಕೆ ಕೇಳ್ದು ನಲಿವಂ ದುರ್ಮೇಧೆಯುಂ ಜೇಱಿ ಪು
ಟ್ಟಿಸುವಂ ನಿಷ್ಠುರ ವಜ್ರದಂಡಹತಿಯಿಂ ಕೀಟಂ ಭರಂಗೆಯ್ದು ತುಂ
ಡಿಸುಗುಂ ತುಂಬಿವೊಲಿಂಟಿ ರಾಗಿಸುಗುಮೇ ಹೇಮಾಂಬುಜಾಮೋದಮಂ ೫೩
(ಮಲ್ಲಿನಾಥಪುರಾಣಂ, ೧-೨೬; ಸೂಕ್ತಿಸುಧಾರ್ಣವಂ. ೧-೪೮)

ಪೞಿದೊಡೆ ಬಾೞ್ವೆನಲ್ಲದೊಡೆ ಬಾೞ್ವನೆ ಸತ್ಕೃತಿಗೇಳ್ದು ದುರ್ಜನಂ
ಪೞಿಮ ಮರುಕ್ತಿಸಲ್ಲದೊಡೆ ಸಾಲದೆ ಕಾವ್ಯನಿಬಂಧನಕ್ಕಮಾ
ಪೞಿನೆ ಪೊಗೞ್ತೆಯುತ್ತೆ ರಸವತ್ಕೃತಿಯುಂ ಕವಿಸೇೞ್ಗ ದುರ್ಜನಂ
ಪೞಿಯುತ್ತಮಿರ್ಕೆ ಬಾೞ್ವಿ ಮನೆಗೊಂದು ಬಗುೞ್ವಮ ಬೇೞ್ಪಮೆನ್ನಿರೇ ೫೪
(ಅನಂತನಾಥಪುರಾಣಂ, ೧-೪೦; ಸೂಕ್ತಿಸುಧಾರ್ಣವಂ. ೧-೬೨)

ಶಿಥಿಲಪದಪ್ರಪೂರ್ಣಮಪಶಬ್ದತುಷಾವೃತಮಸ್ತಭಾವವ
ಪ್ರಥಿತಪದಾರ್ಥಶಾಸ್ತ್ರಮುಪಹಾಸ್ಯಸನಾಶ್ರಿತಮಪ್ಪ ಕಬ್ಬಮಂ
ಕಥೆಯಿಸಿ ಗರ್ವದಿಂ ಜೆಱಿತು ಬಿಱ್ರನೆ ಬೀಗಿ ಸರಸ್ವತೀಶಿರೋ
ವ್ಯಥೆಯನದೇಕೆ ಮಾಡುವರೋ ದುಷ್ಕವಿಗಳ್ ಕೆಲರೀ ಧರಿತ್ರಿಯೊಳ್ ೫೫
(ಶೃಂಗಾರರತ್ನಾಕರಂ, ೧-೬; ಸೂಕ್ತಿಸುಧಾರ್ಣವಂ, ೧-೬೩)

ವಿಕಸಿತ ಚಂಪಕಕ್ಕೆಳಸಿ ಬಂಡುಣಲೊಲ್ಲದ ಚಂಚರೀಕನಾ
ಸಿಕಮನಶೇಷಮಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ಪ ಕೌ
ಶಿಕ ನಯನಂಗಳಿಂ ಸುಕವಿಕಾವ್ಯಮನಾಲಿಸಿ ಕಾಯ್ಪ ದುರ್ಜನ
ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜಸಂಭವಂ ೫೬
(ಪಂಪರಾಮಾಯಣಂ, ೧-೩೧, ಸೂಕ್ತಿಸುಧಾರ್ಣವಂ. ೧-೩೪)

---

೧ ಕಾಯ್ಪೊಲ್ (ಸೂ) ೨ ವ (ಸ) ೩ ತೋ (ಸೂ)

ವಾಕ್ಕಿನೊಳಿಲ್ಲ ಪೋಣ್ಪರಿಚಯಂ ಬಗೆ ಪೊಕ್ಕಳನುಂತುಟಲ್ತೆ ಗಂ
ಟಿಕ್ಕುವರೆಂಜಲಾದ ಬಱುವಾತುಗಳಂ ಪಱಿತಗಬ್ಬಮೆಲ್ಲಿಸಂ
ನಕ್ಕಸಿ ತಿಂದ ಕುಂಬಳದ ಮಾಟಿಕ್ಕೆಯ ಮಾಡುವೆನೆಂಬ ಸಾಸಿಗಂ
ಗಕ್ಕಟೆ ಪ್ರೌಢ ನಿರ್ವಹಿಪುದೇನರಿದಾಂಪ್ತೆ ಮಹಾಪ್ರಬಂಧಮಂ ೫೭

(ಸೂಕ್ತಿಸುಧಾರ್ಣವಂ, ೧-೩೬)

ಕುಟಿಲಾಳಾಪದೆ ಪಿಂತೆ ಗಾಱುಗೆಡೆದುರ್ಕಿಂ ಮುಂತೆ ಕಾವ್ಯಜ್ಞರು
ಬ್ಬಟೆಯುಂ ಕಂಡು ಕನಲ್ದು ಕೇದಗೆಯ ತೋಱಲ್ಗೊಂಬನೇಱಿರ್ದ ಮ
ರ್ಕಟನೆಂತಂತೆ ಕಸುಂಗಿ ಪಲ್ಗಿಱಿದು ಬಾಯಂ ಬಿಟ್ಟು ಬೆಂಡೇಱ್ಪಿನ
ಕ್ಕಟೆ ಧಾತ್ರೀತಳದಲ್ಲಿ ದುಷ್ಕವಿಯಿದೇಂ ಹಾಸ್ಯಕ್ಕೆ ಪಕ್ಕಾದನೋ ೫೮

(ಧರ್ಮನಾಥಪುರಾಣಂ, ೧-೫೩)

ನೋಡೆ ಕುಱೂಪನಪ್ಪ ಸುತನಾ ಪಿತೃಮಾತೃಗೆ ಚಂದಮೆಂಬಿನಂ
ಜೋಡಿಸಿ ಪೇೞ್ದ ತನ್ನ ಕೃತಿ ತನ್ನ ಮನಸಿಕ್ಕೆನಿಪೆಂಬ ಭಾವಮಂ
ಮೂಡಿ ಮುಱುಂಗಿ ಸೂರಿಸಭೆಯಲ್ಲಿ ಪಡೋದಿದೊಡಾ ಕವಿತ್ವಮೇಂ
ಕೂಡೆ ಕವಿತ್ವಮುಂ ಪಡೆದು ಸರ್ವರನೇಡಿಪುದೊಂದು ಜೋಡ್ಯಮೋ ೫೯

ಕಟ್ಟಿದ ಕಬ್ಬಮಂ ವಿಬುಧರಾಲಿಸಿಯಲ್ತೆನೆ ಮತ್ತೆ ಕಟ್ಟುವಾ
ದಿಟ್ಟತೆಯೆಂತೊ ಕಟ್ಟುವಡೆ ಪೆರ್ಗೆಱೆಗಟ್ಟುಗೆಯಿಂಧನಂಗಳಂ
ಕಟ್ಟುಗೆ ಪುಲ್ಲ ಕಟ್ಟುಗೆ ಮದಾನಿಯ ಪಾದಮನೊಲ್ದು ಕಟ್ಟುಗಾ
ಕಟ್ಟುಗೆ ದಾರಿಯಂ ಶಿವಶಿವಾ ಕೃತಿಗಟ್ಟಲದೇನನೀವುದೋ ೬೦

ನರಪತಿ ಕರ್ಣರಂಧ್ರದೊಳೆ ತೊಂಡೆಗನತ್ತಿಯಸಿಟ್ಟು ಮತ್ತೆ ತ
ನ್ನುರುತರ ಜಿಹ್ವೆಯೆಂಬ ತಿರಿಗಿಟ್ಟೊಡವತ್ತಿಸಿ ದೂರಕೆಯ್ದಲಾ
ಶರಿರದ ಕೋಪ ಕಾಯೆ ಪರಿವೇಷ್ಟಜನಂ ಬಿದಱಲ್ ಕೆಲಂಬಲಂ
ಶಿರಜನೆ ಪಾದುರ್ದಿ ಪಟಲವಿದ್ಯಮನಾ ಖಳನೆಲ್ಲಿ ಕಲ್ತನೋ (?) ೬೧

ತಲೆದೂಗೆ ಬುಧರ್ಕಳವಂ
ತಲೆವಾಗಿಸಿ ಸಭೆಯ ನಡುವೆ ನಿಲ್ಲದೆ ಪಾವಂ
ತಲೆಗಂಡ ಪಂದಿಯಂದದಿ
ತಲೆ ಬಾಲಂಗೆಟ್ಟು ಜಗುಳ್ವ ಕವಿಯುಂ ಕವಿಯೇ ೬೨

(ಧರ್ಮನಾಥಪುರಾಣಂ, ೧-೫೦)

ತಳ್ತಿಳಿವಟ್ಟಿರದವಯವದೊಳ್
ತೊಳಗದ ಕೃತಿಯೊಳಿಟ್ಟಲಂಕಾರಮದೇ
ವಾಬಿತ್ತ ನಡೆನೋಡೆ ಬಡವರ
ತೊಟ್ಟಿನ ಸಿಂಗಾರದಂತಿರೆರವಾಗಿರದೇ ೬೩
(ಧರ್ಮನಾಥಪುರಾಣಂ ೧-೫೧)

ಕತ್ತುರಿಯನೆಱೆಯಮುಣ್ಗೆ ರ
ಸೋತ್ತ್ರದ ಕವಿಯಕ್ಕೃತಿಯನಘಮಕ್ಕೃತಿಗೆಣೆಯೆಂಬಂ
ಗೆತ್ತಣಮಾತೊ ವಿದಗ್ಧರ್
ಚಿತ್ತ್ರಿಸಿಪೊಡಿಳೆಯೊಳುಂಟೆ ಕಿವಿಮೂಗುಗಳುಂ ೬೪
(ಧರ್ಮನಾಥಪುರಾಣಂ ೧-೫೨)

ಭೂನುತ ಕೃತಿಯುಂ ಚತುರಕ
ಳಾನಿಳಯರ್ ನೋಡಿ ಮೆಚ್ಚಿ ತಲೆದೂಗೆ ಖಳಂ
ಮೋನಮಿರದೇಕೆ ಬಗುಳ್ವಂ
ತಾನೇಡಿಸಿ ನೋಡುವಂತೆ ಮಣಿದರ್ಪಣಮಂ ೬೫
(ಧರ್ಮನಾಥಪುರಾಣಂ, ೧-೫೯)

ಚಂದನದೊಳ್ ಪಾವಿನ ಭಯ
ಮಿಂದುವಿನೊಳೆ ರಾಹುಬಾಧೆ ಸತ್ಕೃತಿಯೊಳ್ ತ
ಳ್ತೊಂದಿದ ದುರ್ಜನ ದೂಷಣ
ಮಿಂದಾದುದೆ ತಾನನಾದಿಯುಗಸಂಸಿದ್ಧಂ ೬೬
(ಧರ್ಮನಾಥಪುರಾಣಂ, ೧-೬೧)

ಸದ್ಬುಧ ಬುದ್ಧಿ ಪಕವಿತೆ ಬೃ
ಹದ್ಬುದ್ಧಿ ಕುಬುದ್ಧಿಯಾಗುಮಲಗೊರ್ಲ್ ಮುಳ್ಳುಂ
ಹೃದ್ಬಂಧ ಚರಣಬಂಧಮ
ಹದ್ಬಾಲಾಯೋಗರೋಗಮುಂ ಸಮನಿಸವೇ (?) ೬೭

ರಸಿಕರ ಪೊಸಬಗೆಗಿಂಪಂ
ಪೊಸತಂ ಪೊಸಯಿಸುತಲೊಂಪೆ ಪೊರೆಯೆತ್ತಲೊಡಂ
ರಸಮೊಸರದೊಡೇಂ ಬೆಸನಮೆ
ಬಿಸುಡುವುದಾ ಪುಟಿತ ಕಬ್ಬುಮಂ ಕಬ್ಬುಮುಮಂ ೬೮
(ಲೀಲಾವತಿ, ೧-೬೪)

ಸೊಗಯಿಸುವ ಕಬ್ಬವಂ ಕ
ಬ್ಬಿಗರಲ್ಲದೆ ಮೆಚ್ಚರುೞಿದರೇನಱಿವರೆ ತುಂ
ಬಿಗಳಲ್ಲದೆ ಪೂಗಳ ಮಗ
ನುಗಿಸುವ ಕಂಪಂ ಕಡಂಮುಱಿಕೀನಱಿದಪುವೇ ೧೯

ಎಱಗುವೆ ದುರ್ಜನರಿಂಗೊ
ಲ್ದೆಱಗೆನು ಸುಜನಾಳಿಗಳ್ಗಡೆಂತೆನೆ ಪಥದೊಳ್
ಬರುತಿರೆ ಚೋರರ್ಗಂಜುವ
ತೆಱದಿಂ ಪಿರಿಯರ್ ಬರಲ್ಕದೇನಂಜುವರೇ ೨೦

ಪಿಡಿದಾರೆವಟ್ಟೆಲನುನಂ
ಪಿಡಿವುದು ಕಳಹಂಸೆಯನುವ ಕೃತಿಯೊಳ್ ತಪ್ಪಿ
ರ್ದೊಡೆ ತಿರ್ದಿ ಬಯಲಮಾತಂ
ನುಡಿಯದೆ ಸುಜನಾಳಿ ಕೇಳ್ವುದೀ ಸತ್ಕೃತಿಯಂ ೨೧

ಸ್ವೇಚ್ಛಾರಸಮಂ ಸುಕೃತಿ ಮ
ಹಚ್ಛಾಯೆಯೊಳೀಗುಮನಿಶವಿಸ್ಮ್ಯಾನಿನವೋಲ್
ತುಚ್ಛರ ನೀಚರ ಕೃತಿಯುಜ
ಕಚ್ಛದವೋಲ್ ತನಗೆ ಪೆಱರ್ಗೆ ಮಾಟ್ಪುದದೇನಂ ೨೨

ಓದಿದೊಡೆ ಕಲ್ಲಮಾಲೆಯ
ನಾದಂ [1]ಕರ್ಬುನದ[1]ಕಡಲೆ[2]ಬೋಧಿಸೆ ವಿರಸಂ
ವಾದಿಸೆ[2]ಯುರ್ಕಿನ ಪುಡಿಯೆನಿ
ಪಾ ದುಷ್ಕವಿತೆಗಳನೆಣಿಸಲೇಕೀ ಕೃತಿಯೊಳ್ ೨೩
(ಗಿರಿಜಾಕಲ್ಯಾಣಂ, ೧–೨೨)

ಕ್ಷುದ್ರಂಗೆ ಸಕಲಸುಜನೋ
ಪದ್ರವರೂಪಂಗೆ ಪರರ ಕಾವ್ಯಾಮೃತಮಂ
ಛಿದ್ರಿಸುವಂಗತಿಶಬ್ದದ
ರಿದ್ರಂಗಕ್ಕುಮೆ ನವೀನಕಾವ್ಯಾರಂಭಂ ೨೪
(ಗಿರಿಜಾಕಲ್ಯಾಣಂ ೧-೨೬)

---

೧ ಕರ್ಬೊನ್ನ (ಅ) ೨ ವಾದಿಸೆ ರಸಮಂ ಸೋದಿಸೆ (ಅ)

ಅರ್ಥಾಭಾಸದಿನಕ್ಷರ
ಸಾರ್ಥಮನುಚ್ಚರಿಸೆ ಕಾವ್ಯಮೆಂತೆಸೆಗುಂ ತ
ತ್ತ್ವಾರ್ಥಮನಱಿಯದ ಕವಿಗಮ
ಪಾರ್ಥಂ ರಂಜಿಸದ ಪಳಿಕುಮಣಿಯುವೊಲಿರದೆ ೭೫
(ಜಗನ್ನಾಥವಿಜಯಂ, ೧–೧೪)

ಅದು ಘೂಕಂ ದಿವದೊಳ್ ಕಾ
ಣದು ನಿಶ್ಚಯಮಂತೆ ದುರ್ಜನಂ ಕಾಣಂ ಕಾ
ವ್ಯದೊಳತಿರಸಮನಸೂಯಾ
ಸದನಂ ಸುಖದೂರನವನ ಮಾತೇಕಿದಱೊಳ್ ೭೬
(ಗಿರಿಜಾಕಲ್ಯಾಣಂ, ೧–೨೫)

ಉತ್ಸವಕರಮೆನೆ ಬೆಳಪ ಶ
ರತ್ಸಮಯದೊಳಿಂದುಕಾಂತಿ ದಳಪೇಱುವವೊಲ್
ವತ್ಸಲರೆನಿಸುವ ಬುಧರಿನ
ಮತ್ಸರರಿಂ ಕೃತಿ ಕೃತಾರ್ಥಮಕ್ಕುಮಮೋಘಂ ೭೭
(ಜಗನ್ನಾಥವಿಜಯಂ ೧–೧೪)

ರಸಮಂ ನಾಲಗೆ ಕವಿತಾ
ರಸಮಂ ಕವಿ ಕುಸುಮರಸಮನಳಿಮಾಲೆ ಸುಧಾ
ರಸಮಂ ಸುರರಕ್ಷಯಸುಖ
ರಸಮಂ ಪರಮಾತ್ಮನಱಿವನುಣಿವವರಱಿಯರ್ ೭೮
(ಮಲ್ಲಿನಾಥಪುರಾಣಂ, ೧–೨೮, ಸೂಕ್ತಿಸುಧಾರ್ಣವಂ, ೧–೬೬)

ನವರಸವತಿಭಾವಾರ್ಥಂ
ನವೀನಪದಭರಿತಮಿಂತಿದೆನೆ ಸತ್ಕೃತಿಯಂ
ತವೆ ಪೇೞ್ದುದು ಪೇೞದೊಡೇಂ
ಕವರ್ವರೆ ನಿಂದಿಪರೆ ದಂಡಿಪರೆ ಕೋಪಿಪರೇ ೭೯
(ಗಿರಿಜಾಕಲ್ಯಾಣಂ ೧–೨೦)

ಸಲ್ಲದ ಗುಣಮಂ ಪೆಱರೊಳ್
ಸಲ್ಲಿಸುವರ್ ತಮ್ಮೊಳುಳ್ಳ ಗುಣಗಣಮಂ ತಾ
ವಿಲ್ಲೆಂದು ಪುಸಿವ ಪುಸಿಕ
ರ್ಗೆಲ್ಲಿಂದಂ ಬಂದುದಮಮ ಸುಜನತೆ ಚಿತ್ರಂ ೮೦

ಕೇಳಲೊಡಂ ಕಿವಿ ಸವಿಯೊಳ
ಗಾೞ್ದೊಡಂ ತನ್ಮನಂ ಮುೞುಂಗಲೊಡಂ ಸೌ
ಖ್ಯಾಳಂಬಿಯೆನಿಪ ಚಿತ್ತಂ
ಲೀಲೆಯೊಳವಗಾಹವಿರದೊಡದು ಸತ್ಕೃತಿಯೇ ೬೧
(ಗಿರಿಜಾಕಲ್ಯಾಣಂ, ೧-೨೧)

ಒಳಗಱಿಯದೆ ಸತ್ಕಾವ್ಯದ
ಕಳೆಯಱಿಯದೆ ಲಘುತರತ್ವದಿಂ ನಾಲ್ಕೆರಡಾ
ಯ್ಕುಳಿ ಮಾತನಾಡಿ ನೆಱೆ ಹೆ
ಕ್ಕಳವಿಕ್ಕಿದೊಡೊಲ್ವರೇ ಕವೀಂದ್ರಾಭರಣರ್ ೬೨
(ಗಿರಿಜಾಕಲ್ಯಾಣಂ, ೧-೨೭)

ರಸವಿದು ಭಾವವಿದರ್ಥವಿ
ದು ಸಮಾಸವಿದುಚಿತ ಪದವಿದುತ್ಪ್ರೇಕ್ಷೆಯಿದಿಂ
ದು ಸವಿದು ಸವಿದು ಕರಂ ನವ
ರಸಿಕರೊಳಾಡುತ್ತಮಿರ್ಪ ರಸಿಕರೆ ಬಲ್ಲರ್ ೬೩
(ಗಿರಿಜಾಕಲ್ಯಾಣಂ, ೧-೩೧)

ಉತ್ತಮರುತ್ಪಾದಕನೆನಿ
ಪುತ್ರನು ಕವಿಯಿದಿರೊಳಿರ್ದು ತಲೆಯೆತ್ತಿದೊಡೇ
ನುತ್ತಮನೆ ಕುಕವಿಗಿದು ಕೊರ
ಲೆತ್ತಲ್ ಕಳಭಕ್ಕೆ ಕರಭವೆಣೆಯೆನಿಸುಗುಮೇ ೬೪
(ಧರ್ಮನಾಥಪುರಾಣಂ ೧-೫೪)

ಸಲೆ ನೆಲೆ ಸುಕವಿ ಸುವರ್ಣದ
ನೆಲೆಯಱಿದೊರೆದೊರೆದು ನೋಡಿ ಬಗೆಯೊರೆಗಲ್ಲೊಳ್
ತಲೆದೂಗುವಂತೆ ಸಭೆಯೊಳ್
ತಲೆದೂಗುವವಂ ಪರೀಕ್ಷಿಸಲ್ ಬಲ್ಲವನೇ ೬೫
(ಧರ್ಮನಾಥಪುರಾಣಂ ೧-೫೫)

ನವರಸರಸಿಕಂ ಸುಮನಃ
ಸ್ತವನೀಯಮೆನಿಪ್ಪ ಕಾವ್ಯದತಿಶಯಮಂ ದು
ಷ್ಕವಿಗಱಿಯನೆಂದು ಜಱಿಯಂ
ಪ್ಲವಗಕ್ಕೇಂ ಬಾರ್ತೆ ಪಾರಿಜಾತಸ್ತಬಕಂ ೬೬
(ಧರ್ಮನಾಥಪುರಾಣಂ, ೧-೫೬)

ಪಂಡಿತರುಂ ಸಕಳಕಳಾ
ಮಂಡಿತರುಂ ಕೇಳತಕ್ಕ ಕೃತಿಯುಂ ಕ್ಷಿತಿಯೊಳ್
ಕಂಡರ್ ಕೇಳ್ವೊಡೆ ಗೊರವರ
¹ಡುಂಡುರುಚಿಯೆ¹ ಬೀದಿವರಿಯೆ ಬೀರರ ಕಥೆಯೇ ೮೭
(ಧರ್ಮನಾಥಪುರಾಣಂ, ೧-೫೭)

ನೆರೆಯಜ್ಞಯದ ಪೊರೆಯಜ್ಞಯದ
ಬಿರುದುಗಳೇಕೆಮಗೆ ಕೃತಿಯು²ನಾಲಿಸೆ² ಮಿಗೆ ಮ
ತ್ಸರಿಸುವ ಕವಿಯೆದೆ ಬಿಕ್ಕನೆ
ಬಿಜಯಪುದೆ ಬಿರುದಲ್ತೆ ಮಿಕ್ಕ ಬಿರುದದು ಬಿರುದೇ ೮೮
(ಧರ್ಮನಾಥಪುರಾಣಂ, ೧-೫೮)

ಕವಿತೆಯ ಲೇಸಂ ನುಂಗುವ
ನವನಂ ಕೊಲಬೇಡ ಕಾವ್ಯಮಂ ಕೇಳಿಸಲಾ
ಕವಿತಾಪ್ರತಿಭಾಯುಧತತಿ
ಯುವಸ್ಪರ್ಧೆಯೊಳಗೆಜಗಲೀಸರ್ವೇ ಮಾಣದವೋಲ್ ೮೯

ಕೃತಿವಾಸನಾನಿಲಂ ಬರೆ
ಕೃತಕೃತ್ಯರ ಜಿಹ್ವೆಯೆಂಬ ತರುಪ್ರೋಲೆವುದು ಸೋಣ್
ಸಿತ ಕಪಟರ ನಾಲಗೆಯೆಂ
ಬತಿಶಯವಹ ಪೋಟಮನನನಂತಲಗುವುದೇ ೯೦

ಬಾರದ ಕವಿತೆಯನುಸುರ್ವಂ
ಧಾರುಣಿಯೊಳಗಿನ್ನದಾತನೇತಕ್ಕಂಜುವ
ನಾ ರಾಯರ್ ಪಿಡಿದೊಯ್ದೊಡೆ
ಬಾರದ ನಿಧಿಪಗೆನು ಕೊಡುವುದಾತಂಗರಿದೇ (?) ೯೧

ನೆಲದೊಳ್ ಕವಿತೆಯೊಳೊಂದೇ
ಸಲೆಯುಕ್ತಿಯನುಸಿರ್ದು ಪೆಚ್ಚದಿರು ಮಷ್ವಿ ಸಿಂ
ಜಲಗಂ ತೊಳೆಯಲ್ ಸಿಕ್ಕಿದ
ಫಲಮಾತ್ರ ಧನಕ್ಕೆ ಘನವನಪ್ಪನೆ ಜಲಗಂ (?) ೯೨

---

೧ ಡುಂಡುಂಚಿಯ (ಅ) ೨ ನಿಕ್ಷಿಸಿ (ಅ)

ವಿರಸದೊಳಬದ್ಧರರ್ಥದೊ
ಳುರುಲೋಭಿಗಳಾ ಕುಶಬ್ದದೆಡೆಯೊಳನಿತರ್
ಮರುಪದದೊಳಗೆಯಭಾಷಾ
ಹರಪರಪೂರ್ವದ ಕವೀಶರಂ ಬಣ್ಣಿಪರಾರ್ ೯೩

ಪುಟ್ಟಿಸಿದುದ ಪುಟ್ಟಿಸಿ ವಿಧಿ
ಯಟ್ಟಾಸಕ್ಕೊಳಗುವಾದನೆಮ್ಮಯ ಕವಿಗಳ್
ಪುಟ್ಟದುದಂ ಪುಟ್ಟಿಸಿ[ನೆಜ೩]
ನೆಟ್ಟನೆ ಕೊಂಡಾಟಕೊಡನೆ ಯೋಗ್ಯರುನಾದರ್ (?) ೯೪

ಮಾಡಿದ ಪುರುಷಾರ್ಥಂ ವಿಗೆ
ನೋಡುವೊಡಿನಿತಿಲ್ಲ ಕವಿಗಳೆಂತಹ ಸ್ವೈಪೋ
ಜೋಡಿಸಿ ಮಾತಿನ ಮಾಲೆಯ
ನಾಡುತ್ತೆ ಪಸದನನುಸೊಯ್ದು ಮತಿಯಂ ಕೊಳ್ವರ್ ೯೫

ಅಕ್ಷರದೊಳಗಾವುದು ಸುಖ
ಭಕ್ಷಿಸಿದವರೊಳರೆ ಪರಸುಕವಿಕುಲ[ದ]ರನಾ
ನಿಕ್ಷಿಪ್ತಮಾಗೆ ಮಧುರಂ
ಸಾಕ್ಷಾತ್ಕಾರಮಾಯ್ತು ಶಬ್ದದಕ್ಷರತತಿಯೊಳ್ ೯೬

ಬರ್ಮನಿಂದಾದ ವಾಕ್ ದು
ಷ್ಕರ್ಮದೊಳಾತಂಗೆ ಪೆಂಡಿರಾದಳ್ ಕವಿಗಳ
ನಿರ್ಮಲ ಸದಮೃತವಾಣಿ ಸು
ಕರ್ಮದೆ ಮನಸೋಲ್ತು ರಸಿಕರೋಳ್ ಪುದುವಾದಳ್ (?) ೯೭

ಶ್ರುತವಾರಿನಿಧಿಯ ಪಾರಮ
ನತಿಪ್ರಬಂಧಾಭಿಯೋಗರಾರೆ[1]ಯ್ದಿದೊಡಂ[1]
ಕೃತಪುಣ್ಯರ್ಗಲ್ಲದೆ ವಿ
ಶ್ರುತ ಕವಿತಾರತ್ನವಲ್ಲಿ ಸಂಭವಿಸುಗುಮೇ ೯೮

(ಕಾವ್ಯಾವಲೋಕನಂ, ೪.೨೫)

[1] ಯ್ದಿದಪರ್ (ಸ)

ಮದವಿಲ್ಲದಿಭಂ ಮಧುವಿ
ಲ್ಲದ ಕುಸುಮಂ ಚಂದ್ರನಿಲ್ಲದೊಂದಿರುಳ್ ಆರ್ಪಿ
ಲ್ಲದ ನೃಪತಿ ಕವಿತೆಯಿಲ್ಲದ
ವಿದಿಗ್ಧತಾಗುಣಮವೇಂ ಮನಂಗೊಳಿಸುಗುಮೇ ೯೯
(ಕಾವ್ಯಾವಲೋಕನಂ, ೪೨೬)

ರವಿ ತಾನಪ್ಪುದು ಜೋದ್ಯಮಲ್ತು ಕವಿ ತಾನಪ್ಪಂಗಮೇ ಜೋದ್ಯಮೀ
ಭುವಿಗರ್ಥೇಶ್ವರನಾಗಲಪ್ಪುದು ಪರಾರ್ಥಧ್ಯಾನಿ ತಾನಪ್ಪುದೇ
ನವ[ಶಂ] ಭೂಗರಸಾಗಲಪ್ಪುದು ರಸಜ್ಞಾಧೀಶನಾದಪ್ಪುದೇ
ಭವಕಾರುಣ್ಯಮನರ್ಘ್ಯರತ್ನಕೆಣೆಯಾದೀ ಮೂವರುಂ ಮೂವರೇ ೧೦೦

ರಸಮಂ ಕಟ್ಟುವರೊಲ್ದು ಕಟ್ಟಿಯಿಡದತ್ಯರ್ಘೌಘಮಂ ತೀವುವರ್
ಮಿಸುಪೊಂದಾಲಯಮಿಲ್ಲದಪ್ರತಿಮ ಚಿತ್ರಪ್ರಾಕ್ತಮಂ ತೋಱುವರ್
ನಸುಕೇರಿಲ್ಲದೆ ದೇಹಮಿಲ್ಲದಸುವಂ ತಂದಿಟ್ಟು ಕೊಂಡಾಡುವರ್
ಪೊಸ ಕಬ್ಬಂಗಳೊಳಾ ಕವೀಶ್ವರರದೇನಂ ಮಾಡಲುಂ ತೀರದೇ ೧೦೧

ಮಧುರಪಟೌಘಮಂ ಬರಿಸದಾತತಲೋಕದೊಳೊಂದು ತಾಣದೊಳ್
ಸುಧೆಯುದೆಯಿಂದು ತಾರದೆ ಪದಾರ್ಥವನೆಲ್ಲವನೊಲ್ದು ಮಾಣದಾ
ಬುಧಜನಕೊಲ್ದು ಕಾವ್ಯದಿಸಿದೂಟವ ನೂಡಿದ ಮಾತ್ರದಲ್ಲಿ ಸ
ದ್ವಿಧಿಯೊಳೆ ಕರ್ಣಕೌತುಕಮನಿಕ್ಕುವರಾ ಕವಿಲೋಕನಾಯಕರ್ ೧೦೨

ಕಂಡುದನೊಂದುಮಂ ಮಱೆಯದಾಡುವುದುಂ ಮಿಗೆ ದುಸ್ತರಂ ಜಗ
ತ್ತುಂಡೊಡಮೂಟಮೇನೆನಲದಂ ಪರಿಕಲ್ಪಿಸಿ ಪೇೞ್ವುದಾಯಸಂ
ಮಂಡಲದಲ್ಲಿ ಕಾಣದುದನೊಲ್ದುಣದಿರ್ಪುದನಾಡುವಂದಮು
ದ್ದಂಡ ಕವೀಶ್ವರರ್ಗೆ ಮಿಗಿಲುಂ ಸಲೆ ಸಂದುದವರ್ಗೆ ಸಲ್ಲದೇನ್ (?) ೧೦೩

ಲಕ್ಷಣಮೆಂಬುದಂ ಪರಮತತ್ತ್ವವಿತಾಜನಮೆಮ್ಮ ಕಾವ್ಯದೊಳ್
ಚೆಕ್ಕನೆ ಭೇದಿಸುತ್ತೆ ಮಿಗೆ ದೋಷಮನೊಂದರೆಯುಂಟುಮಾಡದೇ
ಕಕ್ಕಟ ಸುಮ್ಮನಿರ್ದಪಿರಿಯಾರಯಲಂಗಜನಂಗಮಂ ದಿಟಂ
ಮಿಕ್ಕುದನೊಲ್ದು ತೋರ್ಪ ನಿಮಗಾವುದು ಕಾಣಿಸದೀ ಧರಿತ್ರಿಯೊಳ್ (?) ೧೦೪

ಎನ್ನ ಮನಕ್ಕೆ ಪೂರ್ವದ ಕವೀಶ್ವರರೊಳ್ಪಿನ ಯುಕ್ತಿ ಬಾರದಾ
ಜೊನ್ನೊಡಲಂಗೆ ಪಾಸಟಿಯದಾಗಿರಲಾ ಶಶಿಗಂಡು ಕೀರ್ತಿಸ
ಲ್ಕಿನ್ನದಸಿಚ್ಛೆಯುಂ ನೆಳೆಯಲಿನ್ನ ಮನಕ್ಕಳವಲ್ಲವಂದು ನಿಂ
ದಿನ್ನಿರದಾಸವಂ ನೆಳೆವನಾತನೆ ಮೇಣತಿ ದೀರ್ಘನಾಗನೇ (?) ೧೦೫

ಕೇೞ್ಪಿರವಾಗೆ ಕಾವ್ಯರಸಮರ್ಥಮನುತ್ಕಟನುಂ ಪ್ರತೀತಿಯುಂ
ಮಾೞ್ಪನೆಗಂ ಜಲಕ್ಕನಿರೆ ಪೇೞಿಪೆ ಕೆಮ್ಮನೆ ಸೊಜಂಟುವೇೞ್ದು ಚೀಃ
ನೋ[೧]ೞಿಪ್ರೊಡೆ [೧]ಮುಯ್ವನಾ ಕೃತಿಗೆ ಪಂಜಿಕೆವೇೞ್ಪುದದರ್ಕೆ ಟಿಪ್ಪಣಂ
ಪೇೞ್ಪುದು ಟೀಕುವೇೞ್ಪನೆನೆ [೨]ಪೇೞ್ವಿಪನೇಂ[೨] ಕವಿಯೆಂಬ ಲೆಕ್ಕಮೋ ೧೦೬
(ಕಾವ್ಯಾವಲೋಕನಂ, ೨೯. ಸೂಕ್ತಿ, ೧-೬೭)

ಮೃದುಪದಬಂಧಮುಂ ಬಗೆಯುಭಾವದ ಪೆಂಪ್ಸಿರಿಯುಂ ರಸಪ್ರವಾ
ಹದ ನೆಲೆವೆರ್ಚನಿಂಬಱಿದು ಭಾವಿಸುತಾಲಿಸಿ ನಚ್ಚಿಮಚ್ಚಿ ಪೊ
ಣ್ಮಿದ ಪುಳಕಂಗಳಿಂ ನಯನದೊಳ್ ಕರೆಗಣ್ಮಿದ ಹರ್ಷಬಾಷ್ಪವ
ರ್ಷದಿನನುರಾಗಮುಂ ಪಡೆವ ಸಜ್ಜನಸಂಸ್ತವಮೊಂದೆ ಸಾಲದೇ ೧೦೭
(ಪಂಪರಾಮಾಯಣ, ೧-೨೯, ಸೂಕ್ತಿ, ೧-೬೮)

ಅಸವಸದಿಂದಮೊಂದಿಸಿ[೩]ಪ[೩]ಕಲ್ಪಿಸಿ ದೋಷಮನುಂಟು ಮಾಡಿಕೊಂ
ಡೆಸಗಡೆ ಕೆಮ್ಮನೂನವಿಡಿದೊಳ್ಳಿತುಮಪ್ಪೆಡೆಗೞ್ತಿಯಿಂ ವಿಚಾ
ರಿಸಿ ತಲೆದೂಗಿ ಮೆಚ್ಚಿ ಬೆರಳಂ ಮಿಡಿದೊಯ್ಯನೆ ಕೇಳ್ದೊಡಲ್ದು ಬ
ಣ್ಣಿಸುವ ಬುಧರ್ಕಳಿಂ ಕವಿಗೆ ಪಿಂಗುಗುಮಾ ಕವಿತಾಪರಿಶ್ರಮಂ ೧೦೮
(ಸೂಕ್ತಿಸುಧಾರ್ಣವಂ, ೧-೬೯)

ಪ್ರೌಢತೆನೆ ಪೇೞ್ವ ತಿರ್ದುವಜೀನೆನ್ನೊಳೆ ಸನ್ನಿದವಾಪುದಾದೊಡಂ
ರಸಿಕರಿನಿಯ್ದು ತಿರ್ದಿಸಿದೊಡಲ್ಲದೆ ನಿಲ್ಲದು ಚಿತ್ರಮಂತು ತಿ
ರ್ದಿಸುವುದೆ ನಲ್ಮೆಯುಂ ಬೆಳಗೆ ಕನ್ನಡಿ ಸೋದಿಸೆ ಪೊನ್ ವಿರಾಜಿಸಂ
ತೆಸೆದು ಬೞಿಕ್ಕೆ ತತ್ಕೃತಿ ಜಮತ್ಕೃತಿಯುಂ ಧರೆಗುಂಟುಮಾಡದೇ ೧೦೯
(ಜಗನ್ನಾಥವಿಜಯಂ, ೧-೧೫)

ತಿರ್ದಿದೊಡಂ ಸಮಂತು ಮಿಗೆ ತಿರ್ದದೊಡಂ ನಿಜದಿಂದೆ ನಣ್ಪುವ
ಟ್ಟಿರ್ದ ಮದೀಯ ಸತ್ಕೃತಿಯ ಬಿಂಕದ ಕೊಂಕಿನ ಮಾತನೊಲ್ದು ಕೈ
ಸಾರ್ದನುರಾಗದಿಂ ಸರಸರಾದ ಕವೀಶ್ವರರೆಯ್ದೆ ಸೋಹದಿಂ
ತಿರ್ದುಗೆ ತಿರ್ದಮಂತೆ ಸುರತಾಂತ್ಯದ ಕಾಂತೆಯ ಮುಣ್ಗುರುಳ್ಗಳಂ ೧೧೦

---

೧ ೞ್ದದೆ (ಸೂ) ೨ ೞ್ದವನುಂ (ಸೂ) ೩ ತು (ಸೂ)

ವಾರಿಧಿ ಪರ್ವತಂ ಪು[೧]ರನರೇ[೧]ಶ್ವರರುದ್ಭಟಸಂ ಕುಮಾರರಂ
ಭೋರುಹವೈರಿಮಿತ್ರರುದಯಂ ಋತುನಂದನನಂಬು ಸೀಧು ಕಾಂ
ತಾರತಿ ಮಂತ್ರ ಚಿಂತೆ ಚರ ಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಪದಿನೆಂಟುಮನೆಯ್ದೆ ಬಣ್ಣಿಪರ್ ೧೧೧

(ಸೂಕ್ತಿಸುಧಾರ್ಣವಂ. ೧-೭೬)

ಪುರ ವಾರಾಸಿ ನಗರ್ತು ಚಂದ್ರತಪನೋದ್ಯಾನಾಂಬುಕೇಳೀ ಸುರಾ
ಸುರತಕ್ರೀಡನ ವಿಪ್ರಲಂಭ ಲಲನಾಕಲ್ಯಾಣ ಪುತ್ರೋದಯ
ಸ್ಫುರಿತಾಲೋಚನ ಮಂತ್ರ ದೂತ ಗಮನಾಜಿ ಸ್ತ್ರೀಸುಖವ್ಯಾಪ್ತಿಗಳ್
ದೊರೆಕೊಳ್ಗುಂ ಕವಿವರ್ಣನಕ್ಕೆ ಪದಿನೆಂಟಂಗಂ ಮಹಾಕಾವ್ಯದೊಳ್ ೧೧೨

(ಸೂಕ್ತಿಸುಧಾರ್ಣವಂ, ೧-೭೭)

ಉದಧಿ ಪುರಾಧಿಪ ಸುತ ಮಂ
ತ್ರ ದೂತ ಗಮನಾಜಿ ವಿರಹ ಪರಿಣಯ ಸುರತ
ರ್ತುದಿನೇಶ ಚಂದ್ರ ಮಧು ಕುಭೃ
ದುದಕ ವನಸ್ಪತಿಯಿ ಕೃತಿಗೆ ಪದಿನೆಂಟಂಗಂ ೧೧೩

(ಉದಯಾದಿತ್ಯಾಲಂಕಾರಂ, ೧-೧೩ ಸೂಕ್ತಿಸು ೧-೭೮)

ಓರಂತೆ ಮೆಚ್ಚಿದಂ ಕೃತಿ
ಸಾರಂ ಪೀಠಿಕಮಿದಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದ್ವಾರಸಮುದ್ರಾಧಿನಾಯಕಂ ಸೋಮನೃಪಂ ೧೧೪

ಇದು ಸರಸ್ವತೀ ಸಮಾನಂಗದರ್ಪಣಾಯಮಾನ ಪ್ರತಿಭಾಸಮಾನ ಪುರಾತನ ಪ್ರಮಾಣ ಸುಕವಿಶೃಂಗಮಲ್ಲಿಸಿವಿರಚಿತ ಕಾವ್ಯಸಾರಮಹಾಪ್ರಬಂಧದೊಳ್ ಪೀಠಿಕಾವರ್ಣನಂ ಪ್ರಥಮಾಶ್ವಾಸಂ



೧ ಮಧೀ (ಸೂ)

# ಸಮುದ್ರ ವರ್ಣನಂ

ತೆರೆ ನೊರೆ ಬುದ್ಬುದಂ ಸುಳಿ ಜಲಂ ತೆಗೆ ಪೆರ್ಚುಗೆ ಗುಣ್ಪು ಘೋಷಣಂ
ವರುಣನಗಂ ವಧೂಟಿಜನನುಂ ಮಣಿಗಳ್ ವಡಬಾಗ್ನಿ ವಾಸ್ತರಂ
ಹರಿ[೧]ಕರಿ[೧]ಯಾಪೆ[೨]ನಾಗ[೨]ತೋಜಿತಯಿ[೩]ರ್ಪ[೩]ತೆ ನೀರ್ವೊಗೆವಭ್ರಮುರ್ವರಾ
ಪರಿವೃತಿ [೪]ವಾಗು[೪]ರಿಕ್ಕೆ ಬಗೆಗಾಪೊಡೆ ಸೈತು ಸಮುದ್ರವರ್ಣನಂ ೧

(ಸೂಕ್ತಿಸುಧಾರ್ಣವಂ, ೨–೧)

ನೆಲೆಯುಂ ನೋಡಲಸಾಧ್ಯಮಾದ ಗುಣಮುಂ ತಾಳ್ದಿರ್ದು ಸಂತೋಷದಿಂ
ಕುಲಮುಂ ನೋಡಲು ಕಾಣಲೀಯದ ಮಹಾಗಾಂಭೀರ್ಯದೈಶ್ವರ್ಯದಿಂ
ಬಲದಿಂದಗ್ನಿಯನಾವಗಂ ಧರಿಸಿಯುಸ್ಸಾನಂದದಿಂದೀಶನಂ
ಸಲೆ ನಾಂ ಪೋಲುವೆನೆಂಬವೊಂದುಪಮೆಯಿಂದೊಪ್ಪಿತ್ತು ನೀರಾಕರಂ ೨

ವನಮಾಲಾಪರಿಶೋಭೆಯಿಂದನಿಮಿಷಾದ್ಯುತ್ಪತ್ತಿಯಿಂ ಶಂಖ ಚ
ಕ್ರವಿನೋಜ್ವಲದಿಂದನಂತಮಹಿಮೋದಾರತ್ವದಿಂ ಶ್ರೀನಿವೇ
ಶನದಿಂ ಗೋತ್ರಸುಜಾದಿದಾನಮೊದವಿಂ ಮುಕ್ತಾದಿಜನ್ಮಪ್ರಕೀ
ರ್ತನದಿಂ ವಾರಿಧಿ ವಾರಿಜಾಕ್ಷನವೊಲೇಂ ಚೆಲ್ವಾಯ್ತು ಭೂಭಾಗದೊಳ್ ೩

ನೊರೆಯಿಂ ಬುದ್ಬುದದಿಂ ಕಣಾವಳಿಗಳಿಂದಾವರ್ತದಿಂ ತುಂತುಱಿಂ
ತೆರೆಯಿಂ ಪೆರ್ದೆರೆಯಿಂ ತಿಮಿಂಗಿಳಗಿಳಸ್ತೋಮಂಗಳಿಂ ಕಚ್ಛಪೋ
ತ್ಕರದಿಂ ನಕ್ರನಿಕಾಯದಿಂ ಮಕರದಿಂ ನೀರಾನೆಯಿಂ ಕಂಬುವಿಂ
ವರರತ್ನವ್ರಜದಿಂ ಪ್ರವಾಳಲತೆಯಿಂದೊಪ್ಪಿತ್ತು ನೀರಾಕರಂ ೪

(ಗಿರಿಜಾಕಲ್ಯಾಣಂ, ೧–೪೭)

ಪೃಥುಸತ್ವಂ ದೈವಜಾಲಂ ತಮಗಭಿಮತಮಾಗಲ್ಕೆ ಸೌರಂಭದಿಂದಂ
ಮಥಿಸಲ್ ಮಾಂಗಲ್ಯವಸ್ತುಪ್ರಕರಮನಮೃತಾಹಾರಮಂ ಕೊಟ್ಟು ಮತ್ತಂ
ವ್ಯಥೆ ತನ್ನೊಳ್ ಪುಟ್ಟಿ ಹಾಲಾಹಲಮನುಗುಳ್ದಿ ಗಂಭೀರಸಾಮರ್ಥ್ಯತೇಜಃ
ಪ್ರಥಿತಂ ಪ್ರಖ್ಯಾತಿವೆತ್ತಂ ಸಲೆ ಜಲಚರಸಂಘಾತರೌದ್ರಂ ಸಮುದ್ರಂ ೫

---

೧ ಮಜಿ (ಸೂ) ೨ ವೇಳೆ (ಸೂ) ೩ ಶ (ಸೂ) ೪ ನಾಗ (ಸೂ)

ಗಿರಿಶಂಗೊಲ್ದು ವಿಭೂಷಣಕ್ಕೆ ಶಶಿಯಂ ದೈತ್ಯಾರಿಗಂ ಪ್ರೇಮದಿಂ
ಸಿರಿಯಂ ಕೌಸ್ತುಭಮಂ ಸುರರ್ಗೆ ಸುಧೆಯಂ ದೇವೇಂದ್ರಗೈಶ್ವರ್ಯಮಂ
ಹರುಷಂ ಕೈಮಿಗಲಿತ್ತುದೊಂದು ಘನದಿಂ ಮತ್ತಂ ಧರಾಚಕ್ರದೊಂ
ದಿರವುಂ ತನ್ನೊಳಗೆಂಬ ತೇಜದೊದವಿಂದೊಪ್ಪಿತ್ತು ರತ್ನಾಕರಂ ೬

ವಿಲಸತ್ಕಲ್ಲೋಲಮಾಲಾಪ್ರತಿಹತನಿತತಪ್ರೋಚ್ಚಳಚ್ಛೈಳ ಕೋಳಾ
ಹಳಿತೋದ್ವೃತ್ತಫೇನನಾನಾಕರಿಮಕರವಿಸೃಷ್ಟಪ್ರಹಾರಪ್ರತಾಪೋ
ದ್ಗಳಿತಾನಂತಪ್ರರತ್ನಪ್ರಬಲಜಳಚರಾನೀಕಗಂಭೀರಭೀಮೋ
ಜ್ಜ್ವಳರಾವಪ್ರಾದ್ಭುತಪ್ರೋನ್ಮಿಳಿತ ಘುಳುಘುಳುಧ್ವಾನಮಂಭೋನಿಧಾನಂ ೭

(ಗಿರಿಜಾಕಲ್ಯಾಣಂ, ೧-೪೬)

ಅದು ಜಂಬೂದ್ವೀಪಮಂ ಬಾಸ್ಗಡರೆ ಬಳಸಿದಂತಿರ್ದುದಂಭಃಕರೀಂದ್ರೋ
ದ್ರದನಾಘಾತೋತ್ಥಜ್ಜಳಚ್ಛೀಕರಮಕರಕರಾಸ್ಫಾಲಪಾಠೀನಪುಚ್ಛಾ
ಚ್ಛದನಷ್ಟನಕ್ರಚೂರ್ಣಪ್ರಕುಪಿತವಿಲುಠಚ್ಛಿಂಶುಮಾರಪ್ರಹಾರ
ಪ್ರದಳತ್ಫೇನಪ್ರ[1]ತಾನ[1]ಪ್ರಬಳಘನಘನಾರಾವರೌದ್ರಂ ಸಮುದ್ರಂ ೮

(ಸೂಕ್ತಿಸುಧಾರ್ಣವಂ, ೨-೩೫)

ಸಿರಿಗೆ ಸುಧಾಕರಂಗೆ ಸುರದಂತಿಗೆ ಕಲ್ಪಕುಜಕ್ಕೆ ಪೆರ್ಚಿದ
[2]ಪ್ಸರಿಯರ[2] ಸಂಕುಳಕ್ಕೆ ತ್ರಿದಶೇಂದ್ರಹಯಕ್ಕಮೃತಕ್ಕೆ ಮಿಕ್ಕೆ ಭಾ
ಸುರತರಮಪ್ಪ ರತ್ನನಿಚಯಕ್ಕೆ ನೆಗಳ್ತಿಯ ಜನ್ಮಭೂಮಿಯೇ
ಧರೆಗೆನೆ ಬಣ್ಣಿಸಲ್ ನೆಱೆವನಾವನೊ ಪೆಂಪೆಸೆದಿರ್ಪ ವಾರ್ಧಿಯಂ ೯

(ಸೂಕ್ತಿಸುಧಾರ್ಣವಂ, ೨-೧೮)

ಮಿಳಿರ್ವರುಣಧ್ವಜಂಗಳ ನೆಬಿಲ್ಗಳನೊಂದೆರೆಗೆತ್ತು ವಾರ್ಧಿಯೊಳ್
ಪೊಳೆವೆಳವಾಳೆ[3]ಮೀನ್[3]ಕರ್ಮಕೆ ಬಾಳೆಗಳಂ ತಿಮಿ ನುಂಗೆ [4]ನುಂಗಿದಾ
ಗಳೆ ತಿಮಿಯಂ ತಿಮಿಂಗಿಳನಡಂಗುವಿನಂ ತವೆ ನುಂಗೆಯುಂತದಂ
ಗಳಿಲನೆ ನುಂಗುಗುಂ ಮಹತಿಮಿಂಗಿಳನಾವಗಮಾ ಸಮುದ್ರದೊಳ್ ೧೦

(ರೂದ್ರಕಂ–ಕಾವ್ಯಸಾರಂ–೭೬, ಸೂಕ್ತಿ. ೨–೨೪)

---

೧ ಪಾಪ (ಸೂ) ೨ ಚ್ಛರಸಿಯ (ಸೂ) ೩ ಗಳ್ (ಸೂ) ೪ ತತ್ತಿಮಿಂಗಳುಮುಮುಮಾ ತಿಮಿಂಗಿಳಗಿಳಂಗಳ್ ನುಂಗುವುದೊಂದೆ ತಾಣದೊಳ್ (ಸೂ, ಶೂ)

ಅದು ಮತ್ತೆಂತೆಂದೊಡುದ್ಯ[1]ತ್ತಿಮಿ[1]ಮಕರಕುಳಕ್ಷೋಭನೀರೇಭರಾಜೀ
ರದನವ್ಯಾಘಾತಪಾತೋತ್ಕಮಠಲುಠನಕಾಠಿನ್ಯಪಾಠೀನಮತ್ಸ್ಯ
ಚ್ಛೇದನಚ್ಛೇದಾದಿ ನಾನಾಜಲಚರನಿಕರಾಸ್ಫಾಳನಪ್ರೋಚ್ಚಲತ್ಪ್ರ
ಚ್ಛಾದನಚ್ಛನ್ನಚ್ಛಟಾಪ್ರಕ್ಷುಭಿತಲಹರಿಕಾಸ್ಫಾರ ರೌದ್ರಂ ಸಮುದ್ರಂ ೧೧
(ಶೂದ್ರಕ–ಕಾವ್ಯಸಾರಂ. ೭೫, ಸೂಕ್ತಿ ೨–೧೪)

ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು ನಾಡೆಯುಂ
ಕವಿಗಳ ಲೀಲೆ ಗಂಗೆಗಿವಿಯೋಲೆ ವನೇಭದ ಶಾಲೆ ಪದ್ಮಸಂ
ಭವನ ನೆಗಟಿತ್ತು ಪೂರ್ವದ ಪೊಗಟಿತ್ತು ಕುದುರ್ಗದಗಟಿತ್ತು ಮಿಕ್ಕ ಬಾ
ಡವಶಿಖಿಗೋಗರಂ ಮಣಿಗಳಾಗರಮೊಂದೆಸೆದತ್ತು ಸಾಗರಂ ೧೨
(ಸೂಕ್ತಿಸುಧಾರ್ಣವಂ, ೨–೩೭)

ಪವಳದ ಕೆಯ್ ಮುಗಿಲ್ಗಳಿಜವಟ್ಟಿಗೆ ನೀರ್ಗಳ ಗೊತ್ತು ಮುತ್ತು ಪು
ಟ್ಟುವ ಕಣಿ ಬಿಟ್ಟಪಕ್ಕಿಗಳಗೂಡೆಳನೇಸಱ ತೊಟ್ಟಿಲುದಗ್ರದಾ
ನವರೆಜಱಿನಟ್ಟು ಲಕ್ಷ್ಮಿಯ ತವರ್ಮನೆ ತಿಂಗಳ ಪೆತ್ತ ತಂದೆ ವಾ
ಡವಶಿಖಿಗಂ ನಿವಾಸಮಸುರಾರಿಯ ಸೆಜ್ಜೆ ಶುಭಂ ಮಹಾರ್ಣವಂ ೧೩
(ಸೂಕ್ತಿಸುಧಾರ್ಣವಂ, ೨–೩೮)

ಕರಿಮಕರಂಗಳುಚ್ಚಲಿತ ಭಂಗುರ ತುಂಗತರಂಗಮಾಲೆಯಂ •
ಕರಿರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀ
ಕರಮೊಳೆ ನಾಂದು [2]ಸೇದೆ[2]ಗೊಳುತುಂ ಸುೞಿ[3]ದೂದು[3]ವ ಗಾಳಿ ಬರ್ಪ ದೇ
ವರ ವರಕಾಂತೆಯರ್ಕಳ ಪರಿಶ್ರಮಮಂ ಕಳೆದತ್ತು ವಾರ್ಧಿಯೊಳ್ ೧೪
(ಶೂದ್ರಕಂ–ಕಾವ್ಯಸಾರಂ, ೭೮, ಸೂಕ್ತಿ, ೨–೨೩)

ಶಂಖಮನೆತ್ತಿ ಮೀನಪೊಳೆಪಂ ತಳೆದಾಮೆಯ ರೂಪನಾಳ್ದು ಪಾ
ವಂ ಕರಮೊಪ್ಪೆ ನೆಮ್ಮಿ [4]ರಥಪಾದ[4]ಸಮಾಶ್ರಯನಾಗಿ ಭೂಮಿಭೃ
ತ್ಸಂಕುಳಮಂ ಶರಣ್ಬರೆ ರಕ್ಷಿಸಿ ಲಕ್ಷ್ಮಿಯನೋತು ಪೆತ್ತು ವೀ
ತಾಂಕುಶ ಸತ್ವದಿಂದಮರ್ದು ಪೋಲ್ತುದು ವಾರಿಧಿ ವಾರಿಜಾಕ್ಷನಂ ೧೫
(ಸೂಕ್ತಿಸುಧಾರ್ಣವಂ, ೨–೨೬)

---

೧ ತ್ಕಟ (ಸೂ) ೨ ಸೇದು (ಸೂ) ೩ ದಾಟು (ಸೂ) ೪ ಶಿಶುಮಾರ (ಸೂ)

ನ್ಮೃಗಮಕರಂಗಳಿಂ ಕಮಠ ನಾಗ ಹರಿಸ್ಮಣಿ ನೀಲಮೌಕ್ತಿಕಾ
ಳಿಗಳ ಕಳಾಪದಿಂ ಶಫರ ಶಂಖಪರಂಪರೆಯಿಂ ವಿಳಾಸವ
ತ್ತ್ವಗಯುಗಳಂಗಳಿಂ ಲಹರಿಕಾ ಲತಿಕಾವಳಿಯುಂಗಳಿಂದೆ ಧಾ
ತ್ರಿಗೆ ಕಟಿಸೂತ್ರದಂತೆ ಸೊಗಯಿಕ್ಕುಮು[1]ಘಾಟ[1]ಪಯೋಧಿಮಂಡಲಂ ೧೬
(ಸೂಕ್ತಿಸುಧಾರ್ಣವಂ, ೨-೩೧)

ಒಳಪ್ಪೈರಿಸ್ಫಾರ ವಜ್ರಾಯುಧ ಭಯಚಕಿತೋ[2]ದ್ದಾಮ[2]ಪ್ಯೈನಾಕಗೋತ್ರಾ
ಚಳಪಕ್ಷತ್ರಾಯಿ ಸಿಂಧುಪ್ರಿಯತಮನತಿಗಂಭೀರಸಂತರ್ನಿವಿಷ್ಟಾ
ಖಿಲ ಲೋಕಂ ನಕ್ರಚಕ್ರಸ್ಫುರಮುರುತರಯಾದಸ್ತರಾಧ್ಯಾಸಿತ ಪ್ರೋ
ತ್ಕಲಿತಾಂಭಃಕುಂಭಿಕುಂಭೀನಸಮಕರಕರಕ್ಷೋಭರೌದ್ರಂ ಸಮುದ್ರಂ ೧೭
(ಪಂಚತಂತ್ರಂ, ೨೨೨, ಸೂಕ್ತಿ ೨-೩೩)

ಗಂಭೀರಸ್ಫಾರವೇಳಾಬಹಳಪರಿಸ್ಫತೋಲ್ಲೋಲಕಲ್ಲೋಲಮಾಲಾ
ರಂಭಪ್ರೋಡ್ಡೀನಫೇನಪ್ರಬಳಜಲಚರೋ[3]ಲ್ಲೋಲ[3]ಪಾಠೀನ ಶುಂಭ
ತ್ಕುಂಭೀರಾಭೀಳನಕ್ರಪ್ರಕರಕಮಠನೀರೇಭರತ್ನಪ್ರಭಾಪ್ರೋ
ಜ್ಜೃಂಭತ್ರೋದ್ಭಾಸಿವೀಚೀನಿಚಯಘನಘನಾರಾವ ರೌದ್ರಂ ಸಮುದ್ರಂ ೧೮
(ಶೂದ್ರಕ,-ಕಾವ್ಯಸಾರಂ, ೭೩, ಸೂಕ್ತಿ ೨-೩)

ವಿಚಲತ್ಪಾಠೀನಪುಚ್ಛಪ್ರತಿಹತಸಲಿಲಾಸೇಕಪ್ರೋಜ್ಜಂಡಶುಂಡಾ
ಗ್ರಜಸೇಟಾಸ್ಫೋಟಿತಾಂಬೂರಗಮುಖನಿಸ್ಸೃತಶ್ವಾಸಸಂಕೋಚಿತಗ್ರಾ
ಹಜಯೋದೀರ್ಣಸ್ವಪಾಸೋತ್ಸುಕತಿಮಿಕುಳಕೋಳಾಹಳಕ್ಷೋಭವೀಚೀ
ವಿಚರದ್ವೀತಾನಮುದ್ರಾಡಬಳಿಪಿಮುಖಸಂಧಾನಮಂಭೋನಿಧಾನಂ ೧೯
(ಸೂಕ್ತಿಸುಧಾರ್ಣವಂ, ೨-೪)

ನಳಿನೀಗರ್ಭಾಂಡಮಾಲಾಘಳಿತಮೆನಿಸಿಪ ಪೃಥ್ವೀಮಹಾವಲ್ಲಿಯುಂ ಮುಂ
ಡಳಿಸಿರ್ದಾವಾಲದಂತಿರ್ಪುದು ಜಲಚರಸಂಭೂತ ಸಂಪದ್ವಿಧಾನಂ
ವಿಳಸದ್ರತ್ನಪ್ರತಾನಂ ಕುಲಗಿರಿಶರಣಸ್ಥಾನಮುತ್ತೀರ್ಣಫೇನಂ
ಬಳವದ್ವೀಚೀವಿತಾನಂ ಪ್ರಬಳಘುಳುಘುಳುಧ್ವಾನಮಂಭೋನಿಧಾನಂ ೨೦
(ಜಗನ್ನಾಥವಿಜಯಂ, ೧-೨೩, ಸೂಕ್ತಿ ೨-೩೯)

---

೧ ಗಾಧ (ಸೂ) ೨ ದ್ಧೂತ (ಸೂ) ೩ ಲ್ಲುಂಠ (ಸೂ)

ಚಕಿತತರಂಗಸಂಘಹತಿಯಿಂ ಪೊಱಪೊಣ್ಮುವ ಮುತ್ತು ದಿಗ್ವಧೂ
ನಿಕರದ ತೊಟ್ಟ ಮುತ್ತಿನೊಳೊಡಂಬಡೆ ಸೂಸುವ ಶೀಕರಾಳಿ ತಾ
ರಕಗಣದೊಳ್ ಸಮಂಬಡೆಯೆ ತೇಂಕುವ ಮೌಕ್ತಿಕರತ್ನಗರ್ಭಶು
ಕ್ತಿಕೆ ಸೆಱೆಯೊಳ್ ತಡಂಬಡೆ ಸುಧಾರ್ಣವದೊಪ್ಪಿದುದ್ಗತಾರ್ಣವಂ ೨೧
(ಜಗನ್ನಾಥವಿಜಯಂ, ೧–೪೪)

ಒಳಪೊಯ್ದಾಗಸಮಂ ಸಮುದ್ರಮೆಸೆದತ್ತಾಕಾಶಮಾರ್ಗಸ್ಥಮುಂ
ಗಳನೊಲ್ದಾಱಿಸಲುಷ್ಣರೋಚಿಗೆ ನಿಜೋತ್ಸೇಧಾತಪತ್ರಂಗಳಂ
ತಳೆವುಚ್ಛ್ರೀಕರಪುಷ್ಪಮಂ ಕೆದಱುವನ್ಮುಕ್ತಾಕ್ಷತಾನೀಕಮುಂ
ತಳೆವುದ್ವೀಚಿವಿಲೋಲಚಾಮರಮನೆತ್ತಂ ಬೀಸುವೊಂದಂದದಿಂ ೨೨
(ಜಗನ್ನಾಥವಿಜಯಂ, ೧–೪೩)

ಪದಿನಾಲ್ಕುಂ ಲೋಕಮುಂ ಕಿಱಿತ್ತೊಡೆಯೊಳೆ ತಳೆದಾ ವಿಷ್ಣು ತನ್ನೇಕದೇಶಾ
ಗ್ರದೊಳಿರ್ದಂ ನಾರಿದಂ ತನ್ನೊಳೆ ಕೆಱಿಸಯು ನಾಭಿಂದುಮಂ ನೇಱಿತಂದಂ
ತದಱಿಂದಂ ಲೋಕಮುಂ ತೀವಿಪ್ಪುದು ಪವಿಭಯಭ್ರಾಂತಿಯಿಂದಂ ರದನ್ನೊ
ಕ್ಕುದು ತನ್ನಂ ಗೋತ್ರಧಾತ್ರೀಧರತತಿಯಿಸೆ ಸೆಂಪರ್ಣವಕ್ಕೇನೊ ಚೋದ್ಯಂ ೨೩
(ಜಗನ್ನಾಥವಿಜಯಂ, ೧–೪೫, ಸೂಕ್ತಿ, ೨–೯)

ವ್ಯಾಳಗ್ರಾಹಪ್ರವಾಳಪ್ರಮನದಳಿತಾಖಂಡಡಿಂಡೀರಪಿಂಡಾ
ವ್ಯಾಳವ್ಯಾಶಕ್ತಿಮುಕ್ತಾಮಣಿಗಣನಿಕರಾರೇಡಿತಂ ರೇಡಿತಾರಾ
ಜಾಳಾಂಭೇಭೋಗ್ರಕುಂಭಸ್ಥಳಸಗಬಹಳಾಲೋಲಕಲ್ಲೋಲಮಾಲಾ
ವ್ಯಾಳಾನಕ್ರಂ ಘನತ್ರಂ ಕಳಿತ ಖಳಖಿಳಧ್ವಾನಮುದ್ರಂ ಸಮುದ್ರಂ ೨೪

ನೀರು ಕಲಂಕೆಯುಂ ಕವಡಿತೋ ಬಡಬಾನಳನಬ್ಧಿ ಕಾಯ್ದುದೋ
ಮಾರುತಿ ಕಟ್ಟಿ ನೇಲ್ವಱುದುದೋ ಗಿರಿಗಳ್ ಬರೆ ವಜ್ರಿಗಳ್ಕಿತೋ
ಸಾರಸಮಸ್ತ ವಸ್ತುಗಳನಾರ್ಕೊಳೆ ತಪ್ಪಿದೊ ಮತ್ತಮಂತೆ ಗಂ
ಭೀ[2]ರದ ಸಿಂಧುವೆಂದು ಪರಿ ಮೆಚ್ಚಿ ಕವಂ ಪೊಗ[3]ಳ್ವಂ ಸಮುದ್ರಮಂ ೨೫
(ಕಾವ್ಯಾವಲೋಕನಂ, ೯೦೮, ಸೂಕ್ತಿ ೨–೧೧)

ಪಲವುಂ ರತ್ನಾಂಶು ತಳ್ತೊಪ್ಪುದ್ದೆಸೆದಿರೆ ಶಬಳಚ್ಛಾಯೆಯಿಂದಂ ತರಂಗಾ
ವಳಿ ಜಂಬೂದ್ವೀಪಮಂ ಮುಂಡಳಿಸಿದ ಪರಿವೇಷಂಬೊಲಿಂಬಾಯ್ತು ಮುಕ್ತಾ
ಫಳ ಜನ್ಮಸ್ಥಾನಮುಜ್ಜೃಂಭಿತಜಲಚರಕೋಳಾಹಳಧ್ವಾನಮುದ್ಯ
ನ್ನಿಲಸತ್ಪಾಠೀನನಾರಾಶಾಮುಖಲಿಖಿತಸಮುತ್ಸೇಧಮಂಭೋನಿಧಾನಂ ೨೬
(ಸೂಕ್ತಿಸುಧಾರ್ಣವಂ, ೨–೭)

---

೧ ತವ್ರಾತ (ಅ) ೨ ರತಿ ಸಂದುದೆ (ಸೂ) ೩ ಬ್ದಂ (ಸೂ)

ಪೋಲೆ ನಿರಂತರಂ ನೆಗೆದ ಕಯ್ ಕರನೊಪ್ಪುವ ಕೂವಕಂಭಮಂ
ಪೋಲೆ ಕರಾಗ್ರದಿಂ [೧]ಬಿದಿರ್ದ[೧] ಶೀಕರಮೊಪ್ಪುವ ವಾಲದಂಡಮಂ
ಪೋಲೆ ನಿರಂತರಂ ಪರಿವುದೊಂದು ಮಹಾಮಕರಂ ಬೊಲಾಮುದಿಂ
ಶ್ರೀ ಲವಣಾಂಬುರಾಶಿಯೊಳಗೆಂದವನೊಂದಿಸಿಸಿರ್ದು ನೋಡಿದಂ ೨೭

(ಸೂಕ್ತಿಸುಧಾರ್ಣವಂ, ೨-೨೨)

ಬೆಟ್ಟುಗಳೆಟ್ಟಿದ್ದ ಬೆಟ್ಟುಗಳನಟ್ಟುವವೋಲ್ ಪವಮಾನ ವೇಗದಿಂ
ಪಟ್ಟಿ ತೆರಳ್ದು ಗೊಂದಣಿಸಿ ತಾಳೆತರೂಪಸ್ಮಹಸ್ರ ಘಾತದಿಂ
ಕೊಟ್ಟನೆ ಕಿಟ್ಟಿ ಪೊಯ್ದು ಕೊಣಕಿಟ್ಟು[೨]ಕೊಲಲ್ ಮಸನಟ್ಟು[೩] ಪೋಲಿ
ಬ್ಬಿಟ್ಟುವ ಸೊಕ್ಕಿದಾನೆ ಮಕರಂಗಳನೀಕ್ಷಿಸಿದಂ ಸಮುದ್ರದೊಳ್ ೨೮

(ಸೂಕ್ತಿಸುಧಾರ್ಣವಂ, ೨-೨೫)

ನೊರೆಯಿನಲ್ಲವು ತತ್ತ್ವ ಶಂಖದ ಬಳ್ಳಿಗಳ್ ಬಡಬಾನಲಾಂ
ಕುರುಮಿನಲ್ಲವು ರತ್ನದೀಧಿತಿಗಳ್ ತರಂಗಮಿನಲ್ಲವು
ದ್ಧುರಕುಲಾಚಳಪಂಕ್ತಿಗಳ್ ಜಳಶೀಕರಂಗಳಿವಲ್ಲವಾ
ಪರೆದ ಮುತ್ತುಗಳೆಂಬ ಶಂಕೆಯುನಾಗಿಕುಂ ಮಕರಾಕರಂ ೨೯

(ಕಾವ್ಯಾವಲೋಕನಂ, ೮೮೬, ಸೂಕ್ತಿ ೨-೩೨)

ಒಂದುಂ ಕಾರಣಮಿಲ್ಲದೆನ್ನ ಧನಮಂ ಶ್ರೀಕೌಸ್ತುಭಾಸಾಂಗನಾ
ವೃಂದಸ್ನಿಗ್ಧಸುರದ್ರುಮಾಮೃತಶಿಭಿಷಗ್ರತ್ನೇಭವಂ ಪೇವರೆ
ಳ್ತಂದೀಬಿತ್ತುಂಡುದನೆನ್ನ ಪುಯ್ಯಲಸಿದಂ ಸೀಂ ಭೂದರಂಗೆಯ್ದಿ ಸೇ
ಬಿತಂದೊಳ್ವಂತೆ ಗಭೀರನಾದಮೊಗೆವಂತಾಯ್ತಬ್ಧಿವಾತಾಹತಂ ೩೦

(ಸೂಕ್ತಿಸುಧಾರ್ಣವಂ, ೨-೩೬)

ಹರಿ ತನ್ನಳಿಯಂ ತಾನಾ
ಹರಿಯಾಣ್ಮಂ ತನ್ನೊಳೊಲ್ದು ಹರಿಯುರ್ಕಿಂ ತಾಂ
ಹರಿಯೊಳಗಿರ್ಪೆನೆನಲ್ ಸಾ
ಗರದಾಧಿಕ್ಯವನದಾವನಭಿವರ್ಣಿಸುವಂ ೩೧

---

೧ ನೆಗೆದ (ಸೂ) ೨ ಮುಹಾಚವದಿಂದೆ (ಸೂ) ೩ ಸಂಯಂತ್ರ(ಸ್ವೇ (ಸೂ)

ಹರನಿರ್ಕೆಗೊಂದು ಬೆಳ್ಳಿಯ
ಗಿರಿ ಸಾಲದೆನುತ್ತನೇಕ ರಜತಾಚಲಮಂ
ಶರನಿಧಿಯಟ್ಟುವ ತೆಱದಿಂ
ನೊರೆವೆಟ್ಟಂತಿಪ್ಪ ತೆರೆಗಳೇನೊಪ್ಪಿದುವೋ ೩೨

(ಸೂಕ್ತಿಸುಧಾರ್ಣವಂ, ೨-೬)

ಮೀಂಗಳ್ ಶತಯೋಜನದಗ
ಲಂಗವಳಂ ಪೆಱವು ಬಂದು ನುಂಗುವುವುಮುಮಂ
ನುಂಗುವವಂ ನುಂಗುವುದಂ
ನುಂಗುವವೊಲಬ್ಧಿಯೊಳ್ ಮಹಾಮತ್ಸ್ಯಂಗಳ್ (?) ೩೩

ಕುಂದಲೊಡನಿಂದುಬಿಂಬಂ
ಕುಂದುಗುಮದು ಪೆರ್ಚೆ ಪೆರ್ಚುಗುಂ ಜಲನಿಧಿ ಮೆ
ಯ್ಯೊಂದಿದ ಪುತ್ರಸ್ನೇಹಂ
ಸಂಧಿಸಿ ಜಗಕಿಂತು ನಾಡೆ ಸೊಗಯಿಸವೇಡಾ ೩೪

(ಕಾವ್ಯಾವಲೋಕನಂ, ೯೧೦, ಸೂಕ್ತಿ ೨-೧೦)

ಮಗ[1]ನಬ್ಜನ[1]ಬ್ಜವಾಸಿನಿ
ಮಗಳೆಳಿಯಂ ಜಳಜಜಠರ[2]ನೀ[2]ಪೆಂಪೆನ್ನಿಂ
ಮಿಗಿಲಾವನೆಂದು ರಾಗಿಸಿ
ನಗುವಂದದೊಳಾಯ್ತು ಜಳಧಿ ಕಳಕಳನಿನದಂ ೩೫

(ಸೂಕ್ತಿಸುಧಾರ್ಣವಂ, ೨-೧೨)

ಶಶಿ ನನ್ನುದರದೊಳುದಯಿಸಿ
ಮಿಸುಗುವನಾ ನಭಮೊಳಿಂಮು ಜಲಸಿಧಿ ಪಲವ್ರಂ
ಶಶಿ ಪಡೆದ ತೆಱದಿ ಮಿಗೆ ರಂ
ಜಿಸುವುದು ಮಂಡಳಿಸಿ ಪೊಳೆವ ಫೇನಪ್ರಕರಂ ೩೬

(ಸೂಕ್ತಿಸುಧಾರ್ಣವಂ, ೨-೫)

ಶಿವಶಿವ ಪಂಚಾಶತಕೋ
ಟಿಪಿ[3]ಸ್ತ್ರ್ಯ[3]ತಾಪನಿಗೆ ನಿಖಿಳಸೋಬಲಿಯಾಂತೊ
ಪ್ಪುವುದಾತ್ತಲೋಲಕಲ್ಲೋ
ಲ ವಿವಿಧಸಲಿಲಚರಪೂರ ಪಾರಾವಾರಂ ೩೭

(ಗಿರಿಜಾಕಲ್ಯಾಣಂ, ೧-೪೫)

---

೧ ನಿಂದುವ (ಸೂ) ೨ ನಿದು (ಸೂ) ೩ ಶ್ರು (ಸ)

ಶರಧಿಯು ಗುಣಮಂ ಪೇೞ್ವರಿ
ಗರಿದೆಂತನಲದುವೆ ಮುನ್ನಭಯದಿಂ ದಾಮೋ
ದರನುಂ ಗಿರಿಗಳ್ ಮಱೆಯುಗೆ
ಸುರರಾಸುರ ಭಯಮ ಬಿಡಿಸಿತೆಂಮು ಸಮುದ್ರಂ ೩೮

ಆ ನೆಗೞ್ದ ಮಹಾವಾರಿನಿ
ಧಾನಂ ಪರಿವೇ[1]ಷಮಾದ[1] ಜಂಬೂದ್ವೀಪಂ
ತಾನೆಸೆದುದು ವೃತ್ತತೆಯಿಂ
ದಾನವಮರ್ದನನ ಕೂರ್ಮಮೂರ್ತಿಯ ತೇಜದಿಂ ೩೯
(ಜಗನ್ನಾಥವಿಜಯಂ, ೧-೨೪)

ಕ್ಷೋಣಿಗೆ ವಿಶೇಷಪುಣ್ಯ
ಶ್ರೇಣಿಯೆನಲ್ ಗ್ರಾಮನಗರಖರ್ವಡ ಖೇಡ
ದ್ರೋಣಾಮುಖಂಗಳಿಂದ
ಕ್ಷೀಣಪೆನಲ್ ಮೆಱೆವುದಲ್ತೆ ಜಂಬೂದ್ವೀಪಂ ೪೦

ಅದು ಮತ್ತೆಂತೆನೆ ನೀರ್ಗಳ
ಪುದಿವು ತರಂಗಂಗಳಾಗೆ ನೀರ್ಗೊಂಟೆಯುಮೆಂ
ಬುದಧಿಯು ಬಳಸಿಂ ಮೆಱೆದಿ
ರ್ಪುದು ಪುರದಂತೇೞ್ಗನೆತ್ತು ಜಂಬೂದ್ವೀಪಂ ೪೧

ಓರಂತೆ ಮೆಚ್ಚಿದಂ ಕೃತಿ
ಸಾರಾಂಬುಧಿ ವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೪೨

ಇದು ಸರಸ್ವತೀಸರ್ವಾಂಗದರ್ಪಣಾಯಮಾನಪ್ರತಿಭಾಸನೂತನಪುರಾತನ ಪ್ರಮಾಣಸುಕವಿಪುಂಗನಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್ ಸಮುದ್ರ ವರ್ಣನಂ ದ್ವಿತೀಯಾಶ್ವಾಸಂ.

---

೧ ಷ್ಮಿಸಿರ್ದ (ಅ)

# ಪರ್ವತ ವರ್ಣನಂ

ತರುತತಿ ಬಳ್ಳಿ ಪುಲ್ ಪೊದಱು ಪಕ್ಕಿ ಮೃಗಂ ಫಣಿ ಜೇನ್ ಮೃಗಮ್ಮೊ
ಜ್ಜರಮೆಸೆವುನ್ನತಿಕ್ಕೆ ಶಿಲೆ ಕೋಡು ಗುಹಾವಳಿ ತಾಣಸಾನುವುಂ
[೧]ಹರಿಮುರಿಯಾನೆಯುಂ ತೆಱಗಿ[೧]ಮೇವ ಮುಗಿಲ್ ದೊಣೆ ಬಿಲ್ಲಪಳ್ಳಿ ಕಿ
ನ್ನರ ಮಿಥುನಾಳಿಗಳ್ ವಿಷಯಮಾಗಿರೆ ತೀರ್ಪುದು ಶೈಲವರ್ಣನಂ ೧

(ಸೂಕ್ತಿಸುಧಾರ್ಣವಂ, ೩-೧)

ಗಿರಿಶಿಖರಂ ಮುಖಂ ಸುರಸೊಳೊಪ್ಪುವ ಬಿಲ್ಗಳ್ ತಜ್ಜಟಾಳಿ ವಿ
ಸ್ತರತರ ಗಂಡಶೈಲಮೆ ವಿಕೀರ್ಣ ಭುಜಾವಳಿ ನಾಟ್ಯಸಂಕುಳಂ
ಕರಿಕುಳಬೃಂಹಿತಂ ನೆಗೞ್ದ ಸಿಂಹರವಂಗಳುಮಾಗೆ ಸಂತತಂ
ಸ್ಮರರಿಪು ನಾಟ್ಯದೊಳ್ ನೆಲಸಿ ನಿಂದವೊಲೊಪ್ಪಿತು ಭೂರಿಭೂಧರಂ ೨

ವಿವಿಧೋದ್ಯತ್ಸುರಗಂಗೆ ಪೂರ್ಣಸಲಿಲಂ ಚಂದ್ರಾರ್ಕಬಿಂಬಂ ತಳಿರ್
ನವತಾರಾನಿಕರಂ ಸಿತಾಕ್ಷತಚಯಂ ಸುತ್ತಿರ್ದ ಸರ್ವಾಬ್ಧಿ ಸೂ
ತ್ರವಿಶೇಷಂ ತನಗಾಗೆ ಲೋಕಜನನ ಪ್ರಾರಂಭದೊಳ್ ಪದ್ಮಸಂ
ಭವನೊಲ್ದರ್ಚಿಪ ಹೈಮಕುಂಭಮೆನಿಸಲ್ ಸಾಲ್ದತ್ತು ಹೈಮಾಚಳಂ ೩

ನೆಗೞ್ದ ದ್ವೀಪದ ಮಧ್ಯದಲ್ಲಿ ಕಲಶಂ ಚಂಡಪ್ರಭಂ [೩]ಪಂಜರಂ
ಭಗಣಂ[೩] ಪಲ್ಲವ[೨]ಮಂಬುರಾಶಿಯೆಸೆ ಪೂಜ್ಯಾಬ್ಜಸನಂ ಪ್ರೀತಿ ಕೈ
ಮಿಗೆ ದೈತ್ಯಾಂತಕನಾಮದಿಂದೆಸೆವ ಲಕ್ಷ್ಮೀವಲ್ಲಭಂಗಿತ್ತುದಾ
ಗಗನಚ್ಛತ್ರದ ಹೇಮದಂಡಮೆನಿಸಲ್ ಸಾಲ್ದತ್ತು ಹೇಮಾಚಲಂ ೪

(ಜಗನ್ನಾಥವಿಜಯಂ, ೧೫-೨)

ಸುರನಿಕರಂ ಪುಳಿಂದನಮರಾಂಗನೆಯರ್ ಶಬರಿಯರ್ ದಿಶಾ
ಕರಿ ಮೃಗರಾಜ ಸಿದ್ಧರಸನೊಜ್ಝರಮೊಪ್ಪುವ ಹೇಮಕಾಂತ ಭಾ
ಸುರವನವಲ್ಲಿ ರತ್ನನಿಚಯಂ ತಿಱುಕಲ್ಲೆನೆ ಪದ್ಮಜಂ ಧರಾ
ತರುಣಿಗೆ ರಂಜಿಸಿಟ್ಟ ಕೃತಕಾದ್ರಿಯೊಲೊಪ್ಪಿತು ಮೇರುಪರ್ವತಂ ೫

---

೧ ಹರಿಸರಿ ಯಾನೆಗಳ್ ನಜಿಕೆ (ಸೂ)   ೨ ಪಲ್ಲವಂ (ಅ)   ೩ ಪಂಜರ (ಅ)

ಭಾರತದಂತೆ ಭೀಮಸಕುಳಾರ್ಜುನಸಂಗತಿಯಿಂ ನೆಗೞ್ದ ದೈ
ತ್ಯಾರಿಯ ಪಕ್ಷದಂತೆ ಭೃಗುಸಂಪದದಿಂ ಹರನಂತೆ ಸದ್ಗ್ರಹಾ
ಕಾರವಿಳಾಸದಿಂ ರಘುಜನಂತೆ ಮನೋಜ್ಞಚರಿತ್ರಸಂಭವಾ
ಕಾರದಿನಿರ್ದುದೊಂದು ಕುಧರಂ ಗಗನಸ್ಖಳನಂ ತಡಂಕುತುಂ ೬

(ಸೂಕ್ತಿಸುಧಾರ್ಣವಂ, ೩–೬)

ಪಾಱುವ ಸೋಗೆ ಸೀಗುರಿ ಚಳಚ್ಚಮರೀಮೃಗವೀಥಿ ಚಾಮರಂ
ಮೀಱಿ ನಿಮಿರ್ಕೆವೆತ್ತ ಕುಜಪತ್ತ್ರದ ಪತ್ತ್ರಿಗೆ ಸಿಂಹವಿಷ್ಟರಂ
ತೋಱುವ ಚಂದ್ರಕಾಂತ ಶಿಲೆಯಾಗೆ ಸಮುನ್ನತ ರಾಜಲೀಲೆಯಿಂ
ಬೀಱುತೆ ಪೂರ್ವಪಶ್ಚಿಮಕೆ ಪರ್ವಿದ ಪರ್ವತರಾಜನೊಪ್ಪುಗುಂ ೭

(ಗಿರಿಜಾಕಲ್ಯಾಣಂ ೧–೫೦)

ನಳನಳಿಸುತ್ತ ಸುತ್ತಿಡಿದು ತೋರ್ಪ ಕದಂಬಕದಂಬದಿಂ ಜಳ
ಜ್ಜಳಜಮನೊತ್ತರಿಪ್ಪ ಘನದೀರ್ಘಸಕೋಮಳ ವಂಶವಂಶದಿಂ
ಬಳಸಿಮುವೆತ್ತಲುಂ ತಱುಗಿ ಪರ್ವಿದಗುರ್ವಿನಬಿಂಬಬಿಂಬದಿಂ
ದಿಳಿಯೊಳಗೊಪ್ಪುತಿರ್ಪುದು ಹಿಮಾಚಲವಾಶ್ರಿತಗೋತ್ರಗೋತ್ರದಿಂ ೮

ಸೊಗಯಿಸಿ ವಾಯ್ವ ನಿರ್ಝರದ ಶೀಕರಪುಂಜಮೊಳಾದ ಮುಂಜಿನಿಂ
ಪಗಲಪೆ ಪ್ರೌಢಿ ಬರ್ಪ ದನಿಯಿಂದುಮಿೞ್ಬಿನಕಾಂತ ರಾಗದಿಂ[1]
ಮೃಗದವೊಲೇಱಿ ಸೋನ ಮುಗಿಲಿಂ ಪಥಿಕರ್ಕಳ ಕಣ್ಗೆ ಮಾಗಿ ಬೇ
ಸಗೆ ಮುೞಿಗಾಲಮೆಂಬಿನಿತುಮೊರ್ಮೆಯೆ ತೋಱುಗುಮಾ ವನಾಂತದೊಳ್ ೯

(ಸೂಕ್ತಿಸುಧಾರ್ಣವಂ, ೩–೧೪)

ಉಲಿವ ಶಕುಂತತಿಯಿಂ ನುಡಿವವೊಲ್ ಕುಸುಮೋಜ್ಜ್ವಳ ಭೂರಿಭೂಮಹಾ
ವಳಿಯಿನನಂತರಂ ನಗುವವೊಲ್ ನವನಿರ್ಝರವಾರಿನಾದದಿಂ
ಮೊಲೆದು ತಗುಳ್ದು ಪಾಡುವವೊಲಾಡುವ ಗಾಳಿಯ ಕೋಳ್ಗೆ ಕೋಳಿನ
ಟ್ಟೆಲುಗಿನ ಕೊಂಬಿನಿಂ ನಲಿದು ನರ್ತಿಪವೊಲ್ ಸೊಗಯಿಕ್ಕುಮಾ ನಗಂ ೧೦

(ಸೂಕ್ತಿಸುಧಾರ್ಣವಂ, ೩–೬)

---

೧ ತಾಪದಿಂ (ಸೂ)

ನೋಡೆ ಮಹೇಂದ್ರ[೧]ರಂಧ್ರಸದನೋ[೧]ಪಮಪ್ಪುದಯಾದ್ರಿಕೂಟದಿಂ
ಮೂಡುವ[೨]ತಿಗ್ಮ[೨]ದೀಧಿತಿಯ ತೀವ್ರಕರಂಗಳ ಕೋಳ್ಗಿದಿರ್ಚಿ ತ
ಕ್ಕೋಡಿ ತೆರಳ್ದು ತೂಳ್ದು ನಿಲಲಾರದೆ ಪಶ್ಚಿಮ ದಿಗ್ವಿಭಾಗದ
ತ್ತೋಡುವದೊಂದು ಕತ್ತಲೆಯ ಹಾದಿಯೊಲಿರ್ದುದು ವಿಂಧ್ಯಪರ್ವತಂ ೧೧

(ಸೂಕ್ತಿಸುಧಾರ್ಣವಂ, ೩-೩)

ಕುವಲಯಪಾಂಡುರಂ ಕನಕಪಂಕಜಷಂಡವಿರಾಜಿ ಕೇಕಿತಾಂ
ಡವರಮಣೀಯ[೩]ಪುಷ್ಪ[೩]ಲತಿಕಾವನಮುನ್ಮದಭೃಂಗಮಾಳಿಕಾ
ರವಮುಖರೀಕೃತಾಮ್ರವನ ಶೋಭಿತಮಾಶ್ರಿತದಿವ್ಯಸೌಂದರೀ
ನಿವಹವಿಕೀರ್ಣಚಂಪಕವನಂ ಕರಮೊಪ್ಪುಗುಮಾ ಮಹೀಧರಂ ೧೨

(ಸೂಕ್ತಿಸುಧಾರ್ಣವಂ, ೩-೮, ಆದಿಪುರಾಣಂ ೧೩-೭೦)

ಕೆಳಗಡೆ ಪದಿನಾಲ್ಕುಂ ಗೋತ್ರಶೈಲಂಗಳೇೞುಂ
ಬಳಸಿದ ಭರತಾದಿ ಕ್ಷೇತ್ರವೇೞುಂ ಬೆಡಂಗಂ
ತಳೆಯೆ ತೊಳಪ ಜಂಬೂದ್ವೀಪ ಸೌವರ್ಣಪಾತ್ರ
ಕ್ಕಳವಡೆ ಸೊಡರೆಂಬಂತಾಯ್ತು ಹೈಮಾಚಲೇಂದ್ರಂ ೧೩

ಇಭಸಂಘಾಲಿಸಿಕ ಪ್ರತಿಧ್ವನಿ ಗುಹಾರಮ್ಯಂ ಜರತ್ತಾಪಸಂ
ಕ್ಷುಭಿತ ಕ್ರೂರಮೃಗಪ್ರಕೀರ್ಣಕಟಕಂ ನಿತ್ಯಾಂಧಕಾರಂ ಮಣಿ
ಪ್ರಭವಸ್ಥಾನನಿಕುಂಜಮೆನ್ನಿದರೊಳೆಂದೊಪ್ಪಿರ್ದುದೌನ್ನತ್ಯದಿಂ
ನಭಮಂ ಚುಂಬಿಸುತಿರ್ಪುದೊಂದು ಕುಧರಂ ಭೂಪಾಲವಿದ್ಯಾಧರಾ ೧೪

ಸಿದ್ಧಜನೋಪಕಾರಿ ಸಕಲೌಷಧಿಸಂಪದ ಪಾದರಂಜಿತಂ
ಶುದ್ಧನದೀನದೌಘಸತ್ವಪಾರ್ಥಿನಿವಾರಣವಾರಿಧಾರಣಂ
ಕ್ರುದ್ಧಗಜಾರಿಚಾರುಮೃಗಭಕ್ಷಕಮಂದಿರಗಹ್ವರಂ ವರಂ
ಬದ್ಧಫಲಪ್ರತಾನಪಥಿಕಾವಳಿರಕ್ಷಿತ ತನ್ನಗಂ ನಗಂ ೧೫

ಬಳಸಿಯನೇಕ ನಾಮವಿಡಿದೊಪ್ಪುವ ಗೋತ್ರನಿಕಾಯಮಧ್ಯದೊಳ್
ನೆಲಸಿದ ಮೇರುಮಸ್ತಕ ನಿವಾಸದೊಳಿಂ ಸುಖಮಿರ್ಪ ದೇವತಾ
ಕುಳ ಮುನಿಸಿದ್ಧ ಸಾಧ್ಯರುಮಕಿನ್ನರಕಿಂಪುರುಷಾಧಿಯಕ್ಷರಂ
ತಳೆದ ಸಗಾಢದಿಂದೆಸೆವುತಿರ್ಪುದು ನೋೞ್ಪೊಡೆ ಮೇರುಭೂಧರಂ ೧೬

---

೧ ರಾಧ್ರಸದನೋ (ಸೂ) ೨ ತೀವ್ರ (ಸ) ೩ ಕಲ್ಪ (ಸೂ)

ಶಿಲೆಯೆಲ್ಲಂ ಗೈರಿಕಂ ಪುಲ್ ನಿಜಯಮಿಸಿಪ ಶಾಲೀವನಂ ಭೂಮಿಜಂಗಳ್
ಕುಳಮೆಲ್ಲಂ ಕಲ್ಪವೃಕ್ಷಂ ಮಲಯಜತರುಗಳ್ ಪ್ರೋಜ್ಜ್ವರಂ ಪುಟ್ಟೆ ಬರ್ಪಾ
ಜಲಮೆಲ್ಲಂ ಪುಣ್ಯತೀರ್ಥಂ ವನಚರತತಿಗಳ್ ದೇವತಾಂಶಂಗಳೆಂಬೊಂ
ದೊಲವಿಂದೊಪ್ಪಿರ್ಪುದೀ ಪರ್ವತದ ಮಹಿಮೆಯಂ ಬಣ್ಣಿಸಲ್ ಬಲ್ಲನಾವಂ ೧೬

ಪರಮಾರ್ಥಂ ಪುಣ್ಯತೀರ್ಥಂ ಮೃಗಪತಿನಿಕರಸ್ವಾರ್ಥಮುದ್ಯತ್ಸದರ್ಥಂ
ಸುರಭೂಜಂ ಕೈವತೇಜಂ ವಿಮಳಮುನಿಸಮಾಜಂ ನಗವ್ರಾತರಾಜಂ
ಸ್ಥಿರಶೀಲಂ ದಂತಿಜಾಲಂ ಸುಕೃತಪರಿವೃತಸ್ಥೂಲಮೊಪ್ಪಿತ್ತು ಶೈಲಂ
ವರಕೂಟಂ ಶೃಂಗಮಾಟಂ ಮೃಗಧರಧರಜೂಟಂ ಕರಂ ಹೇಮಕೂಟಂ ೧೭

(ಗಿರಿಜಾಕಲ್ಯಾಣಂ, ೫–೨೧)

ಆ ವಿಸ್ತಾರಗಭೀರ ವಾರಿನಿಧಿಯಿಂದಂ ಪಶ್ಚಿಮಾಂಭೋಧಿಗಂ
ತೀವಿರ್ದೊಪ್ಪುವುದಾತ್ತಗಹ್ವರಗುಹಾಸಂತಾನಪರ್ಯಂತಗೋ
ತ್ರಾವಾಸೋಜ್ಜ್ವಳಗಂಡಶೈಳಶಿಖರಪ್ರೋದ್ಭೂತಭೂಜಾತಪ
ತ್ರಾವೇಶೋನ್ನತಭೀಮರೂಪಧರ ದೇವಾಗಮ್ಯ ಹೈಮಾಚಲಂ ೧೮

(ಗಿರಿಜಾಕಲ್ಯಾಣಂ, ೧–೪೮)

ಆರಾಜತ್ಕೌಮುದೀಸಂಗತಶಿಶಿರಶಿಲಾನೀಕನಿರ್ಯದ್ಧಿಮಂ ಸ
ಸ್ಮೇರಾಬ್ಜಾಕ್ಷೀಕರೋತ್ಪಲ್ಲವನವಕುಸುಮವ್ರಾತಚಂಚದ್ವಸಂತಂ
ಸೂರಾಂಶುಸ್ಪರ್ಶತೀವ್ರಾನಳಕರರವಿಕಾಂತಾತಪೋದ್ಯಂ ನಿದಾಘಂ
ಕ್ರೂರಾಭೀಳದ್ವಿಪಪ್ರೋಜ್ಜ್ವಳಿತಮದಜಲಾಸಾರಸಾಂದ್ರಂ ನಗೇಂದ್ರಂ ೨೦

(ಗಿರಿಜಾಕಲ್ಯಾಣಂ, ೧–೪೯)

ತುಂಗವಿಚಿತ್ರಕೂಟನಿವಹಂಗಳೊಳೊಪ್ಪುವ ರತ್ನದಂಶುಜಾ
ಳಂಗಳ ಕೆಂಪು ತಳ್ತು ಸಿಲೆ ಜೆಚ್ಚರದಿಂ ಗಿರಿಗಳಧೀಶ್ವರಂ
ತಾಂ ಗಡಮೆಂದು ಮೇರು ನಗದೊಳ್ ಪೊಣರ್ದಕ್ಕತುಳಕ್ಕೆವಂದು ನ
ಪಂಗದ ತೊಂಗಲೇಱಿಸಿದ ಮಾಟಿಕ್ಕೆಯೊಳಿರ್ಪುದು ವಿಂಧ್ಯಪರ್ವತಂ ೨೧

(ಕಾವ್ಯಾವಲೋಕನಂ, ೮೯೬)

ಉರವಣಿಸಿ ನಡೆದು [1]ಬರುತಂ[1]
ಗಿರಿಪಿಯುದ್ಧಪಿಮನೇಜಲಾಜನರಡುಂ ದಸೆಯೊಳ್
ಬರಲನುವಂ ಕಂಡು ದಿವಾ
ಕರನಂದಿಂ ದಕ್ಷಿಣೋತ್ತರಾಯಣನಾದಂ ೨೨

(ಗಿರಿಜಾಕಲ್ಯಾಣಂ, ೧–೫೩)

---

[1] ತರುತ್ತಂ (ಅ)

ಹರಹರ ಗಿರಿಯುದ್ಧಮನಾ[1]ರ್
ವಿರಚಿ[1]ಪರಗಚೂಡದಲ್ಲಿ ನಿಂದಿರ್ದುಪನಮಂ
ತಿರೆ ತಾರಕಿಯುಂ ವಿದ್ಯಾ
ಧರಿಯರ್ ಮುತ್ತೆಂದು ತೆಗೆದು ತಂಡುಲವ್ವಳಿಪರ್ ೨೩

(ಗಿರಿಜಾಕಲ್ಯಾಣಂ ೧–೫೪)

ಗಿರಿಯುದ್ದಮನೇನಂ ಬಿ
ತ್ತರಿಪೆನದಂ ಖೇಚರರ್ ಬಿಸಲ್ಗಂಜು[2]ತ್ತಂ
ಬ[2]ರದೊಳೆ ಬಟಲ್ದು ಬಂದಾ
ಗಿರಿಶಿಖರದ ತುದಿಯ ಮರದ ನೆಟಲಂ ಸಾರ್ವರ್ ೨೪

(ಗಿರಿಜಾಕಲ್ಯಾಣಂ ೧–೫೫)

[3]ಎ[3]ಂತಂತು ಪೆಜತಯುತಿರ್ಪ್ರನ
ನಂತಂ ಘನತೇಜದಿಂದಮುಗ್ರಾವ್ಯತೆಯಿಂ
ದಂ ತಣ್ಪೆಂದಾಹಾ ರವಿ
ಕಾಂತಮುಯುಸ್ಕಾಂತಮಿಂದುಕಾಂತಂ ನಗದೊಳ್ ೨೫

(ಗಿರಿಜಾಕಲ್ಯಾಣಂ ೧–೫೬)

ಧರೆಯುಜುಯಿ ಹೊನ್ನಪೆ[4]ಯ್ಯಾ
ಗಿ[4]ರುತಿರ್ದುಂ ಲಜ್ಜೆಯಿಲ್ಲ ತನಗೆಂದು ಕರಂ
ಸುರಚಿರ ಧವಳಿಮದಿಂ[5]ದಂ
ಸುರಗಿರಿ[5] ಹಿಮನಗದ ಚೆಲ್ವ[6]ನಗುತೆಸೆದಿರ್ಕುಂ[6] ೨೬

(ಗಿರಿಜಾಕಲ್ಯಾಣಂ ೧–೫೭)

ಕರಿಗಳ್ ಮದವತ್ಕರಿಗಳ್
ಪರಳೆಲ್ಲಂ ಮುತ್ತುಮಾಣಿಕಂ ಪಾಸಜತಗಳ್
ಪರುಷಂಗಳ್ ದೊಣೆಗಳ್ ಸಿ
ದ್ಧರಸಂಗಳ್ ಗಿರಿಯ ಸಿರಿಯನೇನಂ ಪೇಟಿಪ್ಪಂ ೨೭

(ಸೂಕ್ತಿಸುಧಾರ್ಣವಂ ೩–೧೨)

---

೧ ರೂರೆದಪ (ಅ) ೨ ತ್ತುಂಭ (ಅ) ೩ ಇಂ (ಅ) ೪ ಯ್ಯಾಂತಿ (ಅ)
೫ ಸುರಗಿರಿಯುಂ (ಅ) ೬ ವಗಪೇಕಿರ್ಕುಂ (ಅ)

ಪರಮೇಷ್ಠಿಯಂಚೆ ಕೃಷ್ಣನ
ಗರುಡಂ ಪವಮಾನನೆರಳೆ ದುರ್ಗಿಯ ಸಿಂಹಂ
ಸುರರಾಜನಾನೆ ಮುನ್ನೀ
ಗಿರಿವರದೊಳ್ ಪುಟ್ಟಿ ನೆಗೞ್ತೆವೆಸಿಸುವುವು ನಗಂ ೨೮
(ಸೂಕ್ತಿಸುಧಾರ್ಣವಂ, ೩-೧೪೭)

ಪೋಱತಿಯ ಬೆಳ್ಪಿಂದುವನ್ಕೈ
ದಾಱಂಗುಲನುಱಿಯೆ ರಾಹು ನುಂಗಿದ ತೆಱದಿಂ
ತೋಱುವ ತೆಱನೆಸೆವಿನ ವ್ಕೈ
ಪೋಱುಪುರ್ವು ಪುಂಡುಗರಡಿ ಶೈಲಾಂತರದೊಳ್ ೯೨
(ಸೂಕ್ತಿಸುಧಾರ್ಣವಂ, ೩-೧೫೧)

ಕಲ್ಲ ಗವಿಯೊಳಗೆ ಕಟ್ಟಿಲೆ
ಮಲ್ಲಱಿಗೊಂಡಿರ್ಪ ತೆಱದಿಸಿರ್ಪವು ತಾಂ ಭೂ
ವಲ್ಲಭ ಮಱಿಯುಂ ತಾಯುಂ
ಭಲ್ಲೂಕಪ್ರತತಿ ನಗದ ನಾಲ್ಕುಂ ದೆಸೆಯೊಳ್ ೩೦
(ಸೂಕ್ತಿಸುಧಾರ್ಣವಂ, ೩-೧೫೨)

ಗಿರಿ ಹರಿಯ ಪವಿಯ ಹತಿಗೆಂ
ದಿರಿಸಿದ ಠಾಣಾಂತರಕ್ಕೆ ನೇರಿರ್ದ ಪಲವುಂ
ಹರಿಗೆಗಳೆನಲ್ಕೆ ನಭದೋ
ವರಿಯೊಳ್ ಪೆಣ್ಣೇನು ಹುಟ್ಟಿ ರಂಜಿಸುತಿರ್ಕುಂ ೩೧
ಹರಿನೀಲಶಿಖರದುನ್ಮುಖ
[1]ಮರೀಚಿಯುಂ[1] ರಾಹುಗೆತ್ತು ಭಯದಿಂದ ಸಂ
ಚರಿಸುವ ಚಂದ್ರಮನೆರಳೆಗೆ
ಭರದಿಂ ಪಾಯುತ್ತೆ ಬಗೆವುವಲ್ಲಿಯ ಪುಲಿಗಳ್ ೩೨
(ಸೂಕ್ತಿಸುಧಾರ್ಣವಂ, ೩-೧೮)

ಅಗತಟಮನೆ ಸಾರ್ಚೆ ಮುಗಿಲ್
ತೆಗುಳ್ದು ಮುಱಿತಗಱತಂಪಿ ಪೋಗಿ ಕೋಡುಂಗಲ್ಲಂ
ಮೃಗರಾಜ[2]ನೇಱಲಾರದೆ[2]
ಮುಗುಳ್ದೀಕ್ಷಿಸುತಿರ್ಕುಮೇನದತ್ಯುನ್ನತಮೋ ೩೩
(ಸೂಕ್ತಿಸುಧಾರ್ಣವಂ, ೩-೧೯)

---

೧ ಕರಮುಂ ತಾಂ (ಸೂ) ೨ ನೇಱಿ ನನೆಯದೆ (ಸೂ)

ಕೋಡುಂಗಲ್ಗಳ ಮೇಲಿ
ರ್ಡೀಡಿಸುವುವು ಸಿಂಹ ಶರಭ ಶಾರ್ದೂಲ ಮೃಗ
ಕ್ರೀಡೆಗಳಂ ಕೋಡಗಗಳ್ .
ಕಾಡುವವ್ರೋಲ್ ದುರ್ಗಬಲರೊಳಧಿಕನೆಯಘನಂ ೩೪

ಪೂಗೊಯ್ವ ಖಚರಿ ಶಿಖರದ
ಪೂಗಿಡುಗಳ ಕೊಂಬಿನಲ್ಲಿ ತೊಡರ್ದಿರೆ ಮೀನ್ಗಳ್
ಪೂಗೆತ್ತು ತುಡುಂಕುವಳೆನ
ಲಾ ಗಿರಿಯುನ್ನತಮನಿನ್ನದೇನಂ ಪೊಗೞ್ವಂ ೩೫
(ಸೂಕ್ತಿಸುಧಾರ್ಣವಂ, ೩–೧೬, ಲೀಲಾವತಿ, ೯–೩೮)

ಪವಿಯ ಮುಖಘಾತದಿಂ ಡೋ
ಣಿವೋದ ಪಟಿತವುಣ್ಗೆ ಜಿಗುಳೆಯಂ ಬಿಟ್ಟವೋಲಿ
ಪ್ಪ[೧]ವು ಧಾತು[೧]ಗಹ್ವರಾಂತ
ರ್ನಿವಿಷ್ಟಜರದಜಗರಂಗಳಾ ಗಿರಿವರದೊಳ್ ೩೬
(ಸೂಕ್ತಿಸುಧಾರ್ಣವಂ, ೩–೮೦)

ಗಿರಿಯೊಂದಂತರದಲ್ಲಿಯ
ತರುವಿನ ನಡುವಣ್ಗೆ ನಡೆದ ಶಾಖಾಗ್ರದ ಕೆಳ
ಗಿರೆ ಧ್ರುವನರಮನೆಯೆನೆ ಹ
ಸರಳಿಸಿದಾ ಗಿರಿಯ ತುದಿಯನಾವಂ ಬಲ್ಲಂ ೩೭

ನಸುಸೊಕ್ಕಿ ಪಾಡಿ ಕಿನ್ನರಿ
ರಸವೊಸರ್ವಿನವೊಸರ್ವ ಬೆರಲ ಬೆಮರ್ವನಿಯಿಂ ತ
ಣ್ಣಸಗೊಂಡ ತಂತಿಗಳನಾ
ಱಸುವರ್ ಬಿಸುಸುಯ್ದು ಕಿನ್ನರರ್ ಬೀಣೆಗಳಂ ೩೮
(ಸೂಕ್ತಿಸುಧಾರ್ಣವಂ, ೩–೨೧೮: ಲೀಲಾವತಿ, ೯–೫೧)

ಪರಿಭಾವಿಸೆ ತಮ್ಮನೆ ಕಿ
ನ್ನರಿಗಳ ದನಿ ಮೂಗುವಟ್ಟ ಕೋಗಿಲೆ ಮಧು ಚೂ
ತರಸಾಸ್ವಾದಿನ ಮದದಿಂ
ಕರೆವುವು ಕಡುಸೊಕ್ಕಿದರ್ಗೆ ಲಜ್ಜೆಗಳೊಳವೇ ೩೯

---

೧ ವುದಾರ (ಸೂ)

ನೋಟ್ಪಿರ ಕಣ್ಗಚ್ಚರಿಯಂ
ಮಾಟ್ಪವೊಲಾಗಸಮನ[೧]ಲೆ[೧]ವ ಕೋಡುಂಗಲ್ಲಿಂ
ನೀಟ್ಪಿಂ ತಳೆದಾ ಬೆ[೨]ಟ್ಟಂ
ಕಾಟ್ಪಿರಮಾಗೊಪ್ಪಿದತ್ತು ಕಡುಸಿಡಿದಿಂದಂ[೨] ೪೦

(ಕಬ್ಬಿಗರಕಾವಂ, ೨೩೭)

ಹರಿಸದೆ ಕೊಡುವ ಬಿಜ್ಜೋ
ದರಿಯರ ಕೊರಳುಲಿಗಳಿಂದಲಂತಾಪೆಟ್ಟಂ
ಬಿರಯಿಗಳ ಮೊತ್ತಮಂ ಚ
ಪ್ಪರಿಪಂತಿ[೩]ರಲೊಪ್ಪಿದತ್ತು ನೋಟ್ಪಿರ ಕಣ್ಗಂ[೩] ೪೧

ಕಟ್ಟಿದ ಜಂತಿಯಂ ಮಿಡಿದು ಗೋಂದಣದಿಂದಲಿಪಂತನೀಳೆಯಂ (?)
ನೆಟ್ಟನೆ ಪಾಡಿ ಸೋಲಿಸುವ ಸಗ್ಗದ ವೆಂಡಿರ ಸುಣ್ಚರಕ್ಕೆ ಮೆ
ಯ್ಗೊಟ್ಟೆಳಿಹುಲ್ಲೆಗಳ್ ಪಲವುಮಾಲಿಸೆ ಪ್ಸೆ ಸಿರಿಪೆರ್ಚುತಪ್ಪಿಜಂ
ಬೆಟ್ಟಮುದೊಂದು ದಿಟ್ಟಿಗೆಡೆಯಾದುದು ನೋಟಿಸ್ಪೊಡೆ ಜೆಲ್ವಿನೇಟಿಸ್ಗೆಯಿಂ ೪೨

ಬಿಡದೆಸೆಪಲರಿಂದಂ ಪ್ರೋಣ್ಮುತಿರ್ಪಜ್ಜಗಂಪಂ
ಬಿಡದಲರ್ಗಳ ಜೊಂಪಂ ಜೋಲ್ದು ಜೆಲ್ವಾಗೆ ಬಣ್ಪಂ
ಬಿಡದ ಮರಗಳಿಂದಂ ಬೆಳ್ಳಿವೆಟ್ಟಕ್ಕೆ ನಿಚ್ಚಂ
ಪಡಿಯೆಸಿಸುವುವೆತ್ತಂ ರಂಗುಗಲ್ಲಿಂಬ ಬೆಟ್ಟಂ ೪೩

ಸವಿಸವನಾಗೆ ಸುತ್ತಿಟಿಂವ ತೋಳ್ ಸತಮಾಪೆರ್ಪೆಯುಂ ಪಲಂಪಸ
ಪ್ಪುವ ಬಗೆ ಬೀಗಿ ಬಾಯೊಳಗೆ ಸಿಲ್ಕಿದ ಬಾಯ್ ಬೆಜಗಾದ ಬೇರ್ಗೆ ನೋ
ಡುವ ಜವಪ್ರೋಡಿಪಜ್ಜರತಪಚ್ಚುಡಿದಂತಿರೆ[೪]ದಿವ್ಯ[೪]ಸೌಖ್ಯದಿಂ
ಸಪೆದಪ್ಪೋಲಿರ್ಪರಲ್ಲಿ ಗಗನೇಚರದಂಪತಿಗಳ್ ರತಾಂತದೊಳ್ ೪೪

(ಲೀಲಾವತಿ, ೯–೪೬)

---

೧ ಡೆ (ಅ) ೨ ಟ್ಟಿದ ತಾಟ್ಸುಪಿದ ಬನಂಗಳಲ್ಲಿ ಬೀಡಂ ಬಿಟ್ಟಂ (ಅ)
೩ ರ್ ಸಾರ್ದು ನೋಡಿಪಂ ಸಸಗಣೆಯಂ (ಅ) ೪ ಕಾಮ (ಅ)

ತಳೆದು ಪೆಗಲ್ಗಳಿಂದೆ ವಿಪರೀತರತಪ್ರಮದಿಂದೆ ಪಾಱಲಾ
ರ್ಗಳವಱಿದಿರ್ದ ಖೇಚರಿಯರಂ ಕರಜಕ್ಷತದಿಂದೆ ಬಾಸುಱೆ
ಡೊರ್ಗಳಪೊಡೆಯುಂ ಕಟಾಕ್ಷದೊಳೆ ಮೆಯ್ಮಱೆದೀಕ್ಷಿಸುತ್ತಂ ನಿಜಾಲಯಾ
ವಳಿಗಳ ಬಟ್ಟೆದಪ್ಪಿ ಮಿಗೆ ಪಾಱುವರೀ ಗಿರಿಯಂ ನಭಶ್ಚರರ್ ೪೫

(ಲೀಲಾವತಿ, ೯–೪೫)

ಮುಳಿಸು ಕನಲ್ಪರಲ್ಲಿನಿಯರಂ ಬರೆದಂಗಜಮೋಹದಿಂ ಶಿಳಾ
ಫಳಕಮನಪ್ಪಿ ಮೆಯ್ಯ ಬೆಮರಿಂದಮೆ ನಲ್ಲರ ಮೆಯ್ಯನಾವಗಂ
ತೊಳೆದವೊಲಾಗಿ ಪೋಗೆ ಮಗುೞ್ದೀಕ್ಷಿಸಿ ಕಾಣದೆ ಮಾಣದಂತದುಂ
ಮುಳಿಸೆಲೆ ಪೋದುಮೆಂದಱಿದವರ್ ಗಿರಿಯೊಳ್ ಸುರಸಿದ್ಧಮುಗ್ಧೆಯರ್ ೪೬

(ಲೀಲಾವತಿ, ೯–೪೭)

ತರಳೆ ತಟಿಲ್ಲೋಚನದಿಂ
ಗಿರಿಗೆಱಗುವ ಮುಗಿಲ ನೋಡಿ ನಾಣ್ಚಿಕೆಯಿಂದಂ
ಪುರುಷಾಯತದಿಂ ಪ್ರಿಯರೊಳ್
ನೆರೆವ ನಭಶ್ಚರಿಯರಗಿದು ಪಾಱುವರಿದಱೊಳ್ ೪೭

(ಲೀಲಾವತಿ, ೯–೪೮)

ತೊಳಗಿದುದಂಬರಕ್ಕೊಗೆದು ಪಚ್ಚೆಯಕಾಂತಿ ಸುರ್ತ ಪಲ್ಲವಾ
ವಳಿಯೆನೆ ವಜ್ರಕಾಂತಿ ಸನೆಯುರ್ಜಿಸೆ ಮೌಕ್ತಿಕಕಾಂತಿ ಪುಷ್ಪಸಂ
ಕುಳಮೆನೆ ನೀಳಕಾಂತಿ ಮುಱಿದುಂಬಿಯ ಪಿಂಡೆನೆ ಶೋಣಕಾಂತಿ ಕೆಂ
ದಳಿರೆನೆ ನಾಕದಿಂದಿೞಿದ ನಂದನದಂತೆ ಮಯೂಖನಿರ್ಝರಂ ೪೮

(ಲೀಲಾವತಿ, ೯–೨೮)

ಕರಿಣೀಶೃಂಗಾರಮುಗ್ರೋರಗಭಯಮೃಗಸ್ವೈಚರ್ಯಾದ್ಭುತಂ ದಸ್ಯುವೀರಂ
ಶರಭಾಕಾರೋರುರೌದ್ರಂ ಪ್ಲವಗವಿಕೃತಿಹಾಸ್ಯಂ ಚಮೂರುಪ್ರಣಶ್ಯ
ದ್ರುರುಬೀಭತ್ಸಂ ದವವ್ಯಾಕುಲಖಗಕರುಣಂ ಯೋಗಿರಾಟ್ ಶಾಂತಕಾಂತಂ
ಪೊರೆವೆತ್ತತ್ರಾಷ್ಟ್ರರ್ಕ್ಷಭೂತಂ ನವರಸಮಯಮಾಯ್ತಾ ನಗೇಂದ್ರೋಪಕಂಠಂ ೪೯

(ಸೂಕ್ತಿಸುಧಾರ್ಣವಂ, ೩–೨೨೦, ಚಂದ್ರಪ್ರಭಪುರಾಣಂ, ೧೦–೪೩)

## ಋಷ್ಯಾಶ್ರಮವರ್ಣನಂ

ತಿಳಕಾಶೋಕ ತಮಾಳ ತಾಳ ವಕುಳಾಳಂಕಾರನೇಳಾಲತಾ
ಕುಳ ಪೂಗದ್ರುಮ ನಾಳಿಕೇರ ಬದರೀ ಚೂತಾವಳೀ ಲೋಧ್ರವಿಂ
ಗಳ ಪುಂ . . . ಗಪ್ರವಾಳ ರುಚಿರಂ ಪ್ರೋತ್ಫುಲ್ಲ ನಾನಾಲತಾ
ಲಲಿತಂ ಕಾನನಮೆಯ್ದೆ ಕಂಗೊಳಿಸುಗುಂ ಋಷ್ಯಾಶ್ರಮಪ್ರಾಂತದೊಳ್ ೫೦

ಕರೆವಂತಾಡುವ ಪಲ್ಲವಪ್ರಕರದಿಂ ಮಂದಾನಿಲಂ ಸೋಂಕೆ ಬೀ
ಟ್ಪಿರಲಿಂ ನರ್ಚಿಸುವಂತೆ ಕೋಕಿಲರವಪ್ರಧ್ವಾನದಿಂ ಸ್ವಾಗತ
ಸ್ವರಮಂ ಬಿತ್ತರಿಪಂತೆ ತೋಱೆ ಮೆಱೆಯುತ್ತಿರ್ದಪ್ಪುವಲ್ಲಿರ್ದ ಮಾ
ಮರನುಂ ಪೊರ್ದಿರ್ದ ಮಾನಸರ್ಗೆ ನಿಜದಿಂದಾತಿಥ್ಯಸತ್ಕಾರಮಂ ೫೧

ಬುಡಪೆಡೆಯಲ್ಲಿ ಪೂವಿನ ನೆಟಿಲ್ ಸಲೆ ಸಾಸಿರಮಾರದಾಗಲಾ
ಯೆಡೆಯೊಳೆ ಪರ್ಣಶಾಲೆ ಮಿಗೆ ಪೂರ್ಣಮದಾಗಿರೆ ಮುಕ್ತರಾಗಲಿಂ
ದುಡುಗದ ದಿವ್ಯಚಿತ್ತದ ವಿಲಾಸಿ ತಪಸ್ವಿಗಳಿರ್ಪರಲ್ಲಿಗ
ಳ್ಳಿಡಸಿದ ಮುಕ್ತರಾಗಮುಮೊಳೊಪ್ಪುವರಾ ವಟುಕೋಟಿ ರಾಜಿಸಲ್ ೫೨

ತೆರೆ ಸುಱಿಯುರ್ಬು ಬೊಬ್ಬುಳಿಕೆ ಸೀರ್ಪನಿ ಪಾಸಪೆ ಜೌಗು ತಾಯ್ಮಟಿಲ್
ನೊರೆಯುಱೆಗಲ್ಗಳಿಂ ಪರಿವ ಪಿಂಗುವ ಕೂಡುವಗಲ್ವ ತೀಲ್ವ ಸಂ
ಚರಿಸುವ ತಗ್ಗುವೇಱ್ವ ತಡಿಗೊತ್ತುವ ಪತ್ತುವ ಪಾಯ್ವ ಪೊಯ್ವ ಭೋ
ರ್ಗರೆವ ಜಲಪ್ರವಾಹವೆಸೆದಿರ್ಪುದು ನೋಟಿತ್ಪೊಡೆ ತುಂಗಭದ್ರೆಯೊಳ್ ೫೩

(ವಿರೂಪಾಕ್ಷಸ್ಥಾನ ವರ್ಣನಂ -೨೩-)

ಆ ನಗದಲ್ಲಿ ಪುಣ್ಯತತಿಯೊ ಪ್ರಭೆಯೊರ್ಬುಳಿಯೊ ಮಹೇಶ್ವರ
ಶ್ರೀಸಿದ್ಧಿಯೋ ಸುಧಾಕರಮೊ ಸತ್ಯಮೊ ನಿತ್ಯಮೊ ಶೈವಪೂರಿತ
ಸ್ಥಾನಮೊ ಶಾಂತಿಯೊ ದಯೆಯೊ ಧರ್ಮಮೊ ನಿರ್ಮಳನೀತಿಯೋ ಶಿವ
ಜ್ಞಾನಮೊ ಮುಕ್ತಿಸಂಕುಳಮೊ ಪೇಳ್ವೆನೆ ತಾಪಸವೀಧಿಯೊಪ್ಪುಗುಂ ೫೪

(ಗಿರಿಜಾಕಲ್ಯಾಣಂ ೧-೫೯)

ವರತೇಜದಿಂ ಪವಿತ್ರಾ
ಚರಣೆಯಿನತಿಕನಕವಿಪುಳಸಾಮರ್ಥ್ಯತೆಯಿಂ
ಕರಮೆಸೆದುದು ನಯದಿಂ ರಾ
ಜಋಷಿ ಬ್ರಹ್ಮಋಷಿ ದೇವಋಷಿಗಳ್ ನಲವಿಂ ೫೫

ವರ ದೂರ್ವಾಸನಗಸ್ತ್ಯ ಜಹ್ನು ಕಪಿಲಂ ಕೌಂಡಿನ್ಯ ಮಾಂಡವ್ಯ ಭಾ
ಸ್ವರ ಶಾತಾತಪ ವಾಮದೇವಮುನಿ ವಿಶ್ವಾಮಿತ್ರ ಮೈತ್ರೇಯ ಬಂ
ಧುರ ಮಾರ್ಕಂಡೆಯ ದೇವಲಕ್ಷವನಿಲಾದಂ ವ್ಯಾಸನಾ ಸೂತನುಂ
ತ್ವರಿತಂ ಚಿತ್ರ ಶಿಖಂಡಿ ಗಾಲವ ವೃಷಂ ಜಾಬಾಲಿ ವಾಲ್ಮೀಕಿಗಳ್ ೫೬

ಪರಮ ಧದೀಚಿ ರೋಮಶ ಪುಲಸ್ತ್ಯ ಪರಾಶರ ಯಾಜ್ಞವಲ್ಕ್ಯ ಯಾಂ
ಗಿರ ಭೃಗು ಪುಂಡರೀಕ ಶುಕ ಕೌಶಿಕ ಕಶ್ಯಪ ಗಾರ್ಗ್ಯ ಗೌತಮಂ
ವರ ಸನಕಂ ಸನಂದ ಸನತ್ಸು ಭಗೀರಥ ಕುತ್ಸ ವತ್ಸ ಭಾ
ಸುರ ಜಮದಗ್ನಿ ಜೈಮಿನಿ ವಸಿಷ್ಠ ಮತಂಗ ಮರೀಚಿಯತ್ರಿಗಳ್ ೫೭

ಸನಕ ಸನಂದನಾಂಗಿರಸ ಗೌತಮನತ್ರಿ ಪುಲಸ್ತ್ಯ ಕಶ್ಯಪಂ
ಸನತ್ಕುಮಾರ ನಾರದ ವಸಿಷ್ಠ ಪರಾಶರ ಗಾರ್ಗವಲ್ಕ್ಯ ಜೈ
ಮಿನಿ ತೃಣಬಿಂದು ಜಹ್ನು ಜಮದಗ್ನಿಯುಲೂಖಲು ವತ್ಸ ಶೌನಕಂ
ಮನು ಮುನಿಕೌಶಿಕಂ ಕಪಿಲ ಭಾರ್ಗವರಿಂಪೆಸಗುಂ ತಪೋವನಂ ೫೮

ಸುಲಿಪಲ್ ಕೆಂಜೆಡೆ ನಾರಸೀರೆಯಜಿನಂ ಯಜ್ಞೋಪವೀತಂ ಕಮಂ
ಡಲು ವಾರ್ಧಾರಕಮಕ್ಷಮಾಲೆ ಭಸಿತಂ ಸ್ಮೇರಾನನಂ ಕರ್ಣಕಂ
ಡಲುಮೊಪ್ಪುತ್ತಿರೆ ಪುಣ್ಯದಂತೆ ಶುಭದಂತಾನಂದದಂತಚ್ಚನಿ
ಶ್ಚಳದಂತುಜ್ವಳತೇಜದಂತೆ ಸುಖಿಪರ್ ತಚ್ಛೈಲದೊಳ್ ತಾಪಸರ್ ೫೯
(ಗಿರಿಜಾಕಲ್ಯಾಣಂ ೧–೬೮)

ಭಸಿತಮನೊಪ್ಪೆ ಪೂಸುವ ಶಿವಾಗಮಮೋದುವ ಶಾಸ್ತ್ರಮಂ ವಿಚಾ
ರಿಸುವ ವಿನೂತನಾಕ್ಷಮಣಿಯಂ ಪರಿವೇಷ್ಟಿಪ ನಾರಸೀರೆಯಂ
ಪಸರಿಪ ಕಂದಮೂಲಫಲಮಂ ತರಪೋಪ ಲಸನ್ಮೃಗಾಜಿನ
ಪ್ರಸರಮನೆಯ್ದೆ ಪೊಲ್ಪ ಮುನಿಮುಖ್ಯಕುಮಾರಸಮೂಹಮೊಪ್ಪುಗುಂ ೬೦
(ಗಿರಿಜಾಕಲ್ಯಾಣಂ ೧–೬೯)

ಅತಿಥಿಯನಾದರಿಪ್ಪ ಪಿತೃದೈವಮನರ್ಚಿಪ ಧರ್ಮಶಾಸ್ತ್ರಸಂ
ಗತಿಯೊಳಗಿರ್ಪ ಯಜ್ಞವಿಧಿವೇಟ್ಟಿ ಪುರಾಣಮನೋದುವಾಗಮ
ಪ್ರತತಿಗಳಂ ವಿಚಾರಿಸುವ ತತ್ವನಿರೀಕ್ಷಣೆಗೆಯ್ವ ಯೋಗದು
ಸ್ಥಿತಿಕೆಯನಪ್ಪುಗೆಯ್ಪ ಮುನಿಸಂಘದಿನೊಪ್ಪುವುದಾ ತಪೋವನಂ ೬೧
(ಕಾದಂಬರಿ ಪೂ. ಭಾ. ೨೨೫)

ಜಲರುಹಬೀಜರಾಜಿಗಳನಾಱುವ ಪರ್ಣಕುಟೀರಕಂಗಳಿಂ
ಸಿಲಿಕುವ ದಂಡಸೊತ್ತುವ ಮೃಗಾಜಿನಮುಂ ಪೊಱಲುತಿರ್ಪ ಮುಂಜಮೇ
ಖಲೆಗಳನೊಪ್ಪಮಾಡುವ ಸಮಿತ್ಕುಶಮುಂ ತರಪ್ಪೋಪ ಧೌತವ
ಲ್ಕಲಮುಮಲಂಬುಮಕ್ಷಮಣಿಯುಮಂ ಸಮೆಯೀ ವ್ಯವಸಾಯಮಿತ್ತಲಿಂ ೬೨
(ಕಾದಂಬರಿ ಪೂ. ಭಾ. ೨೨೪)

ನುತಸಾಮಧ್ವನಿ ಹೋಮಧೂಮಪವನಂ ಸದ್ಭಾಷಣಂ ಮಂತ್ರಪೂ
ಕೃತಿಯಾಹ್ವಾನವಿಸರ್ಜನಸ್ಥಿತಿ ಮಹಾದೇವಾರ್ಚನಂ ತಾಪಸ
ಪ್ರತಿಪತ್ತಿ ವ್ರತಮಾತ್ರನಿತ್ಯನಿಯಮಂ ಕಾಲತ್ರಯಜ್ಞಾನಮಾ
ಧ್ಯಾತ್ಮತಪಂ ಶಾಂತರಸಪ್ರಭಾವಮೆಸೆಯಲ್ ಚೆಲ್ವಾದುದೊಂದಾಶ್ರಮಂ ೬೩

ಶ್ರುತಿಮಾರ್ಗಪ್ರವಣಂ ಪುರಾಣಕಥನಂ ಷಟ್ಕರ್ಮಸಂಭಾಷಣಂ
ಶ್ರುತಿಚೇತೋವ್ಯಸನಂ ಸಮಸ್ತಪುರುಷವ್ಯಾಕೀರ್ಣಮುಂ ಪೆಂಪುವೆ
ತ್ತಿತಿಹಾಸಂ ಸ್ಮೃತಿವಿಸ್ತರಂ ಸಕಲಧರ್ಮಾಧರ್ಮನೈರೂಪಣ
ಸ್ಥಿತಿಸ್ಥೈರೇಪಿಕದಿಂದಮೇಂ ಮೆಱೆವುದೋ ಚೆಲ್ವಾಗೆ ವಿಪ್ರಾಶ್ರಮಂ ೬೪

ಇದು ಭೂಮೀಸ್ಥಾನದಿಂ ಮುಕ್ತಿಗೆ ನಡೆಯುವ ನೀಲಾಶ್ಮಸೋಪಾನಮಾಹಾ
ಯಿದು ಸಂಸಾರಾತಪಶ್ರಾಂತತೆಗತಿಸುಖಮೀವಾ ಬುಧಶ್ರೇಣಿ ಮೇಣಿಂ
ತಿದು ದುಷ್ಕರ್ಮಾಬ್ಜಷಂಡಂಗಳನುಱೆ ಕೊಱಗಿಪ್ಪೊಂದು ನೀಹಾರಮೆಂಬಂ
ದದಿ ಹೋಮಸ್ತೋಮಧೂಮಂ ನೆಗೆದುದು ಮುನಿಗಳ್ ಮಾಡ್ಪ ಮಂತ್ರಾಗ್ನಿಯಿಂದಂ ೬೫

ಹರನಂ ಗೆಲ್ವೆನೆಮೋಘಮೆಂದು ಮದನಂ ಪೆರ್ಚಿಂ ವ್ರತಂಗೊಂಡನೋ
ಸ್ಮರನೀಶಾಗ್ನಿ[೧]ಯೊಳಿಟ್ಟು[೧] ಕೋಕಿಲೆ ವಸಂತಂ ಯೋಗಿಯಾ[೨]ಗಿರ್ದ[೨]ನೋ
ಹರಜೂಟೇಂದುಸಮಸ್ತಮಂಡಲನಿಮಿತ್ತಂ ವರ್ಣಿ[೩]ಯಾಗಿರ್ದನೋ[೩]
ಪಿರಿದುಂ ತಾನೆನಲೊರ್ವ ತಾಪಸಕುಮಾರಂ ಧೀರ[೪]ನಿರ್ದಂ ನೃಪಂ[೪] ೬೬
(ಸೂಕ್ತಿಸುಧಾರ್ಣವಂ ೩-೧೮೪)

ಹರನಂ ಶಂಕರನಂ ಜಿತತ್ರಿಪುರನಂ ನೇತ್ರಾಗ್ನಿಭಸ್ಮೀಕೃತ
ಸ್ಮರನಂ ತುಂಗಪಟುಜ್ಜಟಾಭರಣಮುಕ್ತ್ವತ್ರೀರ್ತಿಸದ್ಭಾವಿತಾ
ಮರನಂ ಭೀಮಘಣಾದಚಂದ್ರಧರನಂ ವ್ಯಾಲೋಲಜಾಲೇಂದು ಶೇ
ಖರನಂ ತಾಳ್ದಿದರಾತ್ಮಹೃತ್ಕಮಲದೊಳ್ ಯೋಗೀಂದ್ರವೃಂದಾರಕರ್ ೬೭
(ಕನ್ನಡಪಂಚತಂತ್ರಂ ೨೫, ಸೂಕ್ತಿಸುಧಾರ್ಣವಂ ೩-೧೮೮)

---

೧ ಗಮಲ್ಕೆ (ಸ) ೨ ಶರ (ಸ) ೩ ತಾನಾವನೋ (ಸ) ೪ ನೊಪ್ಪಿರ್ದನೋ (ಸೂ)

ಜಡೆಗಳ ಬಂಬಲೊಳ್ ತೊಡರ್ದು ಬಳ್ಳಿಗಳಿರ್ದುವು ಮೆಯ್ಯನೆಯ್ದೆ ಪು
ತ್ತಡರ್ದುವು ಗಡ್ಡಮುಂ ಬಳಸಿ ಗೂಡುಗಳಿಟ್ಟುವು ಪಕ್ಕಿ ಕಂಗಳಂ
[೧]ಕಡಿದುವು[೧] ಪತ್ತಿ ಕಟ್ಟೆಱುವೆಗಳ್ ಬೆಮರಂ ನಸುನಕ್ಕುತಿರ್ಪುವಾ
ಗಡುಮುರಗಂಗಳೇವೊಗೞ್ವನೇಮೊರೆಯುಗ್ರತಪಂ ತಪಸ್ವಿಯಾ ೬೮
(ಸೂಕ್ತಿಸುಧಾರ್ಣವಂ ೩-೧೮೨)

ಪುತ್ತಡದಿರ್ದ ಮೆಯ್ಯಿ ಪೊದರ್ಗೊಂಡ ಜಟಾವಳಿ ಕಯ್ಯಕಾಲುಗುರ್
ಸುತ್ತಿದ ಕಂಟಕಂಯಮುಯ (?) ವಾದ ಬಸುರ್ ಪರಮಾತ್ಮರೂಪಿನೊಳ್
ಪತ್ತಿಸಿದಂತೆ ದೃಷ್ಟಿ ಶಶಿಕಾಂತ ಶಿಲಾಸನನಿಷ್ಠಮೌನದೊ
ಪ್ಪುತ್ತಿರೆ ಜೀರ್ಣತಾಪಸಕುಲಂ ನೆಱೆದಿರ್ದುದು ತನ್ಮಹಾದ್ರಿಯೊಳ್ ೬೯

ಬಗೆ ಪಣೆಯಲ್ಲಿ ಕೂಡಿ ಸಿಲೆ ತಪ್ಪದೆ ಮೂಗಿನ ಕೌಕದಲ್ಲಿ ದಿ
ಟ್ಟಿಗಳಿರೆ ಮೆಯ್ಯ ಮಣ್ಣೊರಲೆ ಪುತ್ತಿಡೆ ಪರ್ಬಿದ ಬಳ್ಳಿಯೆತ್ತಲುಂ
ಸೊಗಯಿಸೆ ಕಯ್ಯನಿಕ್ಕಿ ನಿಗೆ ತನ್ನನೆ ತಾನೊಲವಿಂದೆ ಜಾನಿಸು
ತ್ತಗಲದೆ ನಿಂದಮೊರ್ವ ಜತಿಯುಂ ಬಗೆಗೊಳ್ಪರಿಗಟ್ಟಿತೆಂ (?)ಬಿಸಂ ೭೦

ಕರಣಗುಣಂ ಕುನುಂಗಿರೆ ಮನಂ ನೊಸಲೇಱೆ ಸುಲೋಚನಂಗಳು
ಳ್ಕಿರೆ ಮುಗಿದಿಂಬುವೆತ್ತಿರೆ ಕರದ್ವಯಪಲ್ಲವಮಂಕದೊಳ್ ಮರ
ಳ್ದಿರೆ ತನು ನಿಷ್ಪ್ರಕಂಪಮಿರೆ ದಂತಚಯಂ ಸಮನಾಗಿ ತಮ್ಮೊಳೊಂ
ದಿರೆ ಸಮಸಂದುದಾ ಪರಮಯೋಗಿಯ ಯೋಗನಿಯೋಗಭಾವಮುಂ ೭೧

ಶರಭಂ ಕೇಸರಿಗಳ್ಗೆ ಕೇಸರಿ ಕರೀಂದ್ರಂಗಳ್ಗೆ ಕಾಡಾನೆ ಜೀ
ಡರ ಕಪ್ಪಿಂಗೆ ಪುಳಿಂದರಾರ್ಭಟಿಪ ಶಾರ್ದೂಲಕ್ಕೆ ಶಾರ್ದೂಲನು
ಚ್ಚರಿ ಸಾರಂಗ[೨]ಕೆ ಸಾರಗಂಗಳ ಕುಳಂ[೨] ಪಾವಿಂಗೆ ಪಾವಲ್ಲಿ ಮುಂ
ಗುರಿಗಳ್ಗಂಜದೆ ಬಿಟ್ಟುಪೊರ್ದುವುವಲಂಪಿಂ ಜಾತಿವೈರಂಗಳಂ ೭೨
(ಅನಂತನಾಥಪುರಾಣಂ ೯-೯೮, ಸೂಕ್ತಿಸುಧಾರ್ಣವಂ ೩-೧೭೭)

ಪುಲ್ಲೆಯ ಕೋಡಮೇಲೆ ಪುಲಿಗಳ್ ತಲೆಯಿಟ್ಟು ಕುರಂಗಸಂಕುಳಂ
ಭಿಲ್ಲರ ಬಿಲ್ಲಮೇಲೆ ಮೊಗವಿಟ್ಟು ನವಿಲ್ಗಳಮೇಲೆ ಭೀತಿ ತಾ
ನಿಲ್ಲದೆ ಸರ್ಪವೀಧಿ ಪೆಡೆಯಿಟ್ಟು ಗಜಂ ಶಿರಮಿಟ್ಟು ಸಿಂಗದೊಳ್
ನಿಲ್ಲದೆ ನೋಡುತಿರ್ಪುವು ನಗೇಂದ್ರಮುನೀಂದ್ರರ ಶಾಂತಮೂರ್ತಿಯಂ ೭೩
(ಗಿರಿಜಾಕಲ್ಯಾಣಂ ೧-೬೯)

---

೧ ತಡೆವುವು (ಸ) ೨ ಮೃಗಕ್ಕೆ ಚಿತ್ರಕಮೃಗಂ (ಸೂ)

ಪೊಕ್ಕು ಕುಟೀರಮಂ ಕೆದಱಿ ಪೊತ್ತಗೆ[1]ಯಂ[1] ಮಸಿಯಕ್ಕರಂಗಳಂ
ನೆಕ್ಕಿ ಬಿಸುಟ್ಟು ಜೊಕ್ಕಣದ ಬೂದಿಯನುಃಫೆನಲೂದಿ ಮೂಗಿನೊಳ್
ಪೊಕ್ಕೊಡೆ ಸೀಂತು ಮೂಣ್ದಿರದೆ ಪಾಯ್ದು ವಿಜೃಂಭಿಸಿ ಕೊಂಬನೇಱಿ ಪು
ರ್ಬಿಕ್ಕಿ ಕುಮಾರತಾಪಸರನೇಡಿಸುತಿರ್ದುದದೊಂದು ಕೋಡಗಂ ೭೪

(ಸೂಕ್ತಿಸುಧಾರ್ಣವಂ ೩-೧೯೪)

ಪಱಿದೆಲೆಯಿಂಪಟ್ಟು ಪಲ್ಗಿಱಿದು ಹುಱುತ್ರಸುತುಬ್ಬುತ ಪುರ್ಬನೇಱಿಸು
ತ್ತುಱುಗಿಸಿ ನೋಡಿ ದಾಂಟಲನುಗೆಯ್ವುತ ತೂಗುತ ಘುಂಕಿಸುತ್ತ ಬಾ
ಲ್ದಿಱಿದೊಲೆವುತ್ತ ಕೈನೆಗಹಿ ಕೂಗಿಸಿ ಕುರ್ಗಿಸುತೇಡಿಸುತ್ತೆ ತಾಂ
ನೆಱೆ ನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಕೋಡುಗಂ ೭೫

ವ್ಯಸನಗಳೇೞುಮಂ ಮದಗಳನೆಂಟುಮನಾಱರಿವರ್ಗಮೆಂಬಿವಂ
ವಿಷಯಗಳೈದುಮಂ ಕರಣ ನಾಲುಕುಮಂ ತನು ಮೂಱುಮೆಂಬಿವಂ
ಸುಸುಳಿರಿಸುತ್ತ ಚಿತ್ತದೊಳಗೀಶನ ನಿರ್ಮಳ ಧರ್ಮಮೂರ್ತಿಯಂ
ಪಸರಿಸಿ ಭಿನ್ನವಿಲ್ಲದಿರುತಿರ್ಪ ಮಹಾಮುನಿಮುಖ್ಯನೊಪ್ಪಿದಂ ೭೬

ಹೋಮದ ಮಾೞ್ಪರೊಂದು ಕಡೆಯಲ್ಲಿ ಶಿವಾಗಮದರ್ಥಯುಕ್ತಿಯಂ
ಪ್ರೇಮದಿ ಪೇೞ್ವ ಸಂಯಮಿಸಮೂಹಗಳೊಂದೆಸೆಯಲ್ಲಿ ಚಿತ್ತದೊಳ್
ಕಾಮಿಸದೇನುಮಂ ಶಿವನ ಪೂಜೆಯ ಮಾಡುತಮಿರ್ಪ ತಾಪಸ
ಸ್ತೋಮಮಿದಲ್ತೆ ರಂಜಿಸುವುದಾ ವನ ಜೀವನಪಾವನಾರ್ಥದಿಂ ೭೭

ಯತಿವನಿತಾವಿಳಾಸಗತಿಯಂ ಗತಿಗೆಟ್ಟವಿವೆಂದು ದುಷ್ಟಸಂ
ತತಿಯ ಜಪಾಜ್ಞೆಯುಳ್ಳವರೆ ಸದ್ಗತಿಯಂ ಕುಡಲಾರ್ಪರೆಂದು ಸಂ
ತತಮುಪಧಾವಿಪಂತೆ ಯತಿಕಾಮಿನಿಯರ್ ಪೊಗೆಮೊಯ್ವ ನೀರ್ಗಳ
ಲತೆಗೆಱೆವಲ್ಲಿ ಕೂಡಿ ಬೞಿಯೊಳ್ ಸುೞಿದಾಡುವುವಂಚೆವಿಂಡುಗಳ್ ೭೮

ಭಂಗಮನಾಳ್ದುವೀಕೆಯರ ಕುಂತಳಮೆಂಬುದಿದಕ್ಕೆ ತುಂಬಿಗಳ್
ಭಂಗಮನಾಳ್ದುವೀ ಮುನಿಪಘೂತ್ಕಕುರುಳ್ಗಳಿನೆಂದು ಭಂಗಿಸಲ್
ಪಂಗಚಿಕಿಚ್ಚಿಗೆಯ್ದುಪುದೆನಲ್ ದುರಿತಾಪಹಮಪ್ಪ ಹೋಮಧೂ
ಮಂಗಳ ಕಂಪನುಂಬುವಳಿರಾಜಿಗಳ್ ಮುನಿಗೇಹರಾಜಿಯೊಳ್ ೭೯

---

೧ ಯೊಳ್ (ಸ)

ಒಡವರ್ಪೇೞೆಸನೆಂಬ ಕೈಗುಡುವ ತೀರ್ಥಕ್ಕುಯ್ವ ದೇವಾರ್ಚನ
ಕ್ರಿಡೆಯಂ ಮಾಡುವ ಹೋಮಸಾಧನ ಸಮಿದ್ಧಭಾರ್ಘ್ಯತೋಯಂಗಳಂ
ಕುಡುವಿರ್ದಲ್ಲಿಗೆ ಕಂದಮೂಲಫಲಮಂ ತಂದೀವ ಪರ್ಯಾಪ್ತಿಯಂ
ಪಡೆವನ್ನಂ ಬಿಡದಿಂತು ವೃದ್ಧಯತಿಗಳ್ಗಾ ಸ್ಥಾನದೊಳ್ ವಾನರರ್ ೮೦
(ಸೂಕ್ತಿಸುಧಾರ್ಣವಂ ೩-೧೭೮)

ಈಯಮನಕ್ಕನುಕ್ರಮತಪಂ ಪರಿಣಾಮಮನಂತೆ ಕೃತ್ಸ್ನ ಚಾಂ
ದ್ರಾಯಣ ಪರ್ಣಭಕ್ಷವ್ರತ ಮಾರುತಸೇವನೆ ವಾರಿಪಾನದೊಳ್
ಕಾಯಮನೆಯ್ದೆ ತೀರ್ಚಿ ಬೞಿಕಂ ಮುನಿಗಳ್ ನಿಜಜೀವನಕ್ಕೆ ಯೋ
ಗಾಯತಸೌಖ್ಯಮೆಂಬಮೃತಸೇವೆಯೆ ಕಾರಣಮಾಗಿ ವರ್ತಿಪರ್ ೮೧

ಇರದಘಮರ್ಷಿಸಲ್ ಬಗೆದ ಸಿದ್ಧಿಯನೀವಜೞವಂತೆ ನಿರ್ಜರಾ
ಮರತೆಂಬಸುಂಟುಮಾಡಲೊಳಪೊಕ್ಕ ಪದಾರ್ಥಮನೆಯ್ದೆ ಕಲ್ಗಳಾ
ಗಿರಿಸುವ ಸೋಂಕೆ ಕತ್ತರಿಪ ಖಂಡಿಪ ಸಿದ್ಧರಸಹ್ರದಂ ಸುಧಾ
ಸರಸಿ ಶಿಲೋದಕಾಗ್ರನದಿ ಕತ್ತರಿವಾಣಿಯ ವಾಪಿ ವಿಸ್ಮಯಂ (?) ೮೨

ಮನುಜನವನೊಂದು ಕುವಳಯ
ಮನೊಂದು ಪದ್ಮಮನೆ ಮಾಡಿ ಪಿಂಗೇಱಿಸಿ ತೊ
ಟ್ಟನೆ ಕುವಲಯವಿಲಿ ಪದ್ಮಾ
ಸನಪ್ಪ ಪೂಗೊಳಡೆ ಬನದ ಪೂಗೊಳನೆಲ್ಲಂ (?) ೮೩

ಈ ತಾಪಸನಿದ್ದೆಡೆಗೆ ರ
ಸಾತಳಪುರುಷಪ್ರಮಾಣರ್ ಕೇಳೀಯಾತ್ರಾ
ಯಾತತಿಗೆಯ್ವರೆನಲ್ಕಾ
ಪಾತಾಳಸ್ಪರ್ಶಿಗಳ್ ಬಿಲದ್ವಾರಂಗಳ್ ೮೪

ಸದಸನ್ಮತಿಗಳ್ ಪಿಡಿವಂ
ದದಲಿ ವಿವೇಕಾವಿವೇಕದೊದವಂ ಮೈಪೊ
ರ್ದಿದರಂ ಪಿಡಿವುವು ಸಲೆ ಮಿಡು
ಕದವೋಲ್ ತದ್ವನದ ವಜ್ರಲೇಪದ ಶಿಲೆಗಳ್ ೮೫

ಮುನಿಜನದಾಜ್ಞಾಬಲದಿಂ
ಮುನಿಯದೆ ಪುಲಿಪುಲ್ಲೆ ಸಿಂಹವಾನೆ ನವಿಲ್ ಪಾ
ವಿನಿತುಂ ಕೆಳೆಗೊಂಡಿರ್ಪುವು
ಮುನಿಧೇನುಗಳಿವನೆ ಮೆಚ್ಚೆ ಸುೞಿವುವು ಪೊಲನೊಳ್ ೮೬

ನಲಿದೊಡನಲಿವುವು ತಾಯ್ಗಳ
ಮೊಲೆಯಂ ಪಲ್ಲಟದಿನುಂಬುವೊಡನಿಪ್ಪುವು ಪ್ಯೆ
ಗಲಸಿರೆ ಸಿಂಗದ ಶರಭದ
ಪುಲಿಯಾನೆಯ ಹೋಮಧೇನುವಿನ ಶಿಶುತತಿಗಳ್ ೮೭

ಯೋಗಿಗಳಿಪ್ಪ ತಮಾಲ ಲ
ತಾಗೃಹದೋವರಿಗಳೊಳಗೆ ಸೊಡರ್ಗಳ್ ಕಂಭೋ
ದ್ಯೋಗಮಣಿಯಾಗೆ ದೀವಿಗೆ
ಯಾಗಿರ್ಪುವು ಫಣಿಗಳನುಪಮಂ ಯೋಗಿಬಲಂ ೮೮

ಯಮಿಗಳ ಹೋಮಾಕ್ಷತ ಚರು
ಸಮಿತ್ಕುಶಂ ಸೂಸಿದಂಗಳಂಗಳ ಕಸಮಂ
ಸಮಯಂದಪ್ಪದೆ ತೊಡೆವುವು
ಚಮರೀಮೃಗವಾತ್ಮವಾಲ ಸಮ್ಮಾರ್ಜನಿಯಿಂ ೮೯

ಕರಿಗಳುಮಾಯೆಡೆಯೊಳ್ ಪು
ಷ್ಕರಸೀಕರನೀರ್ಗಳಿಂದೆ ನೀರ್ದಳಿವುವು ತ
ಮ್ಮರಲಿಂ ವನಜಂಗಮವ
ಲ್ಲರಿಗಳ್ ಬಂದಲ್ಲಿ ವಿರಚಿಪವು ಪೂವಲಿಯಂ ೯೦

ಯತಿವರರ ಹೋಮಚರು ಸಂ
ತತಿಗಂ ಮೇಲೆಱಗದಂತು ಮಕ್ಷಿಕ ಮಶಕ
ಪ್ರತತಿಯನಾತ್ಮಚಳತ್ಕ
ರ್ಣತಾಳವೃಂತದೊಳೆ ಬೀಸುವುವು ಕಳಭಂಗಳ್ ೯೧

ಎಳವಿಸಿಲೊಳ್ ಮುನಿಬಾಲರ್
ಜಳಧೌತಂಮಾಡಿ ಕಟ್ಟೆ ಸಾರಂಗಂ ನಿ
ಶ್ಚಲತೆಯಿನಾರಿಸುವುವು ವ
ಲ್ಕಲ ಕೌಪೀನಂಗಳಂ ಕವಲ್ಗೊಂಬುಗಳಿಂ ೯೨

ತನುಕಂಡೂತಿ ತಪೋಧನ
ತನುಸಂಘರ್ಷಣವನೆಸಗಿ ಹರ್ಷದೆ ತ್ರಿಶಪಾ
ವನಪಾತ್ರಜಲದೆ ಕೆಡೆ ಮೆ
ಚ್ಚೆನಿಂಪೆ ಮೃಗಶಿಶುಗಳೆಸೆವುವಾ ಮುನಿಗುಹೆಯೊಳ್ ೯೩

ಒಡಗೂಡಿ ವೇದವೋದುವ
ವೊಡನಾಡುವ ವಟುಗಳೋದನಾಲಿಸಿ ತಪ್ಪಂ
ಬಿಡಿವುದುಪನ್ಯಾಸದೆ ಒ
ಕ್ಕುಡಿಗೆಯ್ವುವು ಮುನಿಗಳೊಳಗೆ ಶುಕಸಾರಿಕೆಗಳ್ ೯೪

ಮುನಿಬಾಲಿಕೆಯರ್ ಮಧ್ಯಂ
ದಿನದೊಳ್ ಬಂದರ್ಘ್ಯಜಲವನುಯ್ವೆಡೆಯೊಳ್ ಮೇ
ಲೆ ನೆಟಿಲ್ ಪುದಿದಿರೆ ಸಲೆಸೋ
ಗೆಸವಿಲ್ಗಳ್ ಸೋಗೆವಿರ್ಚಿಪವು ಮುನಿವನದೊಳ್ ೯೫

ಎಡ್ಡವೆನಲಿಂಡೆಗಟ್ಟುವ
ಗುಡ್ಡುಗೆಗುಡುಪೆಡೆಗೆ ನೀರನಡಕುವ ಫಲಮಂ
ಬಡ್ಡಿಸಿ ನಿವೇದ್ಯವಿಡುವೀ
ಗೊಡ್ಡಾಟದ ಮುಸುಗಳೆಸೆದವಾ ಮುನಿವನದೊಳ್ ೯೬

ಮುನಿಧೇನುಗಳಂ ಕಾವುವು
ಮುನಿಕನ್ನೆಯರಜ್ಜಗಾಪೆನಿಪ್ಪುವು ಮುನಿಗೇ
ಹನಿಕಾಯದ ಬಾಗಿಲ್ಗಾ
ದುನಿಲ್ವವಂತಲ್ಲಿ ಜಂಬುಕಂಗಳ್ ಸತತಂ ೯೭

ಸ್ವರ್ಗಫಲಮಂ ಸ್ವಕೀಯಭು
ಜಾಗ್ರದಿ ನೀಳ್ಕಿ ತಳೆದುಕೊಂಡಪನೀತಂ
ನಿಗ್ರಹದಿಂದೆನೆ ಗಹನಾಂ
ತರ್ಗತನೆಸೆದಿರ್ಪನೂರ್ಧ್ವಬಾಹುವೊಳೊರ್ವಂ ೯೮

ತ್ರಿದಶಪದ ಸುಖವ ಪಡೆಯಲ್
ತುದಿಗಾಲಿಂ ನಿಂದನೀತನೆಂಬಿನಮುಂಗು
ಷ್ಟದ ಕೊನೆಯನೂಱಿ ನೆಲದೊಳ್
ಪದುಳಂ ನಿಂದಿರ್ದು ಮಾಳ್ಪನೊರ್ವಂ ತಪಮಂ ೯೯

ಕವಿಯಂತಷ್ಟಾಪದದಂ
ತೆ ವಿಯುತ್ಪತಿಯಂತೆ ತನ್ನೊಳುತ್ಪಾದಕ ವೃ
ತ್ತಿ ವಿಗಿತಮಾಗಿರೆ ಯೋಗಿ
ಪ್ರಸರಂ ಭವಗೇಡಿ ತಪವನೊರ್ವಂ ಮಾಳ್ಪಂ ೧೦೦

ಒಡಲಡಗಂ ಬೇಳ್ದಿರ್ಪರ್
ತಡೆಯದೆ ಪಾೞ್ಮನೆಯ ಪೂಡುವಂದದಿನೆಲುವಂ
ಕಡಿದುರ್ಚಿ ಬೇಳುತಿರ್ಪರ್
ಸುಡಲಿಕ್ಕಿಸಲಾ ಕಿಱಿದಗ್ನಿ ಕಂಠಣಿಸುವಿನಂ ೧೦೧

ಜಲಪೃಷ್ಟಮಾೞ್ದು ಧೈರ್ಯ
ಸ್ಖಲನಾರ್ಥಂ ಬೆಟ್ಟುಗಳ್ ಸಿಡಿಲ್ಪೊಡೆದುಂ ಪೆ
ರ್ಮುಱಿತಗಳೆಱಗಿದೊಡೆ ಯೋಗೋ
ತ್ಕಲಿತಮನರ್ ಬಯಲೊಳಿರ್ಪರಭ್ರಾಗಮದೊಳ್ ೧೦೨

ಪುಳಕಂ ಪೊಣ್ಮಿದೊಡಂ ತನು
ಪುಳುಕೋದ್ಗಮಮೆಂಬರೆಂದು ಯೋಗಸುಖೋದ್ಯ
ತ್ಪುಳುಕಮುಮಂ ತೊಱೆದು ಹಿಮ
ಜ್ಜಳಜ್ಜವುಂ(?) ಪೊಕ್ಕು ಯೋಗಿಗಳ್ ಕೆಲರಿರ್ಪರ್ ೧೦೩

ರವಿ ಸೆಡೆಯೆಮಗ್ನಿಕಂಕಣ
ಮವಾತ್ಮತೇಜಕ್ಕೆ ತಪಕ್ಕೆ ರವಿಯಗ್ನಿಯ ತೇ
ಜವದಾವರಿಸಿರೆ ಮುನಿಸು
ಪ್ರವರರ್ ಪಂಚಾಗ್ನಿಸಾಧಸರ್ ಬೇಸಗೆಯೊಳ್(?) ೧೦೪

ಅನವಧಿಕಾಲಾಸನದಿಂ
ತನುವಂ ಪುತ್ತ್ರಡರ್ದು ಮುಚ್ಚೆ ಯೋಗಾಮೃತಸೇ
ವನಯಿಂದನಶನಮಿರ್ಪರ್
ಮುನಿಗಳ್ ವಿದ್ಯೋತತತ್ಪರರ್ ಬ್ರಹ್ಮದವೋಲ್ ೧೦೫

ಕರೆಯುವು ಕೋಕಿಲೆ ಮಧುಪಂ
ಮೊರೆಯುವು ಗಿಳಿ ಗಳಪವನಿಲಸಲ್ಲಾಡಂ ಪೆ
ರ್ಮರನಂ ಗಿಡುವಂ ಲತೆಯುಂ
ಗುರು ಶರ್ವಸಮಾಧಿಭೀತಿಯಿಂದಾ ನಗದೊಳ್ ೧೦೬

(ಗಿರಿಜಾಕಲ್ಯಾಣಂ ೫-೨೮.)

ನಿರತರ್ ಭರಿತರ್ ಚರಿತರ್
ಪರತತ್ವರತರ್ ಸುತರ್ ವಿರಕ್ತನ ತೇಜಃ
ಕಿರಣರ್ ಕರುಣರ್ ಶರಣರ್
ಕರುಣಾಳುಗಳರುಣಮಣಿನಿಭರ್ ನೆಲಸಿರ್ದರ್ ೧೦೭
(ಗಿರಿಜಾಕಲ್ಯಾಣಂ ೫-೨೪)

ಮುಗಿದುವು ನಯನಸರೋಜಂ
ಮಿಗೆಯಲರ್ದುದು ಚಿತ್ತಕೈರವಂ ಮಿಕ್ಕುರ್ಬಿಂ
[1][ಬಗೆದ][1]ತಪೋನಿಧಿಗಂದಾ
ಬಗೆಯೊಳಗಾ ಜ್ಞಾನಚಂದ್ರನುದಯಿಸುವಾಗಳ್ ೧೦೮

ಗುಹೆಗುಹೆಗಳೊಳಗೆ ಬಳಸಿದ
ಬಹುಗಹ್ವರಗಹ್ವರಂಗಳೊಳ್ ನವಸೌಖ್ಯಾ
ವಹ ನಿರ್ಝರನಿರ್ಝರದೊಳ್
ಗಹಗಹವೊಪ್ಪಿರ್ಪುದಧಿಕ ಮುನಿಮುನಿವೃಂದಂ ೧೦೯

ಯಮ ನಿಯಮ ನಿತ್ಯಕರ್ಮಂ
ಸಮನಿಸೆ ವನಲತೆಯ ಗುಲ್ಮವೃಕ್ಷಾವಳಿಯೊಳ್
ವಿಮಳವ್ರತಿಗಳ್ ಸಲೆ ಕಂ
ದಮೂಲಫಲದಿಂದೆ ತಣಿದು ಪರಿಣಮಿಸಿರ್ದರ್ ೧೧೦

ಭಾಸ್ಕರಕರಸಮ ವಿಮಳನ
ಮಸ್ಕರರತಿವ್ರತಿಗಳಗ್ರಗಣ್ಯರ್ ಸಮಯಂ
ತಸ್ಕರರತಿಮುದದಿಂದೆ ನ
ಮಸ್ಕರಿಸುವ ಮುನಿಗಳನಘರಿರ್ಪರ್ ನಗದೊಳ್ ೧೧೧

ಗಣ್ಯಾತೀತರ್ ಶಿವಲಾ
ವಣ್ಯದೆ ಸರ್ವಾಂಗಭಸಿತದಿಂ ನರೆಯಿಂ ಕಾ
ರುಣ್ಯದಿನತಿಧವ[2]ಳಿಮದಿಂ[2]
ಪುಣ್ಯಂ ಪಣ್ಣಿದ ತೆಱದೆ ತಾಪಸರಿರ್ದರ್ ೧೧೨
(ಗಿರಿಜಾಕಲ್ಯಾಣಂ ೧-೬೩)

---

೧ ಗಭೀರ (ಸ) ೨ ೪ತೆಯಿಂ (ಅ)

ಮ್ಮೈಗರೆದು ಮೆಲ್ಲಮೆಲ್ಲನೆ
ಕ್ಕೈಗೊಟ್ಟೊಡಸ್ಸೈದಿ ಮತ್ತೆ ತಂದಿರಿಸಿ ಪಗಲ್
ಬ್ಬೈಗಿರುಳೆನ್ನದೆ ಸಲೆ ಬೆಸ
ಕ್ಕೈಗುಂ ಮುನಿಗಳ್ಗೆ ನಗದ ಮರ್ಕಟನಿಕರಂ ೧೧೩

(ಗಿರಿಜಾಕಲ್ಯಾಣಂ ೧-೬೫)

ಓಸರಿಸಿ ಬಿರ್ಚಿ ಪಕ್ಕಮ
ನೋಸರಿಸದೆ ಮುನಿಗಳೊಡನೆ ಹೋಮಸ್ಥಳದೊಳ್
[1]ಭಾಸುರದಿನಂತುಮಿಂತುಂ[1]
ಬೀಸುತ್ತೆಚ್ಚಱಿಸಿ ಕೊಡುವುವಾ ಶಿಖಿ ಶಿಖಿಯಂ ೧೧೪

(ಗಿರಿಜಾಕಲ್ಯಾಣಂ ೧-೬೬)

'ಕೊಲ್ಲದುದ ದಿಟನಱಿ'ಯೆಂ
ದೆಲ್ಲಾ ಪರಿಯಿಂದೆ ಪೇೞ್ವ ಪಿರಿಯರ ನುಡಿಯಂ
ಬಲ್ಲಿತೆನೆ ನಂಬಿ ಬೇಂಟೆಯ
ನೊಲ್ಲದೆ ಬಿಟ್ಟಿರ್ಪ ಬಿಯದರೊಪ್ಪುವರಡವಿಯೊಳ್ ೧೧೫

ಪರಮತಪೋನಿಧಿಗಳ್ಗಂ
ಬರ[2]ಡೆಡೆಯಂ ಪಾಯ[2]ಲಿಟ್ಟ ನಿಚ್ಚಣಿಗೆಯೊಲ
ಚ್ಚರಿವಡೆದು ನೆಗೆದುವೆನಸುಂ
ತೆರೆಸುಸಗುವ ಹೋಮಧೂಮವಾ ಮುನಿವನದೊಳ್ ೧೧೬

(ಸೂಕ್ತಿಸುಧಾರ್ಣವಂ ೩-೧೭೬)

ಕರಿಣಿ ಕರಾಂಜುಳಿಯಿಂ ಕೇ
ಸರಿಯ ಚಳತ್ಕೇಸರಂಗಳಂ ತೊಡೆದುದು ಕೇ
ಸರಿಣಿ ಮೊಲೆಯೂಡುತಿರ್ದುದು
ಕರೇಣುಜಾತಕ್ಕಮಾತ್ಮಸಂಜಾತಕ್ಕಂ ೧೧೭

(ಅನಂತನಾಥಪುರಾಣಂ ೩-೩೭, ಸೂಕ್ತಿಸುಧಾರ್ಣವಂ ೩-೧೭೯)

---

[1] ಬಾಸಿಪವ್ರೋಲಂತುಮಿಂತುಂ (ಅ) [2] ನದಿಯಂ ಮೀಱಯ (ಸೂ)

ಪರಮತಪೋನಿಧಿಗಳ್ ಸಂ
ಚರಿಸುವ ಬಟ್ಟೆಯನಗಲ್ದು ನಟ್ಟಿವಿಸಲ್ ಕಾ
ಯ್ದುರಗಂ ಪುಡಿಯೊಳ್ ಪೊರಳು
ತ್ತಿರೆ ಸೋಗೆಯನೆತ್ತಿ ಸೋಗೆ ಪಿಡಿಮುದು ನೆಬಿಲಂ ೧೧೮
(ಅನಂತನಾಥಪುರಾಣಂ ೩-೩೮, ಸೂಕ್ತಿಸುಧಾರ್ಣವಂ, ೩-೧೮೦)

ಜೆಜ್ಜದೆ ಬೆದಱದೆ ಮೊಲೆಯಂ
ಸಾರ್ಚಿದ ಮಱಿವೆರಸು ಸುಱಿದ ಮಾನಿಸರುಲಿಪಂ
ಮುಚ್ಚಿದ ಪುಲ್ಲೆಗಳಲ್ಲಿ ಪೊ
ಣರ್ಚುತ್ತಿರ್ದಪುವು ಶಾಂತರಸಪರಿಣತೆಯಂ ೧೧೯
(ಸೂಕ್ತಿಸುಧಾರ್ಣವಂ ೩-೧೮೧)

ಹಾಱಿತಲೆಯನಿಟ್ಟು ಹುತ್ತಿನ
ಹೋಱಿಲ ಹಾವುರಮನಡರ್ದು ಪೆಱಗಿಂ ಬೊಪ್ಪಿಂ
ದೇಱಿತಂಟೆಱತರೆ ಯತಿಪತಿ
ಬೀಱಿಲ್ವರಿದಿರ್ದ ಕಲ್ಪಕುಜಮುಂ ಪೋಲ್ತಂ ೧೨೦

ತಲೆವಾಗುತ್ತಿರ್ದುವೆಂಬಂತೆಜಿಪ ಲತೆಗಳಿಂದರ್ಚಿಸುತ್ತಿರ್ದುವೆಂಬಂ
ತಲರ್ಗಳ್ ತಳ್ತಲ್ಲೊಗುತ್ತಿರ್ದಖಿಳ ತರುನಿಕಾಯಂಗಳಿಂ ಕೂಡೆ ಬದ್ಧಾಂ
ಜಳಿಯಾಗುತ್ತಿರ್ದುವೆಂಬಂತೆಸೆವ ಕಿಸಲಯಾಬದ್ಧ[1]ಸಂಜಾತವೀರ
ತ್ಪ್ರಳದಿಂ[1] ಚೆಲ್ವಾದ ಋಷ್ಯಾಶ್ರಮದ ಮಹಿಮೆಯುಂ ಬಣ್ಣಿಸಲ್ ಬಲ್ಲನಾವಂ ೧೨೧
(ಕಾದಂಬರಿ ಪೂ. ಭಾ. ೨೨೫; ಸೂಕ್ತಿಸುಧಾರ್ಣವಂ ೩-೧೯೨)

## ಅರಣ್ಯವರ್ಣನಂ

ಅತಿಘೋರಧ್ವಾಂತಪೂರಂ ಬಹುತರುಕುಳಸಾರಂ ಸಮುದ್ಯನ್ಮೃಗಘೋರಂ
ಪ್ರತಿಪೂಜ್ಯಂ ದೇವಮಾನ್ಯಂ ಮೃಗವಿತತಿಗಸಸ್ಯಂ ನದೀಪ್ರಾಂತಧನ್ಯಂ
ಮುತಭೋದ್ಯಂ ಜಾತವೇದ್ಯಂ ದಿನಕರಕಿರಣಾಭೇದ್ಯಮೀ ಭೂಮಿಗಾದ್ಯಂ
ಗತಪುಣ್ಯಂ ತಾಪಸಗಣ್ಯಂ ಕಲಿತವಿಷಯಗುಣ್ಯಂ ವಿರಾಜಿಪ್ಪರಣ್ಯಂ ೧೨೨

---

೧ ಸಂಛನ್ನಂ ಶಾಖಾಕುಳದಿಂ (ಸೂ)

ಪರಿಯುಂತಿಂದುವಿನಂತೆ ಕೃಷ್ಣಮೃಗಸಂಶ್ಲೇಷಂ ಸುರಾವಾಸದಂ
ತುರಗಾಧೀಶ್ವರನಂತೆ ಕೌಶಿಕವಿಭೋಗಂ ಕಾಮನಂತಬ್ಧಿಯುಂ
ತಿರೆ ಜಂಜಮ್ಯತಿಸಂಯುತಾಸಿವಿಷವೃಂದಂ ಪ್ರೇಮದಂತಬ್ಜವಿ
ಷ್ಟರನಂತುಜ್ವಳರಾಜಹಂಸನಿಭನಂ ರೌಪ್ರಾಸನಂ ಕಾನನಂ ೧೨೩

ಗಿರಿಯುದ್ದಂ ಜೆಳೆದಿರ್ಪನೇಕಕುಜದಿಂ ಜೇರ್ ಬಳ್ಳಿಗಳ್ ಸುತ್ತಿ ಮು
ತ್ತಿರಲಾ ಪೆರ್ಬೊದಱಿಂದೆ ಕತ್ತಲಿಸಲಾ ಕಾಂತಾರದಾ ಮಧ್ಯದೊಳ್
ತೆರಹಿಲ್ಲೆಂ ನಿಸಿಪರ್ ಪೆರ್ಮೆಳೆಗಳಿಂದೊತ್ತೊತ್ತಿನೊಳ್ ಕುತ್ತಱಿಂ
ನರಿಯಿಂದಾ ವನನಾವ ಧೀರನ ಮನಕ್ಕಂ ಭೀತಿಯುಂ ಬೀಱದೇ ೧೨೪

ಕರ್ಬಿದ ಬೆತ್ತದಿಂ ಬಿದಿರ ಹಿಂಡಿಲಿನಿಂದನನೇಕವೃಕ್ಷದಿಂ
ಪರ್ವತದಿಂ ಗುಹಾಂತರಗಳಿಂ ಪರಿಯುತ್ತಿಹ ನಿರ್ಝರಂಗಳಿಂ
ಪೆರ್ಬುಲಿ ಭಲ್ಲುಕಂಗಳು ಲುಲಾಯ ವರಾಹಮೆನಿಪ್ಪ ಕಾಮೃಗಂ
ಸರ್ವಜನಕ್ಕೆ ಭೀತಿಯೆನಲೊಪ್ಪುತಲಿರ್ದುದಮೊಂದು ಕಾನನಂ ೧೨೫

ಮರೆ ಸಾರಂಗ ಕುರಂಗ ಸಂಕುಳಗಳಿಂ ಗೋಮಾಯುವಿಂ ಕೋಕೆ ಸೂ
ಕರಸಂದೋಹ ಸೃಗಾಲ ಭಲ್ಲುಕಗಳಿಂ ಶಾರ್ದೂಲದಿಂ ಋಕ್ಷಮುಂ
ಗುರಿ ಮುಂತಾದ ಮೃಗಂಗಳುಬ್ಬರದಿಂ ಕಂಡಾಗಲ್ಲಿ ಪೋಪರ್ಗೆ ಭೀ
ಕರಮುಂ ಮಾಡುತೆ ರೂಢಿಗಚ್ಚರಿಯೆನಲ್ ಕಾಂತಾರ ಕಣ್ಗೊಪ್ಪುಗುಂ ೧೨೬

ದೇಶ ವನಸ್ಥಳಂ ತರುಗಳೀ ತೆರಮೊಪ್ಪಲು ತತ್ಫಲಂಗಳೀ
ಕೋಶಭಟಾದಿಗಳ್ ವನಚರಾದಿಗಳಾ ಗಿರಿದುರ್ಗ ಪಟ್ಟಣಂ
ಭಾಸುರಮಪ್ಪ ಸಂಯಮಿಗಳಾಶ್ರಯಮಾ ವನದೇವಿ ರಾಣಿಯೆಂ
ಬೀಸು ಸಘಾಡದಿಂ ವನನೃಪಾಲಕನೊಪ್ಪಿದನೇನ ಬಣ್ಣಿಪೆಂ ೧೨೭

ಪರಶಿವಗೇಣನೊಂದುರೆ ನಿಶಾಪತಿಗೊಂದೆ ಸುರಾಧಿನಾಥಗಂ
ಕರಿಯಿಹುದೊಂದೆ ಕಾಲನಿಗೆ ಕಾಸರಮೊಂದೆ ಕುಮಾರಗೆಂತುಮೊ
ಪ್ಪಿರೆ ಶಿಖಿಯೊಂದಪ್ಪಿಸೆಯೆನಗಾ ಹರಿಣಂ ಕರಿ ಕಾಸರಂಗಳುಂ
ಬರುಹಿಯು ಲೆಕ್ಕವಿಲ್ಲಮೆನಗಾರ್ ಸರಿಯೆಂದೆಸೆದತ್ತು ಕಾನನಂ ೧೨೮

ಸ್ಥಾವರಪಲ್ಲಿಯಾ ರಘುಜನಾ ನಳನಾ ಯಮುಷೂನು ಭೂಭುಜರ್
ಸಾರಲು ತನ್ನತನ್ನವರಿಗಾಶ್ರಯಮಾಗಿ ತಪಸ್ವಿಗಳ್ಗೆ ಮೋ
ಕ್ಷಾರತಮಪ್ಪವೊಪ್ಪುವ ತಪೋವನಮಿತ್ತು ಸಮಸ್ತ ಜೀವಕಾ
ಧಾರಮುಮಾಗಿ ರಕ್ಷಿಸಿದ ಧರ್ಮಿಗಳಂತೆಸೆದತ್ತು ಕಾನನಂ (?) ೧೨೯

ಇರೆ ಶಬರಾಧಿರಾಜಕಟಕಂ ಕಟಕಂ ಕಟಕಂಧರೋಗ್ರಸಿಂ
ಧುರಮೆನೆ ನಿರ್ಝರೋಲ್ಲಿಹರಿಯುಂ ಹರಿಯುಂ ಹರಿಯುಂ ವಿಜೃಂಭಿಪಾ
ಗಿರಿತಟವಲ್ಲಿ ದಾವಶಿಖಿಯುಂ ಶಿಖಿಯುಂ ಶಿಖಿಯುಂ ಪ್ರಭೂತವಾ
ಗಿರೆ ಬೆಳಗುಂ ತಮಂ ತವಿಪಿನಂ ವಿಪಿನಂ ವಿಪಿ[1]ನಂತ[1]ಪೊಪ್ಪುಗುಂ ೧೩೦

(ಜಗನ್ನಾಥವಿಜಯಂ ೧೬-೨)

ಕರಿದಾನದ್ರವಗಂಧ ಚಿತ್ರವಿಹಗಸ್ತೋಮಾರುತಂ ಮಾರುತಂ
ಬರೆ [2]ನೋಟ್ಟಿರ್ಗಿ[2]ದಿರಂ ಪಳಂಚಲೆಮು ಮೇಘಧ್ವಾಂತಮುಂ ಧ್ವಾಂತಮುಂ
ಪರಪುತ್ರಿರ್ದುದು ತನ್ನೊಳೊಂ[3]ದದಿರೆ[3] ತೇಜೋವ್ಯೂಹಿಸಂ ವ್ಯೂಹಿಸಂ
ತರುಶಾಖಾನಿಕುರುಂಬಚುಂಬಿತ ದಿಶಾನೀಕಾನನಂ ಕಾನನಂ ೧೩೧

(ಜಗನ್ನಾಥವಿಜಯಂ ೧೬-೩)

ಜವದಹಿಫೂತ್ಕೃತಂ ವಿಹಗಚೀತ್ಕೃತಮುದ್ಧತ ಘೂಕಹುಂಕೃತಂ
ಕರಿಕರಶೂತ್ಕೃತಂ [4]ಪವನಸೀತ್ಕೃತ[4]ಮುಗ್ರತವೇಣುಘುತ್ಕೃತಂ
ಗಿರಿಜನದೀಜಳತ್ಕೃತಮಿಭಾರಿಘುಳತ್ಕೃತಮುಗ್ರದಾವಸಂ
ಜರಣಘಗತ್ಕೃತಂ ಮಹಿಷಶೃಂಗಟಣತ್ಕೃತಮಾ ವನಾಂತರಂ ೧೩೨
(ಜಗನ್ನಾಥವಿಜಯಂ೧ ೬-೪)

ನಡುವಿರ್ದೆಟ್ಟಿರೆ ಚಿಕ್ಕಸ್ರೋತಕಳಭಂಗಳ್ ಕೂಡೆ ಸಾರ್ದಿರ್ಕೆಲಂ
ಬಿಡದಿಂಬಿಂ [5]ಸೆ[5]ಳೆಯಾನೆಗಳ್ ಬರೆ ಮುಂದೊಂದೊಂದು ಯೂಥಾಧಿಪಂ
ಪೊಡೆಯುತ್ತಂ ಬರೆ ಮುಂದೆ ಪಿಂದೆ ಪೆಜ[6]ತಿಂ[6] ಮತ್ತೊಂದಿಭಂ ಪಜ್ಜೆಯಂ
ತೊಡೆಯುತ್ತಂ ಬರೆ ಬರ್ಪ ಯೂಥಜಮದಿಂ ಜೆಲ್ವಾದುದಾ ಕಾನನಂ ೧೩೩
(ಜಗನ್ನಾಥವಿಜಯಂ, ೧೬-೫)

ಸುರಪತಿಯಂತೆ ವಿಸ್ಫುರಿತನೇತ್ರಸಹಸ್ರವಿರಾಜಿತಂ ನರೇ
ಶ್ವರ ಭವನಾಗ್ರದಂತೆ ದೃಢವೇತ್ರಲತಾವೃತಮುಪ್ಪ್ರವೇಶಮುಂ
ಬರತಳದಂತೆ ಪುಷ್ಪಮೃಗಲುಬ್ಧಕಸಂಗತಮಂಬುರಾಶಿಯಂ
ತಿರೆ [7]ನುತ[7] ವಿದ್ರುಮದ್ಯುತಿನಿರಂತರಮೊಪ್ಪುಗುಮಾ ವನಾಂತರಂ ೧೩೪
(ಕಾವ್ಯಾವಲೋಕನಂ ೩೩೮, ಸೂಕ್ತಿಸುಧಾರ್ಣವಂ ೩-೧೪೨)

---

೧ ನಷ್ಟ (ಅ) ೨ ಕೃಷ್ಣಂಗಿ (ಅ) ೩ ನಿಸಲೆ (ಅ) ೪ ಪ್ಲವಗರೀತ್ಕೃತಂ (ಸ)
೫ ದೆ(ಅ) ೬ ಗಿಂ(ಅ) ೭ ತ (ಸೂ)

ಕರಿಸೇರಿಲ್ ತಾರೆ ತುಂಬುರ್ತದಿಕೆಗಿಲಿಲಸಂ ನೆಲ್ಲಿ ಬಿಲ್ವಾರ್ಜುನಂ ಕ
ನ್ಮ್ಯರನಾಲಂ ಜಾಲಬೇಲಂ ಬಿಳಿಯುರಳಿಯಸಂ ಕಕ್ಕೆ ಹೂರಂ ಬೆಳಂ ಮಾ
ನರುಟಾಳಂ ಪಾರಿವಾಳಂ ತುಡುಕಡಪೊಡವಂ ಲಕ್ಕಿ ಕೋಟಕ್ಕಿ ದಿಂಡಂ
ಚಿರಬಿಲ್ವಂ ಬ್ರಹ್ಮವೃಕ್ಷಂ ಕಜ್ಜಿಕೆ ತರಿಯದಿಂದೊಪ್ಪುತಿರ್ದತ್ತರಣ್ಯಂ ೧೩೫

ವಿಕಸಿತ ಪುಷ್ಪಸಂತರಳಿ ಕನ್ನಡಿಗರ್ ಕರೆವಂತೆ ಬನ್ನಿ ಬಂ
ಧಕಿಯರ ನಾಮದಂತೊಗೆದ ಪಾದರಿ ಯೋಗಿಗಳಂತೆ ತಾರಿ ಪಾ
ಪಕನ ಶರೀರದಂತಿರುಳಿ ಸುಂಕಿಗನಂತಿರೆ ಚಿಲ್ಲ ಸಂದ ಲಾ
ವಕನ ನಿಯೋಗದಂತೆಸೆದ ಬೊಬ್ಬುಲಿ ಪರ್ಬಿದರಣ್ಯಮೊಪ್ಪುಗುಂ ೧೩೬

ಪ್ರಕಟದ ಪುಷ್ಪದಂತೆ ಸುಗುಳಂ ಮೊಗನುಂ ತೊಳೆವಂತೆ ಬಾಗಿ ಪಾ
ತರಿಯುವಳಂತೆ ಮೂಗಿ ಮಿಗಿಲುಂಡವರಂತಿರೆ ತೇಗು ಕಾಮುಸಂ
ತಿರೆ ಕರವೀರ ಮುಯ್ಯ್ ನಡುವಿನಂತೆರವಂ ಕರೆವಂತೆ ಪಾಲೆ ಶಂ
ಕರಸಖನಂತೆ ಪೊನ್ನೆಯುಳಿಯುಂತೆರದಂತಿರರಣ್ಯಮೊಪ್ಪುಗುಂ ೧೩೭

ಇಂಗಳ ತಾಜಿ ಸೇರಿಲಿ ಮಾಮರ ಕಮ್ಮರವಾಲಜಾಲ ಮು
ತ್ತುಂಗದ ಕಾಚಿ ವೀಚಿಲರೆನೆಲ್ಲಿಗಳಾ ವರ ಸೋಗೆ ಬಾಗೆ ಜೆ
ನ್ನಂಗಿಗಳತ್ತಿ ಮತ್ತಿ ಜೇಳೆ ಜಿಲ್ಲವತಂ ಸುರಪೊನ್ನೆ ಹೊನ್ನೆಯುಂ
ಮಂಗರುವಳ್ಳಿ ಬಳ್ಳಿಮುಜುಚಂಗಳಿನೊಪ್ಪುಗುಮಾ ವನಾಂತರಂ ೧೩೮

ನರಿ ಶಶಕಂ ವೃಕಂ ಕರಟಿಸುಯ್ಯನ್ನುಗಂ ನುರೆವಿಂಡು ಚಿಕ್ಕು ಮುಂ
ಗುರಿ ಮುಶಲಿವ್ರಜಂ ಕರಡಿ ಮಂಡಳಿ ಪೆರ್ಬುಲಿ ಮರ್ಕಟಾಳಿ ಸೂ
ಕರನಿಚಯಂ ಕುರಂಗತತಿಯುಷ್ಟ್ರಚಯಂ ಘನಖಡ್ಗಿ ಸೈರಿಭಂ
ಪ್ರಮುಖಮೃಗಂ ಗಜಂ ಶರಭ ಸಿಂಹದಿನೊಪ್ಪುವುದಲ್ಲಿ ಕಾನನಂ ೧೩೯

ಅರಗಿಳಿ ಪಾರಿವಂ ಕುರಲಿ ಲಾವುಗೆಯನ್ಯಭೃತಂ ಶರಾರಿ ಹೆಂ
ಗುಸು ಚರಣಾಯುಧಂ ಕಕುಸಿ ಜಂದನನಕ್ಕಿ ಚಕೋರಿ ಟಿಟ್ಟಿಭಂ
ಸರಟಿ ಕಪ್ರಂಜು ಚಾಸಗೆ ಬಕಂ ಶಿಖಿ ವಾಯಸನಂಚೆ ಕೊಂಚೆ ತಿ
ತ್ತಿರಿ ಗಿಡಗಂಗಳೆಂಬ ಖಗವೃಂದದಿನಲ್ಲಿಯರಣ್ಯಮೊಪ್ಪುಗುಂ ೧೪೦

ಸುಂಡಕಿ ಚಕ್ರವಾಕ ಬಕದಾರ ಮರಾಳನು ಜಕ್ಕವಕ್ಕಿಯಿಂ
ತೊಂಡಿಗ ಪಂಚವರ್ಣಗಿಳಿ ಕೋಕಿಲ ಕೇಕಿ ಶರಾರಿ ಟಿಟ್ಟಿಭಂ
ಗಂಡಭೆರುಂಡ ಸಾಳಿ ಗರುಡಾಳಿ ಭರದ್ವಜ ರತ್ನಪಕ್ಷಿ ಸಾಲ್ಗಂಡಿನ
ಕಂಡಮದೊಪ್ಪುತಿಪ್ಪುತಿಹದಲ್ಲಿಯ ರೌದ್ರವರಣ್ಯಮಧ್ಯಮೋ [illegible] ೧೪೧

ಅಳಿ ಗಿಳಿಯುಂಚೆ ಕೊಂಚೆ ಪಿಕ ಚಾದಗೆ ಪ್ರೇದಗೆ ಕಾಕ ಘೂಕ ವಂ
ಡಳಿ ಪ್ರೊಲಪರ್ಲೆ ಬರ್ಲೆ ಪರಪಂ ಗಲಿಪಂಗ ಪಸುಂಬ ಗುಬ್ಬಿ ಸಂ
ಕುಳ ಕುಲಿಪಂತ ಕಂಕಸ ಮಯೂರ ಚಕೋರ ಶತಾರಿ ಘುಲ್ಲಿಕಂ
. . . ಳಿಂ ವಿರಾಜಿಸುತಿರ್ಪುದನಾರತಮಾವನಾಂತರಂ (?) ೧೪೨

ಪೀರಭಟಾಳಿಯುಂತೆಸೆವ ಕಗ್ಗಲಿಯುಂ ಕಡುಹಂದೆ ಕಾಳಿಗ
ಕ್ಕಾರಡೆಯಾಲದಿರ್ಪ ಪನರೀತಿಯೊಳಾಲದ ಭೂಮಹಂಗಳಿಂ
ನಾರಿಯ ಕರ್ಣಪ್ರೋಲಿಗಳ ನಾಮದ ಹಾಲಿಯ ಸಾಲುವೃಕ್ಷದಿಂ
ಪಾಮುಪಮಾನಕಂ ಪೊಗಟಲಾಶ್ರಯಮಾಗೆಸೆದತ್ತು ಕಾನನಂ ೧೪೩

ರೋಗದ ಪೇಹಿಯುಂ ನೃಪಮನಿಪ್ಪ ನಿವಾಸಮ ಸೇರದಿಪ್ಪ ಪ್ಪೈ
ರಾಗಿಯ ತ್ರೈಲಘಾತಕನ ಗಾಣದ ಸುತ್ತಿಹಪೆತ್ತ ನೋಟಿತ್ತೊಡಂ
ರಾಗಿಪ ತಾರಿಯಿಂದೆಸೆವ ತೊಟ್ಟಿಗಳಿಂ ಸಲೆ ಗೇರುವೃಕ್ಷದಿಂ
ಪೋಗಡಸಿರ್ಪ ಕಂಟಕದ ಕತ್ತರಿಯಿಂದೆಸೆದತ್ತು ಕಾನನಂ (?) ೧೪೪

## ಗಜವರ್ಣನಂ

ಸೈರಿಸಲಾರದುರ್ವರೆಯ ಭಾರಮನಲ್ಪಬಲಂಗಳಾ ದಿಶಾ
ವಾರಣರಾಜಿಗಳ್ ತಳೆವುವೀ ಮದವಾರಣವೃಂದದಿಂ ಮಹೀ
ಭಾರಮನೆಂದು ಧಾತ್ರ ಸಮಕಟ್ಟಿದ ವಾರಣಯೂಥಮೆಂಬಿನಂ
ವಾರಣಸಂಕುಳಂ ಬಗೆಗಗುರ್ವಿಸುತಿರ್ದುದದೊಂದು ತಾಣದೊಳ್ ೧೪೫
(ಜಗನ್ನಾಥವಿಜಯಂ ೧೬-೬)

ಅತಿಶಯಭದ್ರಮೂರ್ತಿಗೆ ಜಗಕ್ಕಿದು ಮಂಗಳಮೆಂದು ರೌಪ್ಯದೇ
ವತೆ ಬಟ್ಟಿದಿಕ್ಕುವಾವಿಷದ ಮುಟ್ಟಿಗೆಯೆಂಬಿನೆಗಂ ಸಿಡಿಲ್ದು ದಿ
ಗ್ವಿತತಿಗೆ ಸೂಸೆ ಮುನ್ನಮಿಜಿಕೊಂಡರುಣಪ್ರಜವಾಗಳಾಸ್ಯದಿಂ
ಪ್ರತಿಘದೊಳೆತ್ತಿ ಬೀಸಿದುದದೊಂದು ಮದದ್ವಿರದಂ ಮಹಾಹಿಯಂ ೧೪೬
(ಜಗನ್ನಾಥವಿಜಯಂ ೧೬-೭)

ಸರಿಂದಿ ಝುಷಾಳಿ ಸಂಭ್ರಮಕರಂ ಮಕರಂ ಮಕರಂದರೇಣುಗಳ್
ಪರಿಂದಿ ಕಲಂಕೆ ಕೂಡೆ ಕಮಲಂ ಕಮಲಂ ಕಮಲಂ ಮಹೋರ್ವಿ ಪ್ರೊ
ಜ್ಜ್ರಿರಿ ಪೊಜಮಟ್ಟಿಭಂ ಜಿನದಿಂ ನದದಿಂ ನವದಿಂಪ್ರಪಪ್ರಸಿ
ಸ್ಫುರದೆಜಗಿತ್ತಿ ಭಾಷಘನಂ ಘನಂ ಘನಂಪಜಾಲಮಂ ೧೪೭
(ಜಗನ್ನಾಥವಿಜಯಂ ೧೬-೯)

ಒಡಗೊಂಡೊಯ್ದೊಂದು ಪದ್ಮಾಕರಹಿಮಜಲವ[1]ತಂದು[1] ಮೇಲೊಟ್ಟಿ ತಣ್ಪಂ
ಪಡೆದಂಭೋಜಾತಪತ್ರಂಗಳ ಕೊಡೆವಿಡಿದಲ್ಲಿಂ ನಿಕುಂಜಸ್ಥಳಕ್ಕೆ
[2]ಯ್ದೆ ಡಿದುತ್ಪಲ್ಲಂಗಳಂ[2] ಪಲ್ಲಕಿಯೆಳೆವಳಿರಂ ಸೇಚಕಸ್ನಾನಮುಂ ಕೈ
ಗುಡುಕುತ್ತಾಘ್ರಾಣಿಸುತ್ತುಂ ಮಸಗಿನುನವನಾಗಿರ್ದ[3]ದಲ್ಲೊಂ[3]ದಿಭೇಂದ್ರಂ ೧೪೮

(ಜಗನ್ನಾಥವಿಜಯಂ ೧೬-೧೦)

ಬಿದುಪ್ಪೋ ಕೂಟವೊ ಕರ್ಣತಾಳವೊ ಪತತ್ರಕ್ಷೇಪವೋ ನಿರ್ಗಲ
ನ್ಮದವೋ ಸಿಂಧೂರವೋ ಲಲಾಟವೊ ಶಿಲಾವಿಸ್ತಾರವೋ ಕಣ್ಣ ಕೆಂ
ಪ್ಪೊ ದವಜ್ವಾಲೆಯೊ ಮೆಯ್ಯ ಕಪ್ಪೊ ಕರಿಕೋ ನೀರಾನೆಯೋ ವಜ್ರಿಗೊ
ಡ್ಡಿದ ನೀಲಾದ್ರಿಯೊ ಪೇಟಿಸೆಂಬಿನನುಗುರ್ವಾದತ್ತು ಮತ್ತೊಂದಿಭಂ ೧೪೯

(ಸೂಕ್ತಿಸುಧಾರ್ಣವಂ ೩-೪೪, ಜಗನ್ನಾಥವಿಜಯಂ ೧೬-೮)

ಒದರ್ದ ಪಸಷ್ಟೀಕಮುಲಿಸಾಂಸುವಸಿಂಜಿನೆ ಮಿಯ್ಯೊಳೊಟ್ಟಿಕೊಂ
ಡೊದರ್ದ ಕರಾಗ್ರಮಂ ನೆಗಪಿ ಸಂಭ್ರಮದಿಂ ಪರಿದೊದರ್ದ ಶೈಲಸಿಂ
ಧೂರ್ವಿರ್ಗೆ ಜಿರ್ಕೆ ತಾಯ್ವಡಿಯ [4]ಸೋಂಗಿಲನೊ[4]ಯ್ಯನೆ ಸೋಂಕಿ ನಿಲ್ವಮು
ಮ್ಮೊದರ್ದಿಯುಮೊಪ್ಪಿ ತೋಜತ ಕಳಭವ್ರಜನಿರ್ದಪದೊಂದು ತಾಣದೊಳ್ ೧೫೦

(ಜಗನ್ನಾಥವಿಜಯಂ ೧೬-೧೧)

ಮದಗಜಸಂಘಮುದ್ದಿಸಕೆ ಭೋಂಕನೆ ಲಂಘಿಸಿ ಚಂದ್ರಕಾಂತಕೂ
ಟದ ಕೆಲದಲ್ಲಿ ನಿಂದಿಭಮದಗ್ರತಸು ಪ್ರತಿಬಿಂಬಮುಂ ಮದೇ
ಭದ ತನುಗೆತ್ತು ಪಾಯ್ದು ತಿಳಿಯುಂ ನೃತವಾದುದಿಭದ್ವಿಷಂ ಬದರ್ದಂ
ಕಿಮದಿಭಮುಂತೆ ನಿರ್ಮಲರ ಸನ್ನಿಧಿ ಮಾಡುಗುಮಪಾಯನಾಶಮಂ ೧೫೧

(ಜಗನ್ನಾಥವಿಜಯಂ ೧೬-೨೯: ಸೂಕ್ತಿಸುಧಾರ್ಣವಂ ೩-೬೭)

ಕೊಳದೊಳ್ ಬಾಲಮೃಣಾಳಿನೀ ಕಬಳಮಂ ಕಿಟಿತ್ತುತ್ತ ಹಸ್ತಾಗ್ರದಿಂ
ತಿಳಿನೀರಂ ತೆಗೆದೊಯ್ದು ನೂಡಿಸಿ ಪರಿಮ್ಲಾನಾಸ್ಯದೊಳ್ ಶೀಕರಂ
ಗಳನಿಟ್ಟಾಡಿ ಪ್ರೊದಬ್ದು ಪಟ್ಟಿಗೊಡೆಯೆಂಬಂತೆತ್ತಿ ಪಂಕೇಜಿನೀ
ದಳಮಂ ಬಾಳಕರೇಣುವಂ ಬಯಕೆಯೊಳ್ ಕೊಂಡಾಡುತಿರ್ದತ್ತಿಭಂ ೧೫೨

(ಲೀಲಾವತಿ ೮-೪: ಸೂಕ್ತಿಸುಧಾರ್ಣವಂ ೩-೫೧)

---

[1]ಕೊಂಡು (ಅ) [2]ಯ್ದು ಡಿಪತ್ತುತ್ಪಲ್ಲವಂ (ಅ) [3]ದಂದೊಂ (ಅ) [4]ಸೋಂಕಿ ಸೊಳೊ (ಸ)

ಪಿರಿದುಂ ದಾನೋಘದೊಂದು ಸ್ಫಟಿಕಮಯಶಿಲಾಭ್ಯಂತರಾತ್ಮೀಯರೂಪಂ
ಕರಿಗೆತ್ತಿರ್ಪ್ಪುದು ಪಾಯಲ್ ಪುಡಿಯೆ ರದನಯುಗ್ಮಗಳಿಂ ತಂತೆ[1] ನೋಪ್ಪ
ತ್ತುರಿಗಣ್ಣಿಂ ಪುಚ್ಚಿ ತದ್ರೂಪಮನೆ ಕರಿಣಿಗೆತ್ತಾಡುತ್ತಾತ್ಮೀಯರೂಪಂ
ಕರಮುಂ ಮೇಳಿಕ್ಕಿ ನಿಂದಿರ್ದುದು ವಿಪುಳಕುಭೃತ್ಕಂಜದೊಳ್ ಕುಂಜರೇಂದ್ರಂ ೧೫೩
(ಸೂಕ್ತಿಸುಧಾರ್ಣವಂ ೩-೪೩)

ಬೆದಱಿ ಮನಂ ಪದಸ್ಥಿತಿಯೊಳೊಂದಿಭವಿರ್ದುದು ಮೂರ್ಧಪಿಂಡಮ
ಲ್ಲದು ಶಿಖರಸ್ಥಳಂ ನಿಟಿಲಮಲ್ಲದು ಪಾಸಱಿ ಕರ್ಣತಾಳಮ
ಲ್ಲದು ಚಳಪಕ್ಷಸಂಹತಿ ಮದಸ್ಥಳಮಲ್ಲದು[2] ನಿರ್ಝರಸ್ಥಳಂ[3]
ಮದಗಜಮಲ್ಲದಿಂದ್ರನೊಳಿದಿರ್ಚಿದ ನೀಳನಗೇಂದ್ರಬಿಂಬಮಂ ೧೫೪
(ಪಂಪರಾಮಾಯಣಂ ೧೦-೧೫೯; ಸೂಕ್ತಿಸುಧಾರ್ಣವಂ ೩-೪೭)

ಕುಡುತುಂ ಚಂದನಪಲ್ಲವೀಕಬಳಮಂ ತತ್ಪಲ್ಲವಾಸೀಕದಿಂ
ತೊಡೆಯುತ್ತುಂ ಮೊಗಮಂ ನಿಬಿಱ್ಪಿಡಿಯುತುಂ ನಿಂದಬ್ಬಿಜಂ ನೋಂಕುತುಂ
ಕಡೆಗಣ್ಣಿಂ ನಸುನೋಡುತುಂ ತುಡುಕುತುಂ ಚಿತ್ತೋದ್ಭವಸ್ಥಾನಮಂ
ಪಿಡಿಯುಂ ಕಾಮಪ್ರಮಂದವಾದ ನಪೆಯೊಳ್ ಕೂಡಿತ್ತು ಮತ್ತೇಂದಿಭಂ ೧೫೫
(ಸೂಕ್ತಿಸುಧಾರ್ಣವಂ ೩-೪೯)

ನೊರೆದೊಡವಾಯ್ತು ನಿರ್ಝರದ ನಾದಮುಮಂ ಮದಸೌರಭಕ್ಕೆ ತ
ತ್ತಾರಟತಟಾಂತದೊಳ್ ಸುಱಿವ ತುಂಬಿಯ ನಾದಮುಮಂ ಪುಳಿಂದಸೌಂ
ದರಿಯರ ಗೀತನಾದಮುಮನಾಲಿಸಿ ಸೋಲ್ತು ನಿಜಲ್ದ್ದಿಜಲ್ತು ಸುಂ
ದರಗಿರಿಕಂದರೋದರದೊಳಿರ್ದುದದೊಂದು ಮದಾಂಧಸಿಂಧುರಂ ೧೫೬
(ಸೂಕ್ತಿಸುಧಾರ್ಣವಂ ೩-೫೨)

ಕೊಳದೊಳಗೊಂದಿ ನಿಂದು ಬಸಪ್ರಾಪ್ರಡಿಯುಂ ತೆಗೆದೊಟ್ಟಿಕೊಂಡು ತ
ನ್ನಳಿನದುಕೂಲಸಾಂತು ನೆಬಿಲಾಪಿಡಿಯಲ್ಲಿ ಮಾಲಿಂಗಿ ಪಲ್ಲಸು
ಬುಗಳಿಸಿದ ಸಲ್ಲೆಯಿಂದೆ ಪಿಡಿಯುಂ ಪಿಡಿಪಲ್ಲಿಯ ಕೂಡಿ ನಿಷ್ಟಲುಂ
ಸುಳಿಸುಳಿಗಳ್ಳ್ದಿ ದಾನಮಯನಾಗಿರುತಿರ್ದುದನೊಂದನೇಕಪಂ ೧೫೭

ಕರಿ ಬರಿ ಕಂಪ್ಸ ನೀಡದೆ ಕರೇಣುವಿರಲ್ಕದು ಕೋಪವೆಂದು ಪ್ರೊ
ಧ್ವರಿ ಕೊರೆಯದ್ದಿತ್ತ ತಳಿರಂ ತೆಗೆದಿಟ್ಟು ಸರಕ್ಕನೆಯ್ದಲಾ
ಕರಿ ಬಱಿಸಂದು ಮುಂದುವರಿದಪ್ಪಿದಿರಲ್ ಬಿಸಿನೋಡಿ ನೋಡದಂ
ತಿರೆ ಮುಖಕುಂಭ ಪೇಜಕಕೆ ಕೈಯಿಡಲಾ ವರಸಸ್ಯನಾಯ್ತು ಹೋ(?) ೧೫೮

---

[1] ಸಾಂಧ (ಸೂ) [2] ನೋಡುತ್ತಿರ (ಸೂ) [3] ಸೃಷ್ಟಿ ಧಾರೆ ಸಂ (ಸ)

ಬರಿಗಯ್ವುತ್ತಿರಪೆಬ್ಬಿಸುತ್ತೆಡಿಗಳಂ ನೀವುತ್ತೆ ಸನ್ಮಾರ್ಗದೊಳ್
ಬರಿಸುತ್ತುಂ ಕೊಳನಲ್ಲಿಗೊಯ್ದು ತನುವಂ ನೀರಿಂದೆ ತಾನುರ್ದುತಂ
ಪರಪಣ್ಗೊಳ್ಪುದೆ ಮೇವನಿಕ್ಕಿ ಪನಸ್ಯಂದಾರಾಮದಾಛಾಯೆಯೊಳ್
ಪೊರೆಯುತ್ತಿರ್ದಪುದಾ ಜರದ್ಗಜಮನಾ ಪೆಣ್ಣಾನೆ ತಾತ್ಪರ್ಯದಿಂ ೧೫೯

ಪಸಿದೊಡೆ ಪಲ್ಲಕೀಕಿಸಲಯಂಗಳನೊಯ್ಯನೆ ನೀಡಿ ಮೆಯ್ಯ ತೀನ್
ಮುಸಿದೊಡೆ ಕೋಡೊಳೆಟ್ಟೊರಸಿ ನೀರ್ಗೆಳಸಿರ್ದೊಡೆ ತಂದು ನೀರಸೂ
ಡಿಸಿ ನಸೆಯಿಟ್ಟಿಯಾದೊಡಗೂಡಿ ಬಟಲ್ದೊಡೆ ಕರ್ಣತಾಳಮಂ
ಪಸರಿಸಿ ತನ್ನ ಕೈಪಿಡಿಯವೋಲ್ ಪಿಡಿಯಂ ಪಿಡಿದಿರ್ದುದೊಂದಿಭಂ ೧೬೦
(ಚಂದ್ರಪ್ರಭಪುರಾಣಂ ೫-೬೪; ಸೂಕ್ತಿಸುಧಾರ್ಣವಂ ೩-೫೧)

## ಸಿಂಹವರ್ಣನಂ

ಕೆದಱಿದ ಕೇಸರಂ ಕುಸಿದು ಪಿಂದೊಗೆದೊಡ್ಡಿದ ಕಂಧರೋಱು ಕ
ಟ್ಟಿದ ಬಸುರೆತ್ತಿದೇಕ ಚರಣಂ ತೆಱೆದಾನನವಾಳಿ ಸುತ್ತಿಸು
ತ್ತಿದ ಕುಡಿವಾಲವೊಪ್ಪೆ ಕಿವಿಗಳ್ ಕಿಱುವುತ್ತಿರೆ ಪಾಯ್ದು ದೇಸಕೂ
ಟದ ಕಱುಪಿಟ್ಟ ಕೇಸರಿಯೊಲಿರ್ದುದು ಕೇಸರಿ ಕುಂಭಿಕುಂಭದೊಳ್ ೧೬೧
(ಲೀಲಾವತಿ ೮-೨೧ ಸೂಕ್ತಿಸುಧಾರ್ಣವಂ ೩-೬೨)

ಕೆದದ ನಖಂಗಳಿಂದುಗಿದು ಕೋಪದಿ ಸೀಳ್ದು ಸಿಱುಂಬುಳಾಡಿ ಕುಂ
ಜರಗುರುಕುಂಭಮಂಡಲವಿಸಲ್ಲುಗುತಂದು ತುಳುಂಕಿಕೊಂಡು ನೆ
ತ್ತರ ಪೊಸಲಿಟ್ಟೆಯೊಳ್ ಕೆದಱು ಕಂಗೆಸೆದಿರ್ದುದು ರಕ್ತಸಿಕ್ತ ಕೇ
ಸರಮೆಸೆದತ್ತು ಕೇಸರಿಯ ಬೀರದ ಬಿತ್ತುಗಳಂತೆ ಮುತ್ತುಗಳ್ ೧೬೨

ಉಗುವೆಂಟುಂ ಸುದತ್ತಿಕೆಟ್ಟಿ [1]ವಿಸರಚ್ಚೀತ್ಕಾರ ಘೀಮಸ್ವನಂ
ಮಿಗೆ ಬಾ[2]ಯೊಳ್ ಬರಿಕಯ್ಯನಿಟ್ಟು ಸುಗಿವನ್ನಂ ಗರ್ಜಿಸುತ್ತೆಯ್ದಿ ಮು
ತ್ತುಗಳಿತ್ತುಂ ಬಿದುವಿಂ ಸ್ಫುರತ್ಪ್ರರಸಬಿಂದುಶ್ರೇಣಿಯೊಲ್ ಸೂಸೆ ದಂ
ತಿಗಳಂ ಸೀಳ್ದು ಸಿಱುಂಬುಳಾಡಿದುದದೊಂದುತ್ಕಂಠಕಂಠೀರವಂ ೧೬೩
(ಜಗನ್ನಾಥವಿಜಯಂ ೧೬-೧೨; ಸೂಕ್ತಿಸುಧಾರ್ಣವಂ ೩-೬೮)

---

[1] ವಿಲಸ (ಸ) [2] ಯಂಬಿಡೆ (ಸೂ)

# ಪಂದಿಯ ವರ್ಣನಂ

ಮಿಱುಗುವ ದಾಡೆಯಿಂದಣೆದು ಪೆರ್ದರಿಯಂ ಕೆರದಿಂದಮೆತ್ತುತುಂ
ತುಱುತುಱು ತಿಂಬ ಕಂದಮು[1]ನಿ[1]ತ್ತರಗೊಂಡು ಮಹಾಮಹೀಜದೊಳ್
ತಱಿತಱನಾಗಿ ಮಾಱುಱುಸುತುಂ ಮಲೆಯುತ್ತೊಲೆಯುತ್ತಮಲ್ಲಿ ಕೈ
ಪಱಿದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು ಸೂಕರಂ ೧೬೪
(ಶೂದ್ರಕಂ—ಕಾವ್ಯಸಾರಂ ೧೧೧೨; ಸೂಕ್ತಿಸುಧಾರ್ಣವಂ ೩-೩೩)

ಉರಿ ತೀಡುತ್ತಿರ್ಪ ಕಣ್ಣಿಂಪೆಳೆಪೆಱೆಯೊಗೆದಂತಿರ್ಪ ಕೋರ್ದಾಡೆ ಮೆಯ್ವೆ
ತ್ತಿರೆ ಸಂಧ್ಯಾಕಾಲದಾಕಾರಮನನುಕರಿಸುತ್ತಿರ್ಪ ತನ್ನೊಂದು ಕಾಯಂ
ದರಿಯಂ ಕೋಡೆತ್ತಿ ಕೋಡೊಳ್ ತೊಡರ್ದ ಬಿಡದೆ ಪೊಕ್ಕಿರ್ದ ಬೆನ್ನಿಂ ದಿಟಂ ದಿ
ಕ್ಕರಿ ಕೈಬಿಟ್ಟಿರ್ದುದೆಂಬಂತೆಸೆದುದಡವಿಯೊಳ್ ದೀರ್ಘದೇಹಂ ವರಾಹಂ ೧೬೫

# ಭೇರುಂಡವರ್ಣನಂ

ಮರದಿಂದಾ ಸರ್ಪನಂ ಹಸ್ತಿಯೆ ಪಿಡುಗುಂ ಹಸ್ತಿಯಂ ಸರ್ಪನಂ ಕೇ
ಸರಿ ಕೋಪಾಟೋಪದಿಂ ಪಾಯ್ದುರದೆ ಪಿಡುಗುಮಾ ಹಸ್ತಿಯಂ ಸರ್ಪನಂ ಕೇ
ಸರಿಯಂ ಸಿಂಹಾರಿಯೆಂಟುಂ ಪದದಲಿಱುಗುಮಾ ಹಸ್ತಿಯಂ ಸರ್ಪನಂ ಕೇ
ಸರಿಯಂ ಸಿಂಹಾರಿಯಂ ಪಕ್ಕದೊಳಿಱುಕಿಯೆ ಪಾಱುತ್ತು ಭೇರುಂಡಮಾಗಳ್ ೧೬೬

ಮರಿಯಂ ನುಂಗಿತ್ತು ಪೆರ್ಬಾವಜಗರಮನಿಭಂ ಕುತ್ತಿ ಸುತ್ತಿತ್ತು ಕೋಡೊಳ್
ಕರಿಯಂ ಪೊಯ್ದತ್ತು ಸಿಂಗಂ ಪಿಡಿದುದು ಶರಭಂ ಸಿಂಗಮಂ ಕೋಪದಿಂದಂ
ಮರಿ ಪೆರ್ಬಾವಾನೆ ಸಿಂಗಂ ಶರಭಮಿನಿತುಮಂ ಕರ್ಚಿ ಭೇರುಂಡನಂದಂ
ಬರದೊಳ್ ಪಾಱುತ್ತಿರಲ್ಕಚ್ಚರಿವಡೆ ತಲೆಯಂ ತೂಗಿದಂ ವಿಕ್ರಮಾಂಕಂ ೧೬೭
(ಸೂಕ್ತಿಸುಧಾರ್ಣವಂ ೩-೭೭)

ತುಂಡಯುಗಂಗಳಿಂ ನೆಗಪಿಕೊಂಡೆರಡಂ [2]ನೆಱೆ[2] ಪಾಱುವೋಪ ಭೇ
ರುಂಡನ ತುಂಡದೊಂದು ಶರಭಂ ಜಗುಳ್ದೊಯ್ಯನೆ ಬೀ[3]ಱುವನ್ನೆಗಂ[3]
ಚಂಡಿಸಿ ಪಾಯಲೊಂದಿಱಿಯಲೊಂದೆ[4]ಳೆಯು[4]ತ್ತಿರೆ ವಕ್ತ್ರವಾ ನಭೋ
ಮಂಡಲದಲ್ಲಿ ಸಿಂದುರನಭೀಕ್ಷಿಸಿದಂ ಕಲಿಸೋಯಿಬಲ್ಲಹಂ ೧೬೮
(ಲೀಲಾವತಿ ೮-೨೭; ಸೂಕ್ತಿಸುಧಾರ್ಣವಂ ೩-೭೮)

---

[1] ನೊ(ಸೂ) [2] ವಿಂಗೆ(ಸೂ) [3] ಱಿ ವೇಗದಿಂ(ಸೂ) [4] ಜಿಲು(ಸೂ)

## ಪುಲಿಯ ವರ್ಣನಂ

ಪೊೞೆಯೊಳಡಂಗಿ ಕುಕ್ಕುಱಿಸಿ ಮುಂದಣ ಕಾಲ್ಗಳ ನೀಡಿ ಮೇಲೆ ತ
ತ್ತಲೆಯನಿಡುತ್ತ ಜೃಂಭಿಸುವ ಮುಕ್ಷ್ಣಕಮುಂ ಕೊನೆವಾಲದಗ್ರದಿಂ
ತೊಲಗಿಸಿ ವಕ್ತ್ರಮುಂ ತಡವುತಂತರದಿಂ ಚರಿಸುತ್ತಮೊಪ್ಪುವೆ
ಕ್ಕಲಗಳ ನೋಡುತಂ ಪುಲಿಯಮೊಂದಿರುತಿರ್ದುದನಂತರೌದ್ರದಿಂ ೧೬೯

ಪುಲ್ಲೆಯ ಹಿಂಡನೊಂದು ಪುಲಿ ಕುತ್ತಱಿತೂಳೊಯ್ಯನೆ ಕಂಡು ಹಜ್ಜೆಯಂ
ಮೆಲ್ಲನೆ ಮೆಟ್ಟಿ ಹುಲ್ಲೊಳೆ ಹುದುಂಗಿ ಹುದುಂಗಿಯುವಕ್ಕೆ ಲಂಘಿಸು
ತ್ತಲ್ಲಣದಿಂ ಕುಸುಂಗಿ ನೆಱೆ ನಿಟ್ಟಿಸಿ ನೀಳ್ದ ಕೊರಳ್ಗೆ ಪಾಯ್ದು ತ
ಳ್ತುಳ್ಕಿದೆನೆತ್ತರಂ ಪಡೆದು ಪೀರ್ದೆಳೆದಿಕ್ಕಿದುದಿಕ್ಕೆದಾಣದೊಳ್ ೧೭೦

ಮೆಲ್ಲನೆ ನೀಡಿ ಮೆಟ್ಟುನಡಿ ನಿಶ್ಚಲವಾಲಮುರಲ್ದ ಕರ್ಣಮು
ಲ್ಲಲ್ಲಿಗೆ ನಿಂದು ನಿಳ್ಕಿ ನಸು ನೋಟ್ಪಿ ಪಿಶಂಗವಿಲೋಚನಂಗಳೊ
ತ್ತಿಲ್ಲದ ತಾಣದೊಳ್ ನೆಲಕೆ ಪರ್ಬುವ ಗಾತ್ರಮುಗುರ್ವನೀಯೆ ಪೆ
ರ್ಬುಲ್ಲೆಗೆ ಬಂದು ಸಾರ್ದುದು ತರಕ್ಷು ಮೃಗಾವಳಿಯಿಕ್ಕೆದಾಣಮಂ ೧೭೧
(ಸೂಕ್ತಿಸುಧಾರ್ಣವಂ ೩-೧೫೩)

ಚಲವಾಲಂ ಸ್ಥೂಲಗಾತ್ರಂ [1]ವಿನಿಭೃತವದನಾಭೀಳರಕ್ತೇಕ್ಷಣಂ ಪೆ
ರ್ಬುಲಿ ತಾಮುರ್ಬಟ್ಟಾದುದಂ ಸಂಕಟದ ಸರಣಿಯೊಳ್ ಕಂಡು ಬಲ್ವಂದಿಯಂ ಪಾ
ಯಲೊಡಂ ಸ್ಕಂಧಾ[2]ಗ್ರದೊಳ್ ಪಲ್ಕಡಿದೊಡಮುಗುರೊಳ್[3] ಕೂರುಗುರ್ಗೊಯ್ಯೆ ನೊಂದಾ
ಪುಲಿಯಂ ಪೋಟ್ಬಿಂತೆ ಪೊಯ್ದೆತ್ತಿದುದು ಸರಿಸದಿಂ ಕ್ರೋಡನಾಂತೊಂದು ಕೋಡೊಳ್
(ಸೂಕ್ತಿಸುಧಾರ್ಣವಂ ೩-೩೨)

ತೀಡುವ ಗಾಳಿಯಿಂದಱಿದು ಪ್ಯೆಸೊವಡಂ ಮೊಗಮೆತ್ತಿ ಸುತ್ತಲುಂ
ನೋಡೆ ಕಱುಂಕೆ ಸೂಸೆ ಕಡೆವಾಯ್ಗಳೊಳಾಲಿಸಿ ಕಾಲಸೊಪ್ಪಳಂ
ಕೂಡೆ ಪೊದಟ್ಟಿ ಪೊಣ್ಮಿದ ಭಯಾತುರದಿಂದಿರ್ದೆ[3]ಗೂಡಿವಾಯ್ದು ಕೆ
ಟ್ಟೋಡಲೊಡ[4]ರ್ಚಲಾ ವಿಪಿನದೊಳಾ ಪುಲಿ ಪಾಯ್ದುದು ಪುಲ್ಲೆನಿಂದಿನೊಳ್
(ಸೂಕ್ತಿಸುಧಾರ್ಣವಂ ೩-೧೫೪)

---

[1]ವಿಕೃತವದನಾಭೀಳ(ಸೂ) [2]ದಿಂಪಂ ಕಡಿದೊಡಮುಗಿಗಳೊಳ್(ಸೂ) [3][illegible] ಗಂಡುಗೆ(ಸೂ) [4]ಚರ್ಮ ಪೆಪ್ಪಳಿಪಿನಂ(ಸೂ)

ಮರಪಡಿಯಲ್ಲಿ ಪೋಪ ಕಳಭಕ್ಕೆ ಶಿಲಾಗ್ರದೊಳಿರ್ದು ಲಂಘಿಪಾ
ವರಹರಿ ತನ್ನಶಿರೋರುಹದ ಶಾಖೆಯೆನಿಸಲ್ವಯಲಲ್ಲಿ ತಾಗಿ ಬೀ
ಟ್ಟಿರೆ ಶರಭಂ ಕಡಂಗಿ ಪೊಡೆದೆತ್ತುತಲೊಯ್ವುದು ಚಿತ್ರವಕ್ಕಟಾ
ಧರೆಯೊಳೆ ಮಾಡಿದಾ ಶಿಸುವಧಂ ಮಿಗೆ ಕೈಯೊಡೆ ತೋಱದಿರ್ಕುಮೇ ೧೭೪

ಪ್ರಬಿಗೆಱದಾಡೆ ನಿಚ್ಚನುಪಮೊಂದೆಡೆಯಲ್ಲಿರೆ ಕಂಡು ರೋಷದಿಂ
ಘಟಿಲನೆ ತಾಗಲೆಂದು ಪೆಡೆದಿರ್ಪಿನವಾವುದನಿಕ್ಕಲೆಂದು ಸಂ
ದೊಳೆ ಹರಿ ಪಾಱಿ ಕೂಡೆ ತಿವಿದಿರ್ದುವು ತದ್ಗಜಶೃಂಗದೇಱುನೊಳ್
ಬಳಿಕರಿ ಬೀೞ್ದುದಾ ವಿಷಮಸಂಧಿಯೊಳಾವನಸೆಯ್ದೆ ಬಾಳ್ವನೋ ೧೭೫

ಹರಿ ಪೊಱಪ್ಪೊಲ್ ಬಯಲಲ್ಲಿ ಬಿರ್ದಿಭಕೆ ಪಂದಲ್ಗಟ್ಟಿ ಕಾಸಾರವಂ
ಕರದಿಂ ತೋಡಿ ಸುರಕ್ತವಂ ತೊಳೆವುತೀಱಂ ಕಂಡು ರಂಭಾಚ್ಛದಂ
ಸ್ಥಿರಮಪ್ಪಂತಱಿ ಕಟ್ಟಿ ಮೆಲ್ಲನುಸುರಾಡಲ್ ನೀರನೂಡಿಚ್ಚೈವೆ
ತ್ತುರು ಪರ್ಣೌಘಮನಿಕ್ಕಿ ಮೇಹುಗೊಳಲಾ ಪೆಣ್ಣಾನೆ ಕಾಯ್ತಾಣ್ಮನಂ ೧೭೬

ಹರಿ ಕರಿಯುಂ ತಗುಳ್ದು ಬರೆ ಸೂಕರನಾ ಕರಿ[೧]ಗಳ್ಕಿ[೧] ಪೊಕ್ಕು ಬಿ
ರ್ಪರ ಬಿಱುವಂತು ಪೆರ್ಬಿದಿರನೆತ್ತಿದೊಡಂತದು ತಾಗೆ ಮೇಘಮಂ
ಕರಿ ಮುಱುಪೊತ್ತೆ ಸೂಕರನನಾ ಕರಿಯುಂ ಹರಿ ಪೆಟ್ಟೆ ನಿಳ್ದೊಡಂ
ಸುರಿವುವು ಮೇಘಜೇಭಜ ವರಾಹಜ ವೇಣುಜ ಮೌಕ್ತಿಕವ್ರಜಂ ೧೭೭
(ಸೂಕ್ತಿಸುಧಾರ್ಣವಂ ೩-೭೪)

ಬಳೆವ ಸಿಖಂಡವಳ್ಳಿಱುಯಿ ಕೇಸರಿ ಸೀಳೆ ಸಮೀರಪಾತವ
ಗ್ಗಳಿಸೆ ಪುಳಿಂದರಾರ್ದಿಸೆ ಸಿಡಿಲ್ದುಗಿತಂಪವು ಪುಷ್ಪಸಾಯಕಂ
ಗಳ ಪೊಗರ್ವಟ್ಟ ಚಂದ್ರಿಕೆಯ ಬಿತ್ತೆಳಮಿಂಚಿನ ತತ್ತಿ ಕಾರಕಂ
ಗಳ ಮುಱುಯೆಂಬ ವಾರಿಧರ ವಾರಣ ವೇಣು ವರಾಹ ಮೌಕ್ತಿಕಂ ೧೭೮
(ಜಗನ್ನಾಥವಿಜಯಂ ೧೬-೨೮)

ಅರುಣಾಕ್ಷಂ ರೌದ್ರರೂಪಂ ಘುರುಘುರುತಮುಖಶ್ರೇಣಿಶೃಂಗಂ ಶಿಲಾನಿ
ಷ್ಠುರದೇಹಂ ದೀರ್ಘವಾಲಂ ಕಠಿಣ ನಖಪುಟಂ ರೇಣುಭಾಳಸ್ಥಳಂ ಕ
ರ್ಬುರನಾದಂ ವೃತ್ತಕಾರಂ ಕುಸುಮಧವಳವುಂ ತೋಱಿ ಫೇನಂ ಕರಂ ಭೀ
ಕರಮಾಗಲ್ತಿಪ್ಪಗುಂ ಕಾನನದೊಳಿಭಸಮಾನಂ ಲುಲಾಯಪ್ರತಾನಂ ೧೭೯

---

[೧] ಗಂಜಿ(ಸೂ)

ಮುರಿದ ಕೊರಲ್ ನಿಮಿರ್ದ ಕಿವಿ ಕೆತ್ತುವ ಪೆಯರ್ ಕಟವಾಯಪುಲ್ಲುಗಳ್
ತರಳವಿಲೋಚನಂ ಸೊವಡನಾಲಿಸಿ ಬೆಚ್ಚಿ ಬೆದರ್ತು ಬೇಗದಿಂ
ಸರಳಿಸಿ ನಿಂದು ನಿಂದು ಪೆಱಗಂ ನಡೆನೋೞ್ಪಿತಿಭೀತಿ ತಪ್ಪೊಳೆ
ಚ್ಚರಿವಡೆದಿರ್ಪ ಪುಲ್ಲೆಗಳಗೊಂದಣಮೊಪ್ಪಿದುವಾ ವನಾಂತದೊಳ್ ೧೮೦

ಕತ್ತಲಿಸಿರ್ಪ ಪೇರಡವಿಯೊಳ್ ಸಲೆ ಬೆಳ್ಳಿಗ ಕೋಟ್ಮೃಗಂಗಳಂ
ಮಿತ್ತುವಿನಂದದಿಂ ತವಿಸಿ ಪನ್ನಗಲೋಕದ ಜೀವರಾಶಿಗಳ್
ಪೊತ್ತುವ ಮಾಟಿಕ್ಕೆಯಿಂ ಕಿಡಿಗಳಿಂದೊಗೆತರ್ಪರೊ ಭಿಲ್ಲರೆಂಬಿನಂ
ಪುತ್ತನಗುಳ್ದು ಪೆರ್ಗರಡಿಗಳ್ ಪೊಗವಿಟ್ಟಿಸೆಗಂ ವನಾಂತದೊಳ್ ೧೮೧

ಮರೆಯುನೆಱಿಗೊಳ್ವ ಪಾವಂ
ಬರಿಕಯ್ಯೊಳ್ ಸುತ್ತಿಪಿಡಿವ ಹಸ್ತಿಯ ಸೀಳ್ಪಾ
ಕರಿರಿಪುವನೊಯ್ವ ಶರಭನ
ಶಿರಮಂ ಭೇರುಂಡನೆತ್ತಿ ಪಾಱುದುದಾಗಳ್ ೧೮೨

ನೀಲದ ಕೋಡುಂಗಲ್ಗಳ
ನೀಲದ್ಯುತಿ ಮುಸು[1]ಱಿ ಮುಸಳಿಸುತೆ ಪೋಗಣ[1] ತಾ
ರಾಳಿಯ ಹಾದಿಯ ಬಟ್ಟೆಗೆ
ಕ್ಷೈಲಂ ಬರೆ ತೊಲಗಿದಂತೆ ಕೆಲದೊಳ್ ತೋರ್ಕುಂ ೧೮೩
(ಲೀಲಾವತಿ ೯–೩೪ ಸೂಕ್ತಿಸುಧಾರ್ಣವಂ, ೩–೨೦)

ಪುದಿದಡವಿಯ ಕತ್ತಲೆ ಶೂ
ಲದೊಳಿಕ್ಕಿದೊಡಿಱಿದು ಸೋರ್ವ ತಿಂಗಳ ಪೆಣಸಂ
ದದೊಳಿರ್ದುದು ಕೆಟಿಗೊಕ್ಕ
ಬಿಱಿದ ನೆಯ್ಯಿಂ ಜೇನಪುಟ್ಟಿ ಪೆರ್ಮರಗೊಂಬೊಳ್[2] ೧೮೪
(ಲೀಲಾವತಿ ೬–೩೧; ಸೂಕ್ತಿಸುಧಾರ್ಣವಂ ೩–೮೩)

ಬೆಳಗಂ ಪಸರಿಸುವರುಣಾ
ಚಲದೊಳ್ ಮರೆ ನಿಲೆ ದವಾಗ್ನಿ ಮುಸುಕಿದುದದನೆಂ
ದೆಳಱಿ ಮುಗನತ್ತಲಸುವಂ
ಕಳೆದುದು ಸುವಿವೇಕವುಂಟೆ ಮೋಹಾತುರರೊಳ್ ೧೮೫

---

[1] ಱಿ ಮುಸುಳೆ ಪೋಗಣ ಮೀಱೆ (ಸೂ) [2] ಗಾಪೊಳ್ (ಸೂ)

ಮರೆಯನೆಱೆಗೊಂಡು ಮಱೆ ಪ
ಟ್ಟಿರೆಯಿರೆ ಕಾದುರಿವ ಸೂರ್ಯಕಾಂತದಿಸಿರದೆಚ್ಚ
ತ್ತಿರದೋಡಿದುದಜಗರವ
ಸ್ಥಿರಗುಣವುಳ್ಳರಿಗೆ ಆತ್ಮನೇಂ ನಿಲ್ದಪುದೇ ೧೮೬

ಒಡವಾರದೆ ಕೈದುಡುಕಲ್
ಸಿಡಿದೋಡುತೆ ಸೋವನಿಕ್ಕಲುಗುಳುತೆ ಪದದೊಳ್
ಕಡೆಯೊಳ್ ನಿಲುತುಂ ಕಳಭಂ
ಕಡುಮುಳಿದುದು ಪೊಲೆಯನೀಯದೆಯ್ದುವ ಪಿಡಿಯೊಳ್ ೧೮೭

ಒಕ್ಕಮದವುಂಬ ತುಂಬಿಯ
ನಕ್ಕಟ ಸಸಿನಿರದೆ ಪಿಡಿಯೆ ಪುಷ್ಕರದೊಳಗಡು
ಪೊಕ್ಕು ಮೊಱೆಯಲ್ಕೆ ಗನ್ನೆಗ
ನಕ್ಕಾಡುವ ಕಳಭವಿಭಕದೇಂ ಸಂತಸಮೋ ೧೮೮

ಹರನ ಮುರಹರನ ವಾಣೀ
ವರನ ಸುಧಾಕರನನೆಸೆವ ಸತ್ಕುಲದಿಂ ದಿನ
ಕರನ ವಾಸವನ ಬೆಸಗೊಳೆ
ಲಿರೆ ತನ್ನೊಳಗವ್ಯದಿಂದವೆಸೆದುದರಣ್ಯಂ ೧೮೯

ಕರಿಯುಂ ಕಂಠೀರವನುಂ
ಹರಿಣನು ಶಾರ್ದೂಲಿಯು ಮಹಿಷದರ್ದುರುಗಳು ಮುಂ
ಗುರಿಯುಂ ಖಗಮುಂ ಸಾಳ್ವಗ
ಳಿರಲಾಜ್ಞೆಯಲಿಂಬುಗೊಂಡನಾ ವನರಾಜಂ ೧೯೦

ಎಲ್ಲಾ ಜೀವದೊಳಂ ದಯ
ಮುಳ್ಳುದೆ ಸದ್ಧರ್ಮಮೆಂಬ ಶಾಸ್ತ್ರದ ಪವಣಂ
ಬಲ್ಲುದರಿ (?) ಕಾನನೋರ್ವಿಪ
ನಲ್ಲಿ ಚರಾಚರಾಮನೆಯ್ದೆ ರಕ್ಷಿಸುತಿರ್ಪಂ ೧೯೧

ಬಲಿಮುಖನ ಬಲದಿ ಸೀತಾ
ಲಲನೆಯನೊಯ್ದಸುರನಸುವ ಮುಸುಳಿಸಿ ಮತ್ತಾ
ಬಲಮುಂ ತಾಳದೆ ರಘುಜಂ
ತೊಲಗಲು ಕಾನನಮಹೀಶ ಸಲಹಿದನನವರಂ ೧೯೨

ಅದು ಸರಿವ ದಱುವಿನಾಗರ
ವದು ಭೂಜವ್ರಜವ ತಾಣವದು ಮೃಗಸಂತಾ
ನದ ನೆಲೆಯುದು ಶಬರಾನೀ
ಕದ ಜನ್ಮಸ್ಥಳವೆನಿಪ್ಪುದೊಪ್ಪುವರಣ್ಯಂ ೧೯೩

ಎಳಸಿ ಗಿರಿಯುಟ್ಟ ಪಟ್ಟಾ
ವಳಿಯೆನಿಕುಂ ತದ್ವನಂ ಲತಾವಳಿ ಪತ್ರಾ
ವಳಿ ಪುಷ್ಪಾವಳಿ ಹಂಸಾ
ವಳಿ ಮೃಗಾವಳಿಯ ಪಂಕ್ತಿಗಳಿಂದಂ ೧೯೪

ಹರನಂಗದಂತೆ ಮೆಱೆದುದು
ಗಿರಿಕರ್ಣಿಕೆಯಿರವಿನಿಂದಲಿರಲಾ ವಿಪಿನಂ
ಹರಿಯುರದ ತೆಱದಿ ಮೆಱೆದುದು
ಪರಿಭಾವಿಸೆ ವಿಷ್ಣುಕಾಂತೆಯಿರಲಾ ವಿಪಿನಂ ೧೯೫

ಹೊಸರೀತಿಯುಸುರ್ವ ಕವಿಗಂ
ಹಸಿತೃಷೆಯಿಲ್ಲದವನೆಯ್ದೆ ತಂಡುಲವಡುವಾ
ಸಸಿಮುಖಿಯ ಪೋಲ್ತು ಕಾನನ
ಮೆಸೆದುದು ಬಗೆ ತೇಗು ಬಾಗೆ ಭೂಮೀರುಹದಿಂ ೧೯೬

ತರತರದಿಂದೆ ತೋರ್ಪ ಸರಿವಿಂ ದರಿವಿಂ ಪರಿವೊಳ್ಝರಂಗಳಿಂ
ತರುಕುಳದಿಂ ಲತಾವಿಸರದಿಂ ಮಡುವಿಂ ಗಿಡುವಿಂ ಗುಹಾಳಿಯಿಂ
ಸರಸಿಗಳಿಂದೆ ಪೆರ್ಮೞೆಗಳಿಂ ಕೆಱೆಯಿಂ ತೊಱೆಯಿಂ ನದಂಗಳಿಂ
ಪರಿವೊನಲಿಂ ಬಿಲಂಗಳಿನರಣ್ಯದಿನಲ್ಲಿಯ ತಪ್ಪಲೊಪ್ಪುಗುಂ ೧೯೭

## ಶಬರರ ವರ್ಣನಂ

ಅದಱೊಳ್ ಭೀಕರಕಾಲಕಿಂಕರನಿಭಂ ಭೀಷ್ಮಾನನಂ ರೌದ್ರ ಸಂ
ಮದನೇತ್ರಂ ಘನಕೃಷ್ಣಕಾಯಕಠಿನಂ ಕಾಠಿನ್ಯಧರ್ಮಂ ಭಯ
ಪ್ರದ ಬಾಣಾವಳಿ ನಿಷ್ಠುರಧ್ವನಿಜಯಂ ನಾನಾಮೃಗಾಯುಷ್ಯದಾ
ಪದಲಂಕಾರದಿನೊ[1]ಪ್ಪೆ[1] ಲುಬ್ಧಕಕುಲಂ ತೀವಿರ್ದುದಂತಾವಗಂ ೧೯೮

(ಗಿರಿಜಾಕಲ್ಯಾಣಂ ೧–೭೮)

---

[1]ಪ್ಪಿ (ಅ)

ಬಡಿಕೋಲ್ ಕಿಗ್ಗಟ್ಟ ಹಾಸಂ ಶುನಕವಿತತಿ ಹೇರಿಟ್ಟೆ ಕೂರಂಬುಗಳ್ ಕೈ
ಪ್ಪೊಡೆ ಬಿಲ್ ಪುಲ್ದಂಡೆ ಜಿಳ್ಳಾರ್ಪಟ ತೆರೆಬಲೆಗಳ್ ಸಾಳುವಂ ಕೂಳೆಗಾಳಂ
ಗಿಡುಗಂ ಬಲ್ಪಂಡಿಯೊಳ್ ದೀಹದಪುಲಿ ನಿಶಿತಾಸ್ತ್ರಂಗಳುಗ್ರತ್ವಮುಂ ಸಂ
ಗಡಿಸು[೧]ತ್ರಿಂತೊ[೧]ಪ್ಪೆ ವಿಂಧ್ಯಾಟವಿಗೆ ನಡೆದುವ್ಯತ್ಕಿರಾತಪ್ರಜಾತಂ ೧೯೯
(ಗಿರಿಜಾಕಲ್ಯಾಣಂ ೧–೭೯)

ಇದು ವನಕಾಳಮೇಘಚಯಮಲ್ಲಿದು ಘೋರಮಹಾಂಧಕಾರಮ
ಲ್ಲಿದು ವಿಚಳತ್ತಮಾಳವನಮಲ್ಲಿದನಂತಕೃತಾಂತಸೈನ್ಯಮ
ಲ್ಲಿದು ಕಲಿಕಾಲಬಂಧುಕುಳಮಲ್ಲಿದು ದುರ್ಧರದಾನವೌಘಮೆಂ
ಬುದುಮೆನಿಸಿರ್ದುದಲ್ಲಿ ಬರುತಿರ್ದುದನಂತಕಿರಾತಸಂಕಳಂ ೨೦೦

ಮೆಟ್ಟಿನ ಕೆರ್ಪು ಪೆರ್ಬಿದಿರಬಿಲ್ ಕುಡಿಮೀಸೆಯುಮೊಪ್ಪೆ ಕಾಗಿನೊಳ್
ಪಟ್ಟೆಯು ಕುಪ್ಪಸಂ ತಲೆಗೆ ಸುತ್ತಿದ ನೇಣ್ ಪೆಱಗೆಯ್ದಿಸಿರ್ಪ ನಾಯ್
ಕಟ್ಟಿದ ಕಲ್ಲಿ ಕೆಂಗಱಯ ಕೋಲ್ ಗುಱುಗುಂಜಿಯ ದಂಡೆಯೊಪ್ಪಲು
ದಿಟ್ಟಿಗೆ ಚೆಲ್ವನಾಗಿ ಸುಱಿದಂ ವನದೊಳ್ ಶಬರಾಧಿನಾಯಕಂ ೨೦೧

ಉಡೆದೊವಲುಟ್ಟು ಕಾಳಿಕೆಯ ಕುಪ್ಪಸವಿಟ್ಟು ಪವಂಗಳಲ್ಲಿ ಮೆ
ಲ್ಲಡಿಗಳ ಸಾರ್ಚಿಕೊಂಡು ಹದವಿಲ್ಲು ಸರಳ್ಗಳನುಗ್ರನಾಯ್ಗಳಂ
ಬಡಿಗೆಯು ಕೋಲ್ಗಳಂ ಬಲೆಯ ದೀಹದ ಹಕ್ಕಿಯ ಕೂರಿತಿಟ್ಟೆಯಂ
ಪಿಡಿದುವರಣ್ಯದೊಳ್ ಚರಿಸುತಿರ್ದನಪೂರ್ವ ಪುಳಿಂದನಾಯಕಂ ೨೦೨

ಎಕ್ಕಲನ ಭಯವ ಮನದೊಳ್
ಲೆಕ್ಕಿಸದ ಉಲಾಯ ಪುಂಡರೀಕಗಳಿಂ ಗಂ
ಟಿಕ್ಕಿ ಬರುತಿರ್ಪ ಧೀವರ
ಮಿಕ್ಕಮೃಗಂಗಳಿನ ಭಯಮದಿನಿತಿಲ್ಲವನೊಳ್ (?) ೨೦೩

ತರಟುದಲೆ ಹುರುಪುಮ್ಯೆ ಹೆ
ಬ್ಬಿರಿದಿಹ ಹಿಮ್ಮಡದ ಬೇಟೆ ಮೇಲಿಕ್ಕುವಜಿತೂಂ
ದರುವೆಯ ಪಡೆಯದನಾ ವನ
ಚರಸೊಪ್ಪಿದನಲ್ಲಿ ಬಲೆಸಮೇತಂ ಬನದೊಳ್ ೨೦೪

---

೧ ತ್ರಿದೋರ್ (ಅ)

ವಾಗುರಿಕೆಯ ನೆಲೆವೇಟದ
ಪೋಗಣ ಪರಿಪಕ್ವಬಿಂಬಫಳರಸಮಂ ಪೀ
ರ್ದಾಗಳೆರ್ದೆದಣ್ಣನೆ ದಣಿ
ದೋಗಡಿಸುವನುೞಿದ ಪಣ್ಣನೆಲ್ಲಂ ಭಿಲ್ಲಂ ೨೦೫

ಕೆಲದೊಳ್ ಪುಳಿಂದಿಯಿರೆ ಪೆ
ರ್ಬುಲಿ ಬಂದೊಡಮಂಜನಕ್ಕೆನೋಡಂ ನೋಡಂ
ಚಲದಿಂ ಕಾಡಂ ಕಾಡಂ
ಸಲೆ ಪಸಿವಂ ಪುಜಿತದು ತಣಿದು ಬೇಡಂ ಬೇಡಂ ೨೦೬

(ಗಿರಿಜಾಕಲ್ಯಾಣಂ ೧-೧೧೭)

ನಿಂಪೆಂಸಿಂದೆಂತುವೀ ವೀರದ ರವನಿ ಕರಂ ಬಂದೊಡಂಬಂದೊಡಂ ಗೊಂ
ಡಂಪಾವಂದಾವಸಂತಿಪ್ಪಸರಪಸರಮಂ ಕಾಣ್ಬನಾ ಮಾತದಿರ್ಕೆ
ನ್ನಂದಂ ನಂದಂ ಕನಲ್ದಿರ್ಪೊಡೆ ಪ್ರೊಡೆ ಪುಲಿಯಂ ಬೇಗದಿಂ ಬೇಗದಿಂಪೆಂ
ಬಂದಂ ಬಂದಂತೆ ಕೊಂದಿಕ್ಕುವ ಕುವರನವಂ ಸೋಂಕಿರಾತಂ ಕಿರಾತಂ ೨೦೭

(ಗಿರಿಜಾಕಲ್ಯಾಣಂ ೧-೧೨೪)

ಬಿದಿರಂ ಬಿದಿರಂ ನಡೆನಡೆ
ಯುಡೆಯದೆ ಪಿಡಿಪಿಡಿಗೆ ಬಂದ ಕರಿಯಂ ಕರಿಯಂ
ಪದೆಪೆಚ್ಚಂ ಕಲಿಕಲಿ ಪೇ
ಸದೆ ಸದೆದಪೆನೆಂದು ಬೇಡರೆನೆ ನಲಿಪೆಸುಪಂ ೨೦೮

(ಗಿರಿಜಾಕಲ್ಯಾಣಂ ೧-೧೨೫)

ತಿರುವೊಳೆ ಕೋಲಸಿಟ್ಟು ತೆಗೆಯುಲ್ಕದು ನೆಲ್ಲನಿತೆಯ್ದೆ ಜಾರಲಾ
ಹರಿಣನನೆಚ್ಚೊಡುರ್ಚಿ ನೆಲದೊಳ್ ಪೊನೆದೋರ್ಪುದು ಚೋದ್ಯಮೆಂತು ಭಾ
ಪುರೆ ವಧುಲುಬ್ಧ ಸಿಸ್ನನವಳೊಂದಿರಲಾವಗಮೊಲ್ದು ಮೋಹದಾ
ತರುಣಿಗೆ ಪೇೞಿವೇೞ್ಪುಪೆನೆ ನಕ್ಕುದು ಭಿಲ್ಲರದೊಂದು ಸಂಕುಳಂ ೨೦೯

ಸಿಂಹಶಿರಸ್ಥ ರತ್ನತತಿಯಂ ಗಜಮಸ್ತಕಮೌಕ್ತಿಕಂಗಳಂ
ಸಂಹರಿಸುತ್ತಲೊರ್ವ ಶಬರಂ ಕಡುಚಂದದ ಬಾಲೆಗಿತ್ತು ಮು
ತ್ರಂ ಹೊರೆಗೆಯ್ದುದೀಕೆಯ ಕುಚಂ ಬೞಿಪೊಡ್ಡಿಪೊಡೆನ್ನ ಕಯ್ಯ ಬಿಲ್
ತ್ರಾಂ ಹದನಾದೊಡಂ ತಿಳಿಯಲೆಳ್ಳನಿತೆಯ್ದದುಮೆಂದು ಚಿಂತಿಪಂ ೨೧೦

ಕರ್ಜೊನ್ನಿಂದಂ ವಿಧಾತ್ರಂ ಸಮೆದನಿವನನೆಂಬೊಂದು ಕಾರ್ಕಶ್ಯದಿಂದಂ
ಸರ್ಬಾಂಗಂ ಕಣ್ಗೆಗುರ್ವಂ ಪಡೆಯಲಡವಿಯುಂ ಕೂಡೆ ಕಾಳಿಂದಿ ಸುತ್ತಂ
ಸರ್ಬಿತ್ತೆಂಬೊಂದು ನೀಲೋತ್ಪಲದ ರುಚಿರ ಶ್ಯಾಮರ್ಪೆಮಾಂಸುಜಾಲಂ
ಪರ್ಬಲ್ ಬಂದಂ ಪುಳಿಂದಪ್ರಕರಬಹುಳಸೇನಾಪರೀತಂ ಕಿರಾತಂ ೨೧೧

(ಕಾದಂಬರಿ ಪೂ. ಭಾ. ೧೬೫, ಸೂಕ್ತಿಸುಧಾರ್ಣವಂ ೩-೧೦೬)

## ಶಬರೀವರ್ಣನಂ

ಚಿತ್ರದ ಕಂಕಣಂ ಬಳಹದೋಲೆ ಕುರುಳ್ಗಳನಟ್ಟ ಕಾಡಪೂ
ಕತ್ತರಿವೀಲಿಯುಳ್ಳಡೆ ವನೇಭಜಮೌಕ್ತಿಕಹಾರಯಷ್ಟಿ ಚಿ
ಗೊತ್ತಿಗ ಬಿಲ್ಸರಳ್ ಗದಗದಿಪ್ಪ ಕುಚಂ ಸುಲಿಪಲ್ಲಕಾಂತಿ ಚಿ
ಟ್ಟಿತ್ತಧರಂ ಮನಂಗೊಳೆ ಪುಳಿಂದಿಯರೊಪ್ಪುಗುಮಾ ವನಾಂತದೊಳ್ ೨೧೨

ತಳಿರ ಸಮಂಗ ಪೂತ ಸೆಳೆಗೊಂಬಿನ ಬಿಲ್ ನವಪುಲ್ಲಕಂಕಣಂ
ಬಿಳಿಯಸಿಯಂಬು ಮಾಂದಳಿರ ಕೈಪೊಡೆ ತೋರಮುಜುಂಬಸೊಳ್ ತೆಜಂ
ಬೊಳೆವಲಗೊಂಚಲೊಪ್ಪೆ ತನು ನೀಲಶಲಾಕೆಯೊಲಾಗೆ ಕಾಮನಂ
ತಳವಡೆ ನಿಂದಳೆಂದು ಪೊಲೆಬಾರದ ಬಾಲೆ ಪುಳಿಂದಲೀಲೆಯಿಂ ೨೧೩

(ಲೀಲಾವತಿ ೮-೨೮, ಸೂಕ್ತಿಸುಧಾರ್ಣವಂ ೩-೨೦೭)

ಪೊಳೆಸು ಕದಂಪನಪ್ಪಳಿಸಿ ಪಾಲೆಯೊಳೊಪ್ಪುವ ದಂತದೋಲೆಯುಂ
ದಳವಡೆ ಲೀಲೆಯಿಂ ಮಸಿಯ ಬಣ್ಣದ ಜೇಡಿತಿ ತಬ್ಬಿಲೊಳ್ ಥಳ
ತ್ಥಳಿಸುವ ತೋರಮುತ್ತುಗಳನಾಯ್ದುಳಗಂ ಮುಗಿಲಂ ಪಳಂಚಿ ಬಿ
ರ್ದೆಳೆಯುಡುಜಾಲಮುಂ ಹಿಮಕರಂಬೆರಸಾಯ್ತು ನಿಶಾವಧೂಟಿಯೊಲ್ ೨೧೪

(ಲೀಲಾವತಿ ೮-೩೬: ಸೂಕ್ತಿಸುಧಾರ್ಣವಂ ೩-೨೧೪)

ಸುಲಿಪಲ್ ಕೆಸ್ಸೆಯ ಕೆಂದಳಿರ್ ಪೊಗದ ಜಾಡಾಜಾಡಿ ಪುರ್ಜಿಕಪ್ಪಿತುಂ
ಗೆಲವಿಂ ಕೆಕ್ಕುವ ಪುಚ್ಚುವಾತು ನಡೆನೋಡುತ್ತಿರ್ಪೊಡಾ ಸ್ವೈಸಿಂ
ಪೊಲಿ ಸೂಂಕಲ್ ನಸುಜಾರ್ಪ ಸೀಲುದು ನಯಂಪೋರ್ಪಂಗದಂತಸ್ಫುಡಾ
ನೆಲೆಯುಂ ನೂಚಿಪ ಕಣ್ಣ ಭಾವದ ಪುಳಿಂದಸ್ತ್ರೀಯರೇಂ ಬಂದರೋ ೨೧೫

ಕಮಲಜನಿಲ್ಲಿ ಚಿತ್ರಿಸೊಲವಿಂ ಕುಮುದೇಕ್ಷಣ ವಜ್ರದಂತವಿ
ದ್ರುಮದವನಚ್ಛದಂಗಳನಮರ್ಚಿದ ಜಂಗಮನೀಲಪುತ್ರಿಕಾ
ಸಮಿತಿಯನೆಂಬಿನಂ ಮಿಸುಪ ಕಣ್ ಸುಲಿಪಲ್ಲರುಣಾಧರಂ ಸಕಾ
ಳಿಮ ತನುಶೋಭೆಯಿಂದೊಪ್ಪಿರೆ ಪುಳಿಂದಿಯರಿರ್ದರದೊಂದು ತಾಣದೊಳ್ ೨೧೬
(ಜಗನ್ನಾಥವಿಜಯಂ ೧೬-೧೭)

ಕಮಳಸಮುಖಂ ಕಂಬುಗ್ರೀವಂ ಘನಸ್ತನಮಂಡಲಂ
ಭ್ರಮರರುಚಿಮತ್ಕೇಶಂ ಬಿಂಬಾಧರಂ ನಳಿತೋಳ್ ಬೆಡಂ
ಗಮರ್ದಿರೆ ಮೊಗಂ ರಂಭಾಸ್ತಂಭೋರು ತೆಳ್ಪಿಸಿಜಡೊಪ್ಪೆ ವಿ
ಭ್ರಮದ ಕಣಿಯಂ ಪೋಲ್ತರ್ ನಿಲ್ತರ್ತ್ತಿ ಬೇಡಿತಿಯರ್ ಕೆಲರ್ ೨೧೭
(ಕಾವ್ಯಾವಲೋಕನಂ -೬೭೮-)

ಜಲಗರ್ಣ್ ಪೊಂಗಿದ ಲೋಳೆವಾಯ್ ನಗೆಮೊಗಂ ತೂಗಲ್ದುರುಳ್ ಕೆಂದಳಂ
ಸುಲಿಪಲ್ ಸೋರ್ಮುಡಿ ತೆಳ್ಪಿಸಿಜರ್ ನೆಟ್ಟನೊಸಲ್ ಪೊಂಬಾಟಿಸಿ ಪಚ್ಚೋಲೆ ನೀ
ಜಾಲಪನ್ನಂ ತಳಿಯೆಣ್ಣೆಯೊಳ್ ತೊಳಸಿ ತೊಯ್ದಂತಿರ್ಪ ಸುಣ್ಣಪ್ರ್ಪ ಸೆ
ಮ್ಮಾಲೆ ಜೇಲ್ವಾಗಿರೆ ನಿಂದ ಬೇಡಿತಿಯರಂ ಕಂಡಂ ನೃಪೇಂದ್ರಾತ್ಮಜಂ ೨೧೮
(ಕಾವ್ಯಾವಲೋಕನಂ ೨೦೬: ಸೂಕ್ತಿಸುಧಾರ್ಣವಂ ೩-೨೧೫)

ಕಾಡಿಗೆಯಿಚ್ಚಿ ಪಲ್ ಸುಲಿದು ಕೆಂದಳಿರಂ ನಿಜಾಯುಟ್ಟು ಮೊಲ್ಲೆಯಂ
ಸೂಡಿ ಮದೇಭಮಸ್ತಕದ ಮುತ್ತಿನಹಾರಮನಿಕ್ಕಿ ಬೇಡನಂ
ಬೇಡಿತಿ ಬೇಡಿ ತಂಬುಲಮನಾನನಮಂ ಮಿಗೆ ನೋಡಿ ಪಂದಿ ಕೋ
ಡಾಡಿಸಿದಂದನಾಯ್ತುದರೆ ನೋಡಿದ ನೋಟಮಪೂರ್ವ[1]ರೂಪಿಯಂ[1] ೨೧೯
(ಸೂಕ್ತಿಸುಧಾರ್ಣವಂ ೩-೨೧೬)

ಸಸ್ಸಿಯ ಬಲ್ಲಪಳ್ ಬರಲಿ ನಿಂತಿದಿರಾಡುವಳ್ಳಿಪಲಿಂಗಿತಂ
ತನ್ನಿದೆಗೊಂಡಪಳ್ ತೆರಳಿಚ್ಛಯನೀವಪಳೊಲ್ದು ಕಾಣಲಿಂ
ಮುನ್ನತ ನೂತ್ನಮಪ್ಪ ಸುಡಿಗಾತಿಯರಂ ನಡೆಗೊಳ್ಳಲೀಗಲಾ
ತಂ ನನಮುನ್ಮಥಂ ಜಮರೆ ನಿಂದಿರದೆಯ್ದುತು ಲುಬ್ಧಕೀಜನಂ (?) ೨೨೦

ಜಲಕೇಳೀದ್ರವದಿಂದೆ ನಾಂದ ತೆಜದಿಂದೋಲಾಡಿ ಪೂಗೊಯ್ದು ಪೂ
ಗೊಳದಿಂದಂ ಪೊಜಮಟ್ಟು ನಿಂದ ಶಬರೀಸಂದೋಹಮಂ ದಾದಿಯು
ಸ್ಪಳಕಾನೀಕದಿನುಕ್ಕೆ ನೀರ್ದನಿಗಳಿಂ ತೀರಂ ಸಮಂ ಬಾಗೆ ಪೊ
ಸ್ಪಿಳ ಜಾಲಂಗಳಿನಿಂಪ್ರನೀಲಮಣಿಯುಂ ಕಟ್ಟಿರ್ದವೋಲೊಪ್ಪುಗುಂ (?) ೨೨೧

---

[1] ದೂಜಿತಯಾ(ಸ)

ಆನೆಯ ನೆತ್ತಿಯಂ ಬಿರಿವಿನಂ ಪರಿದೆಚ್ಚುದಿರ್ದಜ್ಜಮುತ್ತನೇಂ
ತಾನೆ ವಿನೋದದಿಂ ತುಡಿಪನೇ ಪೊಲೆಬಾರದ ಮುನ್ನಮೀಗಳಾ
ಯ್ತೇನೆಸಕಂ ನಿಸತ್ತು ಪತಿಗೀ ಪೊಸಜವ್ವನದೇಟಿಕ್ಗಯಿಂ ನಿಜೋ
ತ್ತೀನ ಕುಚಂಗಳೊಳ್ ಪಿರಿಯ ಮುತ್ತಿನಹಾರಮನಿಕ್ಕುತಿರ್ದಪಂ ೨೨೨
(ಲೀಲಾವತಿ ೮-೩೭)

ಕರಿಕುಂಭೋದ್ಭವ ಮೌಕ್ತಿಕಪ್ರತತಿಯುಂಟೇ ನಿಮ್ಮೊಳೆಂದೆನ್ನಲಾ
ಕರಿಯಾನಾಲಸೆ ಜೇಡನಟ್ಟಿ ಸೊಸೆಯಂ ಕಣ್ಸನ್ನೆಯೊಳ್ ತೋಱುದಲ್
ಕರಿಕುಂಭಪ್ರತಿಮಾನಕುಂಭಕುಚೆಯಾದಂದಿಂದ ಮದ್ಗೇಹದೊಳ್
ಕರಿಕುಂಭೋದ್ಭವ ನಾಸ್ತಿಯೆಂದಳಿದು ತಾನೇನೆಂಬ ತಾತ್ಪರ್ಯಮೋ ೨೨೩

ಹರಿಯುಂ ನೋಯಿಸಿ ನಾಲ್ಕು ನಾಪರದೊಳಾಂ ತಂದಾ ಲಸದ್ರತ್ನಮಂ
ಪರಗೇಂ ತೋಱುವುದಲ್ಲಿವಾಸೆಯ ಸುಮುಕ್ತಾನೀಕದೊಳ್ ಕೂಡಿ ತಾಂ
ಪರಿಗೆಯ್ವಲ್ ಮಿಗೆ ಪಚ್ಚೆಸಾಟಿ ಬೆಲೆಯೆಂದಾ ಜೇಡವೆಣ್ ಮಾತಿಗಾ
ಹರಿಮಂ ನಕ್ಕು ರೆಂಪೇನುಮಂ ಕುಡದೆ ಪೋದಂ ನೋಡಲೇಂ ಚಿತ್ರಮೋ (?) ೨೨೪

ಬಿಡುಗಿವಿ ಮಿಂಚುಪತ್ತು ಸುಲಿಪಲ್ ಕುಣಿದಾಡುವ ಕುಂತಳಂ ನೊಸಲ್
ಬಿಡಿವ ಬೆಮರ್ ಕವಕ್ಕುಡಿಪ ಪೆರ್ಮೊಲೆ ಪಾಡುವ ಸುಪ್ಪಿಯಿಂಚರಂ
ಪಿಡಿವ ತಳಿಕ್ಕೆ ಬಲ್ಬೊನಕೆ ಜಾಱುವ ಸೋರ್ಮುಡಿ ಸೀಡಿದಂಘ್ರಿ ಚೆ
ಲ್ವಡೆದಿರಲಕ್ಕಿಗುಟ್ಟುವ ಪುಳಿಂದಿಯರೊಪ್ಪುಗುಮಾ ನಗೇಂದ್ರದೊಳ್ ೨೨೫

ನನೆವೆರಸುಟ್ಟ ಮಾಂದಳಿರುಮೊಪ್ಪಿರೆ ಕಾಡಲರಂ ತುಱುಂಬಿ ಚಂ
ದನದೊರಳಲ್ಲಿ ಪೊಯ್ದು ಬಿದಿರಕ್ಕಿಯನುನ್ಮದದಂತಿದಂತದೊಂ
ದೊನಕೆಯನೆತ್ತಿ ಸುಣ್ಣನಿಯ ಸುಪ್ಪಿಯ ಗಾನರದೊಳ್ ತೊಡರ್ಚೆ ಜ
ಪ್ಪನಿಗ ಪುಳಿಂದಿ ಪಾಡಿದಳೊಱಲ್ದು ಮನಃಪ್ರಿಯನಂಕಮಾಲೆಯಂ ೨೨೬
(ಲೀಲಾವತಿ ೮-೩೦, ಸೂಕ್ತಿಸುಧಾರ್ಣವಂ ೩-೨೦೮)

ತುಱುಗೆವೆಗಣ್ಣ ಕಾಂತಿ ಮರಗಟ್ಟಲೆಯಂ ಬಿದಱಟ್ಟಿ ತೊಂಡೆವಾ
ಯ್ದೆಱೆಯ ಕಿಸುಪಂಜೆವೀಱುವ ದಶನಾಂಶು ರಸನಾಮೃತಪೂರಮೆಂಬಿನಂ
ತುಱುಗಿರೆ ಸಿಂಹಮಾನೆ ಪುಲಿಪುಲ್ಲೆ ನವಿಲ್ ಫಣಿ ತಮ್ಮ ವೈರಮಂ
ಮಱೆದೊಡನಾಲಿಸಲ್ ಶಬರಿ ಪಾಡಿದಳಚ್ಯುತನಂಕಮಾಲೆಯಂ ೨೨೭
(ಜಗನ್ನಾಥವಿಜಯಂ ೧೬-೨೫, ಸೂಕ್ತಿಸುಧಾರ್ಣವಂ ೩-೨೧೬)

ರಾಗರಸಂ ಪೊನಲ್ವೊನಲನಟ್ಟುವಿನಂ ಕವಿತಂದು ತೋಯ್ವವೋಲ್
ತೂಗುವ ಕೆಂದಳಿರ್ ತೊಲಗೆ ತುಂಬಿಯ ಬಣ್ಣದ ಮೆಯ್ಯ ಬಣ್ಣದಿಂ
ಕೋಗಿಲೆಯಂತೆ ಕಣ್ಗೊಳಿಸುತಂ ಕಳಕಂಠಿಕೆ ಕೊಂಬನೇಱಿ ಕಾ
ಟ್ವೊಗಳ್ ಸೂಡುತಂ ಶಬರಿ ಪಾಡಿದಳಾಗ ಕಲಾವಿಲಾಸನಂ ೨೨೮

(ಲೀಲಾವತಿ ೮-೩೪)

ತಳಿರ್ಗಳ ಸೀರೆಯುಟ್ಟು ಗುಜುಗುಂಜಿಯ ಹಾರಮನಾಂತು ಮುಂದೆ ಶೀ
ತಳ ಶಶಿಕಾಂತದಿಂ ಸಮೆದೊರಲ್ಗಳೊಳಂ ಬಿದಿರಕ್ಕಿಯಕ್ಕಿ ನಿ
ಸ್ತಳಮುಸ ಸುವ್ವಿ ಕಾಡೊಡೆಯ ಸುವ್ವಿ ಮನೋಹರ ಸುವ್ವಿ ಸುವ್ವಿಯೆಂ
ದಳವಡೆ ರಾಗದಿಂ ಘಳಿಸಿದರ್ ವನದಲ್ಲಿ ಪುಳಿಂದಕಾಂತೆಯರ್ ೨೨೯

(ಗಿರಿಜಾಕಲ್ಯಾಣಂ ೧-೧೨೩)

ಸೆಳೆನಡು ಬಳ್ಕೆ ತೊಲ್ಡೆ ನಳಿತೋಳಲಗುತ್ತಿರೆ ಮುತ್ತಿನೋಲೆ ಸಂ
ಚಳಿಸೆ ಕುಚಂ ಕದಕ್ಕದಿಸೆ ಸುವ್ವಿಯ ಗಾವರಮೊಪ್ಪೆ ಪೊಣ್ಬರಂ
ಬಳೆಲಲು ರಕ್ತಚಂದನದ ಸಿಂದೂರಳೊಳ್ ಬಿದಿರಕ್ಕಿಯಕ್ಕಿ ನಿ
ರ್ಮಳತರ ದಂತದೊಂದೊನಕೆಯಿಂ ಪಿಡಿದೆತ್ತಿ ಪುಳಿಂದಿ ಪಾಡಿದಳ್ ೨೩೦

ಅಡವಿಯ ಹುಲ್ಲೆಗಳ್ ಬರೆದ ಹುಲ್ಲೆಗಳಂತಿರೆ ವನ್ಯದಂತಿಗಳ್
ತೊಡರ್ದು ತೊಡರ್ಪಿನೊಳ್ ತೊಡರ್ದ ದಂತಿಗಳಂತಿರೆ ನುಣ್ಪು ವೀಣೆಯಂ
ಮಿಡಿದವೊಲಾಗೆ ಪಾಡಿದಳೊಱಲ್ದ ರಸೇಱಲಪಣ್ಣ ಸೆಣ್ಣೆಯೊಳ್
ತೊಡರ್ದವೊಲಪ್ಪ ಬಣ್ಣದ ಪುಳಿಂದಿ ಮನೋಭವನಂಕಮಾಲೆಯಂ ೨೩೧

(ಸೂಕ್ತಿಸುಧಾರ್ಣವಂ ೩-೨೧೧)

ದನಿಯು ಪೊಗರ್ ಮನೋಭವನ ಬಾಳ್ವೊಗರಂತಿರೆ ಚಿತ್ತಮಿಟ್ಟು ಮೋ
ಹನೆ ಮಱಪಾಲಿಸುತ್ತೆಸೆವ ಪುಲ್ಲೆಯುಮಾಗಳದರ್ಕೆ ಸಾರ್ದ ಬೇ
ಡನುಮಿರೆ ಚಾಪಮಂ ತೆಗೆದು ಚಿತ್ರಿಸಿದಂತೆ ಮನೋನುರಾಗದಿಂ
ವನಚರಿ ಪಾಡಿದಳ್ ಮಧುರಗೀತಗಳಂ ಕವಿರಾಜಮಲ್ಲನಾ ೨೩೨

(ಲೀಲಾವತಿ ೮-೩೨, ಸೂಕ್ತಿಸುಧಾರ್ಣವಂ ೩-೨೧೨)

ಇಂಚರಮುಮರ್ದಿನ ಸವಿಯು ಪ
ಳಂಚಿದ ಕಿವಿಗಳ್ಗೆ ವೃತ್ತಕುಚೆ ಪತಿಯುರಮಂ
ಮಿಂಚಿನವೊಲಪ್ಪಿ ಮಿಡಿದ ವಿ
ಪಂಚಿಯೆನೆ ಪುಳಿಂದಿ ಪಾಡಿದಳ್ ಮಾನದನಂ ೨೩೩

(ಲೀಲಾವತಿ ೮-೩೧)

ಬೀಣೆಯ ದಂಡಿಗೆಯಂತಿರೆ
ಮಾಣದೆ ಮೊಱತವಳಿಗಳಂ ಸನಾಳಾಂಬುಜಮಂ
ಜಾಣಿಂದೆ ಪಿಡಿದು ಪಾಡಿದ
ಳೇಣೇದೃಶೆ ಶಬರಿ ಸುಕರಕವಿಶೇಖರನಂ ೨೩೪

(ಲೀಲಾವತಿ ೮-೩೩)

ಕೆಡೆದುದೊ ನೀಲದ ಸಱುಯಿಂ
ಪೊಡವೆರ್ಚಿದ ಬೆಗಡುಗೊಂಡು ಬೆಳತಿಗೆಗಣ್ಣಿಂ
ಕುಡುಮಿಂಚಿನ ತುಡುಗೆಗಳಂ
ತುಡಿಸು[1]ವ ತೆಜನಿದು[1] ಮುಗಿಲ್ಗೆ ಶಬರಿಯುವರೆಬರ್ ೨೩೫

(ಲೀಲಾವತಿ ೭-೧೧೦)

ಮರದಡಿಯೊಳ್ ಮುದುಡಿದ ಪಯ
ಗರಡಿಯ ಪ್ಪೆಯಲ್ಲಿ ಪಱಿಯೆ ಪರೆಜೆಡೆಯೆಡೆಯಿಂ
ತರುಣರವಿಕಿರಣತತಿ ವನ
ಚರಿಯರ್ ಪುಲಿಗೆತ್ತು ತೊಲಗುವರ್ ಗಿರಿತಟದೊಳ್ ೨೩೬

(ಲೀಲಾವತಿ ೭-೧೧೪)

ತೋರಬಿದಿರ್ಮುತ್ತಿನ ನವ
ಹಾ[2]ರದ[2] ಕೆಂದಳಿರ್ಗಳುಡೆಯ ವನಚರಿಯೊರ್ವಳ್
ತಾರಾವಳಿಯಿಂ ನವಸಂ
ಧ್ಯಾರಾಗದೊಳೆಸೆವ ನಿಶಿಯನನುಕರಿಸಿರ್ದಳ್ ೨೩೭

(ಜಗನ್ನಾಥವಿಜಯಂ ೧೬-೧೮: ಸೂಕ್ತಿಸುಧಾರ್ಣವಂ ೩-೨೩೨)

ಲಲಿತಲತಾಕಟುರೂಪೋ
ನ್ಮಿಲನಮಿದೆಂಬಂತೆ ಶಬರಿದಂಪತಿಗಳ್ ಕೋ
[3]ಮಲಿನು[3]ಕಠೋರಮೃದೂಕ್ತಿಗೆ
ನೆಲೆಯೆನಿಸಿದ[4]ರಸದೃಶ[4]ಕ್ರಿಯಾಪಟುಗಾ[5]ತ್ರರ್[5] ೨೩೮

(ಜಗನ್ನಾಥವಿಜಯಂ ೧೬-೧೯)

---

[1]ತಂತೆಜಗಿ(ಸ) [2]ರಂ(ಸ) [3]ದುಳಿತ(ಸ) [4]ಸದೃಶಂ(ಸ) [5]ತ್ರಂ(ಸ)

ತರುಣ ತಮಾಲಲತೌಘದ
ಪೊರೆಯೊಳ್ ಗೇಯಸ್ವನಾನುಮಿತ ತನುಲತೆಗಳ್
ಕರಮೆಸೆಯೆ ಗೇಯಗೋಷ್ಠಿಗೆ
ನೆರೆದಿರ್ದ ಪುಳಿಂದಕಾಂತೆಯರ್ಕಳ್ ಮೆಚ್ಚಿಗುಂ ೨೬೯

(ಜಗನ್ನಾಥವಿಜಯಂ ೧೬-೨೪)

ಪೊಸತಳಿರನುಟ್ಟು ಕಣಲಿಗೆ
ಯುಸಿಯೋಲೆಯ ತೊಟ್ಟು ಬಿದಿರಮುತ್ತಿಂ ಸಲಸಂ
ಪೊಸತಾಗಿ ಕೊಯ್ದು ಕೇದಗೆ
ಯೆಸಳಂ ಮುಡಿದೋರ್ವ ಶಬರಿ ಕಣ್ಗೆಸೆದಿರ್ದಳ್ ೨೭೦

ಪೆರ್ಮರಸನಡರ್ದ ನವಲತೆ
ಕಾರ್ಮುಗಿಲೊಳ್ ತಳ್ತ ಮಿಂಚು ವಿಂಧ್ಯಾಚಳಮಂ
ನೆರ್ಮ್ಮಿದ ನರ್ಮದೆಯೆನಿಸಿದ
ಒರ್ಮೆಯೆ ವನಚರನನಪ್ಪಿ ವನಚರಿಯೊರ್ವಳ್ ೨೭೧

(ಕಾವ್ಯಾವಲೋಕನಂ -೨೧೭-)

ಮಿಸುಗುವ ದಂತಿದಂತಮುಸಲಂ ಕರಪಲ್ಲವಯುಗ್ಮದೊಳ್ ಬೆಡಂ
ಗೆಸೆದಿರೆ ರಕ್ತಚಂದನದ ಪೇರೊರಳೊಳ್ ಬಿದಿರಕ್ಕಿಯುಕ್ಕಿ ರಂ
ಜಿಸೆ ಬಗೆಗೊಂಡು ಗಾವರದೊಳೊಂದಿದ ಸುಸ್ವಿ ಮಸಕ್ಕೆ ರಾಗಮಂ
ಪಸರಿಸೆ ಪಾಡಿದಳ್ ಶಬರಿ ಕಾದಲನಿಂಗಿತದಂಕಮಾಲೆಯಂ ೨೭೨

(ಸೂಕ್ತಿಸುಧಾರ್ಣವಂ ೩-೨೦೯)

ಎಣ್ಣೆಯೊರೆಸೆದುಲತನಿ
ವಣ್ಣಂ ನುಣ್ಣಿಸಿದನಬ್ಜಭವನೆನಿಸಿದ ಪೆಣ್
ವಣ್ಣದ ಶಬರಿ ತಮಾಲದ
ತಣ್ಣೆಲೊಳ್ ಕಣ್ಣ ಬೆಳಗೆ ಬೆಳಗಾಗಿರ್ದಳ್ ೨೭೩

(ಸೂಕ್ತಿಸುಧಾರ್ಣವಂ ೩-೨೦೪)

ಬೆಳಗಂ ಕತ್ತಲಿಸುವ ಮೆಳೆ
ಮೆಳೆಯೊಳ್ ಪೊಕ್ಕಲ್ಲಿ ತನ್ನ ಕಂಗಳ ಬೆಳಗಿಂ
ಬೆಳಗಾಗಿರೆ ಬೆಳಗಿಲ್ಲದ
ಮೆಳೆಯಿಲ್ಲೆಂದಬಳೆ ಶಬರಿ ಸೊಬಗಪಡೆದಿರ್ದಳ್ ೨೭೪

(ಗಿರಿಜಾಕಲ್ಯಾಣಂ ೧-೧೨೭, ಸೂಕ್ತಿಸುಧಾರ್ಣವಂ ೩-೨೦೫)

ಇರೆ ಸುಪ್ರೌಢಕಿರಾತಂ
ತರುಣಿಯ ಮುಗ್ಧತೆಗೆ ಮೆಚ್ಚಿಯುಬಳೆಯ ಕಣ್ಣಿಂ
ಬರೆಮುಚ್ಚಿಯಿಡಿದ ಕಟ್ಟಿಲೆ
ಮೊರೆಕೊಂಡಿತ್ತೆಂದು ನೆರೆದು ಸುಖಿಯಾಗಿರ್ದಂ ೨೪೫
(ಗಿರಿಜಾಕಲ್ಯಾಣಂ ೧-೧೨೮, ಸೂಕ್ತಿಸುಧಾರ್ಣವಂ ೩-೨೦೬)

ಮದುವೆನಿಲುವಲ್ಲಿ ತಾಳಿದ
ಸದಮಲ ತಾಟಂಕಮಲ್ಲದೆರಡಂ ತಂದೊ
ಲ್ದೊದವಿದ್ದ ತೊಡವನೊಲ್ಲದೆ
ಬೆಡೆಬೇಡಿತಿ ಗುಂಜಿದೊಡವನನಸಳುಂ ಪೞಿಪಳ್ ೨೪೬

ನಲ್ಲನಿಲ್ಲದೊಡೆ ಮುತ್ತಂ
ಬಲ್ಲಿದ ಪರದನ ಮುಖಕ್ಕೆ ಮುನ್ನಿನ ಸಲ್ಲೆಯಿ
ನೆಲ್ಲವನಿಟ್ಟಿಂ ಪಚ್ಚೆಯ
ನಲ್ಗಯ್ಯಿಂ ತೂಗಿಸುತ್ತೆ ಪದಕಂಗೆಯ್ವಳ್ (?) ೨೪೭

ಕಾಡಗಿಳಿ ಬಂದು ಪಿತ್ತಿಲ
ಮಾಡದೊಳಿರ್ದನ್ನ ನುಡಿಸಿ ಪೋಪುದು ನಿಚ್ಚಂ
ಗೂಡೊಳಗಿಟ್ಟಾರಯ್ಯಲ್
ಬೇಡನ ಭಯವೊಳವುವದಱ ನುಡಿ ಗಿಳಿಗೊಳವೇ ೨೪೮

ಇನಿಯನಿವಳಾಯತಾಕ್ಷಿಯ
ನನುವಿಂದಂ ಮುಚ್ಚೆ ಮನೆಯ ಸರ್ವಚಕೋರಂ
ಜಿನುಗುತಸು ಕಳೆವುತಿರಲಾ
ತನ ಕೈದೆಗೆಯಲ್ ಬರ್ದುಕಿದುದ ನಾಂ ಕಂಡೆಂ ೨೪೯

ಕಣ್ಣೊಳ್ ಕೋರಿಕೊಂಡು ಸವಿಯಂ ಸಲೆ ಮುಕ್ಕುಳಿಪಂತೆ ನೋಟ್ಪಿ ಕಾ
ಟಿಪ್ಪಣ್ಣ ಕುಚಂಗಳಪ್ಪಿ ಮಿಗೆ ಬಪ್ಪವೊಲಂದಿದಿರೊಡ್ಡಿ ನೋಹಿಸಲ್
ಬಣ್ಣನೆ ಸಾರ್ದು ತಚ್ಛಬರಿಯುಂಘ್ರಿಗೆ ಬೀೞ್ದುರಪೆಯ್ದೆ ಕೂಡುತುಂ
ಸುಣ್ಣನೆ ಕಾಣದಂತೆ ಪೞುವೊಕ್ಕ ಪುಳಿಂದನಪೆನ್ನ ಧೂರ್ತನೋ ೨೫೦

ಮತ್ತಗಜಮಸ್ತಕದ ಪೊಸ
ಮುತ್ತಂ ಬಲ್ಪಿಂದೆ ತಂದೆನೆಂದೊಲವಿಂದಂ
[1][ಮುತ್ತಂ][1] ತುಂಗಪಯೋಧರೆ
ಗಿತ್ತಂ ಮುತ್ತೊಬ್ಬ ಶಬರಿ ಮಿಗೆ ನಗೆ ಮನದೊಳ್ ೨೫೧

[1]ಪೃತ್ತಂ(ಸ)

ತರುಣ ತಮಾಲಲತೌಘದ
ಪೊರೆಯೊಳ್ ಗೇಯಸ್ವನಾನುಮಿತ ತಸುಲತೆಗಳ್
ಕರಮೆಸೆಯೆ ಗೇಯಗೋಷ್ಠಿಗೆ
ನೆರೆದಿರ್ದ ಪುಳಿಂದಕಾಂತೆಯರ್ಕಳ್ ಮೆಚ್ಚುಗುಂ ೨೩೯
(ಜಗನ್ನಾಥವಿಜಯಂ ೧೬–೨೪)

ಪೊಸತಳಿರನುಟ್ಟು ಕಣಲಿಗೆ
ಯುಸಿಯೋಲೆಯ ತೊಟ್ಟು ಬಿದಿರಮುತ್ತಿಂ ಸಲಸಂ
ಪೊಸತಾಗಿ ಕೊಯ್ದ ಕೇದಗೆ
ಯೆಸಳಿಂ ಮುಡಿದೋರ್ವ ಶಬರಿ ಕಣ್ಗೆಸೆದಿರ್ದಳ್ ೨೪೦

ಪೆರ್ಮರನನಡರ್ದ ನವಲತೆ
ಕಾರ್ಮುಗಿಲೊಳ್ ತಳ್ತ ಮಿಂಚು ವಿಂಧ್ಯಾಚಳಮಂ
ನೆರ್ಮಿದ ನರ್ಮದೆಯೆನಿಸಿದ
ಕೊರ್ಮೆಯೆ ವನಚರನನಪ್ಪಿ ವನಚರಿಯೊರ್ವಳ್ ೨೪೧
(ಕಾವ್ಯಾವಲೋಕನಂ –೨೧೭–)

ಮಿಸುಗುವ ದಂತಿದಂತಮುಸಲಂ ಕರಪಲ್ಲವಯುಗ್ಮದೊಳ್ ಬೆಡಂ
ಗೆಸೆದಿರೆ ರಕ್ತಚಂದನದ ಪೇರೊರಳೊಳ್ ಬಿದಿರಕ್ಕಿಯುಕ್ಕಿ ರಂ
ಜಿಸೆ ಬಗೆಗೊಂಡು ಗಾವರದೊಳೊಂದಿದ ಸುಪ್ಪಿ ಮಸಕ್ಕೆ ರಾಗಮಂ
ಪಸರಿಸೆ ಪಾಡಿದಳ್ ಶಬರಿ ಕಾದಲನಿಂಗಿತದಂಕಮಾಲೆಯಂ ೨೪೨
(ಸೂಕ್ತಿಸುಧಾರ್ಣವಂ ೩–೨೦೯)

ಎಣ್ಣೆಯೊಳರನೇಜಲತನಿ
ವಣ್ಣಂ ನುಣ್ಣಿಸಿದನಬ್ಜಭವನೆನಿಸಿದ ನೈ
ವಣ್ಣದ ಶಬರಿ ತಮಾಲದ
ತಣ್ಣೆಳಲೊಳ್ ಕಣ್ಣ ಬೆಳಗೆ ಬೆಳಗಾಗಿರ್ದಳ್ ೨೪೩
(ಸೂಕ್ತಿಸುಧಾರ್ಣವಂ ೩–೨೦೪)

ಬೆಳಗಂ ಕಟ್ಟಿಲಿಸುವ ಮೆಳೆ
ಮೆಳೆಯೊಳ್ ಪೊಕ್ಕಲ್ಲಿ ತನ್ನ ಕಂಗಳ ಬೆಳಗಿಂ
ಬೆಳಗಾಗಿರೆ ಬೆಳಗಿಲ್ಲದ
ಮೆಳೆಯಿಲ್ಲೆಂದಬಳೆ ಶಬರಿ ಸೊಬಗುವಡೆದಿರ್ದಳ್ ೨೪೪
(ಗಿರಿಜಾಕಲ್ಯಾಣಂ ೧–೧೨೭, ಸೂಕ್ತಿಸುಧಾರ್ಣವಂ ೩–೨೦೫)

ಇರೆ ಸುಪ್ರೌಢಕಿರಾತಂ
ತರುಣಿಯ ಮುಗ್ಧತೆಗೆ ಮೆಚ್ಚಿಯುಬಳೆಯ ಕಣ್ಣಂ
ಬರೆಮುಚ್ಚಿಯಿಡಿದ ಕಟ್ಟಿಲೆ
ದೊರೆಕೊಂಡಿತ್ತೆಂದು ನೆರೆದು ಸುಖಿಯಾಗಿರ್ದಂ ೨೪೫
(ಗಿರಿಜಾಕಲ್ಯಾಣಂ ೧-೧೨೮, ಸೂಕ್ತಿಸುಧಾರ್ಣವಂ ೩-೨೦೬)

ಮದುವೆನಿಲುವಲ್ಲಿ ತಾಳಿದ
ಸದಮಲ ತಾಟಂಕಮಲ್ಲದೆರಡಂ ತಂದೊ
ಲ್ದೊದವಿದ್ದ ತೊಡವನೊಲ್ಲದೆ
ಜಿದೆರ್ಜೇಡಿತಿ ಗುಂಜಿದೊಡವನವಳುಂ ಪಲಿಸಲ್ ೨೪೬

ನಲ್ಲನಿಲ್ಲದೊಡೆ ಮುತ್ತಂ
ಬಲ್ಲಿದ ಪರದನ ಮುಖಕ್ಕೆ ಮುನ್ನಿನ ಸಲ್ಲೆಯಿ
ನೆಲ್ಲವನಿಟ್ಟಿಂ ಪಚ್ಚೆಯ
ನಲ್ಗಿಯ್ಯಂ ತೂಗಿಸುತ್ತೆ ಪದಕಂಗೆಯ್ವಲ್ (?) ೨೪೭

ಕಾಡಗಿಳಿ ಬಂದು ಪಿತ್ತಿಲ
ಮಾಡದೊಳಿರ್ದನ್ನ ನುಡಿಸಿ ಪೋಪುದು ನಿಚ್ಚಂ
ಗೂಡೊಳಗಿಟ್ಟಾರಯ್ಯಲ್
ಜೇಡನ ಭಯವೊಳವುವದಱ ನುಡಿ ಗಿಳಿಗೊಳವೇ ೨೪೮

ಇನಿಯನಿವಳಾಯತಾಕ್ಷಿಯ
ನನುವಿಂದಂ ಮುಚ್ಚೆ ಮನೆಯ ಸರ್ವಚಕೋರಂ
ಜಿನುಗುತಸು ಕಳೆವುತಿರಲಾ
ತನ ಕೈದೆಗೆಯಲ್ ಬರ್ದುಕಿದುದ ನಾಂ ಕಂಡೆಂ ೨೪೯

ಕಣ್ಣೊಳ್ ಕೋರಿಕೊಂಡು ಸವಿಯಂ ಸಲೆ ಮುಕ್ಕುಳಿಪಂತೆ ನೋಟ್ಟಿ ಕಾ
ಬಿಪ್ಪಿಣ್ಣ ಕುಚಂಗಳಪ್ಪಿ ಮಿಗೆ ಬಪ್ಪವೊಲಂದಿದಿರೊಡ್ಡಿ ನೋಹಿಸಲ್
ಬಣ್ಣನೆ ಸಾರ್ದು ತಚ್ಛಬರಿಯುಂಭ್ರಗೆ ಬೀಟ್ಟಿರಪೆಯ್ದೆ ಕೂಡುತುಂ
ಸುಣ್ಣನೆ ಕಾಣದಂತೆ ಪಟಿವೊಕ್ಕ ಪುಳಿಂದನಪನ್ನ ಧೂರ್ತನೋ ೨೫೦

ಮತ್ತಗಜಮಸ್ತಕದ ಪೊಸ
ಮುತ್ತಂ ಬಲ್ಪಿಂದೆ ತಂದೆನೆಂದೊಲವಿಂದಂ
[೧][ಮತ್ತಂ][೧] ತುಂಗಪಯೋಧರೆ
ಗಿತ್ತಂ ಪುತ್ತೊಟ್ಟಿ ಶಬರಿ ಮಿಗೆ ನಗೆ ಪನಸೊಳ್ ೨೫೧

೧ ನೃತ್ತಂ (?)

ಎಳೆನವಿಲ ಕಳಾಪಂಗಳ
ನಳವಡೆ ತಳೆದುಂ ಮದೇಭಮಸ್ತಕ ಮುಕ್ತಾ
ಫಳವಿಳಸಿತ ಸಾಪತ್ನೀ
ಕುಳಮೊಳಗುರ್ವಿಸುವ ಶಬರಿಯುರವ ವಿಚಿತ್ರಂ ೨೫೨

ಕರಿಗಮನೆ ಶಬರಿ ಬರೆ ಕೇ
ಸರಿ ಕಾಣುತೆ ಮುಳಿದು ಬೆನ್ನನಟ್ಟಿಟ್ಟೋಡಿಯೆ
ತರುವನತಿವೇಗಮಡರಲ್
ಸುರಗಳ್ ತಲೆ ಪರಿವ್ರತಿರ್ದುಪೇನೊ ವಿಚಿತ್ರಂ ೨೫೩

ನಡೆಯಲ್ಕೆ ಸಿಂಹವೆಯ್ದಲ್
ನುಡಿವುತ್ತಂ ಚೂತಮೋಜಿತ ಮಾರ್ಜಾಲ ಕರಂ
ಪಿಡಿಯಲ್ಕಂ ಕಣ್ಣಂ ಬಿಡೆ
ತಡೆಯದೆ ಪುಲಿಯಟ್ಟಿ ಬರಲ್ ಶಬರಿಯೆ ಚಿತ್ರಂ ೨೫೪

ಬನದ ಪುಳಿಂದಿಯೊರ್ವಳನುರಾಗದಿ ಪಲ್ಲವಮುಟ್ಟು ಗುಂಜೆಯುಂ
ದನುಸಮವಾದ ಭೂಷಣಮ ತೊಟ್ಟು ಪಸುರ್ಪಳುವಚ್ಚ ಬೊಟ್ಟನೊ
ಯ್ಯನೆ ಪಣೆಗಿಟ್ಟು ಚಂದನದ ಪೇರೊರಳೊಳ್ ಬಿದಿರಕ್ಕಿಯಕ್ಕಿಗುಟ್ಟಲಾ
ಸ್ತನಕೆ ಕರಂ ಚಿಗುರ್ತಜ ತಳಿಸುಂ ಮುಗುಳ್ಗಮುವದೇಂ ವಿಚಿತ್ರಮೋ ೨೫೫

## ಬೇಟೆಯ ವರ್ಣನಂ

ಪುಲಿಸಲೆ ಕೊಂಬು ಕಲ್ಲಿ ಮಿಡಿ ಕಣ್ಣು ತೊವಲ್ವಲೆ ಸಿಕ್ಕದಕ್ಕು ಪೆ
ರ್ಗೋಲವಲೆ ಸಂದ ಹಾಸುವಲೆ ಸೀರ್ವಲೆ ಸೋಲ್ವಲೆ ಸೊರ್ಕಿನಾರ್ದ ಪೆ
ರ್ಬಲೆ ಬಿಡುವಾಸು ಸೋವಲೆಯೆಂಬಿಸಿತಂ ಪೊರೆಗಟ್ಟಿ ಕಾನನ
ಸ್ಥಳದೊಳಗೊಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ ೨೫೬

ತಡಿಕೆವಲೆ ಕಣ್ಣಿವಲೆ ನಿ
ಟ್ಟಿಪದ ಕೀಲುವಲೆ ಗುಂಟವಲೆ ಪೊಣರ್ಚುವ ಬಲೆ ಮುಂ
ಬಿಡುವಲೆ ಸಿಡಿವಲೆ ನಿಡುವಲೆ
ಸಡಿವಲೆ ದಡಿವಲೆಗಳೊಪ್ಪಿದುವು ಲುಬ್ಧಕರೊಳ್ ೨೫೭

ತೊಗರಂ ಹಿಂಡುಗಲಂಕೆ ಸಾಳುವನಭಂಗಂ ಜಾಯಿಲಂ ಸೂಚಿವಾ
ಲಗನುದ್ದಂಡನೊರಂಟನಟ್ಟುಬಳಗಂ ಜೋಗಂ ಜವಂ ರಕ್ಕಸಂ
ಪೊಗೆಗಣ್ಣಂ ಕರಿಬಂದಿಕಾಜಿನಘಟಂ ಪೇಗಾಯ್ಲನೆಂದೆಂಬ ಕು
ನ್ನಿಗಳಂ ಹಾಸದೊಳಿಟ್ಟು ಕಾಡೊಡೆಯನಂದೆಯ್ದತ್ತು ಕಾಂತಾರಮಂ ೨೫೮

ರಾಹುವಿನಂತೆ ಯಕ್ಷಪತಿವೈರಿ ನಿರೋಧಿನಿಯಂತೆ ಪುಂಡರೀ
ಕಾಹಿತಕಾರಿ ದುಷ್ಟಶಿಶುಪಾಲಕನಂತಿರೆ ಕೃಷ್ಣಸಾರತೇ
ಜೋಹರಕಾರಣಂ ಕುರುಕುಲಾಧಿಪನಂತೆ ವೃಕೋದರಾರಿ ಕೇಳ್
ಸಾಹಸಮಲ್ಲ ನಿನ್ನಘಟಿಸಂಕೆದ ಜಾಯಿಲನುರ್ವರಾಧಿಪಾ ೨೫೯

ಹರಿಣನ ಬೇಂಟೆ ಪೆರ್ಬುಲಿಯ ಬೇಂಟೆ ವರಾಹನ ವೀರಬೇಂಟೆ ಪೆ
ರ್ಗರಡಿಯ ಬೇಂಟೆ ಸೆರ್ನರಿಯ ಬೇಂಟೆ ವಿಹಂಗದ ಮೊತ್ತಬೇಂಟೆ ತ
ತ್ತರಿಗಳ ಬೇಂಟೆ ಸಿಂಹಗಳ ಬೇಂಟೆಗಳೆಂಬ ವಿವಾದಿಯಾದ ಭೀ
ಕರ ಮೃಗಸಂಘಸಂಹನನಮೊಪ್ಪಿತು ಪರ್ವಿದರಣ್ಯಮಧ್ಯದೊಳ್ ೨೬೦

ನಡೆಯೆಂಬಬ್ಬರಿಸೆಂಬ ಪರ್ವಿ ಪರಿಯೆಂಬಾರೆಂಬ ಸಾರೆಂಬ ಸಂ
ಗಡಿಸೆಂಬಡ್ಡವಿರೆಂಬ ಸಾರ್ದು ಸರಿಮಂ ಕಟ್ಟೆಂಬ ಮುಟ್ಟೆಂಬ ಪಿಂ
ದಡಸೆಂಬೊತ್ತರಿಸೆಂಬ ಸುತ್ತ ಸಿಲಿಸೆಂಬೆಯ್ದೆಂಬ ಮೈದೋಱುತಂ
ಪೊಡೆಯೆಂಬೊಂದು ಪುಳಿಂದವೃಂದನಿನದಂ ಪೊಣ್ಮಿತ್ತು ಕಾಂತಾರದೊಳ್ ೨೬೧

ಮುರಿ ಹರಿದೋಡೆ ಹಂದಿ ಗತಿಗೆಟ್ಟಿರೆ ಪೆರ್ಬುಲಿಗುರ್ಬುಗುಂದೆ ಕೇ
ಸರಿ ಮುರಿವೋಟಿ ಕಾಯ್ದು ಕರಿ ಮೇಪುಟಿದಾಲಿಸೆ ಪುಲ್ಲೆವಿಂಡುಗಳ್
ಮುರಿದು ಬಿಗುರ್ತು ನೋಡೆ ಕಡವೃಕ್ಕಡವಿರ್ದವರಂತೆ ಝೊಂಪಿಸು
ತ್ತಿರೆ ಭರದಿಂದೆ ಬೇಂಟೆನಱುಬ್ಬರಮುಬ್ಬರಮಾಯ್ತರಣ್ಯದೊಳ್ ೨೬೨

(ಸೂಕ್ತಿಸುಧಾರ್ಣವಂ ೩-೧೧೬)

ಮತ್ತಗಜಂಗಳ ಕೋಡಂ
ಕತ್ತುರಿ ಮಿಗಮಂ ಪೊದಟ್ಟಿ ಪೊಂಬುಲಿದೊವಲಂ
ಚಿತ್ತೈಪುದೆಂದು ಕಾಣ್ಕೆಯ
ನಿತ್ತು ಮನಂಬಡೆದು ಧರಣಿಪತಿಗಿಂತೆಂದಂ ೨೬೩

(ಸೂಕ್ತಿಸುಧಾರ್ಣವಂ ೩-೮೮)

ತುಱುತುಱನೆ ತಿಂಬ ತನುವಂ
ನೆಱೆ ಪಂದಿಗಳೊಱಸಿಕೊಂಡು ಭರದಿಂದೆತ್ತಂ
ತಱೆಯದ ಕೋಡುಂಗಲ್ಲುಂ
ಮುಱಿಯದ ಪೆರ್ಮರನುಮಿಲ್ಲಾ ಕಾಡೊಳ್ ೨೬೪

(ಸೂಕ್ತಿಸುಧಾರ್ಣವಂ ೩-೯೨)

ಬಿಡುವುದು ತಡವೆನೆ ಮೊಲನಂ
ಪಿಡಿವುದು ಕಾಣ್ಬಳವಿಯೊಳಗೆ ಸರಳಿಪ ಮರೆಯುಂ
ತಡೆಗಡಿದು ಕರ್ಚಿ ಮೃಗಮಂ
ಕೆಡೆವಿಡಿವಾ ನಾಯ್ಗಳರಸನಿಂತಿರವೇಡಾ ೨೬೫

(ಸೂಕ್ತಿಸುಧಾರ್ಣವಂ ೩-೯೭)

ಮಸಗಿ ಕನಲ್ದು ಸಿನ್ನಣುಗಿನಂಕದ ನಾಯ್ ಮರೆವಜ್ಜೆಗಾಣ್ಬುದುಂ
ಮಸೆವುದು ಕೋಡಕತ್ತಿಗಳನಾಗಳೆ ಸುಂಟುಗೆಗೋಲ್ಗಳೆಲ್ಲಮಂ
ಬಸಿವುದು ಕೋಪದಿಂದರೆಯುತಿಪ್ಪುದು ಸಂಬರಮೂ ಕ್ಷಣಾರ್ಧದಿಂ
ಪೊಸೆವುದು ಕಿಚ್ಚಿನಲ್ಲಿ ಪೆಱತೇನದು ಮಾಣದಿಳಾಧಿನಾಯಕಾ ೨೬೬

(ಸೂಕ್ತಿಸುಧಾರ್ಣವಂ ೩-೯೮)

ಸೋಪಿನ ತೋಪಿನ ಪಳಹದ
ಕೋಪಿನ ಪಾಳಿವದ ಗೋರಿವೇಂಟೆಗೆ ಮತ್ತಂ
ಚಾಪಪ್ರವೀಣರುದ್ಧತ
ಕೋಪರ್ ನಡೆಗೊಂಡರಲ್ಲಿ ಮುಂದೆ ಪುಳಿಂದರ್ ೨೬೭

(ಸೂಕ್ತಿಸುಧಾರ್ಣವಂ ೩-೧೦೪)

ಬರೆದರೊ ನೆತ್ತರಿನೆಂಬಂ
ತಿರೆ ಪಜ್ಜೆಗಳೆಸೆಯೆ ನಾಂದು ನೆತ್ತರೊಳೆತ್ತಂ
ಕರಿಮಸ್ತಕದೊಳ್ ಮುಕ್ತೋ
ತ್ಕರ ಸಾಲಿಡೆ ತೋಱುವತ್ತು ಮೃಗಪತಿಮಾರ್ಗಂ ೨೬೮

(ಸೂಕ್ತಿಸುಧಾರ್ಣವಂ ೩-೧೦೯)

ಇದೆ ಮರೆ ಹಿಕ್ಕೆಯಿಕ್ಕಿದೆಡೆ ಪುಲ್ಲೆಯ ಬಾಯ ಕೞಂಕೆ ಸೂ
ಸಿದತ್ತಿದೆ ಕೆಸಱೊಳ್ಪೊದಬ್ದಿ ನಡೆಗೊಂಡುದು ಪಂದಿಯ ಹಿಂಡು ಮುಂದೆ ಸೋ
ಡದೆ ಹೊಲಸಂಟಿ ಕಾಂಬುವದು ಪೆರ್ಬುಲಿಯಿರ್ದ ಪೊದರ್ಪಿಸುತ್ತ ಪೆ
ರ್ಚಿದ ವನದಲ್ಲಿ ಪಜ್ಜೆವಱಿಯಿಂ ನಡೆಗೊಂಡುದು ಭಿಲ್ಲಸಂಕುಳಂ ೨೬೯

ಹಂದಿಗೆ ಸಾಳುವಂ ಮರೆಗೆ ಜಾಯಿಲನೇಣಕುಲಕ್ಕೆ ಚುಂಚುವಾ
ಲಂ ದಿಣಿದಿರ್ದ ಕೊಂಡಗುರಿಗಂ ತೊಗಱಂ ವೃಕಸಂಕುಳಕ್ಕೆ ಜೂ
ಗಂ ದಿಟವಲ್ತೆ ಮಾರಿಯೆಲೆಭೂಪತಿ ನೋೞ್ಪೊಡೆ ತೋರ್ಪೆನೆಂದು ಸೋ
ಡೆಂದತಿಭಾಷೆಯಂ ನುಡಿಯುತಿರ್ದನದೊಬ್ಬ ಪುಳಿಂದನಾಯಕಂ ೨೭೦

ಎಲೆಯಲೆ ಹೋಯ್ತುಹೋಯ್ತು ಪೊಲನಟ್ಟೆಱಿಯಟ್ಟಿರಿ ಸಾರುಸಾರು ಪೆ
ರ್ಬುಲಿಯುಲಿಯಟ್ಟೆ ಪೋದಪುದೆಯಾರ್ದೆಸೆಯಾರ್ದೆಸೆ ಯಿತ್ತಲಿತ್ತಲಿ
ಕ್ಕೆಲಸಿದಿರಾಗಿ ಬರ್ಪುದಿದೆ ನಾಯ್ವಿಡು ನಾಯ್ವಿಡುಗೆಂದೆನುತ್ತ ಹೆ
ಗ್ಗಲಿಸುವ ಬೇಡರುಬ್ಬರವಗುರ್ವಿಸಿತಾ ವನದೇಶಮಧ್ಯದೊಳ್ ೨೭೧

ಮೆಳೆಗಳನೊತ್ತುಗೊಳ್ ಮುರನನೇಱು ಕೆಲಂಬಿಡದಿತ್ತ ಜಾಱು ಬಂ
ದೊಳಪೊಗದಿರ್ ಬಟೊಳ್ ಪಿಡಿದ(?) ನಾಯ್ಗಳನಟ್ಟೆಱಿಯಿತ್ತಲಿತ್ತ ಪೋ
ಯ್ತಿಲೆಯಿಲೆ ಕಾಹುಕಟ್ಟು ಕೆಡಪೌ ಬಲೆಗಾಗಿರೆ ಸೋಹೆನಿಪ್ಪ ತ
ತ್ಪಳಕಳಮುಣ್ಮೆ ಬೇಡವಡೆ ಬೊಬ್ಬಿಡುತಿರ್ದುದು ತದ್ವನಾಂತದೊಳ್ ೨೭೨

ತೊಡು ಕೋಲಂ ಹರಿಣಂಗೆ ಹಾಸುಬಲೆಯಂ ಕೋಕಂಗೆ ನೀದಾಣಮಂ
ಬಿಡು ಪೆರ್ಬಂದಿಗೆ ನಾಯಬಾಯ ಪೊಲನಂ ಕೈಗೆತ್ತಿಕೊಳ್ ಬಿಲ್ಲಿಯಂ
ಕುಡೆ ಕುತ್ತೆಬ್ಬಿಸು ಮೇಲೆಪೊಯ್ದು ಹುಲಿಯಂ ಹೊಯ್ ತೋಳನಂ ಹೊಯ್ ಹೊ
ಕ್ಕಿಡು ಹೊಯ್ದಂಗೆಯೊಳೆಯ್ದು ಮುಂದೆ ಸರಿವಂ ನೀಂ ಕಟ್ಟು ಸಾರಂಗಮಂ ೨೭೩

ಇಡು ಪೊಲನಂ ತೆರಳ್ಚದಿಸು ಪುಲ್ಲೆಗಳಂ ಬಲೆಯೊಡ್ಡಿ ಖಡ್ಗಿಯಂ
ಪಿಡಿ ಮುರೆವಿಂಡನೆಟ್ಟು ಪುಲಿಯಂ ಛಲದಿಂದಿಱು ಪಂದಿಯೊತ್ತುಗೊಂ
ಡೊಡೆ ಬಿಡು ನಾಯ್ಗಳಂ ಸಮೆದ ಪೆರ್ಗುಟಱಿಯೊಳ್ ಕರಿಪೋತಕಂಗಳಂ
ಕೆಡಪು ಮುಳ್ಚಿ ಸಿಂಹಮನೆನಿಪ್ಪ ಘನಧ್ವನಿಯಾಯ್ತರಣ್ಯದೊಳ್ ೨೭೪

(ಗಿರಿಜಾಕಲ್ಯಾಣಂ ೧-೮೩)

ಕರಡಿಗೆ ಕೇಶಮಂ ಮರೆಗೆ ವಸ್ತ್ರಮನಾ ನವಿಲಿಂಗೆ ಕುಂಚಮಂ
ಕರಯುಗಮಂ ಕವಲ್ವಿಡಿದ ಕೊಂಬುಗಳುಳ್ಳ ಮೃಗಕ್ಕೆ ಸಂದ ಪೆ
ರ್ಗರಡಿಗೆ ಮೀಸೆಯಂ ಚಮರಿಗೊಪ್ಪುವ ವಾಲಿಮನಯ್ದೆ ತೋರ್ಪ ಜೆ
ಕ್ಕೈರಳಿಗೆ ಜೊಟ್ಟೆಸೆತ್ತುವ ರವಂ ಪಿರಿದಾದುದು ಸನ್ನೆನೇಂಟಿಯೊಳ್ ೨೭೫

ಬರಿಕೈವೀಸುವ ಕೇಸರಿ
ಬರೆ ಪೊಯ್ದೆಱಗುವ ಸುಪಂದಿ ಬರೆ ನೊಳಕಾಲಂ
ಭರದಿಂದೆತ್ತುವ ಪುಲಿಯೆ
ಱಿರೆ ನೆಲನಂ ಪತ್ತೆ ಸನ್ನೆನೇಂಟಿಯೊಳರೆಬರ್ ೨೭೬

ನಡುಗಿತ್ತು ವಿಹಗತತಿಯು
ರ್ಕುಡುಗಿತ್ತು ಮೃಗಾಳಿ ತನ್ನ ನಿಜಪೋತಕಮಂ
ಮುಡಗಿತ್ತು ಗೂಡುಗುಹೆಯೊಳ್
ತೊಡಗಿತ್ತು ಕಿರಾತಭೀಕರಧ್ವನಿ ವನದೊಳ್ ೨೭೭
(ಗಿರಿಜಾಕಲ್ಯಾಣಂ ೧-೮೪)

ನಡೆನಡೆದು ನಸು ಬಳುಂಕು
ತ್ತಿಡಬಲನಂ ನೋಡಿ ಕೂಡೆಯಾಘ್ರಾಣಿಸುತಂ
ಗಿಡುವಿನ ಸರುವಿನ ದರುವಿನ
ಮಡುವಿನ ಬಟ್ಟೆಗೊಂಡು ಶುನಕನಟ್ಟಿತು ಮೊಲನಂ ೨೭೮
(ಗಿರಿಜಾಕಲ್ಯಾಣಂ-೧೮೫)

ಅಟ್ಟಿದೊಡೆ ತಿರುಗಿ ಮುರಿಮುರಿ
ದೊಟ್ಟೈಸುತೆ ಕೊಂಕಿ ಪರಿಯುತೆಡನಂ ಬಲನಂ
ದಿಟ್ಟಿಸುತೆ ನಿಂದು ನಿಲ್ಲದೆ
ನಿಟ್ಟೋಟದೊಳೋಡಿತೆಸೆವ ಮುಸಕದ ಶಶಕಂ ೨೭೯
(ಗಿರಿಜಾಕಲ್ಯಾಣಂ ೧-೮೬)

ಬಿಡದೋಡೆ ಕಂಡು ಶಬರಂ
ಕಡುಮುಳಿದಱತಿಯಟ್ಟಿ ತಿರುಗಿ ತಿರುಗುತ್ತಂ ಸಂ
ಗಡಿಸಿ ಪರಿದುಬ್ಬುಬೆನುತ್ತಂ
ಬಡಿಕೋಲಿಂದಿಟ್ಟನಧಿಕಬಲನಂ ಮೊಲನಂ ೨೮೦
(ಗಿರಿಜಾಕಲ್ಯಾಣಂ ೧-೮೭)

ಇಡೆ ತಿರುಗುತ್ತ ಬರ್ಪ ಬಡಿಕೋಲೊಳ್ ಸಿಲ್ಕುತೆ ಸಿಲ್ಕದಾ ಮೊಲಂ
ಗಿಡುಗಳೊಳೋಡಿ ಪೊಕ್ಕ ಪದದೊಳ್ ಘನರಾಹುವ ಕೋಟಲೆಗ್ಗ ಭೀತಿಗೊಂ
ಡುಡುಪತಿ ಬಿಂಬದಿಂದೆ ಸರಿದೋಡಿ ಮುಗಿಲ್ಗಳೊಳೆಯ್ದೆ ಪೊಕ್ಕು ಗಂ
ಡುಡುಗಿ ಸುರುಳ್ದ ತಚ್ಛಶಕನಂ ನೆರೆ ಪೋಲ್ತುದು ಕಾಡ ಪೆರ್ಮೊಲಂ ೨೮೧
(ಗಿರಿಜಾಕಲ್ಯಾಣಂ ೧-೮೮)

ಚರಿಸದೆ ಮೇಹುಗೊಳ್ಳದೆ ಸಲಿಕ್ಕೆಯನೊಲ್ಲದೆ ನಿದ್ರೆಯಿಲ್ಲದೊ
ಳ್ಮರನಮೊದಲ್ಗೆ ಸಾರದೆ ಮೃಗಾಳಿಯ ಸೇರದೆ ನೀರ್ಗೆ ಪಾರದು
ರ್ಧರ ಮದನಾಗ್ನಿಗಳ್ಕಿ ತನುತಾಪದೆ ಜೇಗೆಗೆ ಬಳ್ಕಿ ಸುಕ್ಕಿ ವಲ್ಲಭಾ
ವಿರಹದೊಳಿರ್ದುದೊಂದು ಹರಿಣಂ ಬರೆದೊತ್ತಿದ ನೂತನ ಚಿತ್ರಮೆಂಬಿನಂ ೨೮೩

ನಿಮಿರ್ದ ಕೊರಲ್ ಮರಲ್ದು ಮಡಿಮೂಱಿದ ಮುಂದಣಕಾಲ್ಗಳೆಟ್ಟಿ ಪ
ಕ್ಷ್ಮಿಮತನು ಜೋಲ್ದುರಂ ಪೆಱಗನಪ್ಪಿದ ಕೊಂಬುಗಳಾಲಿಸುತ್ತೆ ವಿ
ಶ್ರಮಿಸುವ ಕರ್ಣಮುಳ್ಕುಗುಳ್ದ ಕಣ್ ಮಿಡುಕಾಡುವ ಕಂಠನಾಳಮುಂ
ದಮರ್ದಿರೆ ಸೀರನುಂಬೆರಲೆಯುಂ ಬರಲೊಲ್ಲದೆ ನೋಡಿದಂ ನೃಪಂ ೨೮೩

(ಲೀಲಾವತಿ ೬-೫೬)

ಪಸರಂ ಚಿತ್ರೆಡೆಯಾಡ ಸೀಡಡಿ ಪೊವಟ್ಟಾ ಕರ್ಣವಾಕುಂಚಿತಾ
ಸ್ತ್ರಸಮೇತ್ರುಚ್ಚಕರಾಗ್ರಮಸ್ಖಲಿತಚಿತ್ತ್ರಂ ಸಂಸ್ಫುಟಾಲೋಕನಂ
ಕುಸಿದಂಗಂ ಮಿಗೆ ದೃಷ್ಟಿ ಮುಷ್ಟಿ ಶರಸಂಧಾನಂಗಳೊಂದಾಗಿ ತಾ
ನೆಸಲಂಪೊಂದು ಕುರಂಗನಂ ಶಬರನೊಪ್ಪಿರ್ದಂ ಮಹಾರಣ್ಯದೊಳ್ ೨೮೪

ಕಂಡುದು ಮೃಗತತಿಯತಿಭಯ
ಗೊಂಡುಮು ಪೆಪ್ಪಳಿಸುತಗಿದು ಸರಿದೋಡೆ ಕರಂ
ದುಂಡಿಸುತಿರ್ದಪುದೆಂದುರು
ಚಂಡಾಸ್ತ್ರದಿನಸಮಶಬರನಿಸೆ ಕಾನನದೊಳ್ ೨೮೫

ತಿರುಗುವ ತನು ಬೆಚ್ಚುವ ಕಣ್
ಪರಿವ ಮನಂ ನಟ್ಟ ಕಿವಿಯಡಂಗುವ ಸುಯ್ಲಿಂ
ಸರಳಂ ಮೀಱುತೆ ಹರಿಣಂ
ಪರಳಿಸಿತ್ತೈದಾಱಸೇಟಿನೆಂಟೊಂಬತ್ತ್ರಂ ೨೮೬

ಕುನಿಕುನಿದು ವನದ ಗಿಡುಗಿಡು
ವಿನ ಮಱೆಮಱೆಯಲ್ಲಿ ಸುೞಿದು ಸುೞಿದೋಡುತ ಠ
ಕ್ಕಿನ ಹರಿಣನನತಿಭರದಿಂ
ತನತನಗೆ ಪುಳಿಂದರಟ್ಟಿ ಮುಟ್ಟುತ್ತೆಚ್ಚರ್ ೨೮೭

ನಿಲ್ಕೆ ಶಬರಾಳಿಯೆಚ್ಚ ಸ
ರಲ್ ಕಿಱಿಕಿಱಿದು ನಟ್ಟು ಗಱಿವೋಱುತ್ತಂ
ನಾಲ್ಕುಂ ಮೆಯ್ಯೊಳ್ ತೀವಿರೆ
ಶಿಲ್ಪದ ಮೃಗಸೆಯ್ಮೃಗದ ತೆಱನಾಯ್ತಾಗಳ್ ೨೮೮

ತೊರೆದ ಕುಚಂಗಳಿಂದೆ ಕೋಣಸಂ ನಸೆಯುಂ ಮೃಗನುಂ ಕುರಂಗಿ ಸಾ
ದಿರಲೆಡೆಗೊಂಡು[೧]ಭಲ್ಲದಿಸೆ[೧]ರಳ್ಕಡಿಯಾಗೆ ಕಿರಾತನೆಚ್ಚೊಂಡಂ
ತರಿಸದೆ ಪುಲ್ಲೆ ಸಾರ್ಚಿ[೨]ಮಜ್ಜುಯುಂ[೨] ಪೊಲೆಯುಂ ನೆರೆದೇಣಸಂ ಬಟಿ
ಕ್ಕೆರಡುಡಿಯಾಯ್ತು ಕೇವಲಮೆ ದೇಹಿಗೆ ಸಂಸೃತಿಮೋಹಬಂಧನಂ ೨೮೯

(ಜಗನ್ನಾಥವಿಜಯಂ ೧೬–೨೨)

ಹರಿಣನನಾರ್ದಿಸಲ್ಕೆ ಶಬರಂ ಶಬರಪ್ರಿಯಕಾಂತೆ ಬಂದು ಬ
ಟ್ಟಿತ್ತ ರಳಿಯನೀಕ್ಷಿಸುತ್ತುಮಿರಲಾಕೆಯ ಕೇಕರಕಾಂತಿಜಾಲದಿಂ
ಪರಿವೃತನಾಗಿ ತನ್ಮೃಗಮದೇಂ ಪಡೆದತ್ತೊ ಮೃಗಾಂಕಮಂಡಲಂ
ಧರೆಗವತೀರ್ಣಮಾದುದೆನಿಪೊಂದಭಿಶಂಕೆಯನೊಂದು ತಾಣದೊಳ್ ೨೯೦

(ಜಗನ್ನಾಥವಿಜಯಂ ೧೬–೨೩)

ಪುಲ್ಲೆಯನಂದು ತಾಸಿಸುತ ಪೋಲ್ದ ಮೃಗಾಕ್ಷಿಯನಲ್ಲಿ ಭಾವಿಸಲ್
ಪುಲ್ಲಶರೇಶನಾರ್ದಿಸೆ ಪುಳಿಂದನ ಕೈಯುಡುಗಿತ್ತು ನೋಡು ಮು
ನ್ನೆಲ್ಲಿಯುಮಲ್ಕೆ ಪೋದಪರನಾರಿಳಿಯಲ್ಪಶಮೆಂಬ ಗಾದೆಯಿಂ
ದೆಲ್ಲಸುಭಿಲ್ಲರಾ ಶಬರಿಯೊಳ್ ಶಬರೇಶನನೊಲ್ದು ಕೂಡಿದರ್ ೨೯೧

ಈ ಸರಲೊಂದಕೆಂಟಿರಳಿಯುಂ ನೆಱೆ ತಾಗದೊಡಿನ್ನು ಶಸ್ತ್ರಸಂ
ನ್ಯಾಸಮದೆಂದು ಜೇಡದಿರಸೆಚ್ಚಱಿಸಲ್ ಕಡೆಮುಟ್ಟೆ ಹೋಗದಂ
ದಾಸರದಾಡಿಗೊಂಡು ಸರಲೆಚ್ಚದಱಿಂದಮೆ ನೂಂಕಿ ಪುಲ್ಲೆಯಂ
ಹೇಸದೆ ಕೊಂದನಾ ಶರದ ಜೆಲ್ಪಚಮತ್ಕೃತಿಗೆಲ್ಲರೊಪ್ಪಿದರ್ ೨೯೨

ಸ್ಮರನಲಂಬಿನಿಂದೆರಡುಲಕ್ಷ್ಯಮನೊರ್ಮೆಸೆವಂತೆ ಹುಲ್ಲೆಯಾ
ಶಿರದೆರಡೊರ್ಮೆ ಖಂಡಿಸುವ ಚಿತ್ರಮನೀಕ್ಷಿಸಿದೆಂದು ಜೇಡನಂ
ದೆರಡರ ಕೋಟ್ಗಳಂ ಸೆಣೆದು ಮೈಮುರಿವೊಂದಿದ ಕಾಲದಲ್ಲಿಯಾ
ಶಿರದೆಱೆಯೆಚ್ಚ ಲುಬ್ಧಕನನಾ ಶಬರೇಶ್ವರರಲ್ಲಿ ಮೆಚ್ಚಿದರ್ ೨೯೩

ಮೇಲೊರ್ವ ಶಬರ ತಾನತಿ
ಲೀಲೆಯೊಳಂ ಹರಿಣನೊಂದು ಪೋವುದ ಕಾಣುತ
ಬಾಲಮನಾಲಗೆಯೆರಡಂ
ಕೋಲೊಂದಱಿಲೆಚ್ಚನಾತನೇಂ ಚತುರತೆಯೋ ೨೯೪

---

[೧] ವಲ್ಲಭಸ(ಸ) [೨] ಮಗನಂ(ಸ)

ಪೊಸನಸೆಯೊಳ್ ಮೃಗಂ ಮೃಗಿಯುಮಗ್ಗಲಿಸುತ್ತಿರೆ ಬೇಡನಿಂಬುವೆ
ತ್ತಿಸಲೆರಡಂಬನಂಬಿನೊಳಿ ಮಾರ್ಮಸೆವುತ್ತಿರೆ ಪುಲ್ಲೆ ಕಂಡು ಚಿಃ
ಕಿಸುಗುಳಿ ಬೇಡ ನಸ್ಮಸೆವೊಡಂಬೆರಡಂ ಮಸೆವಾಸೆಯೇಕೆಯೆ
ಮೃಸುವೆರಡೊಂದೆಜೀವಮೆಸು ಪೋಣಿಸೆಯಲ್ ಸರಳೊಂದೆ ಸಾಲದೇ ೨೯೫
(ಸೂಕ್ತಿಸುಧಾರ್ಣವಂ ೩–೨೨೯)

ಹರಿಣಿಯುಮೆಚ್ಚು ತತ್ಪತಿ ಕುರಂಗಮುನಾರ್ಜಿಸಲೆಂದು ಬಾಣಮಂ
ತಿರುವಿನೊಳಿಟ್ಟು ತೀವಿ ತೆಗೆವನ್ನೆಗಮುಂಗಜನಸ್ತ್ರಘಾತದಿಂ
ಚೆರಳೆ ನೆಲಕ್ಕೆ ಬೀೞ್ತಿ ಮುಷ್ಪು ಭಾಪ್ಪುಪಕಾರಿಯೆನುತ್ತ ಬಿಲ್ಲುಮಂ
ಸರಳುಮನಿಕ್ಕಿ ಕೈಮುಗಿದು ವರ್ಣಿಸಿದಂ ಸ್ಮರನಂ ವನೇಚರಂ ೨೯೬
(ಕಾವ್ಯಸಾರಂ–೧೧೦೨, ಸೂಕ್ತಿಸುಧಾರ್ಣವಂ ೩–೨೩೦)

ಮೃಗಮೆರಡೊಂದು ತಾಣದಿ ಬರುತ್ತಿರಲುಂ ಬಿಱುಬಿಲ್ಲ ನಾರಿಯಂ
ತೆಗೆದು ಪುಳಿಂದನಾರ್ಮೆ ಬಿಡೆ ಕೂರ್ಗಣೆಯೋಪಳ ನಟ್ಟುದೆಂದು ತೊ
ಟ್ಟಗೆ ಹರಿಣಂ ನೆಲಕ್ಕೆ ಕೆಡೆಯಲ್ಕದನೋವದೆ ನಾಡೆ ಶೀಘ್ರದಿಂ
ನಗಿಪೊಱಗಿತ್ತು ಹುಲ್ಲೆ ಭಲರೇಯೆನುತಂ ನುಡಿದಂ ವನೇಚರಂ ೨೯೭

ಒಡನೆ ಬರಲ್ಕೆ ಸತ್ತವನುಗೂಡದಿರಲ್ ಮಱಿಹುಲ್ಲೆ ತಾಯುಮಂ
ಗಡ ಬಿಡಮೊಯ್ಯನೊಯ್ಯನೊದಗುತ್ತಿರಲೊರ್ವಪುಳಿಂದ ಕಂಡು ನೀ
ಡಡಿಯಿಡುತುಬ್ಬಿಯಾರ್ಜಿಸಲು ಕಾಣುತಲಾಕ್ಷಣ ತಾಯಿಬಂದು ಮುಂ
ನಡಿಸಿ ಸರಲ್ಗೆ ತತ್ತನುವನಿತ್ತುದು ಪುತ್ರವಿಮೋಹಮೆಂತುಟೋ ೨೯೮

ಶರಹತಿಯಿಂ ಹತಮಾಗು
ತ್ತಿರಲಾ ಮಾತೆಯುಮನೆ ಕಂಡು ಮಱಿಯುಮಱಿದೆಯೊಳ್
ಪೊರಳುತ್ತಂ ಮೊಲೆಯುಣುತಿರೆ
ಪರಿದೆಚ್ಚಂ ಪಿಶಿತಲೋಲರೊಳ್ ದಯೆಯುಂಟೆ ೨೯೯

ಪತಿಸಹಿತೇಣನೊಂದು ಪರಿಯುತ್ತಿರೆ ಲುಬ್ಧಕನೆಯ್ದಿ ವೇಗದಿಂ
ಪತಿಯುಮನೆಸಲ್ಕೆ ಬೀೞಲದ ಕಾಣುತಲಾ ಪತಿಭಕ್ತೆ ಪುಲ್ಲೆ ತ
ತ್ಪತಿಯ ಪದದ್ವಯಂಗಳೊಳು ಬೀೞುತ ಜೀವಮುಬಿಟ್ಟುದಾಗಳಾ
ಸತಿಯುಗುಣಕ್ಕೆ ಭಿಲ್ಲರುಗಳಾಶ್ಚರಿಯಂಗಳ ಮಾಡಿ ನೋಡಿದರ್ ೩೦೦

ಅರಸಿ ಕುರಂಗ ಸತ್ಸತಿಯನೆಲ್ಲೆಡೆಯೊಳ್ ನಡೆನೋಡಿ ಕಾಣದಾ
ನೆರೆಯುೞಲುತ್ತ ಲುಬ್ಧಕಶರಾಳಿಯೊಳಂ ಹತವಾದಳೆಂಬ ನಿ
ರ್ಭರದತಿದುಃಖದಿಂ ಸತಿಯರಿಲ್ಲದ ಬಾೞುವೆ ಪೊಲ್ಲದೆಂದು ಗೋ
ಣ್ಮೃತಿಯಿನಗಾಗ್ರದಿಂ ನೆಲಕೆ ಬಿೞ್ದುದು ನಲ್ಲಳಗಲ್ಕೆಯೆಂತುಟೋ ೩೦೧

ಆಗಲಿ ಶರೀರದಿಂದುೞಿವನಲ್ಲ ಮನಃಪ್ರಿಯ ತನ್ನನೆಂದು ಮ
ಚ್ಚಿಗದೊಳು ದುಃಖದಿಂದಱಸಿ ಮುನ್ನಿನ ತಾಣದೊಳಿರ್ದ್ದು ನೋಡುತಾ
ನಗದಡಿಯಲ್ಲಿ ಗೋಣ್ಮಱಿಯೆ ಬಿರ್ದುದ ವಲ್ಲಭೆ ಕಾಣುತಲ್ಲಿಪ್ರ
ಜ್ಞೆಗ ವಿಗೆ ಕೂಡೆ ಬೀೞ್ದಸುವ ಬಿಟ್ಟುದು ತತ್ಪತಿಮೋಹಮೆಂತುಟೋ ೩೦೨

## ಹುಲಿಯ ಬೇಟೆ

ಭಂಡಿಯ ಪುಲಿಯಂ ಮೆಲ್ಲನೆ
ಕೊಂಡಿೞಿಪುತೆ ಸರಿದು ಕೊರಲ ಹಾಸದ ನೇಣಿಂ
ಕಂಡಳವಿಗೆ ಸಿಲ್ಕಿದ ಮೃಗ
ಮಂಡಲಮನದರ್ಕೆ ತೋಱಿದ ಶಬರಾಧೀಶಂ ೩೦೩

(ಗಿರಿಜಾಕಲ್ಯಾಣಂ ೧-೯೪)

ನಿಮಿರ್ದಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ ಚಲದ್ವಾಲದಂಡಂ
ವಿಮಳಚ್ಚಂಡಾಕ್ಷಿ ಸೂಕ್ಷ್ಮಶ್ವಸನವದನಮತ್ಯೇಕಚಿತ್ತಂ ನಿರಸ್ತ
ಕ್ರಮಗಾಥಂ ಕೂಡಿ ತನ್ನೊಳ್ ಬಗೆದಳವಿಗೆ ನಿಂದೇಣನಂ ಕಂಡು ಪ್ರೋಯ್ಸ್ಯ
ತ್ರಮಱು[೧]ತ್ತಾಡೊತ್ತಿ ಪೀ[೧]ಱುತ್ತಡಸಿ ಕೆಡಪಿತೊಂದೇಣನಂ ಚಿತ್ರಕಾಯಂ ೩೦೪

(ಗಿರಿಜಾಕಲ್ಯಾಣಂ ೧-೯೫)

ಪೊದಱಿನೊಳಗತ್ಯುನ್ನತತರ
ಮದಾಂಧತಾನಂತಬಲವಿಭೂಷಣನಪ್ಪ
ಗ್ಗದ ಪೆರ್ಬುಲಿಯಿರೆ ಶಬರರ್
ಮುದದಿಂದಂ ನೋಡೆ ಕಂಡು[೨]ಸೋಪಲ್ಗಾಗಳ್[೨] ೩೦೫

(ಗಿರಿಜಾಕಲ್ಯಾಣಂ ೧-೯೬)

---

೧ ತಾಱುತ್ತೆ ಕೀ(ಅ)  ೨ ಮತ್ತೊಂದೆಡೆಯೊಳ್(ಅ)

ಪೆಳೆಯೊಳಗಿರ್ದ ಪೆರ್ಬುಲಿಯನಾರ್ದು ಪುಳಿಂದನಿಕಾಯಮೆಟ್ಟಿ ಸಿಂ
ಗಳತ್ತರಲೋಚನಂ ಬಹಳಸಂಹನನಂ ಪೃಥುಳಾಸ್ಯಗಹ್ವ[೧]ರಂ
ಗ[೧]ಳಿತನಿಶಾತದಂಷ್ಟ್ರನತಿರೋಷಣನಂ ಘನಚಿತ್ರಕಾಯನು
ಜ್ವಳಚರಣಂ ವಿಘೂರ್ಣಿತಗಳಂ ಪೊಱಮಟ್ಟುದುದಗ್ರವೃತ್ತಿಯಿಂ ೨೦೬

(ಗಿರಿಜಾಕಲ್ಯಾಣಂ ೧-೯೭)

ನಿರ್ಝರಿಸುತ್ತೆ ಬೇಂಟೆಯ ಕಿರಾತರರಣ್ಯಮನೆಯ್ದೆ ತಲ್ಲಿ ಪೆ
ಚ್ಚಿರ್ದ ಮೃಗಂಗಳಂ ತವಿಸುವಬ್ಬರಬೊಬ್ಬೆಗಳಿಂದೆ ಪರ್ಬಲು
ರ್ಚಿದ್ದುದಮೊಂದು ಪೆರ್ಬುಲಿ ಗುಹಾಂತರಮಂ ಪೊಱಮಟ್ಟು ಬಂದು ಮುಂ ಪ
ರ್ಚಿದುದಮೊಂದು ಪೆರ್ಮೆಳೆಯ ಪೊಕ್ಕಡಗಿರ್ದುದದೇನ ಬಣ್ಣಿಪೆಂ ೨೦೭

ನೆಲಸೊಳಡಂಗಿ ಕುಕ್ಕುರಿಸಿ ಮುಂದಣ ಕಾಲ್ಗಳ ನೀಡಿ ಮೇಲೆ ತ
ತ್ತ್ರಲೆಯನಿಡುತ್ತೆ ಜೃಂಭಿಸುವ ಮುಕ್ಕನಕಮಂ ಚರಣಾಗ್ರದಿಂದಮಂ
ತೊಲಗಿಸಿ ವಕ್ತ್ರಮಂ ತಡೆವುತಂ ಚಲಿಸುತ್ತಮೆ ಬಾಲಮೊಪ್ಪುವೆ
ಕ್ಕಲಗಳ ನೋಡುತಂ ರಿಪುನಿವಾರಣನಾ ಪುಲಿಯಿರ್ಪ ರೌದ್ರಮಂ ೨೦೮

ಪೊಱಮಡೆ ಕಂಡುಕಂಡು ಮಿಗೆ ದಂಡೆಯನಿತ್ತು ಕಱತ್ತು ಹತ್ತೆ ಸಾ
ರ್ದುಱುಬಿಗಿಲುತ್ತ ಸುತ್ತಿದ ಕಿರಾತಕುಲಂ ಮರ್ಘು ಭಾಪೆನುತ್ತೆ ಬೊ
ಬ್ಬಿಱಿಂಪೆ ಕುನುಂಗಿ ಕುಕ್ಕುರಿಸಿ ಸಿಡ್ರನೆ ಕೀಟ್ಟಿಲಗಿಂ ಕಡಂಗಿ ಕಾ
ಯ್ಪಿಱಿಂದನಮೊರ್ವ ಲುಬ್ಧಕನುಗರ್ವಿನ ಪೆರ್ಬುಲಿಯಂ ವನಾಂತದೊಳ್ ೨೦೯

ಪೆಳೆಯಿಂದಂ ಪೊಱಮಟ್ಟು ಮೆಯ್ಮುರಿದು ಕಿಗ್ಗಣ್ಣಿಕ್ಕಿ ಕಂಡಾಳ್ಗಳಂ
ನೆಲನಂ ಘರ್ಜಿಸಿ ಪೊಯ್ದು ಬಾಯ್ದೆಱೆದು ಪುರ್ಬಿಕ್ಕುತ್ತ ವಾಲಾಗ್ರಮಂ
ಮುಳಿಸಿಂ ದಾಡೆಗಳಿಂದೆ ಕಚ್ಚಿ ಸೆಳೆವುತ್ತುತ್ಕ್ಷೇಪದಿಂ ಪಾಯ್ದು ಪೆ
ರ್ಬುಲಿಯಂ ದಂಡೆಯೊಳಾಂತು ನಿಂತು ತಿವಿದಂ ವಿಕ್ರಾಂತಕಂಠೀರವಂ ೨೧೦

ಜಡಿವನ್ನಂ ಸ್ಥೂಲವಾಲಂ ಕುಸಿದು ಘುಳುಘುಳುಧ್ವಾನದಿಂ ಘರ್ಜಿಸುತ್ತುಂ
ಕಿಡಿಗಳ್ ಕಣ್ಣಾಲಿಯಿಂದಂ ಕೆದಱೆ ಮುಳಿದು ಮೇಲ್ವಾಯ್ವ ಶಾರ್ದೂಲಮಂ ಪೊ
ಕ್ಕಡಿಯೊಳ್ ಪೋಲ್ದಂಡೆಗೊಂಡುರ್ಚಿದ ಕಿಱುಯಲಗಿಂದೊಂದೆರಬ್ಬೊಱಾಸಾಲ್ಕ್ಯ
ಪಡಕಿಲ್ಗೊಂಡೇಱು ಜೆಸ್ಲೊಳ್ ಪೊಳೆವಿನವಿಱಿದಂ ವೀರವಿಂಧ್ಯಾಧರೇಂದ್ರಂ ೨೧೧

(ಸೂಕ್ತಿಸುಧಾರ್ಣವಂ, ೨-೧೨೭)

---

[೧] ರೋದ್ಗ(ಅ)

ಇದಿರೊಳ್ ಪುಲಿ ಗರ್ಜಿಸಿ ನಿಲೆ
ಬೆದಱಿ ಕರಂ ಶಬರಿ ಬರಿಯನಪ್ಪಲೊಡಂ ರೋ
ಷದಿನಲರ್ದುದೊಂದು ಕಣ್ ರಾ
ಗದೆ ಮುಗುಳ್ದುದೊಂದು ಕಣ್ ವನೇಚರಪತಿಯಾ ೩೧೮

(ಚಂದ್ರಪ್ರಭಪುರಾಣಂ ೫-೫೯: ಸೂಕ್ತಿಸುಧಾರ್ಣವಂ ೩-೧೫೬)

ಬಿದಿರ ಸಿಡುಂಬಿನೊಳ್ ಗಜಂ ಗರ್ಜಿಸಿ ಪೆರ್ಬುಲಿ ಪಾಯೆ ಕೆಯ್ದುಗೆ
ಯ್ದಿಪೆ ಕೆಲಸಾರ್ದು ಪಾಯ್ದು ಪೊಣರ್ದು[1] ತೊಟ್ಟನೆ ಗಂಟಲನೊತ್ತೆ ಕಿೞ್ತಿರ
ತಿದಿಯವೊಲಾಗೆ ಕಣ್ ತುಱುಬಿ ಬಿರ್ದು ಮುಸುಂಬಿ ಜವಂಗೆ ಬಿರ್ದಿನಿ
ಕ್ಕಿದನುಸಿರಿಕ್ಕಲೀಯದುಸಿರಿಕ್ಕುವವೋಲ್ ಶಬರಂ ಮಹಾಬಳಂ ೩೧೯

(ಮಲ್ಲಿನಾಥಪುರಾಣಂ ೧೦-೭೩: ಸೂಕ್ತಿಸುಧಾರ್ಣವಂ ೩-೧೩೯)

ತನತನಗೆ ಪಂದಿವೇಂಟೆಯ
ವನಚರರೆಯ್ತಂದು ನಿಂದು ನೀರ್ದಾಣದೊಳೊ
ಗ್ಗಿನ ಮರನ ಮಱೆಯೊಳಿರೆ ಮೆ
ಲ್ಲನೆ ಬಂದತ್ತೊಂದು ಸೊಕ್ಕಿದೆಕ್ಕಲನಾಗಳ್ ೩೨೦

ಧೀರಂ ಪಿಂಗಳಲೋಚನಂ ನಿಶಿತದಂಷ್ಟ್ರಂ ಭೀಷ್ಮವಕ್ತ್ರಂ ಘನ
ಕ್ರೂರಂ ವಜ್ರಸಮಾನರೋಮನಿಚಯಂ ಸಂಪೂರ್ಣಕಾಯಂ ಸ್ಥಿರಂ
ಶೂರಂ ರೌದ್ರಗಭೀರಚಿತ್ತನತಿಮಾನಿ ಸ್ವಲ್ಪಪುಚ್ಛಾನ್ವಿತಂ
ಘೋರಾರಣ್ಯಚರಂ ವಿರಾಜಿಸಿದುದುದ್ಯದ್ಭೀಕರಂ ಸೂಕರಂ ೩೨೧

(ಗಿರಿಜಾಕಲ್ಯಾಣಂ ೧-೧೦೦)

ನಿಟ್ಟಿಸಿ ನೋಡುತಂ ನಡೆವ ನಾಯ್ಗಳಂ ತಗುಳುತ್ತಮೆತ್ತಿ ಕೋ
ಲ್ವೆಟ್ಟುತಮುಗ್ರರೂಪದೊಳೆ ಬರ್ಪುದನಂತಸಹಾಯಶೂರನಾ
ದಿಟ್ಟಿಯೊಳಾಲಿಸಿಟ್ಟಿಡಲವಂತದು ಕಂಧಮನುರ್ಚೆ ಧಾತ್ರಿಯೊಳ್
ಕಟ್ಟಿದ ಕಂಭದೊಳ್ ಕಳಭಮಿರ್ಪವೊಲಿರ್ದುದು ಸೊಕ್ಕಿದೆಕ್ಕಲಂ ೩೨೨

ಒತ್ತಿನೊಳಿರ್ದು ಕೈಸೆಱೆದ ದಂತಿಯವೋಲ್ ಕಡುಪಿಂದೆ ದಾಡೆಗು
ಟ್ಟುತ್ತಿರೆ ನೋಡಿ ಕಂಡಿರಪೆ ಚಾಪಮನೋಪಳೆ ಕೈಗೆ ನೀಡಿ ನೀ
ನತ್ತಿರು ಸಾರ್ದು ಪಿಂದಲಗನೊಯ್ಯನೆ ಕಿಟ್ಟಿದೆ ಕಂಡು ದಿಂಡುಮಾ
ಱಿತ್ತಿದ ಪಂದಿಯಂ ಮುಳಿದು ಕುತ್ತಿದನೊತ್ತಿದನಾ ವನೇಚರಂ ೩೨೩

(ಸೂಕ್ತಿಸುಧಾರ್ಣವಂ ೩-೧೩೨)

---

[1] ಯ್ಯೊಳೆದು(ಸ)

ಬಳಸುತ್ತಂ ಪಾಯಿಸುತ್ತಂ ತುಡುಕಿತುಡುಕಿ ಪಿಂದಟ್ಟುತಂ ಮುಂದೆ ಮುಂದ
ಪ್ಪಳಿಸುತ್ತಂ ಕುಕ್ಕುರಂಗಳ್ ತೆಗೆಂಪಿ ಮಿಗೆ ಬಟಿಲ್ದೊಯ್ವನಂತಂತೆ ಕಿಗ್ಗ
ಣ್ಣೊಳ್ ನೋಡುತ್ತೋರೆಯಿಂದಂ ಪಿರಿಯ ದರಿಯನಾನಲ್ಕೆ ಸಾರ್ದಂಡುಗೊಂಡಿ
ರ್ದಿಳೆ ಕಂಪಂಗೊಳ್ವಿನಂ ಘರ್ಜಿಸಿದುದು ಮುಳಿನಾಭೀಳಸೇಹಂ ವರಾಹಂ ೩೨೪

ಅಡಸಿಪೊಡೆಕ್ಕಲಂ ತಗುಳ್ವ ಭೋಂಕನೆ ಪಾಯೆ [1]ಬೆದರ್ದ[1] ನಲ್ಲಳಂ
ಸೆಡೆಯದಿರೆಂದು [2]ಪಿಂ[2]ದಿರಿಸಿ ಗಾತ್ರಮನಿಕ್ಕಿ ಕುಮುಂಗಿ ನೋಜಱಯುಂ
ಪಿಡಿದೆಡಗಯ್ಯೊಳುದ್ಧರಿಸಿ ಸಜ್ಜನೆ ಕಿತ್ತಲಗಿಂದೆ ಪಂದಿಯಂ
ನಡುಕಡಿಯೋಪಿನಂ ತಿವಿದು ಮೆಚ್ಚಿಸಿದಂ ಶಬರಂ ಪುಳಿಂದಿಯಂ ೩೨೫

(ಸೂಕ್ತಿಸುಧಾರ್ಣವಂ ೩–೧೩೫)

ಮುಸ್ತಾಕಂದಮನೆತ್ತಿ ಜೇಗರ್ಳಸಿತಂ ತಿಂದುಗ್ರದೇಹಂ ಮಿಗ
ಲ್ಪಿತ್ತಂಭಪ್ಲವಮಾದ ಪೆರ್ಗೆಜ್ಜಗಳಂ ಪಾಯ್ವಲ್ಲಿ ಮುಸ್ನಾಯ್ಗಳಂ
ಕುಸ್ತಾಲಂಬಿತಮಾಡುತಂ ಬಿಡುಬಿಡೆಂದಾರ್ದಿರ್ದ ಬೇಡರ್ಕಳಂ
ಹಸ್ತವ್ಯಾಜದೊಳೊಕ್ಕಲಿಕ್ಕಿ ಕೆದೆಪಿತ್ತಂದೊಂದು ಸಿಂದೆಕ್ಕಲಂ ೩೨೬

ಪೆರ್ಮೆಳೆಯೊತ್ತುಗೊಂಡಿದಿರನಾಲಿಸಿ ದಾಡೆಯ ಕುಟ್ಟಿ ಕೋಪದಿಂ
ಘೂರ್ಮಿಸುತಟ್ಟಿಮುಟ್ಟಿ ಬಸ ಜಾಯಿಲನಂ ಕಡಿಖಂಡಮಾಡುತಂ
ಪೆರ್ಮೆಗಸಾಧ್ಯಮೆಂಬ ಒಲುಪಿಂದಮೆ ಸೂಕರನಿರ್ಪ ರೀತಿಯಂ
ಮರ್ಮನತರ್ಕೆಬರ್ಪ ಬಲುಜಾಯಿಲನಂ ಬಿಡಲಾರ್ದು ಬೇಗದಿಂ ೩೨೭

ಜಾರಿವರಿದಲ್ಲಿ ವನಚರ
ರೂರುದ್ವಯಗಳನೆ ಸೀಳಿ ಕುಕ್ಕುರಗಳನು ವಿ
ದಾರಿಸುತಾದಿವರಾಹನ
ಸೇರುವೆಗಿಡೆಯೆಂಬ ತೆಱದೊಳಿರ್ದುದು ಕ್ರೋಡಂ ೩೨೮

ಅಗ್ಗಳನೆಂಬಾ ನಾಯದ
ನೊಗ್ಗಿಸಿ ತಲೆದಡವಿ ಬಿಡಲ್ ಕಾಣುತ್ತದು ಮೇ
ಲಗ್ಗಳಿಸುತ್ತಂ ಸೆಳೆಯ
ಲ್ಕಿಗ್ಗಡಿಸರಿಯಿಸಲು ಪೊಡೆದುದಾ ಕುಕ್ಕುರನಂ ೩೨೯

---

[1]ಬೆಗಳ್ತ(ಸ) [2]ಮುಂ(ಸ)

ಬರೆ ಕಾಣುತ್ತಲ್ಲಿ ಭಿಲ್ಲಪ್ರಕರವಡಿಸಿ ಕೂರ್ನಾಯ್ಗಳಂ ಬಿಟ್ಟು ಬೊಬ್ಬಿ
ಟ್ಟರರೇ ಕೈಗೊಂಡು ನಾಲ್ಕುಂ ದೆಸೆಗೆ ಮುಸಗೆ ಕಂಡೆಕ್ಕಲಂ ಪಾಡೆಗುಟ್ಟು
ತ್ತಿರಡುಂಕಣ್ ವಿಸ್ಫುಲಿಂಗಂ ಸುರಿದಪ್ಪುದೆನೆ ನೋಡುತ್ತೆ ಮುಂಗಾಣುತಲ್ಲಿಂ
ದುರದಂಷ್ಟ್ರಾಗ್ರಂಗಳಿಂ ಭೂಮಿಯನಿರದೆ ಜೆಱಂಟಿತ್ತು ಮುಂಗಾಲ್ಗಳಿಂದಂ ೩೩೦

ನಟ್ಟಡವಿಯೊಳಗೆ ಮುಳಿಸಿಂ
ಮುಟ್ಟುವ ನಾಯ್ಗಳನೆ ತುಂಡಿಸಲ್ಕಿಂದುಜ್ಜಿ ಕಿ
ಗುರ್ಟ್ಟುತೆ ಮುಂದಟ್ಟುತೆ ಪಿಂ
ದಟ್ಟುತೆ ಸೂಕರನಡರ್ದು ಸಾರ್ದುದು ನೆಳೆಯುಂ ೩೩೧
(ಗಿರಿಜಾಕಲ್ಯಾಣಂ ೧-೧೦೨)

ಕುಪ್ಪಳಿಸಿ ತುಱುಗಿ ಪರ್ವಿದ
ಜಿಱೊಪ್ಪವಸಿರದಂಡುಗೊಂಡು ಪಂದಿಯ ಬೞಿಯೊಳ್
ನೊಪ್ಪಗೆಡೆದುಬ್ಬಿ ಪಾಯ್ವುತೆ
ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ ೩೩೨
(ಗಿರಿಜಾಕಲ್ಯಾಣಂ ೧-೧೦೩)

ಮುಳಿದಟ್ಟಿತೆಗೆದು ಬಳಸಿ
ತ್ತೊಳಪೊಕ್ಕು ಮರಳ್ದು ಮತ್ತೆ ಬೆನ್ನಟ್ಟಿ ಕರಂ
ಕಳಿದು ಪೆಡಂಬಾಯ್ದುಱಿಲಿಂ
ಬಳಲಿಸುತಿರೆ ನಿಂದು ಪಂದಿಯುಂ ಶುನಕೇಂದ್ರಂ ೩೩೩
(ಗಿರಿಜಾಕಲ್ಯಾಣಂ ೧-೧೦೪)

ಮಿಕ್ಕು ಪುಗಲಿತ್ತು ಕಿರ್ಗ
ಣ್ಣುಕ್ಕುತ್ತೊಳಪೊಕ್ಕು ಜಾಯಿಲನ ಬಡನಡುವಂ
ಚಕ್ಕನೆ ತುಂಡಿಸಿ ಮಲೆಯುತೆ
ಧಿಕ್ಕರಿಸಿತ್ತತುಳ ಕೋಪಸೀಡಂ ಕ್ರೋಡಂ ೩೩೪
(ಗಿರಿಜಾಕಲ್ಯಾಣಂ ೧-೧೦೫)

ಅಳ್ಕಿ ಪುಳಿಂದಂ ಕಾಣುತೆ
ತೞಿತ್ಸ್ಯಸಿಂದು ಕೊಂಡು ಶುನಕನೆರಡುಂ ಕಡಿಯುಂ
ಕಾಟ್ಕಿಚರ್ದು ತಗುಳ್ದ ತೆಱದಿಂ
ನಿಟಿಕ್ತ್ಯನದ ನೊಂದು ಬಂದು ಬೞಲುತ್ತಿಂದಂ ೩೩೫
(ಗಿರಿಜಾಕಲ್ಯಾಣಂ ೧-೧೦೬)

ಹಾಸಿನಮೇಲೆ ಪಟ್ಟಿರಿಸಿ ಪಾಲೆಱೆದಂತೊಡಗೂಡಿ ಬಾಲಕಾ
ಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆೞಲೊಳ್ ಬಳೆವಂತು ಮಾಡಿಯುಂ
ಪಚ್ಚಸನದಲ್ಲಿ ಕುಳ್ಳಿರಿಸಿ ಸಾಕಿದ ಕುನ್ನಿಯನೀ ವರಾಹನೀ
ಸಾಸಿಗನೀ ಕಠೋರನನೆನ್ನಯ ನುಂಡೆ ಸಮಂತು ಕೊಲ್ವುದೇ ೩೩೬

(ಗಿರಿಜಾಕಲ್ಯಾಣಂ ೧-೧೦೭)

ಪಿಂಗದೆ ಕಿರಾತ ನಲವಿಂ
ಬೆಂಗೊಂಡೆಕ್ಕಲನನಟ್ಟಿ ಪಿಡಿದತಿಮುದದಿಂ
ಮುಂಗಾಣದೆನ್ನ ನಚ್ಚಿನ
ಸಿಂಗನುಸುಗುಬುಗುಬಿಱುತ್ತೆ ವನಚರನಿಱಿದಂ ೩೩೭

(ಸೂಕ್ತಿಸುಧಾರ್ಣವಂ ೩-೨೨೭)

ಕಂಡೊರ್ವ ಶಬರ ಪಂದಿಯ
ಖಂಡೆಯಮಂ ಜಡಿದು ಪೊಡೆಯಲೊಂದೆ ಪೊಯ್ಲಿಗೆ
ತುಂಡವು ಮೂಱಾಗುತ್ತುಂ
ಡೆಂಘಣಿಸದೆ ಮುಂದಕಡಿಯನಿಟ್ಟುದು ಚಿತ್ರಂ ೩೩೮

ಇಕ್ಕೆಲದ ಶಬರರಾರ್ದಿಸೆ
ಯೆಕ್ಕಲನನದೊಂದು ಬಾಣ ನಡದಿರೆ ಸತಿ ಕಂ
ಡಕ್ಕಟ ಬಲ್ಲಾಳೇಯೆನ
ಲಕ್ಕೆ ನೀಂ ಪೆಣ್ಣನಪ್ಪೆ ಲಜ್ಜಿತೆಯಾದಳ್ ೩೩೯

(ಸೂಕ್ತಿಸುಧಾರ್ಣವಂ ೩-೧೩೬)

ಕೀಲಿಸಿ ಕಂಧರದೊಳ್ ಭೂ
ಪಾಲಕನಿಡೆ ಸೊಂದು ಪಂದಿ ತಿರುಗುವ ಪದದೊಳ್
ಕೇಲಂ ಮಾಡುವ ತಿಗುರಿಯ
ಕೋಲಂಪೋಲಿರ್ದುದಿಟ್ಟು ತನು ಕೆಡೆವಿನೆಗಂ ೩೪೦

(ಸೂಕ್ತಿಸುಧಾರ್ಣವಂ ೩-೧೩೦)

# ಆನೆಯ ಬೇಟೆ

ಸರಿಯುಂ ದಂತಾಗ್ರದಿಂದೀಡಿಱಿದು ಕೆಡುಪುತಂ ಗುಲ್ಮಸ್ತಂಬಂಗಳಂ ತ
ತ್ಪರದಿಂದಂ ಸುತ್ತಿ ಕಿಟ್ಟಿತ್ತುತ್ತೆ ನಿಜ[1]ಪುಳಕ[1]ಚ್ಛಾಯೆಯಿಂ ಕುಂಭಿಗೆತ್ತು
ದ್ಧುರಕೋಪಾಟೋಪದಿಂ ಕಂಡೆಱಗುತೆ ಮದನಸೌರಭ್ಯಲೋಲುಪ್ತಭೃಂಗೋ
ತ್ಕರಮಂ ಕರ್ಣಾಗ್ರದಿಂ ಸೋವುತ ಕರಿಯಿರೆ ನಿಂದೊಂದದಭ್ರಾಭ್ರಕಾಯಂ ೩೪೧
(ಗಿರಿಜಾಕಲ್ಯಾಣಂ ೧-೧೧೨)

ಅಟ್ಟಿಕೊಳುತ್ತಮಿರ್ಪ ಕರಿಕುಂಭಮುಮಂಬುಜದಲ್ಲಿ ಸಾಳಿಗೊಂ
ಡೆಟ್ಟಿಳಿಯುಂ ತೆರಳ್ಚಿ ತೆರೆದೋಱುವ ಶೀಕರಮುಂ ವಿಳಾಸಮಂ
ತಾಳ್ದಿದುವೊಪ್ಪೆ ತೋರಮೊಲೆಗಳ್ ಜಲದೇವಿಕಟಾಕ್ಷವೀಕ್ಷಣಂ
ನೀಳ್ದಿರೆ ನೋಡುತಂ ಬಿಡದೆ ಮುತ್ತಿನಸೇಸೆಯನಿಕ್ಕುವಂದದಿಂ ೩೪೨
(ಲೀಲಾವತಿ ೬-೯೬)

ಅದೆ ಕಳಹಂಸ[2]ಸಾರ್ದಪ್ಪುದು[2] ಬಾಳಮೃಣಾಳಮಿದೆಂದು ತುಂಬಿ ಮಾ
ಣದೆ ಮುಸುಱುತ್ತಮಿರ್ದಪುದು ಪದ್ಮಮಿದೆಂದು ಪುಳಿಂದಿ ನಿಂದು ನೋ
ಡಿದಪಳಿದಾನೆಯೆಂದು ಕೊಳದೊಳ್ ನಲಿದಟ್ಟಿಕೊಳುತ್ತಮಿರ್ಪ ಪೋ
ತದ ವದನಾಗ್ರಮಂ ಪೊಳೆವ ಪುಷ್ಕರಮಂ ನಸುದೋರ್ಪ ಕುಂಭಮಂ ೩೪೩
(ಲೀಲಾವತಿ ೬-೯೭)

ಕಂಡು ಕಿರಾತನೊರ್ವನಿಭಮಸ್ತಕಮೌಕ್ತಿಕಲೋಭದಿಂದೆ ಕೋ
ದಂಡಮನಾರ್ಪಿನಿಂ ತೆಗೆದು ಕೂರ್ಪಿನ ಬಾಣದಿನೆಚ್ಚೊಡುರ್ಚಿ ನೇ
ತ್ರಂಡಲಲಾಟದಿಂ ಪಿಱಗೆ ಪೇಚಕದೊಳ್ ಮಿಗೆ ಮೂಡೆ ತಲ್ಲಣಂ
ಗೊಂಡುರೆ ಕುರ್ಗಿ ಕುಕ್ಕುಱಿಸಿ ಘೀಳಿಡುತಿರ್ದುದು ಬಿಟ್ಟು ಭೂಮಿಯೊಳ್ ೩೪೪
(ಗಿರಿಜಾಕಲ್ಯಾಣಂ ೧-೧೧೩)

ನಡೆದು ಗಟಿಗಟಿನೆ ಮತ್ತೊಂ
ದೆಡೆಯೊಳ್ ಗಜಮೆಯ್ದೆ ಪೊಕ್ಕು ನಡುಪೊಳ್ ಕಡುಸೀ
ರಡಸಿ ತೆಗೆದೀಂಟೆ ಜಲಮಂ
ಬಿಡೆತನ್ನೊಳ್ ತೀವಿಕೊಂಡು ಚೆಲ್ಲುವ ಪದದೊಳ್ ೩೪೫
(ಗಿರಿಜಾಕಲ್ಯಾಣಂ ೧-೧೨೦)

---

[1] ವಿಪುಳ(ಅ) [2] ಮಾಡೆಳೆಯು(ಸ)

ಇಳೆಯೊಳ್ ತಮ್ಮಂ ಕಾದಾ
ಪುಳಿಂದನಾಯಕಿಯ[೧]ರಪ್ಪವರ್ಗರ್ಘ್ಯ[೧]ಮನಂ
ತಳವಡೆ [೨]ಕುಡುವಂ[೨]ತಿರ್ದುದು
ಜಳಪೂರಿತ ಹಸ್ತದಿಂದೆ ಹಸ್ತಿಕದಂಬಂ ೩೪೬
(ಗಿರಿಜಾಕಲ್ಯಾಣಂ ೧-೧೨೧)

ಪ್ರಕುಪಿತದಿಂ ತೆಗೆದಿಸೆ ಮ
ಸ್ತಕಮಂ ಕರಿ ನೊಂದು ತಿರುಗೆ ಪರಿವ ಶರಂ ಪೇ
ಚಕದಿಂದುರ್ಚಿ ಕರಂ ಲು
ಬ್ಧಕನಂ ತಾಗಿತ್ತು ಮಗುಳ್ದು ವನದೊಳ್ ಚಿತ್ರಂ ೩೪೭
(ಗಿರಿಜಾಕಲ್ಯಾಣಂ ೧-೧೧೧)

ಉರವಣೆಯಿಂ ಕೃತಾಂತನವೊಲೆಯ್ದುವ ದಂತಿಯ ಮುಂದೆ ಪೊಕ್ಕು ಸಾ
ರ್ದುರಮನೆಸಲ್ [೩]ಪೆಡಂ[೩]ಮಗುಳ್ದು ದಂತಿಯ ವಕ್ಷಮನುರ್ಚಿ ಪೇಚಕಾಂ
ತರದೆ ನುಸುಳ್ದು ತನ್ನುರಮನುರ್ಚಿದೊಡಚ್ಚರಿಪಟ್ಟನೆಚ್ಚಬಿ
ತ್ತರಿಕೆಗಮಾ ತೆಱಂದಿಱಿದ ದಂತಿಗಮಾ ವನದೊಳ್ ವನೇಚರಂ ೩೪೮
(ಸೂಕ್ತಿಸುಧಾರ್ಣವಂ ೩-೧೫೮)

ಘನಗಜರಾಜನೊಂದು ಶಶಿಕಾಂತಶಿಲಾಂತದಿ ತನ್ನ ರೂಪ ನೆ
ಟ್ಟನೆ ಕರಿಗೆತ್ತು ಕೋಪಮಿಗೆ ತಾಗೆ ರದಂಗಳುಡಿರ್ದು ಬಿಂಬಮಂ
ವಿನಯದಿ ನೋಡಿನೋಡಿ ಕರದಿಂ ತಡವುತ್ತಿರಲಾ ಮದೇಭಮಂ
ವನಚರನಿಕ್ಕೆ ಬಂದು ಸಲೆ ನಿಟ್ಟಿಸಿ ಬಣ್ಣಿಸಿದಂ ಮನೋಜನಂ ೩೪೯

ಕರಿ ಪೊಣರ್ದೆಕ್ಕಲಂ ಮಲೆತು ಪೆರ್ಬುಲಿ ಪಾಯ್ದುಗಿಯಲ್ಕೆ ಡೋಣಿವಿ
ಟ್ಟುರದ ಪಿಸುಟ್ಟಿ ಪೆರ್ದೊಡೆಯ ನುರ್ಗಿದ ಮಂಡೆಯ ಭಂಗಿ ರೌದ್ರಮಾ
ಗಿರೆ ನೆಱೆ ಮೂಱು ಬೇಂಟೆಯುಮನಾಡಿ ತದಾಮಿಷಭಾರದಿಂದೆ ಜೀ
ರ್ಗಿರೆಯುತಮಂತೆ ಕಾಲ್ಪೊಲಪಿನಿಂ ಬರುತಿರ್ದನದೊರ್ವಲುಬ್ಧಕಂ ೩೫೦
(ಸೂಕ್ತಿಸುಧಾರ್ಣವಂ ೩-೧೬೪, ಜಗನ್ನಾಥವಿಜಯಂ ೧೬-೨೧)

ಕರಡಿಯಸೆಜ್ಜೊಡುರ್ಚಿ ಸರಲುರ್ಕಿನ ಪಂದಿಯನುರ್ಚಿ ಭೀಕರೋ
ತ್ಕರಮಪ್ಪ ಪೆರ್ಬುಲಿಯನುರ್ಚಿದೊಡಂತವು ರೌದ್ರಕೋಪದಿಂ
ದಿರದಱೆಯಟ್ಟಲಂಜದೆ ಕ್ರಮಂ ಪಿಡಿದೊಯ್ಯನೆ ನೇಣ ಕಿತ್ತು ಮಾ
ಕರಡಿಯುಮಾ ವರಾಹನುಮಾ ಪುಲಿಯುಂ ತಿವಿದಂ ವನೇಚರಂ ೩೫೧
(ಸೂಕ್ತಿಸುಧಾರ್ಣವಂ ೩-೨೩೧)

---

[೧]ಯನ್ವನಕರ್ಘ್ಯ(ಸ) [೨]ಕೊಳ್ಳಂ(ಸ) [೩]ಕರಂ(ಸ)

ಹರಿಹರಿ ಹಂದಿ ಜಿಳ್ಳೆರಳೆ ಪೆರ್ಬುಲಿ ಹುಲ್ಲೆ ಲುಲಾಯಸಂಕುಳಂ
ಮರೆ ನೃಕರಾಜಿ ಗಂಡಮೃಗ ಶಾಲ್ಮಲಿಸಂತತಿ ಕೋಕ ಪೆರ್ಮೊಲಂ
ಕರಡಿ ಪುರುಪ್ರತಾನಮುಡು ಜಿಳ್ಳಿಲಿ ಪೆರ್ದರಿಯಂಗಿ ಪೇರಿಣಿಲ್
ಮರದುಣಿಲೆಂಬಿವಂ ಕೆಡಪಿಯೇಂ ತಿರುಗಿತ್ತೊ ಕಿರಾತಸಂಕುಳಂ ೩೫೨

ಅಡವಿಯೊಳಾರ್ದು ಜೇಡವಡೆ ಬೇಂಟೆಯನಾಡಿ ಶರಪ್ರಘಾತದಿಂ
ಕೆಡಪಿದ ಬಲ್ಮೃಗಂಗಳ ಕಳೇವರಮಂ ಪೊಸಗಿಚ್ಚಿನಿಂದಮಂ
ಸುಡು ಕಡಿ ಬಿರ್ಚು ಬಿಲ್ಪಿಡಿದು ಕೊಯ್ ಕೊರೆ ತಿನ್ನುವರ್ಗಿಕ್ಕೆನಿಪ್ಪ ನಾ
ಣ್ನುಡಿಗಳ ನಾಟಕಂ ಬಲಿದುದಾ ವನದೊಳ್ ಶಬರಪ್ರತಾನದೊಳ್ ೩೫೩

ಸಿಂಗದ ಕೇಸರಂ ಪುಲಿಯುಗುರ್ ಚಮರೀಮೃಗವಾಲಮಂ ಮದೇ
ಭಂಗಳ ಮುತ್ತು ಪೀಲಿಯೊರೆ ಪೂತಿಯ ಜಿಕ್ಕಾಳಿಯ್ಯಮುಳ್ ವರಾ
ಹಂಗಳ ದಾಡೆ ಕತ್ತುರಿಯ ಹುಲ್ಲೆಗಳಿಂ ಮೊದಲಾದಸಂತ ಸಾ
ರಂಗಳ ಭಾರದಿಂ ನಡೆದು ಬಂದನದೊಬ್ಬ ಪುಳಿಂದನಾಯಕಂ ೩೫೪

ಪರಿ ಜೆಂಬತ್ತೆಯ್ದು ನಾಯಂ ಬಿಡು ನಡೆಯಿಸು ದೀಹಂಗಳಂ ಪಾಶಮಂ ವಾ
ಗುರೆಯಂ ಬೀಸಾಂಕೆಗೊಳ್ಳಾರ್ದೆಸು ಪೊಣರ್ದಿಜಃ ಕೊಲ್ಲೆಂಬ ಘೋರಸ್ವನಂ ಪೊ
ಣ್ಮಿರೆ ವನ್ಯಪ್ರಾಣಿಗಳ್ಗಂತಕನ ಪಡೆಯಿ ಧಾಳಿಟ್ಟವೋಲ್ ಬೇಡರಿರ್ದರ್
[೧]ತರುಶಾಖಾಳೀವನಾಂತಸ್ತಿಮಿರಮೆ[೧] ಶಬರವ್ರಾತವಾಯ್ತೆಂಬಗುರ್ವಿಂ ೩೫೫
(ಜಗನ್ನಾಥವಿಜಯಂ ೧೬-೧೯; ಸೂಕ್ತಿಸುಧಾರ್ಣವಂ ೩-೧೧೨)

ಪಾಶದ ನೇಣ್ಗಳಂ ಪೊಸೆವ ಜಾಲಮನೊಪ್ಪಿರೆ ಮಾಡ್ಪ ಕಲ್ಲಿಯಂ
ಕಾಸಿದ ಕಂಬಿಯಂ ಸಮೆವ ಮಾರ್ಗಣಮಂ ಗಜಂಗಟ್ಟುತಿರ್ಪ ಬಿ
ಲ್ಗೀಸುವ ಬಾಣಮಂ ತಿರುಪಿ ತಿರ್ದುವ ಮಾರ್ತಿರುವಂ ತೊಡರ್ಚಿ ನೋ
ಟ್ಪಾ ಸಹಜಕ್ರಿಯಾವನ ವನೇಚರರಿಂ ಬಗೆಗೊಂಡುದಾವಗಂ ೩೫೬
(ಜಗನ್ನಾಥವಿಜಯಂ ೧೬-೧೬; ಸೂಕ್ತಿಸುಧಾರ್ಣವಂ ೩-೧೯೯)

ಜೇಂಟೆಯ ನಾಯ್ಗಳಂ ಪೊರೆವ ಪೆರ್ವಲೆಯಂ ಸಮಕಟ್ಟುತಿರ್ಪ ಬ
ಲ್ಪಂಟಿಗೆಗೋಲ್ಗಳಂ ಬಸಿವ ದೀಹಮನೋವುವ ನೇರ್ಪುವೆತ್ತ ಕೈ
ದೋಂಟಿಯನೊಪ್ಪೆಕಟ್ಟುವ ಶರಂ ಪದನಾರಿಗೆ ಬಿಲ್ಲನಾರಿಯಂ
ಕಾಂಟಿಸಿ ನೋಟ್ಪ ಜೀವಸದೊಳಿರ್ದುದು ಪಳ್ಳಿಯ ಭಿಲ್ಲಸಂಕುಳಂ ೩೫೭

---

[೧]ಪರುಷಾಕಾರರ್ ವನಾಂತಸ್ತಬರವೆ(ಸ)

ಪೊಸಪೊದೆಗಟ್ಟುವಂಬುಗಳ ಕುಪ್ಪೆಯುನಾವರಿಪಾರ್ದ್ರಜಾಲಮುಂ
ಪಸರಿಪ ಸೆಂಡುಗೋಲ ಪಿಡಿಗಟ್ಟುವ ಪೀಲಿಗಳಿಂ ತರಂಗಮುಂ
ಪೊಸಯಿಪ ಚಿತ್ರಗಣ್ಣವಲೆಯುಂ ಸಮುಕಟ್ಟುವ [1]ಕೀಟ್ಟುಗೂಟಮುಂ
ಬಸಿವ ಪುಳಿಂದಸಂಕುಳದ ಪೆರ್ಕಣದಿಂದೆಸೆದತ್ತು ಪಕ್ಕಣಂ ೩೫೮

(ಚಂದ್ರಪ್ರಭಪುರಾಣಂ ೫-೫೪; ಸೂಕ್ತಿಸುಧಾರ್ಣವಂ ೩-೨೦೦)

ಕರಿದಂತಂಗಳನಾಂತು ಪಿಲಿಯೊರೆಯುಂ ತಟಿಕ್ಸ್ಯಸಿ ಗಂಧೇಭಬಂ
ಧುರಮುಕ್ತಾಫಳಭಾರಮುಂ ತಳೆದು ಮಾಂಸಪಾತ್ರತಮುಂ ಪೊತ್ತು ಕೇ
ಸರಿ ಚರ್ಮವ್ರಜಮುಂ ತೆರಳ್ಚಿ ಚಮರೀವಾಲಂಗಳಂ ತಾಳ್ದು ಬಂ
ದರನೇಕರ್ ಬಟಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ ೩೫೯

(ಕಾದಂಬರಿ ಪೂ. ಭಾ.-೧೬೯; ಸೂಕ್ತಿಸುಧಾರ್ಣವಂ ೩-೧೬೦)

ಬಿದಿರುದಿರ್ದಕ್ಕಿ ಪಕ್ಕಿಂಬೊರೆ ಪುಲ್ ಪುಯಣಂ ಗುಜಗುಂಜಿ ಜೇನತು
ಪ್ಪದ ಕೊಡನೆಯ್ಯಮುಳ್ ಪುಣುಸೆ ಪಣ್ಣಿಲಿ ಹೊತಿಯುಚೆಕ್ಕು ಸೀಳ್ದ ಮು
ತ್ರದ ಪೊಸನಾರ್ ಸೆಣಂಬು ಪಲವುಂ ಮೃಗನಕ್ಕಿಗಳಿಂದಮೊತ್ತಿ ಕ
ಟ್ಟಿದ ಮರಗಂಬಿ ಜೇರ್ಗರೆವಿನಂ ಗಡುಕಿಂ ಮುಗುಟ್ದಿರ್ ವನೇಚರರ್ ೩೬೦

(ಸೂಕ್ತಿಸುಧಾರ್ಣವಂ ೩-೧೬೯)

ಘನಮಾಂಸಾಪಣ ವಸ್ತ್ರ ಭೂಷಣ ಮಸೃಕ್ಷಂ ಕೋಲ್ವಣಂ ಪ್ರೀತಿಗಂ
ಘನಿಬದ್ಧಾಂಗಣವದ್ರಿಭೂಷಣವಸಂ ನ್ಯಾಸ್ತ್ವೇಷಣಂ (?) ಪ್ರಾಣಿಪೀ
ಡನ ಸಂಶೋಷಣಮುಗ್ರಲುಬ್ಧಕಘನುಷ್ಟಂಕಾರಘೋರಸ್ಫುರ
ಧ್ವನಿವಿಸ್ರಂಸಸಮುಸ್ತವನ್ಯಮೃಗನೇತ್ರಾಂಭಃಕಣಂ ಪಕ್ಕಣಂ (?) ೩೬೧

ಬರೆಬರೆ ಕರ್ಣಿಕಾರ ನವಕೇಸರವಿಂಗಳ ಕಕ್ಕೆ ಬಿಕ್ಕೆ ಕ
ಮ್ಮರ ತದಿಕಾಪ್ರು ಬಿಲ್ಪನೇಲನಾಲ ಬೀಟಿಲ್ ತಡಸಂಗಳಿಂದೆ ಸೌಂ
ದರವನವೊಪ್ಪುತಿರ್ದುದದರಾಪದದಲ್ಲಿಯದೊಂದು ಮುತ್ತಗಂ
ಪರತರ ಚಂದ್ರಶೇಖರನ ಕಣ್ಗೆ ವಿಲಾಸಮನೀಯೆ ನೋಡಿದಂ ೩೬೨

ಶ್ರೀವರನ ಶಿವನ ಪದ್ಮಜ
ನಾ ವರತನು ನೀಲ ಸಿತ ಸುವರ್ಣಚ್ಛಾಯಂ
ಕಾವಿನ ಕೇಸರದೆಸಳ್ಗಳ
ಠಾವೊಳ್ ತೋರ್ಪಲರಸುಳ್ಳ ಮುತ್ತುಗಮೆಸೆಗುಂ ೩೬೩

---

[1] ಚೆ(ಸ)

ಒಂದು ಗುಣಮುಳ್ಳೊಡಂ ಮ
ತ್ತೊಂದು ಗುಣಕ್ಕಿಲ್ಲವೆನಿಸದಾ ಪಾಲಾಶಂ
ಕುಂದದ ಪೂವಿಂ ತ್ರಿಗುಣಮ
ದೆಂದೆನಿಪುದು ಕರ್ಪು ಬೆಳ್ಪು ಕೆಂಪಿಂ ತೋರ್ಕುಂ ೩೬೪

ಮದನನ ರತ್ನದುಪ್ಪರಿಗೆಯಾ ರತಿದೇವಿಯ ರಂಗಶಾಲೆ ಮ
ತ್ತದು ಮಲಯಾನಿಲಪ್ರಭುವಿಗೆತ್ತಿದ ಕೆಂಪಿನ ಕೇತನಂ ಕರಂ
ಉದಯದ ಚಂದ್ರಮಂಗೆಸೆವ ವೈಸಿರಿ ನೋಡೆ ವಸಂತರಾಜನ
ಭ್ಯುದಯದ ಶತ್ರು ದಾವಶಿಖಿಯೆಂಬವೊಲೊಪ್ಪಿತು ಪೂತಮುತ್ತುಗಂ ೩೬೫

ನಂದುವ ಕಿಚ್ಚುಮನಸ್ತಮ
ಯಂದೋಱುವ ಚಂದ್ರಸೂರ್ಯರೆಂಬರ ನಂಬದೆ
ಸುಂದರವಿಧಿ ಕೆಂಬೆಳಗಂ
ತಂದಿಟ್ಟವೊಲೆಯ್ದೆ ತೋಱಿತಾ ಪಾಲಾಶಂ ೩೬೬

ತರುಗಳೊಳಗ್ನಿಯಿರ್ಪುದ
ನುರುಪಾಲಾಶಪ್ರಸೂನಮೇಂ ಸೂಚಿಪವೋ
ಲಿರುವುವು ಕಿಚ್ಚಿನ ತೆಱದಿಂ
ಧರೆಯೊಳ್ ನಿಜಗುಣನನಾವತರು [1]ತೊರೆಯುವುದೊ[1] ೩೬೭

ನೆಲಕೆಂಧೂಳರುಣಪ್ರವಾಹಿನಿಯ ಕೆನ್ನೀರೇಜದಾ ಲೋಹಿತಂ
ಸಲೆವೃಕ್ಷಂಗಳ ಕೆಂದಳಿರ್ ಗಿರಿಯಧಾತುವ್ರಾತಮಾಕಾಶದೊಳ್
ನೆಲೆಗೊಂಡೊಪ್ಪುವ ಕೆಮ್ಮುಗಿಲ್ ಪಡುವ ಮೂಡಣ್ಕೆಂಪು ಬಾಲಾರ್ಕನು
ಜ್ಜ್ವಳ ಶೋಣಂ ನಿಜಪುಷ್ಪರಕ್ತಮುದಿಸಿತ್ತೆಂದಾ ನಗಂ ರಂಜಿಕುಂ ೩೬೮

ಆಕಾಶಕೇಶನೆಯ್ದು
ತ್ತಾ ಕುಜಕುಸುಮಕ್ಕೆ ಮೋಹಿಸೊಂದಂ ಮುಡಿಯೊಳ್
ಜೋಕೆಯೊಳಿಡೆ ಪೂಗೆಂಪಿಂ
ದಾ ಕೆಂಜೆಡೆಯಾಯ್ತು ಕೇಶಕಕ್ಕೆಂಪೊಳವೇ (?) ೩೬೯

ಮುತ್ತುಗದ ಪೂಗೆ ಪರಿಮಳ
ವೆತ್ತಣದೆನಬೇಡ ಬಲ್ಲವರ್ ಭಾವಿಸುಗುಂ
ಸುತ್ತುವ ಗಾಳಿಗೆ ತುಂಬಿಗೆ
ತೆತ್ತು ಬಡಂ ಗಂಧಮಾದುದಿತ್ತುಂ ಬಡವೆ (?) ೩೭೦

---

[1] ತೋರುವುದೋ (ಸ)

ತನ್ನ ನೊದಲ್ಗೆಯ್ದಿ ಪಾಡುವ
ಕಿನ್ನರಗಾನಕ್ಕೆ ಪಲವು ಕವಿಗಳ್ ತಾಳ್ದಂ
ತುನ್ನತ ಕುಸುಮಾವಳಿಗಳ್
ರನ್ನದಪ್ರೊಳೆಸೆಯೆ ಮುತ್ತುಗಂ ಶೋಭಿಸುಗುಂ ೩೭೧

ಮುತ್ತುಗದ ಪೂವಿನಿಂದಮೆ
ಚಿತ್ರಭವಂ ಜಗವನೆಯ್ದೆ ಗೆಲ್ದುದು ಸತ್ಯಂ
ಹೊತ್ತೆದೆಯ ತಾಗಿ ಬಾಗಿಯೆ
ರಕ್ತಂ ಕಾಣಿಪುದು ಮುತ್ತುಗದ ಪೂವಿನೊಳಂ ೩೮೨

ಪರಮಾಸ್ವಾಹೆಯ ಕಂಡೊಡಾಗಳೆ ನಿಜಪ್ರಾಣೇಶನೆಂದಪ್ಪಳೇ
ಗರುಡಂ ಕಂಡೊಡೆ ಮಾಂಸರಾಶಿಯಿದುಪೆಂದಾಕಾಶದಿಂ ಬೀಟಿಸೇ
ಮರುತಂ ಕಂಡೊಡಪೂರ್ವಮಪ್ಪ ಸಖನೆಂದಾರ್ಪೆಯ್ದನೇಯೆಂಬುದೊಂ
ದುರು ಶಂಕಾಸ್ಪದಮಾಗಿ ಪೂತಿವಿಡಿದಾ ಪಾಲಾಶ ತಾಂ ತೋಱುಗಂ ೩೭೩

ವಿರಹದ ದೇವಸ್ತ್ರೀಯರ್
ವರಪುಷ್ಪಕದಲ್ಲಿ ಬರುತಲಾ ಮುರದಲರಂ
ಸುರರ ಬಾಯ್ಗೆತ್ತು ಚುಂಬಿಸಿ
ಪರಿಮಳಮಂ ಕೊಂಡು ಬಾಯ ಕೆಂಪಿತ್ತರಹೋ ೩೭೪

ಕರಿ ಪಾಲಾಶದ ಪೂವಂ
ಕರೇಣುವಂ ಕೂರ್ತು ಕೊಯ್ದು ಮುಂದಿರಿಸಿದ ಬಗೆ
ಯರವಲ್ಲ ನಿನ್ನೊಳೆನುತಂ
ಕರದೊಳ್ ಕೆಂಡಂಗಳಾಂತು ಸುರಿವಂತಿರ್ಕುಂ (?) ೩೭೫

ಮುತ್ತುಗದೆಲೆಯೊಳ್ ನೆಯ್ಯಂ
ತತ್ತರುವಿನ ಪೂವಿನೊಳಗೆ ನೊಗಮಿರಿಸುತೆ ಗಿಳಿ
ವೊತ್ತದ ತಾಯ್ ಪಿಡಿಗದ ತಂ
ದಿತ್ತಂದಿಂ ಪ್ಯೆಪಸುರ್ ಮಸಕು ಮುಖರಾಗಂ (?) ೩೭೬

ಇಳೆಗುದಿರಿರ್ದ ಪೂವಿನಡಿ ಕೀಲ್ಪಸೆಯಾಗಿರಲಾ ತರುವ್ರಜಂ
ತೊಳಗುವ ತನ್ನ ಬಂಧುಕುಳವಾಗಿರೆ ಪಿಂತಣ ಕುಂಜರಾಸನಂ
ಯೆಳೆವರವಾಗೆ ಸಾರ್ದಲತೆ ಕನ್ನಿಕೆಯಾಗಿರೆ ಚಂದ್ರಗಾವಿಯಂ
ತಳೆದ ವಿವಾಹನಾಯಕನವೋಲ್ ಪೊಱತದಿರ್ದುದು ಮುತ್ತುಗಂ ನಗಂ (?) ೩೭೭

ವನಸಿರಿ ಮುತ್ತುಗಶಿಶುಗಂ
ದನುನಯದಿಂ ಪುಲ್ಲೆಗೋಡು ಪುಲಿಯುಗುರ್ಗಳನೊ
ಲ್ದನುರಾಗದಿಂದೆ ಕಟ್ಟಿದ
ಳೆನೆ ನನೆ ಕೆಲವೆಸೆಯುತಿರ್ದುವಾ ಮುತ್ತುಗದೊಳ್ ೩೭೮

ಎಳೆವೆಱೆಯನೊಂದ ಪೊತ್ತನ
ನಿಱಿಕ್ಕೆಯುಂ ಪಲವು ಪೆಱೆಯನಾಂತೀಶನವೋಲ್
ತಿಳಿಗೆ ಪಾಲಾಶಮೆಸೆದುದು
ಚೆಲುವಿಂ ಚೆನ್ನಲರ್ದ ಪೂವಿನೆಸಳ್ಗಳ ಭರದಿಂ ೩೭೯

ಆಕಾಶಮೆಂಬ ಗಜನುಂ
ಭೀಕರ ಪಾಲಾಶ ಹರೀಶಸಿಂಹಂ ಪೊಯ್ಯಲ್
ತಾಕಿದ ನಖಹತಿಯಂತಂ
ತಾ ಕುಜಕುಸುಮಾವಳಿ ಮೆಱೆದುವಾರಕ್ತತೆಯಂ ೩೮೦

ವಿರಹಿಗಳ ಮೇಲೆ ಚೈತ್ರಂ
ತೆರಳ್ವುದನಱಿದೊಲ್ದು ಮೊದಲೆ ಶಿಶಿರಂ ಕೆಂಪಿನ
ತಿರದುಮ್ಮಾನಂ ಪೂಸಿದ
ಪರಿಯಾದುವು ಕುಸುಮಮಿಳಿತ ತತ್ಪಾಲಾಶಂ ೩೮೧

ಪೂಗಳ ಚೆಲ್ವಂ ನೋಡಲ್
ಕೋಗಿಲೆ ತುದಿಗ್ಗೆದಿ ಚಲಿಸದಿರೆ ದುರ್ಮೋಹಂ
ತಾಗದಂತೆಯ್ದೆ ಬನಸಿರಿ
ಯಾ ಘನತರುಗಿಟ್ಟ ತಿಲಕದಂತೆಸೆದಿರ್ಕುಂ ೩೮೨

ಎಲಿಯುಲೆಯುತ್ತೆ ಚೆಲ್ವಿನ ಮಹಾಕುಸುಮಂಗಳನಿತ್ತು ಕಣ್ಗೆ ನಿ
ರ್ಮಲವನೆ ತೋಱು ರಾಜಶುಕನಾ ಮಱಯುಂ ನೆಱೆ ಪಾಲಿಸಲ್ಕೆ ತಾಂ
ನೆಲಿವನೆಯಾಗಿ ತತ್ಸುಖದ ಪಕ್ಷಿಗೆ ಕೂಡಿಯೆಕೊಟ್ಟು ತಾಪಸೋ
ಜ್ಜ್ವಲರ್ಗೆಡೆಯಿತ್ತು ಬಾಳ್ವಿ ಮುತ್ತುಗದೇಟಿಗ್ಗಿಯನೇನ ಬಣ್ಣಿಪೆಂ

ಉದಿರ್ದೆಸಳ್ಗಳಿಲ್ಲಿ ತೋರ್ಪ ಪಸಿರ್ದೊರೆಯಲ್ಲಿ ಕಲಂಕೆ ಬೀಟ್ಬು ಕ
ಮ್ಮಿದಗಳನಾಂತು ಪೋಪೆಡೆಯೊಳಾರ ಕರಂಗಳೊಳೆಯ್ದಿಸಿಲ್ಲಿ ಮು
ತ್ತೊದವಿದ ದಿವ್ಯಗಂಧಮನೆ ಸೂಸುತೆ ತೂಗಿಯೆ ಮಾಜಲಾರಮೆಂ
ಬುದು ನಿಜನಾಮ ಮುತ್ತುಗನುದಾರ್ಗುಪಕಾರಮನೀಯುದಾವಗಂ ೩೮೪

ಇಂತುದ್ಯನ್ಮೃಗಸಂಘದಿಂ ವನಚರಸ್ತ್ರೀಮಂಗಳಿಂ ಭೂಮಿಜಾ
ನಂತಶ್ರೇಣಿಗಳಿಂದರಣ್ಯಕುಳದಿಂದಂ ತಾಪಸವ್ರಾತದಿಂ
ಸಂತಂ ಸುತ್ತಿದ ಸೂಕ್ಷ್ಮಗೋತ್ರಚಯದಿಂ ಗಂಧರ್ವಸಿದ್ಧಾಮರೌ
ಘಂ ತೀವಿರ್ದ ಮಹಾಗುಹಾವಳಿಗಳಿಂದೊಪ್ಪಿರ್ದುದುದ್ಯನ್ನಗಂ ೩೮೫ *
(ಗಿರಿಜಾಕಲ್ಯಾಣಂ ೧-೧೨೯)

ಓರಂತೆ ಮೆಚ್ಚಿದಂ ಕೃತಿ
ಸಾರಂ ಗಿರಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೩೮೬

ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಮಲ್ಲನಿರ್ಮಿತ ಕಾವ್ಯಸಾರ ಮಹಾಪ್ರಬಂಧದೊಳ್
ಗಿರಿವರ್ಣನಂ ತೃತೀಯಾಶ್ವಾಸಂ

———

* ಪ್ರತಿಯಲ್ಲಿ ಇಲ್ಲಿಂದ ಮುಂದೆ ಸುಮಾರು ಇಪ್ಪತ್ತು ಪದ್ಯಗಳಷ್ಟು ಗ್ರಂಥಪಾತವಿದೆ.

# ಪುರವರ್ಣನಂ

ಪೊಗೞಿಪ ದೇಶಮುತ್ತರಿಪ ದೇಶಮನುತ್ತಮದೇಶಮಾರ್ಗೆಯುಂ
ಬಗೆವುದನೀವದೇಶಮತಿಮಂಗಳದೇಶಮನೂನದೇಶಮು
ರ್ವಿಗೆ ಸುಖಮಪ್ಪದೇಶಮುದಿತೋದಿತದೇಶಮಪಾರಪುಣ್ಯಕಾ
ರಿಗಳನುಕೂಲದೇಶಮಭ್ಯುದಯದೇಶಮಿದೆಂತು ಬಣ್ಣಿಪೆಂ ೧

(ಗಿರಿಜಾಕಲ್ಯಾಣಂ ೨-೩)

ಪಲವುಂ ನಾಲಗೆಯುಳ್ಳವಂ ಬಗೆವೊಡೆಂತುಂ ಬಣ್ಣಿಸಲ್ಕಾಱನಾ
ನೆಲನಂ ಮಿಕ್ಕಿನ ಮಾನವಂ ಪೊಗೞಲೇನಂ ಬಲ್ಲನೆಂದೆಂಬುದೊಂ
ದುಲಿಯಂ ನೆಟ್ಟನೆ ತಾಳ್ದಿ ಕನ್ನಡವೆನಿಪ್ಪಾ ನಾಡು ಚೆಲ್ವಾದುದು
ಜ್ಜ್ವಲದಿಂ ಪೂತಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ ೨

(ಕಬ್ಬಿಗರಕಾವ, ಪದ್ಯ ೧೯– ಪುಟ ೫)

ವನಂ ನಾನಾಫಲಭೂಜದಿಂ ನಗಕುಲಂ ನಾನಾಮಣಿಶ್ರೇಣಿಯಿಂ
ಇಳೆ ನಾನಾವಿಧ ಸಸ್ಯದಿಂದುಪವನಂ ನಾನಾರ್ಥಸಂಪತ್ತಿಯಿಂ
ಜನಂ ನಾನಾವಿಧ ಹರ್ಷದಿಂ ಪರಿಜನಂ ನಾನಾವಿಧಶ್ರೀಯಿನ
ಗ್ಗಳಿಸಲ್ಕಗ್ಗಳಿಸಿರ್ಪುದಾ ಜನಪದಂ ನಾನಾಶುಭೈಕಾಸ್ಪದಂ ೩

ಪೊಲನ ಪೊದಳ್ದಿದಿತ್ತ ಸಿರಿಯಂ ಸಲೆ ಬಣ್ಣಿಪನಾವನಾವಗಂ
ನೆಲನಱಿದಾದೆ ಕಸ್ತುರಿಯಮಿಗಂ ಕರಿದಾದೆರೆ ಕುಂಕುಮಂ ಪೊದ
ಳ್ದಲಿದುರುಕೇಸರಂಬೊರೆದ ಕೆನ್ನೆಲವನಲ್ಲದೆ ಬೇಱೆ ಮತ್ತೆ ಕೆ
ನ್ನೆಲನೆಸೆಯೆಂಬುದಿಲ್ಲ ಪರಿಭಾವಿಪೊಡಾ ವಿಷಯಾಂತರಾಳದೊಳ್ ೪

ಅನಿಶಮಶೋಕಭಾವವನಮುಂ ವನಮುಂ ಜನಮುಂ ಶಿಳೀಮುಖಾ
ನನನವಸಾನುಭಂಗಿವನಮುಂ ಜನಮುಂ ಸುಮನೋವಿಳಾಸ ಸೂ
ಚನತಿಲಕೋಪಶೋಭಿವನಮುಂ ಜನಮುಂ ಕಮಲಾಕರಾವಲಂ
ಬನಜನಿತಾರ್ಘಭಾವಮಹಿತಂ ವನಮುಂ ಜನಮುಂ ತದುರ್ವಿಯೊಳ್ ೫

ದಳಿತಾಬ್ಜಪ್ರಸರಂ ಸರಂ ಕುಸುಮಸಾಲಾರಾಮಸಾರಾಮಮು
ಜ್ಜ್ವಳರತ್ನಾರ್ಚಿರಲಂಕೃತಂ ಕೃತಕಶೈಲಂ ರಾಜಕೀರಚ್ಛದಾ
ಸಿಳಲೋಲತ್ಕಣಿಶಾಳಿ ಶಾಳಿ[1] ಜನಚೇತೋನಂದನಂ ನಂದನಂ
ಲಲಿತಶ್ರೀಪರಿರಂಜನಂ ಜನಮೆನಲ್ ಚೆಲ್ವಾದುದುರ್ವೀತಳಂ ೬

(ಜಗನ್ನಾಥವಿಜಯಂ ೨-೨)

ಸುರುಚಿರಶಾಲಿ ಶಾಲಿಯ ವನಂ ವನಮಾ ಶುಕವಾಚಿ ವಾಚಿತೋ
ದ್ಧುರಪಶುಭೂಮಿ ಭೂಮಿಪಜನಾಹಕ ವಾಹಕರಾಜರಾಜಬಂ
ಧುರ ಫಲಭೂಜ ಭೂಜನಿತ ನೀರಜ ನೀರಜವಬ್ಜವಬ್ಜಜಾ
ಕರಕರಣಾಪುರಂ ಸಲೆಬಹಿರ್ವಳೆಯಂ ವಳೆಯಂ ಧರಿತ್ರಿಯೊಳ್ ೭

ಮಿಸುಪ ಕೊಳಂ ಕೊಳಂಗಳೆಡೆಯೊಳ್ ಬಿರಿವಂಬುಜವಂಬುಜಂಗಳೊಳ್
ಮುಸುಱಿದ ತುಂಬಿ ತುಂಬಿಗಳನೋವದೆ ಸೋವೆಲರುಳ್ಕಿಲರ್ಗೆ ಕಂ
ಪಿಸುವ ಲತಾಗೃಹಂ ನವಲತಾಗೃಹದೊಳ್ ಸುಖಮಿರ್ಪ ಭೋಗಿವಾ
ನಿಸರೆಸದಿರ್ಪರಾವನಮೊಳೇವೊಗಟಿಸ್ವಂ ತದಿಳಾವಿಳಾಸವಂ ೮

(ಧರ್ಮನಾಥಪುರಾಣಂ ೨-೩೯)

ರತಿಲೀಲಾಭವನಂ ವನಂ ಸಕಲಸೌಖ್ಯೋಜ್ಜೀವನಂ ಜೀವನಂ
ಶ್ರುತಿಚಿಂತಾಮತಿಭೋಜ್ಯಭೋಜನಸುನಂಗಸ್ತ್ರಾಕುಲಂ ಸಂಕುಲಂ
ನುತಸಸ್ಯಾದಿ ಸಮುದ್ಗತಂ ಧರಣಿ ಲಕ್ಷ್ಮೀಬಂಧುರಂ ಬಂಧುರಂ
ಜಿತ ರಾಜಸ್ವಕಪೆಂಪೊಡಾವಿಷಯದೊಳ್ಪಂ ಬಣ್ಣಿಸಲ್ ಬಕ್ಕುಮೇ (?) ೯

ಸತತಂ ಮಾಂಗಲ್ಯದಿಂದಚ್ಯುತ ಸುಖಭರದಿಂ ಸಂತತಂ ಪದ್ಮಸೀತಾ
ನ್ವಿತದಿಂ ಸೌಂದರ್ಯದಿಂ ಕೋಮಲವ್ಯಮುತರದಿಂ ವಾರ್ಧಿಸಂಭೂತಸೀವಾ
ಯುತದಿಂ ಸದ್ರಾಕ್ಷದಿವ್ಯಾಮೃತ ಶಶಿಸಹಜಾತತ್ವದಿಂ ಕಾಮಜನ್ಮ
ಸ್ಥಿತಿಯಿಂ ಚೆಲ್ವಾದ ದೇಶಂ ಪರಿಕಿಪೊಡೆ ಮಹಾಲಕ್ಷ್ಮಿಯಂತೊಪ್ಪಿ ತೋರ್ಕುಂ ೧೦

ಇಲ್ಲ ಮರಾಳಮಿಲ್ಲದ ಕೊಳಂ ಕೊಳಮಿಲ್ಲದ ಪಾಣಿಪಾಡು ಪಾ
ಡಿಲ್ಲದ ತುಂಬಿ ತುಂಬಿಗಳ ಗೊಂದಣಮಿಲ್ಲದ ಪೂವರಲ್ದ ಪೂ
ವಿಲ್ಲದ ಮಲ್ಲಿಕಾಲತೆ ಮಲ್ಲಿಗೆಯಿಲ್ಲದ ಮಾವು ಬಂದ ಮಾ
ವಿಲ್ಲದ ನಂದನಂ ಕುಳಿರ್ವ ನಂದನಮಿಲ್ಲದ ಜಾತಿಜಾಂಗಣಂ ೧೧

(ಅನಂತನಾಥಪುರಾಣಂ ೩-೯)

---

[1] ನೀಲಾಕಳಿತಾಳಿ ಪಾಂಥ(ಸ)

ಬನಮುಂ ಕೆಯ್ವೊಲಗಾವ ಪಾಮರಿಯರುಂ ಮಾರ್ಗಪ್ರಪಾಪಾಲಿಕಾ
ಜನಮುಂ ಗೋಕುಲಮುಂ ಜಲಾಶಯಮುಮಾರೂಢಾಸ್ತ್ರಶಸ್ತ್ರಶ್ರಮಾ
ಪನಿಯುಂ ಕೋಂಟೆಯುಮೆತ್ತಿಪಂಗಡಿಗಳುಂ ವಾರಾಂಗನಾವಾಟ ದೇ
ವನೃಪೇಂದ್ರಾಲಯವರ್ಗಮುಂ ಪುರವರವ್ಯಾವರ್ಣನಕ್ಕಾಸ್ಪದಂ ೧೨
(ಸೂಕ್ತಿಸುಧಾರ್ಣವಂ ೪-೧)

ಬಳಸಿರ್ದದ್ರಿಯ ಕಲ್ಗಳೆಲ್ಲಮುವು ಪೊನ್ನುಂ ರನ್ನಮುಂ ಪೂಗೊಳಂ
ಗಳ ನೀರೆಲ್ಲಮನೇಕಸಿದ್ಧರಸಮುಂ ಪೀಯೂಷಮುಂ ಕೆಯ್ವೊಲಂ
ಗಳ ಸಸ್ಯಾವಳಿಯೆಲ್ಲಮೊಳ್ಗಬಿಸೆಯುಂ ಪುಂಡ್ರೇಕ್ಷುವಂ ನಂದನಂ
ಗಳ ಧಾತ್ರೀರುಹಜಾತಮೆಲ್ಲಮಮರೋರ್ವೀಜಾತಮುಂ ಚೂತಮುಂ ೧೩
(ಜಗನ್ನಾಥವಿಜಯಂ ೯-೮೬, ಸೂಕ್ತಿಸುಧಾರ್ಣವಂ ೪-೧೬)

ಬಲ್ಗೊಲೆಯೂಜಃ ನಿಂದು ತಲೆದೂಗೆ ನೆಗಬ್ಬಿತ್ತಪೆಯೆತ್ತನೋಡೆ ನೈ
ದಿಲ್ಗೊಳನಚ್ಚತಾವರೆಗೊಳಂ ತಿಳನೀರ್ಗೊಳನಂ ಪುದಿರ್ದುವಾ
ಪಲ್ಗೊಳನಲ್ಲಿ ತನ್ನ ಬೆಳಸಂ ಪಸನಾಡುವಿನಂ ಧರಿತ್ರಿ ನೋ
ಡಲ್ಲಡಿಯಿಟ್ಟು ಕಣ್ ತೆಱೆದುದೆಂಬಿನೆ ಸಂತತಮೊಪ್ಪಿತೋಱುಗುಂ ೧೪

ತಣಿವಂ ತಳ್ಪರಿಗೀವುದಚ್ಚರಿತ ಗಂಗಾಸಿಂಧು ಸೌಗಂಧಿಕೋ
ತ್ಪಣಗಂಧಂ ವಿಜಯಾರ್ಧರತ್ನಕಟಕಂ ಷಟ್ಖಂಡಭೂಮಂಡಲ
ಪ್ರಣುತೋದಾರ ಚರಿತ್ರಮಾ[1][ಯ್ತು][1] ಭರತಕ್ಷೇತ್ರಂ ಮನಂಗೊಂಡು ದ
ಕ್ಷಿಣದೊಳ್ ದಕ್ಷಿಣಬಾಹುದಂಡಮೆನೆ ಜಂಬೂದ್ವೀಪಭೂಪಾಲನಾ ೧೫

ಮುದಮೂರೂರಬಲಾಜನಕ್ಕೆ ಪರಿಣೀಮೂರೂರ ತೋಂಟಕ್ಕೆ ಸಂ
ಪ್ಮದಮೂರೂರ ಗೃಹಕ್ಕೆ ಪಂಕಜದ ಬೆಲ್ಮೂರೂರ ಗುಯ್ಯಲ್ಗೆ ಸ
ಪ್ಮದಮೂರೂರ ಮದಾಳಿಗಂಜೆಗಳ ಪೆಂಪೂರೂರ ಷಂಡಕ್ಕೆ ಪಾ
ಲೊದವೂರೂರ ದನಕ್ಕತಕ್ಕ್ಯಮಪಱಿಂ ರಯ್ಯಂ ತದುರ್ವೀತಳಂ ೧೬
(ಕಾವ್ಯಾವಲೋಕನಂ ೨೮೯, ಸೂಕ್ತಿಸುಧಾರ್ಣವಂ ೪-೨೭)

ಒದವಿದ ದೇಶಮುನ್ನತಿಯನೇ[2]ವ್ರೋಗಬ್ಬಿಂ ಮದ[2]ಮತ್ತಹಸ್ತಿ ಪು
ಟ್ಟಿದ ಮಲೆ ಮುತ್ತುಪುಟ್ಟಿದ ಬಿದಿರ್ ಮಣಿಪುಟ್ಟಿದ ಬೆಟ್ಟು ಕೌಂಗುಪು
ಟ್ಟಿದ ಪೊಲಸಂಜೆ ಪುಟ್ಟಿದ ಕೊಳಂ ನದಿ ಪುಟ್ಟಿದೊಸಱ್ ನಸೀರು ಪು
ಟ್ಟಿದ ಪುರನಂದನಂ ಜಗಮ ಪುಟ್ಟಿದ ಭೂತಳಮಿಲ್ಲ ದೇಶದೊಳ್ ೧೭
(ಸೂಕ್ತಿಸುಧಾರ್ಣವಂ ೪-೭)

---

[1] ದ (ಸ) [2] ಪೆಸರ್ಗೊಂಡಪೆಂ(ಸ)

ಮಾಮರನಲ್ಲದಿಲ್ಲ ತನಿಗಂಪಿನ ಮಲ್ಲಿಗೆಯಲ್ಲದಿಲ್ಲ ಪೊಂ
ದಾಮರೆಯಲ್ಲದಿಲ್ಲ ಪೊಣರ್ವಕ್ಕಿಗಳಿಂಚರಮಲ್ಲದಿಲ್ಲ ಗೀ
ತಾಮೃತಮಲ್ಲದಿಲ್ಲ ಕಡುಮುದ್ದಿನ ಚೆಲ್ವಿನ ಪೆಂಡಿರಲ್ಲದಿ
ಲ್ಲಾ ಮಹಿ ಭೋಗಭೂಮಿಯೊ ಮನೋಭವರಾಜನ ಜನ್ಮಭೂಮಿಯೋ ೧೯

(ಸೂಕ್ತಿಸುಧಾರ್ಣವಂ ೪-೯)

ಪಿಕಕೋಳಾಹಳಮಿಲ್ಲದಿಲ್ಲ ಪೆಱವುಂ ಕೋಳಾಹಳಂ ನಾಗಚಂ
ಪಕ ಗಂಧೋದ್ಗಮಮಲ್ಲದಿಲ್ಲ ಪೆಱವುಂ ಗಂಧೋದ್ಗಮಂ ಭೃಂಗಗಾ
ಯಕ ಗೀತಸ್ವನಮಲ್ಲದಿಲ್ಲ ಪೆಱವುಂ ಗೀತಸ್ವನಂ ರಾಜಕೀ
ರಕ ವಾಕ್ಪಾಟವಮಲ್ಲದಿಲ್ಲ ಪೆಱವುಂ ವಾಕ್ಪಾಟವಂ[೧]ನಾಡಿನೊಳ್[೨] ೧೯

(ಶಾಂತಿಪುರಾಣಂ ೩-೩; ಸೂಕ್ತಿಸುಧಾರ್ಣವಂ ೪-೩೧)

ಬನಮೋ ಕೀರಾಳಿ ಪುಂಸ್ಕೋಕಿಲಮಧುರರವೋದ್ದಾಮಕೋಳಾಹಳಂ ಕಾ
ನನಮೋ ಗಂಧೇಭದಾನಪ್ಲವಪರಿಮಳಚಂಚನ್ನದೀವಾಃಪ್ರವೃದ್ಧಂ
ಜನಮೋ ಭೋಗೋಪಭೋಗಾಸ್ಪದಸಮುಚಿತಲಕ್ಷ್ಮೀವಿಳಾಸಾಶ್ರಯಂ ತಾ
ನೆನೆ ಮರ್ತ್ಯನೆಂಬುದಂಗೋದ್ಭವ ನರಪತಿಗಾ ಪೂರ್ಣಸಪ್ತಾಂಗಮಂಗಂ ೨೦

(ಸೂಕ್ತಿಸುಧಾರ್ಣವಂ ೪-೧೦)

ಒದವಿದ ಮುಟ್ಟು ತೀವಿದ ಕಳಂ ಬೆಳೆ ತೀವಿದ ಗದ್ದೆ ಕೌಂಗು ತೀ
ವಿದ ಬನವಂಚೆ ತೀವಿದ ಕೊಳಂ ವಿವಿಧಾಂಬುಜಷಂಡಮೆಯ್ದೆ ತೀ
ವಿದ ಕೆಱೆ ಹಟ್ಟಿ ತೀವಿದ ಪಯಂ ಮನೆ ತೀವಿದ ಮಕ್ಕಳೋಳಿ ಪಿಂ
ಗದ ಸಿರಿ ತೀವಿದಂಗಡಿಗಳೆಲ್ಲಿಯುಮುಲ್ಲಿಯ ಪಳ್ಳಿಪಳ್ಳಿಯೊಳ್ ೨೧

(ಸೂಕ್ತಿಸುಧಾರ್ಣವಂ ೪-೧೭)

ಜನಪತಿಯಿರ್ಪ ಪೆರ್ಗುಱುಪಿನಿಂದಿವು ಬೀಡಿವು ನಾಡೆಯೂರ್ಗಳಿಂ
ದನುವಿಪರಲ್ಲಿದಂತಱಿಯಬಾರದು ಭೇದಿಸಿ ಬೇಱೆವೇಱೆ ಸೊಂ
ಪಿನ ಸಿರಿ ಬೇಱೆವೇಱೆ ಮಣಿಮಾಡದ ತಿಂಥಿಣಿ ಬೇಱೆವೇಱೆ ನಂ
ದನತತಿ ಬೇಱೆವೇಱೆ ಪರಿಖಾವಳಿ ತೋರಣವಪ್ರಗೋಪುರಂ ೨೨

(ಅನಂತನಾಥಪುರಾಣಂ ೧೧-೧೦; ಸೂಕ್ತಿಸುಧಾರ್ಣವಂ ೪-೩೦)

---

[೧] ಬಿದ್ದಿನ(ಸ) [೨] ಸುತ್ತಲುಂ(ಸೂ)

ಸಿರಿ ನೆಲೆಗೊಂಡುದಲ್ಲಿ ಮದನಂ ಮನೆಗಟ್ಟಿದನಲ್ಲಿ ಸೌಖ್ಯಮಂ
ಕುರಿಸಿ ಮಡಲ್ತುದಲ್ಲಿ ಋತುಗಳ್ ನೆಲೆಗೊಂಡುವು ತನ್ನೊಳಲ್ಲಿ ಜಾಣರ್
ಪರವಶಗೆಯ್ದುದಲ್ಲಿ ಬಹುವಿದ್ಯಗುಣಂ ಪಣಗೊಂಡುದಲ್ಲಿ ನಾ
ಡರಸನದೆನ್ನದಾ ವಿಷಯಮಂ ಪೆಱತೆಂದೊಡೆ ದೋಷಮಾಗದೇ ೨೩
(ಸೂಕ್ತಿಸುಧಾರ್ಣವಂ ೪–೨೬)

ಬಲಿರಾಜ್ಯಂ ಸತತಂ ಪ್ರಜಾಪ್ರತತಿಗೆಲ್ಲಂ ಯವ್ವನಶ್ರೀಭರಂ
ಸಲೆ ಕಾಂತಾತತಿಗೆಲ್ಲಮೂರ್ಜಿತವಸಂತಂ ಸಂತತಂ ನಂದನಾ
ವಲಿಗೆಲ್ಲಂ ರತಿಕೇಳಿರಾಗವನಿಶಂ ಸ್ತ್ರೀಪುಂವ್ರಜಕ್ಕೆಲ್ಲಮು
ಜ್ವಲ ಚಂದ್ರಾತಪಪೂರ್ಣಿಯುಂ ರಜನಿಜಾತಕ್ಕೆಲ್ಲಮಾ ದೇಶದೊಳ್ ೨೪
(ಜಗನ್ನಾಥವಿಜಯಂ ೨–೩)

ದಾರಿಯ ನಂದನಂಬಿಡಿದು ಪೂತಕೊಳಂ ಕೊಳದೊಳ್ ಬಟಿಲ್ಕೆಯುಂ
ಬಾರಿಸಲೆಂದು ನಿಂದ ಪಥಿಕರ್ ಪಥಿಕಾಸಯ[1]ಪ್ರಭಾನ್ವಿತಾ[2]
ಸಾರವೆ ತೀವಿ ಬರ್ಪ ಪರಿಕಾಲ್ ಪರಿಕಾಲ್ಗಳ ನೀರನುಣ್ಬ ಕೇ
ದಾರವನಂ ಮನಂಗೊಳಿಸುತಿರ್ಪುವು ಭೂವನಿತಾವಿಭೂತಿಯೊಲ್ ೨೫
(ಜಗನ್ನಾಥವಿಜಯಂ ೨–೪; ಸೂಕ್ತಿಸುಧಾರ್ಣವಂ ೪–೧೩)

ಇವು ಪಳ್ಳಿಗಳಿವು ಪಟ್ಟಣ
ಮಿವು ಕೆಱೆಗಳಿವೆಱಗಿ ನಿಂದ ಮುಗಿಲೋಳಿಗಳಿಂ
ತಿವು ಕಾಡಿವು ಪೆಸರ್ವಡೆದೊ
ಪ್ಪುವ ಬನವೆಂದಱುದು ಪೇೞಲ್ಪಡರಿದಾ ನಾಡೊಳ್ ೨೬
ಕಬ್ಬಿಗರ ಕಾವಂ–೨೦–)

ಮಲ್ಲಿಗೆಯಲ್ಲದೆ ಸಂಪಗೆಯ
ಲ್ಲದೆ ದಾಳಿಂಬಮಲ್ಲದೊಪ್ಪುವ ಜೆಂದೆಂಗ
ಲ್ಲದೆ ಮಾವಲ್ಲದೆ ಕೌಂಗ
ಲ್ಲದೆ ಗಿಡುಮರಗಳೆಂಬುದಿಲ್ಲಾ ನಾಡೊಳ್ ೨೭
(ಕಬ್ಬಿಗರಕಾವಂ–೨೧–)

ಅಡರ್ದೇಱಲ್ ಕೋಡಗಂಗಳ್
ಕಡುಪಿಂದೀಡಾಡೆ ಫಳಿಲನೊಡದೆಳೆಗಾಯಿಂ
ಜೆಡೆವಿಡಿದಿೞಿವೆಳನೀರಿಂ
ನಡುಗೊಂಡೊಸಱುತ್ತಮಿರ್ಪವಲ್ಲಿಯ ಬನಮಂ ೨೮
(ಕಬ್ಬಿಗರ ಕಾವಂ–೨೨)

---

[1] ಪೆಸಗೈವುದಾಗರ್ಪಿರ(ಸೂ) [2] ನಾಮೃತರಸಾ(ಸ)

ಮೇದರೊಳಲ್ಲದೆ ವಂಶ
ಚ್ಛೇದಂ ಗಾರುಡದೊಳಲ್ಲದಹಿತತ್ವಂ ಹೊಂ
ಗೇದಗೆಯ ಹೊದಱೊಳಲ್ಲದೆ
ಯಾ ದುರ್ಧರ ಕಂಟಕತ್ವಮಿಲ್ಲಾ ನಾಡೊಳ್ ೨೯
(ಸೂಕ್ತಿಸುಧಾರ್ಣವಂ ೪-೧೯)

ಮೇಳಿಸಿ ಕಾಯ್ದಿಱುವುದು ವನ
ಪಾಲರೊಳಾಱಡಿಯ ಮಸಕದೆಸಕಂ ಸುಮನೋ
ಮಾಲೆಗಳೊಳ್ ಕದ್ದೋಡುವ
ಶೀಲಂ ಶೌಂಡಿಕರೊಳಲ್ಲದಿಲ್ಲಾ ನಾಡೊಳ್ ೩೦
(ಸೂಕ್ತಿಸುಧಾರ್ಣವಂ ೪-೧೮)

ತಿವಿದು ಸೆರೆವಿಡಿದು ಕಟ್ಟುವ
ತವೆ ಕೊಲ್ವ ಪರಾರ್ಥತತಿಗೆ ಬಯಸುವ ದುಷ್ಟ
ವ್ಯವಹೃತಿ ನೇತ್ರದೊಳಲ್ಲದೆ
ಸವನಿಸದಾ ವಿಷಯಜನ ಸಮಾಜಮೊಳೆಂದುಂ ೩೧
(ಕಬ್ಬಿಗರಕಾವಂ-೩೧-)

ಸತತಂ ಮಾರ್ಗೋಲ್ಲಂಘನ
ಗತಿ ಹಯದೊಳವಗ್ರಹಂ ಮದೇಭಸಮೂಹಾ
ಕೃತಿಯೊಳ್ ಸಮರಾಗಮನ
ಸ್ಥಿತಿ ನಲ್ಲರೊಳಲ್ಲದಿಲ್ಲ ಪೆಱತಾ ನಾಡೊಳ್ ೩೨
(ಚಂದ್ರಪ್ರಭಪುರಾಣಂ ೧-೮೬; ಸೂಕ್ತಿಸುಧಾರ್ಣವಂ ೪-೨೪)

ಬವರಂ ಜಡಸಂಗಂ ರಾ
ಜವಿರೋಧಂ ತಪನವಿಕೃತಿ ಗುಣಗೋಪನಮುಂ
ಬಿವು ಮಾನಿಸರೊಳ್ ದೊರೆಕೊ
ಳ್ಳಿವು ಪದ್ಮದೊಳಪ್ಪೊಡಕ್ಕುಮಂತಾ ನಾಡೊಳ್ ೩೩
(ಸೂಕ್ತಿಸುಧಾರ್ಣವಂ ೪-೨೨)

ಅಳಿಯಾಸೆ ಪುಷ್ಪವಾಟೀ
ಸ್ಥಳದೊಳ್ ರಾಜಭಯಮುಬ್ಬಸಂಕುಳದೊಳ್ ಸಂ
ಚಳತೆ ಪವಮಾನನೊಳ್ ವಿ
ಹ್ವಳತೆ ರಥಾಂಗದೊಳಗಲ್ಲದಿಲ್ಲಾ ನಾಡೊಳ್ ೩೪
(ಗಿರಿಜಾಕಲ್ಯಾಣಂ ೨-೫)

ಸಕಳಂಕತೆ ಚಂದ್ರಮನೊಳ್
ವಿಕಳಧ್ವನಿ ಪಕ್ಷಿಯಲ್ಲಿ ಭಂಗಂ ನದಿಯೊಳ್
ಸಕುಟಿಲತೆ ಲತೆಗಳೊಳ್[1]ಭುವ
ನ[1]ಕಂಟಕಂ ಬಿಸದೊಳಲ್ಲದಿಲ್ಲಾ ನಾಡೊಳ್ ೩೫

(ಗಿರಿಜಾಕಲ್ಯಾಣಂ ೨-೬)

ಕರವಿಚ್ಛೇದಂ ಗ್ರಾಮನಿ
ಕರಂಗಳೊಳ್ ಬಂಧನಂ ಕುಸುಮಮಾಲಿಕೆಯೊಳ್
ಪರವಶಮೆಂಬುದು ಯೋಗೀಂ
ದ್ರರೊಳಲ್ಲದೆ ಭೂಮಿಪತಿಯ ದೇಶದೊಳುಂಟೇ ೩೬

(ಗಿರಿಜಾಕಲ್ಯಾಣಂ ೨-೭)

ಆಮಯಮಕ್ಷರಕುಲದೊಳ್
ಸಾಮಂ ವೇದಂಗಳಲ್ಲಿ ಭೀಮಂ ಚಿತ್ರ
ಸ್ತೋಮದೊಳಂ ಕ್ಷಾಮಂ ಲಲ
ನಾಮಧ್ಯದೊಳ[2]ಲ್ಲದಿಲ್ಲ ಮತ್ತಾ ನಾಡೊಳ್[2] ೩೭

(ಗಿರಿಜಾಕಲ್ಯಾಣಂ ೨-೮)

ಶ್ರುತದೊಳ್ ಚಿಂತೆ ಮದೇಭದೊಳ್ ಸೆಱೆ ನಿರೋಧಂ ಪಂಜರಾನೀಕದೊಳ್
ಯತಿಭಂಗಂ ಕೃತಿಯೊಳ್ ಭಯಂ ನಟನದೊಳ್ ನಿಷ್ಕಿಂಚಿನತ್ವಂ ಮಹಾ
ವ್ರತದೊಳ್ ಶೂನ್ಯ[3]ವಿಳಾಸಿನೀ ನಡುವಿನೊಳ್ ಬಲ್ನಿಗ್ರಹಸ್ಥಾನಮುಂ
ಗೀತ[3]ವಾದಂಗಳೊಳಲ್ಲದಿಲ್ಲ ಮಱೆದುಂ ಮತ್ತೆಲ್ಲಿಯುಂ ದೇಶದೊಳ್ ೩೮

(ಸೂಕ್ತಿಸುಧಾರ್ಣವಂ ೪-೨೧)

ಪಿಡಿ ಕಟ್ಟಾಱಡಿ ತೊಂಡು ಬಂಡು ಮೊಱೆ ಪೊಕ್ಕೇಱಾಯಿಲಂ ಚೌರ್ಯಮೆಂ
ಬೊಡಮೆಂದುಂ ತಲೆದೋಱವೇಱೆವೆಳಗುಂ ಭೂಭೂಮಿಪರ್ ಧರ್ಮದಿಂ
ನಡೆವರ್ ನಚ್ಚಿನ ಜೈನಧರ್ಮಮೆ ವಲಂ ಧರ್ಮಂದಲೆಂದಾಗಳೆ
ನ್ನಿಡೆವಾತೇಂ ಕಡೆಗಾವನಾಡೊ ಪಡೆದತ್ತಾ ದೇಶದಾದೇಶಮಂ ೩೯

(ಧರ್ಮನಾಥಪುರಾಣಂ ೨-೪೬)

---

[1] ಭಾವುಕ(ಸ) [2] ದಾಸುದೇಶದೊಳುಂಟೆ(ಅ) [3] ಗೃಹಂ ದುರೋದರೊಳಾದಂ ವಿಗ್ರಹ
ಸ್ಥಾನಮನ್ವಿತವಾ(ಸೂ)

ನೆರೆದ ಬನಂಗಳೊಳ್ ಪಿಕದ ಬಗ್ಗಣೆ ಪರ್ವಿದ ಪೂಗೊಳಂಗಳೊಳ್
ತಿರುಗುವ ತೊಂಡುದುಂಬಿಗಳ ಪಲ್ಮೊರೆತಂ ಪೊಲಗೆಯ್ಗಳೊಳ್ ಪೊದ
ಱ್ದಿರಗಿಳಿಯಬ್ಬರಂ ತಗುಳೆ ಬಂದ ವಿಯೋಗಿಜನಕ್ಕೆ ನಾಡೆ ನಿಂ
ದಿರನೆಲೆಯಿಲ್ಲದಿರ್ದಡಱ ಮೇಲೆ ಸುಖಕ್ಕೆಡೆಯಾದುದಾ ನೆಲಂ ೪೦

(ಧರ್ಮನಾಥಪುರಾಣಂ ೨-೪೭)

ಬಿತ್ತಿದೆಡೆ ಬೆಳೆವುದಗ್ಗದ
ಬಿತ್ತಮನದು ಪಿರಿದು ಪಿರಿದು ಮಾತೇನಾರುಂ
ಬಿತ್ತದೆ ಪೊನ್ನಂ ಬೆಳೆವುದು
ಮುತ್ತಿನ ನೆಲನದಱ ಪೊಲದ ನೆಲಪೊರೆಗೆಣೆಯೇ ೪೧

ನೆಲ್ಲುಂ ಕೌಂಗುಂ ಮಾವುಂ
ಮಲ್ಲಿಗೆಯುಂ ಬೆಳೆವುವಲ್ಲಿ ಕಬ್ಬಿನ ರಸದಿಂ
ದಲ್ಲಾ ಕಾಲಮುಮೆಂದೊಡ
ದಲ್ಲದೆ ಮುತ್ತಾವುದಿಂಬು ಕಣ್ಗಂ ಮನಕಂ ೪೨

(ಸೂಕ್ತಿಸುಧಾರ್ಣವಂ ೪-೫೧)

ಕಲ್ಲೆಲ್ಲಂ ಪರುಷಂ ತರು
ವೆಲ್ಲಂ ಕಲ್ಪತರು ಗುಲ್ಮವೆಲ್ಲವೌಷಧಿ ಗೋ
ವೆಲ್ಲಂ ಸುರಭಿಕುಲಂ ಮುಡು
ವೆಲ್ಲಂ ಸಿದ್ಧರಸಮೆನಿಕುಮುಂತಾ ನಾಡೊಳ್ ೪೩

(ಗಿರಿಜಾಕಲ್ಯಾಣಂ ೩-೧೦)

ಪುಲ್ಲಿನ ಲಂಬಳಂ ಮರದ ಕೋಲ್ ನರೆಗಂಬಳಿ ಬಾರಟೊಪ್ಪಿ ಜಿಂ
ಗಲ್ಲಿಯ ಬುತ್ತಿಯುಂ ಬಿದಿರ ಕೋನಿ ಕಳಾವದ ತೋಳಬಂದಿ ಪೆ
ರ್ಬಿಲ್ಲುಶರಂಗಳುಂ ಪಿಕಿಲಿದುಪ್ಪುಳಮಾಲಿಕೆ ಕಾಲಕೆರ್ಪು ನಿಂ
ದಲ್ಲಿಯದಲ್ಲಿ ಗೊಲ್ಲನಡೆಗಳ್ ತುಱುಗಾಯ್ವರರಣ್ಯಮಧ್ಯದೊಳ್ ೪೪

ಕೇತಕಿಪತ್ರದೋಲೆ ಗುಱುಗುಂಜಿಯ ದಂಡೆ ಕಳಾಪಗುಂಕಣಂ
ಪಯ್ಮೆಳವಲ್ಲಿ ಬಂದಿ ಪುಳುವಜ್ಜೆಯ ಬೊಟ್ಟು ವನಾಂತಪುಷ್ಪದಿಂ
ಜೋತ ತುಱುಂಬು ಗಾಜುಮಣಿಮಾಲಿಕೆಯಾ ಘೃತಗಂಧದಿಂದೆ ಕಂ
ದಾತಗಳಾಣ್ಮನಂ ಬಿಡದೆ ಸೋಲಿಪ ಗೊಲ್ಲತಿಯರ್ಕಳೊಪ್ಪುಗುಂ ೪೫

ಎಡಪಿ ಪರಲ್ಗಳಂ ಪೆಸೆಗೆ ಬೆರ್ಚುತೆ ಗೋವನಗಾಳಿಗೆಯ್ದೆ ಪಿಂ
ಡಡಸುತೆ ಕಂಠಮಂ ನೆಗಪಿ ನೋಡುತೆ ಪಕ್ಕಮನಗ್ರವಾಲದಿಂ
ತೊಡೆವುತೆ ಕರ್ಣಮಂ ತೆಱೆತು ತಿತ್ತಿರಿ[1]ಗಾಳಿಯು[1]ನಾಲಿಸುತ್ತೆ ಪಿಂ
ಡೊಡೆಯದೆ ಕೂಡಿ ಬರ್ಪ ಪಲವಾಕಳಿನೊಪ್ಪುವುವಲ್ಲಿ ಪಳ್ಳಿಗಳ್ ೪೬

(ಲೀಲಾವತಿ ೫-೧೦೩, ಸೂಕ್ತಿಸುಧಾರ್ಣವಂ ೪-೫೯)

ಕಿಱುಕಿಱಿದೆ ಮೆಟ್ಟಿ ಕೆಚ್ಚಲ
ನಿಱುಕುತೆ ಕುಡಿವಾಲನುತ್ತಿ ಕೊಣಕಿಟ್ಟೆಡೆಯೊಳ್
ಕಱುಗಳನೆ ನೆನೆದು ಮನೆಗಳೆ
ಗುಱುಯಾಗಿರೆ ಬರ್ಪ ಪಲವು ಧೇನುಗಳೆಸೆಗುಂ ೪೭

(ಸೂಕ್ತಿಸುಧಾರ್ಣವಂ ೪-೬೩)

ತ್ವರಿತಂ ಗೋಪಂ ಸಕೋಪಂ ಪೆಱಗೆ ಪರಿಯೆ ಹೂಂಕಾರದಿಂದಳ್ಕೆ ಬೀಗು
ತ್ತಿರೆ ಬಾಯಿಂ ಬೀಱಿಯೊಳ್ ಸಾಲಿಡೆ ನೊರೆ ಮಿಗೆ ತಾಂ ನಾಂದ ಪುಲ್ ಮಿಳ್ಳೆಗೊಂಡು
ಬ್ಬರಿಸುತ್ತಂ [2]ತನ್ನ ವತ್ಸಂ ಕರೆಯೆ[2] ನಿಕಟದೊಳ್ ಕೇಳ್ದು ಘೊಳ್ಘೊಳ್ಳೆನುತ್ತಂ
ಪರಿತಂದ[3]ತ್ರೂಘ್ನ[3]ದಿಂದಂ ಬಿರಿವಿಡೆ ಪೊಲೆವಾಲುಂಡು ಧೇನುಪ್ರಕಾಶಂ ೪೮

(ಲೀಲಾವತಿ ೫-೧೦೧)

ಬರಲಾಱದೆ ಪೆರ್ಗೆಚ್ಚಲ
ಭರದಿಂದಂ ಪೆಱಗು ಕುಸಿಯೆ ಪೊಱೆತಯುಂ ಕಳೆವಂ
ತಿರೆ ತೊಱೆತದ ತೋರಮೊಲೆಯುಂ
ಬಿರಿವಿಡುತಂ ಬಂದವಲ್ಲಿ ಕೆಲವು ಪಯಂಗಳ್ ೪೯

(ಲೀಲಾವತಿ ೫-೧೦೪; ಸೂಕ್ತಿಸುಧಾರ್ಣವಂ ೪-೬೦)

ತಡೆಯುಂ ಕೋಪೆತ್ತುತುಂ ಮಾರ್ದನಿಗೆ[4]ಮುಸಗು[4]ತುಂ ದರ್ಪದಿಂ [5]ಛಾಯೆ[5]ಯೊಳ್ ಕೋ
ಡಿಡುತುಂ ಮುಂ ಕಾದಿ ಪುಣ್ಣೆತ್ತಿಣಲ್ಗೆಱಗೆ ಸೋಣಂ ಶೀರ್ಣಶೃಂಗಾಗ್ರದಿಂ ಮಾ
ರ್ಪೊಡೆಯುತ್ತುಂ ಪೊಕ್ಕು ಪಿಂಡಂ ಕಲಕಿ ಕೆಲೆಯುತುಂ ಬೆರ್ಚಿ ಬಲ್ಗೂಳಿಗಳ್ ಬೆಂ
ಗೊಡೆ ಗಂ[6]ಡಂ[6] ಸೂಸುತಂ ಬಂದುದು ಮದವಿಳಸತ್ಸಿಂಗಳಾಕ್ಷಂ ಮಹೋಕ್ಷಂ ೫೦

(ನೇಮಿನಾಥಪುರಾಣಂ ೮-೧೮, ಲೀಲಾವತಿ ೫-೧೦೨; ಸೂಕ್ತಿಸುಧಾರ್ಣವಂ ೪-೫೬)

---

[1] ಗೋಱಿಯ(ಸ) [2] ತನ್ನ ಕಣ್ಗಳ್ ಕರೆಯೆ(ಅ) [3] ಪು ಬೀಗ(ಸ) [4] ಪಾಲಿವು(ಸ)
[5] ಜಾಡಿ(ಸ) [6] ಧಂ(ಸ)

ಪೊಸವಸೆಯ ಸೊವಡನಾಘ್ರಾ
ಣಿಸಿ ಮಣಿಕದ ಮಿಡುಕುಗಜ್ಜೆಯೊಳ್ ಪೊಗಸೆತ್ತು
ತ್ತೆಸೆದುದು ವೃಷಮಮರರನೇ
ಡಿಸುವಪ್ರೋಲೇನುಂಟೆ ನಿಮುಗಮೀ ಸುಖಮೆನುತಂ ೫೩

(ಲೀಲಾವತಿ ೫-೧೦೮, ಸೂಕ್ತಿಸುಧಾರ್ಣವಂ ೪-೫೮)

ಕಿಱುಗೊಂಬು ನಳಿದಬೆನ್ ತ
ತ್ತಿಱುಕಿದ [2]ತೋರ್ಗೆ[2]ಜ್ಜಲಲಿವ ಬಾಲಂ ತೆಳುವ್ಪು
ನೆಱತಯೆ ಬಿಳಿದಾಗಿ ಮಾಣದೆ
ಕಱತಪೆಮ್ಮೆಯು ಪಿಂಡು ಪಳ್ಳಿಪಳ್ಳಿಯೊಳೆಸೆಗುಂ ೫೨

(ಸೂಕ್ತಿಸುಧಾರ್ಣವಂ ೪-೬೧)

ಇನಿಸಂ ಪೊಕ್ಕೊರು ಮಿಕ್ಕೋಸರಿಸಿದ ಚರಣಂ ಶೋಭೆಯಂ ಬೀಱತ ಕುಂಭ
ಕ್ಕೆ ನಿತಂಬಂ[3]ಸುತ್ತಿ[3] ಸೇಣಂ ಪುಗುವ ತೆಗೆವ ಕೈಗಳ್ ಬೆಡಂಗಾಗೆ ತುಂಗ
ಸ್ತನಯುಗ್ಮಂ ತೂಗೆ [4]ಸೀ[4]ತ್ಕಾರದಿನುಸಿರ್ವಿಡುತುಂ [5]ಲೋಳೆ[5]ವಾಯುರ್ಚಿಯೊರ್ವಳ್
ತೊಸೆಯುತ್ತುಂ ಪಾಡಿ ಪಾಲಂ ಪೊಸೆದಳಸದಳಂ ಪ್ರೋಣ್ಮೆ ಘರ್ಮಾಂಬುಜಾಲಂ ೫೩

(ಲೀಲಾವತಿ ೫-೧೭೮; ಸೂಕ್ತಿಸುಧಾರ್ಣವಂ ೪-೬೬)

ಮಡದಿ ನಿತಂಬಮಂ ಮಡದಿನಾಂತು ಕೆಲಕ್ಕೊಱಗಿರ್ದ ಕೆಂದಲಂ
ತೊಡೆಯೊಳಿಱುಂಕಿ ಬಳ್ಳಿನಡು ಬೆನ್ನೊಳಪೊಕ್ಕಿರೆ ದುಗ್ಧಧಾರೆಯೊ
ಳ್ಗಡಣದಿನಾಡೆ ಕಣ್ಗೆಳಗು ಬಳ್ಕೆಡಗಂ ಬಿಗಿದೊತ್ತೆ ಕೈಗಳಿಂ
ಪಿಡಿದು ಕುಚಾಗ್ರದೋಳ್ ತುಱುಗೆ ಪಾಲ್ವನಿಗಳ್ ಕಱೆ[6]ದಳ್ ಘಟೋಧ್ನಿಯಂ[6] ೫೪

(ಲೀಲಾವತಿ ೫-೬೫; ಸೂಕ್ತಿಸುಧಾರ್ಣವಂ ೪-೬೫)

ಅಲಘುಕುಚದ್ವಯಂ ಕಚಭರಂ ತೊಲೆಯುತ್ತಿರೆ ಹಸ್ತಕಂಕಣಂ
ಘಲಕೆನೆ ಮುತ್ತಿನೋಲೆ ಕದಪಂ ಪೊಡೆಯುತ್ತಿರೆ ಸುತ್ತಿನೇಣು ಕೋ
ಮಲಕರಪಲ್ಲವಂಗಳೊಳ್ ಸಿಡುನಡಂಗಿರೆ ಬಟ್ಟನೋಟದಿಂ
ಮಲಹರಿ ದೇಸಿ ತೋಡಿಯನೆ ಪಾಡಿ ಮೊಸರ್ ಕಡೆದರ್ ಲತಾಂಗಿಯರ್ ೫೫

---

[1] ನ್ಸ್ಸಂ ಕಿ(ಸೂ) [2] ತೊಡೆಗೆ(ಸೂ) [3] ಮಾಂಕೂ(ಸ) ಸುತ್ತು(ಸೂ) [4] ಪ್ರೂ(ಸೂ)
[5] ತೊಂಡೆ(ಸ) [6] ದರ್ ಪುರಂಧ್ರಿಯರ್(ಸ)

ಕಡೆವಾಕೆಯ ಮುತ್ತಿನ ಕ
ನ್ನಡಿಯಂತಿರೆ ತೊಳಿಪ ಘರ್ಮಜಳಬಿಂದುಗಳಿಂ
ಬಿಡುವೊಗವೆಸೆದಿರ್ದುದು ಪಾ
ಲ್ಗಡಲೊಳ್ ತಾಂ ಪುಟ್ಟಿದಮೃತಕರಬಿಂಬದವೋಲ್ ೫೬
(ಲೀಲಾವತಿ ೫-೧೩೦)

ಇರಿದೊಂದೆರಡಿರಿಯಂ ತೀ
ವಿರೆ ಕಂದಲ್ ತನ್ನ ಬಿಳಿಯ ಕಣ್ಗಳ ಬೆಳಗಿಂ
ನೊರೆವಾಲಿಂ ತೀವಿತೆಗೆ
ತ್ತಿರಪೆಟ್ಟಿವಳಾತ್ಮಪತಿಯನೇಂ ನಗಿಸಿದಳೋ ೫೭
(ಲೀಲಾವತಿ ೫-೧೨೪)

ಒಲೆದು ತಳಂಗಳಿಂ ಘಳಿಲೆನಲ್ ಮುಡುಪಿಂ ಪೊಡೆದೆತ್ತಿ ಮೇಲುದಂ
ನೊಲೆಮುಗುಳ್ಗಳ್ ತೆಱಂಬೊಳೆಯೆ ಬಾಯ್ದೆಱೆಯೊಳ್ ರಸನಾಗ್ರಪಲ್ಲವಂ
ಮಲೆದು ಮರಲ್ದು ಸುತ್ತಿ ಸುಱಿಕಲ್ದನಿ ಪೆರ್ಚಿರೆ ಬೆಚ್ಚದಾಗಿ ಸೂ
ೞುಲಿಗೆಲೆಯುತ್ತಮಿರ್ಪ ತರುಣೀಜನಮಂ ನೃಪನೊಲ್ದು ನೋಡಿದಂ ೫೮
(ಲೀಲಾವತಿ ೫-೧೧೭)

ಅತಿಘನತಕ್ರಾಟಪರಾ
ಹತಿಗಂ ಮೊಸರೊಡೆಯದೆಂದು ಜೀಪತ್ರಪ್ರೋಲು
ನ್ನತಕುಚೆ ಬಟಿಲ್ದು ಸುಯ್ಯು
ತ್ರ್ತತಿರಭಸದಿನೊರ್ಮೆಳೊಲೆದು ಮೊಸರಂ ಪೊಸೆದಳ್ ೫೯
(ಲೀಲಾವತಿ ೫-೧೩೧)

ಕಱುವಂ ಬಿಡು ಮೊಲೆದೊಳೆ ನೀ
ರೆಱೆ ಕಂದಲನೊಱಸಿತೊಳೆ ತಗುಳ್ದೊಡೆವಾನಂ
[1]ತುಱುಸು ತಳೆಯಿಕ್ಕು[1]ತಡೆಯದೆ
ಮುಱುವಂ ಸುರಿಯೆಂಬರಲ್ಲಿ ಗೋಪಿಜನಂಗಳ್ ೬೦
(ಲೀಲಾವತಿ ೫-೧೨೧; ಸೂಕ್ತಿಸುಧಾರ್ಣವಂ ೪-೬೪)

---

[1] ಸುರಿಸಳ್ಳಿಗಿಕ್ಕು(ಸ)

ವನಲಕ್ಷ್ಮೀಸ್ಪರ್ಶಿತಂಬೊಲಾಡುವೆಲರಿಂದಂ ಕಂಪಿಸುತ್ತಿರ್ಪ ಕ
ರ್ಬಿನ ಕೋಲ್ಗಳ್ ಬಿಡಮೊಂದನೊಂದೊರಸೆ[೧]ಪರ್ವಾಘಾತದಿಂ[೧]ದುರ್ಬಿ ಭೋ
ರೆನೆ ಪಾಯ್ತಿರ್ಪ ರಸಪ್ರವಾಹಚಯಮನಾನಾಳಂಗಳಿಂ ತೀವ್ರತಿ
ರ್ಪಿನಮಿರ್ದತ್ತಮೃತಾಕರಾವನಿಯವೋಲ್ ಪುಂಡ್ರೇಕ್ಷುವಾಟೀಕುಲಂ ೬೧
(ಜಗನ್ನಾಥವಿಜಯಂ ೨-೯)

ಕೂರಿತುವೆನಿಪೆಲೆಗಳಬಾ
ಯ್ಧಾರೆಗಳಿಲಱಲೆಯೆ ತಾಗಿ ಪಱಿದುಗುವ [೨]ಫಲಾ
ಸಾರವನೆ ಕೊಂಡು ಬೆಳೆದುಂ[೨]
ನೀರೂಟಕ್ಕೆಳಸವಲ್ಲಿ ಕರ್ವಿನ ತೋಂಟಂ ೬೨
(ಚಂದ್ರಪ್ರಭಪುರಾಣಂ ೧-೯೬, ಸೂಕ್ತಿಸುಧಾರ್ಣವಂ ೪-೪೯)

ಮಿಡಿಯಲೊಡನೊಸರ್ವುವೆಂಬೀ
ನುಡಿಗಳನಂತಿರ್ಕೆ ಬೆರಲೆರಲ್ ತಾಗಿದೊಡಿಂ
ಗಡಲ ಮಡುವೆನಿಸಿ ರಸಮಂ
ಬಿಡುವುವು ಪುಂಡ್ರೇಕ್ಷು[೩]ದಂಡ[೩]ವಿತತಿಗಳೆತ್ತಂ ೬೩
(ಸೂಕ್ತಿಸುಧಾರ್ಣವಂ ೪-೫೦)

ಪಲ್ಲವಿಸಿ ಪರ್ವಪರ್ವದೊ
ಳೆಲ್ಲೊದವಿಸಿದಮೃತರಸಮನೆಱೆದಿಂದುಮೆ ಪ್ರಾ
ಣ್ದಲ್ಲಿಯೆ ಮದನಗೆ ಪೊಸಪದ
ವಿಲ್ಲೆನೆ ಬೆಳೆದಂತೆ ಕರ್ವುದೋಂಟಗಳೆಸಗುಂ ೬೪

ಉತ್ತಮ ಮಧ್ಯ ಕನಿಷ್ಠಮ
ವೆತ್ತಿದ ಗುಣಗಳನೆ ತಾಳ್ದು ರಸದಿಂದಡಿನಡು
ವೆತ್ತು ತುದಿಯುಳ್ಳ ಕೋಲ್ಗಳ
ಮೊತ್ತಗಳಿಂ ಕರ್ವುದೋಂಟಗಳ್ ನೆಱೆವಿರ್ಕುಂ ೬೫

ಸ್ಫುರಿಯಿಸುವೆಮ್ಮಪುರ್ವೆ ನೆಱೆಗುಂ ಜನಮುಂ ಗೆಲಲಿನ್ನದೇಕೆ ನೀನ್
ಪರಿವೆಯಮೆಂದು ಮತ್ಕುಲದ ಕರ್ವಿನಬಿಲ್ಲನನಂಗನಿಂ ಗೆಲಲ್
ಬರಿಸಿದರೀ ಪುರಾಂಗನೆಯರೆಂಬ ಕನಲ್ಕೆಯಿನಿಕ್ಷುಕೋಟಿ ಪ
ಲ್ಮೊರೆವಪೊಲಿಕ್ಷುಯಂತ್ರನಿನದಂ ಮೊಱೆವಬ್ಬರವಾದುದೆತ್ತಲುಂ ೬೬

---

[೧]ಪೂರ್ವಾಪೂರ್ವದಿಂ(ಸ) [೨]ರಸಾಸಾರಮಂ ಕೊಳಗೊಂಡೆಂದುಂ(ಅ) [೩]ವಾಟ(ಸ)

ಭೂತಳನರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀ
ಮಾತೃಕ ದೇವಮಾತೃಕಮೆ ತದ್ವಿಷಯಂ ನವನಾಳಿಕೇರನಾ
ನಾರ್ತೃಕಮಿಂದುಕಾಂತಜಳಮಾತೃಕಮಿಕ್ಷುರಸಾರ್ದ್ರನಾಳಿಕಾ
ಮಾತೃಕಮಾಮ್ರಕಮ್ರಪರಿಪಕ್ವಫಲೋತ್ಕರಸಾರಮಾತೃಕಂ ೬೭

(ಚಂದ್ರಪ್ರಭಪುರಾಣಂ ೧-೯೦, ಸೂಕ್ತಿಸುಧಾರ್ಣವಂ ೪-೪೮)

ಎಳನೀರ ಚಂದ್ರಕಾಂತೋ
ಪಳದ ಪೊನಲ್ ಪೊರೆಯೆ ಸಂತತಂ ಪೆರ್ಚೆಳಸುಂ
ಮುಱಿಯಂ ಪೊಳೆಯಂ ಪಾರದೆ
ಬೆಳೆವುವು ಪೊಲನಾವಮಾತೃಕಮುಮೆಂಬಱಿಯಿಂ ೬೮

ಘನರಸ ಜೀವನಾಮೃತಮನೆನಿಸಿರ್ದ ಪೆಸರ್ ಮಿಗಿಲೆನ್ನ ನೀರ್ಗೆ ಮಿ
ಕ್ಕಿನಜಲಕಂ ವಿಷಾಹ್ವಯಮೆನುತ್ತೆ ತರಂಗಕರಂಗಳಿಂದಲಂ
ತ್ರಸುನಯಕೂಲ ಡಂಗುರಮ ಪ್ರೊಯ್ಯುತ ಬಲ್ಸುಱಿ ಬಾಯೊಳಾಗ ಘೋ
ರೆಸುತಿಹ ಫೇನಹಾಸಮೊರೆಸೂಸುತಲೊಪ್ಪುವುವಾ ತಟಾಕಗಳ್ ೬೯

ಪರಿಣಯಮಾಸಮಂತೆ ತೆರೆಯಿಂ ದ್ವಿಜಮಂತಣದಂತೆ ಘೋಷದಿಂ
ಸುರನದಿಯಂತೆ ಮುಕ್ಕುಳಿಕೆಯಿಂ ಗಗನಾಂಗಣದಂತೆ ಮೀನ್ಗಳಿಂ
ನರಕದಳಾಗ್ರದಂತೆ ಸುಱಿಯಿಂ ಬಿಲುಬತ್ತಳಿಯಂತೆಯಂಬುವಿಂ
ಹರಿಸಖನಂತೆ ಶೀಘ್ರಗತಿಯಿಂದಲಿ ನಿರ್ದೋಱಿಗಳ್ ವಿರಾಜಿಕುಂ ೭೦

ನೀರವು ತೆಂಗಿನಾಗರದ ನೀರ್ ಕುಮುದಂಗಳನಂಗನೆಚ್ಚೊಡಾ
ಸ್ಫೈರಿಯ ತಾಗಿ ಬಂದ ಕುಸುಮಂ ಸಲೆ ಪಾಮರಿ ದೇವಪಾಮರೀ
ನಾರವಿನರ್ಮಕೀರನೀರದಾ ರತಿಪಂಜರಕಿಕ್ಕಿದೋವುವಾ (?)
ಕೀರನೆನಲ್ಕೆ ಶಾಳಿವನಮೆಲ್ಲಡೆ ಸೋಹಿಪುದೊಂದು ಚೋದ್ಯಮೋ ೭೧

ತಿಳಿನೀರಂ ತೆಂಗು ರಂಭಾಪ್ರತತಿಗೆಱೆಯೆ ರಂಭಾಳಿಗಳ್ ತಮ್ಮ ಸಾರಾ
ವಳಿಯಂ ಪುಂಡ್ರೇಕ್ಷುವಾಟಾಳಿಗೆ ಸುರಿಯೆ ಪುಂಡ್ರೇಕ್ಷುಗಳ್ ತಮ್ಮ ತೋಯಾ
ವಳಿಯಂ ಕಳ್ಮಕ್ಕೆ ಪೂರಂ ಬಿರಿಯಿಸೆ ಕಳಮ ಶ್ರೇಣಿಗಳ್ ತಮ್ಮ ಪಾಲಂ
ಗಿಳಿವಿಂಡಿಂಗೀಯೆ ಚೆಲ್ವಾದುದು ಪುರಬಹಿರುದ್ಯಾನಕೇದಾರಜಾಲಂ ೭೨

ಒದವಿದ ಶಾಳಿಗರ್ಭಗಳ ಪಾಳಿ ಕುಕಿಲ್ವ ಪಿಕಾಳಿ ತಂಪ್ರವೀ
ಣದ ಸುಱಿಗಾಳಿ ಪಾಮರಿಯರೋಳಿ ವಿಟೀವಿಟಕೇಳಿ ಪ್ರೂಗಳಿಂ
ಕೆದಱಿದ ಧೂಳಿ ಪಾಡುವ ಮದಾಳಿ ಶುಕಂಗಳ ಜಾಳಿಯೆಂಬಿನಂ
ಮದನನ ಧಾಳಿಯಂತೆಸೆಯುತಿರ್ಪುದು ಶಾಂಭಜನಂ ನಿರಂತರಂ ೭೩

ಆ ವಿಷಯದೊಳೊಪ್ಪುವ ಕಳ
ಮಾಪಳಿ ನಳನಳಿಸಿ ಬೆಳೆದು ಪಸುರೇಱಿ ಲಸತ್
ಭೂವನಿತೆಗೆ ಧಾತ್ರಂ ಪರಿ
ಭಾವಿಸಿ ಪೊದಿಯಿಸಿದ ಹರಿತಪಟದಂತಿರ್ಕುಂ ೭೪

(ಗಿರಿಜಾಕಲ್ಯಾಣಂ ೨-೧೨)

ಒಂದಂ ಕಾಲಿಂದೊದೆದೊಡ
ನೊಂದಂ ಕಾಲ್ವಿಡಿದು ಬರ್ದುಕುಗೆಂಬರನಿೞಿಸುತೆ
ಸಿಂಧುವಿನ ಕಾಲ್ಗಳೆರಡಂ
ಬಂದಂದಿಂ ಪಿಡಿದು ಬರ್ದುಕುವುವು ಶಾಲಿವನಂ ೭೫

ಕಾಮಂ ಕಬ್ಬಿನ ಬಿಲ್ಲಂ
ಜೇವೊಡೆದುರುಲೀಲೆಯಿಂದೆ ಸೆಳೆಯಲ್ ಜುಮ್ಮೆನು
ತವೊಸರ್ದ ರಸದೆ ಕಳಮೆಗ
ಳಾವಗಮುರೆ ಬೆಳೆವುವಲ್ಲಿ ನಳನಳಿಸುತ್ತಂ ೭೬

ಕುಂದಣಮುಂ ಕುಂಕುಮದೊಳ
ಗೊಂದಿಸಿ ಪನಿನೀರ್ಗಳೊಳಗೆ ಮೊಳೆಯಾಗಿಸುತಂ
ತಂದು ವಸಂತಂ ಬಿತ್ತಿಸ
ಲಂದಿಂ ಕೆಂಪಾಗಿ ಗಂಧಶಾಲಿಗಳೆಸೆಗುಂ ೭೭

ಕುಂದದ ಚಂದ್ರಲೇಖೆ ನಸುಗುಂದದೆ ರಂಜಿಪ ಪುಷ್ಪಮಾಲೆ
ಕಂಡೊಂದವ ಸೋಮಶಾಲೆ ತವಿಲಾಗದ ಕೆಂಗೊನೆವಾಟಿಕ ಸರ್ವನಾಂ
ದ್ಯಂದವೆನಿಪ್ಪ ಕೇಸರಿ ನಿರಂತರಮೊಪ್ಪುವ ಧರ್ಮಗುತ್ತಿಯೆಂ
ಬಂದದನೇಕ ನಾಮುವೆಸೆಗುಂ ಮೃದುಬಂಧುರ ಗಂಧಶಾಲಿಗಳ್ ೭೮

ದೆಸೆಗೆ ಕವಲ್ತು ದಂಟೊಡೆದು ನುಣ್ಬಸುರಿಂ ಪೊರೆಯೇಱಿ ಕೊರ್ಬಗು
ರ್ವಿಸೆ ಪೊಡೆದುಂಬಿ ಪಾಲ್ದೆನೆಗಳುರ್ಚೆ ಕರಂ ತಲೆವಾಗಿ ಬಿಣ್ಪಿನಿಂ
ದೆಸೆವುವು ನೀಳ್ದ ತಮ್ಮ ಮೊಗದೊಪ್ಪಮನೊಪ್ಪಿರೆ ನೀರ್ಗಳೊಳ್ ನಿರೀ
ಕ್ಷಿಸುವವೊಲಾವಗಂ ಕಳಿಶಸಂತತಿಗಳ್ ಕಳಮಪ್ರದೇಶದೊಳ್ ೭೯

(ಅಭಿನವದಶಕುಮಾರಚರಿತ್ರೆ ೧೨-೩)

ಕುಡಿಯಂ ಪೊನ್ನನೆ ಬಿತ್ತಿ ಪೊನ್ ಬೆಳೆದೊಡಾ ಪೊಂಗಾಯ್ತು ಕಂಪೆಂಬವೋಲ್
ಕಡುಗೆಂಪುಂ ಕಡುಗಂಪುಮುಗ್ಗಲಿಸೆ ನಾಡೂರೂರ ಸುತ್ತಲ್ ಬೆಡಂ
ಗಿಡಿದಿರ್ಕುಂ ಕೆಱೆಯೇರಿಯುದ್ದದೊಳೊಡಂಬಟ್ಟುದ್ದದಿಂದೆತ್ತಲುಂ
ಕುಡುಗೋಲುರ್ಚದ ಗಂಧಶಾಳಿವನಮುತ್ಕೀರಾಳಿ ಲೀಲಾಸ್ಪದಂ ೮೦

(ಸೂಕ್ತಿಸುಧಾರ್ಣವಂ ೪-೫೨)

ಅರಗಿಳಿವಿಂಡು ಪಚ್ಚಿಲೆಯ ಪಂದರದವೋಲೊಗೆದೊಪ್ಪೆ ತಟ್ಟೆಯಂ
ತಿರೆ ತನಿಗರ್ಭಗಳ್ ರತಿಯ ಕಾಮನ ರಮ್ಯವಿವಾಹಗೇಹದೊಳ್
ವಿರಚಿಸಿ ಪಚ್ಚೆಯೊಳ್ ಜಗಲಿಯಂ ಮಧುಶೋಭೆಗೆ ಪೊನ್ನನೀರ್ಗಳಂ
ಪರಿಯಿಸಿದಂತೆ ಕೆಂಪುವಡೆದೇಂ ಪಸುರೋದವೊ ಗಂಧಶಾಲಿಗಳ್ ೮೧

(ಲೀಲಾವತಿ ೬-೧೫೫)

ಸಲೆ ಕಾಲಂ ಪಿಡಿದೆತ್ತಿರಲ್ ಭುವನಮೆನ್ನಿರ್ದಲ್ಲಿಗಾಂ ಮುನ್ನವಾ
ಮೊಲವಿಂದಂ ತಲೆಕೊಯ್ಸಿಕೊಂಡೆನೆನುತುಂ ಲಜ್ಜಾಮಹಾಭಾರದಿಂ
ತಲೆವಾಗಿತ್ತೆನೆ ಪಕ್ವಶಾಳಿಕಣಿಶಾಳೀನಮ್ರಮೊಪ್ಪಿರ್ದುದೇಂ
ಗೆಲೆವಂಪತ್ತೊ ಸುವರ್ಣವರ್ಣದಿನಿಳಾಶ್ರೀಯುಟ್ಟ ಪೊಂಬಟ್ಟೆಯೋಲ್ ೮೨

(ಜಗನ್ನಾಥವಿಜಯಂ ೨-೫)

ಸೊಂಪಾಗುತ್ತಂಕುರಿಸು
ತ್ತುಂ ಪಸುರೇಱುತ್ತೆ ಕವಲಿಱಿದು ಪೊಡೆಯೊತ್ತು
ತ್ತುಂ ಪಾಲೇಱುತ್ತುಂ ನೆಱೆ
ಪೆಂಪಿಂ ನಳನಳಿಸಿ ಶಾಳಿವನಮೆಸೆದಿರ್ಕುಂ ೮೩

(ಗಿರಿಜಾಕಲ್ಯಾಣಂ ೨-೧೩)

ಉಗುವೆಳನೀರಿಂದಂ ಕದ
ಳಿಗಳಾ ಕದಳಿಗಳ ಪಣ್ಣರಸದಿಂ ಪುಂಡ್ರೇ
ಕ್ಷುಗಳಿಕ್ಷುರಸದಿನಾ ಕೞ
ವೆಗಳಾ ಕೞವೆಗಳ ಕಣಿಶದಿಂ ಗಿಳಿ ಬಳೆಗುಂ ೮೪

(ಗಿರಿಜಾಕಲ್ಯಾಣಂ ೨-೧೪)

ಕಳಮಕ್ಷೇತ್ರ ಸಮಗ್ರದ
ಬೆಳೆ ಕಾಲವಕಾಲವೆನ್ನದೆಲ್ಲಾ ದಿನದೊಳ್
ಬೆಳೆದು ಫಲಮೀವ ಸುಲಭತೆ
ಗಳಿಂತೊಳ್ ಪ್ರತಿಯಿಲ್ಲೆನಸಭಿವರ್ಣಿಸುವೆಂ ೮೫

ಮಡುಗಳೊಳೆ ನೀಳ್ದ ನೀರ್ಗ
ನ್ನಡಿಂಪೊಳ್ ನಗೆಪೊಗದ ಜೆಲ್ಪನವಲೋಕಿಪವೋ
ಲಿಡಿದಡರಿಗೊಂಡ ಫಲದಿಂ
ಕಡುವಾಗಿರುತಿರ್ದುವಲ್ಲಿ ಶಾಲಿವನಂಗಳ್ ೮೬

(ಲೀಲಾವತಿ ೫-೫೧)

ಸಂಪಗೆವಣ್ಣಮುಗುೞ್ದಳೆ
ಗೆಂಪೊಂದಿದ ಪಸುರನಾಳ್ದ ತುದಿನಡುವೊದಲೆಂ
ಬಿಂಪುಳ್ಳೆಸಟ್ಗಿಳ ಮೆಯ್ಯಿಂ
ಕಂಪಂ ಕೆದಱಿರ್ದುವಲ್ಲಿ ಕಳಮೆಯ ತೆನೆಗಳ್ ೮೭

ತೆನೆಯನೆಱಂಕೆಯಿಂದೆ ಮಿಗೆ ಬಂಧಕೆ ತೆಕ್ಕಿಸಿ ಜೋಲ್ದು ನೋಡಿ ಭೋ
ರೆನಲೊಲೆದಾಡುವಾ ಧ್ವನಿಗೆ ಪೊಂಪುೞಿಯೋಗಿ ಸುಗಂಧಸೌಖ್ಯದಿಂ
ತ್ರನಿಸೊಗಸುರ್ಕೆ ಪಾಲಸವಿಯಾಸುಖವಂ ಮಱಸಲ್ಕೆ ಭಾಪುರೆ
ಘನಶುಕಮೊಂದು ನೆಲ್ದಿನೆಯನಾಹನೆ ಮೆಲ್ಲುದು ಮುದ್ದುಮುಟ್ಟಿರಲ್ ೮೮

ವಿಕಸಿತಮಾದ ಕಾಂಚನ ಸರೋರುಹಪಂಡದ ಪರ್ವಮಂ ತದಂ
ತಿಕದ ಸುವರ್ಣವರ್ಣಕಳಿಶಾಳಿಯಶಾಳಿಯದೊಂದು ಪರ್ವಮಂ
ಶುಕತತಿ ನೋಡಿ ನೋಡಿ ನೆಱೆ ನಿಟ್ಟಿಸಲಾಱದೆ ಮಂಜುಳಾರವಂ
ಪ್ರಕಟಿಸೆ ಪರ್ಬುಗೊಂಡು ಸುೞಿದಾಡುವುವಲ್ಲಿಯ ಕೆಯ್ವೊಲಂಗಳೊಳ್ ೮೯

(ಜಗನ್ನಾಥವಿಜಯಂ ೨-೮)

ಅರಗಿಳಿವಿಂಡು ಪಾಯೆ ನಸುಸೋಂಕಿದೆಱಂಕೆಯ ಗಾಳಿಗೊಂದನೊಂ
ದೊರಸಿ ನಿರಂತರಂ ಸುರಿವ ನೆಲ್ದಿನೆ ಪಾಲ್ಗಳ ಧಾರೆಗೊಡ್ಡಿ ಚಂ
ಚುರ ನಿಜಚಂಚುವಿಂ ಸವಿದು ಸಂತಸದಿಂದೆರಡಳ್ಕೆ ಹಿಗ್ಗಿ ಮಂ
ದರಗತಿಯಿಂ ಮರಲ್ದು ಸುೞಿದಾಡುಗುಮಲ್ಲಿ ಮರಾಳಮಂಡಲಂ ೯೦

(ಧರ್ಮನಾಥಪುರಾಣಂ ೨-೩೧)

ಗಿಳಿ ತರುವಿನ ಶಾಖೆಯೊಳಂ
ಕುಳಿತಿರ್ದುಂ ಮಱಿಯನಟ್ಟಿ ನೆಲ್ದಿನೆ ತರಲದು
ಘಳಿಲನೆಱಗಲ್ಕೆ ನೆಲ್ಲುದಿ
ರೆಕೆಯೊಳ್ ಕ್ಕೈಗೆಲಸವೆಂದು ನೆರೆವವೆ ಧರೆಯೊಳ್ ೯೧

ಇಂಗದಿರನನಾ ಪಗಲೊಳ್
ಕಂಗಳ ನೆಱೆಮುಚ್ಚಿ ನೆನೆವನೆಯ್ದಿಲ್ಗೂಟದೆ
ಪೊಂಗಿಯೆ ನೆಲ್ದೊಲನಾಂತುವು
ಸಂಗದೆ ಗುಣದೋಷಮೊಂದದೇ ಧಾರಿಣಿಯೊಳ್ ೯೨

ಸಸಿಯೊಡಗೂಟದಲ್ಲುದಯಮಪ್ಪಿನಮುತ್ಪಲಬಾಲೆಯೆದ್ದು ಮೇಣ್
ಪಸಿದೆಲೆಪಟ್ಟಲಿಟ್ಟುಕೊಳುತಂ ಘನಗರ್ವೆಯೆನಿಪ್ಪ ತಾಯುನಿ
ಕ್ಕ್ವಿ ಸುಕೆಳಮಾನ್ನಮೆಂದಱೆವಪ್ರೋಲ್ ನಿಜಗರ್ಭಮಧುಪ್ರತಾನಮಂ
ಮಿಸುಗತಲಿರ್ದಪಾ ಮಡುಗಳೊಳ್ ಮಿಗೆ ಸೈದಿಲಹಂತಿ ಸಂತತಂ ೯೩

ತೆನೆಗೊನೆಯೊಪ್ಪೆ ಕಾವು ಕಡುಚಂದಮನೀಯೆ ತೊಡಂಕಿ ನಿಂದೆಸಳ್
ಮಿಸುಗೆ ಬುಡಂ ಬೆಡಂಗುಗುಡೆ ಕೀಲಿಸಿ ಬೇಱೆಡೆ ನೀರ್ಗಳುಂಡ ತ
ಣ್ಣಿನ ಸೊಗಸಾಗಿ ತೋರ್ಪ ಕಳಮಾವಳಿಯುತ್ಪಲದೇಟಿೞ್ಗಯಿಂ
ಗಿಣಿಗಳ ಪಕ್ಕದಿಂ ಹರಿತಮಪ್ಪುವು ನೋಟಿೞ್ವಡೆ ಕಾಯ್ಗೆ ಸಾರ್ದಹೆಂ ೯೪

[೧]ಆವಲೆಲರಾಯ್ವ[೧] ಕಟಿಮೊಯ
ಪೂವೊಡೆಯಂ ಮುಡಿಯೆ ಬಿಗಿದು ಬಿರಿಯಿಸಿ ನೆಯ್ದಿ
ಲ್ಪೂವುಡಿಯನೆತ್ತಿ ಬೈತಲೆ
ದೀವುವ ಪಾಮರಿ[೨]ಯರೆಸೆದರಾ ಗರ್ದೆಯೊಳಂ[೨] ೯೫

(ಲೀಲಾವತಿ ೫-೭೭)

ಸಲವಿಂದಂ ಸೂಡಿ ಪೊಂಜಾದಿಯ ನಿಡುಸನೆಯಂ ವೇಣಿಯೊಳ್ ಸೆಕ್ಕಿ ಕೊಯ್ದಾ
ವಲ ಪೂಪಂ ಗಂಧವಿಟ್ಟುತ್ಪಲದಳದಸಿಯಿಸಳಂ ಕಂಜಕಿಂಜಲ್ಕಮಂ ಬೈ
ತಲೆಯೊಳ್ ಪೊಯ್ದೊಟ್ಟಿ ನಲ್ಬಂದುಗೆಯ ದಳಮುಮಂ ತೊಟ್ಟು ಕೈಗೆಯ್ದು ಕರ್ಣೋ
ತ್ಪಲಮಂ ಕೈಗೆಯ್ಪಿನಂ ಕಣ್ಮಲರ್ಗಳೆಸೆವಿನಂ ಪಾಮರೀನಾರಿಯಿರ್ದಳ್ ೯೬

(ಲೀಲಾವತಿ ೫-೭೯)

ಎಡಗಯ್ಯೊಳೊತ್ತಿ ಮುಡಿಯಂ
ಪಿಡಿ ತೆಕ್ಕನೆ ತೀವಿ ಕೊಯ್ದು ಜಾತಿಯ ನನೆಯಂ
ಮುಡಿಯುತ್ತೆ ನಿರೀಕ್ಷಿಸಿದಳ್
ಕಡೆಗಣ್ಣಿಂ ಕಳಮಗೋಪಿ ಭೂಪಾಲಕನಂ ೯೭

(ಲೀಲಾವತಿ ೫-೮೧)

---

[೧] ಆವಲಲಕಾಳ(ಸ) [೨] ರಿಯರಂ ಮಹೀಪತಿ ಕಂಡಂ(ಅ)

ಬಳೆಗಳ್ ಘಲ್ಕೆನೆ ತೋಳ್ಗಳಂ ನೆಗಪಿ ಕಾಲಂ ಸ್ವಸ್ತಿಕಂಗೊಟ್ಟು ಕೆಂ
ದಳಮಂ ಮೆಲ್ಲನೆ ಪೊಯ್ದು ಪಾಯ್ವ ಗಿಳಿಯಂ ಸೋವಾಕೆ ತುಂಗಸ್ತನಂ
ಗಳುಮಾಲೋಕಿಪಪ್ರೋಲ್ ಮನಲ್ದಿಗೆಯೆ ತಳ್ತೊಂದೊಂದಱೆಳೊಳ್ ಪಾಯ್ದು ಕ
ಣ್ಣೆಳಮಿಂಚಂ ಮುರಿದಂತಿರೊಪ್ಪೆ ಮುರಿದಾ ಭೂಪಾಲನಂ ನೋಡಿದಳ್ ೯೮

(ಲೀಲಾವತಿ ೫-೮೦)

ಎಯ್ದುವೆ ಪಾಸಲುಂ ಪೊಸೆಯೆಲುಂ ನಿಮಗೆಮ್ಮ ಪೊದಟ್ಟಿ ನೀಳ್ದ ಕ
ನ್ನೆಯ್ದಿಲ ಪೂಗಳೇಕೆಲವೊ ಕೊಯ್ದಪೆ ನೆಯ್ದಿಲನೆಂದು ಪೇೞ್ವವೋಲ್
ನೆಯ್ದಿಲಮಾಲೆಯಿಂ ಕಳಮಗೋಪಿಯರೀಕ್ಷಿಸೆ ನಾಣ್ದನಂತೆ ಚೆ
ನ್ನಿಯ್ದಿಲನಾಯ್ದುವದಂ ಮಱೆದಮಂದಿರನೀಕ್ಷಿಸಿದಂ ಕುಮಾರಕಂ ೯೯

(ಲೀಲಾವತಿ, ೫-೮೩)

ಒಱಗಿದ ಕಟಿಮೆಯ ಕಂಪಿಂ
ಗೆಱಗುವ ಮಱುದುಂಬಿ ಸಮುತ್ತೋತ್ಕಟರಸದಿಂ
ಪೆಱೆನೊಸಲೊಳಲೆವ ಕುರುಳಂ
ಪಱಿವಱಿದೀಡಾಡುವಂದಮಂ ನೀಡುವಿನಂ ೧೦೦

(ಲೀಲಾವತಿ ೫-೮೬)

ಪರತರ ಪಾಮರೀವಧು ತದುತ್ಪಲಮುಂ ನೆಱೆ ಕಿಳ್ತು ಕೀರನಂ
ಬರಲಿಡಲಲ್ಲಿ ತೋರ್ಪ ಮಧುಪಂ ಮಿಗೆ ಝೇಂಕರಿಸಲ್ಕೆ ನೆಯ್ದಿಲಿಂ
ಚರದೊಳೆ ಪಾಡುವಾತನೆನುತಂದವನೊಲ್ದುರೆ ಕರ್ಚೆ ಚೋದ್ಯದಿಂ
ಸ್ಮರನೆಡೆಗೆಯ್ದು....ತದನೀಕ್ಷಿಸು ನೀನಿದ ಮುಗ್ಧಮೋಹನಾ(?) ೧೦೧

ತೆನೆಗೊಂಡೆಯ್ದುವ ರಾಜಕೀರನನಹೋ ನೀಲೋತ್ಪಲಂಗೆತ್ತು ಘೋಂ
ಕೆನಲಿಟ್ಟೆಬ್ಬಿಪ ಪಾಮರೀಕುಚಯುಗಂ ತಾಂ ಮೇಲುದಂ ನೂಂಕಲಾ
ಸ್ತನಯುಗ್ಮಕ್ಕೆ ಜಗತ್ತ್ರಗಳ್ ಬೆಲೆಯೆಂಬಂತೊಪ್ಪಲಾ ಪಾಂಥಲೋ
ಚನಮೇಂ ಪುಣ್ಯಮನಾಂತುದೋ ಸ್ಪರುಶನಸ್ತ್ರೀಸೌಖ್ಯಮೆಂತಿರ್ಪುದೋ ೧೦೨

ಪವನಸುಗಂಧಮುಂ ಬಯಸಿ ಪಾಯ್ವಳಿಮಾಲೆಯು ಮೇಳನಾದತಾ
ಳದೊಳನುರಾಗಮುಂ ಪಡೆದು ಪಾಮರಿ ಪಾಡುವ ಪದ್ಮನಪ್ಪ ಗೇ
ಯದ ಬಳೆಯೊಳ್ ತೊಡಂಕಿ ಬಿಡಮಾಲಿಪ ಪುಲ್ಲೆಯನಲ್ಲಿ ಕಂಡು ಲೆ
ಪ್ಪದ ಮಿಗಮೆಂದು ಬಂದೆಳಪಿ ನೋಡುಗುಮಧ್ವಗಕಾಮಿನೀಜನಂ ೧೦೩

(ಧರ್ಮನಾಥಪುರಾಣಂ ೨-೨೮)

ಪಾಱಿಸಲೆಂದು ಬಂದು ಬಳಿಗಳ್ ಘಳಿಲೆಂಬಿನಮಿಂಪುವೀಱಿ ಪ್ಕೈ
ಡೋಱುವ ತಮ್ಮ ಕೈಪಱಿಗೆ ಬೆಚ್ಚಿ ಶುಕಂ ತೆನೆಗರ್ಚಿ ಬೇಗದಿಂ
ಪಾಱಿ ಮಡಲ್ತು ಮಂಡಳಿಸೆ ಗರ್ದೆಗಳಿರ್ದು ನಭಕ್ಕೆ ಮೊಕ್ಕಳಂ
ಪಾಱಿದವೆಂದು ಪಾಮರಿಯರೀಕ್ಷಿಪರಿರ್ದು ನಭೋವಿಭಾಗಮಂ ೧೦೪

(ಧರ್ಮನಾಥಪುರಾಣಂ ೨-೨೮)

ಪವಣಂ ನೋಡದೆ ನಾಡೆಯುಂ ಸೆಣಸಿ ಮುನ್ನೆಕ್ಕೆಕ್ಕೆಯಿಂ ಪಕ್ಕಿಸೋ
ವ ವರಸ್ತ್ರೀಯರ ಸಯ್ಯನಪ್ಪ ನುಡಿಯುಂ ಕೇಳ್ದಾಗಳಂತಾತ್ಮಗ
ರ್ವವನೀಡಾಡಿ ಬಿಗುರ್ತು ತಂಬುಲಕೆ ಬಾಯಾಂಪಂದದಿಂ ಬಂದು ಪಾ
ಯ್ವುವು ಕೀರಾಳಿಗಳಲ್ಲಿ ಪಾಮರವಧೂಬಿಂಬಾಧರಕ್ಕಾವಗಂ ೧೦೫

(ಧರ್ಮನಾಥಪುರಾಣಂ ೨-೨೯)

ಸಮದಗ್ರಾಟೋಪದಿಂ ಗೋಪಿಯರರೆಗಿಳಿಯುಂ ಬೆಚ್ಚಿಸಲ್ಕೆಂದು ನಿಂದು
ದ್ಗಮಬಾಣಂ ಭಾಪುಭಾಪೆಂದೆನಲಿಡೆ ಮಿಡಿವಿಲ್ಲಿಂ ತಗುಳ್ದೊಡೆಚ್ಚೊಡುಚ್ಚ
ಕ್ರಮದಿಂ ಪಾಯ್ವಿಂದ್ರನೀಲೋಪಮ ಘುಟಿಕೆಗಳೆಂಬಂತಿರಲ್ಕತ್ತಮತ್ತಂ
ಭ್ರಮರಂಗಳ್ ಪಾಱಿ ಕಂಮ್ಮಂಗಳವೆಯ ಮುಡಿಯೊಳ್ ಗಾಡಿವೆತ್ತಾಡುತಿರ್ಕುಂ ೧೦೬

ಪರೆದ ಕುರುಳ್ಗಳಂ ನಿಜ ಕರಾಂಗುಲಿಯಿಂ ತಡವುತ್ತ ಮೇಲುದೋ
ಸರಿಸೆ ಕುಚಂಗಳಂ ಬಿಗಿದು ಬಿಂಬಫಳಾಧರೆಯರ್ಕಳೈದಿ ಬಂ
ದರಗಿಳಿವಿಂಡನೋವದಿಡುತಂ ಪಥದೊಳ್ ಬರುತಿರ್ಪ ಪಾಂ
ಥರಂ ಸ್ಮರಶರಪಂಜರಕ್ಕೊಳಗುಮಾಡುವರಾ ಕಳಮಪ್ರದೇಶದೊಳ್ ೧೦೭

ತ್ವರಿತಗತಿಪ್ರಚಾರತೆ ಮರಾಳಲಸದ್ಗತಿ ಸಾರುತೇಳುತ
ಬ್ಬರಿಸುವ ನಾದವನ್ಯಭೃತನಾದವಮರ್ಚುತಿರಲ್ಕೆ ಮೆಚ್ಚಿ ಮ
ಚ್ಚರಿಸುವ ತೋಳ್ ಮರುದ್ಧತಲತಾಕುಲವೆಂದುರೆ ಪಕ್ಕಿಸೋವ ಪಾ
ಮರಿಯರ ಝುಂಕೆಗಲ್ಲಿ ಗಿಳಿಯಂಜದೆ ಬೆಚ್ಚದೆ ನಿಲ್ಕುಮಾವಗಂ ೧೦೮

ಮುಡಿ ಮೊಲೆ ನಿತಂಬ ಭಾರದಿ
ನಡಿಯಿಡಲಾಱದೆ ಶುಕಾಳಿಯಂ ಪಾಮರಿಯರ್
ಬಿಡೆ ಸೋವುತ್ತಿರ್ಪರ್ ಸಂ
ಗಡಮಿರ್ದಲ್ಲಿರ್ದ ಬಿರಯಿಗಳ ಬಳದಿಂದಂ ೧೦೯

ಗಿಳಿಯಂ ಸೋವೆಳೆಯಳ ನುಡಿ
ವಳಿಯಿಂದಂ ವಿಕಾಸಮಾದ ಬಾಯ್ದೆಱೆಗಂಡಂ
ಬೆಳಸುತ್ತಿರ್ಪುವು ದಾಡಿಮ
ಫಳಬೀಜಂಗೆತ್ತು ದಂತಕುಳಮಂ ಗಿಳಿಗಳ್ ೧೧೦

ವನಪಾಲಕಿಯರ್ ಶಾಳೀ
ವನದೊಳಗಿಹ ಕೀರಜಾಳಮಂ ಸೋವುತ್ತಿರಲಾ
ವನದೊಳ್ ದಾಡಿಮಭಿನ್ನದ
ತನಿವಣ್ಗೆನುತವರ ಬಾಯ್ಗೆ ಕವಿಡುವು ಗಿಳಿಗಳ್ ೧೧೧

ಸೆಳಿನಡು ಬಳ್ಕೆಯುೞ್ಕ್ಯುಡಲ ನುಣ್ಪೊಗರೊಪ್ಪಿ ಘನಸ್ತನಂಗಳ
ವ್ವಳಿಸೆ ನಿಮಿರ್ದ ವೇಣಿ ಕದಪಂ ಪುಗೆ ಮಂದಪವಜ್ಜೆ ಮಿಱೆ ಕೈ
ಗಳ ಬಳೆ ಪೆಲ್ಪಿಸಿಂದುಲಿಯೆ ಸಂಭ್ರಮದಿಂ ನಸುಬಾಗಿ ಬಿಟ್ಟಿಪ
ಣ್ಗಳಿವಿಡುತಿರ್ಪ (?) ಪಾಮರಿಯರೊಪ್ಪುವರಾ ಕಳಮಪ್ರದೇಶದೊಳ್ ೧೧೨

ಕಡುಜೆಲ್ವಿಂ ಮೆಱೆದಿರ್ಪ ಶಾಳಿವನಮಂ ಪಾಯಲ್ಕೆ ಪಕ್ಷೀವ್ರಗಂ
ಗಡಣಂಗೊಂಡು ಬಪಲ್ಕೆ ಸೋವ ಬಗೆಯಂ ಮಾಣ್ದಿರ್ಪರೇಕೆಂದೆನಲ್
ನುಡಿಯಂ ನೋಟಮನೆನ್ಮೊಳಿಯ್ದೆ ಪದಪಿಂದಂ ಕಲ್ತು ನೀರಿಂಗೆ ಬಂ
ದೊಡೆ (ಬಿರ್ದೋವುವಮಂ)ದು ನೇಹದೊದವಿಂ ತತ್ಪಾಮರೀಸಂಕುಳಂ ೧೧೩

ಕಳಮಕ್ಷೇತ್ರದುಪಾಂತನಂದನದೊಳಿರ್ದಾನಂದದಿಂ ಪಕ್ಕಿ ಸೋ
ವ ಲತಾಂಗೀ ಜನದೊಂದು ಪೆಲ್ಲುಲಿಪಮಂ ಕೇಳ್ದಂತದಂ ತದ್ವನಾಂ
ತಲತಾನೀಕದಿನುಣ್ಮುತಿರ್ಪ ಕಳಕಂಠಧ್ವಾನಸಂತಾನಮಂ
ಬಳಿಕ್ಕೈಯಿಂದಮಗಲ್ದು ಪೋಗವು ಚರತ್ಕೀರಾಳಿ ಕೇಕಾರವಂ ೧೧೪

ಘೊಂಕನೆ ಬಂದುಮಂದು ತೆನೆ[೧]ಯಕ್ಕಿಯ ಮುಕ್ಕಿ[೧] ಕಲಂಕಿ ಸೂಸುವ
ನ್ನಂ ಕುಟುಕಿಂಗೆ ಪಾಯ್ದುಲಿ[೨]ಯುತುಂ ಕವಿಯಲ್ ಗಿಳಿಸೋವ[೨] ಪಾಮರೀ
ಸಂಕುಳದೊಂದು ಪೆಲ್ಲುಲಿ[೩]ಗಳಿಂಚರಮಂ ನಸುಗೇಳ್ದು[೩] ಕೀರವೃಂ
ದಂ ಕಳಕೂಜಿತಾನುಮಿತಮಾದುದು ಶಾಡ್ವಲಗಂಧಶಾಳಿಯೊಳ್ ೧೧೫

(ಜಗನ್ನಾಥವಿಜಯಂ ೨-೭, ಸೂಕ್ತಿಸುಧಾರ್ಣವಂ ೬-೫೩)

---

[೧] ಪೊರ್ಕೆಯುಮುರ್ಕಿ(ಸ) [೨] ಪ ರಪಂ ಮುಲಿಪಿಂಗಿಳಿಸೋವ(ಸ) [೩] ಪ್ರಮಂ ನಸುಗೇಳನೆ
ನಿಂದ(ಸ)

ಗಗನಮೊಳೆಯ್ದಿ ಮುಂಡಳಿಸಿ ನಿಂದ ಶುಕಾಳಿಯನಂ[1]ದು[1] ಜೆರ್ಚಿಪು
ಜ್ಜುಗಮೊಳೆ ನೋಟ್ಪಿ ಪಾಮರಿಯ ಚಾರುಕಟಾಕ್ಷಮರೀಚಿ ನೀಳ್ದು ಶೋ
ಭೆಗೆ ನೆಲೆಯಾಯ್ತು ತತ್ಕಳಮಭೂರಮೊಗೆತ್ತಿದ ಪಚ್ಚನಪ್ಪ ಸ
ತ್ತಿಗೆಗಳವಟ್ಟು ತೋರ್ಪ ಶಶಿಕಾಂತದ ಕಾಂತದ ಕಾವಿದೆಂಬಿನಂ ೧೧೬
(ಚಂದ್ರಪ್ರಭಪುರಾಣಂ ೧-೯೫; ಸೂಕ್ತಿಸುಧಾರ್ಣವಂ ೧-೭೭)

ಇದು ದಲ್ ಪಕ್ಕಿಗಳೆಲ್ಲಮಂ ನೆರಪುವಂದಂ ಪಕ್ಕಿಸೋವಂದಮು
ಲ್ಲಿದೆನಲ್ ಸೋಗೆನವಿಲ್ ಜಟಿಲ್ಮುಡಿಗೆ ಭೃಂಗಂ ಕುಂತಳಕ್ಕಂಜೆಗಳ್
ಮೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮಾ ಸ್ವಜಾತೀಯ ಸಂ
ಮ್ಮದದಿಂ ಪಾಮರಿಯರ್ ಜಿತಾಮರಿಯರಿರ್ಪರ್ ಕಾದು ಕೇದಾರಮಂ ೧೧೭
(ಮಲ್ಲಿನಾಥಪುರಾಣಂ ೨-೨೧; ಸೂಕ್ತಿಸುಧಾರ್ಣವಂ ೪-೬೮)

ತರಳಾಪಾಂಗಮರೀಚಿಗಳ್ ಕಳಮಕೇದಾರಕ್ಕೆ ಜೆಳ್ಪಾರಮೋ
ಲಿರೆ ಸುತ್ತುಂ ಗಿಳಿಸೋವ ಸುಜ್ಞನಿಯಮೆತ್ತಂ ಗೋರಿಯಂ ಪಾಡುವಂ
ತಿರೆ ಪಾಂಥರ್ ಬಲವಂದು ಜೆಳ್ಳ್ಳುಗದವ್ರೋಲ್ ಸಾರ್ತಂದು ಜೆಳ್ಪಾಗೆ ಪಾ
ಮರಿಯರ್ ಪಾಂಥರ ಜೇಂಟೆಗಾರ್ತಿಯರೆನಿಪ್ಪಾಶಂಕೆಯಂ ಮಾಡುವರ್ ೧೧೮
(ಸೂಕ್ತಿಸುಧಾರ್ಣವಂ ೪-೭೬)

ಇಡಲಸುಗ್ಗೆವ್ರತಂ ಜಟಿಲೆ ಕೈಪರಿದೆಯ್ದು ತೊಡರ್ಚೆ ಪೋಗೆ ಮೆ
ಲ್ಲಡಿದಡನಾಗೆ ನಿಂದು ಬಡಿವ್ರುಜ್ಜುಗದಿಂ ದನಿಯೆತ್ತೆ ಮುಂ ತೊದ
ಲ್ನುಡಿಗೊಳೆ ಲೀಲೆಯಿಂಪೆಜಗಿ ಶಾಳಿವನಕ್ಕೆಡೆಯಾಗಿ ನೋಡಿ ನಿಂ
ದೆಡೆಯೊಳೆ ನಿಂದು ಚಿತ್ರದೊಳೆ ನೋವರು ಪಾಮರಕಾಮಿನೀಜನಂ ೧೧೯
(ಸೂಕ್ತಿಸುಧಾರ್ಣವಂ ೪-೭೦)

ಅವಿರಳಮಾದ ತುಂಗಕುಚಭಾರದೆ ತೋಳ್ ಸೆಳೆದಿಟ್ಟ ತಕ್ಕಿನೊಳ್
ಕವಣೆಯ ಗುಂಡು ಪಾಯವು ಮೃಗಾವಳಿ ಪಾಯವು ಕೆಯ್ಗೆ ಪಾಮರೀ
ಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಿಂಚರಮೆಂದು ಜೆರ್ಚೆ ಪಾ
ಜವು ಗಿಳಿವಿಂಡು ಪಾಂಥರೆರ್ದೆ ಪವ್ವನೆ ಪಾಱುವುದಾ ಪ್ರದೇಶದೊಳ್ ೧೨೦
(ಅನಂತಪುರಾಣಂ ೧-೮೨; ಸೂಕ್ತಿಸುಧಾರ್ಣವಂ ೪-೬೯)

ಕನಯುರದಂತೆ ಒಟ್ಟೆತಳವಟ್ಟು ಕುಜಂ ಕಡುಕೊರ್ವೆ ಪುರ್ಬನಿ
ಕ್ಕುವ ಪೊಜವಾ[2]ಜ[2] ಜಿಣ್ಪಿನ ಶಿರೋಜಭರಂ ತಮಗೊಪ್ಪೆ ಕೈಗಳಿಂ
ಕಪಿವ ಮೃಗಗಳಿಂ ತಗುಳ್ವ ಮಂಚಿಕೆಯೇಱುವ ಪಕ್ಕಿಸೋವ ಪಾ
ಡುವ ಪಟುಚೇಟಿಯರ್ ಚರಿಯಿಪಧ್ವಗರ್ಗೀಗುಮನಂಗರಾಗಮಂ ೧೨೧
(ಸೂಕ್ತಿಸುಧಾರ್ಣವಂ ೪-೭೨)

---

[1] ಜಿ(ಸ) [2] ಜು ಸುತ್ತಿದ(ಸೂ)

ಮುಡಿಯೊಳ್ ಪಾಲ್ ಮೆಱೆದಿರ್ದ ಶಾಳಿವನದೊಳ್ ಕೀರಾಳಿಯಂ ಸೋವಲೊ
ಳ್ಕಡಿಯಿಂದಂ ಮಿಡಿವಿಲ್ಲೊಳೆಚ್ಚೊಡೆಡೆಯೊಳ್ ಪುಂಡ್ರೇಕ್ಷುವಂ ತಾಗೆ ಗಂ
ಟೊಡೆದೆತ್ತಂ ರಸಮೆಚ್ಚು ಪಾಯೆ ಪಥಿಕರ್ ಪೊಕ್ಕೀಂಟುತುಂ ಕಯ್ಯಬಾ
ಯೆಡೆಯೊಳ್ ಸಾರ್ಚುಗೆ ಕಂಡು ಬೆಂಡುಬೆಱಗಪ್ಪರ್ ಪಾಮರೀವಕ್ತ್ರಮಂ ೧೨೨
(ಅನಂತನಾಥಪುರಾಣಂ ೧-೮೧; ಸೂಕ್ತಿಸುಧಾರ್ಣವಂ ೪-೭೫)

## ಪ್ರಪಾಗೃಹವರ್ಣನಂ

ಬಾೞೆಯ ಚಪ್ಪರಂ ಕರಿಯ ಕಬ್ಬಿನ ಬಲ್ತೊಲೆ ಪಚ್ಚೆಜಂತೆ ಪೆ
ರ್ವಾೞೆಯ ನಾಳಕಂಭ ಕುಸುಮಂಗಳ ಗೊಂಚಲ ಮೇಲುಕಟ್ಟು ಪೊಂ
ಬಾೞೆಯ ಚುಂಚುಲೋವೆ ದವನಂಗಳ ತೋಳ್ದಿನೆ ಸುತ್ತುಗಟ್ಟೆ ತ್ತೈ
ತ್ಯಾಳಿಯ ಪಚ್ಚಗರ್ಪುರದ ವೇದಿಕೆಯಿಂದೆಸೆಗುಂ ಪ್ರಪಾಗೃಹಂ ೧೨೩

ಶಶಿಕಾಂತ ಘಟಗಳೆಡೆಯೊಳ್
ಕುಸುಮಾಂಬುವ ತುಂಬಿ ಹೇಮಕರಕಂಗಳ ಪಿಡಿ
ದೊಸೆದು ನವಯವ್ವನಾಂಗಿಯ
ರೆಸೆದಿರ್ದಾರು ಸಾಲುಸಾಲಿನರವಟ್ಟಿಗೆಯೊಳ್ ೧೨೪

ಕಳಕೇಕೀ ಕೇಶಪಾಶಂ ಶಶಿನಿಭವದನಂ ಭೃಂಗನೀಲಾಳಕಂ ಸಂ
ಚಳಿತತ್ರೋನ್ಮತ್ಸ್ಯನೇತ್ರಂ ಘಟಕುಚಯುಗಳಂ ಲೀಶಮಧ್ಯಂ ಗಭೀರೋ
ಜ್ವಳಶೋಭಾನಾಭಿ ಕುಂಭಸ್ಥಳಸದೃಶನಿತಂಬಂ ಸುರಂಭಾವಿಳಾಸಂ
ಬಳೆದೊಪ್ಪಿದೂರುದಂಡಂ ತನಗೆಸೆಯೆ ನಿತಾಂತಂ ಪ್ರಪಾಕಾಂತೆಯಿರ್ದಳ್ ೧೨೫

ಬತ್ತಿತು ಬಿಸಿಲುರೆ ಕಾಲಂ
ಮುತ್ತಿತು ನೀರ್ವಡಕದಿಚ್ಛೆಯಿಂದಂ ಬೆಳವಾರಯ್
ಬತ್ತಿತ್ತಯ್ಯೋ ಶ್ರಮಮುನಿ
ಮಿತ್ತಂ ಕಳಿನವರೆ ಜಾಣರೆನುತಂ ನುಡಿದಳ್ ೧೨೬

ನುಡಿಯೆ ಬೞಲ್ದ ಪಾಂಥನೆರ್ದೆ ತಂಪಿನಸೋನೆಯನಾಂತ ಮಾೞ್ಕೆಯಿಂ
ಪೊಡಕರಿಸುತ್ತೆ ಪತ್ತೆ ಮಿಗೆ ಸಾರ್ದು ನಿವಾತಸುಖಸ್ಥಳಕ್ಕೆ ಬಂ
ದೆಡಗುಡದನ್ಯಚಿಂತೆಗೆ ಮನೋಜಸುಖಾರ್ಣವಮಧ್ಯದೊಳ್ ಮನಂ
ಗುಡತಲಮಾರ್ಚುತೀಸುತೆ ದುಡುಮ್ಮೆಱೆಯುತ್ತಮೆ ಪಾಂಥನೊಪ್ಪಿದಂ ೧೨೭

ನೆೞಿಲಾದುದು ಧಮ್ಮಿಲ್ಲಂ
ಪುಳಿನಸ್ಥಳಮಾಯ್ತು ವೃತ್ತಜಘನಭರಂ ಶೀ
ತಳತರ ಜಲಮಾದುದು ಕೋ
ಮಳೆಯುರಧರಮರೀಚಿ ಪಾಂಥನೇಂ ಬದುಕಿದನೋ ೧೨೮

ವರನಾಭಿ ಸುೞಿಗಳಿಂ ತೋಳ್
ತರಂಗಮಾಲೆಗಳನಂಬಕಂ ಮತ್ಸ್ಯಮನಂ
ಗರುಚಿ ರುಚಿರಾಂಬುವಂ ಪೋ
ಲ್ತಿರವಣೆ ನದಿಯುಂದದಿಂ ಪ್ರಪಾಕಾಂತೆಯಿರಲ್ ೧೨೯

ಇರೆ ಬಂದ ಪಥಿಕನೊರ್ವಂ
ತರುಣಿಯ ಲಾವಣ್ಯರಸಮನಕ್ಷಿಗಳಿಂದಂ
ಬರೆಪೀರ್ದು ದಣಿದು ಬಟ್ಟೆಯ
ಪರಿಶ್ರಮದಾ ವ್ಯಥೆಯನಱಿಯದಿರ್ದಂ ಸುಖದೊಳ್ ೧೩೦

ತೀರ್ದುದು ನೀರ್ ತೀರ್ದುದು ತೃಷೆ
ತೀರ್ದುದು ಕಡುಸೇದೆ ತೀರ್ದೊಡಂ ಪಥಿಕಂ ತಾ
ನಿರ್ದಂತಿರ್ದಂ ಸ್ತ್ರೀಮುಖ
ವಿರ್ದಿರಮಂ ನೋಡುವಾಸೆ ತೀರದೆ ಮನದೊಳ್ ೧೩೧

ನಡೆ ನುಡಿ ಬೞಿಲ್ಕೆ ಮುನ್ನಂ
ಕಡುಚೆಲುವೆಯ ರೂಪುಗಂಡ ಬೞಿಕಂ ನೀರಂ
ಕುಡಿಯರ್ ನಡೆಯರ್ ನುಡಿಯರ್
ನಡೆನೋಡುತ್ತಿರ್ಪರತನುಶಿಥಿಲರ್ ಪಥಿಕರ್ ೧೩೨

ಅಂಬುವನೆೞೆವಾಗಲ್ ಪ್ರತಿ
ಬಿಂಬಿಸೆ ಕೈನೀರೊಳವಳ ವದನಂ ಪಥಿಕಂ
ನಂಬಿ ನಲಿದೀಂಟಿದಂ ಮಿಗೆ
ಬಿಂಬಾಧರಮಧುರಸುಧೆಯನೀಂಟುವ ತೆಱದಿಂ ೧೩೩

ಆಕೆಯ ಲಾವಣ್ಯಾಮೃತ
ಸೇಕದೆ ತೃಷೆ ಮುಗ್ಗಿತಕ್ಕುಮಲ್ಲದೊಡಂ ತ
ದ್ವ್ಯಾಕುಳಿತಚಿತ್ತನವನವ
ಲೋಕಿಸುವನೆ ಸೋಲ್ತಸಂತೆ ಮಾನಸವಮುದನಂ ೧೩೪

(ಲೀಲಾವತಿ ೬-೬೩)

ತಳಿದೆಳೆಗೆಂಪಿಂ ಪಳುಕಿನ
ಕಳಸಂ ಕಿಸುಗಲ್ಲ ಕಳಸದಂತಿರೆ ತಳೆದು
ತ್ಪಳಧವಳಲೋಲಲೋಚನೆ
ವಿಳಸನದಿಂ ಮತ್ತಮೊರ್ವಳಂಗನೆ ಬಂದಳ್ ೧೩೫

(ಲೀಲಾವತಿ ೬-೬೪)

ಒಳಗಳ್ಪಾಡುವ ಜಲದಿಂ
ಕಳಶಂ ಕಣ್ಗೆಸೆದುದಾಸ್ಯರುಚಿತಸ್ಕರನೀ
ಖಳನೆಂದು ಪಿಡಿದೊಡಾ ಕೋ
ಮಳೆ ಭಯದೆರ್ದೆವ್ರೊಯ್ವ ತುಹಿನಕರಬಿಂಬವವೊಲ್ ೧೩೬

(ಲೀಲಾವತಿ ೬-೬೫)

ಕುಳಿರ್ವ ಜಲಕಲಶಮದು ಕರ
ತಳಮಂ ಸೋಂಕುವ್ರದುಮಾಲಿಗೊಂಡುಶರೀರಂ
ಪುಳಕಿಸೆ ನಾಳೆದೊಳಾ ಕೋ
ಮಳೆ ತೀವಿದ ಕಮಳನಾಳಮಂ ತಳೆವಾಗಲ್ ೧೩೭

(ಲೀಲಾವತಿ ೬-೬೭)

ಸ್ತನಕಲಶಕ್ಕೆ ಪೋಂಗಳಶಮಂ ಪಡಿಯಿತ್ತುತಿ ತೋಳಧಾರೆ ಕಾ
ಮನ ಕರವಾಳಧಾರೆಯೆನಿಸೆ ಧಾರೆಗೆ ಕೈಗಳನೊಡ್ಡಿ ತಮ್ಮ ಜ
ವ್ವನಮನೆ ಕೂರ್ತು ಧಾರೆಯೆಱೆದಿಷ್ಟಫಲಂಗಳನಿತ್ತು ತನ್ಮಹಾ
ಜನಪದದೊಳ್ ಪ್ರಪಾವನಿತೆಯರ್ ಪಡೆವರ್ ಪಥಿಕಪ್ರಮೋದಮಂ ೧೩೮

(ಧರ್ಮನಾಥಪುರಾಣಂ ೨-೩೩)

ಸುಲಲಿತ ಚಂದ್ರಕಾಂತಕಲಶಂಗಳಿನಂಗನೆಯರ್ ವಿಲಾಸದಿಂ
ಕುಳಿರ್ವ ಜಲಂಗಳಂ ಸೊಗದು ಪಾಂಥಜನಕ್ಕೆಱೆಯುತ್ತಿರಲ್ಕೆ ಶೀ
ತಳ ಜಲಮೆಲ್ಲವುಂ ಸವಿಯೆ ತಮ್ಮ ಮುಖೇಂದುಮರೀಚಿಯಿಂದಮಾ
ಕಲಶಮನೆಯ್ದೆ ತೀವಿ ಪಥಿಕರ್ಗೆಱೆವರ್ ತೃಷೆ ತೀಱುವನ್ನೆಗಂ ೧೩೯

ಕಯ್ಗೆ ಪಯೋಧರದ್ವಯದ ಕಂಪನೆ ತೆತ್ತು ಬೞಿಲ್ದು ಬತ್ತಿದಾ
ಬಾಯ್ಗೆ ಮುಖೇಂದುವಿಂದಿನಿರಸಂಗಳನೇ ಕಱೆಯುತ್ತ ಜೋಂಪಿಸಾ
ಮೆಯ್ಗೊಱಸಿದ್ದ ತಮ್ಮ . ತವಿತ್ತೊಱಪಂ ನೆಱೆ ಪುಟ್ಟಿಸುತ್ತಮಳ್
ಸುಯ್ಗೆಡೆಯಾಗದಾ ಪಥಿಕನಾ ತೃಷೆ[೧][ಗೇಡಱುಯುತ್ತಿ][೧]ರೊಪ್ಪಿದಳ್ ೧೪೦

---

[೧] ಗೆಡಱವಟ್ಟ(ಸ)

ಪಱುಪಡೆ ಸೇದೆ ಪಿಂಗೆ ತೃಷೆ ಪೊಂಗಲಸಂಗಳನೆತ್ತಿಕೊಂಡು ನೀ
ರೆಱೆವ ಚಳಲ್ಲತಾಂಗಿಯುರ ಕೊಂಕಿದ ತೋಳನೊವಲ್ಗೆ ತೀವಿ ಕಿ
ಕ್ಕಿಱುವ ಕುಚಕ್ಕೆ ಕಣ್ಬರಿಯೆ ಧಾರೆಗಳೋರೆಗೆ ಸೂಸೆ ¹ಚ್ಚೈತಕ್ಕೈ
ಯಱತ್ತು¹ ಬಯಲ್ಗೆ ಬಾಯ್ಪಿಡುವರಧ್ವಗರಧ್ವತಟಪ್ರಪಾಳಿಯೊಳ್ ೧೪೧
(ಅನಂತನಾಥಪುರಾಣಂ ೧-೮೩; ಸೂಕ್ತಿಸುಧಾರ್ಣವಂ ೪-೮೦)

ಕೊಸೆವನಿ ಸೂಸೆ ಕಣ್ಣಪನಿ ಕೆಂದಳಿರೊಳ್ ಪನಿಗೂಡೆ ದಿಟ್ಟೆ ಮೂ
ಗಿನ ಕೊನೆಯುಲ್ಲಿ ಸ್ಪೈತುನಿಲೆ ಕೊಂಕಿ ಕೊರಳ್ ಮಿಡುಕಾಡೆ ಸಾರ್ಚಿಕೊ
ಳ್ಳೆನೆ ಕುಳಿರ್ಕೊಡುತಿರ್ಪ ಕಳಶಾಂಬುಗಳಿಂ ತೃಷೆ ತೀಱೆ ಸುಪ್ರಸು
ಪ್ತನೆ ಪಥಿಕಾಳಿ ಬೀಗಿ ಪಡೆಗುಂ ಪರಿತೃಷ್ಣೆಗಳಿಂ ನಿರಂತರಂ ೧೪೨

ಅಱವಟ್ಟಿಗೆಯೊಳ್ ಕುಡಿನೀ
ರೆಱೆವ ಬೆಡಂಗೆಯ ಭಾವಮುಂ ಭೋಂಕನೆ ಕಂ
ಡೆಱೆದಡಱೆ ನೋಡಿ ಪಾಂಥರ್
ಗುಱುಯೋಗುತೆ ತಾಳ್ಗು ತಂಪ್ರಮುಂ ತೃಷೆಯುಮುಮುಂ ೧೪೩

ರಾಗಮುಖೇಂದುಬಿಂಬದ ಲತಾಂಗವ ಕಂಗಳ ಕಾಂತಿ ವಾರಿಧಾ
ರಾಗಣದೊಳ್ ಪೊನಲ್ಕವಿದು ಪಾಂಥರ ಕಣ್ಣು ಮನಕ್ಕೆ ರೂಪುಗೊಂ
ಡಾಗಳೆ ತೃಪ್ತಿಯುಂ ಕುಡೆ ಮನಂಗೊಳಿಸಿರ್ಪರನಂಗರಾಜಧಾ
ರಾಗೃಹಸಾಲಭಂಜಿಕೆಯಂತಱವಟ್ಟಿಗೆಯೊಳ್ ಲತಾಂಗಿಯರ್ ೧೪೪

ಕಳಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ
ತೊಲಗಿಸೆ ನೋಡಿನುಣ್ಬೊಗರನೀಂಬ ಕುಚದ್ವಯಮೂಲಮುಂ ಸಮು
ಜ್ವಲಭುಜಮೂಲಮುಂ ನೆಱೆಯೆ ಕಂಡೆರ್ದೆಯಾಱುಡೊಡಂ ನಿರೀಕ್ಷಣಾ
ಕುಲತೆಯಿನೀಂಟುವರ್ ಪಥಿಕರಾ ಕಲಶಾಂಬುವನೆ ಸೀಪೆಯೆಂಬಿನಂ ೧೪೫
(ಚಂದ್ರಪ್ರಭಪುರಾಣಂ ೧-೯೮; ಸೂಕ್ತಿಸುಧಾರ್ಣವಂ ೪-೮೩)

ಕುಸಿದಂಗವಾಂತ ಕೈ ಬಿ
ಟ್ಟಿಸೆವಕ್ಷಿಯು ಪಾಂಥನಲ್ಲಿ ಮಿಸುಕಂ ಮಸಕಂ
ಪೊಸಕಂ ಜೀವನವೆಱೆವವ
ಳಿಸಕದ ಜೀವನವನಿತ್ತ್ರ ಮಾಟಿಕ್ಕೆಯೊಲಿರ್ದಂ ೧೪೬

---

¹ಮುಟ್ಟ ಕೈ ಮುಱಿದು(ಸೂ)

ತಳಿದೆಳೆಗೆಂಪಿಂ ಪಳುಕಿನ
ಕಳಸಂ ಕಿಸುಗಲ್ಲ ಕಳಸದಂತಿರೆ ತಳೆದು
ತ್ಪಳಧವಳಲೋಲಲೋಚನೆ
ವಿಳಸನದಿಂ ಮತ್ತಮೊರ್ವಳಂಗನೆ ಬಂದಳ್ ೧೩೫
(ಲೀಲಾವತಿ ೬-೬೪)

ಒಳಗಳ್ಳಾಡುವ ಜಲದಿಂ
ಕಳಶಂ ಕಣ್ಗೆಸೆದುದಾಸ್ಯರುಚಿತಸ್ಕರನೀ
ಖಳನೆಂದು ಪಿಡಿದೊಡಾ ಕೋ
ಮಳೆ ಭಯದೆರ್ದೆವೊಯ್ವ ತುಹಿನಕರಬಿಂಬದವೊಲ್ ೧೩೬
(ಲೀಲಾವತಿ ೬-೬೫)

ಕುಳಿರ್ವ ಜಲಕಲಶಮದು ಕರ
ತಳಮಂ ಸೋಂಕುವುದುಮಾಲಿಗೊಂಡುಶರೀರಂ
ಪುಳಕಿಸೆ ನಾಳದೊಳಾ ಕೋ
ಮಳೆ ತೀವಿದ ಕಮಳನಾಳಮಂ ತಳೆವಾಗಲ್ ೧೩೭
(ಲೀಲಾವತಿ ೬-೬೭)

ಸ್ತನಕಲಶಕ್ಕೆ ಪೊಂಗಳಶಮಂ ಪಡಿಯೆತ್ತುತೆ ತೋಳಧಾರೆ ಕಾ
ಮನ ಕರವಾಳಧಾರೆಯೆಸೆ ಧಾರೆಗೆ ಕೈಗಳನೊಡ್ಡಿ ತಮ್ಮ ಜ
ನ್ಮನಮನೆ ಕೂರ್ತು ಧಾರೆಯೆಱೆದಿಷ್ಟಫಲಂಗಳನಿತ್ತು ತನ್ಮಹಾ
ಜನಪದದೊಳ್ ಪ್ರಪಾವನಿತೆಯರ್ ಪಡೆವರ್ ಪಥಿಕಪ್ರಮೋದಮಂ ೧೩೮
(ಧರ್ಮನಾಥಪುರಾಣಂ ೨-೩೩)

ಸುಲಲಿತ ಚಂದ್ರಕಾಂತಕಲಶಂಗಳಿನಂಗನೆಯರ್ ವಿಲಾಸದಿಂ
ಕುಳಿರ್ವ ಜಲಂಗಳಂ ಸೊಗದು ಪಾಂಥಜನಕ್ಕೆಱೆಯುತ್ತಿರಲ್ಕೆ ಶೀ
ತಳ ಜಲಮೆಲ್ಲವುಂ ಸವೆಯೆ ತಮ್ಮ ಮುಖೇಂದುಮರೀಚಿಯಿಂದಮಾ
ಕಲಶಮನೆಯ್ದೆ ತೀವಿ ಪಥಿಕರ್ಗೆಱೆವರ್ ತೃಷೆ ತೀಱುವನ್ನೆಗಂ ೧೩೯

ಕಯ್ಗೆ ಪಯೋಧರದ್ವಯದ ಕಂಪನೆ ತೆತ್ತು ಬಟಿಲ್ದು ಬತ್ತಿದಾ
ಬಾಯ್ಗೆ ಮುಖೇಂದುವಿಂದಿನಿರಸಂಗಳನೇ ಕಱೆಯುತ್ತ ಜೋಂಪಿಪಾ
ಮೆಯ್ಗೊಱಸೆದ್ದ ತಮ್ಮ. ತನಿತ್ರೊಱಪಂ ನೆಱೆ ಪುಟ್ಟಿಸುತ್ತಮಳ್
ಸುಯ್ಗೆಡೆಯಾಗದಾ ಪಥಿಕನಾ ತೃಷೆ[೧][ಗೇಡಱುಯುತ್ತಿ][೧]ರೊಪ್ಪಿದಳ್ ೧೪೦

---

[೧] ಗೆಡಜಿವಟ್ಟ(ಸ)

ಪಱುಪಡೆ ಸೇದೆ ಪಿಂಗೆ ತೃಷೆ ಪೊಂಗಲಶಂಗಳನೆತ್ತಿಕೊಂಡು ನೀ
ರೆಱೆವ ಚಳಲ್ಲತಾಂಗಿಯರ ಕೊಂಕಿದ ತೋಳನೊವಲ್ಗೆ ತೀವಿ ಕಿ
ಕ್ಕಿಱಿದ ಕುಚಕ್ಕೆ ಕಣ್ಣರಿಯೆ ಧಾರೆಗಳೋರೆಗೆ ಸೂಸೆ [1]ಬೈತಕ್ಕೆ
ಯಱತು[1] ಬಯಲ್ಗೆ ಬಾಯ್ವಿಡುವರಧ್ವಗರಧ್ವತಟಪ್ರಪಾಳಿಯೊಳ್ ೧೪೧
(ಅನಂತನಾಥಪುರಾಣಂ ೧-೮೩; ಸೂಕ್ತಿಸುಧಾರ್ಣವಂ ೪-೮೦)

ಕೊನೆವನಿ ಸೂಸೆ ಕಣ್ಣಪನಿ ಕೆಂದಳದೊಳ್ ಪನಿಗೂಡೆ ದಿಟ್ಟಿ ಮೂ
ಗಿನ ಕೊನೆಯಲ್ಲಿ ಸ್ಥಿತುನಿಲೆ ಕೊಂಕಿ ಕೊರಳ್ ವಿಡುಕಾಡೆ ಸಾರ್ಚಿಕೊ
ಳ್ಳೆನೆ ಕುಳಿರ್ಕೊಳ್‌ೞುತಿರ್ಪ ಕಳಶಾಂಬುಗಳಿಂ ತೃಷೆ ತೀಱೆ ಸುಪ್ರಸು
ಪ್ರನೆ ಪಥಿಕಾಳಿ ಬೀಗಿ ಪಡೆಗುಂ ಪರಿತೃಷ್ಣೆಗಳಂ ನಿರಂತರಂ ೧೪೨

ಅಱವಟ್ಟಿಗೆಯೊಳ್ ಕುಡಿನೀ
ರೆಱೆವ ಜಿಡಂಗೆಯ ಭಾವಮುಂ ಭೋಂಕನೆ ಕಂ
ಡೆಱೆದಡಱೆ ನೋಡಿ ಪಾಂಥರ್
ಗುಱುಯೋಗುತೆ ತಾಳ್ಗು ತಂಪ್ರಮುಂ ತೃಷೆಯುಮುಮುಂ ೧೪೩

ರಾಗಮುಖೇಂದುಬಿಂಬದ ಲತಾಂಗದ ಕೆಂಗಳ ಕಾಂತಿ ವಾರಿಧಾ
ರಾಗಣದೊಳ್ ಪೊನಲ್ವವಿದು ಪಾಂಥರ ಕಣ್ಣು ಮನಕ್ಕೆ ರೂಪುಗೊಂ
ಡಾಗಳೆ ತೃಪ್ತಿಯಂ ಕುಡೆ ಮನಂಗೊಳಿಸಿರ್ಪರನಂಗರಾಜಧಾ
ರಾಗೃಹಸಾಲಭಂಜಿಕೆಯುಂಕಱವಟ್ಟಿಗೆಯೊಳ್ ಲತಾಂಗಿಯರ್ ೧೪೪

ಕಳಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ
ತೊಲಗಿಸೆ ನೋಡಿನುಣ್ಪೊಗರನೀಂಬ ಕುಚದ್ವಯಮೂಲಮುಂ ಸಮು
ಜ್ವಲಭುಜಮೂಲಮುಂ ನೆಱೆಯೆ ಕಂಡೆರ್ದೆಯಾಱುಮೊಡಂ ನಿರೀಕ್ಷಣಾ
ಕುಲತೆಯಿನೀಂಟುವರ್ ಪಥಿಕರಾ ಕಲಶಾಂಬುವೆ ಸೀಮೆಯೆಂಬಿನಂ ೧೪೫
(ಚಂದ್ರಪ್ರಭಪುರಾಣಂ ೧-೯೮; ಸೂಕ್ತಿಸುಧಾರ್ಣವಂ ೪-೮೩)

ಕುಸಿದಂಗವಾಂತ ಕೈ ಬಿ
ಟ್ಟಿಸೆವಕ್ಷಿಯ ಪಾಂಥನಲ್ಲಿ ಮಿಸುಕಂ ಮಸಕಂ
ಪೊಸಕಂ ಜೀವನವೆಱೆವವ
ಳೆಸಕದ ಜೀವನವನಿತ್ತ ಮಾಟಿಕ್ಕೆಯೊಲಿರ್ದಂ ೧೪೬

---

[1] ಮುಟ್ಟಿ ಕೈ ಮಱಿದು(ಸೂ)

ಸರಸದಿನೆತ್ತಿ ನೀರೆಱೆಯೆ ನೀರೆಯರಧ್ವಗರಧ್ವಖೇದಮೋ
ಸರಿಸಲೊಡಂ ಪ್ರಪಾಪ್ರಕರದೊಳ್ ಕುಡಿವರ್ ಬಿನದಕ್ಕೆ ಬಿಚ್ಚತಂ
ಪರಿಮರಿಯಾಡೆ ಕಣ್ ಬೞಿಯ ರೇಖೆಗಳೊಳ್ ಸುೞಿಗೊಂಡು ನಾಭಿಯೊಳ್
ಗುರುಕುಚಕೂಟದೊಳ್ ತೊಳಪ ತೋಳಪೊದಲ್ಗಳೊಳಾನನಾಬ್ಜದೊಳ್ ೧೪೭

ಜಡಪಾನೋತ್ಸವದಿಂ ಪ್ರಪಾಪ್ರಣಯದಿಂ ಸತ್ರಂಗಳೊಳ್ ಸಂಮುದಂ
ಬಡುವೇಕಾಕಿನಿಯರ್ ಮನೋಜಸುಖದಾನಾರಾಗದೊಳ್ ಚಿತ್ತಮಂ
ಬಡೆವೊಳ್ಪೆಂಡಿರ ಮುಚ್ಚಿಮುಚ್ಚಿಯೊಲವಿಂದಂ ಗಾವುದಕ್ಕೊಮ್ಮೆಯೊಂ
ದೆಡೆಗೆಯ್ದಿ ಪೋರ್ಡೆ ಕಾರ್ಯಹಾನಿ ಪಥಿಕರ್ಗೂರೂರ ನಾಲ್ವಟ್ಟೆಯೊಳ್ ೧೪೮

## ಕೊಳದ ವರ್ಣನಂ

ವಾಸವಗೇಹದಂತನಿಮಿಷೋಲ್ಲಸಿತಂ ರಘುನಾಥಸೈನ್ಯದ
ಗ್ರೇಸರದಂತೆ ನೀಲ ಕುಮುದಂ ನಳ ಕೇಸರಸೇವ್ಯಮಾನ ಕಂ
ಸಾಸುರವೈರಿಯಂತೆ ಕಮಲಾಲಯಚಕ್ರಸುಪರ್ಣಶೋಭಿತಂ
ಭಾಸುರರಾಜಹಂಸೆಗಳಿನಂಬರದಂತೊಲಿದೊಪ್ಪಿತಾ ಕೊಳಂ ೧೪೯

ಸುರರ ನಿವಾಸದಂತನಿಮಿಷಪ್ರಕರಂ ನಭದಂತಿರಬ್ಜಬಂ
ಧುರ ಮಧುಮಾಸದಂತೆ ಸಿತಪಕ್ಷಯುತಂ ರಥದಂತೆ ಚಕ್ರವಿ
ಸ್ಫುರಮುರುಪದ್ಮಜಾಂಡದವೊಲಾತ್ತ ಲಸದ್ಭುವನಾಶ್ರಯಂ ಧನು
ರ್ಧರರ ಕಳಾಪದಂತೆ ರಮಣೀಯ ಶಿಳೀಮುಖಸಂಕುಳಂ ಕೊಳಂ ೧೫೦

ವಿದಳಿತ ಪದ್ಮಸೌರಭದಿ ಸಂದಣಿಗೊಳ್ವ ಮಧುವ್ರತಪ್ರತಾ
ನದಿನೆಸೆವುತ್ಪಲಪ್ರಕರದೊಳ್ ನೆಱೆ ಸಿಲ್ಕಿ ಜಿನುಂಗುತಿರ್ಪ ಷ
ಟ್ಪದ ಶಿಶುವೃಂದದಿಂ ಕಮಲತಂಡುಲಮಂ ಕೊಳುತಿರ್ಪ ಹಂಸೆಯಿಂ
ಮದನಸುಖಾಬ್ಧಿಯೊಳ್ ನೆರೆವ ಚಕ್ರದಿನೊಪ್ಪಿತದೊಂದು ಪೂಗೊಳಂ ೧೫೧

ಒಸೆದೀಂ ನೋಡಿದನೋ ಮುರಾರಿ ಲಹರೀಸಂಘಾತಸಂಘಾತದಿಂ
ದೆಸೆಯೊಳ್ ಸೀರ್ಪನಿ ಸೂಸುತಿರ್ಪ ವಿಚಲತ್ಪತತ್ರಾಳಿಪತ್ರಾಳಿಯಿಂ
ಬಿಸಜಂಗಳ್ ಮಲರ್ದೊಪ್ಪುತಿರ್ಪ ಜಗತೀಪಾನೀಯಪಾನೀಯದಿಂ
ಜಸಮಂ ತಾಳ್ದಿದ ಮಾನಸಾಬ್ಜವನಶಂಕಾಸಾರಕಾಸಾರಮಂ ೧೫೨

(ಜಗನ್ನಾಥವಿಜಯಂ ೧೦-೬೧)

ಲಲಿತಗತಿಕ್ರಿಯೋತ್ಸವದಿನೊಪ್ಪುವ ಪಾಂಡುರಪಕ್ಷಪಕ್ಷದಿಂ
ಕಲರುತಿ ಬೀರುತಿರ್ಪ ಕುರರೀ ಬಕ ಕುಕ್ಕುಟ ಚಕ್ರಚಕ್ರದಿಂ
ಚಲದಳಿವಿಂಡು ಮಂಡಳಿಸುತಿರ್ಪ ಚಲತ್ ಜಲಜಾತಜಾತದಿಂ
ವಿಲಸಿತಮಾದುದಂ ನಲಿದು ನೋಡಿದನಂಬುಜಷಂಡಷಂಡಮಂ ೧೫೩

ಪಾವಕದಿಕ್ಕಿನಂತೆ ವನದಂತೆ ವಿಜೃಂಭಿತ ಪುಂಡರೀಕಮಿಂ
ದೀವರನಾಭರಮ್ಯಸಭೆಯಂತೆ ರಸಾತಳದಂತನಂತಪ
ದ್ಮಾವಹಮೂರ್ತಿಯಂತೆ ನಭದಂತೆ ವಿರಾಜಿತ ರಾಜಹಂಸಮಾ
ಮ್ರಾವಳಿಯಂತೆ ಕಾಮಿಜನದಂತೆ ಸಮುತ್ಕಳಿಕಾಕುಳಂ ಕೊಳಂ ೧೫೪

ಲಸಿತ ವನೇಚರಾಲಯದವೊಲ್ ಕಮಲೋತ್ಪಲಸಂಸ್ಥಿತಂ ದಿವೌ
ಕಸ ವರರಾಜಧಾನಿಯೆನೆ ಸಂಚರಿಪಾನಿಮಿಷಾಳಿ ಪುಣ್ಯತಾ
ಪಸವಿತತಾಶ್ರಮಾಂತವೆನೆ ಸದ್ಗತಿಸಂಗತ ಹಂಸಚಕ್ರಮೀ
ನೆಸೆಮುದೊ ತೀರಚೂತಕುಸುಮೀಕೃತ ಶೀಕರಮಂಬುಜಾಕರಂ ೧೫೫

ವಿಳಸದನಂತಪದ್ಮವಸುರಾಂತಕನಂ ಫಣಿವಂಶಮಂ ಸದಾ
ನಳಿಕುಮುದಾವಭಾಸಿ ದೆಸೆಯಂ ರಘುನಂದನಸೈನ್ಯಮಂ ನಿರಾ
ಕುಳಕವಿರಾಜಹಂಸಸುಭಗಂ ನಭಮಂ ನೃಪಗೇಹಮಂ ಸಮಂ
ತಿಳಿಪುವುದಿಲ್ಲಿ ಮಂದಪವನೋತ್ಪಳಶೀಕರಮಂಬುಜಾಕರಂ ೧೫೬

ವನಲಕ್ಷ್ಮೀದೇವಿಯಂ ಪೆತ್ತಮೃತನಿಧಿಯೊ ವಿಂಧ್ಯಾದ್ರಿಚಂದ್ರೋಪಳಂ ಚಂ
ದ್ರನ ಪೆರ್ಚಿಂದುರ್ಕಿದಂಭೋವಿಸರವೊ ವಿಪಿನಧ್ವಾಂತಮಾಕ್ಷೇಪದಿಂ ಕಾ
ಪಿನೊಳಿಟ್ಟಿಂದುಪ್ರಭಾಪೂರವೊ ಹರಿ ಗರುಡೋದ್ಭೀತಿಯಿಂ ಬಯ್ತ ಪೀಯೂ
ಷನಿಧಾನಶ್ರೀಯೊ ಪೇಟಿತಂಬಿನಮುಮಳತರಂ ರಯ್ಯಮಾಯ್ತಬ್ಜಷಂಡಂ ೧೫೭
(ಲೀಲಾವತಿ ೬-೬೭)

ತಿಂತಿಣಿಯಾಗಿ ತಾವರೆಯುಮುತ್ಪಲಮುಂ ಪೆಣದೊಂದನೊಂದು [೧]ನಾ[೧]
ಳಂ ತಡವಪ್ಪಿನಂ ತುಱುಗಿ ಪುಟ್ಟಿದುವೀ ಕೊಳದೊಳ್ ಪೊದಟ್ಟಿವ
ರ್ಕೆಂತಲರ್ವಂದವೆಂದು ಪಗಲರ್ಕನಿರುಳ್ವಿಧುಬಿಂಬಮಿಂಬುಮಾ
ಟ್ಟಿಂತೆ ಮುಗುಳ್ಚುಗುಂ ಕುಮುದಕಾನನಮಂ ಕಮಳಪ್ರತಾನಮಂ ೧೫೮
(ಲೀಲಾವತಿ ೬-೮೧)

---

[೧] ತಾ (ಸ)

ಸ್ಮಿತನೀಲೋತ್ಪಲಪುಂಜದಿಂ ವಿಮಲತಾಸೌರಭ್ಯದಿಂ ದರ್ಪಣಾ
ಕೃತಿಯಿಂದೊಪ್ಪುವ ತತ್ಸರೋಜವನದೊಳ್ ತಾಂ ಪುಟ್ಟಿದಂ ರೋಹಿಣೀ
ಪತಿಯಂತಲ್ಲದೊಡಾ ಮದಾಳಿ ಕಳಭ ಶ್ಯಾಮಾಂಕಮಾ ಸ್ವಚ್ಛದೀ
ಧಿತಿ ಯಾವೃತ್ತತೆ ಚಂದ್ರಮಂಗೆ ಪಿರಿದುಂ ಪೇೞ್ತಣಿಂದಾದುದೋ ೧೫೯

(ಲೀಲಾವತಿ ೬-೮೩)

ಬನದ ನೆೞಲ್ ಕರಮೆಸೆದುದು
ವನಲಕ್ಷ್ಮಿಯ ಮಜ್ಜನಕ್ಕೆ ಪೊಕ್ಕಂತಿರೆ ಪೂ
ವಿನ ತುಱುಗಲುದಿರ್ದುವಾಕೆಯ
ಕೊನೆಮುಡಿಯಿಂದುದಿರ್ದ ಪೂಗಳೆನೆ ಪೂಗೊಳನೊಳ್ ೧೬೦

(ಲೀಲಾವತಿ ೬-೯೦)

ಪ್ರಿಯತರಮಾಯ್ತು ಕಣ್ಗೆ ವನಲಕ್ಷ್ಮಿಯ ಕನ್ನಡಿ ಕಂಜದೇೞ್ಗೆ ಗಾ
ಳಿಯ ಗುಣದಾಗರಂ ನೆಗಟ್ದ ತುಂಬಿಯ ಜೇವಣಸಾಲೆ ಜಕ್ಕವ
ಕ್ಕಿಯ ಸುರತಾಲಯಂ ಸಿರಿಯ ಸೆಜ್ಜೆ ದಿನೇಶನ ಪೆಂಡವಾಸವಂ
ಚೆಯ ಬೆಳಗೆಯ್ ಸುಧಾಕರನ ಸೋದರಮಾ ವಿಳಸತ್ಸರೋವರಂ ೧೬೧

(ಲೀಲಾವತಿ ೬-೯೩)

ಜಲರುಹ ಕುಮುದ ಸಮೂಹದ
ಬೆಳವಿಗೆಯಿಂ ಚಕ್ರವಾಕಹಂಸೆಗಳಿಂದಂ
ಎಳೆದುಂಬಿಗಳ ಸುಗೇಯದ
ನಲವಿಂಪಂ ಸರಸಿ ಮೆಱೆವುತಿಹುದನವರತಂ ೧೬೨

ಚಾರುತರಂ ನಿರ್ಮಲ ಜಲ
ಪೂರಂ ಸೌರಭ್ಯಮುದಿತ ಮದಮಧುಕರ ಝೇಂ
ಕಾರಂ ಹಂಸಕುಲಕ್ರೀಂ
ಕಾರಂ ರಾಜೀವಭರಿತ ನವಕಾಸಾರಂ ೧೬೩

ಮದನನ ಬತ್ತಳಂತೆ ರಥದಂತೆ ಕುಲಾಲನ ಚಕ್ರದಂತೆ ಕುಂ
ಡೊವನದ ಚಂದ್ರನಂತೆ ವನನಂತೆ ವಿಹಾಯಸದಂತೆ ಶೌರಿಯಂ
ತದುಭುತರಾಹುವಂತೆ ಮುಸಿಯಂತೆ ಸುರಾಸಿಯುಗಂಗಳಂತೆ ಭಂ
ಗದಿಬರಹಂತೆ ಮಂತ್ರಿಕುಲದಂತೆ ವಿರಾಜಿಸುಗಾ ಕೊಳಾಂತರದೊಳ್ (?) ೧೬೪

ಪೊಸೆ ಜೆಡೆಯಿರ್ದು ಜಾಡ್ಯಗುಣಮಿಲ್ಲ ವಿಚಾರಿಸೆ ಪತ್ರಮಿರ್ದು ಪ
ತ್ರಸಮಿತಿಯಿಲ್ಲಮಾಱಡಿಯದಿರ್ದೊಡೆ ಮಾಱಡಿಯಿಲ್ಲವೆಲ್ಲಿಯುಂ
ಮಿಸುಪ ರಥಾಂಗಮಿರ್ದು ರಥದಂಗಗಳಲ್ಲಿವುಮಬ್ಜಸಂಕುಳಂ
ಪಸರಿಸುತಿರ್ದುಮಬ್ಜಕುಳಮಿಲ್ಲ ಕೊಳಾಂತದೊಳೇಂ ವಿಚಿತ್ರಮೋ ೧೬೫

ಅನಿಮಿಷದೃಷ್ಟಿಯೂರ್ಧ್ವಮುಖಕುಂಡಲಿ ತುಂಬಿಯ ಘೋಷದಿಂದೆ ಜೀ
ವನಗುಣ ಪೂರ್ದದೂರ್ಧ್ವದಳಮಾಗಿಹ ಕಂಜದೊಳಿರ್ಪ ಹಂಸನಿಂ
ಘನಪರಿಪೂರ್ಣದಿಂ ಸ್ಥಿರವಹಾಸನದಿಂ ವನವಾಶ್ರಮತ್ವದಿಂ
ದನುನಯಶಾಂತಿಯಿಂ ಪೆತಿಯೊಲಿರ್ದುದುವಾವಗಸೊಂದು ಪೂಗೊಳಂ ೧೬೬

ಕಳಹಂಸಯಾನದಿಂ ಶೀ
ತಳಜಲದಿಂ ಸರಸಿಜಾತಸಂತತಿಯಿಂದಂ
ತಳಿತಿರ್ಪ ತೀರಸಹಕಾ
ರಲತಾವಳಿಯಿನಲ್ಲಿ ರಂಜಿಸಿತು ಕಾಸಾರಂ ೧೬೭

ಇದೆ ಮೀನ್ಗಳ್ ಮೀನ್ಗಳುಸ್ವಚ್ಛ ಸುರಮನೊಳಕೊಂಡಬ್ಜವಬ್ಜಂ ಬಳಕ್ಷಾ
ಸ್ಪದಹಂಸಂ ಹಂಸನಕ್ಷತ್ರದ್ಭ ತಲಲಿತಲಸತ್ ಪುಷ್ಕರಂ ಪುಷ್ಕರಂ ತ
ಪ್ಪದಿಳಾಭಾಗಕ್ಕೆ ನೈರ್ಮಲ್ಯಮನೆಸಗೆ ಶರತ್ಕಾಲದಾಕಾಶವೆತ್ತಂ
ದುದೆನಲ್ ಚೆಲ್ವಾದ ಪದ್ಮಾಕರಮನೊಲವಿನಿಂ ಕಂಡು ಕೊಂಡಾಡುತಿರ್ದಂ ೧೬೮

ಜಳಪಕ್ಷೀಧ್ವಾನದಿಂ ಲಕ್ಷ್ಮಿಯ ವಿವಿಧ ಸುಖಾಸೇಕದಿಂ ಕೋಕಕೋಳಾ
ಹಳ ಶೋಭೋತ್ಥಾನದಿಂ ಪಂಕಜಕುವಲಯಸಂತಾನದಿಂ ನಾಡೆ ಪುಷ್ಪೋ
ದ್ವೆಳಲೋಲಾಖ್ಯಾತಿಯಿಂ ನಿರ್ಮಳಮಣಿಮಯಸೋಪಾನದಿಂ ಖೇಚರೀಸಂ
ಕುಳಕೇಳೀಸ್ಥಾನದಿಂ ರಂಜಿಪುದು ಲಹರಿಕೋದ್ದಂಡಮಂಭೋಜಷಂಡಂ ೧೬೯

ಕುಮುದಾಬ್ಜಸ್ಥಿತ ರಾಜಹಂಸಗತಿಯಿಂ ಚೆಲ್ವಪ್ಪಿನಂ ತಣ್ಣನ
ಪ್ಪಮರ್ದಂ ಸಾರ್ದನಿಮೇಷಸಂತತಿಗೆ ಪೆಚ್ಚಲ್ ಮಾಳ್ಪಿನಂ ಕೂಲವಿ
ದ್ರುಮದೊಳ್ಪಿಂದನುರಾಗಮಂ ಪಥಿಕರೊಳ್ ಕೂರ್ತೀವಿನಂ ಚಿತ್ರವಿ
ಭ್ರಮಮಂ ಪುಟ್ಟಿಸುತಿರ್ದುದದ್ರಿತಟದೊಳ್ ತಾನಗ್ಗಳಂ ಪೂಗೊಳಂ ೧೭೦

ಧೀರನರೇಂದ್ರನೀತಿನಯದಂತನಿಶಂ ಕರದಂಡರಂಜಿತಂ
ತಾರಕಿದಾಣದಂತೆ ಸುತಿಸಂತತಿಯಿಂತಿರೆ ಹಂಸಸಂಗತಂ
ನಾರಿಯರಗ್ರಹಸ್ತಚಯದಂತೆ ನಿರಂತರ ಕಂಕಣಸ್ಥಿರಂ
ಸಾರಸಪೇಟಿಗ್ಗಳಿಂ ಸರಸಿ ರಂಜಿಸುತಿರ್ದುದಿಳಾಧಿನಾಯಕಾ ೧೭೧

(ಅಭಿನವದಶಕುಮಾರ ಚರಿತಂ ೧೩–೩೧)

ಪಾವನವನದೊಳ್ ಸಿರ್ಮಲ
ಜೀವನವನಜಾತಷಂಡಮಾರುತಲೀಲಾ
ದಾವನವನಮಧ್ಯಮದೇಂ
ಜೀವನ ವನಮಾಲೆಯಂತೆ ತೆರಂಪೊಳೆಯಿಸಿತೊ ೧೭೨

ವನವರಧವಳಾಂಗದ್ಯುತಿ
ಚರಚರಮೂರ್ಮಿಸ್ಫುರತ್ತಟೋಜ್ವಲಫೇನೋ
ತ್ಕರಕರದೊಳ್ ತಡವಾಗಿರೆ
ಪರಿಪರಿರಂಜಿಸುವದೊಂದು ಕೊಳನಂ ಕಂಡಂ ೧೭೩

ಕೇಸರಸರಸರಜಃಪರಿ
ದೂಸರಸರಮಂ ನಿರೀಕ್ಷಿಸಲ್ ನೃಪವಂಶಾ
ಗ್ರೇಸರ ಸರಭಸನಯನಂ
ವಾಸರಸರಸಿರುಹದಂತಿರೊಪ್ಪಿದುದಾಗಳ್ ೧೭೪

ಸಾರಸ ಸರಸಧ್ವನಿಯಿಂ
ನೀರಜರಜದಿಂ ಮದಾಳಿಗಳ ಗಳರುತಿಯಿಂ
ಸೌರಭರಭಸದಿನದು ಸಂ
ಚಾರಣರಣದೂರ್ಮಿಪದ್ಮವನವನಮಧ್ಯಂ ೧೭೫

ಕೌತುಕವೆನೆ ಪಾಱುವುವಳಿ
ನೀತತಿ ಹಂಸಂ ರಥಾಂಗಮೀ ತಾವರೆಯಿಂ
ದಾ ತಾವರೆಗೀ ತಡಿಯಿಂ
ದಾ ತಡಿಗೀ ಪುಣಿಲಿನಾ ಪುಣಿಲ್ಗಾ ಕೊಳನೊಳ್ ೧೭೬

ಹರಿಯಂತಾ ಹಿಮರೋಚಿಯಂತೆ ಕಮಲೋಪೇತಪ್ರಭಾವಂ ಮಹೇ
ಶ್ವರನಂತಾ ದನುಜಾರಿಯಂತೆ ಕುಮುದಪ್ರೋದ್ಭಾಸುರಂ ಪದ್ಮಮಂ
ದಿರೆಯಂತಾ ಗಿರಿಜಾತೆಯಂತೆ ವರಹಂಸೋದ್ಯುಕ್ತದಿಂದಿಂತು ವಿ
ಸ್ತರಮಾಗಿರ್ದುದು ಚೆಲ್ವುವೆತ್ತುಮನಿಶಂ ಶ್ವೇತಾಂಬುಜಾತಾಕರಂ ೧೭೭

ಕರಿಯಂತಾ ಕಮಲಾಕ್ಷನಂತೆ ಲಲಿತೋದ್ಯದ್ಭದ್ರಸೌಂದರ್ಯಮಾ
ಕರಿಯಂತಾ ಕಮಲಾಕ್ಷನಂತೆ ವರಚಕ್ರಾಲಂಕೃತಾಖ್ಯಾತಮಾ
ಕರಿಯಂತಾ ಕಮಲಾಕ್ಷನಂತೆ ಪಿರಿದುಂ ಪದ್ಮೋಪಯುಕ್ತಪ್ರಭಾ
ಸುರಮಾಗಿಂತು ನೆಗಟ್ತೆವೆತ್ತವು ಕರಂ ಶ್ವೇತಾಂಬುಜಾತಾಕರಂ ೧೭೮

ಸುರಭಿತರುಪ್ರಮೋದಕಮಲಂ ಕಮಲಂ ಕಮಲಾಕರಾಂತ ಬಂ
ಧುರವಿಕಟಪ್ರಕೀರ್ಣಕುಮುದಂ ಕುಮುದಂ ಕುಮುದಪ್ರಹಾರಕಂ
ಪರಹಿತನಪ್ರಕೇತುಮಧುಕಂ ಮಧುಕಂ ಮಧುಕಾಂತಲೋಹಿತಂ
ಸರಸಿರುಹಾಕರಂ ಸುಜನಕಂ ಜನಕಂ ಜನಕಂ ಶುಭೋದಯಂ ೧೭೯

ತುಂಬಿಯ ಬಣ್ಣಮಂ ಕಱಯ ನೆಯ್ದಿಲಬಣ್ಣಮನಂಜೆವಿಂಡುತ
ಳ್ತಿಂ ಬೆಳುವರ್ಣ್ಣಮಂ ಬಿಳಿಯ ಕಂಜದ ಬಣ್ಣಮನೊಂದೆಮಾಡಿತ್ತ್ರಿಯಂ
ತುಂಬಮುಮಾಗೆ ತುಂಬಿದುದು ಕಟ್ಟಿಲೆಗಂ ಶಶಿಕಾಂತಿಗಳ್ಗಮೀ
ಯಂಬುಜಷಂಡಮೀ ಜಗದೊಳಿಲ್ಲವ ಕೊಟಮನುಂಟುಮಾಡದೇ ೧೮೦

(ಲೀಲಾವತಿ ೫-೬೨)

ನೇಸರ್ ಮಿಗೆ ಬಿಸಿಗದಿರಂ
ಪೇಸದೆ ಸಲೆ ಪೇರ್ಗುರ್ಪೆಂಬ ಮರುಕದೊಳಂಭೋ
ಜಾಸನನಂಬುಜನನಮಂ
ಬಾಸಣಿಸಿದೊಲೆಸೆದವಿಡಿದ ತಾವರೆಯೆಲೆಗಳ್ ೧೮೧

ಬಾಲೆಯರುರದೊಳ್ ಕಿಱು
ಸೊಲಿ ಪೋಲುದು ಜಾಱಿ ತೋರ್ಪ ತೆಱದಿಂ ಸರಸೀ
ಮಾಲೆಯೊಳೆಸೆದುವು ನವಪ
ತ್ರಾಳಿಯ ತೆಱಪಿಂದೆ ತೋರ್ಪ ಕಮಲದ ಮುಗುಳ್ಗಳ್ ೧೮೨

ನಳಿನದ ಕರ್ಣಿಕೆಯೊತ್ತಿನ
ಲಳವಡೆ ಕಣ್ಮುಚ್ಚಿ ಮುಗ್ಗಲಿಕ್ಕಿಯಜಸ್ರಂ
ತಳರದೆ ನಿದ್ರಾಸುಖದಿಂ
ಕಳಹಂಸೆಯ ಮಱಗಳಿರ್ಪವಂತಾ ಕೊಳದೊಳ್ ೧೮೩

ಕಡು ಜೇಡ್ದವರೆ ಸೊಗ್ಗಸೋರಸಡಿಗಿಟ್ಟ ಪರ್ಣಸಿಂಹಾಸನ
ಕ್ಕಡರ್ದಿಂಬಂ ಪೆಱಗಿರ್ಪ ಪದ್ಮದಲರಾ ಮಾಡಾವಿಯಂ ನಿಮ್ಮಿ ಮೇ
ಲಿಡಗುಂಟಕ್ಕೆ ಕುಕಿಲ್ವ ಕೋಕರವದಿಂ ಕೇಳಿ ಪೆಣ್ಣುಂಬಿಯಾ
ನಿಡು ಪಾಡಾಲಿಸೆ ರಾಜಹಂಸೆ ಮಿಗೆ ತಾನೊಪ್ಪಲ್ಕೆ ಕಂಡಂ ನೃಪಂ ೧೮೪

ಅಂಬುಜಸೂತ್ರಮೆಂಬ ಪೆಣೆದಾಮಣೆಯಂ ಪಱದಾವಲೆಂಬ ಬ
ಲ್ಗಿಂಬನುಸೊತ್ತಿ ಕಿಟ್ಟಿ ಲತೆಯೆಂಬ ತುರಂಗಮುಮಂ ಪೊರಳ್ಚಿ ಕ್ಷಿ
ತ್ಯಂಬುತರಂಗಮೆಂಬ ಪಱಕಾಱಸಟ್ಟ ಮದಾಳಿಯೆಂಬ ಗುಂ
ಡಂ ಬಱಿವಟ್ಟ ಸೋಪುದು ಸಮೀರಣವಾರಣಮಾ ಪ್ರದೇಶದೊಳ್(?) ೧೮೫

## ವಾಯುವಿನ ವರ್ಣನೆ

ತೀಡಿತ್ತೊಂ[1]ದೊಂದಱಿಂ ತಣ್ಣೆಱೆದುಱುಗಲ ತಾಸುರ್ಟ್ಟಿಸೊಳ್ ಸಂದು[1] ಸಂದೋ
ಲಾಡುತ್ತುಂ ಕೂಡೆ ನೀರ್ವಕ್ಕಿಗಳುಲಿಪುಗಳಂ ಕರ್ಣದೊಳ್ ತಂದುತಂದೀ
ಡಾಡುತ್ತುಂ ತೀರದೊಳ್ ತಳ್ತೆಳಲತೆಗಳ ಪೂಗೊಂಚಲಂ ನಿಂದುನಿಂದ
ಲ್ಲಾಡುತ್ತುಂ ನೀಲಸೀರೇರುಹಸುರಭಿರಸಂ ಸಾರಸಂ ಮಾತರಿಶ್ವಂ ೧೮೬
(ಲೀಲಾವತಿ ೬-೭೭)

ಸರಸಿಯ ನೀರಜಂಗಳ ರಜಂಗಳ ಪೊಂಪುೞಿವೆತ್ತ ತಂಪಿನೊಳ್
ಬೆರಸಿ ಕರಂ ತದಂಗದ ತರಂಗದ ನಿರ್ಮಲಬಿಂದುವೃಂದಮುಂ
ಧರಿಯಿಸಿ ತೀರಸಾರವನ ಭೂರುಹದಗ್ರಮುಮಂ ಪೊರಳ್ಚಿ ಸಂ
ಚರಿಸಿದುದೊಪ್ಪುವೊಂದುಪವನಂ ಪವನಂ ನಿಜ ಮಂದಚಾರದಿಂ ೧೮೭

ತಿಳಿದ ಕೊಳಂಗಳೊಳ್ ಸುೞಿದು ಸೀರ್ಪನಿಯಂ ಬಿಡದೆತ್ತಿಕೊಂಡು ಪೂ
ಗಳ ಪೊಸಗಂಪಿನೊಳ್ ಪೊರೆದು ತುಂಬಿಗಳಿಂಚರದಿಂದರಲ್ದ ಕೆಂ
ದಳಿರ್ಗಳ ತೊಂಗಲೊಳ್ ತೊಡರ್ದು ಕೂಡುವ ನಲ್ಲರ ನೀಳ್ದ ಸೇದೆಯಂ
ಸೆಳೆದೆಲರಲ್ಲಿ ತೀಡಿದುದು ಮೆಲ್ಲನೆ ಮೆಲ್ಲನೆ ಬಂದು ಬಿರ್ದಿನಿಂ ೧೮೮

ಬಿಡದೊಗುವ ಸೋನೆ ಸೋನೆಯ
ಕಡುಗೆಸಱೞೊಳ್ ಜಾಱಿ ಬಿರ್ದು ಮಾವಿನ ಕಯ್ಯಂ
ಪಿಡಿದೆೞ್ದು ಮೆಲ್ಲಮೆಲ್ಲನೆ
ನಡೆದುದು ಕಂಗುರುಡನಂತೆ ನೃಪವನಪವನಂ ೧೮೯

ಕ್ರಮದಿಂದೆ ಶೈತ್ಯ ಸೌರ
ಭ್ಯ ಮಾಂದ್ಯಮೆಂಬ ತನ್ನ ಗುಣದಿಂದೊಳ್ಪಿಂ ರತಿ
ರಮಣನನಲ್ಲಾಡಿಸೆ ಮಂ
ದಮಾರುತಂ ಮೋಹಿಸುತ್ತಲಂಪೆಯ್ತಂದಂ ೧೯೦

ನೆಯ್ದಿಲ್ಗೊಳಂಗಳೆಡೆಯೊಳ್
ತೊಯ್ದೋವದೆ ಸುರಿವ ಪಲವು ನೀರ್ವಕ್ಕಿಗಳಿಂ
ದೆಯ್ದುಣ್ಮುವ ಸೀರ್ಪನಿಯಿಂ
ತೊಯ್ದೊಯ್ಯನೆ ಗಾಳಿ ಕೂಡೆ ತೀಡುತ್ತಿರ್ಕುಂ ೧೯೧

---

ಪಂಪದಿಂ ತಣ್ಣೆರದುರುಗವಲಂ ಮುಟ್ಟಿನೋಳ್ಪಂದು (ಸ)

ಮುಗುಳ ತೊಡಂಬೆ ಗಂಟೊಡೆಯೆ ಪೊಲ್ಲಿಗೆ ಬೆಳ್ಸುಱೆ ಪುಟ್ಟೆ ಘಟ್ಟಿಕೇ
ದಗೆಗಳ ಸೊರ್ಕು ಚೇತರಿಸೆ ಚಾದಗೆಗಂ ಚಿರಮಾಗೆ ರಾಗಮುಂ
ಬೆಗೆ ಕಿಱುವೀಲಿ ಕಣ್ದೆಱೆಯೆ ಸೊಗೆಗೆ ತಣ್ಣಸು ಪುಟ್ಟೆ ಬಿಟ್ಟಬೇ
ಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ ೧೯೨
(ರಾಮಚಂದ್ರಚರಿತಪುರಾಣಂ ೭-೧೨೯, ಮಲ್ಲಿನಾಥಪುರಾಣಂ ೮-೭೬)

ನವನೀಲೋತ್ಪಲ ಲಕ್ಷ್ಮಿಯುಂ ನಗಿಸಿ ಮಲ್ಲೀರಾಮೆಯೊಳ್ ಪೋಳವಾ
ಡಿ ಪನೇಜಾತಿನಿಯುಂ ವಿಡಂಬಿಸಿ ವಿನೋದಂಬೆತ್ತು ಬಂದತ್ತು ಸ
ಬ್ಬ ವಕಾಜಂಗೆಣೆಯಾಗಿ ವಾರವನಿತಾಸೌಭಾಗ್ಯಘಂಟಾರುತಂ
[೧]ಸುವಿಟಸ್ವೇದನ[೧]ವಾದುತ್ತಂ ಕುಸುಮಚಾಪಜ್ಯಾರುತಂ ಮಾರುತಂ ೧೯೩
(ಜಗನ್ನಾಥವಿಜಯಂ ೧೬-೧೧೦; ಸೂಕ್ತಿಸುಧಾರ್ಣವಂ ೮-೩೧೮)

ತೆರೆವೊಯ್ಲಿಂ[೨]ದೆಟ್ಟಿ[೨] ಕಾಸಾರದ ಪರಿಸರದೊಳ್ ನಿದ್ರೆಗೆಯ್ವಂಚೆವಿಂಡಂ
ದರಹಾಸಶ್ರೀಯನಂಭೋಜನಿಗೆ ಪಡೆದು ನೆಯ್ದಿಲ್ಗಳಿಂದುಳ್ಳಲರ್ವಂ
ಬುರುಹಕ್ಕೆಟ್ಟಿರ್ಪ ಭೃಂಗಂಗಳ ಗಱಿಯೆಲರಿಂ ಕೊರ್ಬಿ ಚಂಡಾಲಗೇಯ
ಸ್ವರದೊಳ್ ತಳ್ವೊಯ್ದತಿಸ್ವೈರದೆ ಸುಱಿದುದು ಪ್ರಾಭಾತಿಕಂ ಮಾತರಿಶ್ವಂ ೧೯೪
(ಜಗನ್ನಾಥವಿಜಯಂ ೧೬-೧೩೬; ಸೂಕ್ತಿಸುಧಾರ್ಣವಂ ೮-೪೮೯)

ಯುವತೀಸಂತಾನನಾನಾ ಚಲದಳಕಲಸಲ್ಲಾಸ್ಯಲೀಲಾಪ್ರ[೩]ಬುದ್ಧಂ[೩]
ವಿವಿಧಾಗಾರಾಂಗಣಪ್ರಸ್ಫುರಿತ ಕೃತಕಕಾಸಾರಪಾನೀಯ ಭಂಗೋ
ದ್ಭವಬಿಂದುವ್ರಾತಶೀತಾವರಣಸೊಲವಿನಿಂ ತೀಡಿದಂ ಸ್ತ್ರೀಕು[೪]ಚೋ[೪]ದ್ಯಂ
ನವಕಸ್ತೂರೀಹಿಮಪ್ರೋನ್ಮಲಯಜಘುಸೃಣಾಮೋದಭಾರಂ ಸಮೀರಂ ೧೮೫
(ಗಿರಿಜಾಕಲ್ಯಾಣಂ ೪-೧೨೦; ಸೂಕ್ತಿಸುಧಾರ್ಣವಂ ೪-೧೪೭; ೮-೩೧೮)

ಕಳಿಕಾವ್ರಾತಮನುಂಡು ನೋಡಿ ತಳಿರಂ ತೂಗಾಡಿ ಪೂಗೊಂಚಲೊಳ್
ಸುಱಿಗೊಂಡಾಡಿ ಕಟಿಲ್ಚಿ ಪಣ್ಣೆಲೆಗಳಂ ಬೀಸಾಡಿ ನಾನಾಜನಂ
ಗಳ ವಕ್ತ್ರಕ್ಕೊಡಗೂಡಿ ಪೂತಕೊಳನೊಳ್ ತೇಂಕಾಡಿ ಕಾಂತಾಜನಂ
ಗಳೊಳೋಲಾಡಿ ಬಱಿಲ್ದು ಬಾಡಿ ಸುಱಿದತ್ತಂದೊಂದು ಮಂದಾನಿಲಂ ೧೯೬

ಪಸಿತಾಕೇಶಕಲಾಪ[೫]ಬಂಧ[೫] ಕುಸುಮಾಮೋದಂಗಳಿಂ ಕಮ್ಮಕಂ
ಮನೆ ನಾರೀಸುರತಪ್ರಮೋದ ಬಹಳಸ್ವೇದಾಂಬುವಿಂ ತಣ್ಣತಂ
ಣಸೆ [೬]ಕಾಂತಾಕುಟಿಲಾಳಕಸ್ತನತಟಪ್ರೋ[೬]ದ್ಘಟ್ಟದೊಳ್ ಮೆಲ್ಲನೆ
ಲ್ಲನೆ ತೀಡಿತ್ತು ವಿಳಾಸಿನೀಸದನದೊಳ್ ಬಂದೊಂದು ಮಂದಾನಿಲಂ ೧೯೭
(ಸೂಕ್ತಿಸುಧಾರ್ಣವಂ ೪-೧೪೪; ೮-೩೧೭)

---

[೧]ಸಪಿಸಸ್ಫಾಟಿಕ(ಸ) [೨]ದುರ್ವಿ(ಸ) [೩]ಬಂಧಂ(ಅ) [೪]ಲೋ(ಅ) [೫]ನವ್ಯ(ಸೂ)
[೬]ನಾರೀನಿಜಿದೋನ್ನತಸ್ತನಘಟಪ್ರೋ (ಸೂ)

ತೊಲಗಿಸಿ ಪೋಲುದಂ ಬೆವರಬಿಂದುಗಳಂ ತವೆ ಪೀರ್ದು ನೀಳ್ದ ಕುಂ
ತಳಮುಮನುಯ್ಯಲಾಡಿಸಿ ಮುಖಾಂಬುಜಷಂಡಮನೀಳ್ದುಕೊಂಡುರೋ
ಕುಲಕುಳನಾಡಿ ಮನ್ಮಥಜಯಾದಿಮನಃಪ್ರಿಯನಂತೆ ಸಾರ್ದದೇಂ
ತಳೆದುದೋ ಕಾಂತೆಗುಣ್ಮಿದ ರತಿಕ್ರಮುಮಂ ನವಮಂದಮಾರುತಂ ೧೯೮

ಬಾಲಮೃಣಾಳದೀಸು ಪೊಸಮಾವಿನ ಕೋರಕದಚ್ಚು ನೀಳ್ದ ಪೂ
ಮಾಲೆಯ ಹಗ್ಗಮುತ್ಪಲದ ಕಾವಿನ ಬಲ್ಲೊಗಮುಬ್ಜಪತ್ರದಾ
ಫಾಲಿಗಳೊಪ್ಪೆ ಪೂಡಿ ಪೊಳೆವಂಚೆಗಳಿಂ ನಡೆತಂದುದೊಂದು ತಂ
ಗಾಳಿ ಬೆಡಂಗುವೆತ್ತು ವಿರಹೀಪ್ರಕರದ್ವಿರದಂ ಮಹಾರಥಂ ೧೯೯

ಸಂದಣಿಸಿರ್ದ ಕೇದಗೆಗಳೊಳ್ಗಱಯೊಳ್ ಗಱಸೋಂಕಿ ಕುಂದದೊಳ್
ಕುಂದದ ಲೀಲೆಯಿಂ ಸುೞದು ಕಂದಳದೊಳ್ ದಳಮಂ ಕಳಂಕಿ ಕೈ
ವಂದ ಕದಂಬಪುಷ್ಪದ ಪರಂಪರೆಯೊಳ್ ಪರಿದಾಡಿ ತಣ್ಪು ಕಂ
ಪೊಂದಿರೆ ಬಂದು ತೀಡಿದುದು ಮಾರುತನಾತ್ತಕಳಾಪಿನೀರುತಂ ೨೦೦

(ಜಗನ್ನಾಥವಿಜಯಂ ೮-೨೮)

ಕಳಿಯಲರಂ ಕಟಲ್ಚಿ ಮುಗುಳಂ ನಯದಿಂದಮುರಳ್ಚಿ ಪದ್ಮಿನೀ
ದಳತತಿಯಂ ನುರುಳ್ಚಿ ನಳಿನಾಕರವೀಚಿಗಳಂ ತೆರಳ್ಚಿ ಕೋ
ಮಳಲತೆಯಂ ಮರಳ್ಚಿ ಕೊನೆಯಂ ಮರದಿಂದಗಲ್ಚಿ ಬಿಟ್ಟ ಪೂ
ಗಳನಿಳೆಯೊಳ್ ಪೊರಳ್ಚಿ ಸುೞದಂ ನಳಿನೀರತಮಂದಮಾರುತಂ ೨೦೧

ಸುೞಸುೞಗೊಂಡು ಸುತ್ತಿ ಸುೞದಾಡಿ ವನಂಗಳ ಪೂಗಳಂ
ಕಳಲಿಚಿ ಮೊಗ್ಗೆವೂಗಳನೆ ಹಿಗ್ಗಿಸಿ ಕಂಪುಮನೆತ್ತಿ ಬಳ್ಳಿಯಂ
ಕುಣಿಯಿಸಿ ಪಣ್ಣಪಣ್ಗೊನೆಗಳಂ ನಲಿದಾಡಿಸುತಾಡಿ ರಾಗದಿಂ
ತಿಳಿಗೊಳನತ್ತ ತೀಡಿದುದು ಗಂಧಸಮೀರನದೊಂದು ಲೀಲೆಯಿಂ ೨೦೨

ತಳಿರಂ ಮೆಲ್ಲನೆ ನೂಂಕಿ ಮಾಮಿಡಿಗಳಂ ಚೆಂಡಾಡುತಂ ಕೂಡೆ ಪೂ
ಗಳ ಧೂಳಿಂ ಪೊಱತಯೇಱುತಂ ಸೊನೆಗಳೊಳ್ ನೀರಾಟಮಂ ಮಾಡುತಂ
ಚಳಯಂ ಕೈಮಿಗೆ ಬಪ್ಪ ತುಂಬಿಯುಲಿಯಿಂದಂ ಡಂಗುರಂಬೊಯ್ಸುತಂ
ತಳರ್ದೇಂ ಬಂದುಪೊ ಕಾನನಾನೆಯೊಲವಿಂ ತಂಗಾಳಿ ತನ್ನಿಚ್ಛೆಯಿಂ ೨೦೩

(ಕಬ್ಬಿಗರಕಾವಂ-೯೮)

ಅಲರ್ದಲರ್ದೊಂಗಲಂ ಕುಣಿಸುತಂ ಸೊಸೆಸೋನೆಯನೆಯ್ದೆ ಸೂಸುತುಂ
ತಳಿರ್ಗಳಜುಂಬಿನಿಂ ನುಸುಳುತುಂ ಮಕರಂದಮನಪ್ಪುತುಂ ಕೊಳಂ
ಗಳ ತಡಿಯೊಳ್ ವಿಹಾರಿಸುತೆ ಪಾಡುವ ಸೋಗೆಗಳಂ ಬಿದಿರ್ಚುತುಂ
ಪಲವು ವಿನೋದದಿಂ ಸುೞಿವುದಾ ಬನದೊಳ್ ಮಿಗೆ ಮಂದಮಾರುತಂ ೨೦೪
(ಅಭಿನವದಶಕುಮಾರಚರಿತಂ ೭-೨೦)

ಅಲರ್ದಿರ್ದಂಭೋಜಷಂಡಂಗಳ ಬಹಳಸುಗಂಧದೊಳ್ ಪೊಕ್ಕು ನೆಯ್ದಿ
ಲ್ಗೊಳನೊಳ್ ತುಳ್ಕಾಡಿ ಪೂಗೊಂಚಲ ಪೊದಱುಗಳೊಳ್ ಸಿಕ್ಕಿ ಕಾಂತಾಕಪೋಲ
ಸ್ಥಳಮಂ ತಳ್ಪೊಯ್ದು ಪೀನಸ್ತನಘುಸೃಣಮನಾಲಿಂಗಸಂಗೆಯ್ದು ಲೀಲಾ
ಚಲದಿಂ ಬಂದೆಯ್ದಿ ತೀಡಿತ್ತುಱು ಮಧುಕರಝೇಂಕಾರಕಾಱಂ ಸಮೀರಂ ೨೦೫

ಧೃತಮಾದ್ಯದ್ವಾಮನಾಖ್ಯದ್ವಿರದಮದಜಲಾಮೋದಭಾರಂ ತ್ರಿಕೂಟಾ
ದ್ರಿತಟಾಬ್ಧಿಸ್ವೈರಚಾರಂ ಮಲಯಗಿರಿವಿಹಾರಂ ಚಳತ್ಸಿಂಹಳಸ್ತ್ರೀ
ಶ್ರುತಿಪೂರಂ ತಾಮ್ರಪರ್ಣೀನಿಕಟವನತಟಭೃಂಗಝೇಂಕಾರವಾಂದೋ
ಳಿತಚೋಳೀತಾರಹಾರಂ ಸುೞಿದುದಭಿನವಂ ದಕ್ಷಿಣಾಶಾಸಮೀರಂ ೨೦೬

ಅಳಿಮಾಲಾಕೇಶಮಂ ಪೆಲ್ಲಸೆ ಬರತೆಗೆದಬ್ಜಾನನಾಮೋದಮಂ ಪೀ
ರ್ದು ಲತಾಂಗಾಲಿಂಗನಂ ಸಂಗಳಿಸಿ ಕೃತಕಶೈಲೇಂದ್ರಕುಂಭನ್ನಿತಂಬ
ಸ್ಥಳಮಂ ತನ್ನಿರ್ಝರಾಂಬುಸ್ಮರರಸಮೊಸರ್ವಂತೇಱಿ ನಿಚ್ಚಂ ವನಸ್ತ್ರೀ
ಗೊಲವಂ ಮಾಡುತ್ತಮಿರ್ಕುಂ ಚತುರವಿಟನವೋಲ್ ದಕ್ಷಿಣಾಶಾಸಮೀರಂ ೨೦೭
(ಸೂಕ್ತಿಸುಧಾರ್ಣವಂ ೪-೧೪೧)

ಗಿರಿಜಾಕರ್ಣಾವತಂಸೋತ್ಪಲವಸಲಿವೃತಂ ಪಾರಿಜಾತಪ್ರಸೂನೋ
ದರ ದಿವ್ಯಾಮೋದಮಂ ಬೀರುತಮೆಸೆವ ವೃಷೋದ್ಗೀನ ರೋಮಂಥಫೇನೋ
ತ್ಕರದೊಳ್ ತಳ್ಪೊಯ್ಯುತುಂ ಧೂರ್ಜಟಿನಿಕಟಜಟಾಹೀಂದ್ರಪೀತಾವಶೇಷಂ
ಪರಮಾನಂದಾವಹಂ ಬಂದೆಸಗಿದುದು ಭವಾದ್ರೀಂದ್ರತಾರಂ ಸಮೀರಂ ೨೦೮

ಸುೞಿಗುರುಳೊಳ್ ತೊಡಂಕಿ ವದನಾಂಬುಜಸೌರಭದೊಳ್ ಮುೞುಂಗಿ ಪೊಂ
ಪುೞಿಗೊಳುತಿರ್ಪ ಸೋರ್ಮುಡಿಯೊಳೊತ್ತಿದ ಕತ್ತುರಿಯಂ ಕಲಂಕಿ ಪೆ
ರ್ಚುೞಿಯೊಳೆ ಪೇಲುಂದಂ ಕೊಲಗಮೂಂಕಿ ಕುಚದ್ವಯದೊಳ್ ಪಳಂಚಿ ಪೊ
ಕ್ಕುೞಿಯೊಳಗಾಡಿ ತೀಡಿದುದು ವಲ್ಲಭಸಂಪದಿ ಮಂದಮಾರುತಂ ೨೦೯
(ಸೂಕ್ತಿಸುಧಾರ್ಣವಂ ೪-೧೪೦)

ನಿಱಿಯು ಸೆಱಂಗನೆತ್ತಿ ಮಿಸುಪೊಳ್ದೊಡೆಯೊಳ್ ನಸುಸೋಂಕಿ ಮೇಲುದಂ
ತೆಱೆದು ಕುಚಾಗ್ರದೊಳ್ ಪೊರಳ್ದು ಹಾರಮನೀಡಿಱಿದಾಡಿ ಪೀರ್ದು ಬಾ
ಯ್ದೆಱೆಯನಲಂಪಿನಿಂ ಸವಿದು ತೋರಗುರುಳ್ಗಳನೊಕ್ಕಲಿಕ್ಕಿ ಮೆ
ಯ್ಯೆಱಿಯದೆ ಸೂಳೆಗೇರಿಯೊಳೆ ಸಂಚರಿಪಂ ವಿಟನಂತೆ ಮಾರುತಂ ೨೧೦
(ಸೂಕ್ತಿಸುಧಾರ್ಣವಂ ೪-೧೪೨)

ನಳಿನೀರೇಣುಗಳಂ ಕಟಿಲ್ವಲರ್ಗಳಂ ಕೀರಾಳಿನಾದಂಗಳಂ
ತಳೆದೆತ್ತಂ ಪಟವಾಸಮಂ ಕೆದಱಿತುಂ ಶೇಷಾಕ್ಷತಾನೀಕಮಂ
ತಳಿಯುತ್ತಂ ಪರಸುತ್ತುಮೊಯ್ಯನಿದಿರ್ಗೊಳ್ವಂದದಿಂ ನಂದನಾ
ವಳಿಯಿಂದಂ ವಸುದೇವಸೂನುಗಿದಿರ್ವಂದತ್ತೊಂದು ಮಂದಾನಿಳಂ ೨೧೧
(ಜಗನ್ನಾಥವಿಜಯಂ ೧೪-೫೩)

ಇನಿಸಿದಿರ್ವಂದು ತಂದಲರ್ಗಳೋಳಿಯ ಕಾಣ್ಕೆಯನಿತ್ತು ಕೂಡೆ ತ
ದ್ವನದ ಕೊಳಂಗಳೊಳ್ ತೆರೆಗಳುಣ್ಮುವ ತಣ್ಪನಿಯಿಂದಮರ್ಘ್ಯಮಿ
ತ್ತನುಗತಮಾದ ಭೃಂಗರುತಿಯಿಂ ಪ್ರಿಯಮಂ ನುಡಿದಿಂತು ಬಂದ ಬಿ
ರ್ದಿನನೆನೆ ಮನ್ನಿಸಿತ್ತು ನೃಪನಂ ತ್ರಿಗುಣೋದ್ಧತನಂ ಸಮೀರಣಂ ೨೧೨

ವರುಣವಧೂರತಶ್ವಸಿತಗಂಧವಹಂ ಮಕರೇಶಚಾರುಚಾ
ಮರಮರುತಂ ಜಳೇಶಮಕರೋದ್ಗತಪುಚ್ಛಸಮೀರಣಂ ಜಗ
ದ್ದಿರದನ ಕರ್ಣತಾಳಪವಮಾನನಿದೆಂದು ವಿತರ್ಕಿಪನ್ನಮಾ
ಸ್ಫುರಿತ ದವಾನಳಂ ಸುೞಿದುದೊಯ್ಯನೆ ಪಶ್ಚಿಮ ದಿಗ್ಭವಾನಿಳಂ ೨೧೩
(ಜಗನ್ನಾಥವಿಜಯಂ ೪-೨; ಸೂಕ್ತಿಸುಧಾರ್ಣವಂ ೧೦-೧೪೬)

ಅಣಿಯರಮಾಡಿ ಮೂಡಗಡಲೊಳ್ ತೆರೆಮಾಲೆಯನೆತ್ತಿ ದೇವವಾ
ರಣಕರಶೀಕರೋತ್ಕರಮನಾಂತು ಶಚೀರಮಣಾಭಿಷೇಕವಾಃ
ಕಣನಿಕುರುಂಬಮಂ ತಳೆದು ಬಂದೆಸಗಿತ್ತತಿಶೈತ್ಯಕಾರಣಂ
ಪ್ರಣಯವಿಮುಕ್ತವಲ್ಲಭವಿದಾರಣನಿಂದ್ರದಿಶಾಸಮೀರಣಂ ೨೧೪
(ಜಗನ್ನಾಥವಿಜಯಂ ೧೪-೪; ಸೂಕ್ತಿಸುಧಾರ್ಣವಂ ೧೦-೨೩೮)

ಎಳೆಲತೆಯೆಂಬ ನರ್ತಕಿಯನಾಡಿಸಿ ತುಂಬಿಗಳೆಂಬ ಗಾಯಕಾ
ವಳಿಯನಲಂಪಿನಿಂದೊಲೆದು ಪಾಡಿಸಿ ಕೂಡಿ ಬಟಿಲ್ದು ನೋಟ್ಟಿ ಪಿಂ
ಗಳ ಸಲಪಿಂದ ಜೇಡಿಸಿ ವಿನೋದದ ರಾಜಕುಮಾರಲೀಲೆಯಂ
ತಳೆವುದು ತತ್ಪುರೋಪವನವೀಥಿಯೊಳಾಡುವ ಮಂದಮಾರುತಂ ೨೧೫

ತಾವರೆಯೊಳ್ ಮಲಂಗಿ ತೆರೆದೂಗುತಮೊಯ್ಯನೆ ದೂರಿಸಲ್ಕೆ ತಾಂ
ಶೈವಲದೊಟ್ಟಲಿಂದೆ ಮಕರಂದದ ಕಣ್ಬಸಿಯೊಕ್ಕಲರ್ ಪರಾ
ಗಾವಳಿಗೊಂಡು ಸಿಂದು ಮಿಗೆ ಪದ್ಮದ ಪತ್ರದಿಶೋಕಮಾಗೆ ಕೇಳ್
ಭಾವಕಿ ಬಂದು ತೀಡುತಿದೆ ತೆಂಕಣತೆಂಬೆಲರೆಂಬ ಬಾಲಕಂ ೨೧೬

ಪಂಕಜಗಂಧದೊಳ್ ಕುಸುಮಸೌರಭದೊಳ್ ಮಕರಂದರೇಣುವಿಂ
ಸಂಕರಮಾಗಿ ಭೃಂಗಪಟಲಂಗಳ ಸುಣ್ದನಿಯಿಂ ಸಮಂತು ಕೊಂ
ಡುಂ ಕರಮೊಪ್ಪಿ ದಂಪತಿಗಳಿಂ ಪೊಜಪೊಣ್ಮುವ ಸ್ವೇದಬಿಂದುವಂ
ಭೋಂಕನೆ ತೀರ್ಚಿ ಸುತ್ತಲೊಲೆದಾಡಿತು ತೀಡಿತು ಮಂದಮಾರುತಂ ೧೧೭

ವನವಲ್ಲೀಲಾಸ್ಯದಿಂ ಚೀಕೊರ್ಳವಿಯುನನುಬದ್ಧಾಳಿಯಿಂ ವಾರನಾರೀ
ಜನಮೊಂದಾರಾಲಯೋದ್ಯದ್ಗತಿ ಚತುರತೆಯಿಂ ವಾಚಿಯಿಂ ಸೌರಭಾಲಂ
ಬನದಿಂ ಸೌಂದರ್ಯದಿಂ ಲಾಲಿತಕುಶಲವಸಾಂಗತ್ಯದಿಂ ರಾಪುಸೀಮಂ
ತಿನಿಯಂ ಪೋಲ್ತಲ್ಲಿ ಸಿಜ್ಜಂ ಸುಬಿವುದು ಪವನಂ ಸ್ವೈರಚಾರಂ ಸಮೀರಂ ೨೧೮

ಸ್ತನಚೇರಾಂಶುಕಭಾರಮಂ ಸೆಳೆಯುತಂ ರೋಮಾಂಚಮಂ ಸ್ವೇಗಳೊಳ್
ತೊನೆಸುತ್ತುಂ ಕುರುಳಂ ಚಲಂಪೆಗೆಯುತುಂ ಶೃಂಗಾರಸಾರಸ್ಮಿತಾ
ನನ[1]ಪಂಕೇಜದ ಕಂಪನೀಳ್ದುಕೊಳುತಂ[1] ಮಂದಾನಿಳಂ ಸೋಂಕೆ ತ
ನ್ನಿನಿಯಂ ಬಂದಮರ್ದಪ್ಪಿದಂತೆ [2]ಸತಿ ತಾಂ[2] ಕಣ್ಗಿಯ್ದುಳಪ್ಪನ್ನೆಗಂ ೧೧೯
(ಲೀಲಾವತಿ ೧೭-೪೦)

ಮಕರಾಂಕಾವಾಸಭೋಗಪ್ರಹತಪಣವಸಂವಾದಿ ಸೌಭಾಗ್ಯಘಂಟಾ
ಸಿಕುಪುಂಬಾಂದೋ[3]ಳಿತಾಂಗಂ[3] ಯುವತಿಕಬರಿಕಸ್ತೂರಿಕಾರೇಣುಸಂವಾ
ಹಕಚಂಚತ್ಕೀರಪಾರಾವತಪರಿತಸುರಾದ್ರೀಂದ್ರಧಾಮಂ ಮಾಟಕೂಟಾಂ
ತಿಕ ಹೇಳೋದ್ಯಾನಪಾಳಂ ಸುಟಿಖಿದುಮ ಗಣಿಕಾವೇಶ್ಮಚಾರಂ ಸಮೀರಂ ೨೨೦
(ಅನಂತನಾಥಪುರಾಣಂ ೧-೧೧೩; ಸೂಕ್ತಿಸುಧಾರ್ಣವಂ ೪-೧೩೮)

ಗಣಿಕಾರತ್ಯಂತಸುಸ್ಪಿಸ್ಖಲನಚತುರಸಂಭೋಜಕಿಂಜಲ್ಕಸಂಚಾ
ರಣಶೀಲಂ ಪುಷ್ಪವಲ್ಲೀನಟನಪಟುನಟಂ ಸಂಚ[4]ರಜ್ಜಂಚ[4]ರೀಕ
ಕ್ವಣಸಜ್ಯಾಸಂಗಚಿತ್ರೋದ್ಭವಭುವನಜಯೋತ್ಪಾದನಪ್ರೌಢಸೇನಾ
ಗ್ರಣಿ[5]ಚೇತಃ[5]ಪ್ರೀತಿಯಂ [6]ಸೆರ್ಚಿ[6]ಸುವುದು ಪವನಸ್ಸ್ವೈರಚಾರಂ ಸಮೀರಂ ೨೨೧
(ಮಲ್ಲಿನಾಥಪುರಾಣಂ ೨-೪೦; ಸೂಕ್ತಿಸುಧಾರ್ಣವಂ ೪-೧೩೯)

---

[1]ಕಂಪಂವಳಿಪುಕೊಳುತ್ತೆ ಪರಿಪಂ(ಸ) [2]ಸುಖಿದಿ(ಅ) [3]ಳಲಿಲಾ(ಸೂ) [4]ರಂ ಸರಜ(ಸ)
[5]ಚಿತ್ರ(ಸ) [6]ಪುಷ್ಟಿ(ಸ)

ಮುಗುಳ್ಗಳ ಕಂಪಿದಚ್ಚನನೆಗಂಪಿದು ಪೂಗಳ ಕಂಪಿದಲ್ತು ಮ
ಲ್ಲಿಗೆಗಳ ಕಂಪಿದುಬ್ಬರಿಪ ಜಾತಿಯ ಕಂಪಿದು ಬೇಱೆವೇಱೆ ಸಂ
ಪಗೆಗಳ ಕಂಪಿದೆಂಬವೊಲಳಿಸ್ವನಮೊಪ್ಪಿರೆ ಬಂದು ಕಂಪನೋ
ಲಗಿಸಿದುದೆಯ್ದೆ ಭೂಪತಿ[1]ಗದೇನೆಲರೋ[1] ಪೊಸಮಾಲೆಗಾಱನೋ ೨೨೨

(ಲೀಲಾವತಿ ೨-೨೭; ಸೂಕ್ತಿಸುಧಾರ್ಣವಂ ೮-೩೧೧)

ಸಮುದಿತ ಸಂಭ್ರಮಾಗೆ ವನಲಕ್ಷ್ಮಿಗೆ ಕರ್ದತಮಾಳನೀಳಕೇ
ಶಮನಿಗಿ ಸುಳ್ಗುರುಳ್ವಿ (?) ಕಮಳಾನನಮಂ ಸ್ತಬಕಸ್ತನಾಗ್ರದೊಳ್
ರಮಯಿಸಿ ಪಾಟಲಾಧರಸುಧಾರಸಮಂ ಸವಿದಬ್ಜಿಱಂ ಲತಾಂ
ಗಮನವರ್ದಪ್ಪಿ ದಕ್ಷಿಣವಿಟಂಗೆಣೆಯಾದುದು ದಕ್ಷಿಣಾನಿಳಂ ೨೨೩

ಲತಿಕಾಲಾಸ್ಯೋಪದೇಶವ್ಯಸನಿ ನವಲತಾಂದೋಳಿಕಾಮೋದಸಂತ
ರ್ಪಿತ ಚಂಚಚ್ಚಂಚರೀಕಂ ಕಮಲವನರಜೋರಂಜಿತಾಂಗಂ ಪುಳಿಂದೀ
ರತಘರ್ಮಸ್ವೇದವಿಚ್ಛೇದನಪಟು ಮೃಗಸಂದೋಹರೋಮಂಥಫೇನೋ
ದ್ಗತಬಿಂದುಸ್ಯಂದಿ ತೀಡಿತ್ತೆಸಗಿ ಸುರಭಿಸ್ವೈಭಾತಿಕಂ ಮಾತರಿಶ್ವಂ ೨೨೪

(ಕಾದಂಬರಿ ಪೂ. ಭಾ. ೧೪೫; ಸೂಕ್ತಿಸುಧಾರ್ಣವಂ ೯-೯)

ವನಕೇಳೀಶ್ರಾಂತಕಾಂತಾಜನದ ಮುಖಸರೋಜಂಗಳೊಳ್ ಪಾಯ್ದು ತುಂತು
ರ್ವನಿಯಂ ಪೀಱುತ್ತೆ ಮತ್ತಶ್ರಮಸುರಭಿಪಯೋಬಿಂದುವಂ ತಂದು ನೀರ್ವೂ
ವಿನ ಕಂಪಂ ಕೊಟ್ಟು ಕೊಬ್ಬುತ್ತಭಿನವಮಧುರಾಮೋದನಿಶ್ವಾಸದಿಂ ತ
ಣ್ಣನೆ ತೀಡಿತ್ತೊಂದು ಭೃಂಗದ್ವಿಗುಣಿತ ಗಣಿಕಾಕೇಶಭಾರಂ ಸಮೀರಂ ೨೨೫

(ಲೀಲಾವತಿ ೧೩-೧೧೩; ಸೂಕ್ತಿಸುಧಾರ್ಣವಂ ೧೨-೪)

ಸುರಗಿಯ ಕಂಪಿದಿಲ್ಲಿನಿಸಿ ಪೊನ್ನೆಯ ಕಂಪ ಕಳಲ್ಚಿ ಜಾತಿಯೊಳ್
ತೆರಳದ ಕಂಪ ಬೇರ್ಪಡಿಸಿ ಸಂಪಗೆಗಂಪುಗಳಿಲ್ಲವಾಗಿ ನೀ
ರುಹದ ಕಂಪುಗಾಣಿಸದೆ ಕೇದಗೆಗಂಪುಗೆ ಬೇಱೆ ಕಂಪದಾ
ನಿರಲೆಲರಿಂದೆ ಕೊಳ್ಪಲರ್ಗೆ ಕಂಪಿನ ಪಲ್ಲಟಮಾದುದೆತ್ತಲುಂ ೨೨೬

ಕರ್ಪುರದೊಟ್ಟುಗೊಂಡು ಮಿಗೆ ಕಸ್ತುರಿರಾಶಿಯ ಮಾರುಗೊಂಡು ಪೇ
ಲ್ವಪ್ಪೆಗಳಪ್ಪ ಕುಂಕುಮವನೊಲ್ದೊಡಗೊಂಡು ಕಡಂಗಿ ಬರ್ಪಿನಂ
ತಪ್ಪಿ ಜವಾಜಿಯೊಳ್ಗೆಸಱಿನೊಳ್ ಜಿಗುಳ್ತಂ ಪನಿನೀರ ಕಾಲ್ಗಳಿಂ
ಕುಪ್ಪಳಿಸುತ್ತೆ ಗಂಧವಹದಂ ಬರೆ ಮೆಚ್ಚುತಲಪ್ಪಿದಂ ನೃಪಂ ೨೨೭

---

[1]ಗೆತೆಂಬಲರೋ(ಸ)

ಮುಗುಳಂ ಮುದ್ದಿಸಿ ಮುಟ್ಟಿ ಮೊಗ್ಗೆಯ ಕರಂ ಮುಂಡಾಡಿ ಪೂಗೊಂಚಲೊಳ್
ಸೊಗವಿಟ್ಟೊಪ್ಪುವ ಸುಗ್ಗಿಗಂಪನೆಳದೊಯ್ದು ಪೋಪ ಪೆಣ್ದುಂಬಿಯುಂ
ಸೊಗಸಿಂದಂ ಬೞಿಸಂದು ತಬ್ಬುವುಱುಕಿಂದಾ ಕಾಲ್ಗಳೊಳ್ ಬಿಕ್ಕುವೊ
ಪ್ಪುಗೆಯೊಳ್ ಸಿಕ್ಕಿಸುತೆಯ್ದತಿಂಚರಚಯಂ ತಂಗಾಳಿ ಭೃಂಗಾಳಿಯೋಲ್ ೨೨೮

ಸಸಿಯಳ್ಳಾಡಿಸಿ ಹೂವಿನೊಟ್ಟುಗೆದಱುತ್ತುದ್ಯಲ್ಲತಾನೀಕಮುಂ
ನಿಸುಗುತ್ತಂಗಜಯೋಗದಾ ಪ್ರಿಯರ ಕಣ್ಣೊಳ್ ಗಂಧದಾ ಧೂಳಿವೊ
ಯ್ದು ಸರಸ್ಸಂಗಕೆ ಧೀಂಕಿಡುತ್ತೆ ಮರವಣ್ಣಂ ಪೊಯ್ದು ಸೆಂಡಾಡುತಂ
ಶಿಶುಭಾವಂಬೊಲೆ ತೀಡಿದತ್ತು ಪವನಂ ಸರ್ವರ್ತುಕೋದ್ಯಾನದೊಳ್ ೨೨೯

ಪರಮ ಪವಿತ್ರನಂತೆ ಧರೆ ನೀರಜಮಾದುದು ತತ್ಪವೇದಿಯುಂ
ತಿರೆ ಜಲಸಂಕುಳಂ ತಿಳಿದುದುಜ್ಜ್ವಲಮಾದುದು ದಿಙ್ಮುಖಂ ಪ್ರಸ
ನ್ನರ ಮುಖದಂತೆ ಭಾಕ್ತಿಕನವೋಲ್ ಬಲವಂದುದು ವಹ್ನಿಸಂಗದಿಂ
ಸುರಿವರಲ್ಗಂಪನಾಂತು ಜಡಿವಂತಡಿಯಿಟ್ಟುದು ಮಂದಮಾರುತಂ ೨೩೦

(ಅನಂತನಾಥಪುರಾಣಂ ೫-೩)

ತಿಳಿಗೊಳದೊಳ್ ತೆಱಂಬೊಳೆದು ತಣ್ಣನೆ ಪಣ್ಣನೆ ಬಂದ ಮಾಮರಂ
ಗಳ ತಳಿರ್ಜೊಂಪದೊಳ್ ಸುಸುಳ್ದು ಮೆಲ್ಲನೆ ಮೆತ್ತನೆ ಮೋಗೆ ಹಿಗ್ಗಿ ಪೂ
ಗಳ ಪೊಸಗಂಪನಾಂತು ಸುೞಿದಮ್ಮನೆಕಮ್ಮನೆ ತೀಡೆ ಜೆಟ್ಟಮುಂ
ಬಳೆವುದು ತತ್ಪುರೋಪವನವೀಥಿಯೊಳಾಡುವ ಮಂದಮಾರುತಂ ೨೩೧

ಬಿರಯಿಗಳಂಜುತಾರೆ ಪಗಲಾಣ್ಮನ ಪ್ಪ ಬಿಸುಪೇಱಿ ಮಾಗಿ ಜೆ
ಚ್ಚರದೊಳೆ ಪಾಱಿ ನೀರ್ದೆಗೆದು ಬೆಂಚೆಗಳೊಳ್ ಕೆಸಱಾಱಿ ತುಂಬಿಗಳ್
ಮೊರೆದಲರತ್ತ ಜಾರೆ ನನೆಯಂತರದಿಂದದಿರ್ಮುತ್ತೆ ಪಾಱಿ ತಾ
ವರೆ ತಲೆದೋಱಿ ತೀಡಿದುದು ತೆಂಕಣಗಾಳಿ ಬಸಂತದೇೞ್ಗೆಯಿಂ ೨೩೨

ಪ್ರಾಲೇಯಾದ್ರಿನವಪ್ರಸೂನಭಿದುರಂ ಗಂಗಾಸರಿಲ್ಲೋಲಕ
ಲ್ಲೋಲಾಂಭೋಲವಶೀಕರಂ ಚಿರರತಿಶ್ರಾಂತಾಮರಸ್ತ್ರೀಕುಚ
ವ್ಯಾಲಿಪ್ತಾಗರುಕುಂಕುಮದ್ರವಹರಂ ಮಾದ್ಯತ್ಪಿಕಾಲಾಪ ವಾ
ಚಾಲಂ ಮಾರುತನೊಯ್ಯನೂದಿ ಕಳೆದತ್ತಾದಂ ಪರಿಶ್ರಾಂತಿಯಂ ೨೩೩

(ಕಾವ್ಯಾವಲೋಕನಂ ೯೪೭)

ಸುರಯಿಯ ಸೋನೆ ಸಂಪಗೆಯ ಸೂಸುವಲರ್ ಮಲ್ಲಿಗೆವೂವಿನಚ್ಚ ಬೆ
ಳ್ಪರಿ ಸುರಹೊನ್ನೆಯೊಂದಿನಸಿ ಪೊಲ್ಲಿಯ ಬಲ್ಮುಗುಳಾಳಿ ಕೊಳ್ಪ ಪಾ
ದರಿಯರ[1]ಲೇಱು[1] ಕೇಸರದ ತಂದಲಗುಂಪಲೆಯಾಗಿ ಸುತ್ತಲುಂ
ಸುರಿಯೆ ಸಡಲ್ಚಿ ಬೀಸಿದುದು ತೆಂಕಣಗಾಳಿ [2]ನವಾಮ್ರ[2]ಲೇಖೆಯಂ ೨೩೪
(ಲೀಲಾವತಿ ೬-೧೩೪)

ನೀಲದ ಕಂಪನೊಟ್ಟೆ ನಳಿನಂಗಳನಳ್ಕಿಸಿ ಜಿಳ್ಮುಗಿಲ್ಗಳಂ
ತೊಲಪುಸೆತ್ತುವಂತಲೆದು ಸೋಗೆಯ ಪೀಲಿಯ ಜೇರನೆತ್ತಿ ಹಂ
ಸಾಳಿಯ ತುಪ್ಪುಟಂ ತುಱಿದು ಪಶ್ಚಿಮದಿಂ ಬಡವಾಗಿ ಬರ್ಪ [3]ಮೆ
ಲ್ಲಾ[3]ಳಿಯನೊತ್ತಿ ತೀಡಿದುದು ಮೂಡಣಗಾಳಿ ಮಹೀಪ್ರದೇಶದೊಳ್ ೨೩೫
(ಲೀಲಾವತಿ ೯-೨)

ಮೃಗಮದದೊಳ್ ಪೊರಳ್ದು ಪೊಸಸೌಸವದೊದ್ದೆಯೊಳಟ್ಟು ಬಿಟ್ಟು ಮ
ಲ್ಲಿಗೆಯ ಪರಾಗದೊಳ್ ಪೊರೆದು ಕಪ್ಪುರದೊಳ್ ಸುಱಿಗೊಂಡು ಧೂಪದೊಳ್
ಪೊಗೆಗಳನೆತ್ತಿ ಪೂವಲಿಗೆ ಪಾಯ್ದು ಮದಾಳಿಯ [4]ಕಂಪನಿಂಪನಾ[4]
ವಗಪಡೆ ಸೂಱಿಗೊಂಡೆಸೆಗಿತಿಮ್ಮನೆ ಕಮ್ಮನೆ ಮಂದಮಾರುತಂ ೨೩೬
(ಲೀಲಾವತಿ ೧೦-೩೯)

ಪೂವಲಿಗೆಯ್ದು ಕುಂಕುಮದ ಕೇಸರಮಂ ತುಳಿದಂಗಣಂಗಳೊಳ್
ತೀವಿ ಜಗುಳ್ದು ಕತ್ತುರಿಯ ಸಿಂಪಿಣಿಯೊರ್ಜೆಯೊಳಟ್ಟು ಬೀದಿಗೊಂ
ಡೋವದೆ ಪಿಟ್ಟುಗೆಯ್ದು ಕಡೆಯಿಕ್ಕಿದ ಕರ್ಪೂರದೊಳ್ ಪೊರಳ್ದು ಬಂ
ದಾವಗಮುಪ್ಪ ಗುಂಪಣಪಘೂರ್ಣಿಮಂದಿರಮಂದಮಾರುತಂ (?) ೨೩೭

ಕಿಱುಗಿಡು ಧೂಳಿಯೊಳ್ ಮುಸುಕೆ ಬಲ್ಮರಗಳ್ ಸೆಳೆದಂತೆ ಕೊಂಬುಗಳ್
ಮುಱಿಯೆ ಶಿಲೋಚ್ಚಯಂ ತೊಲಗೆ ವಾರಿಧಿಗಳ್ ಕದಡೇೞಲ್ ಪಕ್ಕಿಗಳ್
ಗಱಿಮುಱಿವೋಡಿ ಬೀೞಲ್ ನೆಲನಾವುದು ಪುಷ್ಕರಮಾವುದೆಂಬಿನಂ
ನೆಱೆಯಱಿಯಲ್ಕೆ ಬಾರದಿರೆ ಬೀಸಿದುದುರ್ವಿಗೆ ಚಂಡಮಾರುತಂ ೨೩೮

ಧರೆಯಿಂದುರ್ವಿದ ರೇಣುವಂ ಪೊಗೆದು ಭೋರ್ಭೋರೆಂದುಮಾಕಾಶಮಾ
ಗುರ್ರವಂ ಮುಟ್ಟಿಸಿ ನೀರ್ಗಳಂ ತಡೆದು ಶೈಲಾಗ್ರಂಗಳೊಳ್ ನಿಂದು ಡೊಂ
ಗರಗಲ್ಲಂ ಕಳೆಯಂತುರುಳ್ಚಿ ಮರದಾಲಂಬೀೞ ನುರ್ಗೊತ್ತಿ ಮಾ
ಮರನಂ ತಗ್ಗಿ ತಗುಳ್ದು ಬೀಸಿದುದತಿಪ್ರಸ್ಫಾರಿತಂ ಮಾರುತಂ ೨೩೯

---

[1]ಖೇಱು(ಅ) [2]ಸನಾಭ್ರ(ಅ) [3]ಮೇಘಾ(ಸ) [4]ಬಾಯುಕಂಪನಾ(ಇ)

ತೆಂಗಿನ ತೊಂಗಲಂ ಮುಱಿದು ಕೌಂಗುಗಳಂ ತಳಿಪೋಲುಮಾಡಿ ಚೂ
ತಂಗಳ ಪಣ್ಗಳಂ ಕೆಡಪಿ ಬಾೞೆಯ ಬಗ್ಗಿಸಿ ಮಾದಲಂಗಳು
ತ್ತುಂಗಫಲಂಗಳಂ ಧರೆಯೊಳಪ್ಪಳಿಸುತ್ತೆಳೆಮಿಂಚಿಯೀಳೆ ನಾ
ರಂಗದ ಪಣ್ಗಳಂ ಕೆದಱಿ ಬೀಸಿದುದಾ ಬಿಱುಗಾಳಿ ತೋಂಟದೊಳ್ ೨೪೦

ತಱಗೆಲೆ ಕೊಳ್ಳದತ್ತಿಡಿಯೆ ಧೂಳಿನೆಲಂ ಸಱುವೇೞೆ ಧೂಳಿಯಿಂ
ಕಿಱುಗಿಡುಗಳ್ ಮುಸುಂಕೆ ಮಳಲೊಟ್ಟಲು ಪಾಱುರೆ ಬಟ್ಟೆಗಣ್ಣೆ ಪಾ
ಸಱುಯೆಡೆ ಗಂಟೆನಿಂದೊಡೆಯೆ ತೂರಿಲುನಿರ್ಭರಗೊಂಬ ಪಾಂಥರ
ಕ್ಕುಱೆ ಬಿಱುಗಾಳಿ ಬೀಸಿದುದು ಕಾರೊಳಪೊಕ್ಕ ನಿದಾಘದುತ್ಯದೊಳ್(?) ೨೪೧

ಕೆದಱುತ್ತುಂ ಮಣಲಂ ತೆಮಳ್ದಿಕೊಳುತುಂ ಭೂರೇಣುವಂ ತುಳ್ಕುತುಂ
ನದನದ್ಯಚ್ಛಜಲೌಘಮಂ ಮುಱುಯುತಂ ಭೂಜಂಗಳಂ ನುರ್ಗುತುಂ
ಪೊದಱಂ ಸೀಳುತಮೆಯ್ದೆ ವಂಶವನಮಂ ಕಾಡಾನೆಯಂ ಪೋಲ್ತು ಬೀ
ಸಿದುದೆತ್ತಂ ಲಯಕಾಲಕಾಲನಿಚಲತ್ ಭೀಮಾರುತಂ ಮಾರುತಂ ೨೪೨
(ಕಾವ್ಯಾವಲೋಕನಂ ೪೮–)

ಮರನಂ ಮರನಿಂ ಮೋದುವ
ಗಿರಿಯಂ ಗಿರಿಯಿಂದೆ ಪೊಡೆವ ಕಡಲಂ ಕಡಲೊಳ್
ಬೆರಸುವ ಭರದಿಂ ಸರ್ರನೆ
ಬಿಱುಗಾಳಿ ಬೀಸಿದುದು ಧಾರಿಣಿಯೊಳ್ ೨೪೩

## ವನವರ್ಣನೆ

ಕನಕದ ನುಣ್ಣೆಲಕ್ಕೆ ಮಿಗೆ ಕತ್ತುರಿಗೊಬ್ಬರಗೋಡಸಿಟ್ಟು ಪೊಣ್
ಘನ ಪಸಿನೀರ ಕಾಲ್ವೊಗಿಸಿ ಕತ್ತುರಿಯ ಕಟ್ಟೆಯ ಕಟ್ಟಿ ಚಂದ್ರಮಂ
ವಿನಯಮನೀವ ಬಾಲೆಯರ ಸಂಗಡಮಾಡಿಸಿಯಿಕ್ಷುಚಾಪದೇ
ವನ ವನಮೆಂದು ಪಾಲಿಸೆ ಸುಮೋಹನಮಾದುದು ತದ್ವನಾಂತರಂ ೨೪೪

ಘನ ಕಾಳಾಗರು ಧೂಪ ದೂಳಿಮಲಿನಂ ವ್ಯೋಮಂ ತ್ರಿಸಂಧ್ಯಾನಕ
ಧ್ವನಿಶಬ್ದಾರ್ಘದಿ ದಿಕ್ತಟಂ ಶಿಖರಮಾಣಿಕ್ಯತ್ರಪೋಜ್ಜೃಂಭಿತ
ದ್ಯುನದೀವಾರಿಜಮೊಪ್ಪುತಿರ್ಪುದು ಸುಧಾರಾಗೋತ್ಕರಂ ನರ್ತಕೀ
ಜನಮೋಲ್ಲಾಸಿತ ಕೇಕರಂ ವಿವಿಧಲೀಲೋದ್ಯಾನ ಶೋಭಾಕರಂ ೨೪೫

ತರುಣತಮಾಲತಾಲವಕುಳಂ ಮುಕುಳಂ ಘನಸಾರಪೂರಭಾ
ಸುರತರ ತೆಂಗು ಕೌಂಗು ವರಸಾಲ ರಸಾಲವಶೋಕೆಶಾಖೆ ವಿ
ಸ್ತರತರವತ್ತಿ ಮತ್ತಿ ಪನಸಂ ವನಸಂಪಗೆ ಬಾಗೆ ನಾಗಕೇ
ಸರತರು ಜಂಬು ನಿಂಬ ತಿಲಕಂ ಕಲಿಕಂಗಳಿನಿರ್ದುದಾ ವನಂ ೨೪೬

ಕರಮೆಸೆವೀಳೆ ಬಾೞೆ ನವಪೂಗಚಯಂ ಪನಸಾಳಿ ತಾಳಿ ಭಾ
ಸುರ ಸುರಹೊನ್ನೆ ಜಂಬು ಘನನಿಂಬಕುಳಂ ಬಕುಳಂ ಸುಕೌಂಗು ತೆಂ
ಗುರುತರ ಮಾದುಳಂಗತತಿ ಚೂತಕುಜಾತವಶೋಕೆ ಪೂಗೊಳಂ
ಕುರವಕನತ್ತಮಾಳ ಕೃತಮಾಳ ತಮಾಳದಿನೊಪ್ಪುಗಾ ಬನಂ ೨೪೭

ಸಿರಿತಂದಿಕ್ಕಿದಶೋಕೆ ವಾಗ್ವನಿತೆಯಿಟ್ಟಾವ್ರಂ ಶಚೀದೇವಿಯಿ
ಟ್ಟರನೇರಿಲ್ ಮಿಗೆ ರಂಭೆಯಿಟ್ಟ ಕದಳೀಷಂಡಂ ಸುರಸ್ತ್ರೀಯರಿ
ಟ್ಟರವಿಂದಾಕರಮೂರ್ವಶೀವಧು ಸರಾಗಂ ತಂದ ಪೂಗದ್ರುಮಂ
ತರದಿಂದಂ ರತಿಯಿಟ್ಟ ದಾಡಿಮಕುಳಂ ಸರ್ವರ್ತುಕೋದ್ಯಾನದೊಳ್ ೨೪೮

ತಿಂತಿಣಿವಣ್ಣನಾಂತ ಕದಳಂ ಪದವಣ್ ಪಡೆದೀಳೆ ಬೇಡೆವ
ಣ್ಣಂ ತುೞುಗಿರ್ದ ದಾಡಿಮಚಯಂ ಕಿಸುವಣ್ ಮುಸುಕಿರ್ದ ನಾರಗಂ
ಮುಂ ತನಿವಣ್ ಪೊಡಟ್ಟಿಡಿದ ಮಾವೆಳಗಾಯ್ ಪೊೞೆಱೆತ್ತತೆಂಗು ಜೇ
ರಿಂ ತುದಿಮುಟ್ಟೆ ಕಾಯ್ತ್ತ ಪಲಸೆಂಬಿವು ಕೂದವು ನಂದನಂಗಳೊಳ್ ೨೪೯

(ಜಗನ್ನಾಥವಿಜಯಂ ೨–೧೫; ಸೂಕ್ತಿಸುಧಾರ್ಣವಂ ೪–೩೬)

ಪುದಿದ ಫಲಂಗಳಿಂದೊಲೆವ ತೆಂಗಿನ ತಿಂಥಿಣಿ ಕೌಂಗಿನೊಗ್ಗು ಲುಂ
ಗದ ಪೊದೞೆಳೆಯಿಟ್ಟೆಡೆ ನವಾಮ್ರದಿೞುಂರನೇೞುಲಾಗರಂ
ಕದಳಿಯ ಕಂಟೆ ಕಮ್ಮರದ ಸಂದಣಿ ದಾಡಿಮದೊತ್ತು [1]ಗೋಸ್ತನೀ
ಸದನದ ಸಂಚಯಂ[1] ಪನಸಿನುಬ್ಬರಮಲ್ಲಿ ಕರಂ ಮನೋಹರಂ ೨೫೦

(ಸೂಕ್ತಿಸುಧಾರ್ಣವಂ ೪–೩೭)

ಪಳಸಿನ ಜಂತೆ ಚಂದನದ ಸಂದಣಿ ಬಾೞೆಗಳೋಳಿ ಮಾವಿನಾ
ವಳಿ ನನೆಯೋದ ಪಾದರಿಯಬೀದಿ ಲವಂಗದ ಪೊಂಗು ನೀಳ್ದ ನೆ
ಯ್ದಿಲಪೊಲಸಬ್ಬದಾಗರವಶೋಕದನೀಕಿನಿಯೀಳೆಯೋಳಿ ಕ
ತ್ತಲಿಸೆಳವಳ್ಳಿ ಮಲ್ಲಿಗೆಯ ವಲ್ಲರಿ ಚೆಲ್ವೆಸೆದಿರ್ದುದಾ ಬನಂ ೨೫೧

---

[1]ಸುತ್ತಲುಂ ಸಪಸುಪಮಾಪಲಂ(ಸೂ)

ರಸಮಂ ಸಾಲಿಡುತಿರ್ಪ ದಾಡಿಮಫಲಂ ಪೆರ್ಚಿರ್ಪ ಜೆಂಡೆಂಗು ಬ
ಲ್ಪಸುರೇಱಂದೆಳೆಕೌಂಗು ಪಣ್ ಜಡಿದು ಬಿಣ್ಪಿಂ ತೋರ್ಪ ಪೊಂಬಾೞಿ ಪೆಂ
ಪೆಸೆವಿರ್ಮಾವು ಪೊದಟ್ದಿ ಹುಟ್ಟಿಗೆಯಣಂಚೆಲ್ಲಿರ್ಪ ಜಂಬೂಫಲ
ಪ್ರಸರಂ ತೀವಿರೆ ಚೆಲ್ವುವೆತ್ತುಪವನಂ ತೋಱತ್ತು ಸಂಪತ್ತಿಯಂ ೨೫೨

ರಾಜಶುಕಂ ಕರ್ದುಂಕೆ ರಸಧಾರೆಗಳಿಂದೆಸೆದಿರ್ಪ ದಾಡಿಮೀ
ರಾಜಿಗಳಿಂ ಪಿಕಾಳಿ ತೊಡಕಲ್ ಸೊನೆಬಿಂದುಗಳೊಪ್ಪವಾಮ್ರದಿಂ
ಜಾಜಿಯವಳ್ಳಿರಲ್ಗಳೊಳಗಂ ನಱುಗಂಪನೊಸಲ್ದು ಪೀರ್ವ ಭೃಂ
ಗೀಜಯನಾದದಿಂದೆ ಮೆಱೆಗುಂ ಚೆಲುವಿಂದುರೆ ನಂದನಂ ವನಂ ೨೫೩

ಮೊಗಮಬ್ಜಂ ಲೋಚನಂಗಳ್ ಕುವಲಯಮಧರಂ ಬಿಂಬಮಾ ನಾಸಿಕಂ ಸಂ
ಪಗೆ ತೋಳ್ ಶಾಖಾನಿಕಾಯಂ ಘಟಕುಚಯುಗಳಂ ಚಕ್ರವಾಕದ್ವಯಂ ನಾ
ಭಿ ಗಭೀರೋದ್ಯತ್ಸರಂ ತೋರದತೊಡೆ ಕದಳೀಸ್ತಂಭಮಂಘ್ರಿ ಪ್ರವಾಳಂ
ಸೊಗಸಿಂ ತಾನಾಗೆ ತನ್ನಂದನಮೆ ಘನವನಶ್ರೀಗೆ ರೂಪಾಗಿ ತೋರ್ಕುಂ ೨೫೪

ನಿರವಧಿಯಿಂ ಕುಳಿರ್ವುದಕಮಂ ನಡುನೆತ್ತಿಯೊಳಾಂತು ತನ್ನ ಕ
ಣ್ಣುರಿಗುಪಶಾಂತಿಯಂ ಪಡೆದುದಿಲ್ಲಭವಂ ಬಿಸಿಲೊಳ್ ಪೊದಟ್ದುವೆ
ತ್ತುರಿಗೆಳನೀರ್ಗಳಂ ತಳೆದು ಶೈತ್ಯಮನೆಲ್ಲರಿಗಿತ್ತು ಪೆರ್ಮೆಗಾಂ
ಬೊರೆಯೆನಿಪಂದದಿಂ ವನದೊಳಗ್ಗದ ತೆಂಗಿನ ಸಾಲ್ಗಳೊಪ್ಪುಗುಂ ೨೫೫

ನೀರೆಱೆದುಪಕಾರಕ್ಕೆಳೆ
ನೀರಂ ರುಚಿವೆರಸಿ ತೀವಿ ವನಪಾಲಕರಂ
ಹಾರುತ್ತಿರ್ಪಂತಿರ್ಪುವು
ಸಾರಾಯಫಳಾಳಿ ನಾಳಿಕೇರಂ ಬನದೊಳ್ ೨೫೬

ಕಳಕಂಠದುಂದುಭಿಧ್ವನಿ
ಬಳಸಿರೆ ವನರಾಜಪಟ್ಟದಭಿಷೇಕಕ್ಕೆಂ
ದಿಳೆ ಪಲವುಂ ಕೈಯೊಳ್ ಪೊಂ
ಗಳಸಂಬಿಡಿದಂತೆ ತೆಂಗುಗಳ್ ಕಂಗೊಳಿಕುಂ ೨೫೭

ಜಲಮಂ ಕೊಟ್ಟುರೆ ರಕ್ಷಿಪಂಗಮೃತಮಂ ತಾನೀವೆನೆಂದೊಂದು ಕಾ
ಲೊಳೆ ನಿಂದುಂ ಮಿಗೆ ಸೋಗೆಜೆಲ್ವುಜಡೆಗಳ್ ಪೊಂಬಾೞಿಯಾ ಕಾಯ್ಗಳು
ಜ್ಜಳ ರುದ್ರಾಕ್ಷಿಗಳಾಗೆ ಸಂದ ಪಲಗಣ್ಣಂ ಮುಚ್ಚಿರಲ್ ತೆಂಗು ನಿ
ಶ್ಚಲದಿಂ ಚಂದ್ರಧರಂಗೆ ಕೂರ್ತು ತಪಮಂ ಮಾಳ್ಪಂತದೇನೊಪ್ಪಿತೋ ೨೫೮

ಬೇರಿಂದಂ ನೀರುಂಡಾ
ಬೇರಿಂದಗ್ರಂಬರಂ ಫಲಂಗಳನೀವೆಂ
ಧಾರುಣಿಗೆಂಬಂತಿರೆ ಫಲ
ಪೂರಿತ ಪನಸದ್ರುಮಂಗಳೇನೊಪ್ಪಿದವೋ ೨೫೯

ಬಿಡದಿಡಿದಿರ್ಪವಾಮ್ರವನೇರಿಲಶೋಕಸುಕೌಂಗು ತೆಂಗು ಕ
ಪ್ಪಿಡಿದ ತಮಾಳವೀಳೆ ನವದಾಡಿಮವೀಧಿ ಲವಂಗಸಂಗದಿಂ
ಪೊಡರಿಪ ಬಾೞೆ ಪಕ್ವಪನಸಾವಳಿ ನಿಂಬ ಕದಂಬವಿಂಬುವೆ
ತ್ತಡಸಿದ ಮಾತುಳಂಗತತಿ ಬಿಲ್ವಕುಜಂ ಮೆಱೆಗುಂ ವನಂಗಳೊಳ್ ೨೬೦

ಗಂಟುತನದಿಂದೆ ತತ್ತರು
ಗಂಟಹ ಮೆಯ್ಯೊಡೆದು ಮೂಡಿದೀ ಪನಸಫಲಂ
ಕಂಟಕಿಫಲವೆಂದೆನಿಸಿ ನಿ
ಘಂಟುಗೆ ಸರಿಯಲ್ಲ ಸುಜನಿ ನಿಷ್ಕಂಟಕನೇ(?) ೨೬೧

ಅಡರ್ದೆಲೆವಳ್ಳಿಗಳೆಲೆಯಂ
ಬಿಡಿದಿರ್ಪೆಳೆಕೌಂಗಿನೊಳೀ ತರತರದಿಂದಂ
ಪಡೆದುಯೆಲೆವಸರ ಚೆಲ್ವಂ
ಪಡೆದುಂ ತೋಱುತಿದೆ ನೆರೆದವನವನದೆಡೆಯೊಳ್ ೨೬೨

ವನಲಕ್ಷ್ಮಿಗೆ ಸಕಲವಿಲಾ
ಸಿನಿಯರ್ ಬಳೆದೋಳ್ಗಳಿಂದೆ ಚಾಮರವಿಕ್ಕಲ್
ತನತನಗೆ ನಿಂದರೆನೆ ತ
ದ್ವನದೊಳ್ ಪೊಂಬಾೞೆಯಿಂದ ಪೂಗಮುವೆಸೆಗುಂ ೨೬೩

ಭುವನದೊಳೆನ್ನನೇಳಿಪರ ಬೆಟ್ಟದ ಕಟ್ಟೊಡೆವಂತಿರೆನ್ನಲೇ
ನವಸರಕಿಂದೆ ಬರ್ಪುದೆನುತಂಗಜನಟ್ಟಿದನೆಂದು ತುಂಬಿಗಳ್
ತವಕದಿನಾರಿ ಸಾರೆ ಪಸುರ್ವಿಡಿಯ ........ ನಲ್ಲಿ ಪೊತ್ತು ಬಂ
ದವೊಲೆಳೆಕೌಂಗು ಕಂಗೊಳಿಸುತಿರ್ಪುವು ಬಿಣ್ಗೊಲೆಯೋಱು ಸಂತತಂ(?) ೨೬೪

ರೂಢಿಸಿದ ಪಲಸಿನೊಳ್ ಪಣ್
ಮೂಡಿರೆ ಮದ್ದಳೆಯನೊತ್ತೆಗೊಟ್ಟವೊಲದ ಕಂ
ಡೇಡಿಸಿ ನಗುವಂತಿರ್ದುವು
ದಾಡಿಮುಗಳ್ ಬಿರಿದ ಬೀಡೆವಣ್ ಬನಬನದೊಳ್ ೨೬೫

ಪುದಿದ ತನಿವಣ್ಣ ಬಿರುಕಿಂ
ದುದಿರ್ದೆತ್ತಂ ರಾಸಿಯಾದ ಬಿತ್ತುಗಳಿಂದಂ
ದೊದವಿದ ಪಲವುಂ ದಾಳಿಂ
ಬದ ಮರಗಳ್ ರನ್ನವಸರದಂತೆಸೆದಿರ್ಕುಂ ೨೬೬

ರಸಮುಂ ಕಂಪುಂ ಕನಕದೊ
ಳೆಸೆದಿರ್ಪೆಂಬವರ ಮಾತನಲ್ಲಿಯ ಬನದೊಳ್
ಪುಸಿಮಾಡುವವೋಲಂತಿವೆ
ರಸಮಾದ ಫಲಂಗಳಮರ್ದ ರಸಪರಿಮಳದಿಂ ೨೬೭

ಕುಸುಮಶರಂಗೆ ವಸಂತಂ
ಪೊಸಪೊಂಗಳಸಂಗಳಲ್ಲಿ ಸೌರಭ್ಯಸುಧಾ
ರಸಮಂ ತಂದಿರಿಸಿದವೋ
ಲೆಸೆದವು ಫಳಭಾರಮಾತುಳಂಗವ್ರಾತಂ ೨೬೮

ಬಾಗುತೆ ಬಲಿವುತೆ ಪೊಳಪಿನಿ
ದಾಗುತೆ ದಳಿವೇಱುತಡಿಗಡಿಗೆ ಪಣ್ಣಾಗುತ್ತೆ
ಕಾಯ್ಗಳ್ ಪೋಱಮಡೆ ಚೆಲುವಿಂ
ಬೀಗುತೆ ಬೆಳೆದಿರ್ಪವಲ್ಲಿ ಕದಳೀಷಂಡಂ ೨೬೯

(ಗಿರಿಜಾಕಲ್ಯಾಣಂ ೨-೫೦)

ಸುರವನಮುದೇಕರಂಭಾ
ಧರಮಿದಱೊಳ್ ಜಾತರೂಪರಂಭಾವಳಿ ಕೂ
ಡಿರಲೀ ವನದೊಳ್ ಸುರರಾ
ಸುರತಕ್ರೀಡೆಯೆನೆ ಮಾಳ್ಪುದೊಂದಚ್ಚರಿಯೇ ೨೭೦

ಎಲೆ ನಾರು ಸುಱುಗು ಗೆಣಸುಂ
ಫಲ ಕುಸುಮಂ ಕಾಯಿ ದಿಂಡುಮೆಂಬಿನಿತಱೊಳಂ
ಸಲೆ ಕಾರ್ಯಕೊದಗುತೊಪ್ಪುವ
ಚೆಲುವೆಸೆದಿಹ ಬಾೞಮರೆಗಳೊಪ್ಪುಗು ವನದೊಳ್ ೨೭೧

ಪಲಗಾಲ ಬಾೞ್ದನೆನ್ನಯ
ಸಲುಗೆಯ ಕಂದಗಳ ನೋಡಿ ಸಲಹೆನುತಿಳೆಗಂ
ತಲೆವಾಗುತೆ ಕೈಲೆಡೆಗೊಡು
ಪ್ರೊಲು ಮೋತೆಗಳೊಪ್ಪಿ ಮೆಱೆದುವಾ ವನವನದೊಳ್ ೨೭೨

ಬನದಾ ಪಣ್ಕಾಯ್ತುದಿರ್ದಿ
ತಿನಿವಾಯ್ಮೃತ್ರೊಂದಕಿರಿಸಿ ತೆಱಿಯದ ತೆಱದಿಂ
ಘನವುದ್ರೆಯಿಡುವ ನೀಳ್ದರ
ಗಿನ ಕುಡುಹೆನೆ ಪಣ್ಗಳಾಂತ ನೇರಿಲುವೆಸೆಗುಂ ೨೭೩

ಪಚ್ಚೆಯ ಮಾಣಿಕ ನೀಲದೊ
ಳೊಚ್ಚತ ವನದೇವಿಯೊಲ್ದು ಚೈತ್ರಂಗಿಕ್ಕಿದ
ನಿಚ್ಚದ ತೋರಣವೆಂಬವೊ
ಲಚ್ಚರಿಯಹ ಪಣ್ಗಳಿಡಿದ ನೇರಿಲ್ ಪೆಱಿಗುಂ ೨೭೪

ಸುಗ್ಗಿಯ ಪ್ರತಾಪವಹ್ನಿಯ
ನೊಗ್ಗರವೊ ಬನದ ಸಿರಿಯ ಮನದನುರಾಗದ
ವೆಗ್ಗಳವೋ ಪೇಱಿಂದೆನೆ
ಬಗ್ಗಿಂ ಪಣ್ತೆಸೆದವಲ್ಲಿ ಕಿತ್ತಳೆಗಿಡುಗಳ್ ೨೭೫

ಮಧುರಾಜಮಯನೆ ಬಿರಿಯಿಗ
ಳೆಡೆಯೆಡೆಗಿಡಲೆಂದು ಡೆಂಕಣಿಯ ಗುಂಡುಗಳಂ
ಮದನಗೆ ಕಾಣ್ಕೆಯನಿತ್ತೊಲು
ಪದನಿಂ ಪಣ್ತೆಸದವಲ್ಲಿ ಪೇರಿಳೆಗಿಡುಗಳ್ ೨೭೬

ವನದೇವಿಯೊಲ್ದು ಚೈತ್ರಂ
ಗನುರಾಗದಿ ತಕ್ಕಿಸಲ್ಕೆ ಪಲವುಂ ಕುಜಗಳ
ತನಗೆ ತಾಂ ಪಡೆದಳೆಂಡೆನೆ
ಘನತರಫಲವಿಡಿದ ನಿಂಬೆಗಳ್ ಕಂಗೊಳಿಕುಂ ೨೭೭

ಬಯಸಿದಡರ್ಥಮನೊಂದನೆ
ನಿಯತಂ ತ್ರಿದಶರ್ಗೆ ಕೊಡುವ ಕಲ್ಪಕುಜಂ ತ
ನ್ನಯ ಪತ್ರವಿವರ್ಗಚತು
ಷ್ಟಯಮಂ ಕೊಡುತಿರ್ಪ ಬಿಲ್ವಕೇಂ ಪಾಸಟಿಂಪೇ ೨೭೮

ಕೆಂದಳಿರೆ ಮುಡಿದ ಮಾಂದಳಿ
ರಂದಮನಲಗೊಂಚಲೊದವೆ ಗುಂಜಿಗಳಂ ತೊ
ಟ್ಟಂದಮನನುಕರಿಸೆಸೆದು ಪು
ಳಿಂದಿಯೊಲೆಸೆದತ್ತಶೋಕವಲ್ಲರಿ ವನದೊಳ್ ೨೭೯

(ಲೀಲಾವತಿ ೧೩-೫೨)

ಪೂತೆಸೆಯೆ ತಿಲಕವಂಗಜ
ನೋತಂ ಮಧು ಮುನ್ನಮೋತನೆರಡಿಲ್ಲದೆ ತಾ
ನೋತುದು ಭುವನಂ ವನಸಿರಿ
ಗೀ ತಿಲಕಮೆ ಪತ್ರತಿಲಕಮಾಗಲೆವೇಟ್ಕುಂ ೨೮೦

(ಲೀಲಾವತಿ ೧೩-೬೩)

ಸುಮನೋಬಾಣೇಭಕುಂಭಸ್ಥಳಿಕಳಿತಲಸತ್ಸಾಂದ್ರಸಿಂಧೂರಮುದ್ಯಾ
ನಮಹಾಂಭೋಧಿಪ್ರವಾಳಂ ಮಧುವಿಟಪರಿರಂಭೋತ್ಥಪೃಥ್ವೀಮನೋರಾ
ಗಮಿದೆಂಬೊಂದಂದದಿಂ ರಂಜಿಸಿದುದೆಸೆವ ಪೂಗೆಂಪಿನಿಂ ದಕ್ಷಿಣಾಯಾ
ತಮರುನ್ಯಸ್ತ್ರೋತ್ಪಲಾಶಂ ಪ್ರಸವಕೃತಘನಾಳೀಪಲಾಶಂ ಪಲಾಶಂ ೨೮೧

(ಜಗನ್ನಾಥವಿಜಯಂ ೧೪-೨೪)

ಎಕ್ಕಿದ ತತ್ತಿಗೆ ಕತ್ತಲೆ
ವಕ್ಕಿ ಭಯಂಬಟ್ಟು ರವಿಕರಾಗ್ನಿಯ ದೆಸೆಯಿಂ
ಪಕ್ಕದೆ ಪೊದಯಿಸಿತೆನೆ ಪ್ಪೆ
ಯಿಕ್ಕಿರ್ದುವು ನಿಳಯದೊಳ್ ತಮಾಲದ ತರುಗಳ್ ೨೮೨

ನಲಿವುಲಿಸಂಚೆ ಬೆಂಚೆ ಪುಳಿನಂ ನಳಿನಂ ಗಿಳಿವಿಂಡು ಬಂಡು ಕೋ
ಗಿಲೆ ಗೊಲೆತೆಂಗು ಕೌಂಗು ಬಕುಳಂ ಮುಕುಳಂ ಲತೆ [1]ಮರ್ಬುಕರ್ಬು ಕಾ
ಜಲೆರತ[1]ವೀಳೆ ಬಾಟಿತ ಮಧುಪಾವಳಿ ಪೂವಳಿ ಕಂಪು ಸೊಂಪು ಕುಂ
ಜಲೆ ಸಲೆ ಕಂತುಗಿಂತು ನೆಲೆವೀಡೆನಿಸಿರ್ಪುವು ನಂದನಂಗಳೊಳ್ ೨೮೩

(ಸೂಕ್ತಿಸುಧಾರ್ಣವಂ ೪-೩೯)

ವಿರಹಿಗೆ ಬೇಗೆಯಂ ಪ್ರಿಯರ್ಗೆ ರಾಗಮನಾಗಿಸುಗುಂ ಬನಂಗಳೊಳ್
ಮೊರೆವ ಮದಾಳಿ ಕೂಗಿಡುವ ಕೋಗಿಲೆ ಕೇಗುವ ಸೋಗೆ ಚಪ್ಪರಿ
ಪ್ಪರಗಿಳಿ ಕುಪ್ಪೆವಾಯ್ವ ಕಪಿ ಮೂಡಿ ಮುಳುಂಗುವ ಜಕ್ಕವಕ್ಕಿ ಸಂ
ಚರಿಸುವ ಹಂಸೆ ಕೂಡುವ ಕುರಂಗ ಗುಘುಮೆನುತಿರ್ಪ ಪಾರಿವಂ ೨೮೪

(ಸೂಕ್ತಿಸುಧಾರ್ಣವಂ ೪-೪೧)

ಗಿಳಿಗಿಳಿವಿಂಡಿನೊಳ್ ಸೆಣಸಿ ಬಯ್ವುವು ಕೋಗಿಲೆ ಕೋಕಿಲಕ್ಕೆ ಕೆ
ಕ್ಕಳಿಸಿ ಕುಕಿಲ್ವುವುದ್ಭ್ರಮರಮುದ್ಭ್ರಮರಂಗಳ ಗಾವರಕ್ಕೆ ಗಾ
ವಳಿಸಿ ಘಡಾಳಿಸೊಳ್ ಮೊರೆವುವಾಡೊಡಮೂರ ಬನಂಗಳೊಳ್ ಮಹಾ
ಕೆಳೆಗೆಡೆದಂತೆವೊಲ್ ಗಡಣಿಸಿರ್ಪುವು ತದ್ವಿಷಯಾಂತರಾಳದೊಳ್ ೨೮೫

(ಅನಂತನಾಥಪುರಾಣಂ ೧-೭೭; ಸೂಕ್ತಿಸುಧಾರ್ಣವಂ ೪-೬೪)

---

[1] ಜರ್ಬಿಕೊರ್ಬಿದೊಳ್ಪೆಲರೆಲೆ(ಸೂ)

ಇರದಿದಿರ್ಗೊಳ್ವುದು ಪಿಕತತಿ
ಕರೆವುವು ಶುಕರಾಜಿ ಕಾಣ್ಕೆಗೊಡುವುದು ಫಳಮಂ
ಝುರಿ ಕಾಲ್ದೊಳೆವುದು ಪಾಂಥರ
ಬರವಿಂಗಿಂತಿದು ವನಾಳಿ ಮಾಳ್ಪಾತಿಥ್ಯಂ ೨೮೬
(ಸೂಕ್ತಿಸುಧಾರ್ಣವಂ ೪-೭೮)

ಮದನಂ ತೋಂಟಿಗನಾದ ಚೂತಪತ್ರನುಜ್ವಾರಾವದೊಳ್ ಕೂಡಿ ಪಾ
ಡಿದ ಪೆಣ್ದುಂಬಿ ವಸಂತನೊಳ್ ಮದನಕೇಳೀಸೂತ್ರಮಂ [1]ಪಾಠವೋ[1]
ದಿದ ಕೀರಂ ರತಿಯೊಳ್ ಪದನ್ಯಸನಮಂ ಕಲ್ತಂಚೆ ಶೀತಾಂಶು ತೀ
ವಿದ ಸ್ವೇದಿಲ್ಗೊಳಸಲ್ಲದಿಲ್ಲೆನೆ ಬನಂ [2]ಚೇತೋ[2]ತ್ಸವಾಲಂಬನಂ ೨೮೭
(ಮಲ್ಲಿನಾಥಪುರಾಣಂ, ೨-೩೭; ಸೂಕ್ತಿಸುಧಾರ್ಣವಂ ೪-೮೭)

ಮದನಂ ಕೊಂಬುಗೊಳಲ್ಕೆ ನಚ್ಚುವ ನವಾಮ್ರಂ ಕಂತುಚಾಪಕ್ಕೆ ಚಿ
ತ್ರದೊಳಾಳ್ವಿರ್ಪ ಸಿತೇಕ್ಷುವಾಟಿ ವಿಷಮಾಸ್ತ್ರಂ ಪಂಚಬಾಣಕ್ಕೆ ಮಾ
ಣದೆ ಕಣ್ಣಾಗಿರಿಸಿಟ್ಟ ಮಲ್ಲಿಗೆ ಮನೋಜಂ ಸ್ವಚ್ಛವಾಃಕೇಳಿಸ
ದ್ಮದಕೆಂದೋವುವ ಪದ್ಮಷಂಡಮೆಸೆಗುಂ ತನ್ನಂದನೋಪಾಂತದೊಳ್ ೨೮೮
(ಚಂದ್ರಪ್ರಭಪುರಾಣಂ ೧-೧೦೪; ಸೂಕ್ತಿಸುಧಾರ್ಣವಂ ೪-೮೮)

ಅಳಿನಿನದ ಗೀತ ಮದಕೋ
ಕಿಳನಿನದಂ ವಾದ್ಯಮಭಿನಯಂ ನೆಗಬ್ಬಿನೆಗಂ
ಲಳಿತಮನೇನಾಡಿಸಿದನೊ
ಮಳಯಾನಿಳನರ್ತಕಂ ಲತಾನರ್ತಕಿಯಂ ೨೮೯
(ಆದಿಪುರಾಣಂ ೧೧-೯೩; ಸೂಕ್ತಿಸುಧಾರ್ಣವಂ ೧೧-೧೭)

ತಳಿರತೊಡಂಬೆಯಂ ತಳೆದ ಮಾಮರ ಮಾಮರದಳ್ಕೆಗೊಂಬಿನೊಳ್
ಕಳರವದಿಂ ಕುಕಿಲ್ವ ಮಱಿಗೋಗಿಲೆ [3]ಕೋಗಿಲೆ[3] ಭಾರದಿಂ ಪೊರ
ಳ್ದೆಳೆಲತೆಯಾ ಲತಾವಳಿಯಿಡುಂಕುಜಜಾಳಾವಗ ಕೂಡಿ ಪಾಡುತಿ
ರ್ಪಳಿಗಳವಿಂಡು ರಂಜಿಸುವಿನಂ ಮೆಱೆಗುಂ ಪುರದಾ ಬಹಿರ್ವನಂ ೨೯೦

ಮಲ್ಲಿಗೆವಲ್ಲಿ ಪರ್ಬಿದೆಳೆಮಾವೆಳಮಾವಿನ ಕೆಂದಳಿರ್ಗಳಂ
ಮೆಲ್ಲನೆ ಚಂಚುವಿಂ ಕರ್ದುಕಿ ಬಗ್ಗಿಪ ಕೋಗಿಲೆ ಕೋಕಿಲಸ್ವನ
ಕೆಲ್ಲತಿಮೂರ್ಛೆಯೋಪ ವಿರಹಿಪ್ರಕರಂ ವಿರಹಿಪ್ರತಾನಮಂ
ಫುಲ್ಲಶರಂಗಳಿಂದೆಸೆವ ಮನ್ಮಥನಿಂದೆಸೆಗುಂ ಬಹಿರ್ವನಂ ೨೯೧

---

[1] ಖ್ಯಾತವೋ(ಸೂ) [2] ಚಿತ್ತೋ(ಸೂ) [3] ಪೂಗಿಡು(ಸ)

ಸೋಗೆಯ ಕೇಗು ಕೋಗಿಲೆಯ ಕೂಗರಸಂಚೆಯ ಸಂಚದಿಂಚರಂ
ಯೋಗಿಪ ಜಕ್ಕವಕ್ಕಿಗಳ ಜೋಡುಲಿ ಪೇೞ್ವಿಲರ್ವಕ್ಕಿಯಾ ರವಂ
ರಾಗಿಪ ರಾಜಕೀರನ ಸರಂ ಕೊಳರ್ವಕ್ಕಿಯ ಕೋಕುಹಾಕುಹಂ
ಮೇಗುರಿ ಪಾಱಿವಂಗಳ ಸರಂ ವನಕಿತ್ತುವು ಮೋಹನೀಯಮಂ ೨೯೨

ಉಱೆ ಕಾಯ್ವ ಬಿಸಿಲೊಳೆಮ್ಮಂ
ಮಱೆದುಂ ಕೊರಗಿಸದೆ ಪೊರೆದು ಕಾಡೊಲವಿಂ ಬಂ
ದೆಱಗುವವೋಲ್ ತೆನೆಯಿಂ ಕಾ
ಲ್ಗೆಱಗುವ ಕಳವೆಗಳವೆಲ್ಲಿಯುಂ ಸೊಗಯಿಸುಗುಂ ೨೯೩

ಪುದಿಪೆಳವಳ್ಳಿಯಿಲ್ಲದ ಮರಂ ಕೊಳಸಿಲ್ಲದ ತೋಂಟವಾವಲಿ
ಲ್ಲದ ಕೆಱೆ ಗಂಡುಗೋಗಿಲೆಗಳಿಲ್ಲದ ಬಂದಮಾವು ಕಾಲ್ಗಳಿ
ಲ್ಲದ ಧರೆ ತುಂಬಯಿಲ್ಲದಲರಂಚೆಗಳಿಲ್ಲದ ಬೆಂಚೆ ಜೇಟವಿ
ಲ್ಲದ ಜೆಲಿವೆಣ್ಗಳಿಲ್ಲ ಪೆಸರಿಲ್ಲದ ಮಾನಿಸರಿಲ್ಲವೆಲ್ಲಿಯುಂ ೨೯೪

ಕನರ್ಗೊನರೆಲ್ಲಿಯಲ್ಲಿ ಮೀಳಿರ್ದಾಡುವ ನುಣ್ದಳಿರೆಲ್ಲಿಯಲ್ಲಿ ಬ
ಲ್ಪನೆಗಳವೆಲ್ಲಿಯಲ್ಲಿ ಪೊರೆಯೇಱುವ ಮೊಗ್ಗೆಗಳೆಲ್ಲಿಯಲ್ಲಿ ಚೆ
ಲ್ವೆನಿಪರೆಲ್ಲಿಯಲ್ಲಿಯೆಳಗಾಯ್ ಬಲುಗಾಯ್ಗಳೆಲ್ಲಿಯಲ್ಲಿ ಪ
ಣ್ಗೊನೆಗಳವೆಲ್ಲಿಯಲ್ಲಿಯೆನೆ ಸೋಲಿಸುಗುಂ ಬಿಡದಾವನಂ ವನಂ ೨೯೫

ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್
ಬಲದೆ ವಸಂತನೊಲ್ದೊಲಿಸಿ ಕಾಡುವ ರೂಢಿಯ ಬಿಜ್ಜೆವಿಂಡಿರಂ
ನಿಲೆ ಸೆಱೆಗೆಯ್ದನೆಂದು ಪಲವಾಗಿರೆ ಮಾಡಿಸಿ ತನ್ನ ಬಳ್ಳಿಸಂ
ಕಲೆಗಳವೆಂಬಿನಂ ಬಗ್ಗೆಯಿನಿರ್ಕುಳಿಗೊಂಡುದದೊಂದು ತಾಣದೊಳ್ ೨೯೬

ಮಾವಿನ ಜೊಂಪಮಂ ಮಿಸುಪ ಸಂಪಗೆಯಂ ಬಗೆಗೊಳ್ವ ಗಾಡಿಯಂ
ಪೂವಿನ ಗೊಂಚಲಂ ಪುದಿದ ಪಾದರಿಯಂ ಪರಿತಪ್ಪ ತುಂಬಿಯಂ
ತಾವರೆಗಿಕ್ಕೆಯಾದ ಕೊಳನಂ ನೆರೆದಾಡುವ ಜಕ್ಕವಕ್ಕಿಯಂ
ಶೀವಿದ ಬಂಡುಬಂಡು ನೆಗೆವುತ್ತಿರೆ ಮೆಲ್ಲನೆ ಬರ್ಪ ಕಾಲ್ಗಳಿಂ ೨೯೭

ಕವಿದು ಕವಲ್ತು ತಳ್ತಮರ್ದ ತೊಂಗಲ ಕೀೞ್ಗಲದೊಳ್ ಪೊದಟ್ದು ಕೂ
ಡುವ ಪರಿಕಾಲ್ಗಳಿರ್ತಡಿಯ ತಣ್ಬುೞಲಿಂಬಿನೊಳಜ್ಜೆವೇಟಮಂ
ಸವಿಯದೆ ಪೋಪ ಬಟ್ಟೆಗರ ಪೋಳ್ದಿದೆ ಪವ್ವನೆ ಪಾಱೆ ಕೂಡಿ ಪಾ
ಡುವ ಪೆಳದುಂಬಿ ಜೆಂಬಿಡದೆ ಕಾಮನ ಕರ್ಬಿನ ಬಿಲ್ಲ ಬಿಂಕಮಂ ೨೯೮

(ಧರ್ಮನಾಥಪುರಾಣಂ ೨–೩೫)

ಮಿಸುಪ ಕೊಳಂ ಕೊಳಂಗಳೆಡೆಯೊಳ್ ಬಿರಿವಂಬುಜವಂಬುಜಂಗಳೊಳ್
ಮುಸುಱುವ ತುಂಬಿ ತುಂಬಿಗಳನೋವದೆ ಸೋವೆಲಪುಳ್ಳೆಲರ್ಗೆ ಕಂ
ಪಿಸುವ ಲತಾಗೃಹಂ ನವಲತಾಗೃಹದೊಳ್ ಸೊಗಯಿರ್ಪ ಭೋಗಿಮಾ
ನಿಸರಿಸೆದಿರ್ಪರಾ ವನದೊಳೇವೊಗೞ್ವೆಂ ತದಿಳಾವಿಳಾಸಮಂ ೨೯೯
(ಧರ್ಮನಾಥಪುರಾಣಂ ೨–೩೯)

ನೆರೆದ ಬನಂಗಳೊಳ್ ಪಿಕದ ಬಗ್ಗಣೆ ಪರ್ವಿದ ಪೂಗೊಳಂಗಳೊಳ್
ತಿರುಗುವ ತೊಂಡುದುಂಬಿಗಳ ಪಲ್ಮೊರೆಪಂ ಪೊಲಗೆಯ್ಗಳೊಳ್ ಪೊದ
ೞ್ದಿರಗಿಳಿಯಬ್ಬರಂ ತಗುೞೆ ಬಂದ ವಿಯೋಗಿಜನಕ್ಕೆ ನಾಡೆ ನಿಂ
ದಿರೆ ನೆಲೆಯಿಲ್ಲದಿರ್ದು ಮಿಗೆ ಸರ್ವಸುಖಕ್ಕೆಡೆಯಾದುದಾ ಬನಂ ೩೦೦
(ಧರ್ಮನಾಥಪುರಾಣಂ ೨–೪೨)

ಪೂವಿನ ಬಂಡನುಂಡು ನಲಿದಾಡುವ ಪಾಡುವ ತುಂಬಿ ತತ್ತ ಪೊಂ
ದಾವರೆಯಕ್ಕಿಯಂ ಬಯಸಿ ನೋಡುವ ಕೂಡುವ ಜಕ್ಕವಕ್ಕಿಯಿ
ಮ್ಮಾವಿನ ಬಿಂಕಮಂ ಬಿರಯಿಗಗ್ಗಿಪ ಬಗ್ಗಿಪ ಕೋಗಿಲಂ ತಗು
ಳ್ದಾ ವನಮಿರ್ಪುವಾ ಪೊೞಲ ಪೆಂಪಿನ ಸೊಂಪಿನ ನಂದನಂಗಳೊಳ್ ೩೦೧
(ಧರ್ಮನಾಥಪುರಾಣಂ ೨–೪೯)

ನಸುವಿರಿದಿರ್ದ ಪದ್ಮವನದೊಳ್ ನಲಿವಂಚೆಗಳಿಂ ಕಱಂಗಿ ಕ
ಣ್ಗೆಸೆವುದು ಕೈರವಾಕರದೊಳೊಂದಿದ ತುಂಬಿಗಳಿಂ ರಸಾಲದೊಳ್
ಪೊಸತನಿವಣ್ಗಳಿಂ ಸವಿದು ರಾಜಿಪ ರಾಜಶುಕಂಗಳಿಂ ನಿರೀ
ಕ್ಷಿಸಿ ಸೆಱೆಗೆಯ್ವುದೊರ್ಮೊದಲೊಳಾ ವನಮಾವನ ಲೋಚನಂಗಳಂ ೩೦೨
(ಧರ್ಮನಾಥಪುರಾಣಂ ೨–೫೪)

ಪೊಗೞ್ವೇಡದ ನಿನ್ನದೆನ್ನೊಳೆಣೆಯಾಗಲ್ ತಕ್ಕುದೇ ಚಿಃ ಸುರಾ
ಪಗೆಯೊತ್ತಿಂಗೊಳಗಾದುದೆಂದು ತಳಿರ್ಗೊಂಡೆಂಬಚ್ಚದೋರ್ದಂಡಮಂ
ನೆಗೆಪುತ್ತುದ್ಧತಕೋಕಿಲಾರವದಿನಾದಂ ಜ್ಯೈದಲ್ದೊಂಗಲಿಂ
ನಗುವಂತಿರ್ಪುದು ನಾಕನಂದನಮನಾ ಕೇಳೀವನಂ ಪಾವನಂ ೩೦೩
(ಧರ್ಮನಾಥಪುರಾಣಂ ೨–೬೨)

ಫಳಮೆಂದುಂ ಕೞಿವಣ್ಣಳಾಗನಲರೆಂದುಂ ಬೀಯುವಬ್ಜಾಕರಂ
ತಿಳಿಪೆಂದುಂ ಬಗೆಗೊಳ್ವುದುರ್ಕುಡುಗದೆಂದುಂ ತುಂಬಿಗಂ ಹಂಸೆಗಂ
ಗಿಳಿಗಂ ಕೋಗಿಲೆಗಂ ವಿಯೋಗಿನಿವಹಕ್ಕೆಂದುಂ ವಸಂತಪ್ರಿಯಂ
ಮುಳಿಸಿಂದಾರ್ವಲರಂಬುವೊಯ್ದು ತೆಗೆದಿರ್ಪಂ ಬಿಲ್ಲನುದ್ಯಾನದೊಳ್ ೩೦೪
(ಜಗನ್ನಾಥವಿಜಯಂ ೨–೧೬)

ನೆಗೞ್ದ ಕೞಸ್ವನಂ ಕೞಮದಿಂ ಕೞಮಕ್ಕೆ ವನಾಳಿಯಿಂ ವನಾ
ಳಿಗೆ ಕೊಳದಿಂ ಕೊಳಕ್ಕೆ ಕೃತಕಾಚಲದಿಂ ಕೃತಕಾಚಲಕ್ಕೆ ಪಿಂ
ಡಗಲದೆ ಪಾಱುತಿರ್ಪುವಿದಿರುಂ ಬೞಯುಂ ಶುಕಭೃಂಗ ಹಂಸಕೇ
ಕಿಗಳನುರಕ್ತಪಾಂಥಜನದಳ್ಕಿರ್ದೆ ಪವ್ವನೆ ಪಾಱುತಿರ್ಪಿನಂ ೩೦೫

(ಜಗನ್ನಾಥವಿಜಯಂ ೯-೮೭)

ಗಿಳಿಗಳನೋದಿನುಗ್ಗಡಣೆ ಕೋಕಿಲನಿಸ್ವನಕಾಹಳಂ ಫಲಂ
ಗಳ ಪನಸೆಯ್ದೆ ಮದ್ದಳಿಗನುಷ್ಫಮರಾಳಿಯೆ ಗಾಯಕರ್ ಲತಾ
ವಳಿ ನಟಿಯರ್ ಮರಂಗಳೊಲವಿಂ ತಲೆದೂಕು ಕಟಿಲ್ಲಿ ಬೀೞ್ವಿಹ
ಣ್ಣೊಲೆ ಮಿಗೆ ಮೆಚ್ಚಿಸಲ್ ನವಿಲು ನರ್ತನಗೆಯ್ವುವು ನಂದನಂಗಳೊಳ್ ೩೦೬

ಮೊರೆವ ಮದಾಳಿ ಮಾಮರದ ಸಾಳಿ ವಿಯೋಗಿಯ ಧಾಳಿ ಸುತ್ತಲುಂ
ಪರಿವ ಶುಕಾಳಿ ಕಂಗೆಸೆವ ಶಾಳಿ ಮನೋಭವನಾಳಿ ಕಾಪಿನಿಂ
ನೆರೆವ ಬಲಾಳಿಯಲ್ಲಿ ಸುೞಗಾಳಿ ಲತಾಗೃಹದೋಳಿ ರಾಗದಿಂ
ಕರೆವ ಪಿಕಾಳಿ ಕುಂಕುಮದ ಧೂಳಿ ರತೋತ್ಸವಕೇಳಿಯಾ ವನಂ ೩೦೭

ಲತೆಗಳ ಪೆಂಪು ಮಾಮರನ ತಂಪು ಮದಾಳಿಯ ಸೊಂಪು ಕೈರವ
ಪ್ರತತಿಯ ನುಣ್ಪು ಪಂಕಜದ ಕಂಪು ಶುಕಾಳಿಯ ಬಿಣ್ಪು ಕೋಕಿಲೋ
ನ್ನತಸರದಿಂಪು ಪುಷ್ಪಶರನಣ್ಪುವಶೋಕದ ಕೆಂಪು ಮಂದಮಾ
ರುತನ ನವಪ್ರಮೋದರಸಗುಣ್ಪು ವಿಯೋಗಿಯ ಕಂಪನಾ ವನಂ ೩೦೮

ಶರನಿಧಿಯಂ ದಿಂಪೆಸೆವ ಪೂರ್ಣತಟಾಕಗಳಾಶ್ರಯಂಗಳಿಂ
ದಿರುತಿಹ ತೆಂಗು ಕೌಂಗು ಪನಸಾಮ್ರದ ಜಂಬುಕುಜಂಗಳಿಂದ ವಿ
ಸ್ತರದದಿರ್ಕೆಳೆ ಬಾೞ್ತಗಳ ಸಾಲುಗಳೊಪ್ಪುವ ನಂದನಾಳಿ ಕ
ಣ್ಣರಕೆಯನೀವುತಂ ಮೆಱೆವುದೇಪೊಗೞ್ವಂ ವನದೊಂದು ಚೆಲ್ವಿನಂ ೩೦೯

ಬಾೞ್ತಗಳಿಂ ಘನತರ ಮುಡಿ
ವಾಳಗಳಿಂದಧಿಕಪರಿಮಳಂಗಳೊಳಾ ಹೊಂ
ಬಾೞ್ತಗಳೊಳೆಸೆವ ಪರಿಮಳ
ಜಾಳಂ ಪಸರಿಸುತ ವನಂ ಕರಂ ರಂಜಿಸುಗುಂ ೩೧೦

ಶುಕದ ಮೃದುನುಡಿ ಮೃದಂಗದ
ಪಿಕಸಂದೋಹದ ಸುನಾದಗೇಯಂಗಳ್ ಶಾ
ರಿಕೆಗಳ ಸರದುಗ್ಗಡಣೆಯೊ
ಳಖಿಳಮಯೂರಗಳ ನರ್ತನಂ ಕಣ್ಗೆಸೆಗುಂ ೩೧೧

ಅಳಿಗಳ ಗಿಳಿಗಳ ಕೋಗಿಲೆ
ಗಳ ಕಳಹಂಸೆಗಳ ಪಾರಿವಂಗಳ ಕೋಕಂ
ಗಳ ಪುರುಳಿಗಳ ನವಿಲ್ಗಳ
ಕೊಳರ್ವಕ್ಕಿಗಳೆಸೆವ ಮನದ ಬಿನದಂ ವನದೊಳ್ ೩೧೨

ನಲಿದು ಕೊರಲೆತ್ತಿ ಕುನಿದು ಕು
ಕಿಲಿರಿದು ಸುೞಿದೆಳಸಿ ಬಳಸಿ ಬೞಿಸಂದು ಪಳಂ
ಚಲೆದೊಲೆದು ಪಕ್ಕಮಂ ಬಿ
ರ್ಚಿ ಲಲ್ಲೆಗರೆದತ್ತು ಪಾರಿವಂ ಪಾರಿವದೊಳ್ ೩೧೩
(ಗಿರಿಜಾಕಲ್ಯಾಣಂ ೨–೫೨)

ಸುರಚಿರ ಸಾರಪಕ್ವಫಲವಕ್ತ್ರಲಸತ್‌ಶುಕಚುಂಬನಂ ಬನಂ
ಪರಮವಿರಕ್ತಸಂತತಿಗಿದೇತರಮೋಹನವೆಂಬಿನಂ ಬನಂ
ಭರಿತದಿಂ ಪಾಲಿಕುಂ ಶುಕಪಿಕಾಳಿಕುಲಕ್ಕತಿ ಜೀವನಂ ವನಂ
ಧರೆಗೆ ವಿಚಿತ್ರಭಾಸುರಮದೇಳಿಪುದಗ್ಗದ ಕಾವನಂ ವನಂ ೩೧೪
(ಗಿರಿಜಾಕಲ್ಯಾಣಂ, ೨–೩೨)

ಆ ವನದ ಕೊಳಂ ಪೂಗೊಳ
ನೇವೇೞ್ವೆಂ ಹಂಸೆ ರಾಜಹಂಸೆಗಳಾಹಾ
ತಾವರೆ ಹೊಂದಾವರೆಗಳ್
ಮಾವಿಮ್ಮಾವಳಿ ಮದಾಳಿ ಗಿಳಿಯರಗಿಳಿಗಳ್ ೩೧೫
(ಗಿರಿಜಾಕಲ್ಯಾಣಂ ೨–೬೪)

ತವೆ ಬೆಳೆದ ಪೊಸಪನಸು ಬ
ಕ್ಕೆವಲಸು ನಳಿನಳಿಸುವಿಕ್ಷು ಪುಂಡ್ರೇಕ್ಷು ಪಳಂಚ
ಲೆವ ತೆಂಗವು ಚೆಂದೆಂಗೊ
ಪ್ಪುವ ದಾಳಿಂಬಗಳೆಲ್ಲ ರಸದಾಳಿಂಬಂ ೩೧೬
(ಗಿರಿಜಾಕಲ್ಯಾಣಂ, ೨–೬೯)

ಬನಮಿದು ನೋಡು ಸರ್ವಸುಖಮುಪ್ಪುದೆ ಕೇಳ್ ಪಡಿಯಿಲ್ಲ ತಣ್ಣೆಲರ್
ಮನದೊಲವಿಂದೆ ತೀಡುತಿದೆ ಜೆಲ್ವು ಮನೋಹರಮಿರ್ಪುದಲ್ಲಿಗೆೞಂ
ದನುದಿನಮೆಯ್ದಿ ಕಿಂಪುರುಷ ಕಿನ್ನರ ಖೇಚರ ಭೂಚರಾದಿ ಮಂ
ಡನಮಿಥುನಂಗಳಂಗಜಸುಖಾಬ್ಧಿಯೊಳೊಪ್ಪುಗುಮಾ ವನಾಂತದೊಳ್ ೩೧೭
(ಗಿರಿಜಾಕಲ್ಯಾಣಂ ೨–೭೦)

ಸುರತರುವೊಂದೆ ತತ್ಸುರಭಿಯೊಂದೆ ಸುಧಾಪಗೆಯೊಂದೆ ನಿಶ್ಚಯಂ
ಸುರಪುರವಲ್ಲಿಯಿಲ್ಲಿ ಸುಮನಸ್ತರು ಗೋಪಶುನಿರ್ಜರಾಪಗೋ
ತ್ಕರಮುಮನಂತಮೆಂದು ಗಿರಿರಾಜ ಪುರೋಪವನಾಳಿಯಲ್ಲಿಯು
ಪ್ಸರತತಿ ಕಿನ್ನರಪ್ರತತಿ ಕಿಂಪುರುಷವ್ರಜಮಿರ್ಪುದಾವಗಂ ೩೧೮

(ಗಿರಿಜಾಕಲ್ಯಾಣಂ ೨-೭೧)

ಪಾರದೆ ಕಾಮುಕವ್ರಜಮನಾದಿಸುವಂಗಜವೀರನಸ್ತ್ರಭೀಂ
ಕಾರಮುಮುಟ್ಕಿಜಂ ನೆರೆದ ನಲ್ಲರ ಸಪ್ರಣಯಪ್ರಕೋಪಹೂಂ
ಕಾರಮುಮುಲ್ಲಸತ್ ಕುಸುಮದಿಂ ನೊರೆವೇಟ್ವಳಿಜಾಲದೊಂದು ಝೇಂ
ಕಾರಮುಮೊರ್ಮೆಯುಂ ತನಮ ಭಾವಿಪೊಡಲ್ಲಿಯ ನಂದನಂಗಳೊಳ್ ೩೧೯

(ಜಗನ್ನಾಥವಿಜಯಂ ೨-೧೧)

ತಿಳಿನೀರಿಂ ನೆಯ್ದಿಲಿಂ ತಾವರೆಯಿನೆಸೆವ ಲೀಲಾಸರಸ್ಸಂಕುಳಂ ಕೆಂ
ದಳಿರಿಂ ಪೂವಿಂ ಫಲವ್ರಾತದಿಸಿಡಿದ ರಸಾಳದ್ರುಮಶ್ರೇಣಿ ಪೊನ್ನಿಂ
ಪಳುಕಿಂ ಮಾಣಿಕ್ಯದಿಂ ತೀವಿದ ಕೃತಕನಗೇಂದ್ರಾಳಿ ತಳ್ತಂಚೆವಿಂಡಿಂ
ಗಿಳಿವಿಂಡಿಂ ಸೋಗೆವಿಂಡಿಂ ಸಲೆ ಸೊಗಯಿಸುಗುಂ ತತ್ಪುರೋದ್ಯಾನಮೆಂದುಂ ೩೨೦

(ಜಗನ್ನಾಥವಿಜಯಂ ೨-೧೩)

ಪವನಂ ಬೀಱುಗುಮಾ ಪುರೋಪವನದೊಳ್ ಪೆಣ್ದುಂಬಿವಿಂಡಿಂ ಕಱಂ
ಗಿದ ನೈದಿಲ್ಗೊಳನಂಚೆವಿಂಡನೊಳಕೊಂಡಂಭೋಜಷಂಡಂ ತಳಿರ್
ಪುದಿದೇಲಾವನ[1]ಪೊಡ್ದು[1]ಗೊಂಡ ಕದಳೀಕಾಂಡಂ ತಱಂಗೊಂಡ ಚೂ
ತದ ಸಾಲ್ ಚಂದನವೀಧಿ ಸಂಪಗೆಯ ಜೊಂಪಂ ಮಾಧವೀಮಂಡಪಂ

(ಪಂಪರಾಮಾಯಣಂ ೧-೧೧೦, ಸೂಕ್ತಿಸುಧಾರ್ಣವಂ ೪-೮೬)

ಮಲರ್ದಲರ್ಗಳ್ಕಿ ಬಳ್ಕಿ ಮಱಿದುಂಬಿಯ ಮಾಲೆಗೆ ಕಾಯ್ತು ಬಯ್ತು ಕೋ
ಗಿಲೆಗೆ ಕನೊಲ್ದೊನಲ್ದು ಗಿಳಿವಿಂಡಿನ ತೊಂಡಿಗಟಿಲ್ದೆಟಿಲ್ದು ತ
ಳ್ತಲರ್ದೆಳಮಾವು ಮಲ್ಲಿಗೆಗೆ ಕೋಳ್ಗುದಿ[2]ಗೊಂಡು ಬಟಿಲ್ದು[2] ಜೋಲ್ವರು
ತ್ಮಳಿಕೆಯಿನಾವ್ರುವಲ್ಲರಿಯೊ[3]ಳೋಪ[3]ವರಾ ಪುರನಂದನಂಗಳೊಳ್

(ಅನಂತನಾಥ ಪುರಾಣಂ ೧-೯೫, ಸೂಕ್ತಿಸುಧಾರ್ಣವಂ ೪-೯೧)

ಇನಿದು ತೊಡಂಬಬಿಟ್ಟುದಿರ್ದ ಪಣ್ಗಳನೊಯ್ಯನೆ ಮೆಲ್ದು ಸೋರ್ವ ತೆಂ
ಗಿನ ತಿಳಿನೀರನೀಂಟಿ ಲತೆಯಿಂದೊಗೆತಂದಲರೊಳ್ ಮಲಂಗಿ ಮೆ
ಲ್ಲನೆ ತೊನೆಯುತ್ತಮಿರ್ದೆಲೆಯ ತಣ್ಣೆಟಲೊಳ್ ಬಿಸುರಾಜಿತ ಪೌರನಂ
ದನದೊಳಗೆ ಪ್ರಯತ್ನಸುಖಮಂ ಪಡೆವರ್ ಪಥಿಕರ್ ನಿರಂತರಂ ೩೨೩

---

[1]ದೊತ್ತು(ಸ) [2]ಮುಳ್ಗುದಗೊಂಡು [3]ಳೊಪ್ಪು(ಸ)

ಉರಿಯುತ್ತಂ ಸಲೆ ಸೀಯದಿರ್ಪ ಸವಿರಾರ್ದೆಜ್ಜಂಬುವಂ ಕೀಱಿದಾ
ಪರವಶ್ಯಂ ಬರೆ ಕಾಣದಿರ್ಪ ಬಿಡುಗಣ್ ಬಿಣ್ಪಂ ಚುಮುರ್ದಿಕ್ಕದಾ
ಮುರುಳಾಟಂ ಮಿಗೆ ಕುತ್ತದೊತ್ತ್ರದ ಕೃಶಾಕಾಲಂ ಕರಂ ದೂತರಂ
ಬರನಾಗಟ್ಟಿದ ಸಾತವದ್ವಿರಹಿಗಳ್ಗೀಂ ಸಂದುದುದ್ಯಾನದೊಳ್ (?) ೩೨೪

ಮಿಸುಪಂಗಂ ಬೆಮರೇಱೆ ನೀಳ್ದ ನಗೆಗಣ್ ಕೆಂಪೇಱೆ ಬಿಂಬಾಧರಂ
ನಸುಬೆಳ್ಪೇಱೆ ಪೊದಟ್ದ ಕಾಮರಸದಿಂ ರಾಗಾಬ್ಧಿ ಸೀರೇಱೆ ವ
ಕ್ತ್ರಸರೋಜಂ ಪೊಳಪೇಱೆ ನಿಶ್ವಸಿತದಿಂ ತೆಂಗಾಳಿ ತಂಪೇಱೆ ಸಂ
ತಸದಿಂ ನಂದನದಲ್ಲಿ ದಂಪತಿ ಮನೋಜಕ್ರೀಡೆಯಂ ಮಾಡುಗುಂ ೩೨೫

(ಜಗನ್ನಾಥವಿಜಯಂ ೯-೮೯)

ಮದನಸುಖಶ್ರಮಂ ತೊಲಗೆ ತಣ್ಣೆಲರಿಂದೆ ಬಱಿಕ್ಕೆ ಪೂಗಸ
ಸ್ಯದೊಳೊಲೆದುಯ್ಯಲಾಡುವಲರ್ಗೊಂಬಿನೊಳಾಯ್ದಲರ್ಗೊಯ್ವ ಚೂತವೃ
ಕ್ಷದೊಳಲರ್ವಜ್ಜಮಂ ತುಡುವ ಪೂಗೊಳದೊಳ್ ಜಲಕೇಳಿಯಿಂದಮಿ
ರ್ಪದಱೞಿ ನಾಡೆ ಪೊೞ್ತುಕಳೆಗುಂ ಬನದೊಳ್ ಸುರವಾರಕಾಂತೆಯರ್ ೩೨೬

(ಜಗನ್ನಾಥವಿಜಯಂ ೯-೯೦)

ನಳನೀತೀರಲತಾಗೃಹಂಗ[1]ಳ ನೆೞಲ್[1] ನೇರ್ಪಟ್ಟಿರಲ್ ಪಟ್ಟು ಕಾ
ಲ್ಗಳ [2]ನೀರಂ[2] ಪರಿಕಾಲೊಳಿಟ್ಟತಿಮುದಂ ಕೈಸಾರೆ ಕೈಸಾರೆಯೊಳ್
ಬಳೆದಿಮ್ಮಾವಿನ ಬಾೞೆಯೀಳೆಗಳ ಪಣ್ಣಂ [3]ಪೆರ್ದು ವೈಲಾಸದಿಂ
ದೆ[3]ಳೆಸೀರೀಂಟಿ ಪಥಾರ್ತರಿಪ್ಪರಳಿಕೀರಧ್ವಾನದುದ್ಯಾನದೊಳ್ ೩೨೭

(ಜಗನ್ನಾಥವಿಜಯಂ ೯-೮೮)

ತಳಿರೆ ಜಟಾಳಿ ಕೊಂಬುಗಳೆ ತೋಳ್ಗಳ್ ತುಂಬಿಯೆ ಗೋಣಕಪ್ಪು ಪೂ
ಗಳೆ ರಜಮೇ ವಿಭೂತಿ ಪಳಗುಚ್ಚಮೆ ಪಂದಲೆಮಾಲೆ ಪರ್ಬಿಯಿ
ರ್ಪೆಳಲತೆಯೇ ಫಣಾಳಿಯ ತೊಡಂಗಳು ಕೋಕಿಳಕೀರಪಾರಿವಂ
ಗಳೆ ಪ್ರಮಥಾಳಿಯಾಗೆ ಶಿವನಂದದೊಳಿರ್ದುದದೊಂದು ಮಾಮರಂ ೩೨೮

ತುಂಬಿಯ ಬಂಬಲಂಗರುಚಿ ಕಾಯ್ಗಳ ಗೊಂಚಲೆ ಕರ್ಣಪತ್ರ ಬ
ಲ್ಕೊಂಬುಗಳೇ ಚತುರ್ಭುಜಗಳಾರುಣಪಲ್ಲವ ಪೀತವಂಬರಂ
ಜೆಂಬಱೆ ಬಂದ ಬಳ್ಳಿ ವನಮಾಲಿಕೆ ಕೂಗುವ ಕೋಕಿಲಾರವಂ
ಕಂಬುಕಳಾಪಿ ಚಕ್ರಮೆನೆ ವಿಷ್ಣುವಿನಂತೆಸೆದತ್ತು ಮಾಮರಂ ೩೨೯

---

[1] ಕೊಳಗಂ(ಸ) [2] ಸಂಬಿಂ(ಅ) [3] ಪಣ್ಣ ಸೋರ್ದೊಪ್ಪಿರ್ಪ(ಅ)

ನಾಲ್ದೆಸೆಗಪ್ಪ ಕೊಂಬು ಮೊಗ ಪರ್ವಿದ ಮಲ್ಲಿಗೆ ಯಜ್ಞಸೂತ್ರ ತೊಂ
ಗಲ್ದಳಿರುಟ್ಟಕಾಸೆ ಯೆಳಗಾಯ್ಗಳಗೊಂಚಲು ಕರ್ಣಕುಂಡಲಂ
ಜೋಲ್ದ ಲತಂಗಳ್ ಚುಬುಕ ಪಾರಿವ ಕೋಕಿಲ ತುಂಬಿ ಕೀರನಾ
ಬಲ್ದನಿ ವೇದಘೋಷಮೆನೆ ಬೊಮ್ಮನೊಲಿರ್ದುದವೊಂದು ಮಾಮರಂ ೩೩೦

ತಳಿರ್ಗಳವಟ್ಟ ಪೂಗೊನೆಯ ಗೊಂಚಲೆ ಕುಂಚಮದಾಗೆ ಪಣ್ಫಲಂ
ತೊಳಗುವ ಚಿನ್ನಗುಂಡಿಗೆ ವ್ರತಾಕರಕಲ್ಪನೆಯಡ್ಡಗೊಂಬುಗಳ್
ಗಳಪುವ ಕೋಕಿಲ ಭ್ರಮರ ಕೀರ ಕುಳಂಗಳೆ ಗುಡ್ಡರೆಂಬಿನಂ
ಬಳೆಸಿರೆ ಬೌದ್ಧಮಾನಮುನಿಯಂತೆಸೆದಿರ್ದುದವೊಂದು ಮಾಮರಂ ೩೩೧

ಅಲರ್ಗಳ ಬಂಡು ಪೂಸಿದ ವಿಭೂತಿ ತಳಿರ್ಗಳೆ ಶೋಭೆ ಶಾಖೆಗಳ್
ಲಲಿತ ಜಟಾಕಲಾಪವಿಡಿದಿರ್ದ ಫಲಾವಳಿಯಕ್ಷಮಾಲೆ ಕೋ
ಕಿಲಗಳ ಪಂಚಮಸ್ವರಮೆ ಮಂತ್ರವಳಿಧ್ವನಿ ಪಾಡು ಕೀರನೊಂ
ದುಲಿ ನುತಿಯಾಗೆ ಶೈವಮುನಿಯಂದದೊಳಿರ್ದುದದೊಂದು ಮಾಮರಂ ೩೩೨

ಎಸೆವ ನವಾಂಕುರಂ ಮಿಸುಪ ದರ್ಭೆ ತಳಿರ್ ತಳಿಗಾಸೆ ಬೆಳ್ಪಿನಿಂ
ಪಸದಳಮಪ್ಪ ಮೊಗ್ಗುಗಳವಕ್ಷತೆ ಕಾಯ್ಗಳೆ ಕರ್ಣಕುಂಡಲಂ
ಮಿಸುಗುವ ಕೋಕಿಲಧ್ವನಿಯೆ ವೇದಮದಾಗಿರೆ ವಿಪ್ರನಂದದಿಂ
ಕುಸುಮಶರಂಗೆ ಸೇಸೆಗೊಡುವಂದದೊಳಿರ್ದುದವೊಂದು ಮಾಮರಂ ೩೩೩

ರವದಳಿಗೆಜ್ಜೆ ಸೋಗೆಗಳೆ ಚುಂಚು ನವಾಂಕುರರಾಜಿ ದಾಡೆ ಪ
ಲ್ಲವಮುರಿಗಣ್ ಪಿಕಂ ಡಮರುಗಂ ಸೆಳೆಗೊಂಬು ಭುಜಾಸಿ ಕಿಂಕಿಣೀ
ರವ ಸಮುದಾರಕೀರರುತಿ ಪಣ್ಗಳೆ ಪಂದಲೆಮಾಲೆಯಾಗೆ ಭೈ
ರವನವೊಲೇಂ ವಿಯೋಗಿಗತಿಭೈರವಮಾದುದೊ ಬಂದ ಮಾಮರಂ ೩೩೪

(ಸೂಕ್ತಿಸುಧಾರ್ಣವಂ ೧೦-೨೮)

ಅವಿರಳಮಾದ ಮೆಯ್ಪುಸುರ ಪಚ್ಚೆದಿಮಿರ್ ತಳಿರುಟ್ಟಪಟ್ಟೆಯಿಂಪೊ
ಪ್ಪುವ ತಿಳಕಂ ಮಧುವ್ರತಮಲರ್ದಲರ್ಗೊಂಚಲೆ ದಂಡೆ ಕೋಕಿಲಾ
ರವಮದು ಬೀರಮದ್ದಳೆಯ ನಿಸ್ಸಣಮಾಗಿರೆ ಕಟ್ಟಿ ಬಂದ ಕಂ
ತುವ ಬಿರುದಂಕದಂತೆ ಕರಮೊಪ್ಪಿದುವಂದು ಬಂದ ಮಾವುಗಳ್ ೩೩೫

(ಚಂದ್ರಪ್ರಭಪುರಾಣಂ ೮-೪೨, ಸೂಕ್ತಿಸುಧಾರ್ಣವಂ ೧೦-೪೨)

ಎಳದಳಿರೆಂಬ ಪೇಲುಡೆಟಿಲಲ್ ಸೆಳೆಗೊಂಬುಗಳೆಂಬ ತೋಳ್ಗಳಿಂ
ದಳಿಕುಳಮೆಂಬ ಕುಂತಳಮನೋಸರಿಸುತ್ತಲರೆಂಬ ಕಣ್ಮಲರ್
ಪೊಳೆಯೆ ಪೊದಟ್ದಿ ಪೆಣ್ಗೊಸೆಯ ಪೆರ್ಮೊಲೆಯೊತ್ತಿನಸೊಂದು ಭಾರದಿಂ
ದಳವಡೆ ನಿಂದು ಚೂತಲತೆ ನೋಡಿದಳೊಲ್ದು ವಸಂತಕಾಂತನಂ ೩೩೬
(ಸೂಕ್ತಿಸುಧಾರ್ಣವಂ ೧೦-೪೪)

ವನಮಾಲಾಕಳಿತಂ ಸುಪರ್ಣಮಿಳಿತಂ ಸತ್ಕಾಂತಿಪೀತಾಂಬರಂ
ಘನಸುಚ್ಛಾಯನನಂತಭೋಗಿನಿಳಯಂ ಲಕ್ಷ್ಮೀಸಮೇತಂ ಸುದ
ರ್ಶನಸೇವ್ಯಂ ಸುಮನಸ್ಸಮೂಹಶರಣಂ[1]ಗೀ[2]ಡಾಯ್ತುಪೇಂದ್ರಂಗೆ ಮ
ಜ್ಜನಕಂಗೀ ಮರನೆಂದು ಮಾಮರಕೆ ಕಾಮಂ ಕೊಟ್ಟನಾತಿಥ್ಯಮಂ ೩೩೭
(ಪುಷ್ಪದಂತಪುರಾಣಂ ೮-೮೦, ಸೂಕ್ತಿಸುಧಾರ್ಣವಂ ೧೦-೩೫)

ಕನರ್ಗೊನರಂ ಕರ್ಮಕಿ ದನಿದೋಱುವ ಕೋಗಿಲೆ ಮೇಳದಾಳ್ಗಳಿಂ
ದೆನೆ ಗಿಳಿವಿಂಡು ಬಂದೆಱತಿಯೆ ಬರ್ಪವರೆಂದೆನೆ ಪೊಣ್ಮುತಿರ್ಪ ಪೂ
ವಿನ ಪೊಸಗಂಪು ಕತ್ತುರಿಯ ಕಂಪೆನೆ ಪಾಡುವ ತುಂಬಿ ಗಾಣರೆಂ
ದೆನೆ ನನೆಯಂಬನೋಲಗದಸಾಲೆವೊಲಿರ್ದುದು ಬಂದ ಮಾವುಗಳ್ ೩೩೮
(ಕಬ್ಬಿಗರ ಕಾವಂ -೬೧-)

ಕಳಶಂ ಪದ್ಮಾಕರಂ ಕನ್ನಡಿ ಹಿಮರುಚಿ ಕಾಮಾಗ್ನಿ ಹೋಮಾಗ್ನಿ ಪುಂಸ್ಕೋ
ಕಿಳನಾದಂ ವೇದಮಂತ್ರಂ ಕುಡಿಗುಡಿ ಮಧು ಮೌಹೂರ್ತಿಕಂ ಪೂತವಲ್ಲೀ
ಕುಳಮೆಲ್ಲಂ ನಿಬ್ಬಣಂ ಬಂದಬಲೆಯರೆನೆ ಚೂತಂಗಮೀ ಮಲ್ಲಿಕಾಕೋ
ಮಳೆಗಂ ಕೊಂಡಾಡಿ ಕೈನೀರೆಱೆದನತನು ಲಾವಣ್ಯಪುಣ್ಯಾಂಬುವಿಂದಂ ೩೩೯
(ಮಲ್ಲಿನಾಥಪುರಾಣಂ ೬-೪೪, ಸೂಕ್ತಿಸುಧಾರ್ಣವಂ ೧೦-೭೦)

ಪಸರಿಸಿ ಕಟ್ಟ್ದ ಚೂತ ಗುಡಿಯಂ ಪೊಸಮಲ್ಲಿಗೆಗಾಯ್ತು ನೂತನ
ಪ್ರಸವವಿಭೂತಿ ನಿನ್ನರಸಿಗೆಂದುಱೆ ಪೇಟ್ದಿವೊಲತ್ತಣಿಂದೆ ಬಂ
ದೊಸೆದಳಿಕಾಂತೆ ಕೈಸೆಳೆದುಕೊಂಡು ನವೀನತರೋತ್ತರೀಯಮಂ
ಪೊಸಯಿಸಿ ಸೂಱೆಗೊಂಡುದಲರ್ಗಂಪುಗಳಂ ಸಹಕಾರಕಾಂತನಾ ೩೪೦
(ಲೀಲಾವತಿ ೯-೧೦೫, ಸೂಕ್ತಿಸುಧಾರ್ಣವಂ ೧೦-೬೦)

ಸೊನೆಯಿಂ ದಾನಜಲೌಘಮಂ ತೊನೆಪದಿಂ ಕೊಂಬಾಟಮಂ ಕೋಕಿಲ
ಸ್ವನದಿಂ ಬೃಂಹಿತನಾದಮಂ ಮಿಸುಪ ಕೊಂಬಿಂ ಕೊಂಬನಾಟಂದು ಕಾ
ಯ್ಪಿನ ಸೊಂಪಂ ಪೊಡೆವಗ್ರಪಲ್ಲವಮನುಸೊಪ್ಪಲ್ [3]ಕೊಂಬಿ[3]ನೊಳ್ ಪೇಱು[4]ತೊ
ಯ್ಯ[4]ನನಂಗದ್ವಿಪದಂ ತದಿರ್ಪಿದಪುದೀ ಚೂತಂ ವಿಟವ್ರಾತಮಂ ೩೪೧
(ಜಗನ್ನಾಥವಿಜಯಂ ೧೪-೬೪)

---

[1]ಣ್ಣೆಲೆ(ಸೂ) [2]ತೋ(ಸೂ) [3]ಮಾವಿ(ಅ) [4]ಕೈಯು(ಅ)

ಅಳಿಗಳೊ ನೀಳ್ದ ಕರ್ಬೊಗೆಯೊ ಕೆಂದಳಿರೋಳಿಯೊ ಸುತ್ತುಗೊಂಡು ತ
ಳ್ತಳುರ್ವುರಿಮಾಲೆಯೋ ಸರಸಪಕ್ವಫಲಂಗಳೊ ವಿಸ್ಫುಲಿಂಗ ಸಂ
ಕುಳಮೋ ಮನಕ್ಕೆ ಸಂದೆಯಮುಗುಂದಲೆಯಾಗಿರೆ ಕಾಂತೆ ಕಂಡು ಕಂ
ಡೆಳಸಿದುದೆನ್ನ ಮೈ ಕೆಳದಿ ಪೇೞಿದು ಮಾಮರನೋ ದವಾಗ್ನಿಯೋ ೩೪೨
(ಕಾವ್ಯಾವಲೋಕನಂ ೨೦೯ ; ಸೂಕ್ತಿಸುಧಾರ್ಣವಂ ೧೫-೩೧)

ಪನೆಗಳ್ ಬಲ್ಮನೆದೋರ್ಪ ಮೆಲ್ಮಗೆ ಮುಗುಳ್ವಾಯ್ ನುಣ್ದಳಿರ್ ಕೋಕಿಲ
ಧ್ವನಿ ಮುದ್ದಾದ ತೊದಳ್ಸರಂ ಪೊಳೆವ ಮಾಂಗಾಯ್ ಕಾಯಿ ಲಾಲಾಜಲಂ
ಸೊನೆ ಪೆಣ್ದುಂಬಿಯ ಝೂಂಕು ತುಂಬಿಗಬಿಪಂ ಕೈಸಾರ್ಕೆ ಕೈವರ್ಪ ಚೆ
ಲ್ವನೆ ಪೋಲ್ತಿರ್ದುವು ನಂದನಾವಳಿಗಳೊಳ್ ಮಾಕಂದ ಮಾಕಂದನಂ ೩೪೩
(ಸೂಕ್ತಿಸುಧಾರ್ಣವಂ ೧೦-೨೬)

ಅರಗಿಳಿ ದರ್ಭೆ ಪೂತರಲ್ದ ಮಲ್ಲಿಗೆ ಜನ್ನಿವಮಂ ತಳಿರ್ ಮನೋ
ಹರತರಮಪ್ಪ ಕಾಸೆ ಕಟಿಲ್ದಲೆಲ್ಗುವೊಳ್ಪಲರಕ್ಷತಂಗಳಾ
ಗಿರೆ ಮಱಿದುಂಬಿಯಿಂಚರಮೆ ಸಾಮರವಕ್ಕೆಣೆಯಾಗೆ ಕಾಮನಂ
ಪರಸುವಿಳಾಮರಂಬೊಲೆಸೆದಿರ್ದುದು ಚೂತಕುಜಂ ವಸಂತದೊಳ್ ೩೪೪
(ಸೂಕ್ತಿಸುಧಾರ್ಣವಂ ೧೦-೨೭)

ಸೊನೆಯಿಂ ಗಂಧದಿನಗ್ರಪಲ್ಲವದಿನಾದಂ ಸೀಳ್ದ ಕೊಂಬಿಂ ಜಗ
ಜ್ಜನಮಂ ಬೆರ್ಚಿಸುತಿರ್ಪ ಕಾಯಬಲದಿಂ ಭದ್ರತ್ವಮಂ ತಾಳ್ದಿ ತೊ
ಟ್ಟನೆ ಮಾಡಿತ್ತುೞಿ ಪೂತಚೂತಮಹಿಜಾತಂ ಪ್ರೀತಿಯಿಂ ಕಂತುಗಿಂ
ತು ನಿತಾಂತಂ ಮದದಂತಿಯಂತಿರೆ ತದೀಯಸ್ವಾಂತವಿಭ್ರಾಂತಿಯಂ ೩೪೫
(ಸೂಕ್ತಿಸುಧಾರ್ಣವಂ ೧೦-೪೦)

ಮಿಳಿರ್ವೆಳಗೊಂಬು ಕೈ ಕುಳಿರ್ವ ಕೆಂದಳಿರೊಂದಿದ ಕರ್ಣತಾಳಮಿ
ಟ್ಟಳಮೆನೆ ಸೋರ್ವ ಸೋನೆ ಮದಭೃಂಗಕುಳಧ್ವನಿ ಘೃಂಗವಾಲೆ ಕೋ
ಕಿಳರುತಿ ಬೃಂಹಿತಸ್ವನ ಬಿಗುರ್ತ್ರ ತಳಿರ್ತೆಳವಳ್ಳಿ ಶೃಂಖಲಾ
ವಳಿಯೆನೆ ಮುಟ್ಟೆ ಬಂದುದೆಳೆಮಾಮರನೆಂಬ ಮದಾಂಧಸಿಂಧುರಂ ೩೪೬
(ಸೂಕ್ತಿಸುಧಾರ್ಣವಂ ೧೦-೪೩)

ಅಲರ್ದೊಂಗಲ್ಗಳೆ ನೂಪುರಾಳಿಯೆನಿಸಲ್ ಮಾಂಗಾಯೆ ಮಾಂಗಾಯವೋಲ್
ಪೊಳೆಯಲ್ ಕೆಂದಳಿರೆಂಬ ಕೆಂಜಡೆ ಮರಲ್ದಲ್ಲಾಡೆಯುಂ ಕೋಕಿಳಂ
ಗಳೆ ಹೂಂಕಾರಮೊಳಂ ತೊದಳ್ ನುಡಿಯುತುಂ ವುದ್ಯಾನಲಕ್ಷ್ಮೀಕರಂ
ಗಳಿನಿಂದೊಪ್ಪಿ ಬೞಿತಂದ ಕಂದನೆನಿಸಲ್ ಜೆಲ್ವಾದುವಿಮ್ಮಾವುಗಳ್ ೩೪೭
(ಸೂಕ್ತಿಸುಧಾರ್ಣವಂ ೧೦-೪೬)

ನನೆವುಡಿವಣಿ ಕಾಯ್ಮಾಗಾಯ್
ಸೊನೆ ಮಾಣದೆ ಸುರಿವ ಜೊಲ್ಲು ತಳಿರರಳೆಲೆಯಿಂ
ದಿನಿಸುಂ ಕಣ್ಗೆಸೆದಿರ್ದುದು
ವನಲಕ್ಷ್ಮಿಯ ಕಂದನಂದದಿಂ ಮಾಕಂದಂ ೩೪೮

ಅರಳೆಲೆ ಮೇಲಾಡುತ್ತಿರೆ
ಭರದಿಂ ಮಾಗಾಯ್ಗಳೊಲೆಯೆ ಕೆಲಬಲದೊಳ್ ನಿಂ
ದರಗಿಳಿಯ ತೊದಲುನುಡಿ ಬಿ
ತ್ತರಿಸೆ ವಸಂತನ ಕುಮಾರನೆನಿಸಿತ್ತಾಮ್ರಂ ೩೪೯

(ಗಿರಿಜಾಕಲ್ಯಾಣಂ ೨-೪೧)

ಕಾಸೆಯವೋಲ್ ಕೆಂದಳಿರಾ
ಸೇಸೆಯವೋಲುದಿರ್ದ ಕುಸುಮಮಳಿಕುಳನಿಕರ
ಪ್ರಾಸಗಳೆ ವೇದಶ್ರುತಿಯೆನೆ
ಲೇಸೆನಿಸಿತು ವಿಪ್ರನಂದದಿಂ ಮಾಕಂದಂ ೩೫೦

ಸುತ್ತುಂ ನವಪಲ್ಲವವೆಳ
ಲುತ್ತಿರೆ ಮುತ್ತಿದ ಮದಾಳಿಕುಳದಿಂ ಮದನಂ
ಗೆತ್ತಿದ ಕಣ್ಪೇಲಿಯ ಪೊಸ
ಸತ್ತಿಗೆಯೆನಿಸಿದುದು ಪೂತ ಚೂತಕುಜಾತಂ ೩೫೧

(ಲೀಲಾವತಿ ೧೩-೪೪)

ಕೋಗಿಲೆ ಕರ್ಚಿಕೊಳ್ವ ಕಳಿಕಾವಸದಿಂದಳಿಪಾಯ್ದು ಬೇಗದಿಂ
ಪೂಗೊನೆ ತೂಗುತುಂ ಬಿಡುವ ಬಂಡುಗಳಿಂ ಮಿಡಿಯುಂ ಶುಕಾನನಂ
ತಾಗೆ ತಗುಳ್ದು ಸೋರ್ವ ಸೊನೆಯಿಂ ಸಮಬೀೞ್ತ ಮನೋಜರಾಜಧಾ
ರಾಗೃಹದಂತವೇನೆಸೆದುದೋ ಮಧುಮಾಸದೊಳಾಮ್ರಭೂರುಹಂ ೩೫೨

(ಲೀಲಾವತಿ ೧೩-೪೦)

ಬಿರಿಯುಱು ನೋವ್ಪುಗಂಡಜನವೋಲ್ ಸೊನೆ ಸೋರ್ವಿನಮೊಂದಿತೋಱುತಿ
ರ್ದಪಡು ತಳಿರ್ ಕರಂ ಮುಗಿದು ಕಾಯೆನುತಿರ್ಪನವಚ್ಚಭೂಮಿಯೊಳ್
ಪೊರಳ್ಪತಿಶಾಖೆ ಕಾಲ್ಗೆಱಗಿ ಬೇಡೆನುತಿರ್ಪನನಂದು ಕೇಳದಾ
ಸ್ಮರಮಧುಗಳ್ಗೆ ಪೇಳಿಸುವವೋಲ್ ಗಿಳಿಮಾತಿನ ಚೂತಮೊಪ್ಪುಗುಂ ೩೫೩

ನನೆಗೊಂಬಾಣತಿಮಾಡಿ ಪಾಡುವವೊಲಿರ್ದತ್ತು ಭೃಂಗಾಂಗನಾ
ಧ್ವನಿಯಿಂದಂ ತಳಿರ್ಗೊಂಬು ಪೆರ್ಚಿ ನಗುವಂತಿರ್ದತ್ತು ಪುಂಸ್ಕೋಕಿಲ
ಧ್ವನಿಯಿಂದಂ ಮಿಡಿಗೊಂಬು ಬಾಜಿಸುವವೊಲಿರ್ದತ್ತು ಕೀರೋಲ್ಲಸತ್
ಧ್ವನಿಯಿಂದಂ ಪೊಸಸುಗ್ಗಿಯುತ್ಸವಮನಾದಂ ಬೀಱುವಿಮ್ಮಾವಿನೊಳ್ ೩೫೪
(ಸೂಕ್ತಿಸುಧಾರ್ಣವಂ ೧೦-೩೧)

ಎಣೆಪಂದೆನ್ನಯದೊಂದು ಕೋರಕಮೆ ನಿನ್ನೀ ಕೋಕಿಲಾನೀಕಮಂ
ಪೆಣದಿತ್ತೆನ್ನಯದೊಂದೆ ಪೂಗುಡಿಯೆ ನಿನ್ನೀ ತುಂಬಿವಿಂಡಂ ರಸೋ
ಲ್ಬಣಮಾಯ್ತೆನ್ನಯದೊಂದೆ ಪಣ್ಣೆ ಗಡ ನಿನ್ನೀ ಕೀರಸಂದೋಹಮಂ
ತಣಿಪಲ್ ಸಾಲ್ಗುಮೆನುತ್ತೆ ಕಾಮನಿದಿರೊಳ್ ಕೈದೋರ್ಪುವಿಮ್ಮಾವುಗಳ್ ೩೫೫

ತಱಗಿ ತಳಿರ್ತ ಕೊಂಬು ನೆಱೆ ಪೂತು ಮುಗುಳ್ದುಮುಗುಳ್ದ ಕೊಂಬು ಕಿ
ಕ್ಕಿಱುಗಿಱುವಕ್ಕಿಗೊಂಬು ಪೆಳೆಗೊಂಬೆಳೆಗೊಂಬು ಕವಲ್ತ ಕೊಂಬು ಕಾ
ಯ್ತೊಱಗಿದ ಕೊಂಬು ಪಣ್ತೊಸೆಯ ಪಿಂಗೊನೆಯುಂ ಕೆಳೆಗೊಂಡಕೊಂಬು ಬಿ
ತ್ತೞಿಯದ ಬೀಜಗೊಂಬೆಸೆವಾಮ್ರವನಾಂತರದೊಳ್ ನಿರಂತರಂ ೩೫೬

ಅಲರಂಬಾದುವು ನಿನ್ನ ಕೋರಕದಿನೆನ್ನಾ ಚೆನ್ನವಿಲ್ ನಿನ್ನ ಗೊಂ
ಚಲಪೂವಿಂ ತಳೆದತ್ತು ತೋಮರಮನಿನ್ನೆನ್ನಾಜ್ಞೆ ನಿನ್ನಿಂದ ಸ
ತ್ಫಲಮಾಯ್ತೆಂದು ಮನೋಜರಾಜನೆ ಪಸಾಯಂಗೊಟ್ಟ ಕೆಂಬಟ್ಟೆಯಂ
ತಳೆದಂತಾದುವು ನೀಳ್ದ ಕೆಂದಳಿರ್ಗಳಿಂದಂ ಬಂದ ಮಾಕಂದದೊಳ್ ೩೫೭
(ಅನಂತನಾಥಪುರಾಣಂ ೬-೮೬, ಸೂಕ್ತಿಸುಧಾರ್ಣವಂ ೧೦-೩೩)

ರತಿಯ ಶಿರಾಂತದೊಳ್ ತೊಳಪ ಮುತ್ತಿನ ಸೂಸಕಮೆಂದು ಮಂದಮಾ
ರುತನೆ ವಸಂತರಾಜಗೊಲಿದಿಕ್ಕುವ ಚಾಮರಮೆಂದು ಕಂತುಭೂ
ಪತಿಯ ನಿವಾಸದಗ್ರನವಕಾಂಚನದೋವರಿಯೆಂದು ಸತ್ಕವಿ
ಪ್ರತತಿಗಳೆಯ್ದೆ ಬಣ್ಣಿಸುವ ಮಾಟಿಕ್ಕೆಯೊಲೊಪ್ಪಿತು ಪೂತಮಾಮರಂ ೩೫೮

ಪಡೆದು ಸುಧಾಂಶು ರಾಹುಭಯದಿಂದಮುರ್ದಂ ಮಡಗಿಟ್ಟು ನೀಳ್ದ ಪೋ
ಗದ ತೆಱದಿಂ ನಯಂಬಡೆದ ಪಚ್ಚೆಯ ಕುಪ್ಪಿಗೆಯೊಳ್ ಸುರಕ್ಷೆಯಿಂ
ಬುದನಱುದಿಂಬಿಸಿಂ ಮೆಱೆವ ಕೋಮಲಕಾಂತಿಯನಾಂತು ಚೂತಭೂ
ಜದೊಳೊಲಿದಾಡುತಿರ್ಪ ಪಸುಗಾಯ್ಗಳನೀಕ್ಷಿಸಿದಂ ನೃಪಾಲಕಂ ೩೫೯

ತಳಿರ್ವನೆಯೊಳ್ ಪೊರಳ್ದು ಸೊನೆ ಬಿಂದುಗಳೊಳ್ ನಸುನಾಂದು ಗಂಡುಗೋ
ಗಿಲೆ ಗಿಳಿತುಂಬಿಗಳ್ಗಿದು ತೆಂಕಣಗಾಳಿಗೆ ಕಂಪಿಸುತ್ತ ಪೂ
ಗಳನುಱೆ ನೂಂಕಿ ಚೈತ್ರವಿಟನೊಳ್ ವಿರಹಾತುರವಾದ ಕಾಂತೆಯೊಲ್
ವಿಳಸಿತವಾಗಿ ಮಾಮರಮೊಳಿರ್ದುವು ಮಾವಿನ ಪಣ್ಗಳೋಳಿಗಳ್

ಮದನಂ ಮುಂ ಮರುಳಾಗಿ ಶಂಕರನ ಭಾಳಾಕ್ಷಾಗ್ನಿಗಂದೇಕೆ ಸಿ ೩೬೦
ಲ್ಕಿದನೀ ಮಾಮರನೊಳ್ಪುವೆತ್ತ ನೆೞಲೊಳ್ ನಿಂದಿರ್ದೊಡಾ ಕಿರ್ಚು ತ
ನ್ನಿದಿರ್ವಾಯಲ್ಕೆಯು ಶೈತ್ಯಮಾಗಿ ಪವಪಿಂ ಮಂದಾನಿಲಂ ಚಂದ್ರಿಕಾ
ಭ್ಯುದಯಂಬೋಲ್ ಪಸಿರೂಪಮಂ ತಳೆಯನೇ ಸಾಮೀಪ್ಯಸಂಪತ್ತಿಯಿಂ ೩೬೧

ತನಿವದನಾಗಿ ಕೆಂಪನೊಳಕೊಂಡು ಸುಗಂಧಮೆ ತುಂಬಿಯಿರ್ಪ ಸೀ
ಯನೆ ರಸಮುರ್ಬಿ ಸದ್ವಿಜಪರೀಕ್ಷತೆಯಿಲ್ಲದ ಮುನ್ನ ಪೀರ್ದು ಮಾ
ವಿನ ತನಿವಣ್ಗಳಂ ಸೊಬಗರಾದವರಾಗಳೆ ತಮ್ಮ ಕೂರ್ಪ ಕಾ
ಮಿನಿಯರ ಪೆಂಪುವೆತ್ತಧರಸೇವೆಯ ಭಾವನೆಯೊಳ್ ಮುೞುಂಗುವರ್ ೩೬೨

ಮನಸಿಜಮತ್ತವಾರಣಮೊ ಕಾಮನ ಕಾರ್ಮುಕಗೇಹಮೋ ಮನೋ
ಜನ ಕೃತಕಾದ್ರಿಯೋ ಕುಸುಮಬಾಣನ ಸೆಜ್ಜೆಯೊ ಕಂತುರಾಜನಂ
ಬಿನ ರತಿಶಾಲೆಯೋ ಮದನನೊಡ್ಡಿದ ಕಾಮುಕಕಂಠಪಾಶಮೋ
ನನೆಕೊನೆಯೋದ ಮಾಮರನೊ ಪೇೞೆನೆ ರಂಜಿಸಿತೊಂದು ಮಾಮರಂ ೩೬೩

ನನೆಯುಂ ಪೇಱುವ ತೋರಗೊಂಬು ನನೆಯುಂ ಪೂಗೊಂಚಲುಂ ಪೊತ್ತು ನೆ
ಟ್ಟನೆ ಬೆಳ್ವೊಂದಿದ ಬಳ್ಳಿಗೊಂಬು ನನೆಯುಂ ಪೂಗೊಂಚಲುಂ ಕಾಯನಂ
ತೆನಸುಂ ತಾಳಿದ ಗುಜ್ಜುಗೊಂಬು ನನೆಯುಂ ಪೂಗೊಂಚಲುಂ ಕಾಯ್ಗಳಂ
ತನಿವಣ್ಣುಂ ತಳೆದಳ್ಳೆಗೊಂಬು ತರದಿಂ ಚೆಲ್ವಾದುವಿವಮ್ರಾವಿನೊಳ್ ೩೬೪

ಕನರ್ಗೊನರಿಕ್ಕೆ ನುಣ್ಗೊನರ ಬಾೞ್ವನೆ ಕೆಂದಳಿರಿಪ್ಪ ಬೀಡು ಬ
ಲ್ನನೆಗಳ ಮೇರೆ ಮೆಲ್ನನೆಯೆ ಪೆರ್ವನೆ ಮೊಗ್ಗೆಯ ತಾಣವಚ್ಚಪೂ
ವಿನ ನೆಲೆ ಸಣ್ಣಗಾಯಿ ಬಲುಗಾಯ ಪೊೞಲ್ ನಸುಮೋರೆವಣ್ಣ ತಾ
ಯ್ಪನೆ ಪೊಸಪಣ್ಣ ಗೊತ್ತಿದೆನೆ ಕಣ್ಗೆಸೆದಿರ್ದುದಸೊಂದು ಮಾಮರಂ ೩೬೫

(ಕಬ್ಬಿಗರಕಾವಂ -೧೧೧-)

ಫಲದಿಂದಂ ಪನಸಾದಿಸತ್ಫಲಮಹೀಜಂ ಪುಷ್ಪದಿಂ ಚಂಪಕಾ
ದಿ ಲಸತ್ಪುಷ್ಪಕುಜಂ ಪ್ರವಾಳದಿನಶೋಕಾದಿಪ್ರವಾಳಾಂಘ್ರಿಪಂ
ತಳೆಗುಂ ಚೆಲ್ವನದಲ್ಲದಿಂತು ಫಲದಿಂ ಪುಷ್ಪೌಘದಿಂ ಪಲ್ಲವಾ
ವಳಿಯಿಂ ಕೂಡೆ ವಿಳಾಸಮಂ ತಳೆಗುಮೇ ಚೂತಂಬೊಲನ್ಯದ್ರುಮಂ ೩೬೬

ತೀವಿದ ನುಣ್ಗೊನರ್ ಕಿಱುಗೊಸರ್ ನಸು ಬಲ್ಗೊನರೆಂಬುವೇಟಿತ್ತಿಗೆ
ತ್ತಾವಗವೆಳೆದಳಿರ್ ಕಿಱುದಳಿರ್ ಪೊಸಕೆಂದಳಿರಾಗಿ ತಳ್ತ ನಾ
ನಾವಿಧದಳ್ಳಿಗೊಂಬು ಸೆಳೆಗೊಂಬೆಳೆಗೊಂಬುಗಳಿಂದಮೊಪ್ಪುವಿಂ
ಮಾವಿನಬಳ್ಳಿಮಾವಿನೆಳಮಾವಿನ ಸೊಂಪೆಸೆಗುಂ ವಸಂತದೊಳ್ ೩೬೭

ಕಳಿಕೆ ಕೊನರ್ ತಳಿರ್ ಮುಗುಳಲರ್ ಮಿಡಿ ಕಾಯ್ ನಸುಪೋಱಿತ ದೋರೆವಣ್
ಬಳಸಿರಲಾವುದೊಂದು ಪರಿಯಿಂ ನಡೆನೋಟಿತ್ತೊಡಮಂತೆ ತಾನೆ ಕ
ಣ್ಗಳ ಸಿರಿ ತಾನೆ ರಮ್ಯಮೆನಿಸಿರ್ದು ವಿಯೋಗಿಜನಕ್ಕೆ ವಲ್ಲಭಾ
ವಳಿಗದು ಡಾಮರಂ ಮದನಕೋಪುರಮಾದುದು ಬಂದ ಮಾಮರಂ ೩೬೮

(ಜಗನ್ನಾಥವಿಜಯಂ ೧೪–೨೭, ಸೂಕ್ತಿಸುಧಾರ್ಣವಂ ೧೦–೩೮)

ಎಳೆಗಿಳಿವಿಂಡಿನೋದುವ ಮಠಂ ಭ್ರಮರಂಗಳ ಗೀತಶಾಲೆ ಕೆಂ
ದಳಿರ್ಗಳ ಜನ್ಮಭೂಮಿ ವನಲಕ್ಷ್ಮಿಯ ಪೆರ್ಮುಗನೋತಗಲ್ದ ಕೋ
ಮಳೆಯರ ಜೂಜು ಭೂತಳದ ಕಲ್ಪಕುಜಂ ಸಕಲಾವನೀರುಹಂ
ಗಳ ತಲೆನಾಯಕಂ ತುಱುಗಿ ಬಂದುದು ಚೂತಕುಜಂ ವಸಂತದೊಳ್ ೩೬೯

(ಸೂಕ್ತಿಸುಧಾರ್ಣವಂ ೧೦–೩೦)

ತಳಿರೊಳ್ಗೊಂಬಿನೊಳೊಳ್ಪ ಕೋಕಿಳಕುಳಂ ಪೂಗೊಂಬಿನೊಳ್ ಪಾಡುತಿ
ರ್ಪಳಿವೃಂದಂ ತುಱುಗಿರ್ದ ಬಲ್ಮಿಡಿಯ ತೊರಲ್ಗೊಂಬಿನೊಳ್ ಪಾಯ್ದು ಬಂ
ದೆಳಸುತಿರ್ಪ ಶುಕಾಳಿ ತಮ್ಮ ಬೆಸದೊಳ್ ತಂತಮ್ಮ ಠಾಣಾಂತರಂ
ಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್ ೩೭೦

(ಆದಿಪುರಾಣಂ ೧೧–೯೬, ಸೂಕ್ತಿಸುಧಾರ್ಣವಂ ೧೦–೩)

ರತಿಗವತಂಸಮಾದ ತಳಿರಾವ ಮರಕ್ಕೊಳವೆನ್ನ ಬಿಲ್ಗೆ ಸಂ
ಗತಶರಮಾದ ಪೂಗುಡಿಗಳಾವ ಮರಕ್ಕೊಳವನ್ಯಪುಷ್ಪಮು
ಕತೆಗಗದಂಗಳಾದ ಕೊನರಾವ ಮರಕ್ಕೊಳವೆಂದು ಮನ್ಮಥಂ
ತುತಿಯಿಸಿ ಮಾಮರಕ್ಕೆ ಕುಜರಾಜಸಮಾಖ್ಯೆಯನಿತ್ತನಕ್ಕಱಿಂ ೩೭೧

(ಚಂದ್ರಪ್ರಭಪುರಾಣಂ ೭–೪೫, ಸೂಕ್ತಿಸುಧಾರ್ಣವಂ ೧೦–೧೩೪)

ತಳಿರೊಳ್ ನೀನೆ ಜೆಡಂಗನಯ್ ನನೆಗಳೊಳ್ ನೀಂ ನೀಱನೈ ಪುಷ್ಪಸಂ
ಕುಳದೊಳ್ ನೀನೆ ವಿಳಾಸಿಯೈ ಮಿಡಿಗಳೊಳ್ ನೀಂ ಸೊಂಪನೈ ಪಣ್ತ ಪ
ಣ್ಗಳೊಳೋವೋ ಪೆಱತೇನೊ ನೀನೆ ಭುವನಕ್ಕಾರಾಧ್ಯನೈ ಭೃಂಗಕೋ
ಕಿಳಕೀರಪ್ರಿಯಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ ೩೭೨

(ಆದಿ ಪುರಾಣಂ ೧೧–೯೮, ಸೂಕ್ತಿಸುಧಾರ್ಣವಂ ೧೦–೩೬)

ಎಸೆವ ನವಾಂಕುರಂ ಕಳಿಕೆ ಬಿರ್ಚುಗೊಸರ್ ಕೊಸರೊತ್ತಿಳಿರ್ ತಳಿರ್
ಪಸುರೆಲೆ ಕೆಂಪು ಸಣ್ಣನನೆ ಬಲ್ನನೆ ಮೊಗ್ಗೆ ಮುರಲ್ದ ಮೊಗ್ಗಲರ್
ನಸುಮಿಡಿ ಸಿಂಪು ಪೂಮಿಡಿ ಬಳಲ್ಮಿಡಿ ಕಾಯ್ ಪೊವಟ್ದಿಕಾಯ್
ನಸುಪರೆಸೋರೆ ಪೋರೆಯುರೆವಣ್ಣುನಿವಣ್ಣೆಸೆದತ್ತು ಮಾಮರಂ ೩೭೩

ಬಂಪೆಳಮಾವೆ ಚಿತ್ರಜನ ಬೀಡಿನೊಳಾವುದು ರಾಜಮಾರ್ಗೆ ಕಾ
ಮುಂ ದಯೆಗೆಟ್ಟು ಕಾಮುಕಜನಕ್ಕುಱಿ ಜರ್ಗಿ ವಸಂತರಾಜ ಕೊ
ಲ್ಲೆಂದುಱಿ ಪಂಡುವೇಟ್ದಿನದುವಲ್ಲಪೆ ಮನ್ಮಥಚಕ್ರವರ್ತಿಯೆ
ಯ್ತಂದಪನಿಂದು ನಾಳೆ ಬದುಕಿಲ್ಲ ವಿಯೋಗಿಗೆ ಪಂಕಜಾನನೇ ೩೭೪

(ಸೂಕ್ತಿಸುಧಾರ್ಣವಂ ೧೦-೪೫)

ಕೋರಕಜಾಲದಿಂಪೆಸೆವ ಕೆಂದಳಿರೇಱಿ ಮಡಲ್ತು ಕೂಡೆ ಕಾ
ಯ್ವಾರಮನಕ್ಕಮೀ ಮಱಿಯ ಬಲ್ಮಿಡಿಯಾಗಿ ಪಸುರ್ಪುಗೆಟ್ಟು ಕಾಯ್
ಪೋರೆಗಳಾಗೆ ದೋರೆಯುನಿತುಂ ತನಿವಣ್ಗಳಾಗೆ ಮಾಮರಂ
ಪೌರಜನಕ್ಕೆ ಬೀಱುವುವು ಸತ್ಕವಿಯಂತೆ [1]ರಸಾಯನಂಗಳಂ[1] ೩೭೫

(ಸೂಕ್ತಿಸುಧಾರ್ಣವಂ, ೧೦-೪೯)

ಇದು ಧಾತ್ರೀಪಾರಿಜಾತಂ ಸಕಲಸುಕವಿವೃಂದಪ್ರಣೂತಂ ವಸಂತಾ
ಭ್ಯುದಯಪ್ರೀತಂ ಮನೋಭೂನೃಪವಿಜಯರಥಖ್ಯಾತಸೂತಂ ವನಶ್ರೀ
ಸುದತೀಪ್ರೇಮಾತ್ಮಜಾತಂ ಫಲತರುವೃಂದಾರ[2]ಕಲ್ಪಾಭ್ಯುಪೇ[2]ತಂ
ಮುದಭೃಂಗೀಗೀತ[3]ನೂ[3]ತಂ ಕೃತವಿರಹಿವಿಘಾತಂ ದಲೀ ಬಾಲಚೂತಂ ೩೭೬

(ಚಂದ್ರಪ್ರಭಪುರಾಣಂ ೭-೯೦; ಸೂಕ್ತಿಸುಧಾರ್ಣವಂ ೧೦-೭೧)

ಪುದಿದೆಳಗಾಯ್ ವಸಂತದ ಮೊದಲ್ ನೆರೆಮೊಪ್ಪುವ ಪೋರೆಗಾಯ್ ವಸಂ
ತದ ನಡು ಪಣ್ ವಸಂತದ ಸೆಱಂಗೆನೆ ತನ್ಮಯಮಪ್ಪಿನಂ ವಸಂ
ತದ ಪುದಿದಾದಿಮಧ್ಯಮವಸಾನಮೊಡಂಬಡೆ ತನ್ನೊಳಂ ವಸಂ
ತದೊಳಮಿದೇಂ ವಸಂತದವಗುಂತಿಗೆ ಬಾಱಿತ್ಮದಲಾಯ್ತೊ ಮಾಮರಂ ೩೭೭

(ಶಾಂತಿಪುರಾಣಂ ೭-೧೪೩; ಸೂಕ್ತಿಸುಧಾರ್ಣವಂ, ೧೦-೪೭)

ಅಂಕುರದಿಂ ಪ್ರವಾಳಕುಳದಿಂ ನನೆಯಿಂ ಮುಗುಳಿಂ ಪ್ರಸೂನದಿಂ
ದಂ ಕಿಱುಗಾಯ್ಗಳಿಂ ತೊರೆದ ದೋರೆಗಳಿಂ ತನಿವಣ್ಣಪಂಕ್ತಿಯಿಂ
ದಂ ಕಳಕಂಠಕೂಜಿತದಿನೊಪ್ಪುವ ಷಟ್ಪದವೃಂದಗಾನದಿಂ
ದಂ ಕಡುಗೊರ್ಬಿ ಚಪ್ಪರಿಪ ರಾಜಶುಕಾಳಿಯಿನಾಮ್ರಮೊಪ್ಪುಗುಂ ೩೭೮

(ಗಿರಿಜಾಕಲ್ಯಾಣಂ ೨-೩೩)

---

[1]ಸಾಂತರಂಗಮುಂ(ಸ) [2]ಕೋಶ್ಯಮ್ಯಷೇ(ಸೂ) [3]ಗೀ(ಸೂ)

ಇದು ರತಿರಾಜಭದ್ರಗಜವೋಯಿದು ಚೈತ್ರನ ರಾಜಧಾನಿಯೋ
ಯಿದು ವನಲಕ್ಷ್ಮಿಗೆತ್ತಿಸಿದ ಪೀಲಿಯ ಸತ್ತಿಗೆಯೋ ವಸಂತರ್ಗಿಂ
ತಿದು ಶಶಿಯಟ್ಟಿಯಿಂ ಸಲಹಿದುರ್ಬಿದ ಕೊರ್ಬಿದ ಕಲ್ಪವೃಕ್ಷವೋ
ಯಿದು ಧರೆಯಿಂದ ಮೂಡಿದ ನವಾಂಬುದವೋಯೆನೆ ಚೂತವೊಪ್ಪುಗುಂ ೩೭೯
(ಗಿರಿಜಾಕಲ್ಯಾಣಂ ೨-೩೪)

ತರದಿಂದಂಕುರವಂಕುರಪ್ರಕರದಿಂದಂ ಪಲ್ಲವಂ ಪಲ್ಲವೋ
ತ್ಕರದಿಂದಂ ಕುಸುಮಂ ಲಸತ್ಕುಸುಮದಿಂ ಚಂಚತ್ಫಲಂ ತತ್ಫಲಾ
ಕರದೊಳ್ ಚಾರುಶುಕಂ ಶುಕಾವಳಿಯಿನಿಂ ಭೃಂಗಾಳಿ ಭೃಂಗಾಳಿಯಿಂ
ಪರಪುಷ್ಟಂ ಪರಪುಷ್ಟಪೋತಕಕುಳಂ ಪೊಣ್ಮಿರ್ದುದಾ ಮಾವಿನೊಳ್ ೩೮೦
(ಗಿರಿಜಾಕಲ್ಯಾಣಂ ೨-೩೫)

ಸಲೆ ಸಹಕಾರವಲ್ಲಿ ಕೆಲವಂಕುರಮಂ ಕೆಲವಂ ಪ್ರಸೂನಮಂ
ಕೆಲವು ಫಲಂಗಳಂ ಮಿಸುಪ ಜೆಂಜುಗಳಿಂ ನವನಾಸಿಕಂಗಳಿಂ
ತೊಲಗಡೆ ಜಿಹ್ವೆಯಿಂ ಕರ್ದುಕಿ ವಾಸಿಸಿ ಪೀರ್ದುಣುತ್ತೆ ಸೊರ್ಕುತುಂ ಕರಂ
ನಲಿಯುತೆ ಮೀಂಟಿ ತೊಂಡುಗೆಡೆಯುತ್ತೆ ಪಿಕಾಳಿ ಶುಕಾಳಿಯೊಪ್ಪುಗುಂ ೩೮೧
(ಗಿರಿಜಾಕಲ್ಯಾಣಂ ೨-೩೭)

ಒಂದೆರಡು ಮೂಱು ನಾಲ್ಕರ
ಲಿಂದೈದಾಱೇಳು ಮಿಡಿಗಳಿರದೆಂಟೊಂಬ
ತ್ತೊಂದಿದ ಪಣ್ಗೊನೆಯಿಂ ಪ
ತ್ತುಂದೆಸೆಗಂ ಮಾವು ಬೀಱುತಿರ್ದುದು ಸಿರಿಯಂ ೩೮೨
(ಸೂಕ್ತಿಸುಧಾರ್ಣವಂ ೧೦-೩೭)

ಅಳಿ ಶುಕ ಪಿಕಕುಳರವದಿಂ
ನೆಟಲಿಂ ರೂಪಿಂ ಫಳಗಳಿಂ ಪೂವಿಂದಂ
ಬಳಸಿ ತಣಿಪುವುದು ಪೊಸಮಾ
ವೆಳಸಿದ ಪಾಂಥಪ್ರತಾನಪಂಚೇಂದ್ರಿಯಮಂ ೩೮೩
(ಗಿರಿಜಾಕಲ್ಯಾಣಂ ೨-೪೩)

ಕಾವಂಗೆಂದು ವಸಂತಂ
ಭಾವಿಸಿ ಸಮೆದಿಟ್ಟ ನೀಲದರಮನೆಯೆನಿಕುಂ
ಮಾವಿನ ಕಾವಿನ ಹೂವಿನ
ಠಾವಿನ ಮೊದಲಿಂದೆ ತೀವಿದಳಿಗಳ ಬಳಗಂ ೩೮೪
(ಗಿರಿಜಾಕಲ್ಯಾಣಂ ೨-೩೮)

ಸಯ್ಗೊಂಬಿನ ತಳಿರ್ಪುದುವಿನ
ಮುಯ್ಗುರೆದಿರೆ ಗಿಳಿಯು ಶಿಶುಗೆ ಪಣ್ಗಳ ರಸದಿಂ
ಬಾಯ್ಗಿಣ್ಣಲಾಗಿ ಮಾಣದೆ
ತಾಯ್‌ಗಿಳಿ ತಂದೆಱೆದುದೊಂದು ಚೂತದ್ರುಮದೊಳ್ ೩೮೫

(ಸೂಕ್ತಿಸುಧಾರ್ಣವಂ ೧೦-೫೭)

ಮಳಯಾನಿಳನಿಂದಾಡುವ
ಸೆಳೆಗೊಂಬಿನ ಚೂತಫಳಮನೆಯ್ದೆ ಕರ್ದುಂಕುತ
ಕಳವಳಿಪರಗಿಳಿ ಪೋಲ್ತುದು
ಮುಳಿದಿನಿಯಳ [1]ಚುಂಬನಕ್ಕೆ ತವಕಿಪ[1] ವಿಟನಂ ೩೮೬

(ಸೂಕ್ತಿಸುಧಾರ್ಣವಂ ೧೦-೫೯)

ಗಿಳಿಯು ಹಸುಗೂಸು ಮಾವಿನ
ಸೆಳೆಗೊಂಬಿನ ತಳಿರ ತೊಟ್ಟಿಲೊಳಗೞುತಿರೆ ಕಂ
ಡಳಿನಿವಹಮಕ್ಕಱಿಂ ಜೋ
ಗುಳಮಂ ಪಾಡಿದುವು ತೂಗಿದಂ ಗಂಧವಹಂ ೩೮೭

(ಸೂಕ್ತಿಸುಧಾರ್ಣವಂ ೧೦-೫೮)

ಅಱತೆರ್ದೆಯಾಱೆ ಪೀರ್ದುಮಿನಿಯಳ್ಗಿನಿದೆಂದಿರದೀಂಟವೇೞ್ದು ಮು
ಟ್ಕಱ ಮಱಿಗಳ್ಗೆ ಮುಕ್ಕುಳಿಸಿ ತಂದೆಱದುಂ ಕಳಮಕ್ಕಿಯೆಲ್ಲಮಂ
ನೆಱೆ ಬಿಳಿಯೊಟ್ಟಿಲೊಳ್ಪುಣಿಸುಮಾಡಿ ಮಹಾಮ್ರದ ತೋರವಣ್ಗಳೊಂ
ದಱಸರದಂತುಗಾಣದೆನಲೊಂದು ಶುಕಂ ಮಧುಸಮ್ಮದೋತ್ಸುಕಂ ೩೮೮

ಗಿಡುಗಂ ಕೊಂದುದೊ ಬೇಡರಿಟ್ಟ ಬಲೆಯೊಳ್ ಪೋಣ್ ಬಿರ್ದನೋ ಪಕ್ಕವೇ
ನುಡಿದತ್ತೋ ಪಿಡಿದನ್ಯಶಾರಿಕೆ ರತವ್ಯಾಪಾರದಿಂದೊಯ್ದುದೋ
ತಡೆದಂ ಮತ್ಪ್ರಿಯನೆಂದು ನೊಂದು ತಳಿರ್ಗಳ್ [2]ನಾಂಬನ್ನೆಗಂ ದುಃಖದಿಂ[2]
ಗಡ ಕೀರಪ್ರಿಯಕಾಂತೆ ಸುಯ್ದು ಸುರಿವಳ್ ಭೋರೆಂದು ಬಾಷ್ಪಾಂಬುವಂ ೩೮೯

(ಲೀಲಾವತಿ ೬-೧೧೩)

ಅಳಿ ಬಳಸಿ ಸೊನೆಯ ಕಂಪಂ
ಬಳೆದೊಟ್ಟವೊಲೆಸೆವ ತಳಿರ ಶಾಖಾಭುಜದೊ
ಳ್ದಳಿರೊಳ್ ಗೞಿಪುವ ಗಿಳಿಯಂ
ಗಿಳಿಯೋದಿಸುವಂತೆ ಚೂತಲತೆ ಕರಮೆಸೆಗುಂ ೩೯೦

(ಲೀಲಾವತಿ ೯-೯೩)

---

[1]ವದನಚುಂಬನೋತ್ಸುಕ(ಸೂ) [2]ಸೊಂಕಲ್ಕೆ ಮೆಯ್ಯುಗಂಮ ಮು(ಸ)

ಅಲರ್ವೆರಸಲುಗುವ ತಳಿರೊಳ್
ಕಲಸಿದ ಮಾಂಗಾಯ್ಗೆ ಪಾಯ್ದು ಮಧುಮಾಸದೊಳ
ಗ್ಗಲಸಿದ ನಲವಿಂ ತಳಿರು
ಯ್ಯಲಾಡಿದುವು ಗಿಳಿಯು ಮಱಿಯುಮೆಳಗೋಗಿಲೆಯುಂ ೩೯೧
(ಲೀಲಾವತಿ ೯–೧೦೨)

ಬಿರಿಯಲು ಪೊಂಗಿದ ಪಣ್ಗಳ
ನುರವಣೆಯಿಂ ಸಾರ್ಚಿ ಚಂಚುಪುಟದಿಂ ಸವಿಯಂ
ಬರೆತೆಗೆದು ತಣಿದು ತವಕವ
ನರಳುತ್ತಿರೆ ಮೆಱೆದವಾಮ್ರದೊಳ್ ಶುಕನಿಕರಂ ೩೯೨

ಬಿಗಿಯುಪ್ಪಿ ಮೊಗಮನಿಟ್ಟಾ
ಲಿಗಳಂ ನಸುಮುಚ್ಚಿ ಪಕ್ಷಯುಗವೆಳಲೆ ರಸಂ
ದೆಗೆವ ದನಿ ತಾಂ ನಿಮಿರೆ ನಾ
ಲಗೆ ಚಿಗುರುತ್ತಿರೆ ಸವಿದುದು ಗಿಳಿ ತನಿವಣ್ಣಂ ೩೯೩

ಎಳಸಿ ನೆಗೆತಂದು ಮಿಕ್ಕ
ಗ್ಗಳಿಸುತ ವಿಟರಂತಿರಪ್ಪಿ ಮಧುರರಸಂ ವೆ
ಗ್ಗಳಿಸೆ ಲವಲವಿಸುತಂ ಪ
ಣ್ಣೊಳಗದ್ದುದದೊಂದು ರಾಜಶುಕನತಿಭರದಿಂ ೩೯೪

ತಳಿರಂ ಚಿವುಂಟಿ ಪೂಮಿಡಿ
ಗಳನಿರದೆಂಜಲಿಸಿ ಕಾಯಿಗಳ ಪಣ್ಣರಸಂ
ಗಳನೀಂಟಿ ತಂಡತಂಡದೆ
ಗಿಳಿಗೆಡೆವರೆ ಗಿಳಿಗಳೆಸೆದವೆಳೆಮಾವುಗಳೊಳ್ ೩೯೫

ತನಿವಣ್ಣಿಂ ಮಾರುತಾಂದೋಳದಿನೊಸರ್ವ ರಸಾಸಾರಮಂ ದೂರದಿಂ ಭೋಂ
ಕನೆ ಕಂಡೆಯ್ತಂದು ಕಂಠಂ ನಿಮಿರ್ದಮರ್ದಿರೆ ಪಕ್ಷದ್ವಯಂ ಜೋಲೆ ಕಣ್ಗಳ್
ಮನದೊಳ್ ಸಮ್ಮೀಳನಂಜೆತ್ತಿರೆ ತನಿರಸಮಂ ಪೀರ್ದುಪೀರ್ದಾರ್ದು ಕೀಱಿಱ್ಗಂ
ಬಿನೊಳಿಡ್ಡಂ ಮೆಟ್ಟಿ ತಿಟ್ಟುಂಡೆಱೆಯೆ ಗಳಸಿದತ್ತಾಮ್ರದೊಳ್ ತಾಮ್ರತುಂಡಂ ೩೯೬
(ಚಂದ್ರಪ್ರಭಪುರಾಣಂ ೭-೮೭, ಸೂಕ್ತಿಸುಧಾರ್ಣವಂ ೧೦-೫೪)

ಕನರ್ಗಾಯಂ ಕರ್ಚಿ ಮೆಯ್ ಕೊಕ್ಕರಿಸಿರೆ ಸೊನೆಯಂ ಪೊಕ್ಕಳಂ ಕಚ್ಚಿ ಕಿಱತ್ರಿಂ
ದೆಸುತ್ತುಂ ಕೀೞ್ಗೊಂಬಿನಿಂಬಂ ಬಿಸುಟು ತುರಿಪದಿಂ ಲಂಘನಂಗೆಯ್ದು ಮೇಲ್ಗೊಂ
ಬಿನ ಪಣ್ಣಂ ಚಂಚುವಿಂ ಪೀರ್ದೊಸರ್ವ ರಸಮನೊಲ್ದಂದದಿನೀಂಟಿ ಕೈಮಿ
ಕ್ಕೆನಸುಂ ಕೈಗಣ್ಮಿ ತೆಟ್ಟಂದಿೞಿಯೆ ಗಟಿಸಿದತ್ತಾನ್ರುದೊಳ್ ತಾಮ್ರತುಂಡಂ ೩೯೭
(ಸೂಕ್ತಿಸುಧಾರ್ಣವಂ ೧೦-೫೬)

ತುಂಬಿಗಳೆಳಮಾವಿನ ಸೆಳೆ
ಗೊಂಬುಗಳಂ ಕರ್ಚಿ ಮೊರೆದು ಪಾಱುದುನಲರ್ಗಂ
ತುಂಬಿ ತೆಗೆದೆಚ್ಚ ಪೊಂಗಱ
ಯಂಬುಗಳೆನೆ ಮಧುಮದಾಂಧ[1]ನೆನಿಪತನುವಿನಾ[1] ೩೯೮
(ಲೀಲಾವತಿ ೧೩-೪೨)

ಪೊಸಕುಸುಮದ ಪರಿಮಳಕಂ
ಮುಸುಕಿರ್ದಾ ಅಳಿಯ ಕಂಡ ಮಾವಂ ಕಾಣಂ
ಎಸೆವ ಫಲಾವಳಿ ಪುದುಗಿರೆ
ಬಿಸಜಾಕ್ಷಂ ಮಾವ ಕಂಡನಳಿಯಂ ಕಾಣಂ (?) ೩೯೯

ಕಡುಸೊಕ್ಕಿಂದಲರಂಬನಾಸೆಯೆನಿಸಿ ತೆಂಗಾಳಿ ತನ್ನಿಚ್ಛೆಯಿಂ
ನಡೆತಂದಪ್ಪುದು ಬೇಗದಿಂ ಬಿರಯಿ ನೀಂ ಪೋಪೋಗು ಪೋಗೆಂದು ಮುಂ
ಗುಡಿಯೊಳ್ ಸಾಱುವ ಡೌಡೆಯೆಂಬ ತೆಱದಿಂದಂ ಬಗ್ಗಿಸುತ್ತಿರ್ದುದು
ಗ್ಗಡದಿಂ ಕೋಗಿಲೆ ಪೊಗ್ಗೆಯಿಂ ಮಿಡಿಗಳಿಂ ಸೊಂಪೇಱುದಿಂಮಾವಿನೊಳ್ ೪೦೦

ಉಗುರೊತ್ತಿಂ ಸೋರ್ವ ಸೊರ್ಕುಂಗೊನರ ಸೊನೆಯ ತೇರ್ಕೈಸಿ ಬಾಯ್ದಾರೆಯಂ ತಾ
ಳುಗೆಮುಟ್ಟುತ್ತೀಂಟಿ ಬಾಯಂ ತೆಱೆದು ಪರಭೃತಂ ಕಾಯ್ದು ಕೀೞ್ಗೊಂಬಿನೊಳ್ ಕೆ
ನ್ಮಿಗೆ ಪೊಕ್ಕುರ್ವೇೞ ತುಪ್ಪುೞಿರ್ ಮಡಗೆದಱಿ ಕುಳಿರ್ ಪೋಪುಗಿಲ್ ಪೋಪುಗಿಲ್ ಪೋ
ಪುಗಿಲೆಂದಿಮಾವಿನೊಳ್ ತಳ್ತೊಲೆದುಲಿದುದು ತನ್ನಿಚ್ಛೆಯಿಂದನ್ಯಪುಷ್ಟಂ ೪೦೧
(ಅನಂತನಾಥಪುರಾಣಂ ೬-೭೩; ಸೂಕ್ತಿಸುಧಾರ್ಣವಂ ೧೦-೫೧)

ಸೊನೆವನಿ ಚಂಚುವಿಂ ಪನಿಯೆ ಮಾಂಗೊನರಂ ನಲಿಗರ್ಚಿ ಸೊರ್ಕಿನಿಂ
ತನುದಳವೇೞ ಕಂಠನಿವರಂ ತೊವರೇೞ ಪಟುತ್ವವೇೞ ಕಾ
ಮನ ನನೆಯಂಬುಗಳ್ ವಿರಹಿವೃಂದದ ಮೆಲ್ಲೆರ್ದೆಯಂ ಪುಗಲ್ ನಿಜ
ಧ್ವನಿ ಬಗೆಯಂ ಪುಗಲ್ ಪುಗಿಲ್ ಪೋ ಪುಗಿಲೆಂದುದು ಕೋಕಿಳವ್ರಜಂ ೪೦೨
(ಜಗನ್ನಾಥವಿಜಯಂ ೧೪-೩೯, ಸೂಕ್ತಿಸುಧಾರ್ಣವಂ ೧೦-೫೧)

---

[1]ವೆನಿಸಿತನುದಿನಂ(ಸ)

ಎಳಲತೆ ಪೆಕ್ಕಣಕ್ಕೆ ತಳಿರಂ ತೆಗೆದುಟ್ಟುದದರ್ಕೆ ನಟ್ಟುವಂ
ಮಲಯಸಮೀರಣಂ ಪವನದಂಡಮೊಳಿಂತಿದೆ ಪಣ್ಣೆ ಬಂದ ಮು
ದ್ದಳೆ ಮಧುಮೂತಿ ನಾಗಲತೆ ಮಲ್ಲಿಗೆ ಮಾಲತಿ ಬನ್ನಿಸೆಂದು ಸೂ
ಳ್ವಿಳನವೊಲೆತ್ತಲುಂ ಕರೆಗುಮಾ ವನಮೊಳ್ ಕಿಸುಗಣ್ಣ ಕೋಕಿಲಂ ೪೦೩

(ಅನಂತನಾಥಪುರಾಣಂ ೩-೧೧, ಸೂಕ್ತಿಸುಧಾರ್ಣವಂ ೪-೯೨)

ಮಾಂವಳಿರೋಲೆ [1]ಕಂತುಬರೆವಂ[1] ಮಱಿದುಂಬಿಗಳಕ್ಕರಂಗಳೊಳ್
ಪೊಂದಿದ ಮುಪ್ರೆ ಚಂದ್ರ[2]ನದನಾ[2] ಮಲಯಾನಿಲನುಯ್ವನಟ್ಟುವಂ
ಬಂದ ವಸಂತರಾಜ[3]ನೊಡಗೂಡುತ ಸೌಖ್ಯದಿನೊಂ[3]ವದಿರ್ದಪರ್
ಸೊಂದಪರೆಂದು ತೆಟ್ಟುತೆಱಿಮೋದುವವಂ ಕಳಕಂಠವಾಚಕಂ ೪೦೪

(ಸೂಕ್ತಿಸುಧಾರ್ಣವಂ ೪-೪೨)

ಅಂತಂತೆ ನಲಿದು ನಾಲಗೆ
ತೀಂತೆ ಮಸಗೆ ಕಳಿಕೆಗೆಳಸಿ ಚಂಚುವನಿಟ್ಟೋ
ರಂತೆ ನಲಿನಲಿದು ಸವಿದು ನಿ
ರಂತಂ ಕರೆಪತ್ತು ಮಾವಿನೊಳ್ ಪರಪುಟ್ಟಂ ೪೦೫

(ಗಿರಿಜಾಕಲ್ಯಾಣಂ ೨-೪೨)

ಕಾಮನ ಬಾಣದಿಕ್ಕೆವನೆಯೊ ಭ್ರಮರಾಳಿಯ ಭೋಜ್ಯಶಾಲೆಯೋ
ಭೂಮಿಯದೊಂದು ಗಂಧಗುಣಮಿರ್ಪೆಡೆಯೋ ವಿಲಸತ್ಸದಾಗತಿ
ಪ್ರೇಮದಿ ಸೌರಭಂದಳೆದ ತಾಣಮೊ ಪೇೞಿಮಿದೆಂದು ಕಂಡವರ್
ಕಾಮಿಸೆ ಮಾಲೆಗಾರರೊಸೆಮೋವುವ ಪೂವಿನ ತೋಂಟವೊಪ್ಪುಗುಂ ೪೦೬

(ಗಿರಿಜಾಕಲ್ಯಾಣಂ ೨-೬೦)

ಋತುಗಳ ಸೆಜ್ಜೆ ತುಂಬಿಗಳ ಭೋಜನಶಾಲೆ ಮನೋಜನಸ್ತ್ರಸಂ
ತತಿಯ ಸಮುದ್ಭವಸ್ಥಲ ಕುಮಾರಸಮೀರಣನಾಡುವಂಗಣಂ
ರತಿಯ ಲತಾಗೃಹಂ ಸೆಗೆಟ್ಟಿ ಪೆಂಪಿನದೊಂದು ಕರಂಡಮೆಂಬಿನ
ಲ್ಕತಿಶಯಮಾಗಿ ವರ್ಣಿಸುವೆನಲ್ಲಿಯದಲ್ಲಿಯ ಪುಷ್ಪವಾಟಿಯುಂ ೪೦೭

ಓಲಗಶಾಲೆ ಪೂಗಿಡುಗಳೋಳಿಗೆ ಭೋಜನಶಾಲೆ ಮತ್ತಭೃಂ
ಗಾಳಿಗೆ ಜೇನಸಾಲೆ ಕುಸುಮೇಷುಗೆ ಸೌರಭಶಸ್ತ್ರಶಾಲೆ ತೆಂ
ಗಾಳಿಗೆ ನಾಟ್ಯಶಾಲೆ ಕುಸುಮಾಚಯದಪ್ರಚಲತ್ಪುರಾಂಗನಾ
ಲೋಲಕಟಾಕ್ಷಮಾಲೆಗೆನಲೊಪ್ಪುವವಲ್ಲಿಯ ಪುಷ್ಪವಾಟಿಗಳ್ ೪೦೮

———

[1]ಕಂಠರವಮಾ(ಸೂ) [2]ಸವನಂ(ಸ) [3]ರತೋತಿರಿಯೊಂ(ಸೂ)

ಆಗಳುಮುಳ್ಳಲರ್ದಲರ್ವ ಪೂಗಳ ಕೆಂಪಿನ ಸೊಂಪಿನೆಟ್ಟಿರ
ಕ್ಕಾಗರಮಾದ ಪುಷ್ಪಲತೆ ಪೂಗಿಡು ಪೂವರಸೆಂಬಿವಂ ಮನೋ
ರಾಗದಿನಾಗಳುಂ ಮುಸುಱಿನಿಂದಳಿಮಾಲೆಯ ಗೀತನಿಸ್ವನಾ
ಭೋಗದೆ ಪುಷ್ಪವಾಟಿ ಬಗೆಗೊಳ್ಳುವನಂಗನ ಗೀತಶಾಲೆವೋಲ್ ೪೦೯

(ಜಗನ್ನಾಥವಿಜಯಂ ೯-೯೩)

ಸುರಗಿಯ ಕೆಂಪು ಸಂಪಗೆಯ ಕೆಂಪದಿರ್ಗಂತಿಯ ಸೊರ್ಕುಗಂಪು ಪಾ
ದರಿಯಲರ್ಗಂಪು ಪಡ್ಡಳಿಯ ಕಂಪಿರವಂತಿಯಗಂಪು ನೊಲ್ಲೆಯೊಂ
ದುರುವಣಿಗಂಪು ಮಲ್ಲಿಗೆಯ ಕಂಪು ಸರೋಜದ ಕಂಪು ನೀಳನೀ
ರರುಹದ ಕಂಪು ಕೇತಕಿಯ ಕಂಪೆಸೆಗುಂ ಸಲೆ ಪುಷ್ಪವಾಟಿಯೊಳ್ ೪೧೦

(ಗಿರಿಜಾಕಲ್ಯಾಣಂ ೨-೬೧)

ಪೊದಱಿಸೆಯಲ್ ಮಲರ್ದ ಮರುಗಟ್ಟಿದ ಪಚ್ಚೆಗಂಪು ತೀ
ವಿದ ದವನಂ ನಿಮಿರ್ದ ಮುಡಿವಾಳಮುರಲ್ದಿರವಂತಿಗೆ ಮೊಗ್ಗದುಂ
ಬಿದ ಪೊಸಜಾತಿಯಲ್ಲುಗುವ ಮಲ್ಲಿಗೆ ಮತ್ತಮನೇಕ ಪುಷ್ಪಸಂ
ಪದವೆಸೆದಿರ್ಪ ತದ್ವನವಿಶೇಷಮಶೇಷಜನಪ್ರಿಯಾವಹಂ ೪೧೧

ಎಲೆ ದೋಱಲೇಕೆ ಬೇರ್ಗಳ
ನೆಲೆಯುಂ ಬಲ್ಲವರಿಗೆಂಬವೋಲ್ ಬನದೇವಿಯ
ಸುಲಲಿತದ ಚಮರದಂದದೆ
ನಲವಿಂ ಬೆಳೆದಿರ್ದವಲ್ಲಿ ಮುಡಿವಾಳಂಗಳ್ ೪೧೨

ಸಕಲಪ್ರಸೂನ ಭೂಲೋ
ಕಕೆ ಗಂಧವನಿತ್ತಪೆಂದು ತಾಂ ಪನ್ನಗಲೋ
ಕಕೆ ಪರಿಮಳವೀವಂದದೆ
ಸುಕರದ ನೆಱವೇರ್ಗಳಿಡಿದವಾ ಚಾಳಗಳೊಳ್ ೪೧೩

ಶಿಶುವೋಲ್ ಕಾಣಿಸಿ ತೋರ್ಕುಂ
ಯೆಸಕಮನೆಂದೆನಿಪ ನಾಡಗಾದೆಯ ನುಡಿಯೊಳ್
ಮಿಸುಪಂಕುರದೊಳ್ ಗಂಧವ
ಪಸರಿಸಲೆಸೆದಿರ್ದವಿಡಿದ ಮರುಗದ ಗಿಡುಗಳ್ ೪೧೪

ಹಬ್ಬದ ಹೂವೆನುತಂ ಜನ
ದಬ್ಬರವೆಸಗಲ್ಕೆ ಚೈತ್ರನಗರಿಯ ಪರಿಮಳ
ದುಬ್ಬರದಂಗಡಿಯೆಂದೆನ
ಲೊಬ್ಬುಳಿಯಾಗಿರ್ದವೆಸೆವ ದವನದ ಮೊದಲ್ಗಳ್ ೪೧೫

ಪಲತೆಱದ ಪರಿಮಳಂಗಳ
ಕಲಸುತಲೊಂದಾಗಿ ಚೈತ್ರನೆಂಬ ವಿರಂಚಿಯೆ
ಬಲುಗಂಪುಸೊಂಪುಮಾಡಿದ
ವೊಲು ಪಚ್ಚೆಯತೆನೆಗಳೊಪ್ಪಿದುವು ಸೊಗಸಿಂದಂ ೪೧೬

ಚಿತ್ರಭವಂಗೆ ಬಸಂತಂ
ಬಿತ್ತರದಿಂಜೆಸೆವ ಪಚ್ಚೆಪರಿಯಾಣದೊಳಂ
ಮುತ್ತುಮಾಣಿಕನಿವಾಳಿಯ
ನೆತ್ತಿದ ತೆಱನಂತೆ ತೋಱುದುವು ಕಣಗಿಲೆಗಳ್ ೪೧೭

ಸಂಧ್ಯಾಕಾಲದ ಕುಸುಮುವ
ನಿಂದ್ಯಾಭಾವದೊಳೆ ನಗುವವೋಲುದಯದೊಳಂ
ಮೂಂದ್ಯದ್ವಿರೇಫ ಮುಸುಕಿರೆ
ನಂದ್ಯಾವರ್ತಗಳ ಪಂಕ್ತಿ ಶೋಭಿಸುತಿರ್ಕುಂ ೪೧೮

ಮುತ್ತಿಗೆ ಪನಳದ ಕಾವಂ
ತೆತ್ತಿದ ಮೂಗುತಿಯ ಸುಗ್ಗಿ ಸೊನ್ನರನೇಂ ತಂ
ದಿತ್ತನೊ ರತಿಗೆಂಬಂತೆಸ
ದತ್ತು ಮುಗುಳ್ವಿಡಿದ ಪಾರಿಜಾತ ಚಯಂಗಳ್ ೪೧೯

ಅರಗಿಳಿ ತೇಜಿಯನಡಱಿಯೆ
ಸರಿಸದೊಳಂ ಕುಣಿಸಿ ರಾಯರಾವುತನೆನಿಸಿದ
ಸ್ಮರನ ಸಿಂಗಾಡಿವಿಲ್ಲನ
ಸರಳುಗಳಿವೆನಲರಳಿಡಿದುವಿರವಂತಿಗೆಯೊಳ್ ೪೨೦

ಮುಗುಳಂಬನಂಬು ಬಿರಿಯಿಯ
ಸುಗಿದೆಱಂಗಿಡುವ ತೈಲವರ್ತಿಗಳೆಂಬೊಲ್
ಮಿಗೆ ಮಕರಂದದೆ ಸೇವಂ
ತಿಗೆಗಳ್ ಪ್ರೂತೆಸೆದುವಲ್ಲಿ ಮಘಮಘಿಸುತ್ತಂ ೪೨೧

ಸೊವಡಿಂಗೆ ಮುಸುಱಿದಳಿಮು
ಪ್ರೆಪ್ರೊಲಿರೆ ಮದನನ ಸುಗಂಧಭಂಡಾರಮೊಲಾ
ನವಸೌರಭಮಂ ಕೊಡುತಿ
ರ್ದಪ್ಪು ಸೇವಂತಿಗೆ ವಸಂತಸಮಯೋತ್ಸವದೊಳ್ ೪೨೨

ಚಿರಗಂಧಮಲ್ಲದಿರೆಯಿರೆ
ಕೊರಗುವತಿಕ್ಷಣಿಕಭೋಗ್ಯಕುಸುಮಂಗಳವೇಂ
ದೊರೆಯೆ ಮಿಕ್ಕುವೆಂದು ನಗುವಂ
ತಿರೆ ಬಿರಿದುವು ಸುಸಗಿ ಬಿರಿಯಿಯೆದೆ ಬಿರಿವುವಿನಂ ೪೨೩

ಎಲೆಯೆಂಬ ಚೆಲ್ವಿನುಳ್ಳಿಡೆ
ತೊಲಗಿರೆ ಮಧು ನೆರೆಯೆ ತನ್ನೊಳೊಲವಿಂದಂ ಪಾ
ಟಲಿಗಾಯ್ತ್ತಧರದ ಕಱತಯೆನ
ಲಲರ್ಗೆಜಗಿರ್ದಳಿ ವಿರಾಜಿಕುಂ ಪಾಟಲಿಯೊಳ್ ೪೨೪

ಸುರಗಿಱಿಂದಂತು ಕುರಕುಮುದಂ ಕಡುಚಿತ್ರನೆ ನಂದಿವರ್ತವಾ
ದರೆ ಪಸುಜೀವಿ ಸಂಪಗೆ ವಿಸುದ್ಧತೆ ತಾವರೆ ಪ್ರೂರ್ಣಮಿಲ್ಲಿ ಪಾ
ದರಿಯದುನಿಂದ್ಯವಾದಿ ಕರವೀರ ಭಯಂಕರ ದಾಸವಾಳ ತೊ
ಕ್ಷ್ರ ಪೆಸರೆಂದು ಪುಷ್ಪಶರನಿತ್ತನು ಜಾತಿಗನರ್ಘರಾಗನುಂ ೪೨೫

ಇವು ಕಂದರ್ಪಂಗೆ ದೋರ್ದರ್ಪವನಳಿಗೞಿಪಂ ಗಂಧವಾಹಂಗೆ ಸೌಗಂ
ಧವನಬ್ಜಂಗೂರ್ಜಿತಾಟೋಪಮನಳವಡಿಕುಂ ತಮ್ಮ ಪುಷ್ಪೇಕ್ಷ್ಣವಿಂ ತ
ಮ್ಮ ವಿಕಾಸೋಲ್ಲಾಸದಿಂ ತಮ್ಮಯ ಪರಿಮಳದಿಂ ತಮ್ಮ ಚೆಲ್ವಿಂದೆನಲ್ ಜಾ
ತಿ ವನೇಜಾತಪ್ರಸೂನಾವಳಿಯಸಿಟಿಸುತಂ ಸೊಂಪುವೆತ್ತಿರ್ದುವೆತ್ತಂ ೪೨೬

(ಜಗನ್ನಾಥವಿಜಯಂ ೪-೬೫)

ನನಗೊಸೆಯೋಯ್ತು ತನ್ನನೆಯಿಂದ ಮುದಮುರ್ವಿಗೆ ತನ್ನ ಪುಷ್ಪದಿಂ
ಮನಸಿಜನಿಂಗೆ ಪುಷ್ಪಶರನೆಂಬ ಪೆಸರ್ ನೆಳಗಿತ್ತು ತನ್ನ ಪೂ
ವಿನ ಮಧುವಿಂ ಮದಾಳಿ ಮಧುಪಾಂಕಮನಾಂತುದು ತನ್ನ ಗಂಧದಿಂ
ದನಿಲನಿಗಾಯ್ತು ಗಂಧವಹಕಸ್ವಮಿದೇಂ ಸುರಹೊನ್ನೆ ಚೆನ್ನನೋ ೪೨೭

ಅಂಡಲೆದು ಜಾದಿಯಂ ಬಂ
ಡುಂಡಳಿಯುಂ ಮಿಕ್ಕು ಮಧುಕರಂಗಳ್ ಭರದಿಂ
ಬಂಡುಣ್ಬುವೆನೆ ಸುಗಂಧಮ
ಖಂಡಿತಮತಿನುತ ರಸೋದಯಂ ಮಾಲತಿಯಾ ೪೨೮

(ಗಿರಿಜಾಕಲ್ಯಾಣಂ ೨-೬೭)

ಚಿತ್ರಭವನಂಗರಾಗದ
ಕತ್ತುರಿತೀವಿರ್ದ ಪೊನ್ನ ಬಟ್ಟಲ್ಗಳಿನಲ್
ಮುತ್ತಿದಳಿ ಮುಸುಱಿ ನಿಲಲೆಸೆ
ಯುತ್ತಿರ್ದುವು ಕರ್ಣಿಕಾರ ಕುಸುಮುಚಯುಂಗಳ್ ೪೨೯
(ಜಗನ್ನಾಥವಿಜಯಂ ೧೪-೩೭)

ಎಳಲತೆಯ ಲಾಸ್ಯಲೀಲೆಯೊ
ಳಳಿನೀಗಿತಕ್ಕೆ ನಿಂದು ಬಾಜಿಪ ಮಂದಾ
ನಿಳನಟನ ಪೊನ್ನ ತಾಳಂ
ಗಳಿವೆನಿಸಿದುವಲರ್ದ ಕರ್ಣಿಕಾರಪ್ರಸವಂ ೪೩೦
(ಅನಂತನಾಥಪುರಾಣಂ ೬-೭೮; ಸೂಕ್ತಿಸುಧಾರ್ಣವಂ ೧೦-೨೪)

ಪೊಸೆಯಿಸಿ ನಸುಮಿಸುಪೇಱಿದ
ಬಿಸಿಲೞಿಯೆ ಬೆಮರ್ತು ಬಿಂದುಬಿಡುವವೊಲೆಸಸುಂ
ಪೊಸಮುಗುಳಂ ಪೊತ್ತೆಸೆದುದು
ವಸಂತದೂತಿಕೆ ವಸಂತಮಾಸದ ಮೊದಲೊಳ್ ೪೩೧
(ಲೀಲಾವತಿ ೯-೮೮)

ಬಗೆಗೊಳೆ ಮೆಲ್ಲನೆ ನಡೆವಂ
ಜೆಗಳಂ ತಳೆದಿರ್ಪ ಬಳ್ಳಿಮಾವಿನ ಸಾಲ್ಗಳ್
ನೆಗಟ್ದಿ ಬೆಲೆವೆಣ್ಗಳಂದದೆ
ಮಿಗೆ ಸೋಲಿಪ ಸೂಳೆಗೇಱಿಯಂತಿವೆ ಬನದೊಳ್ ೪೩೨
(ಕಬ್ಬಿಗರಕಾವಂ ೧೦೬-೨೩)

ಕಲೆವಂತರ ನಡೆವಳಿಯಂ
ನೆಲಕಂ ತೋರ್ಪಂತೆ ಜೆಂದದೆಲೆಯೊಳ್ ಮಾಗಾ
ಯುಲೆದುವು ಕರ್ಣಾಟಕದಾ
ಲಲನೆಯುತ್ತರೀಯದೊಳಗೆ ನೆಲೆಸೊಲೆ ಪೞಿತವೋಲ್ ೪೩೩

ಭಾವಜನ ಬೇಂಟೆಯಂ ಮಧು
ಭಾವಿಸೆ ಕಳಕಂಠಕಂಠ ಘಂಟಾನಿನದಂ
ತೀವಿರೆ ಬೞಿವೞಿಯೊಳ್ ಕೈ
ದೀವಿಗೆವಿಡಿದಂತೆ ಪ್ರೂತಚಂಪಕಮೆಸೆಗುಂ ೪೩೪

ಸೊಡರ ಕುಡಿಯುಗೆಗಳಂ ಪಸು
ರ್ವಡಲಿಗೆಗಳೊಳಡಕಲಿಟ್ಟು ರತಿ ಪೊಯ್ದವೊಲೇಂ
ಜಡಿದುದೊ ಸಂಪಗೆನನೆಯಿಂ
ಜಡಿದುದು ಮಧುಲಕ್ಷ್ಮಿ ತೊಟ್ಟ ಪೊಸಪೊಂದೊಡವಂ ೪೩೫
(ಅನಂತನಾಥಪುರಾಣಂ ೬-೭೯; ಸೂಕ್ತಿಸುಧಾರ್ಣವಂ ೧೦-೨೫)

ಮನಸಿಜತೇಜದಂಕುರಮನಂಗನೃಪಾಂಗನೆ ತೊಟ್ಟ ಚಿನ್ನಪೂ
ವನವಧು ಚೈತ್ರಸಂ ನಿವಳಿಪುಜ್ವಲ ದೀಪಮೆನಲ್ ಕವಲ್ತು ಕಂ
ಪಿನೊಳನಿತುಂ ವನಾಂತರದ ಪೂಗಳ ಕಂಪನದಿರ್ಪಿ ತನ್ನ ಕಂ
ಪನೆ ಮೆಱೆಯುತ್ತಮಿರ್ಪಲರ ಜೊಂಪದಿನಂದೆಸೆದತ್ತು ಚಂಪಕಂ ೪೩೬
(ಜಗನ್ನಾಥವಿಜಯಂ ೧೩-೩೨)

ಕಾದಲರಿಷ್ಟಸಿದ್ಧಿಗವಕಾಶಮನೀಯೆ ನಿಕಾಸಮಂಧಕಾ
ರೋದಯಮಂ ವನಾಳಿಗೆ ಪಿಂಗಿಸೆ ಪಿಂಗಮರೀಚಿ ಬಂಧುರಾ
ಮೋದಮತಿಪ್ರಮೋದಮನೊಡರ್ಚೆ ಧರಿತ್ರಿಗೆ ಪೊನ್ನಪೂಗೆ ಕಂ
ಪಾದಪೊಲಿರ್ದುದೆಂದು ಪೊಸಸಂಪಗೆಯಂ ಪೊಗೞ್ದಂ ಜನಾರ್ದನಂ ೪೩೭
(ಜಗನ್ನಾಥವಿಜಯಂ ೧೪-೭೧)

ಮೊಗೆದುಣ್ಬ ಮಧುಪಂ ಮಲೀನವಪ್ಪು ದಾನಂಗೊಳ್ವ ಮಾತಂಗಜಾ
ತಿಗಳೊಳ್ ಪೇಸದೆ ಮಾಟಿಪ್ಪ ಪುಷ್ಪಿತಲತಾಸಂಭೋಗಮಂ ನಿನ್ನೊಳಾ
ವಗುಣಂ ಷಟ್ಪದ ಪೋಗು ಪೊರ್ದದೆನುತಂ ಕೈಸನ್ನೆಗೈವಂತೆ ಸಂ
ಪಗೆ ಚೆಲ್ವಾಯ್ತು ಸಮೀರಸಂಚರಣಚಂಚತ್ಪಲ್ಲವೋಲ್ಲಾಸದಿಂ ೪೩೮
(ಸೂಕ್ತಿಸುಧಾರ್ಣವಂ ೧೧-೧೫)

ಪಡೆದೊಡೆ ಕಂಪಂ ಬಣ್ಣಂ
ಬಡೆಯವು ಬಣ್ಣಮನೆ ಪಡೆದವಪ್ಪೊಡೆ ಕಂಪಂ
ಪಡೆಯವುೞಿದಲರ್ಗಳೆರಡುಮ
ನೊಡೆವೆಳದೀ ಚಂಪಕಕ್ಕೆ ಪೋಗಳ್ ದೊರೆಯೇ ೪೩೯
(ಆದಿಪುರಾಣಂ ೧೧-೧೧೮; ಸೂಕ್ತಿಸುಧಾರ್ಣವಂ ೧೧-೧೭)

ಮೃದುತರಮಾರ್ಗದಿಂ ಜಗನಸಂಡಲೆವುದ್ಘುರಸತ್ತ್ವವೃತ್ತಿಯಿಂ
ಮದನಶಿಳೀಮುಖಂಗಳೆನಿಸಿರ್ದುಮದೊರಲ್ವ ಶಿಳೀಮುಖಪ್ರಘಾ
ತದ ಕಡುಪಿಂಗೆ ಸಿಲ್ಕದುದಾವ ವಿಲಾಸಮೆನುತ್ತ ತುಂಬಿಗ
ಗ್ಗದನಮಪೂಗಳಿಂಪುಳಿಸೆ ಪೆಂಪೆಸೆದಿರ್ದುವು ಚಂಪಕವ್ರಜಂ ೪೪೦

ಪೊಂಬೆಸದಿಂದಮೆಯ್ದೆ ಪಸೆದಂತೆಸೆದೊಪ್ಪುವ ಬಣ್ಣಮುಂ ಕರಂ
ಪಂಬಲಿಸಲ್ಕೆ ತಕ್ಕವಜಱಾಗಿಸದೋಗರಗಂಪುಮಾವ ಪೂ
ವಿಂ ಬಗೆವಾಗಳಿಂತಿವಱಿಂಪೊಳಗ್ಗಳಮಾಮೊಡಮುಕ್ಕಟಾ ಮರು
ಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡವೊ ನಿರ್ನಿಮಿತ್ತದಿಂ ೪೪೧

(ಕಾವ್ಯಾವಲೋಕನಂ ೨೩-೧೦೮; ಸೂಕ್ತಿಸುಧಾರ್ಣವಂ ೧೧-೧೩)

ಪಾದರಿಗೆ ಪುಷ್ಪವತಿಗೊಳಿ
ಗಾದುದುಮಲ್ಲದೆ ಮುಗುಳ್ದು ಚಂಡಾಳಿಕೆಯೊಳ್
ಪೋದ ಪೊಲೆಗಲಸಿದಂತಿರೆ
ನಾದುದು ಸಂಪಗೆ ಸುಗಂಧದಿಂ ಮಧುಕರನಂ ೪೪೨

(ಲೀಲಾವತಿ ೯-೧೧೪)

ಇವಱ ತನಿಗಂಪಿಗಲ್ಲದೆ
ಸವಿಯಿಲ್ಲಂ ಮಿಕ್ಕೆಲರ್ಗೆನುತ್ತಂ ಕೈಕೊಂ
ಡವೊಲೆಱಗಿ ಪಱಮೆವೞಿವಿಂ
ಡವಿರ್ದವದಿಮ್ಮುತ್ತೆಯಲ್ಲಿ ಸಂದಣಿಗೊಳುತುಂ ೪೪೩

(ಕಬ್ಬಿಗರಕಾವಂ-೫೭-)

ಬಗೆಯದೆ ಬಂದೞಿಯರಸಂ
ಪಗೆಯುರಮನೆಗೆಯ್ದಿ ಬೞಿಕ ಜಾಱುವವೋಲ್ ಸಂ
ಪಗೆಯುನನೆಗೆಯ್ದಿ ಬೞಿಕೊ
ಯ್ಯಗೆ ಜಾಱುವ ತುಂಬಿ ನಗಿಸಿದುದು ಮಲ್ಲಿಗೆಯುಂ ೪೪೪

(ಕಬ್ಬಿಗರಕಾವಂ -೫೮-)

ಕಡು ನಿಮಿರ್ದ ಕೊಂಬುಕೊಂಬಿನೊ
ಳೆಡೆವಿಡಿದಲರ್ದಲರ ತುಱುಗಲಿಂ ಪುದಿದುಮಣಂ
ಗಡಣದಿನೆಯ್ತಂದೆಱಪಾ
ಱಡಿಗಾರಡಿದಾಣಮಾಯ್ತು ಸಂಪಗೆ ಪಲವುಂ ೪೪೫

(ಕಬ್ಬಿಗರಕಾವಂ -೫೯-)

ಕಾಲ್ಸಮನಿಸೆ ಪೊಸಬಂಡಿನ
ಮೆಲ್ಸರಿಯುಂ ಕಱಿಽಯುತಿರ್ಪ ಸಂಪಗೆವೂಗಳ್
ಬಲ್ಸೆಱೆವಿಡಿವಂತಿರ್ದುವು
ನಲ್ಸರದಿಂ ಪಾಡುತಿರ್ಪ ಸೆಣ್ದುಂಬಿಗಳಂ ೪೪೬

(ಕಬ್ಬಿಗರಕಾವಂ -೬೦-)

ಅನುಸಯದಿಂದ ಮೂಡಿದ ಪಸುರ್ಗನೆ ಬೆಳ್ಪನೆಯಪ್ಪ ಪೊಂಗಿ ಬೆ
ಳ್ಪನೆ ಮುಗುಳಪ್ಪ ಜೀಗಿ ಮುಗುಳೊಯ್ಯನೆ ಬಲ್ಮುಗುಳಪ್ಪನುಕ್ರಮಂ
ತನಗೆಸೆಯಲ್ ತೊಡಂಬೆ ಕೆಳಗಾಗಿ ಸಿಡಿಲ್ದು ಮರಲ್ದರಲ್ದು ಕಂ
ಪಿನಕಣಿ ತುಂಬಿಯಂ ನೆರೆಪುತಿರ್ದುದು ಮಲ್ಲಿಗೆ ಚೈತ್ರಮಾಸದೊಳ್ ೪೪೭
(ಜಗನ್ನಾಥವಿಜಯಂ ೧೯–೩೩)

ಬನದ ವಿಭೂತಿ ತಂಬೆಲರ ಪೈಸಿರಿ ತುಂಬಿಯ ಗೀತಶಾಲೆ ಚೈ
ತ್ರನ ತೊಡವೋತಗಲ್ದಿರೆರ್ದಲ್ಲಣಮೋಪರಸ್ಕೈಪು ಕಾಮನಂ
ಬಿನ ಕಣಿ ಪುಷ್ಪಸಾಯಕನ ಕೀರ್ತಿಯು ಬಿಟ್ಟುಪೊದಲ್ ಮೃಡಾರಿವೀ
ರನ ಜಯಶಕ್ತಿಯೆಂದಲರ್ದ ಮಲ್ಲಿಗೆಯಂ ಹರಿ ಮೆಚ್ಚಿ ನೋಡಿದಂ ೪೪೮
(ಜಗನ್ನಾಥವಿಜಯಂ ೧೪–೭೦)

ಮುಳಿದುಱಿದೋಪನಕ್ಕಿರ್ದ ಪುಗುಲ್ತುರಿವಂತೆ ಮುಗುಳ್ತು ನಾಣ ಜಾ
ಣೊಳಗು ಸಡಿಲ್ವಿನಂ ಪೊರೆ ಸಡಿಲ್ದು ಕದಂಪು ಬೆಳರ್ತು ಬಾಡೆ ಪೊ
ಟ್ಟಳಿಸಿ ಬೆಳರ್ತು ಮುದ್ರಿಸಿದ ಬಾಯ್ಗಳರಲ್ದಿರಿವಂತೆ ಕಂಪು ಕೈ
ಕೊಳೆ ಬಿರಿದತ್ತು ತುಂಬಿ ನೆರೆವಲ್ಲಿಗೆ ಮಲ್ಲಿಗೆ ಸಂತೆಯಂತೆವೋಲ್ ೪೪೯
(ಅನಂತನಾಥಪುರಾಣಂ ೬–೮೪; ಸೂಕ್ತಿಸುಧಾರ್ಣವಂ ೧೦–೬೧)

ಪಸುರೊಳಸಾರೆ ಬೆಳ್ಪು ಬೆಳೆಯುತ್ತಿರೆ ತೆಂಕಣಗಾಳಿಯಿಂ ಸಡಿ
ಲ್ವಸುವೊರೆಯಾಗೆ ಸಂಜನಿತ ಕಾಮುಕಿಲೀಮುಖಘಾತದಿಂ ರಸಂ
ಪೊಸೆದು ಪೊದಟ್ಟಿ ಪೊಣ್ಮೆ ವಿರಹಾತುರೆಯಂತೆವೊಲೇಂ ಸುಗಂಧನಿ
ಶ್ವಸಿತಮನೆತ್ತಿತೋ ಬಿರಿದ ಮಲ್ಲಿಗೆ ಬಂದ ವಸಂತಮಾಸದೊಳ್ ೪೫೦
(ಲೀಲಾವತಿ, ೯–೧೦೫)

ಕುಸುಮಕುಳಕ್ಕೆ ನಿನ್ನರಸೆ ನಿನ್ನ ವಿಳಾಸಮೆ ನಿನ್ನ ಬೆಳ್ಪೆ ನಿ
ನ್ನೆಸಕಮೆ ನಿನ್ನ ಸೈಪೆ ಮಧುಲಕ್ಷ್ಮಿಯುಮಾ ಮಲಯಾನಿಲೇಂದುಗಳ್
ಪಸರಿಕೆ ನಿನ್ನ ಸೌರಭದಿನೆಂದಭಿಷೇಕಪುರಸ್ಸರಂ ಸ್ಮರಂ
ನಸುಬಿರಿದಿರ್ದ ಮಲ್ಲಿಗೆಗೆ ಕಟ್ಟಿದನೊಲ್ದಧಿರಾಜಪಟ್ಟಮಂ ೪೫೧
(ಶಾಂತಿಪುರಾಣಂ ೭–೧೪೨; ಸೂಕ್ತಿಸುಧಾರ್ಣವಂ ೧೦–೭೩)

ಅರಲ ಸರಲ್ ಸರಲ್ಗಡೆಸುವಿಕ್ಷುಧನುರ್ಲತೆ ಬಿಲ್ಗಡಲ್ಲಿಯುಂ
ತಿರು ಗಡ ಪದ್ಮಸೂತ್ರಮೆಸೆವಂ ಗಡ ತಾನುಮನಂಗನೆಂದು ಮೀ
ಪರಿ ಪರಿಹಾಸ್ಯ[1]ಯೋಗ್ಯ[1]ಮೆನುತಂ ನಗೆಯೊಳ್ ಪೊರೆಯೋಗಿ [2]ಬೆಚ್ಚರಂ[2]
ಬಿರಿವವೊಲಂತವೇಂ ಬಿರಿದುವೋ ಪೊಸಮಲ್ಲಿಗೆಗಳ್ ವಸಂತದೊಳ್ ೪೫೨
(ಸೂಕ್ತಿಸುಧಾರ್ಣವಂ ೧೦–೬೬)

---
[1]ವಾಡಿ(ಸೂ) [2]ಬಿಚ್ಚತಂ(ಸೂ)

ಪೊಸ ಸಿರಿಗಂಧದೊಳ್ ತೊಡೆದು ಕರ್ಪುರದೊಳ್ ಪುಳಿಗರ್ಚಿ ಕೂಡೆ ಬೆ
ಳ್ಪೆಸೆಯೆ ಹಿಮಾಂಶುಳಂ ತೆಗೆಯೆ ಪೂರ್ಣನಿಶಾಕರನೆಂಬ ಸಾಣೆಯೊಳ್
ಕುಸುಮಶರಂಗೆ ಜಾಣ್ ಮೆಱೆಯಲೆಂದು ವಸಂತಕನೆಂಬ ಕಮ್ಮಱಂ
ಮಸೆವಲಗೆಂಬಿನಂತೆಸೆಯುತಿರ್ದುವು ಮಲ್ಲಿಗೆಗಳ್ ವಸಂತದೊಳ್ ೪೫೩
(ಸೂಕ್ತಿಸುಧಾರ್ಣವಂ ೧೦–೬೮)

ಚಳಕಿಗೆಯಾದುವಾವುದಱ ಒಲ್ಲುಗುಳಾವವಱಗ್ರಪಲ್ಲವಾ
ವಳಿ ಮುಡಿಯೊಳ್ ತೊಡರ್ಚಿ ರತಿಗೊಪ್ಪಮನಿತ್ತುವು ಪುಷ್ಪವಲ್ಲಿಯುಂ
ಫಳತರುವುಂ ದಿಟಕ್ಕೆ ಪೆಱತಾವುದೊ ಮಲ್ಲಿಗೆ ಚೂತಮೆಂದೆ ಕಂ
ಗಳ ಪಸವೋಡುವನ್ನಮೆಮೆಯಿಕ್ಕದವಂ ಮಧು ನಿಂದು ನೋಡಿದಂ ೪೫೪
(ಮಲ್ಲಿನಾಥಪುರಾಣಂ ೫–೨೫ ಸೂಕ್ತಿಸುಧಾರ್ಣವಂ ೧೦–೬೯)

ಮಱಿದ ತೊಡಂಬೆಯೊಳ್ ಮೊನಸಿ ತೋರ್ಪ ಪಸುರ್ಗನೆ ನಾಡೆ ಬೀಗಿ ಬೆ
ಳ್ಪಿರಿಸಿದ ಮೊಗ್ಗೆ ಕೂಡೆ ಬಿಳಿದಾದ ಮುಗುಳ್ ಪೊರೆಯೋದ ಕುಟ್ಮಳಂ
ಬಿರಿವಲರೆಂಬಿನಂ ತಿಱಿದು ಮಲ್ಲಿಗೆಯೊಳ್ ಶರಪಂಚಕಂಗಳಂ
ವಿರಚಿಸಿ ಪಂಚಬಾಣಪೆಸರಂ ಪಡೆದಂ ಮದನಂ ವಸಂತದೊಳ್ ೪೫೫
(ಮಲ್ಲಿನಾಥಪುರಾಣಂ ೬–೪೭ ; ಸೂಕ್ತಿಸುಧಾರ್ಣವಂ ೧೦–೭೪)

ಅಸದಳಮಾದ ಮಲ್ಲಿಗೆಯ ಬಂಧುರಗಂಧಮನಾಂತು ತೆಂಕಣಿಂ
ದೆಸಗುವ ಗಾಳಿ ಗಂಧವಹನಾದುದು ಮಾಗಿಯ ಪೋಗು ಕಾಟ್ಪಿರಂ
ಪುಸಗುವ ಮಲ್ಲಿಕಾವಧುವಿನಿಂ ಮಧುಮಾಸಮುಮಾಯ್ತು ಕೈದುವಂ
ಪೊಸಯಿಸಿ ಮಲ್ಲಿಕಾಕುಸುಮದಿಂ ಕುಸುಮಾಯುಧನಾದನಂಗಜಂ ೪೫೬
(ಮಲ್ಲಿನಾಥಪುರಾಣಂ ೬–೪೮; ಸೂಕ್ತಿಸುಧಾರ್ಣವಂ ೧೦–೬೬)

ಬಿರಿಯಿಗೆ ತೆಗೆಬಗೆ ಕಂಪುಗೆ
ಬಿರಿದುದು ಮಲ್ಲಿಗೆ ಮರಲ್ದು ಪುಗೆ ಮಧುಮಾಸಂ
ಕುರುಳ ಮುಗುಳ್ನಗೆ ಕಂಪಿನ
ಕರಡಿಗೆ ವನಸಿರಿಯ ಸುರಿಗೆ ಬಗರಗೆ ಮಧುವಾ ೪೫೭
(ಲೀಲಾವತಿ ೯–೧೦೮)

ಬಸನಿಗೆಯರೊತ್ತೆ ಮುತ್ತಿನ
ಹಸರಂ ಬೆಳ್ವೆಳಗಿನುರುಳಿ ಬೆಳ್ದಿಂಗಳ ಬೆ
ಳ್ಪೆಸದನಮೆನಲೇಂ ಬಿರಿದುದೊ
ಪೊಸಮಲ್ಲಿಗೆ ಜಸದ ಬಿಟ್ಟು ಕುಸುಮಾಯುಧನಾ ೪೫೮
(ಲೀಲಾವತಿ ೮–೧೦೯)

ಮಲ್ಲಿಗೆಯನೊಲಿಸುವಳಿಪಿಂ
ಮೆಲ್ಲಗೆ ಪೂವಾದುದೆನಿಸಿ ಮಾವಿನ ಕೊನಮಂ
ತಲ್ಲೊಗುವ ಸೊನೆಯಿನೇಂ ಕೆಂ
ಕಲ್ಲಿ ಕರಂ ನಾಂಮು ನೆನೆದು ಮುಘುಮುಘಿಸಿದುದೊ ೪೫೯

(ಲೀಲಾವತಿ ೯-೧೧೦)

ರತಿಯ ಬಟಿಲ್ಮುಡಿಗಾಕೆಯ
ಪತಿಯ ತುಱುಂಬಿಂಗೆ ಮಧುವೆ ಮೀಸಲ್ಗಟ್ಟಿದಂ
ಚತುರತೆಯಿನಲ್ಲದಂದಳಿ
ವಿತತಿಗಳೇಕೆಱಗನಲರ್ದ ನವ ಚಂಪಕದೊಳ್ ೪೬೦

(ಲೀಲಾವತಿ ೯-೧೧೫)

ಮಳಯಜದ ಸವತಿ ಸುರಯಿಯ
ಕೆಳದಿ ಮನೋಭವನ ವೀರಲಕ್ಷ್ಮಿಯ ತಾಯ್ ತ
ಳ್ತಳಿವಿಟನ ಸೂಳೆ ಕಾದಲ
ರೆಳೆವೇಟದ ದಾದಿ ಬಿರಿದ ಮಲ್ಲಿಗೆಯ ಪೊಲಂ ೪೬೧

(ಲೀಲಾವತಿ ೧೩-೬೨)

ರತಿಮದನಂ ವಸಂತಸಮಯಂ ಪುಳಿನಂ ನಳಿನಂ ಕೊಳಂ ಹಿಮ
ದ್ಯುತಿಲತೆ ಮಾವು ಕೀರಕಳಭಂ ಕಳಕಂಠರವಂ ರಥಾಂಗದಂ
ಪತಿ ತಳಿರುಯ್ಯಲೋಪರ ಸುಸಿಲ್ ನನೆವಿಲ್ ನನೆಯಂಬು ಮಂದಮಾ
ರುತಮಳಿನೀನಿನಾದುವಿನಱಿಂ ಪೊಸಮಲ್ಲಿಗೆಗಕ್ಕೆ ಮಂಗಳಂ ೪೬೨

(ಮಲ್ಲಿನಾಥ ಪುರಾಣಂ ೬-೪೬ ಸೂಕ್ತಿಸುಧಾರ್ಣವಂ ೧೦-೭೨)

ಜನಸಮ್ಮೋಹನವಿದ್ಯೆ ತನ್ನ ಮಧುವಿಂ ಪುಟ್ಟಿತ್ತು ಪುಷ್ಪಂಗಳು
ಳ್ಳನಿತುಂ ನೋಂತವೆ ತನ್ನ ಕೀರ್ತಿಸಳ ಸೌಭಾಗ್ಯಕ್ಕೆ ತನ್ನೇರ್ಗೆಯಿಂ
ವನದೇವೀಸಖಿಗೀ ವಸಂತವಿಜಯಶ್ರೀದೇವಿಗೀ ಚೂತರಾ
ಜನಮಾದೇವಿಗೆ ಮಲ್ಲಿಕಾರಮಣನಿಂ ಭದ್ರಂ ಶುಭಂ ಮಂಗಳಂ ೪೬೩

(ಮಲ್ಲಿನಾಥಪುರಾಣಂ ೬-೫೧ ಸೂಕ್ತಿಸಾಧಾರ್ಣವಂ ೧೦-೭೩)

ಜಾತಿ ವಸಂತಕಂಗೆ ಪಗೆ ತಾವರೆ ಚಂದಿರಗಾಗದುತ್ಪಲಂ
ಭೂತಳಲೋಚನಂಗೆ ವಿಷ ಸಂಪಗೆ ತುಂಬಿಗೆ ಮುಂ ವಿರುದ್ಧಕಂ
ಕೇತಕಿ ಸಂಕರಂಗೆ ರಿಪು ಸತ್ಕರವೀರ ಸಮೀರಗಾಗಸೆಂ
ದೋತುಮನಂಗ ಮಲ್ಲಿಗೆಗೆ ಕಟ್ಟಿದನುದ್ಗಮ ರಾಜಪಟ್ಟಮಂ ೪೬೪

ಸರಸಪಲಾಶಪುಷ್ಪಚಯದೊಳ್ ವನಲಕ್ಷ್ಮಿಯ ರತ್ನನೂಪುರ
ಸ್ವರಮೆನೆ ಹೇಮತಾಮರಸದೊಳ್ ಜಲದೇವಿಯ ವಕ್ತ್ರಕೂಜಿತ
ಸ್ವರಮೆನೆ ಮಲ್ಲಿಕಾಮುಕುಳದೊಳ್ ರತಿಕಾಂತನ ಬಾಣಭೀಂಕೃತ
ಸ್ವರಮೆನೆ ಪೊಣ್ಮಿದತ್ತು ಮಧುರಂ ಮಧುಮತ್ತಮಧುವ್ರತಸ್ವನಂ ೪೬೫
(ಸೂಕ್ತಿಸುಧಾರ್ಣವಂ ೧೦–೭೮)

ಪರಿಮಳದಿಕ್ಕೆ ತೆಂಬೆಲರಿನಂಗಣ ತುಂಬಿಯ ಸತ್ರಗೇಹ ಶಂ
ಬರಹರನಸ್ತ್ರಶಾಲೆ ವಿರಹಾಳಿಗಳಾಶ್ರಯ ದೇವಪೂಜಕರ್
ನೆರೆದಿಹ ರಚ್ಚೆಗಟ್ಟೆ ಕುಸುಮಾಶ್ರಯದಂಗಡಿ ನವ್ಯಭೋಗಿಗ
ಳ್ಗುರುತರ ಜೀವನಮಾಗಿ ಬೆಳೆದೊಪ್ಪುವುವಲ್ಲಿಯ ಪುಷ್ಪವಾಟಿಗಳ್ ೪೬೬

ಕಾಮನ ಷೋಡಶಬಾಣದ
ಸ್ತೋಮದೊಳಾಧಿಕ್ಯಮೆನಿಸಿ ವಿರಹಿಗಳಿಗಡಿ
ನೇಮವನಂಟುವ ಕಣೆಯೆನೆ
ಕೋಮಲ ಬಿರಿಮುಗುಳ್ಗಳಿಡಿದ ಜಾತಿಗಳೆಸೆಗುಂ ೪೬೭

ಲಲನೆಯರ ಮೊಗದ ಮೂಗಂ
ತಿಲಕುಸುಮಕ್ಕೆಣೆಯದೆಂಬ ಬಗೆಯಂ ನಗುತಂ
ಸಲೆ ತನ್ನ ಮುಗುಳ ಪೋಲ್ವೆಗೆ
ನೆಲೆಯೆನಿಸಿದ ಚಂಪಕೋರ್ವೀಜಂಗಳ್ ಮೆಱೆಗುಂ ೪೬೮

ಸಂತಾಪದವರ ಶಿರಮಂ
ಕಂತುನೃಪಾಲನೆಸಲ್ಕೆ ಪಿಡಿದ ಶರಂಗಳ
ಸಂತತಿಗಳಪ್ಪುದೆಂದೆನೆ
ಮುಂತಿರ್ದುವು ಸಂಜೆಮಲ್ಲಿಗೆಯ ವಲ್ಲರಿಗಳ್ ೪೬೯

ಪಚ್ಚೆಯ ಮಣಿರಾಸಿಗಳೊಳ
ಗೊಚ್ಚತ ಮುತ್ತುಗಳ ಬೆರಸಿದಂದದೊಳೆತ್ತಂ
ಸಚ್ಚದ ಮುಗುಳ್ಗಳ ತಾಳ್ದಿಸೆ
ದಚ್ಚರಿಯದ ದುಂಡುಮಲ್ಲಿಗೆಗಳೆಸೆದಿರ್ಕುಂ ೪೭೦

ರತಿದೇವಿಯೆನಿಪ ಪಾರ್ವತಿ
ಸತತಂ ನೊಸಲೆಡೆಯೊಳಿಡುವ ಚಂದ್ರದ ಬೊಟ್ಟಿಗೆ
ಪ್ರತಿಮಾನಮೆಂದೆನಿಪ ವಿಕ
ಸಿತ ಕುಸುಮಿತ ಚಂದ್ರಮಲ್ಲಿಗೆಗಳೆಸೆದಿರ್ಕುಂ ೪೭೧

ತೆಱಪಾದರ ಮೆಲ್ಲೆರ್ದೆಯಂ
ಬಿಱುಸಿಂದಂ ಮನೋಜನಿಸೆ ಥಟ್ಟುರ್ಚಲ್ ನೆತ್ತರ್
ತುಱುಗಿದಲರಂಬಿನಂತಿರೆ
ಪೊಱಿತದುವು ಪೊಲ್ಗಂಪಿನಿಂದೆ ಮರಮಲ್ಲಿಗೆಗಳ್ ೪೬೨

ತನ್ಮಯ ಕಾಲವ ತಪ್ಪಿಸಿ
ಕಮ್ಮನೆಯುರಲಾಗವೆಲ್ಲ ತರುಗಿಡು ಬಳ್ಳಿಗ
ಳೊಮ್ಮೆ ಸದಾವಗ ಪೂಗಳ
ನೆಮ್ಮಿರ್ಪುವು ನಿಚ್ಚಮಲ್ಲಿಗೆಯ ಕಿಱುಗಿಡುಗಳ್ ೪೬೩

ಸ್ಮರಗೆ ವಸಂತಚಮೂಪಂ
ನೆರೆಪೋಲಗದೊಳ್ ಸಮಂತು ಪಿಡಿಸಿದ ಪಲವುಂ
ಕರದೀಪಗಳೆಂಬಂತಿರೆ
ನೆರೆ ಪೂವೆಸೆದಿರ್ಪುವಲ್ತೆ ಮೊಗಮಲ್ಲಿಗೆಗಳ್ ೪೬೪

ಕಂತುಗೆ ಮಂದಾನಿಲ ವರ
ಸಂತತಿ ರಕ್ತಾರ್ಜುನಗಳ ಪಾವುಡಗಳನಿಡು
ವಂತಿರ್ದುವು ಕುಸುಮಸ್ತೋ
ಮಂ ತೀವಿದ ಕೊಂಬಿನಿಂದೆ ದಾಸಾಳಂಗಳ್ ೪೬೫

ನೆರೆದ ವಿಯೋಗಿಗಳೆನಿಸುವ
ಕರಿಕುಂಭವನಿಕ್ಕಲಂಬುಜಾಸ್ತ್ರಂ ತಾಳಿದ
ಸುರಗಿಯು ತಪ್ಪದೆನಿಸುವಾ
ಬಿರಿಮುಗುಳ್ಗಳ ಗೊಂಚಲಿಡಿದ ಸುರಗಿಗಳೆಸೆಗುಂ ೪೬೬

ಮುತ್ತಿನ ಮಣಿಗಳ್ಗೊಳಿಸಲುಮು
ನುತ್ತಮ ಮಾಣಿಕದಿ ಕರ್ಣಿಕೆಯ ಮತ್ತಂದದೊ
ಳೊತ್ತಂಬದ ಪುಷ್ಪಗಳೊಳ್
ಮತ್ತಾ ಸುರಹೊನ್ನೆಯಿರ್ದುವತಿ ಸೌರಭದಿಂ ೪೬೭

ನವೀನ ವಸಂತವಿಟಗಂ
ತವೆ ಬರಸಿರಿಯೆಂಬ ಸತಿಯನೊಂದಿಸಿ ಬಹ ದೂ
ದವಿಯೆಂಬವೊಲಾದ್ಯಗಂತಿಯ
ನಿವಹದ ಪೆರ್ಮೆಳೆಗಳಿರ್ದುವತಿ ನಿಬಿಡತೆಯಿಂ ೪೬೮

ಉದಯಾಂಗನೆ ದಿವಸೇಂದ್ರನ
ವದನಮನಿಟ್ಟಿಸುತೆ ನಕ್ಕೊಡಂ ಸುಲಿಪಲ್ಗಳ್
ಗದಗದಿಸಿ ತೋಱುತಿರ್ಪಂ
ದದೊಳಿರವಂತಿಗಳ ವಲ್ಲಿಗಳ್ ಕಂಗೊಳಿಕುಂ ೪೭೯

ವರಶರದೃತುವಿನ ಜಸವೆಣ್
ಶರದದೊಳಂ ಮಿಕ್ಕಋತುಗಳಂ ನಗುತಿರಲಾ
ಕಿರಣಂ ದಶದಿಕ್ಕಿನೊಳವ
ತರಿಸಿದವೋಲ್ ಪೂಗಳಿಡಿದ ಪೊಲ್ಲೆಗಳೆಸೆಗುಂ ೪೮೦

ಚೈತ್ರನ ಮಂತಣ ಶಾಲೆಗೆ
ಸೂತ್ರಗಳಂ ಪಿಡಿದು ಕಟ್ಟಿಸಿದ ಪೇಲ್ಕಟ್ಟಿನ
ಚಿತ್ರಮಿದಪ್ಪುದೆನಿಪ್ಪ ಚ
ರಿತ್ರದೊಳಂ ನಾಗಕೇಸರಗಳೆಸೆದಿರ್ಕುಂ ೪೮೧

ಕಂದರ್ಪನ ಮುಡಿಗಟ್ಟಿಗೆ
ಸಂದನವನಲಕ್ಷ್ಮಿ ಪೊರೆಯೆ ಬೆಳೆವೃತ ಪರಿಮಳ
ದಿಂದೆಸೆವಲರ್ಗೊಂಚಲ ಸಾ
ಲೊಂದಿದ ಪಗಡೆಯ ಮರಂಗಳೇನೊಪ್ಪಿದುವೋ

ಮಾರಪ್ರತಾಪಕೀರ್ತಿಯ
ಚಾರು ವಿವರ್ಣಗಳ ಪೋಲ್ವ ಶೋಣಾರ್ಜುನರುಚಿ ೪೮೨
ಪೂರಿತ ಪುಷ್ಪಗಳಿಂದಂ
ರಾರಾಜಿಪುವೆರಡು ಬಗೆಯ ಪಟ್ಟೆಗೆಗಿಡುಗಳ್ ೪೮೩

ಅಲರ್ಗಳ ಗಂಧಕ್ಕಲ್ಲದೆ
ನೆಲಸಿರದು ಸುಗಂಧವೆಂಬ ಪೆಸರಂತಲ್ಲಂ
ಸಲೆ ತನ್ನ ಗಿಡುಗೆ ಸಹ ನಿ
ರ್ಮಲಿನಸುಗಂಧಾಂಕಿತದ ಸುಗಂಧಿಗಳೆಸೆಗುಂ ೪೮೪

ಕಾವನ ಪಚ್ಚೆಯ ಮಾಡವ
ಶೀವಿರೆ ಬೆಳ್ಗಂಪುವಟ್ಟೆಯಂ ಸಿಂಗರಿಸಿದ
ನೋವಿ ವಸಂತಕನೆನೆ ಶಾ
ಖಾವಳಿ ಕುಸುಮಿತದ ಕಂಚಿವಾಟಿಗಳೆಸೆಗುಂ ೪೮೫

ನಿಚ್ಚಮುದವಳಿಗ ಬಿರುದಿನ
ಪಚ್ಚೆಯ ಬಿಲ್ಲವನ ಮೆಯ್ಯ ಪಳದಿಯ ಪೊದಕೆಯ
ನಚ್ಚಿನ ಪೂಗಳ ತಾಳ್ದಿಸೆ
ದಚ್ಚರಿಯಮೊಳಿರ್ಪವಲ್ಲಿ ಪನಸಂಪಗೆಗಳ್ ೪೮೬

ಕೀರತುರಂಗಮುವಡಱುತೆ
ಮಾರನೃಪಂ ವಿರಹಿಜನರನಿಱಿಯಲ್ಕೆತ್ತಲ್
ಸೇರಿದನೈ ಜಯದಲಗಿನ
ಪೂರಮೆನಲ್ ಮೆಱೆವುವಂತೆ ಚೆನ್ನಿಯ್ದಿಲೆಗಳ್ ೩೮೭

ಭರದೊಳನಂಗನನೆಸೆಯಲ್
ವಿರಹಿಗಳುರಿಮುಸಗಿ ಸುತ್ತಿ ಪತ್ತಲ್ ಕಂದಿದ
ಪರಿಯಿಂ ತಾನೆಸೆದಿರ್ಪುವು
ಪರಿಮಳಮಂ ಬೀರುತಿರ್ಪ ಕನ್ನೆಯ್ದಿಲೆಗಳ್ ೪೮೮

ಪೆಱಪಿಂಗಿದವರ ಭಾಗಕೆ
ತಱಗೆಂಡದೊಲೊಪ್ಪುತಿರ್ಪ ವರ್ಣಕದಿಂದಂ
ತೆಱಪಾದೆಸಳ್ಗಳ ಪೂಗಳ್
ತುಱುಗಿರಲೆಸೆದಿರ್ಪವಲ್ತೆ ಕೆಂದಾವರೆಗಳ್ ೪೮೯

ಸಿರಿವೆಣ್ ಮನಸಿಜನರ್ಥಿಯೊ
ಳಿರಲೆನುತಂ ಬೊಮ್ಮನೊಲ್ದು ಪಾಲ್ನೊರೆಗೆಲಸದ
ಕರುಮಾಡಂಗಳ ಸೃಜಿಸಿದ
ಪರಿಯಿಂ ಪೋಲ್ತಿರ್ಪುವಲ್ತೆ ಬೆಳ್ದಾವರೆಗಳ್ ೪೯೦

ಲತೆಯೆನಿಸುವ ನಟಿಯುಂ ಮಾ
ರುತನಾಡಿಸಿ ಪಿಡಿದ ಪೊನ್ನತಾಳಿಗನೆಂಬಂ
ತತಿಶಯಮಾಗಿಹ ಪುಷ್ಪ
ಪ್ರತತಿಗಳಿಂ ಬೆಟ್ಟದಾವರೆಗಳೆಸೆದಿರ್ಕುಂ ೪೯೧

ಪಾದರಿನವೆಸರ ನಿಂದೆಗೆ
ಪ್ಪೈದೆಗೆದೆಲೆಗಳ ಬಿದಿರ್ಚಿ ನಿಚ್ಚಳದೊಳ್ ಪೂ
ವಾದಪುದೊ ಪೇೞಿತನಲ್ಕಾ
ಮೋದವ ಪಸರಿಸುತೆ ಪಾಟಲಿಗಳೆಸೆದಿರ್ಕುಂ ೪೯೨

ಮದನಂಗಿದಿರಾದರ ಪೇ
ರೆದೆಗಳನರಿವಂದಮಾದ ಗರಗಸಗಳವೋಲ್
ಪುದುಗಿದ ಕುತ್ತೆಸಳಿಂ ಪ
ಟ್ಟುದಜೀವನಮಾದ ಕೇದಗಗಳೆಸೆದಿರ್ಕುಂ ೪೯೩

ನಾಡೆ ಬನಸಿರಿಗೆ ಚೈತ್ರಂ
ಮಾಡಿಸೆ ಥಳಥಳಿಪ ಪಲವು ಪೊಮ್ಮಾಡಂಗಳ
ಗಾಡಿಯನಾಂತೆಸೆದಿರ್ಪುವು
ಮೂಡಿದ ಮುಗುಳಲರ್ಗಳಿಂದೆ ಪೊಂದಾವರೆಗಳ್ ೪೯೪

ಕಾಂಚನಪುಷ್ಪಕೆ ಕಂಪುಮ
ನಂಚೆಯನೆ ಧಾತ್ರನೊಲ್ದು ಮಾಡಿದ ಬಗೆಯಿಂ
ಪಂಚಮೆನಲೆಸೆಯುತಿರ್ಪುವು
ಮಿಂಚುತ್ತ ಕುಸುಮಗಳ ಚಿನ್ನದಾವರೆಗಿಡುಗಳ್ ೪೯೫

ನಡೆತರೆ ವಸಂತಕಂ ಮುಂ
ಗಡೆ ಮಧುಕರನಿಕರದಿಂದಲೊದಱುತ ಬಹ ಚೆ
ಲ್ವಡೆದ ಕಹಳೆಗಳ ಪಾಂಗಿಂ
ಜೆಡಗಿನ ಪುಷ್ಪಗಳೆ ಮುದ್ದುಕುಣಿಕೆಗಳೆಸೆಗುಂ ೪೯೬

ಹಾರ ಪಟೀರ ಮರಾಳ ನೀ
ಹಾರ ಸುಧಾಂಬೋಧಿ ಚಂದ್ರತಾರೆಯ ಕಾಂತಿಗ
ಳೋರಣಿಸುತೊಲ್ದು ಕುಸುಮಾ
ಕಾರಮನಾಂತಂದಮಾದ ದ್ರೋಣಗಳೆಸೆಗುಂ ೪೯೭

ಮನಸಿಜದಳವೆಯ್ತರುತಿರೆ
ಕನಕಚ್ಛತ್ರಂಗಳಲ್ಲಿಗಲ್ಲಿಗೆ ನೆಗಱಿದ್ದೋಲ್
ಘನತರ ವಿಶಾಲಪುಷ್ಪಗ
ಳನುವಿಂದಿಹ ಸೂರ್ಯಕಾಂತಗುಲ್ಮಗಳೆಸೆಗುಂ ೪೯೮

ತರುಣಿಯರ ಬಾಯಿಗೆಂಪಂ
ಸರಿಮಾಳ್ಪರ್ ಕವಿಗಳಾಗೆ ಪುಣ್ಯರೆನುತ್ತಂ
ಪರಿಹಾಸ್ಯಮಾಳ್ಪ ವಿಕಸಿತ
ಸರಸಪ್ರಸವಂಗಳಿಂದೆ ಬಂದುಗೆಯೆಸೆಗುಂ ೪೯೯

ಕತ್ತಲೆಯೊಳಿಡಿದ ತಾರೆಯ
ನೊತ್ತವಿನೆಂಬಂತೆ ಮೆಱೆವ ಪೂಗಳ ಗೊಂಚಲ
ನೆತ್ತಲ್ ನೋಡಲ್ ತಳ್ತಿಸೆ
ವೃತ್ತಿ ತಮಾಲದ ಕುಜಂಗಳೆಸೆದುವು ಚೆಲ್ವಿಂ ೫೦೦

ಪನ್ನೀರ ಮುಕ್ಕುಳಿಸುತಂ
ಕನ್ನೆಯರುಗಿಯಲ್ಕೆ ಪೊಂಗಿ ಪೊಱೆಯೇಱುತ್ತಂ
ಚೆನ್ನೆಸಳಪೂಗಳಾಗುತ
ಬಿನ್ನಣದಿಂದಿರ್ಪವಲ್ಲಿ ಬಕುಳದ ಕುಜಗಳ್ ೫೦೧

ವನದೇವಿ ನೊಸಲೊಳಿಕ್ಕಿದ
ಮಿನುಗುವ ತಿಲಕಂಬೊಲೆಸೆವ ಪುಷ್ಪಗಳಿಂದಂ
ಮನಕನುರಾಗಮನಾಗಿಸು
ವನುವಿನ ತಿಲಕದ್ರುಮಂಗಳೇನೊಪ್ಪಿದುವೋ ೫೦೨

ನಾರಿಯರ ಕುಚದ ಸೋಂಕಿನ
ಪೂರಿತಪುಳಕಾಂಕುರಂಗಳಾದ ವಿಟಂಗಂ
ಜೋರಗೆಯದಾದ ಕುಸುಮಿತ
ಗೋರಂಟೆಯ ಗಿಡುಗಳಿರ್ದುವಾ ತೋಂಟಗಳೊಳ್ ೫೦೩

ಸತಿಯರ ಪಾದಪಯೋಜದ
ಹತಿಗೊಂಡ ವಿಟರ್ಗೆ ಚಿಂತೆಯಿನಿಸಿಲ್ಲೆಂಬುವ
ಕ್ಷಿತಿಯೊಳ್ ತೋರ್ಪೊಲು' ಪೂದಳಿ
ರತಿಶಯದಿಂದಿರ್ಪಶೋಕತರುಗಳ್ ಮೆಱೆಗುಂ ೫೦೪

ಸಕ್ಕರೆವಿಲ್ಲಗೆ ಸೆಣಸಿದ
ರುಕ್ಕಂ ಮುಱಿದಿಕ್ಕಲುಗ್ರಗಂಧಜೊಳೆತ್ತಂ
ಚೊಕ್ಕಟದ ಪತ್ರೆಯಿಂದಂ
ಕಕ್ಕೊರಲೆಯ ಗಿಡಗಳಿರ್ದುವಾ ತೋಂಟಗಳೊಳ್ ೫೦೫

ಬಿರಿಯಿಗಳೆದೆಯುಮನಂಗನು
ನರಿವಂದದ ಕರ್ಣವುಳ್ಳದಳಗಳಿನಿಂಪಂ
ಪರಿಮಳವ ದೆಸೆಗೆ ಬೀರುತ
ಲಿರುತಿರ್ಪುವು ಮಂಚಿಪತ್ರೆ ಪ್ರೋಮೋಂಟಗಳೊಳ್ ೫೦೬

ವಾಸನೆಯೊಳಗಗ್ಗಳಮಿದು
ಲೇಸೆಂದೆನುತೆಲ್ಲ ಭೋಗಿಗಳ್ ಕೊಂಡಾಡಲ್
ದೇಸಿವಡೆದೊಪ್ಪಿದವು ವೈ
ಲಾಸದೊಳಂ ಪಚ್ಚೆಯುಂಟು ಪ್ರೋದ್ಯೋಂಟದೊಳಂ ೫೦೭

ಸುಜನರ ಶಿಶುಗಳ್ ತಮ್ಮಯ
ನಿಜಗುಣಮಂ ಬಿಡದೆ ಪುಟ್ಟಿ ಬಪ್ಪಂತೆ ಗಂಧ
ವ್ರಜಯುತದಂಕುರದಿಂದಂ
ಋಜುಭಾವದೊಳಿರ್ಪುವಲ್ತೆ ಮರುಗದ ಗಿಡುಗಳ್ ೫೦೮

ಕಾಲನೆದೆವನೆಯನಿಕ್ಕಿದ
ಶೂಲದ ಕೊನೆಯಂತೆ ಮೆಱೆವ ಪತ್ರೆಗಳಿಂದೆ
ಲೋಲತೆವೆತ್ತೆಸೆದಿರ್ಪುವು
ಭಾಲಾಕ್ಷಂಗೆ ಪತ್ರೆಯಪ್ಪ ಬಿಲ್ವದಕುಜಗಳ್ ೫೦೯

ಸರ್ವಪ್ರಸೂನಗಳೆನಳಿ
ನೀರ್ವುದು ಬಿಡದೆನುತಲಿದನೆ ನಿಕ್ಷೇಪಿಸಿದನೊ
ಕರ್ವಿಲ್ಲನೆಂಬ ಬಗೆಯಿಂ
ಬೇರ್ವರಿದೆಸೆದಿರ್ಪವಲ್ಲಿ ಮುಡಿವಾಳಂಗಳ್ ೫೧೦

ಭುವನದೊಳುಳ್ಳಾ ತೆನೆಗಳ್
ತವೆ ತಮ್ಮಯ ಷೋಡಶಾಂಶಕೆಯ್ದದೆನಿಪ್ಪೋಲ್
ವನಸೌರಭಮಂ ಬೀರುತ
ದವನದ ಬೆಳಸುಳ್ಳ ಮುಡಿಗಳೇನೊಪ್ಪಿದುವೋ ೫೧೧

ಸಾವಿರ ಪೊಪ್ಪೂಗಳೊಳಂ
ದೇವನರ್ಚಿಸಿದೊಡೆನಿತು ಫಲಮುಂಟನಿತಂ
ತೀವಿರ್ದೊಂದೆಲೆಯಿರ್ದಪೊ
ಳೀವ ಗುಣಾಧಿಕದ ತುಲಸಿಪತ್ರೆಗಳೆಸೆಗುಂ ೫೧೨

ಮೊದಲೊಳ್ ಪಡೆವೊಡೆ ಬೊಮ್ಮಂ
ನ್ನದು ಪರಿಮಳ ವರ್ಣ ಮೂಱಱೊಂದಾಗಿರೆ ಮಾ
ಡಿದನಪ್ಪುದೆಂಬ ಪೂಗಳ್
ಪುದುಗಿದ ಕಸ್ತೂರಿಜಾತಿಗಳ್ ಕಂಗೊಳಿಕುಂ ೫೧೩

ಕರಣತ್ರಯಶುದ್ಧದಿ ದೇ
ವರನರ್ಚಿಸಿದರ್ಗೆ ಮುಂದೆ ಮೋಕ್ಷದ ಬಟ್ಟೆಗೆ
ಚರಣಂಗಳಂತೆ ನವ ಪಾಂ
ಡುರಪುಷ್ಪಗಳೊಪ್ಪುತಿರ್ಪುವಾ ದ್ರೋಣಗಳೊಳ್ ೫೧೪

ಬಿರಿಮುಗುಳೊಳ್ ಮುಸುಂಬಸಲೆಯೊಪ್ಪುವ ಕರ್ಣಿಕೆಯಂ ಕರ್ದುಂಕಿ ಕೇ
ಸರಮನಲೆಂಕೆಯಿಂ ಬಿಗಿದು ಬಂಡನುಂಬರಮುಂಡು ತಳ್ತಿಸಬಿರ್
ಪೊರೆಯೊಳಡಂಗಿ ನುಣ್ಚರದಿ ಪಾಡಿಮದುನ್ಮದದಿಂ ಮದಾಳಿ ತಾ
ವರೆಯೊಳಗಿರ್ಪ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನೆಂಬಿನಂ ೫೧೫
(ಮಲ್ಲಿನಾಥಪುರಾಣಂ ೬-೯೯, ಸೂಕ್ತಿಸುಧಾರ್ಣವಂ. ೧೦-೭೭

ಕಂಪಿನ ಹಾರಮಂ ಶಿಶುಸಿಗಿಕ್ಕಿ ರಂಜಗಳ ಪೊಟ್ಟಸಿಟ್ಟು ಸೀ
ಗಂಪಿನ ಪುಷ್ಪಮಂಜರಿಯ ತೊಟ್ಟಿಲೊಳೊಪ್ಪುವ ತೀವಿ ಶೋಭೆಯಿಂ
ದಂ ಪದಪಿಂದೆ ಪಟ್ಟಿರಿಸಿ ಮಾರುತನಿಂದಮೆ ತೂಗಿ ಜೋಗುಳಂ
ಸೊಂಪುಱೆಯೋಗೆ ಪಾಡಿದುವು ಬಾಣತಿದುಂಬಿಗಳಾ ವನಂಗಳೊಳ್ ೫೧೬

ಶಿವನರಿಪೆಣ್ಮಸಂ ಹರಿಯುಹಾದರಮಬ್ಜಜನೊಲ್ದ ಲಜ್ಜೆ ಸೇ
ಱಿಪೆ ನನೆವಿಲ್ಲ ಬಿಲ್ಲಹನ ವೀರಮೆಂದನುರಾಗದಿಂದಮೋ
ಮುಪ್ಪವಲರಾದ ಕೇದಗೆಯ ಸುತ್ತಿಸಳೋಳಿಯ ನೆತ್ತಿ ಕುತ್ತಿಸಲ್
ಕವಳಿಗೆಯಾಗೆ ಭೃಂಗವು ಮನೋಭವರಾಜನ ವೀರವೃತ್ತಿಯಂ ೫೧೭
(ಅನಂತನಾಥಪುರಾಣಂ) ೧-೯೧

ಪೂಗಣೆಗೆತ್ತಿದಂತೆ ಪೊಗರಂ ಪೊಸಗಾಡಿಗೆಗೂಡಿದಂತೆ ಚೆ
ಲ್ವಾಗಿ ವಿಲೋಚನಕ್ಕೆ ವಿರಹಾನಳನಿಂ ಮಸಿವಣ್ಣಮಾಗಿ ಬಂ
ದೇಗಿ ವಿಯೋಗಿಚಿತ್ತಕತಿಕಾಮುಕರಾಗ್ನಿಯೊಳಗ್ಗಿದಂತೆ ಪಾ
ಯ್ದೋಗರಗಂಪನುಂಡವೆಳಮಾವಿನ ಪೂವಿನೊಳುನ್ಮದಾಳಿಗಳ್ ೫೧೮
(ಲೀಲಾವತಿ ೯-೭೨)

ತೋರಿದುವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗವೂಱು ಬಿಟ್ಟು ಭೋ
ರ್ಗರೆದಿಸೆ ಪಾಯ್ದು ಬಂಡಿನೊಳೆ ಬೆಂಡೊಗೆವೊಪ್ಪುವ ತೆಂಬೆಲರ್ ತೆಱಂ
ದೀರಿದುವಾದೆಲೆಂಕೆಗಳನೆತ್ತಿ ಮುಗುಳ್ತಿರೆ ಬೀಸಿಕೊಂಡೆಲ
ರ್ಗೀರನೆರಲ್ದು ಕಾಱುಕಡಲಿಟ್ಟವು ಮತ್ತಮಧುವ್ರತಾದಿಗಳ್ ೫೧೯
(ಲೀಲಾವತಿ ೯-೧೧೬)

ಸುರಭಿಸಮೀರಣಂಬೆರಸು ಜೇಗದೆ ಬಂದಲರ್ಗಣ್ಣ ಸನ್ನೆಯಿಂ
ಕರೆಯೆ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ
ಪರವಧುವಂ ವಿನೀಳಪರಿಧಾನಮನಾಕೆ ಮಧುಪ್ರಸಂಗಕಾ
ತರೆ ಮುಸುಕಿಟ್ಟವೊಲ್ ಮುಸುಱೆ ಪೀರ್ದುವು ಸೌರಭಮಂ ಮದಾಳಿಗಳ್ ೫೨೦
(ಮಲ್ಲಿನಾಥಪುರಾಣಂ ೬-೪೧ ; ಸೂಕ್ತಿಸುಧಾರ್ಣವಂ ೧೦-೭೬)

ಮುಗುಳ್ದಿಂ ಮುಗುಳ್ದಿಂ ಪೊಸಮ
ಲ್ಲಿಗೆಯಲರಂ ಸಿರಿಯ ದೇಸೆಯಂ ಕಂದರ್ಪಂ
ಪೊಗಟ್ಟಿಂ ರತಿಗಂ ತಂಗಾ
ಳಿಗಮಳಿಗಂ ಗಿಳಿಗಮಿಂದುಗಂ ಕೋಗಿಲೆಗಂ ೫೨೧
(ಸೂಕ್ತಿಸುಧಾರ್ಣವಂ ೧೦-೮೬)

ಎತ್ತುಂಗೋಲಂ ವಿರಹಿಗೆ
ಚಿತ್ತಭವಂ ತೊಟ್ಟನಿಕ್ಕಿದಂತಿರೆ ಬನದಿಂ
¹ದಿತ್ತುಪವನ¹ಕ್ಕೆ ಪಾಱುವು
ವೆತ್ತಂ ಮಧುಮತ್ತಚಿತ್ತ ಷಟ್ಚರಣಂಗಳ್ ೫೨೨
(ಸೂಕ್ತಿಸುಧಾರ್ಣವಂ ೧೦-೮೦)

ರಾಗದೆ ಕೂಡಿ ಝೇಂಕರಿಸಿ ಪುಷ್ಪರಸಂಗಳನುಂಡು ಸೊರ್ಕಿ ಬೆಂ
ಡಾಗಿ ತಳಿರ್ಗಳೊಳ್ ಕೆಡೆದು ಮಾಮರನಂ ಮುಸುಕಿಟ್ಟು ²ನಲ್ಕೆಯಿಂ
ಬಾಗಿವಲರ್ಗೆ² ಬಿಂದು ನೆನೆ³ದಂಬುಜದೊಳ್³ ವನಲಕ್ಷ್ಮಿಗೆತ್ತಿಯಿಂ
ಪೋಗೆ ಮನೋಜನೆತ್ತಿಸಿದ ಪೀಲಿಯ ಸತ್ತಿಗೆಯೋಲ್ ಮದಾಳಿಗಳ್ ೫೨೩
(ಸೂಕ್ತಿಸುಧಾರ್ಣವಂ ೧೦-೭೯)

ಆ ವನಗಂಧಕ್ಕೆಳಸಿಯೆ
ನೂನಂ ಮಧುಕರನಿಕಾಯಮೊಲ್ದನವರತಂ
ನಾನಾಮಂಜುಳನಿನದದೊ
ಳಾನಂದಂ ಮಿಕ್ಕು ಕಂಪನೀಂಟುತ್ತಿರ್ಕುಂ ೫೨೪

ಬಿಗಿಯಪ್ಪಿ ಪುಷ್ಪರಸಮಂ
ತೆಗೆದೀಂಟಿ ತುಳುಂಕಿ ತೂಱೆ ತೇಂಕಾಡಿ ಮನಂ
ಮಿಗೆ ಸೊರ್ಕಿ ಜಿನುಗಿ ಜೀವಿಸಿ
ಮಘಮಘಿಸಿತ್ತೊಂದು ಮಧುಕರಂ ಮಲ್ಲಿಗೆಯೊಳ್ ೫೨೫

---

¹ದೆತ್ತಿಗಗನ(ಸೂ) ²ಜೋಗುಳಂ ತೂಗಿಯರಲ್ಗೆ(ಸೂ) ³ವಂಬರದೊಳ್(ಸೂ)

ಭದ್ರಮೆನಿಸಿರ್ದ ಕುಸುಮರ
ಸದ್ರವಮಂ ಪೀರ್ವ ತುಂಬಿಯೊಪ್ಪಿತು ಮದನಂ
ಮುದ್ರಿಸಿದಂಬಿನ ಲಕ್ಷ್ಮ್ಯ
ಮುದ್ರೆಯಿದೆಂಬಂತೆ ಪುಷ್ಪವಾಟಿಯೊಳೆತ್ತಂ ೫೨೬

ಮಿಱುಗುವ ತನ್ನ ಪೂಗಣೆಗಳೆಚ್ಚಿಡೆಯೊಳ್ ಪರಿವಲ್ಲಿ ಸಂದೆಗಂ
ಪಱುಪಡಿವಂತು ನುಣ್ಗಱುಗಳಿಂ ಗಱುಗಟ್ಟಿಸುವೆನ್ನನಂಗಜಂ
ನೆಱೆ ಪೊಱಗಿಕ್ಕಿದಂ ಬನದಿನೆಂದುಱೆ ಕಂದಿ ಕಱಂಗಿದಂತೆ ಕಿ
ಕ್ಕಿಱುಗಿಱುದಿಪ್ಪವಾ ಬನದ ಕೇದಗೆಗಳ್ ಸುೞಿಯೇಱು ಸುತ್ತಲುಂ ೫೨೭
(ಧರ್ಮನಾಥಪುರಾಣಂ ೨-೬೧)

ಹಿಮರೋಚಿಃಕಳಿಕಾಕದಂಬಕಮನಿಂಬಿಂ ತಿರ್ದಿ ಮೇಳೈಸಿ ಕುಂ
ಕುಮದಿಂ ಭಾವಿಸಿ ಚಂದನಾಂಬುಗಳ ನೀರಂ ಪೊಯ್ದು ಹಾರೀತರ
ತ್ನಮಯೀಶುಕ್ತಿಯೊಳೊತ್ತಿ ಬಯ್ತ್ತನಜನೆಂಬಂತಾಯ್ತು ಪೂತೇೞ್ಗೆಯಿಂ
ಸುಮನಸ್ಸಾಯಕಶಸ್ತ್ರ[1]ಸಾರಭರಮಾ[1] ಸಂಕೇತಕಂ ಕೇತಕಂ ೫೨೮
(ಅನಂತನಾಥಪುರಾಣಂ ೯-೧೪, ಸೂಕ್ತಿಸುಧಾರ್ಣವಂ ೧೦-೨೦೫)

ಕುಸುಮಾಸ್ತ್ರಪ್ರಥಿತಾಜ್ಞೆಯಂ ತಲೆಯೊಳಾಂಪಂ ತನ್ನ[2]ನೇಕೀಗಳುಂ[2]
ಬಿಸುಟಂ ಬೂದಿಯ ಜೋಗಿ ಭೂತಗಣನಾಥಂ ಚರ್ಮವಾಸಂ ಕಪ
ರ್ದಿ ಸಮಂತೆಂದು ಮಧುಪ್ರಮತ್ತತೆ ಕರಂ ತಳ್ವೊಯ್ವಿನಂ ಜೈದು ಪಾ
ಡಿಸುವಂತಿರ್ದುದು ಬಂದ ಕೇದಗೆ ನದದ್ಭೃಂಗಾಳಿಯಿಂ ಶೂಲಿಯಂ ೫೨೯
(ಸೂಕ್ತಿಸುಧಾರ್ಣವಂ ೧೦-೨೦೬)

ಭುವನದೊಳೆಮ್ಮ ಮುಟ್ಟದಲರಾವುದೆಱಂಕೆಯ ಗಾಳಿ ಮುಟ್ಟೆ ಕಂ
ದುವುವೆಸೞೊರ್ಮೆ ಪೀರಲೊಡಮಾಗಳೆ ಸೋರ್ವುವು ಕಂಪು ಸೋಂಕೆ ಕಂ
ದವು ದಳಮೆಯ್ದೆ ಪೀರೆ ತವದುಣ್ಮುವ ಸೌರಭಮೆಂದು [3]ಪೀರಲೆಂ
ದವಱೊಳೆ ಗೊಂದಣಂಗೊಳುತ[3]ಪಾಯ್ದುವು ಕೇದಗೆಯೊಳ್ ಮದಾಳಿಗಳ್ ೫೩೦
(ಆದಿಪುರಾಣಂ ೧೧-೧೨೦; ಸೂಕ್ತಿಸುಧಾರ್ಣವಂ ೧೧-೧೧)

ಗಱು ಮೂಡದಿರ್ದೊಡಱುಯೆಂ
ಗಱು ಮೂಡಿದಾಗಳೊಮ್ಮೆ ತಲೆಗೆದಱು ಕರಂ
ಮೆಱೆವೀ ಪೊಂಗೇದಗೆಯೊ
ಳ್ಗಱುಗಳ್ ಗಱುಗಟ್ಟೆ ಮಾಱವೇ ಮಿಕ್ಕಲರಂ ೫೩೧
(ಜಗನ್ನಾಥವಿಜಯಂ ೧೪-೮೩)

---

[1] ನಾಭರಣಮಾ(ಸ) [2] ನಾರಿಂತಿದಂ(ಸೂ) [3] ದುಪೀರ್ದವಚರವೇಂತೆಱಂದಿರಿಮ (ಸೂ)

ನನೆಯಂ ಮುದ್ದಾಡುತೆ ಬ
ಲ್ಲನೆಯಂ ಬಲವಂದು ಮುಗುಳನಾಲಿಂಗಿಸಿ ಕಂ
ಪಿನ ಬಿರಿಮುಗುಳಂ ಚುಂಬಿಸಿ
ಯನುನಯದಿಂದಲರನಲೆ[1]ದವಳಿಗಳ ಬಳಗಂ[1] ೫೩೨

(ಗಿರಿಜಾಕಲ್ಯಾಣಂ ೨-೬೬)

ದ್ರುತಕಂಟಕಮಾದೊಡವು
ನ್ನತಕೇತಕಿಯಲ್ಲಿಗೈದಿದವು ಮಧುಕರ ನೀ
ನತಿ ರಕ್ಷೆಯಾದೊಡಂ ಸ್ನೇ
ಹಿತರಂ ಕಾಯಲ್ಕೆ ಬಪ್ಪುದೇ ಧಾರಿಣಿಯೊಳ್ ೫೩೩

ಆ ವನದ ಪುರದ ನಡುವೆ ಸು
ಖಾವಹಮತಿವಿಭ್ರಮಂ ವಿಶಾಲಂ ಸರ್ವೋ
ರ್ವೀವರಶಸ್ತ್ರಾಭ್ಯಾಸನಿ
ಜಾವಾಸಂ ಸುಭಟಪಟಲಪಟುರವಭರಿತಂ ೫೩೪

(ಗಿರಿಜಾಕಲ್ಯಾಣಂ ೨-೭೩)

ತಳೆಯೊಳ್ ಪೋರ್ವ ಮದಾಂಧಸಿಂಧುರಚಯಂ ಪೈಹಾಳಿಗೆಯ್ದಪ್ಪ ಶೂ
ಕಳವಾಹಾವಳಿ ಕೈದುವೆಂದಣೆದು ಕೂರ್ಪಂ ತೋರ್ಪ ಬಲ್ಲಾಳ್ಗಳಿ
ಕ್ಕೆಳದಂತಿಕ್ಕೆಳದೊಳ್ ಕಡಂಗಿ ಪಿಡಿದೌಂಕಲ್ ಬಲ್ಲ ಮಲ್ಲರ್ ಮನಂ
ಗೊಳಿಕುಂ ತನ್ನಗರೀಬಹಿಃಪುರವನಪ್ರಾಂತಪ್ರದೇಶಂಗಳೊಳ್ ೫೩೫

ನೆರೆದಿಭಶಿಕ್ಷಕರ್ ಕಲಿಸಲೇರ್ವಸನಂ ಕಲುತಿರ್ಪ ಗಂಧಸಿಂ
ಧುರಚಯವೇಱದಾತನ ಮನಂ ಮನವಾಗೆ ಮನೋಜವಂಗಳಿಂ
ಪರಿವ ಹಯಾಳಿ ಶಸ್ತ್ರವಿದರಬ್ಬರದಿಂ ನಿಜಶಸ್ತ್ರವಿದ್ಯೆಯಂ
ಪರಿವಿಡಿಗೆಯ್ವ ರಾಜಸುತರೊಪ್ಪುಗುಮಾ ಪುರಬಾಹಿರಾಂತದೊಳ್ ೫೩೬

(ಜಗನ್ನಾಥವಿಜಯಂ ೨-೧೭)

ಆರೆ ಎಡೆ ಹಸ್ತಿ ಶಿಕ್ಷಣವಿಚಕ್ಷಣರಿಂದರೆ ಅಶ್ವಶಿಕ್ಷೆಯಿಂ
ದರೆ ಉಱ ಮಲ್ಲಸೇಷನುಹಿಷೋದ್ಧುರಯುದ್ಧರಸಪ್ರಿಯರ್ಕಳಿಂ
ದರೆ ಎಡೆ ಕಾರ್ಮುಕವ್ಯಸನಕರ್ಮಠಧನ್ವಿಜನಪ್ರವೇಶರಿಂ
ದರೆ ಎಡೆಯೆರ್ವಯೊಂದುಪರಿಯಿಂ ಪುರಬಾಹಿರಸೊಪ್ಪಿತೋಱುಗುಂ ೫೩೭

(ಕಾವ್ಯಾವಲೋಕನಂ -೫೧-)

---

[1]ಡು ತೀವಿದವಳಿಗಳ್(ಅ)

ಹಯಶಿಕ್ಷಕರಿಂ ಗಜಶಿ
ಕ್ಷೆಯ ಭೀಕರದಿಂ ಶ್ರಮಂಗುಡುವ ಜೋದರ ಸಂ
ಚಯದಿಂ ನಯದಿಂ ವೈಹಾ
ಳಿಯ ಬಯಲೊಪ್ಪಿತ್ತು ಪಟ್ಟಣದ ವನದೆಡೆಯೊಳ್ ೫೩೮
(ಗಿರಿಜಾಕಲ್ಯಾಣಂ, ೨-೭೪)

ಕರಿಗಳ್ ಬಾಳ್ಗಂಬದೊಳೊ
ಪ್ಪಿರುತಿರ್ದ್ದುವು ಸುಱಿವ ನೀಲಮೇಘಾವಳಿಯಂ
ತರದಿಂ ಸೆಱೆಯಿಟ್ಟಂತಾ
ಗಿರಿಪತಿ ಸುರಪತಿಯ ಹಗೆಯ ಹರಿಬದ ಛಲದೊಳ್ ೫೩೯
(ಗಿರಿಜಾಕಲ್ಯಾಣಂ ೨-೭೫)

ಸುರಿವ ಮದಂ ಮಱೆ ಗಂಭೀ
ರರವಂ ಮೊಳಗಂಗಮಂಬುದಂ ದಂತಂ ನಿ
ಷ್ಠುರದಿಂದೆಱಗುವ ಸಿಡಿಲಾ
ಗಿರೆ ಕಾರ್ಗಾಲದವೊಲಿರ್ದುವಲ್ಲಿಯ ಕರಿಗಳ್ ೫೪೦
(ಗಿರಿಜಾಕಲ್ಯಾಣಂ ೨-೭೬)

ಎನ್ನಂತೆ ರತ್ನವಿತತಿಗೆ
ತಾಂ ನೆಲೆಯಾಯ್ತೆಂಬ ಸಮಗುಣಪ್ರಣಯದಿನಾ
ಮುನ್ನೀರ್ ಬಂದಪ್ಪಿದುದೆನೆ
ತನ್ನಗರಮನಮಳ ಪರಿಖೆ ಬಳಸಿದುದೆತ್ತಂ ೫೪೧
(ಚಂದ್ರಪ್ರಭಪುರಾಣಂ ೧-೧೧೫; ಸೂಕ್ತಿಸುಧಾರ್ಣವಂ ೪-೯೫)

ಹರಿ ಮತ್ಸ್ಯಾಕಾರದೊ[1]ಳಿ
ದುರ್ಧರು[1] ತಮನಂ ಹ[2]ರಿ[2]ಸಲೆಂದು ಪಾತಾಳತಳ
ಕ್ಕಿರದಿೞಿದ ತಾಣಮೆಂದೆನೆ
ಪುರದಗೞಸೆದಿರ್ದುದತುಳವತಿಗಂಭೀರಂ ೫೪೨
(ಗಿರಿಜಾಕಲ್ಯಾಣಂ ೨-೭೮)

ಬಡಪಾರ್ವಂ ಜಾಮದಗ್ನ್ಯಂ ತುಡೆ ವಿಶಿಖಮನೀರೆಟ್ಟಿತೆಣ್ಣಾಗ್ರವುದಂ ಪೆಯಸ್ ೧೩೪
ಸೆಡೆದೋಡಿತ್ತೌರ್ಬಗಸ್ತ್ಯಂ ತನುಮುನಿ ಮುನಿದಾಪೋಶನಂಗೊಂಡೊಡೆತ್ತಂ
ಪುಡಿವಿಟ್ಟತ್ತೊಂದೆ ಧೀಂಕಾದುದು ಕಪಿಯಣುವಂಗೆಂದಗಟಿಸ್ ವಾರ್ಧಿಯಂ ಕೀ
ೞ್ಪಡಿಕಂ ನಾನಾಮರಾಳೀಬಹುಳಕಳಕಳಧ್ವಾನಸಂತಾನದಿಂದಂ ೫೪೩
(ಜಗನ್ನಾಥವಿಜಯಂ ೨-೧೮)

———
[1] ಳಗ್ದ್ರರ(ಅ) [2] ತಿ(ಅ)

ಕಡಲೆನ್ನನಂದಿನಂದದೆ
ಕಡೆಯದಿರಿನ್ನೆಂದು ಬಂದು ಮಂದರಮಂ ಕಾ
ಲ್ವಿಡಿವಂತೆ ಪೊನ್ನಕೋಂಟೆಯ
ನೆಡವರಿಯದೆ ಬಳಸಿ ಪುರದಗಟ್ ಸೊಗಯಿಸುಗುಂ ೫೪೪

(ಧರ್ಮನಾಥಪುರಾಣಂ ೨-೬೩)

ಸುಸುಳಿಲ್ ಜಾರದು ಸಪ್ತಸಪ್ತಿಯ ವರೂಥಕ್ಕೆಂದುಮೆಂಬಂತೆ ಕಾ
ಳಿಸಗೊಂಡಾಗಸದೊಳ್ ನಿಜ ಸ್ಥಗಿತ ರತ್ನದ್ಯೋತವಿಸ್ತಾರದಿಂ
ದೆಸೆಯುಂ ಚಿತ್ರಿಸುತುಂ ವಿಶಾಲತರ ಶಾಳಂ ವಿಸ್ತೃತಾಟ್ಟಾಳಮು
ದ್ಭಸಮೀಚೀನ ಪಟಧ್ವಜಂ ಕನಕಕೋಟಾಮಂಡಲಂ ರಂಜಿಕುಂ

(ಜಗನ್ನಾಥವಿಜಯಂ೯-೯೪)

ಸುರನಗಮಂ ನಿಮಿರ್ಚಿ ತಿರಿಸುತ್ತಿದನಲ್ತೆ ಸರೋಜಸಂಭವಂ
ಪುರಕೆನೆ ಚೆಲ್ವನಪ್ಪ ನವಹಾಟಕನಿರ್ಮಿತಮಪ್ಪ ಕೋಂಟೆ ಮು
ಟ್ಟಿರೆ ಮುಗಿಲಂ ರಥಕ್ಕೆ ಪಥಮಿಲ್ಲದೆ ಬಿಟ್ಟಿರಡುಂ ಕೆಲಂಗಳೊಳ್
ಚರಿಯಿಸನಲ್ಲದಂದು ರವಿಗೆತ್ತಣದುತ್ತರದಕ್ಷಿಣಾಯನಂ ೫೪೬

(ಚಂದ್ರಪ್ರಭಪುರಾಣಂ ೧-೧೧೪; ಸೂಕ್ತಿಸುಧಾರ್ಣವಂ ೪-೯೭)

ಸುಜನರ್ಗಾಶ್ರಯಮಾದಾ
ನಿಜ ಧಾತ್ರೀನಾರಿ ನಿಷ್ಠುರಾತ್ಮಕನೆನಿಪಾ
ಕುಜನಿಗೆ ಬುದ್ಧಿಯನುಸುರಲ್
ಭುಜಲತೆಯೊಳೆಟ್ಟಿಂತೆ ಕೋಂಟೆ ನಭವಳ್ಳಿ ಜಾಗುಂ ೫೪೭

ಪಸುಕಿನ ಕೋಂಟೆ ಬಟ್ಟೆದೆನೆ ಜೇವಿನದಂಡೆ ನಭಕ್ಕೆ ಮೀಜುವ
ಟ್ಟಳೆ ನಿಮಿರ್ದೇಜು ಪಾಜುವ ಪತಾಕೆ ವಿರಾಜಿಪ ಗೋಂಟು ಗೋಂಟಿನೊಳ್
ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾರಮಾಗಿಯು
ಗ್ಗಳಿಸುವ ಗೋಪುರಂ ಪುಲಿಮೊಗಂ ಮೆಜೆಗುಂ ಪುರದೊಳ್ ನಿರಂತರಂ ೫೪೮

ಮುತ್ತಿದ ಹರಿಣಚಯಂಗಳ
ಮುತ್ತಿಗೆಗಳಿಗಂಜದಧಿಕಧೈರ್ಯದೊಳವರಂ
ತುತ್ತಿಡುವ ಸುಪ್ರತಾಂಪ
ಚಿತ್ತಿಹವಾ ಪುರಕೆ ಪುಲಿಮೊಗಂಗಳವೆತ್ತಂ ೫೪೯

ಅಕಳಂಕೋಜ್ಜ್ವಳವಜ್ರನಿರ್ಮಿತ ಕವಾಟಂ ನೀಲರತ್ನಪ್ರಭಾ
ವಿಕಟಾಟ್ಟಾಳಮುದಗ್ರಮೌಕ್ತಿಕಮಯೋದ್ಯದ್ಗೋಪುರಂ ಕಣ್ಗೆ ಮಾ
ಣಿಕದಂತೊಪ್ಪುಮನಪ್ಪುಕೆಯ್ದು ಮಣಿಕೋಟಾಚಕ್ರಮೋರಂದದಿಂ
ಪ್ರಕಟಂಗೆಯ್ವುದು ತನ್ನದೊಂದು ರನ್ನಮೊಬಿಲಿಂಬಸ್ಸಾನವಿನ್ಯಾಸಮಂ ೫೫೦
(ಧರ್ಮನಾಥಪುರಾಣಂ ೨-೬೫)

ಪುರಮಂ ಬಳಸಿರ್ದಗಲಿಂ
ಬರದುದ್ದವನೆಯ್ದಿದಿರ್ಪ ವಪ್ರದೊಳಂ ಗೋ
ಪುರದಿಂ ಪೆರ್ಬಾಗಿಲ್ಗಳ್
ಮೆಱೆದಿರ್ಪವನಂತವಿಭವದಿಂ ಕಲ್ಯಾಣಂ ೫೫೧

ಕೋಟೆಯ ಕೊನೆದೆನೆ ನೆಗೆದಿಱಿ
ದಾಟದೆ ಕುಮರಿಗಳನಱಿ ಕಾಲ್ ನಡುಮುಗಿಲೊಳ್
ನಾಟುತಿರೆ ದಿನಕರಂ ಬರ
ಲಾಳಿಸು[1]ತಂ[1] ದಕ್ಷಿಣೋತ್ತರಾಯಣ[2]ನಾದಂ[2] ೫೫೨
(ಲೀಲಾವತಿ ೭-೩)

ಮುಗಿಲಂ ಮುಟ್ಟುವ ಪೊಂಗೋಂ
ಟೆಗೆ ತರದಿಂ ತಿಸೆಯ ತುಱುಗಲಿಡೆವೆಱಪುಗಳಿಂ
ಸೊಗಯಿಸಿದುವು ನಡೆಗೆಟ್ಟಿರೆ
ಭಗಣಂ ಸಲೆ ಜಟ್ಟಿಗೊಡುವವೋಲ್ ಪುರರಾಜಂ ೫೫೩
(ಲೀಲಾವತಿ ೭-೪)

ತೂಗಿದಡಮರಾವತಿ ಲಘು
ವಾಗಿ ನಭಕ್ಕೆಗೆದುದಂಜಿ ಪೊಕ್ಕುದು ರಸೆಯಂ
ಭೋಗವತಿ ತೆಗೆದು ನಾಟ್ಕಿಡಿ
[3]ಯೋ[3]ಗಿರ್ಪ ಪುರ[4]ಕ್ಕೆ[4] ತನಗೆನಿಪ್ಪುದು ನಗರಂ ೫೫೪
(ಸೂಕ್ತಿಸುಧಾರ್ಣವಂ ೪-೯೯)

ಅದಱಿಂದೊಳ್ ಪುಟ್ಟಿದ ಗಂಡರೆಲ್ಲಮತಿವೀರರ್ ಪೆಂಡಿರೆಲ್ಲಂ ವಿಳಾ
ಸದ ಸೌಭಾಗ್ಯದ ಸೀಮೆಗಳ್ ಕಿಱುಕರೆಲ್ಲಂ ಪಂಡಿತರ್ ಸೆಟ್ಟಿವ
ಟ್ಟಿಗರೆಲ್ಲಂ ಚಾಗಿಗಳ್ ಬಡಗರೆಲ್ಲಂ ಭೋಗಿಗಳ್ ಗಾಂಪರುಂ
ಚದುರರ್ ಶಂಕರುಮಾಯಕಾಱರಧಮವ್ಯಾಪಾರರುಂ ಧಾರ್ಮಿಕರ್ ೫೫೫
(ಅನಂತನಾಥಪುರಾಣಂ ೧೧-೧೨ : ಸೂಕ್ತಿಸುಧಾರ್ಣವಂ೪-೧೦೭)

---

[1] ಪಂ(ಅ) [2] ಯುಗದೊಳ್(ಅ) [3] ಯಾ(ಸೂ) [4] ಳತೆ(ಸೂ)

ಬಡತನಮೆಂಬುದು ನಡುವಿನೊ
ಳೆಡೆಗಿಱುವುದು ಬಿಗಿದ ಮೊಲೆಯೊಳತಿಕುಟಿಲತ್ವಂ
ಮಡದಿಯರ ಕರುಳೊಳಲ್ಲದೆ
ಪಡಿವಾತೇಂ ಜನರ ದೆಸೆಯೊಳಿಲ್ಲಾ ನಾಡೊಳ್ ೫೫೭

(ಸೂಕ್ತಿಸುಧಾರ್ಣವಂ ೪-೨೦)

ನಯಮಂ ಕಿವಟ್ಟ ಜನ್ಸನದ ದೂಷಿಯು ಗಾಡಿಯು ಸೇಂಡಿರೆಲ್ಲಿಮ
ಲ್ಲಿಯೆ ಸಿರಿಗೊಪ್ಪಮಂ ಪಡೆದ ಚಾಗದ ಭೋಗದ ಗಂಡರೆಲ್ಲಿಮ
ಲ್ಲಿಯೆ ಪೆಸರಾನೆಯುಂ ಕುದುರೆಯುಂ ಪೆಸರಾದ ಸಮಸ್ತವಸ್ತುವ
ಲ್ಲಿಯೆ ಪೇೞ್ಕೊಂಡು ಪಟ್ಟಣದೊಳಿಲ್ಲಿನೆ ಪಟ್ಟಣಮೊಪ್ಪಿ ತೋಱುಗುಂ ೫೫೮

(ಸೂಕ್ತಿಸುಧಾರ್ಣವಂ ೪-೧೦೩)

ಘನತರಮಾದ ಕಸ್ತುರಿಯ ಸಿಂದರ್ಗಳಿಮಂ ಪ್ರವಿದಿರ್ಪ ತೋರಮು
ತ್ತಿನ ಕಡೆತಕ್ತ್ರ ಹೇಮಮಯಪುಷ್ಪದ ಪ್ರೂವಲಿ ಸೀಳ್ದ ಚೀನ ಕೇ
ತನತತಿ ಮಾಲೆಗೊಂಡ ಮಣಿತೋರಣಮೆಂಬಿವು ಬೀದಿಬೀದಿಯೊಳ್
ಮನೆಮನೆಯೊಳ್ ವಿರಾಜಿಸೆ [1]ವಿಚಾರಿಸುತಿ[1]ರ್ಪುವು ತತ್ಪುರಾಂತರಂ ೫೫೯

(ಜಗನ್ನಾಥವಿಜಯಂ ೯-೯೭)

ಪೊಂಗಳಸಂಗಳಿನೆಸೆವು
ತ್ತುಂಗಧ್ವಜತೋರಣಂಗಳಿಂ ಸೊಗಯಿಪ ಕೂ
ಟಂಗಳವೆಲ್ಲಂ ನಾಡೆ ಮ
ನಂಗೊಳಿಪುವು ಪುರದ ರಮ್ಯ ಹರ್ಮ್ಯಚಯಂಗಳ್ ೫೬೦

(ಕಾವ್ಯಾವಲೋಕನಂ ೯೯ : ಸೂಕ್ತಿಸುಧಾರ್ಣವಂ ೪-೧೦೮)

ಮದನವಿಕಾರಮಂ ಮೆಱೆವ ಪಾರಿವಮಿಲ್ಲದ ರಾಜಕೀರಮಿ
ಲ್ಲದ ನೆಲೆಮಾಡಮಿಲ್ಲದ ನೆಗಟ್ಟಿತ್ತಗೆ ನೇಱುವ ಪೊನ್ನಘಂಟೆಯಿ
ಲ್ಲದ ತಳಿಸುಯ್ಯಲಿಲ್ಲದ ಲತಾಗೃಹಮಿಲ್ಲದ ಗೊಟ್ಟಗಾಣರಿ
ಲ್ಲದ ಕಡೆಪಟ್ಟ ಸೂಳೆವನೆಯಿಲ್ಲಿನೆ ತತ್ಪುರಮೊಪ್ಪಿ ತೋಱುಗುಂ ೫೬೧

(ಮಲ್ಲಿನಾಥಪುರಾಣಂ ೨-೫೭ ಸೂಕ್ತಿಸುಧಾರ್ಣವಂ ೪-೧೩೫)

ನೆಲೆವಾಡಂಗಳಿನೋಳಿವಟ್ಟ ನೃಪಗೇಹಂ ವಸ್ತುವಂ ಕೊಳ್ವ ಬ
ಲ್ಲುಲಿಯಿಂ ಘೂರ್ಣಿಸುವಾಪಣಂ ಕಳಿಪವಳ್ಳಿಯಿಂ ಮುಗಿಲ್ಮುತ್ತುಗ
ಕ್ಕಲಿಯಿಂ ಸೂಸುವ ದೇಗುಲಂ ತಪಕೆ ತಪ್ಪಂ ಮಾಳ್ಪ ವಾರಾಂಗನಾ
ನಿಲಯಂ ನೋೞ್ಪರ ಕಣ್ಗೆ ರಮ್ಯಮೆನೆ ಸೆಂಪಂ ಪೆತ್ತುದಾ ಪಟ್ಟಣಂ ೫೬೨

---

[1] ವಿರಾಜಿಸು(ಅ)

ವಾರಿಧಿ ತನ್ನಗೞ್ ತನಗೆ ರೈವತಶೈಲಮುಪಾಂತಶೈಲಮಂ
ಭೋರುಹಲೋಚನಂ ತ್ರಿಭುವನಪ್ರಭು ತನ್ನಧಿನಾಥನೆಂದೊಡಿ
ನ್ನಾರಭಿವರ್ಣಿಸಲ್ ನೆಱೆವರೆಂಬಿನಮಿರ್ದುದುದಗ್ರಗೋಪುರಂ
ದ್ವಾರವತೀಪುರಂ ಜಿತಸುರೇಂದ್ರಪುರಂ ವಸುಧಾಂಘ್ರಿನೂಪುರಂ ೫೬೩
(ಜಗನ್ನಾಥವಿಜಯಂ ೯-೮೫ ; ಸೂಕ್ತಿಸುಧಾರ್ಣವಂ ೪-೧೦೧)

ತಾ ಕಡುಸೊಂಪನಾಂತ ನಿಜನಂದನ ಬಂಧುರ ಗಂಧಪುಷ್ಪವಾ
ಳಾಕುಲ ಷಟ್ಪದಾಳಿ ಕುರುಳೋಳಿಗಳಂತೆ ಬೆಡಂಗನೀಯೆ ಶೋ
ಭಾಕರಮಾದ ತದ್ವಿಷಯವಲ್ಲಭೆಗಂಗಜರಾಜನಿತ್ತ ಚೂ
ಡಾಕಮನೀಯ ರತ್ನಮೆನೆ ರತ್ನಪುರಂ ಕರಮೆತ್ತಿ ತೋಱುಗುಂ ೫೬೪

ಮಿಳಿರ್ಪುತ್ತುಂಗಧ್ವಜಂ ಮಾರ್ಪೊಳೆಯೆ ಜಲಚರವ್ರಾತಮೆಂಬಂತೆ ಪೇರ
ಟ್ಟಳೆಗಳ್ ತತ್ಕ್ಷೇತ್ರಮುಂ ಬಿಂಬಿಸೆ ಬಹಳ ಬಹಿತ್ರಾಳಿಯೆಂಬಂತೆ ಕೋಟಾ
ವಳಿಯುಪ್ರೋತಪ್ರದೀಪೋಜ್ಜ್ವಳಮಣಿಯ ನೆೞಲ್ ಪರ್ವತೌರ್ವಾಗ್ನಿಯಂತಾ
ಗಳುಮಂಭೋರಾಶಿಗೆತ್ತಾರ್ದೆಜಗಿದಪುದದಭ್ರಾಭ್ರಮಭ್ರಾಘ್ವದಿಂದಂ ೫೬೫
(ಧರ್ಮನಾಥಪುರಾಣಂ ೨-೬೪)

ಮನೆಮನೆಗೆಯ್ದೆ ಚೆನ್ನೆಸೆವ ರನ್ನದ ಸೂಸಕಮಿಟ್ಟ ಚೆನ್ನಕೇ
ತನಮುಳಪಟ್ಟೆ ಪೊಂಗಳಸದೋಳಿ ಮಸಂಗೊಳೆ ಬೀದಿಬೀದಿಯೊಳ್
ಕನಕದ ತೋರಣಂ ತಳಿದ ಕತ್ತುರಿನೀರ್ ದೊರೆವೆತ್ತ ತೋರಮು
ತ್ತಿನ ಕಡೆ ಪೂರ್ಣಪುಷ್ಪಬಲಿ ಪಿಂಗದೆ ಕಣ್ಗೊಳಿಸಿರ್ಪುದಾ ಪುರಂ ೫೬೬
(ಧರ್ಮನಾಥಪುರಾಣಂ ೨·೭೦)

ಹಯರತ್ನಂ ಗಜರತ್ನಮುತ್ತಮಗುಣಸ್ತ್ರೀರತ್ನಮುರ್ವೀಪತಿ
ಪ್ರಿಯರತ್ನಂ ದೊರೆವೆತ್ತ ಸತ್ಪುರುಷರತ್ನಂ ತಾನಿದಕ್ಕಾವಗಂ
ನಿಯತಸ್ಥಾನಮೆನಿಪ್ಪುದೆಂದು ಪದೆದಿತ್ತಂ ಚಿತ್ರದೊಳ್ ಮಾಡಿ ನಿ
ಶ್ಚಯಮಂ ರತ್ನಪುರಂಬಳೆಂದು ಚತುರಾಸ್ಯಂ ಪ್ರೇಮದಿಂ ನಾಮಮಂ ೫೬೭
(ಧರ್ಮನಾಥಪುರಾಣಂ ೨-೧೪೦)

ಕುಸುಮಾಕರದಾಗರಮೆನೆ
ಕುಸುಮಾಯುಧನೆಂದುಮಿರ್ಪ ನೆಲೆವನೆ ಜಗದೊಳ್
ಕುಸುಮಸುಕುಮಾರಿಯರ ಸೌ
ಖ್ಯಸದನಮೆನೆ ಮಿಸುಪುದಸದಳಂ ಕುಸುಮಪುರಂ ೫೬೮
(ಲೀ[illegible]ವತಿ [illegible]-೧೩೦)

ಪ್ರಕಟಂಬೆತ್ತಿರ್ಪ ಪೊಂಗೋಂಟೆಯ ತೆನೆಗಳೆಸಟಿರ್ ಕೇಸರಂ ಸೌಧಶಾಲಾ
ನಿಕರಂ ರಾಜಾಲಯಂ ಕರ್ಣಿಕೆ ವಿವಿಧಪುರಂಧ್ರೀಲಸತ್ಸೌಕುಮಾರ್ಯಂ
ಮಕರಂದಂ ವಂದಿವೃಂದಂ ಮಧುಕರಪಟಲಂ ತಾನೆನಲ್ಕೊಪ್ಪುಗುಂ ಸಾ
ರ್ಥಕನಾಮಂ ರಂಜಿಸಿರ್ಕುಂ ಕುಸುಮಪುರಿ ಜನಖ್ಯಾತಿಯಿಂದಂ ನಿತಾಂತಂ ೫೬೯

ಅತನು ಪುರಾಧಿಪಂ ತಳವರಂ ಶಶಿ ಪೆರ್ಗಡೆ ಮಂದಮಾರುತಂ
ರತಿ ನಗರಾಧಿದೇವತೆ ವಸಂತನಶೇಷಗುಣಪ್ರಬೋಧಕಂ
ಕೃತಕ ನಗಾಳಿ ಕೋಂಟೆ ಮಕರಂದರಸಂ ನಿಧಿಯಾದ ತತ್ಪುರ
ಸ್ಥಿತಿಯ ವಿಳಾಸಮಂ ಪಡೆದು ಬಣ್ಣಿಸುವಂ ಶುಕರೂಪನಲ್ಲನೇ ೫೭೦

ಭೂವಳಯಕ್ಕೆ ನೂತ್ನ ಮಣಿದರ್ಪಣದಂತೆ ಲಸದ್ವಿಭೂತಿಸಂ
ಭಾವಿತ ನಿರ್ಮಲ ಪ್ರಚುರವೃತ್ತವೆನಿಪ್ಪ ಜನಪ್ರಸನ್ನಸೌ
ಖ್ಯಾವಿವರಂ ನಿಮಿರ್ಚಿ ನವರತ್ನಸುವರ್ಣವಿಕೀರ್ಣಮಪ್ಪ ಹ
ರ್ಮ್ಯಾವಳಿಯಿಂ ವಿಚಿತ್ರವೆನೆ ರಂಜಿಸುತಿರ್ಪುದವಂತಿಕಾಪುರಂ ೫೭೧

ಮನೆಮನೆಗಳ್ಗೆ ರಂಜಿಸುವ ಪೊಂಗಳಸಂ ಮಿಗೆ ಕೇರಿಕೇರಿಯೊಳ್
ಬಿನದದ ಶಸ್ತ್ರಶಾಸ್ತ್ರಪರಿಚಿಂತನೆಯುನ್ನತ ರಾಜವೇಶ್ಮದೊ
ಳ್ಪಿನ ನವರತ್ನದುಪ್ಪರಿಗೆಯೊಳ್ ನಿಜಲೀಲೆಯೊಳೊಪ್ಪುತಿಪ್ಪ ಪ
ದ್ಮಿನಿಯರ ಸಂಕುಳಂ ಮೆಱೆವಿನಂ ಪೆಸರ್ವೆತ್ತುದು ನೋಡೆ ತತ್ಪುರಂ ೫೭೨

ವಸುಧಾದೇವಿಯ ನೀಳ್ದ ತೋಳ್ಗಳೆನಿಸಲ್ ಸೋಮಾರ್ಕಸದ್ವೀಥಿ ರಂ
ಜಿಸೆ ನಾನಾವರರತ್ನಹೇಮಕಳಸಂ ಸ್ವರ್ಣಾದ್ರಿಯಂ ಸ್ಫೈತು ಸೋ
ಲಿಸುವಂತೊಪ್ಪೆ ನಿಮಿರ್ಕೆಯುಪ್ಪರಿಗೆಗಳ್ ತಾರಾದ್ರಿಯಂ ಪೋಲ್ತು ಪೆಂ
ಪೆಸೆಯಲ್ ನಿತ್ಯವಿಳಾಸದಿಂ ಮಿಥಿಳೆಯೆಂಬಾ ಪೌರಿ ತಾನೊಪ್ಪುಗುಂ ೫೭೩

ಏಪ್ರೊಗಬಿಂಗರಾಜವಿಷಯಾಂತದೊಳೊಪ್ಪುವ ಕಾವ್ಯಮಂಗಳ
ಶ್ರೀಪದದಿಂ ಲಸತ್ತ್ರಿದಿವಸೌಪಪೆ (?) ದೊಗ್ಗಿನನಂತಭೋಗಶಾ
ಖಾಪರಿಪೂರ್ಣದಿಂ ಭುಜಗಮಂದಿರಮಂ ಮಿಗೆ ಪೋಲ್ತು ಕೊಡೆ ಚಂ
ಪಾಪುರಮೊಪ್ಪುಗುಂ ಸಕಲಸಂಪದಸೌಖ್ಯವಿಳಾಸದೇಟಿಗ್ಗೆಯಿಂ(?) ೫೭೪

ದೇಶದ ಸೊಂಪಿನಿಂ ಜನದಸಂಪದದಿಂ ದನಧಾನ್ಯದೇಟಿಗ್ಗೆಯಿಂ
ಕೋಶಸಮಗ್ರದಿಂದಧಿಕದುರ್ಗಗಳಿಂ ಚತುರಂಗಸೇನೆಯಿಂ
ಮಾಸದ ಕೀರ್ತಿಯಿಂತವು ಸುಭಾವಗುಣಾನ್ವಿತಮಾಗಿಯಾವಗಂ
ವಾಸವನೂರಿನಂತೆಸೆಯುತಿರ್ಪುದು ನೋಡೆ ವಸಂತಿಕಾಪುರಂ ೫೭೫

ಪರಿಖೆ ಸರೋವರಂ ಪರಮಕೋಂಟೆಯ ಸುತ್ತಗಟ್ಟುಳ್ಳೆಸೞ್ ಮಣಿ
ಸ್ಫುರಿತ ಗೃಹಾಳಿ ಕೇಸರಚಯಂ ಘನಕರ್ಣಿಕೆ ರಾಜಮಂದಿರಂ
ವರಕಲಶಂ ತದಗ್ರರುಚಿರೋನ್ನತ ಬೀಜಸಮೂಹಮಾ ಪುರಂ
ಸರಸಿಜದಂತೆ ಸದ್ಗುಣಕೆ ಲಕ್ಷ್ಮಿಗೆ ತಾಣಮದಾಗಿ ರಂಜಿಕುಂ ೫೭೬

ವರಭೋಗಾವತಿ ಪಾದಮೊತ್ತೆ ಕೇಳಗಾಯ್ತಾಹಾ ಸುವರ್ಣಾವತೀ
ಪುರಮಾರ್ಪೋಯೊಡಮಿಕ್ಕಲೆಂದು ಬೞಿಯುಂ ಸಾಧೋಪಿತಾಚೆಲ್ವನಾಂ
ತರು ಭಾಸ್ವತ್ಸುಮನಃಪುರಂ ಮುಡಿಯನೆಂತುಂ ಸಿಂಗರಂಗೆಯ್ಯೆ ಬಂ
ಧುರದಿಂದಗ್ರಕೆ ಪೋಯ್ತೆನಲ್ಕೆ ಪುರಮೆಂಬಾ ಶ್ರೀಗದೇಂ ಭೋಗ್ಯಮೋ ೫೭೭

ಬಿದಿ ಮನದೞ್ತಿಯಿಂ ಭುಜಗಲೋಕದ ಮಾನವಲೋಕದಿಂದ್ರಲೋ
ಕದ ಬಹುಸಾರವಸ್ತುಗಳನೊಂದೆಡೆಗೆಯ್ದೆ ತೆರಳ್ಚಿ ತಂದು ಮಾ
ಡಿದನತಿರಮ್ಯಮಂ ಪುರಮನೆಂಬಿನೆಗಂ ಯಮುನಾತಟಪ್ರದೇ
ಶದೊಳೆಸೆದಿರ್ಪುದಲ್ತೆ ಮಧುರಾಪುರಮರ್ಧಶಶಾಂಕಸನ್ನಿಭಂ ೫೭೮

(ಜಗನ್ನಾಥವಿಜಯಂ ೨–೧೨)

ಬಿಸಿಲಂ ಪೊಂಗಳಶಂಗಳಚ್ಚಬೆಳಗಿಂ ತಳ್ಕೈಸುತುಂ ತಳ್ತು ಚುಂ
ಬಿಸುತಂ ವ್ಯೋಮಮನುರ್ಚಿ ಕೇತುಚಯದಿಂ ನೀಲಾಭ್ರಮಂ ಮೇಲೆ ನಿ
ರ್ಮಿಸುತಂ ಧೂಪಜಧೂಮದಿಂದೆ ಪಟಹಪ್ರಧ್ವಾನದಿಂ ಕೂಡೆ ಘೂ
ರ್ಣಿಸುತಂ ದೇವಕುಳಂ ಕುಳಾದ್ರಿಕುಳದಂತಲ್ಲಿರ್ಪುದವ್ಯಾಕುಳಂ ೫೭೯

(ಲೀಲಾವತಿ ೭–೬)

ಪೊಳೆವ ಬಿಸಿಲ್ಗೆ ಬೆಳ್ಪನೆಳದಿಂಗಳ ಕಾಂತಿಗ ಕೆಂಪನಿತ್ತು ಕ
ಣ್ಗೊಳಿಸುವ ಮೌಕ್ತಿಕಧ್ವಜಮರೀಚಿಗಳಿಂದೆ ಸಹಸ್ರಕಾಂಚನೋ
ಜ್ವಳ ಕಳಸಂಗಳಿಂದಮಿರುಳುಂ ಪಗಲುಂ ತಡವಿಕ್ಕೆ ಕೈರವಂ
ಗಳ ಕಮಲಂಗಳುಳ್ಳಲರ್ಪುದಂ ತಡವಿಕ್ಕುವುದಾ ಜಿನಾಲಯಂ ೫೮೦

(ಲೀಲಾವತಿ ೮–೭೦)

ಸತತಂ ಸಂಗೀತ ಚಿತ್ರಂ ವಿವಿಧಸಕಲವಾದ್ಯೋತ್ಸವಂ ನೃತ್ಯವಿಭ್ರಾ
ಜಿತ ಪಾರ್ಶ್ವಂ ಧೂಪಧೂಮಕ್ಷುಭಿತಮಖಿಳಪೌರಾಣಮಂತ್ರಂ ನವ್ರೋದಂ
ಚಿತ ತನ್ಮ್ಯಸ್ಥಾನಸುಸ್ನಾಪ ವಸುಮಯಕಲಶಂ ಸೆಂಪುವೆತ್ತಿರ್ಪ ದೇವಾ
ಯತನಂ ಕಣ್ಗೊಪ್ಪುಗುಂ ತತ್ಪುರವರದೊಳನೂನ ಪ್ರಸಾದಂಗಳಿಂದಂ ೫೮೧

ಒದವಿದ ಮುತ್ತಿನ ಮಾಣಿ
ಕ್ಯದ ಗೋಮೇಧಿಕದ ಪುಷ್ಯರಾಗದ ವೈಡೂ
ರ್ಯದ ವಜ್ರದ ಪಚ್ಚೆಯ ಪವ
ಳದ ನೀಲದ ಕಲಶದಿಂ ಶಿವಾಲಯಮೆಸೆಗುಂ ೫೮೨

ತರುಣೀನೇತ್ರಪ್ರಭಾಕೌಮುದಿಯಿನುದಿರ್ವ ಚಂದ್ರೋಪಳಾಗಾರಬಿಂದೂ
ತ್ಕರದಿಂದಂ ನಾಂದು ನೀಡುಂ ಶುಕಹರಿತ ಹರಿದ್ವೇದಿಕಾಶಾದ್ವಲಕ್ಕಾ
ತುರಿಸುತ್ತುಂ ನರ್ತಕೀಕೇಕರತರುಣತಟಿನ್ಮಂಜರೀಸ್ಮೇರನೀಳೋ
ಪರಿಮಪ್ರಾಸಾದಸಂಗೀತಕಮುರಜರವಕ್ಕಾಡುಗುಂ ಕೇಕಿವೃಂದಂ ೫೮೩
(ಲೀಲಾವತಿ ೭–೨೫)

ನೀಲದ ಪಚ್ಚೆಯ ಪವಳದ
ಶಾಲೆಗಳ ಮರೀಚಿಯುಂ ಪುರಂದರ ಧನುಗೆ
ತ್ತಾಲೋಕಿಸಿ ನವನರ್ತ್ತನ
ಲೀಲೆಯನೊಡರಿಚುವವಲ್ಲಿ ಪುರದ ನವಿಲ್ಗಳ್ ೫೮೪
(ಗಿರಿಜಾಕಲ್ಯಾಣಂ ೨–೯೬)

ಬೆಳಬೆಳಪ ಸುಧಾಧವಳಿತ
ನಿಳಯಂಗಳ ಧವಳಕಾಂತಿಯುಂ ಕೌಮುದಿಗೆ
ತ್ತೆಳಸುತಲಿರ್ಪುವು ಪಗಲುಂ
ಬಳಸಿ ಚಕೋರಾಳಿ ಪುರದ ನಿಳಯಮೊಳೆಲ್ಲಂ ೫೮೫
(ಗಿರಿಜಾಕಲ್ಯಾಣಂ ೨–೯೭)

ನೆಗೆದ ಪತಾಕಾಪಟ ಕೋ
ಟಿಗಳೊಪ್ಪಿದುವಾವಗಂ ತೊಟಿಲ್ದು ಬಟಿಲ್ದಾ
ಖಗನ ತುರಂಗಪ್ರತತಿಗೆ
ಗಗನಾಂಗನೆ ಬೀಸುತಿರ್ಪ ವೀಜನತತಿಯೋಲ್ ೫೮೬
(ಗಿರಿಜಾಕಲ್ಯಾಣಂ ೨–೮೦)

ಬಗೆವೊಡಮರಾವತಿಗೆ ಮಿಥಿ
ಳೆಗೆಯುದಯನಗಕ್ಕೆಯುಜ್ಜಯಂತಿಗೆ ಮಿಗಿಲಾ
ನಗರಿ ಗುಣೋನ್ನತಿಯಿಂದಂ
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ೫೮೭
(ಗಿರಿಜಾಕಲ್ಯಾಣಂ ೨-೮೧)

ಶ್ರುತಿಘೋಷಂ ಮಂತ್ರಘೋಷಂ ನತಜನಜಯಘೋಷಂ ಪುರಾಣಪ್ರಘೋಷಂ
ಸ್ಮೃತಿಘೋಷಂ ಗೀತಘೋಷಂ ಪರಶಿವವಿಮಳಜ್ಞಾನಸಂವಾದಘೋಷಂ
ಕೃತಿಘೋಷಂ ಯಜ್ಞಘೋಷಂ ಪರಿಣಯನಮಹೋತ್ಸಾಹವಿಸ್ತಾರಘೋಷಂ
ಸತತಂ ತೀವಿರ್ದುದಂತಾ ಪುರದೊಳಭವಗೇಹಾವಳೀವಾದ ಘೋಷಂ ೫೮೮

(ಗಿರಿಜಾಕಲ್ಯಾಣಂ ೨–೯೯)

ಪೊಳೆದು ಪೊದಟ್ದು ಪರ್ಬಿದ ಸುಧಾಂಶುಗಳಾಗಸಗಂಗೆ ಮೇಗೆ ಬ
ಳ್ವಳಬಳೆದಂತೆ ಪಜ್ಜಳಿಸೆ ಜೆಳ್ಮುಗಿಲೇಂ ಬಳಸಿರ್ದುದೋ ಹಿಮಾ
ಚಳಮನೆನಲ್ಕೆ ಸುತ್ತಿಱಿದ ರಾಣಿಯವಾಸದ ಬಳ್ಳಿಮಾಡದಿಂ
ತೊಳಗುತಮಿರ್ಪುದಲ್ಲಿ ಕರುಮಾಡಮನೇಕತಳೋನ್ನತೋದಯಂ ೫೮೯

(ಲೀಲಾವತಿ ೭–೨೭)

ಅನಿತೆಸೆದುವು ಕರುಮಾಡದ
ಕೊನೆವೆಳಗುಗಳಂಗನೆಯರ ನಯನೋತ್ಪಲನಂ
ದನದಸಿರಿ ತೊಲಗದಂತರ
ಮನೆಯಂ ಜೆಳ್ದಿಂಗಳಿಂದೆ ಬಾಸಣಿಸಿದವೋಲ್ ೫೯೦

(ಲೀಲಾವತಿ, ೭–೨೮)

ಪಿರಿದುಂ ನಲಿವುದು ದೀಹದ
ಹರಣಂ ಶಶಿಬಿಂಬದೊಳಗೆ ಸಿಲ್ಕಿದ ಹರಿಣಂ
ಕರುಮಾಡದಿನಿೞಿದಂತಿರೆ
ಮರಕತ ಕುಟ್ಟಿಮ ವಿಶಾಲ ಶಾಡ್ವಲತಲದೊಳ್ ೫೯೧

(ಲೀಲಾವತಿ, ೭–೨೯)

ನಯಮಳವಟ್ಟ ಕುಟ್ಟಿಮಮೆ ನೀಲಮಯಂ ನಿಱಿಪೊಂದಿ ನೀಳ್ದ ಭಿ
ತ್ತಿಯೆ ಮೊರೆವೆತ್ತ ಮೌಕ್ತಿಕಮಯಂ ತಳೆಗಂಭಮೆ ತಳ್ತ ವಜ್ರಸಂ
ಚಯಮಾಗೆ ರತ್ನಮಯಮಾದ ಬೆಡಂಗು ಮಯಂಗೆ ಚಿತ್ರವಿ
ಸ್ಮಯಮನೊಡರ್ಚೆ ಕಣ್ಗೆ ಕರುಮಾಡಮದೇಂ ಕಡುಗಾಡಿವೆತ್ತುದೋ ೫೯೨

ಆ ಪುರದ ದೇವಭವನಕ
ಳಾಪದ ಮಾಣಿಕದ ಕಳಶದೆಳವಿಸಿಲಿರುಳಂ
ವ್ಯಾಪಿಸೆ ಗೃಹದೀ[೧]ರ್ಘಿಗಳೊಳಿ
ಗೇ[೧]ಪ್ರೊಟ್ಟಿಂ ಜಕ್ಕವಕ್ಕೆಗಳ್ ನೆರೆದಿರ್ಕುಂ ೫೯೩

(ಸೂಕ್ತಿಸುಧಾರ್ಣವಂ, ೪–೧೪೬)

[೧] ದೀಪಿಕೆಗಳೊಳೇ(ಅ)

ಬರೆಯಲ್ ಬಾರದು ಬಚ್ಚಿಸಲ್ಕರಿದು ಮಾಡಲ್ ಕೂಡದೊಡ್ಡಿಪ್ಪ ಸಲ
ಚ್ಚರಿ ಭೂಮಂಡಲಮಧ್ಯದಿಂದೊಡೆದು ಮೂಡಿತ್ತೆಂಬಿನಂ ಜಲ್ಪನಾ
ಕರುಮಾಡಂ ನವಭೂಮಿಕಾಪ್ರಕಟಿತಂ ವಿಷ್ಕಂಭವಿಸ್ತಾರಬಂ
ಧುರಸಂಧಿಪ್ರವಿಭಾಸಿ ನಾಟಕದ ಪಾಂಗಿಂ ಚೂಳಿಕಾಲೋಳಿ[3]ತಂ ೫೯೪
(ಅನಂತನಾಥಪುರಾಣಂ ೧-೧೧೪ : ಸೂಕ್ತಿಸುಧಾರ್ಣವಂ ೪-೧೪೮)

ಆಡುವ ಡಕ್ಕೆ ವಾಜಿಸುವ ನೋಡುವ ಸಂಗಡನೊಪ್ಪೆ ರಾಗಮಂ
ಪಾಡುವ ತಳ್ತು ಕುಂಬಿಸುವ ಬೀಣೆಯ ತಂತಿಯ ನಂಟುಸೋಟ್ಟಿ ಪೂ
ತಾಡುವ[1]ಪಾಲೆಪೂಮುಡಿವ[1] ಕನ್ನಡಿಯಂ ಪಿಡಿದಿರ್ಪ ಭಾವದಿಂ
ನಾಡಿಯನಾಂತ ಪುತ್ರಳಿಗಳಾ ಕರುಮಾಡದೊಳೊಪ್ಪಿ ತೋಱುಗಂ ೫೯೫
(ಸೂಕ್ತಿಸುಧಾರ್ಣವಂ ೪-೧೪೯)

ಬಳೆಸಿದ ನೀಲದ ಮುತ್ತಿನ
ತೊಳಗುವ ಮಾಣಿಕದ ರನ್ನವೆಳಗಿನ ಬೆಳಗಂ
ಥಳಥಳಿಸಿ ಬಿಸಿಲ ಬೆಳ್ದಿಂ
ಗಳ[2]ಕಾಳಿದ[2] ಕಣಿಂಬಿಸಿಪ್ಪುದಾ ಕರುಮಾಡಂ ೫೯೬
(ಅನಂತನಾಥಪುರಾಣಂ ೧-೧೧೬ ; ಸೂಕ್ತಿಸುಧಾರ್ಣವಂ ೪-೧೫೦)

ಗರುಡಂಗಮೆಯ್ದಲರಿದೆನೆ
ಕರುಮಾಡಮಿದುದ್ದಮಾದುದೇಕಸ್ತಂಭೋ
ಪರಿನಿರ್ಮಿತಮಿದನೆಮ್ಮ
ನ್ನರ ದೃಷ್ಟಿಗಳೆಯ್ದುವೆಂತು ಬಣ್ಣಿಪೆವರಸಾ ೫೯೭
(ಜಗನ್ನಾಥವಿಜಯಂ ೬--೫೯)

ಎಳೆವೆಂಡಿರ್ ನೆಲೆವಾಡದೊ
ಳೆಳಸಿರೆ ನಡೆನೋಡಿ ಸೋಲ್ತುವ್ರೊಲು ಚಂದ್ರಂ ಪೂ
ರ್ವೊಳೆವ ನೆವದಿಂದೆ ಪೊರಳ್ವಂ
ಮಳಯಜರಜಸುಕ್ತಿರತ್ನಕುಟ್ಟಿಮತಳದೊಳ್ ೫೯೮

ನೆಲೆಮಾಡದೊಳೆಡೆಯಾಡುವ
ಕಳಹಂಸಾಲಸವಿಲಾಸವತಿಯರ ಮುಖಮಂ
ಡಳಕೆ ಸರಿಯಾಗಲಾರದೆ
ಪಳಿ ಮಾಣ್ಬಿಂ ಚಂದ್ರನಂದು ಚಾಂದ್ರಾಯಣಮಂ ೫೯೯
(ಯಶೋಧರಚರಿತ್ರೆ ೧-೩೧)

[1]ಪಂತೆಪೂಮುಡಿವ(ಸೂ) [2]ರಾಗ(ಸ) [3]ಯೊಲಿ(ಸೂ)

ಮಲಯಪವನಂಗೆ ಮೆಯ್ಯಂ
ಸಲೆ ಮಾಱುತ ಚರಿಪ ನಲ್ಲರಂ ತಾಂ ತಮ್ಮಯ
ನೆಲವೆಂದು ಕಾಮರತಿಗಳ್
ಚಲದಿಂ ನೋಡುತ್ತೆ ತಿರುಗುವರ್ ಪೊಱಪೊೞಲೊಳ್ ೬೦೦

ಸುದತಿಯರಬ್ಜಮಂದಿರುಳೊಳಿಕ್ಕಿದ ಚಂದನಪಂಕದಣ್ಪು ಸೂ
ಡಿದ ಪ್ರಸೂನಜಾದಿ ತೊಟ್ಟ ನವಮೌಕ್ತಿಕಮಂಡನಮೊಪ್ಪೆ ನೇತ್ರಕೌ
ಮುದಿಯೊಳಮಾಸ್ಯಚಂದ್ರಮನೊಳಂ ಬೆಳಗುತ್ತಿರೆ ಶುಕ್ಲಪಕ್ಷಮ
ಲ್ಲದೆ ಸಲೆ ಕೃಷ್ಣಪಕ್ಷಪರಿವರ್ತನಮಿಲ್ಲೆನಿಕುಂ ಪುರಾಂತದೊಳ್ ೬೦೧
(ಜಗನ್ನಾಥವಿಜಯಂ ೯-೧೦೪)

ಪುರವನಿತಾಜನಂ[1]ಗಳಿನ ಹರ್ಮ್ಯತಳೋಪರಿಯಂ[1]ಗಳಲ್ಲಿ ಗಾ
ವರಿಸುವ ಪಂಜರಂಬೊರೆದ ಪುಣ್ಚರಮಂ ನಸುಗೇಳ್ದು ತನ್ನ ಕೆ
ಣ್ದೆರೆಮುಗಿಯಲ್ಕೆ[2]ಕಂಡು ಕೊಣಕಿಟ್ಟಪುದಲ್ಲಿಗೆ[2] ಗೋರಿಗೊಂ[3]ಡೆನು
ತ್ತಿ[3]ರಳಿಯ[4]ಬಲ್ಪಿನಿಂ[4] ಶಶಿ ತೊಡರ್ಚುವನಾತ್ಮಪಟಪ್ರರೋಹಮೊಳ್ ೬೦೨
(ಚಂದ್ರಪ್ರಭಪುರಾಣಂ ೧-೧೨೪)

ಮರಕತಕೂಟಕೋಟಿತಟದಿಂ ಪೊಗೆದೋರ್ವಳಿ ಪರ್ವೆ ಕಾಂತಿಯಂ
ಜರಿ ಪರಿಪಕ್ವಸಸ್ಯಚಯಮಂಬರದೊಳ್ ಗಿಳಿಯಂತೆ ಪಾಯಲ
ಚ್ಚರಿವಡುವಂಬರೇಚರರ ಕಣ್ಗೆ ಮನಂಗೊಳೆ ಪಕ್ಕಿಸೋವ ಪಾ
ಮರಿಯರ ಲೀಲೆಯುಂ ನೆರಪುಗುಂ ನೆಲೆವಾಡದೊಳಂಗನಾಜನಂ (?) ೬೦೩

ಬಿರಿಮುಗುಳಚ್ಚಪೂವಲಿಗೆ ಸೌರಭ[5]ದೊಡ್ಡಿ[5]ಗೆ ಸೂಸುತಿರ್ಪ ಕ
ರ್ಪುರದ ಪರಲ್ಗೆ ನೀ[6]ರ್ದಳಿ[6]ದ ಕಸ್ತುರಿಗೊತ್ತರಿಸುತ್ತೆ ಪೋಪ ಪೆಂ
ಡಿರ ಕುಚಕುಂಭದಿಂದುದಿರ್ವ ಕುಂಕುಮರೇಣುಗೆ ಪಾಯ್ವ ತುಂಬಿಯಿಂ
ಚರದೊಳೆ ತಳ್ತು ಮೂರ್ಛಿಸಿಪ್ಪುದಲ್ಲಿ ಪಳಂಚೆ ವಿಪಂಚಿಯಿಂಚರಂ ೬೦೪
(ಲೀಲಾವತಿ ೭-೨೬)

ಇದಱತುಱ್ ಚಂಡಾಂಶುಬಿಂಬಂ ತೊಡರ್ದು ನಿಮಿಷಕದಿರ್ದಪ್ಪುದೆಂಬಂತೆ ರತ್ನಾ
ಗ್ರದೊಳೊಪ್ಪಂಬೆತ್ತ ಚೆಂಬೊಂಗಳಸದೆಸೆವಿಸಿಲ್ ಸಂತತಂ ವ್ಯೋಮಗಂಗಾ
ಬ್ಜದ ಪೆರ್ಚಂ ಮಾಡೆ ಕೂಟಧ್ವಜದ ಮುಗುಲದಿಂ ಸಂಚರತ್ಖೇಚರೀಶ್ರೋ
ಲ ದುಗೂಲಭ್ರಾಂತಿಯುಂ ಪುಟ್ಟಿಸುತಮೆಸೆದುದಭ್ರಂಕಷದ್ವಾರಹರ್ಮ್ಯಂ ೬೦೫

---

[1]ರುಚಿರಹರ್ಮ್ಯಗೃಹಾಗ್ರ(ಅ) [2]ಸೋಲ್ತು ಕಣ್ಮಲರೆ ಮುಚ್ಚೆ(ಆ) [3]ಡನೊಂದೆ(ಅ)
[4]ನಲ್ಲಿರುಳ್(ಆ) [5]ದಡ್ಡಿ(ಅ) [6]ಬ್ಬಿತ್ತಿ(ಅ)

ನಿಳಯಕ್ಕೊರ್ರೊಂದು ಕೇಳೀವನವುಮುಪ್ಪೃತ ಕಾಸಾರಪ್ರೋದ್ಯೋಂಟಪ್ಪುಂ ತ
ನ್ನಿಳಯಂಗಳ್ ಪ್ರಾಡಪ್ಪುಂ ಮಂಟಪಮುಮುಪರಿಯುಂ ತನ್ನಿವಾಸಂಗಳೊಳ್ ಗೋ
ಕುಳಮುಂ ಧಾನ್ಯಂಗಳುಂ ತೀವಿದ ನವನಿಧಿಯುಂ ತದ್ಗೃಹಸ್ಥರ್ ಕಳಾಪೇ
ಶಳರುಂ ಗಂಭೀರರುಂ ಭೋಗಿಗಳುಮೆನೆ ಪುರಶ್ರೀಕರಂ ರಂಜಿಸಿರ್ಕುಂ ೬೦೬
(ಜಗನ್ನಾಥವಿಜಯಂ ೯-೯೬)

ಘನಕಾಳಾಗರುಧೂಪಧೂಮಮುಳಿಸಿವ್ಯೋಮಂ ತ್ರಿಸಂಧ್ಯಾನಕ
ಧ್ವನಿಶಬ್ದಾತ್ತಕದಿಕ್ತಟಂ ಶಿಖರಮಾಣಿಕ್ಯಾತಪೋಜ್ಜೃಂಭಿತ
ದ್ಯುನದೀವಾರಿಜಮೊಪ್ಪುತಿರ್ಪುದು ಸುಧಾಗಾರೋತ್ಕರಂ ನರ್ತಕೀ
ಜನತೋಲ್ಲಾಸಿತಕೇಕರಂ ವಿವಿಧಲೀಲೋದ್ಯಾನಶೋಭಾಕರಂ ೬೦೭
(ಜಗನ್ನಾಥವಿಜಯಂ ೯-೯೮)

ಘುಸೃಣಮದಾಳೀಸ್ವನವ
ತ್ಕುಸುಮಿತ ವನರಾಜಿಯಂತೆ ವಿಪ್ರಜನಾಳೀ
ವಿಸರದ ವೇದಸ್ವರದಿಂ
ಮೊಸೆದಿರ್ಕುಂ ಬ್ರಹ್ಮಪುರಿಯ ಸೌಧಸಮೂಹಂ ೬೦೮

ಅಪಸೀರ್ವನಸಮೂಹಮೋದುವುದನಾದಂ ಕೇಳ್ದು ಕೇಳ್ದೋದುತಿ
ರ್ಪುವು ವೇದಂಗಳನೋದಿ ತಪ್ಪುವಿಡಿದಂತೀವಾಸಿಗಳ್ಗೋದಗೇ
ಳ್ವುವು ತನ್ಮೋದಿನ ಬಳ್ಕೆಯಿಂ ದ್ವಿಜವರರ್ಗಾನಂದಮಂ ಮಾಡುತಿ
ರ್ಪುವು ಕೇಳೀಶುಕಸಾರಿಕಾತತಿಗಳಾಗಳ್ ವೇಪಸದ್ಮಂಗಳೊಳ್ ೬೦೯

ಜಮುರ ಪೊದಳಿಕ್ಕೆ ಸಂಪದದ ಪೊಂಪುಳಿ ಸತ್ವದ ಚಿತ್ತರಂ ನಿವೇ
ಶದ ನೆರವೀವ ಪ್ಪೆಮೆ ದಯೆಯುನ್ನತಿ ಧರ್ಮದ ಪೆರ್ಮೆ ಸಜ್ಜನ
ತ್ವದ ವಿಮಲತ್ವಮಾರ್ಪಿನ ಪೊಡರ್ಪು ವಿಳಾಸದ ದೇಸೆ ಕೂಡೆ ಭೋ
ಗದ ಕಣಿಯಾಯ್ತು ತಂತಮಗೆ ಪೌರಜನಂ ಸ್ಥಿರಸೌಖ್ಯಭಾಜನಂ ೬೧೦
(ಜಗನ್ನಾಥವಿಜಯಂ ೯-೧೧೬)

ಜಲಧರತತಿಯಿಂ ನಿಜಮೇ
ಖಲೆಯೊಳ್ ತಳೆದಿರ್ದ ಮೇರು[1]ವೆನೆ ಕನಕಮಯಂ[1]
ವಿಲುಳಿತ ಪರಿಖಾವಳಿ ಪರಿ
ವಳಿಯುತಮುರಮನೆಯ ಕೋಂಟೆಗಳ್ ಸೊಗಯಿಸುಗುಂ ೬೧೧
(ಜಗನ್ನಾಥವಿಜಯಂ ೯-೧೧೮)

---

[1] ವ ಸುತ್ತಿದ ನದಿಯೊಳ್ (ಸ)

ಸತತಂ ಪೊಂಗಳಿಸದ ದೀ
ಧಿತಿಗುನ್ನತಿಗಳ್ಕಿ ಬಳ್ಕಿ ಕೆಲಸಾರ್ದು ದಿವಾ
ಪತಿ ದಕ್ಷಿಣೋತ್ತರಾಯಣ
ಗತಿಯಾದಂ ಪೊಗಟ್ವಿರಳಪೆ ಬಾಗಿಲ್ವಾಡಂ ೬೧೨

(ಜಗನ್ನಾಥವಿಜಯಂ ೯–೧೧೮)

ಅಹಿರಾಜಂ ದ್ವಿಸಹಸ್ರಜಿಹ್ವನಜಯುಂ ವ್ಯಾವರ್ಣಿಸಲ್ ಬಲ್ಲನೇ
ಮಹಿಯೊಳ್ ಮಾನಸನೊಂದೆ ನಾಲಗೆಯೊಳಂತಾ ಭೂಭುಜಾಗಾರಮಂ
ಬಹುವಿಸ್ತಾರಮನಿಂದ್ರ ಪುಷ್ಪಕವಿಮಾನಾಕಾರಮಂ ತನ್ಮಹಾ
ಮಹಿಮಾಧಾರಮನತ್ಯುದಾರಮನಿಳಾಜೈತ್ರ್ಯಮುತ್ತಾರಮಂ ೬೧೩

(ಜಗನ್ನಾಥವಿಜಯಂ ೨–೩೭)

ವಿಕಸತ್ಪುಷ್ಪಕದಂಬತಾರಕಿತಮಾಯಾತಪ್ರಯಾತಾಂಗನಾ
ನಿಕರೋದ್ಯಚ್ಚರಣಾಂಶುಪಲ್ಲವಿತಮನ್ಯೋರ್ವೀಸ್ಫುರದ್ವಾತ್ರತದೂ
ತಕುಳಸ್ಥಾಪಿತಮೂರ್ತ್ಯರತ್ನಫಲಿತಂ ಯೂಪಮದ್ವಿಪೇಂದ್ರಪ್ರತಾ
ಸಕಟೋಪಸ್ಕೃತ್ತಮುದೌಘಕರ್ಣಮಿತಮಂತಾ ರಾಜಗೇಹಾಜಿರಂ ೬೧೪

(ಚಂದ್ರಪ್ರಭಪುರಾಣಂ ೧–೧೫೧)

ಅಗಟಿಂಭೋರಾಶಿ ಸಾಲಂಬಳಸಿ ಬೆಳೆದ ಹೇಮಾಚಲಂ ವೀಧಿಗಳ್ ಸಿಂ
ಧುಗಳತ್ಯುತ್ತುಂಗ ದೇವಾಲಯತತತಿಗ[1]ಳ್ಕುಲಾದ್ರಿ[1]ಗಳ್ ರಮ್ಯದೇಹಾ
ಳಿಗಳೂರ್ಗಳ್ ಪರ್ವಿಯುಂ ತಾನೆನೆ ಜನಪದವಿರ್ದಾ ಪುರಂ ಪೆಂಪು ತನ್ನೊಳ್
ಮಿಗೆ ಜಂಬೂದ್ವೀಪಮುಂ ಪೋಲ್ತಿರೆ ಸುರಗಿರಿವೋಲ್ ರಾಜಿಕುಂ ರಾಜಗೇಹಂ ೬೧೫

(ಲೀಲಾವತಿ ೭–೨೯)

ತರುಣೀಲೋಚನಚಂದ್ರಿಕಾಮುಕುಳಜಪ್ರಕ್ಷೋದಮಂ ಕಾಮಿನೀ
ವರಹಾಸೋಜ್ವಲಮಲ್ಲಿಕಾಮುಕುಳಮಂ ಕಾಂತಾಮುಖೇಂದುಪ್ರಭಾ
ತರಳೋದ್ದಾಮದುಕೂಲದೀರ್ಘಪಟಮಂ ತಕ್ಕೈಸಿ ತದ್ರಾಜಮಂ
ದಿರಲಕ್ಷ್ಮೀವಧು ಕೂಡೆ ಪ್ರಸವನಂಗೊಂಡಂತೆ ಕಣ್ಗೊಪ್ಪುಗುಂ ೬೧೬

(ಲೀಲಾವತಿ ೭–೨೪)

ಸುರಗಿರಿಯುಂ ಸರೋಜಭವನೆಂಬ ಮಹಾರಥಕಾರನೊಲ್ದು ತಂ
ಬಿರಿಸಿದ ಚಿತ್ರಪುತ್ರಿಕೆಗಳಂ ಪರಿರಂಜಿಪ ಚಂಪೆಯಲ್ಲಿ ತಂ
ಬಿರಿಸಿದನೆಂಬಿನಂ ಜನಮನೋಹರಮಾಗಿ ಪೊಗಟ್ತೆಗೊಪ್ಪುವ
ಪುರಿಗೆಗಳಿಂ ನೆಗಟ್ತೆವಡೆದಿರ್ದುದು ಸೌಂದರರಾಜಮಂದಿರಂ ೬೧೭

---

[1] ಳಿತಳ್ತದ್ರಿ (ಅ)

ಧೃತಪದ್ಮಾಸನಯುಂ ಸುಗೋತ್ರಜನನಂ ಭದ್ರಾಪ್ತಿಯುಂ ದಾನವಾ
ರಿತನುಂ ಕೌತಕಕೀರ್ತನಂ ನೆಲಸಿಯುಂ ತನ್ನಲ್ಲಿ ಪಂಚಾಸ್ಯದೂ
ರಿತಮಾತಂಗವೆಸರ್ಗೆ ನೋಂತೆನೆನುತಂ ಕೈನೀಡಿ ಸುಯ್ವಂತೆ ಪೂ
ತ್ಕೃತಿಯಿಂ ರಂಜಿಸುತಿಪ್ಪ ಮನ್ಮಥಗಜಂ ರಾಜಾಲಯದ್ವಾರದೊಳ್ ೬೧೮

ತೊಲಗದೆ ತಮ್ಮತಮ್ಮ ಕೆಲಸಕ್ಕಿದಿರುಂಬುಳಿವಾಯ್ದು ಬರ್ಪ ಕೋ
ಮಲೆಯರ ಹಾರದಿಂ ಸುರಿವ ಮುತ್ತಿನ ಸೋರ್ಮುಡಿಯಿಂದ ಸೂಸುವೊ
ಳ್ಪಲರ ಕುರುಳ್ಗಳಿಂದುಗುವ ಕತ್ತುರಿಯುಬ್ಬರಮುರ್ಬೆ ಪರ್ಬಿ ಬ
ರ್ಪಲಘುಸಿತಂಜೆಯುಗರ್ಗಯುಸಮಂ ಪಡೆದತ್ತು ನರೇಂದ್ರಮಂದಿರಂ ೬೧೯

ಮದಧಾರಾಸಾರದಿಂ ಧಾರಿಣಿಯನಣಿಯರಂ ನಾಂದು ತದ್ಗಂಧಧಾವ
ಲ್ಯದ ಮಿಂಚಿಂದೆಲ್ಲದಿಕ್ಕಂ ತೊಳಗಿ ಬೆಳಗುತಂ ಜೇಗದಿಂ ಬೃಂಹಿತಧ್ವಾ
ನದೆ ಬರ್ಹಿವ್ರಾತಮಂ ಪ್ರೀತಿಯೊಳೆ ಕುಣಿಯಿಸುತ್ತಂ ಕರಂ ಕಾಳಕಾರಾಂ
ಬುದಮೆಂಬೊಂದಂದದಿಂದೊಪ್ಪಿದುದು ಮುದಿತ ನೀಲಾಳಿಲಾಭಂ ಮದೇಭಂ ೬೨೦

ಕತ್ತುರಿಗೊಂಡ ಕರ್ಣವೆಳನೀಲದ ನುಣ್ಪಡೆದಕ್ಷಿ ವಕ್ಷಮಂ
ಪತ್ತಿದ ಕಂಧರಂ ಮೃದುಘಟಾವಳಿ ಸೂಳ್ಪ ನರಳ್ವಗೋಣುಮು
ದ್ವೃತ್ತಮನಂ ನಯಂಬಡೆದ ರೋಮಚಯಂ ನಿಮಿರ್ವೆತ್ತ ವಾಲಮು
ತ್ಕೃತ್ತಮಲಕ್ಷಣಂ ಬಡೆದ ವಾಜಿಗಳಿರ್ದುವು ಮಂದುರಂಗಳೊಳ್ ೬೨೧

ಶಶಿರವಿಗಳ ದಾಯಾದ್ಯದ
ವಿಷಯಕ್ಕಂ ಕಮಲಜಾತನಾ ಪಟ್ಟಣಮಂ
ಹಸುಗೆಯ ಮಾಡಿದ ತೆಱದಿಂ
ಶಶಿರವಿನಾಮದಲಿ ಬೀದಿಗಳ್ ಕಂಗೊಳಿಕುಂ ೬೨೨

ಪೊಸಸೊದೆ ಕೌಮುದಿಯಂತಿರೆ
ಪಸರಿಸಿ ಪೊಂಗಳಸಮಾಲೆ ಪೊಂಬಿಸಲಂ ಪೊ
ಣ್ಮಸೆ ತರತರದಿಂ ರಾರಾ
ಜಿಸುತಿರ್ಪುವು ಸೋಮಸೂರ್ಯವೀಥಿಗಳವಱೊಳ್ ೬೨೩

(ಗಿರಿಜಾಕಲ್ಯಾಣಂ ೨-೮೨)

ಪನ್ನೀರಪುಟಿಕೆಯಂ ತೂ
ಪನ್ನಂ ತಾನಂತು ಜಾರಿ ತೊಡರ್ದಾ ಹೊಸಲ
ಲ್ಲಿನ್ನುಂ ಹರಿಗೋಲಿಟ್ಟೊಡೆ
ಚೆನ್ನಿಗರೆಡೆಯಾಡುತಿರ್ಪರಾ ವೀಥಿಗಳೊಳ್ ೬೨೪

ಕಣ್ಗೆಂಬಾವುದು ರಾಜವೀಧಿ ಮುಡಿಯಿಂ ಬಿಳ್ದಿರ್ದ ಪೂಮಾಲೆಯಿಂ
ತಣ್ಗಂಪಂ ಸವಿವಲ್ಲಿ ವಂಗಡದೆ ಪಾಡುತ್ತಿರ್ಪ ಪೆಣ್ದುಂಬಿಯಿಂ
ನುಣ್ಗಾಲುಂಗುರಮಿರ್ಕೆಯೆ ಮೆಲ್ಲುಲಿಯನೆತ್ತಂ ಬರ್ಪ ನಲ್ಪೆಂಡಿರಿಂ
ಜಾಣ್ಗೆಂಬಾದರಮೆಂಡರಿಂ ಪೊಗಬ್ಬಿರೋದಂ ಕೇಳ್ವ ಕೊರಾಳ್ಗಳಿಂ ೬೨೫

ಪುರದೊಳಗಲ್ಲಿಗೆರಡುಂ ತರದಿಂ ಸೊಡೆವೆಳ್ಪಿನಿಂದಲಂ
ಬರಚರಕಾಮಿನೀತತಿಗೆ ಚಂದನವಣ್ಪಿನ ಸೊಂಪನೀಯುತುಂ
ಸಿರಿಗೆ ನಿವಾಸಮಾದ ಪಿರಿಯಂಗಡಿಗಳ್ ಬಗೆಗೊಪ್ಪಿ ತೋರ್ಪುವಾ
ಪುರವರಲಕ್ಷ್ಮಿ ತೊಟ್ಟ ಪೊಸಮುತ್ತಿನ ಹಾರದ ಸೊತ್ತಮೆಂಬಿನಂ ೬೨೬
(ಜಗನ್ನಾಥವಿಜಯಂ ೯-೧೦೫, ಸೂಕ್ತಿಸುಧಾರ್ಣವಂ ೭-೧೦೯)

ತಪ್ಪದೆ ಸರಸಿಜಸಂಭವ
ನಪ್ಪೊಡನೆಣಿಸಲ್ಕೆ ನೆಱೆಯದೆನಿಸುವ ಪಲವುಂ
ಕಪ್ಪುರದ ರಾಸಿ ಬೀದಿಯೊ
ಳುಪ್ಪಿನ ರಾಸಿಯವೊಲೊಟ್ಟಿ ಬೆಟ್ಟಾಗಿರ್ಕುಂ ೬೨೭
(ಸೂಕ್ತಿಸುಧಾರ್ಣವಂ ೪-೧೧೦)

ಸುರಪನ ವಜ್ರಮುಂ ಹರಿಯ ಕೌಸ್ತುಭಮುಂ ಹರನಿಂದುಲೇಖೆಯುಂ
ವರುಣನ ಮುತ್ತಿನೆಕ್ಕಸರಮುಂ ಗರುಡಾಂಗದ ಪಚ್ಚೆಯುಂ ಫಣೀ
ಶ್ವರಫಣರತ್ನಮುಂ ಜಿಲಿಗೆ ಬಣ್ಣಿಸುವಲ್ಲಿ ನಿಸಿರ್ಪ ರತ್ನದಿಂ
ಪೆಱಡನೆಯುಬ್ಬಿ ರನ್ನಸಸರಂ ಗೆಲಿವಂದಮೊ ರೋಹಣಾದ್ರಿಯುಂ ೬೨೮
(ಪಂಪರಾಮಾಯಣಂ ೧-೧೨೧; ಸೂಕ್ತಿಸುಧಾರ್ಣವಂ ೪-೧೧೧)

ಶರನಿಧಿಯೆಂಬ ಕೆಯ್ಯ ಬೆಳಸಂ ಬಿದಿಯೊಬ್ಬುಳಿಮಾಡಿ ಕೂಡಿದಂ
ತಿರೆ ನವರತ್ನರಾಶಿನಿಕರಂ ಕನಕಾಚಲವರ್ಕರಶ್ಮಿಯಿಂ
ಕರಗಿಪೊಡಚ್ಚುವೆಟ್ಟಿದವೊಲೊಪ್ಪಿರೆ ಪೊಂಗಳ ಬೆಟ್ಟು ಮುಂದೆ ಬ
ಜ್ಜರವಸರಂಗಳಚ್ಚರಿಯನೀವುವು ನೋಡೆ ಕುಬೇರಲಕ್ಷ್ಮಿಗಂ ೬೨೯
(ಲೀಲಾವತಿ ೭-೧೮)

ಬಿತ್ತರದ ಪೊದಕೆಗಳ ಬಿಡು
ಮುತ್ತುಗಳಂ ಮೊಗೆದು ಸುರಿದು ಪಾವುರಿಯರ ಸೆ
ರ್ಮುತ್ತಲ್ಲವು ವಿನಂಬಿಸೆ
ಪತ್ತಿದ ಪಣ್ಗೆಗೆವರಲ್ಲಿ ಪರದರುಕ್ಕೆಲ್(?) ೬೩೦
(ಧರ್ಮನಾಥಪುರಾಣಂ ೨-೭೩)

ತಾವರೆ[1]ಯುಂಬಲಿರ್ಪ ವನೆಯುಂ[1] ವಿಬುಧರ್(?)ಕೆಡುಗೂರ್ತ ವಲ್ಲಭಂ
ಗೋವಳೆನೊಂದೆ ಪಾಸದುವೆ ಪಾವಿನಪುತ್ತ್ರದಜೆಂದವಿನ್ನನು
ತ್ತಾವುದುಪಾಯಮೆಂದುಸಿರೆ ನಿಶ್ಚಯದಿಂದವನೆಯ್ದಿ ಬಿಟ್ಟ ಬಂ
ದಾವಣಿಗಾಲಯಂಗಳೊಳಹರ್ನಿಶಮಿರ್ಪಳದೇಂ ವಿದಗ್ಧೆಯೋ ೬೩೦

(ಧರ್ಮನಾಥಪುರಾಣಂ ೨-೭೫)

ಪೊರೆವಡೆದಿತ್ತರಂಬಡಿಪ ಕಸ್ತುರಿ ಕಪ್ಪುರದುದ್ಘರಾಸಿಗಳ್
ಚರಿಸುವ ವಾರನಾರಿಯರ ಲೋಚನಚಂದ್ರಿಕೆಯಿಂದೊಸರ್ವ ಕಾ
ಟ್ಪುರವರಿನಿಂದುಕಾಂತಮಣಿಕುಟ್ಟಿಮದೊಳ್ ಜರಿದೆಯ್ದೆ ಜಾರೆ ಜಾ
ಣಾ ಬಗೆ ಕೊಬ್ಬಿ ಸರ್ಮಸಗುತಿರ್ಪುದು ಸಂತತಮಾ ವಣಿಕ್ಪಥಂ ೬೩೧

(ಧರ್ಮನಾಥಪುರಾಣಂ ೨-೭೬)

ಅಂಗಡಿಗಳ್ ಪಲವವಱೊಳ್
ವಂಗಡದಿಂದಿರ್ಪವಖಿಳಧಾನ್ಯಾದಿಗಳ್ ಮ
ನಂಗೊಳೆ ಕ್ರಯಮಂ ಕೊಂಬ ಜ
ನಂಗೊಳೆ ಸಂಭ್ರಮದೊಳೆಸೆಯೆ ವಿಕ್ರಯವಸರಂ ೬೩೨

ದಯೆಯಿಂ ಮಾಱುಗೊಡುವ ಕೊ
ಳ್ವಯತ್ನಪೂರ್ವಕದೊಳಿರ್ಪ ಘನ ಧನಿಕರ ಸಂ
ತೆಯ ಮುಂದೆ ಸಂದಣಿಸಿ ವಿ
ಕ್ರಯಕಳಮಾರಾ[ಗಿ]ಧಾನ್ಯವಸರಗಳೆಸೆಗುಂ ೬೩೩

ಬಸೆದ ಸುರತ್ನಜಾತಿಗಳ ವಾಣಿಯ ರೀತಿಯದಾತಕೂಡೆ ಗಿ
ಟ್ಟಿಸಲರಿದಾ ಪುಟಂಗಳಿಡಲಿತ್ತುವ ರಂಗವಿದೆಂಬ ಭೇದಮಂ
ಕಸಿಸದ ತೂಕಮಂ ಬೆಲೆಯ ತಪ್ಪದೆ ಪೇಳ್ವ ದೃಷ್ಟಿವಾಳರೊಳ್
ಕೆಸರ್ವನೆದಿರ್ಪ ರತ್ನದ ಪರೀಕ್ಷಕರಿರ್ದರನಂತಗಾಡಿಯಿಂ(?) ೬೩೪

ಚಾರುತರ ವಿಮಲ ಮೌಕ್ತಿಕ
ಪೂರಾದಿಸಮಸ್ತರತ್ನರಾಸಿಗಳಿಂದಂ
ನೀರೋಡಿದ ರತ್ನಾಕರ
ದೋರನ್ನವಮಾಯ್ತು ರನ್ನವಸರಂ ಪುರದೊಳ್ ೬೩೫

---

[1]ಯೆಂಬರಿರ್ದು ವನೇವುಂ(ಅ)

ಕರಿ ಶಂಖ ಮೀನು ಮುಗಿಲುಂ
ಹರಿ ವರಹ ರೇಣು ಶುಕ್ತಿ ಭೋಗಿಗಳೆಡೆಯೊಳ್
ಸರಿಮಿಗಿಲೆನೆ ಪುಟ್ಟಿದಾಣಿಯ
ವರಮಣಿಗಳ ತಂಡ ರತ್ನಪಸರದೊಳೆಸೆಗುಂ ೬೩೬

ಭೀಕರ ಬಾಡಬಾಗ್ನಿಯು ದವಾಗ್ನಿಯ ತೀವ್ರತೆಗಳ್ಕಿ ಬಂದು ನಿ
ರ್ವ್ಯಾಕುಳಮೀಗಳಲ್ಲಿ ನೆಲಸಿತ್ತು ಜಡಾತ್ಮಕರೂಪಮಾಗಿ ರ
ತ್ನಾಕರಸಂಕುಳಂ ವಿಪಿನವೃಕ್ಷವಿವರ್ಜಿತಮಾ ಸಿರೋಹ
ಣಾಸೀಕಮೆನಲ್ಕೆ ರತ್ನಪಸರಂ ಬಗೆಗಚ್ಚರಿಯಂ ನೆಗಳ್ಚುಗುಂ ೬೩೭

ವರವೃದ್ಧನೊರ್ವನ ಹರದನ
ವರಮುಕ್ತಾಳಿಗಳಂ ಜೇಡಲ್ ಪುರದೊಳಗಾ
ಯಿರುಳಿನ ಕೈರವದೆಡೆಯೊಳ್
ವಿರಹಿಣಿಯೊಳ್ ತನ್ನ ಕಯ್ಯೊಳುಂಟೆನಿಸಿಪನಹೋ ೬೩೮

ಸುರಚಿರದಿಂದು ತಮ್ಮಯ ಮುಖಕ್ಕೆಣೆಯಾದಪುದೆಂದು ಕಂಚುಗಾ
ಜಿರ ವಧುಗಳ್ ಸುಧಾಕರನ ಬಳ್ಸಿಜಿತಗಿಕ್ಕಿರಲಲ್ಲಿ ತಾರಕಾ
ತರುಣಿಯರೊಲ್ದು ಬಂದು ನೆರೆದೇಂ ಬಹುಪುತ್ರರನಿಂದುಪೇಡಿ ಪೆ
ತ್ತರೊಯೆನೆ ತೋರ್ಪ ಪಾತ್ರೆಗಳ ಮಾಜುವರಾ ಸಲೆ ಕಂಚುಗಾರ್ತಿಯರ್ ೬೩೯

ತೊಳಗುವ ಪೂಗಳನೆಂದುಂ
ತಳೆದಿರ್ಪ ಕೊಳಂಗಳೆಂಬ ಶಂಕೆಯನೆನಸುಂ
ಬಳಯಿಸುತಿರ್ಪುವು ಬೀದಿಗ
ಳೊಳಗೆಲ್ಲಿಯುಂ ನೆಗಳ್ದ ಕಂಚುಗಾಜಿರ ಪಸರಂ ೬೪೦

ಬೆಳಗಿನ ಬಿಂಬಂಗಳನಂ
ತಳವಡೆ ತರತರದಿನೇಳಿಪಂತಿರ್ದುವು ನಿ
ರ್ಮಳ ಪಾತ್ರಾಕುಲದಿಂದಂ
ತೊಳತೊಳಗುತ್ತಿರ್ಪ ಕಂಚುಗಾಜಿರ ಪಸರಂ ೬೪೧

ಸಲೆ ದೋಷಾಕರನಂ ಕಳಂಕಯುತನಂ ತಾಳ್ದಿರ್ಪುದೀ ವ್ಯೋಮಮುಂ
ಪಲವೆಂದಂತದನೊಲ್ಲದಪ್ರತಿಮಪೌರಸ್ತ್ರೀಜನಾಸ್ಯೇಂದು ಸಂ
ಕುಲಮಂ ತಾಳ್ದಪುದಿಂತಿದೆಂದು ಪುರದೊಳ್ ಬಂದಿರ್ದ ತಾರಾಗಣಂ
ಗಳೆನಲ್ಬಂತಿರೆ ಕಂಚುಗಾಜವಸರಂ ಮಾಟಿಪ್ಪಂ ಮನೋರಾಗಮುಂ ೬೪೨

(ಜಗನ್ನಾಥವಿಜಯಂ ೯-೧೧೦)

ಮುತ್ತುಂ ಪಜ್ಜೆವಲ್ಗಳುಂ ಕುಲಿಶಮುಂ ಮುಂತಾಗಿ ಕುಂದಿಲ್ಲದೊಂ
ದತ್ತುಂ ರನ್ನದ ಸುಣ್ಣದಿರ್ ನೆಗೆದು ನೀಳ್ದೊಂದೊಂದಱೊಳ್ ಕೂಡಿ ಪ್ಪೆ
ಪೆತ್ತಂತಿಂದಿರವಿಲ್ಲಪಾಂಗವೇಸಸುಂ ಮಿಂಚಟ್ಟೆಯೊಳ್ ಪೇಱತ ಕ
ಣ್ಗೆತ್ತಂ ಸೋಲಮನೀವ ರನ್ನವಸರಂ ಚೆಲ್ವಾದುವಾ ಬೀದಿಯೊಳ್ ೬೪೩

ಚೆಂದುಟಿಯಿಂಪಂ ಪೈತ್ಯಂ
ಸಂದಪ್ಪಿಂ ವಾತಮೊಲ್ದ ರತಿಯಿಂ ಶ್ಲೇಷ್ಮಂ
ಸಂದಂದಿನೆ ಕೆಡಲೆಲೆ ಸತಿ
ಗಂದಿಗಸರಕೇಕೆ ಕಟ್ಟುಗೆಂದಳದೊರ್ವಳ್ ೬೪೪

ಅರಸಿನವಿಲ್ಲೆಂಬರಸಂ
ಗರಿಸಿನಮುಂಟೆನಿಸಿ ತೋಱು ವಣಿಜರ್ ಮತ್ತಾ
ಗರಸಿನ ಕೃಪೆಯುಂ ಪಡೆವುತ
ಲರಿಸಿನ ಗುಣ ಪೊದ್ದದಿಪ್ಪ ಸಿರಿಯಂ ಮೆಱೆವರ್ ೬೪೫

ಅಜರಾಮರತ್ವಮಂ ಪೌ
ರಜನಂಗಳ್ಗೀವ ತನ್ನ ವಿವಿಧೌಷಧಿ ನಾ
[1]ಕಜದ ಮಹೌಷಧಿಗಳಿ ತಂ
ದಜನಿಟ್ಟವೊಲೆಸೆದುವಲ್ಲಿ[1] ಗಂದಿಗವಸರಂ ೬೪೬
(ಜಗನ್ನಾಥವಿಜಯಂ ೯–೧೦೮)

ತನತನಗೆ ಹೊನ್ನರಾಸಿಯು
ನನವರತಂ ಮುಂದುಗೊಂಡನೇಕ ಕುಬೇರರ್
ಜನಿಯಿಸಿ ನಿಂದಂತಿರ್ಪುವು
ಕನಕವ್ಯವಹಾರದಿಂದೆ ವೈಶ್ಯಕದಂಬಂ ೬೪೭

ದೆಸೆಗಳ್ ನಿಜಾಂಶುವಿಂ ರಂ
ಜಿಸುತಿರೆ ಪುಂಜಿಸಿದ ಪೊನ್ನ ಪುಂಜಳಿಯಿಂದಂ
ಕೊಸಗಿನ ಮರದುಱುಗಲರ
ಳ್ದೆಸೆವಂತೆಸೆದಿರ್ಪುವಲ್ಲಿ ಬಜ್ಜರವಸರಂ ೬೪೮
(ಜಗನ್ನಾಥವಿಜಯಂ ೯–೧೦೭)

---

[1] ಕಜದ ಮಹೌಷಧಿಗಳಿ ನಿಜಸೃಷ್ಟಿಯೊಳಿಸಿಪ್ಪವಲ್ಲಿ(ಕ)

ಅಗಣಿತ ಧನರಾಶಿಗಳಿಂ
ನಗುತಿರ್ಕುಂ ಮೇರುನಗಮನೆನೆ ನೆಗಟ್ಟಿಳೆಕಾ
ನಗರೀಶಂ ಬರ್ಕುಮೆ ತ
ನ್ನಗರದ ಕಡೆಪಟ್ಟ ಪರಿವದೊರೆಗಂ ದೊರೆಗಂ ೬೪೯

(ಜಗನ್ನಾಥವಿಜಯಂ ೯-೧೦೬)

ದೊರೆಯೊಳೆ ಬಣ್ಣ ಮುಚ್ಚದೊಳೆ ತಾಂ ಪುಸಿ ತಪ್ಪಸಲಿ ತೂಗಿ ಕೊಟ್ಟೊಡಂ
ಸರಿಯಿದು ತಪ್ಪಿದೆಂದೆನಿಪ ಕಟ್ಟಳೆಯೆಂಬಿವು ಪ್ರೋರ್ದದಾರು ಬಂ
ದರೆ ಕ್ರಯವಿಕ್ರಯಂಗಳೊಳು ತಪ್ಪದೆ ಮಾಱುವ ಕೊಂಬ ಚಿನ್ನಗೆ
ಯ್ಯರು ಸಮುದಾಯದಂಗಡಿಯಲಿರ್ಪರು ನೋಡಲನಂತಸೌಖ್ಯದಿಂ ೬೫೦

ತುರಗದ ಜಾತಿಯಂ ಕೇಸರ ವರ್ಣಮನಾಯುಮ ಲಕ್ಷಣಂಗಳಂ
ಪರಿಕಿಸಿ ಬಂದ ದೇಹಗಳ ರಕ್ಷಿಸಲುತ್ತಮಮಪ್ಪ ಭೇದಮಂ
ಪರವರು ತಪ್ಪದೇ ಜಲಿಯುಮಂ ಚಳಕಂಗಳ ಮೇಲೆ ಕಟ್ಟುವಾ
ತುರಗಪರೀಕ್ಷಕರ್ ಮೆಱೆಯುತಿಪ್ಪರು ತತ್ಪುರದೊಳ್ ನಿರಂತರಂ ೬೫೧

ತೀವಿರ್ಪಶ್ವಾವಳಿಯ ಗ
ಜಾವಳಿಯ ಸರಾವಳಿಗಳ ವಿಕ್ರಯದಿಂದಂ
ಭಾವಿಸೆ ದೂಸಿಗೆವಸರಂ
ಮೂವರ್ ರಾಯರನೆ ಮಾಱುವಂತೆಸೆದಿರ್ಕುಂ ೬೫೨

(ಗಿರಿಜಾಕಲ್ಯಾಣಂ ೨-೯೪)

ಸುರತರು ಕೊಡುವಂಬರದೊಳ್
ಪರಿಪಾಟಿಚ್ಛಾಯೆ ನೆಯ್ಗೆ ನೂಲಿಂ ರಂಗಿಂ
ದೊರೆಕೊಳ್ಳದೆನಿಪ ದಿವ್ಯಾಂ
ಬರದಿಂದೆಸೆದಿರ್ದವಲ್ಲಿ ದೂಸಿಗವಸರಂ ೬೫೩

(ಜಗನ್ನಾಥವಿಜಯಂ ೯-೧೧೧)

ಬಗೆಗೊಳುತಿರ್ಪುದಲ್ಲಿ ಸಿರಿಗಂಪಿನ ಬಲ್ಪೊರೆಯೊಟ್ಟಲಿಂದೆ ಪಾ
ಲ್ಪುಗರುವಿಸೇಱು ಕುಂಕುಮದ ಕತ್ತುರಿ ರನ್ನದ ರಾಸಿ ಪೊನ್ನಪುಂ
ಜಗೆ ಪೊಸಕಂಚುಮುಟ್ಟುಗಳ ತಿಂತಿಣಿ ಮುಂತಮರ್ದಿಪ್ಪ ಬಣ್ಣವ
ಣ್ಣಿಗೆಗೆಡೆಗೊಟ್ಟ ಪಟ್ಟೆಗಳ ದಿಂಡುಗಳಂಗಡಿಬೀದಿಬೀದಿಯೊಳ್ ೬೫೪

ಉಗುರಿಂದೆ ಸೀಳ್ದು ಮೆಯ್ಯಂ
ತೊಗಟೆತ್ತುತೆ ಶಿಖಿಯ ತಂಬಲಗಿತ್ತಿಯರ ಮಿಗೆ
ಸೊಗಸಿನ ಮೆಲ್ಪೋದೆಲೆಗಳ್
ಸೊಗಸಪ್ಪುವು ನಲ್ಲಸಾರೆ ನೋಯಿಸೆ ಸುಖದಂ ೬೫೫

ವಿವರಿಸೆ ರನ್ನದ ಬಣ್ಣಂ
ಸವಿಯಲ್ಕಂ ಸುಧೆಯ ಸೊಗಸು ವಾಸಿಸಲು ಮೃಗೋ
ದ್ಭವಗಂಧದಷ್ಟಭಾಗದ
ನವಕ್ರಮುಕಂಗಳನೆ ಕೊಳ್ವ ಪಸರಗಳೆಸೆಗುಂ

ವಿಧಿಯುತ್ಪತ್ತಿಯಬೀಜಮಂ ಹರಿಜಗತ್ಸಂಪಾದನಾರತ್ನಮಂ
ಮದನಾರಾತಿ ದಿಗಂಬರತ್ವವಳಿಯಲ್ ಸದ್ವಸ್ತ್ರಮಂ ಭಾಸ್ಕರಂ
ನೃಪಮುಕ್ತಿತ್ವಾಪಥಿಯಂ ಶಶಾಂಕನೊಲವಿಂದಂ ರಾಜಲಕ್ಷ್ಮಿಕ್ಕೆ ಮಾ
ಡಿದ ಮುದ್ದಂಬಿನಮುಜ್ಜುಗಂ ಪಳಿವರಂತಾ ಸೆಟ್ಟಿಗುತ್ತರ್ಕಳೊಳ್ ೬೫೭

## ಘಟ್ಟವಳ್ತಿಯರ ವರ್ಣನೆ

ಸುಳಿಗುರುಳಾಡೆ ತೋಳ್ಗಳಿಡೆಯಾಡೆ ಬೆಮರ್ ಮಿಗೆ ಮೂಡೆ ಸುಯ್ಯೆಲಿ
ದೆಳಲ್ದಿ ಕುಚಂಗಳೊತ್ತರಿಸೆ ಕಕ್ಷಪುಟಂ ನಸುದೋಱೆ ಮೇಲುದಿಂ
ಬಳಿಂಚಿ ಕರಂ ಕರಂ ಕೊರಗೆ ಸೋರ್ಮುಡಿ ಲಂಬಿಸೆ ಕರ್ಣಪೂರಿತೋ
ತ್ಪಲಮೊಳೆದಾಡೆ ಗಟ್ಟಿಗಳಸಂದು ಮಗುಳ್ಚಿದರಿಂದುವಕ್ತ್ರೆಯರ್ ೬೫೮
(ಗಿರಿಜಾಕಲ್ಯಾಣಂ ೨-೯೦)

ಕುರುಳ್ಗಳ ಕಪ್ಪು ತಳ್ತಿರಲು ಸಾಣೆಗಳೊಳ್ ಮಿಗೆ ಮಿಂಚುವೆತ್ತು ಭಾ
ಸುರ ಮೃಗನಾಭಿಜಭ್ರಮೆಯನೀವುತಿರಲ್ ಬಿಳಿಗೊಟ್ಟು ಕೊಂಡು ಚ
ಚ್ಚರದೆ ತಳೆದರ್ ನೋಡಲದು ಚಂದನಮಾಗಿರೆ ತಪ್ಪಿ ಕೋಪದಿಂ
ದಿರದೆ ಮಗುಳ್ಚಿ ಬಪ್ಪ ವಿಟರಂ ನಗುವರ್ ಮಿಗೆ ಘಟ್ಟವಳ್ತಿಯರ್ ೬೫೯

ನೀರೊಳೆ ಗಂಧದಿಂದರೆದು ಕತ್ತುರಿ ಕಪ್ಪುರ ಕುಂಕುಮಂಗಳಿಂ
ಸಾರಮನಿಟ್ಟು ಪ್ರೋಲ್ ಪರಿಮಳಂಗುಡಲಲ್ಲಿಯ ಘಟ್ಟವಳ್ತಿಯರ್
ನೀರದ ಕತ್ತುರೀಕರುಪ್ಪೊ ಕಪ್ಪುರಬೊಂಬೆಯೊ ಕುಂಕುಮಾಘಟಾ
ಕಾರದೊಂಬೆ ಸಂಪಿಗೆಯ ನಾ ಸಲೆ ಗಂಧಮೆ ಪೇಟವೇ ದಿಟಂ ೬೬೦

ತುಳ್ಕುವ ತುಂಬುಜವ್ವನೆಯರಾ ಪಸಿಸೀರ್ಗಳಿಲ್ಲಿಯೆ ತುಳ್ಕುತಂ
ಬಳ್ಕುವ ಮಧ್ಯಕಾಂಚಿಯ ಮಹಾಮಣಿದೀಪ್ತಿಕೆ ಕುಂಕುಮಂಗಳೊಳ್
ಸಿಳ್ಕಲಪಾಗೆ ಪೊಂಬುಗುರಿಸುಂದದ ಸುಣ್ಣೊಲಿಯಾಟದೊಳ್ಪೊಗ
ರ್ಗಳ್ಕುಗಳಾದ ಪೊನ್ನ ಧರೆಗಾ ಪೊಳೆಸಿಂ ಮಿಗೆ ಘಟ್ಟಿವಳ್ತಿಯರ್ ೬೬೧

ಸೀರಿಲ್ಲದ ಬಜುಸಾಣೆಯ
ಲಾರಯೆ ಸಿರಿಗಂಧಗೊರಡಿನಿಂ ತೇಯಲ್ ಸತಿ
ಸಾರಸುಗಂಧದ ಗಟ್ಟಿಯ
ಪಾರಂ ಪೊಣ್ಮಿದುದು ನೋಟಕ್ಕೊಪ್ಪುದೇನೊ ವಿಚಿತ್ರಂ ೬೬೨

ಸಿಮಿರ್ಕೆವಡೆದೋಳಿಯಿಂದೊಲೆದು ಕುಂತಳಂ ಪೋಲುದಂ
ತಿಮಿರ್ಚಿ ಕುಚಮಂಡಳಂ ಕುಣಿಯೆ ಗಂಡದೊಳ್ ಕುಂಡಲಂ
ಕ್ರಮಂಬಿಡದೆ ಕಂಕಣಕ್ವಣಿತಮುಣ್ಮೆ ಕಾಶ್ಮೀರಮಂ
ಸಮಂತರೆವ ಘಟ್ಟಿವಳ್ತಿಯರದೇಂ ಮನಂಗೊಂಡರೋ ೬೬೩

(ಧರ್ಮನಾಥಪುರಾಣಂ ೨–೮೪)

ಸೆಲೆವೊಲೆ ಪೋಲುದಿಂದಿನಿಸು ಪಾಯ್ತರೆ ತಮ್ಮನೆ ಪಾಯ್ದಪಂದು ಕೋ
ಟಲೆಗೊಳುತಿರ್ಪ ನೋಟಕರನೋಪನಮರ್ದಳ್ಕೆಪೆಗಳ್ ತಿಮಿರ್ದುದಂ
ದಲಸದೆ ಕೂರ್ಮೆವೆತ್ತ ಕೃಪೆಯಿಂದರೆಪಂತರೆವರ್ ವರಾಂಗಿಯರ್
ಮಲಂಪಜಮಂ ಮಸಲ್ದು ತನು ಪುಣ್ಣಿಡೆ ಸ್ರೋಣ್ದಸೆ ಮತ್ತೆ ಸುನ್ಮಥಂ ೬೬೪

(ಧರ್ಮನಾಥಪುರಾಣಂ ೨–೮೫)

ಜಳದಳಿಲೋಲಕುಂತಳೆ ಮನಂಗೊಳೆ ಸುಣ್ಣಜಿತಂಬೊಳ್ ತಗುಳ್ದ ತಿಂ
ಗಳ ತಿರುಳಿಂದದೊಳ್ ಜಿರಕೆಗತ್ತುರಿ ಕಪ್ಪುರಮಂ ಪೊದಟ್ದು ಸು
ಯ್ಗಳ ನಜುಗಂಪಿನಂ ಪೊರೆದು ಪಣ್ಣಿಗೆಗೊಂಡರೆಯಲ್ ತಗುಳ್ಚಿದಾ
ಗಳೆ ತನಿಪೇಟವಿಟ್ಟರೆಯೆ ಪಣ್ಣಿಸುಗುಂ ಬಗೆ ಕೇಳ್ದ ಪೇಳರಾ ೬೬೫

(ಧರ್ಮನಾಥಪುರಾಣಂ ೨-೮೬)

ಕುಂದದೆ ಪುಷ್ಪಲಾವಿಗೆಯರೆತ್ತಿದ ಪೇಸಿಯ ಬಾಸಿಗಂಗಳಿಂ
ದಂದುರೆ ಪೊಣ್ಮೆ ಪಾಯ್ವ ಕುಸುಮಾಸವಮಂ ಸವಿದುರ್ಕಿಸೊಕ್ಕಿದ
ಕ್ಕಂದಳಿವಾಯ್ತುನಾಗಕರಿವಣ್ಣೆಯ ಕುಂಕುಮಮಂ ಬಜಿಲ್ದು ಕ್ರೈ
ಗುಂದಿದ ಘಟ್ಟಿವಳ್ತಿಯರ ಸೂಸುಗುರುಳ್ಗಳುನ್ನದಾಳಿಗಳ್ ೬೬೬

(ಧರ್ಮನಾಥಪುರಾಣಂ ೨–೮೩)

ಎಸೆವ ಪುರಂಧ್ರಿಯರ್ ಪಡೆದು ಸಂಗಡವಿರ್ದು ಮನೋನುರಾಗದಿಂ
ದಸೂಸೆಯ ಕಲ್ಗಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಜಾ
ರಿಸಿ ಹಿಮಚೂರ್ಣಮಂ ತಳಿದು ಕಂದುಗಳಂ ಪಿಡಿದೌಂಕಿ ನೂಂಕಿದರ್
ಪೆಸೆಪೆಸೆಗೆಲ್ಲ ಕಂಪೆಸೆಯೆ ಘಟ್ಟಿಸುಗುಳ್ಚುಗು ಘಟ್ಟಿವಳ್ತಿಯರ್ ೬೬೮

ಚಂದನಗಂಧಕ್ಕಂ ವದ
ನೇಂದೀವರ ಪರಿಮಳಕ್ಕಮೆಱಗುವ ಭೃಂಗೀ
ವೃಂದಮನುರು ಸೋವುತ್ತಂ
ಮುಂದ್ಪೈಸಿ ಮಗುಳ್ಚಿ ಘಟ್ಟಿವಳ್ತಿಯರೆಸೆಗುಂ ೬೬೯

## ಮಾಲೆಗಾರ್ತಿಯರ ವರ್ಣನೆ

ನೆನೆದರ ಚಿತ್ತಮಂ ನೆರೆಯೆ ಕಮ್ಮನೆ ನೋೞ್ಪರ ಕಣ್ಣ ಬೆಳ್ಪು ಕ
ಮ್ಮನೆ ಮಿಗೆ ಮಾತಾಡುವವರ ಪಲ್ನುಡಿ ಕಮ್ಮನೆ ಮೆಯ್ಗಳೆಯ್ದೆ ಕ
ಮ್ಮನೆ ಪೆಸೆ ಕೂಡೆ ಕಮ್ಮನೆ ಕರಂ ನವಕೌಮುದಿ ಕಮ್ಮನಾಗೆ ಕಂ
ಪಿನ ಪೊಸಲಿತ್ತಲಿಂ ಪರಿವ ಪೂವಿನ ಸಂತೆಯನೆಯ್ದಿದಂ ನೃಪಂ ೬೭೦
(ಲೀಲಾವತಿ ೨-೨೮)

ನಯನಮರೀಚಿಗಳ್ ಪುದಿಯೆ ನೀಲದ ಮಾಲೆಗಳಂತೆ ಕೈಯ ಕಾಂ
ತಿಯ ಪುದುವಿಂದೆ ಮಾಣಿಕದ ಮಾಲೆಗಳಂತಿರೆ ನಿಚ್ಚಮಚ್ಚಜಾ
ತಿಯ ಪೊಸಮಾಲೆಗಳ್ವಿಡಿದು ಮಾಱುವ ನೀಱೆಯರಲ್ಲಿ ಮಾಲೆಗಾ
ರ್ತಿಯೊ ಮಣಿಗಾರ್ತಿಯೋಯೆನುತಲಿರ್ಪುದು ಸಂಶಯಭಾಜನಂ ಜನಂ ೬೭೧
(ಧರ್ಮನಾಥಪುರಾಣಂ ೨-೭೯)

ಕಡು ನಿಡುಗಂಗಳಂಗಜನಕೀರ್ತಿಪತಾಕೆಯನೆತ್ತೆ ನೆಟ್ಟನೊ
ಳ್ಪಡು ನಿಡುವಾಸೆಯೊಳ್ ಪುದಿದ ಪ್ಪೈಸಿರಿಯಂ ಪಿಡಿಪೆತ್ತಿ ಪೊಂಗಿ ಪೊಂ
ಗೊಡಮೊಲೆ ಮೇಲುದಂ ಭರದಿನೆತ್ತೆ ನೆಗಟ್ಟಿಯ ಮಾಲೆಯೆತ್ತಿ ಕೈ
ಯ್ಯೊಡನಗೆಯಿತ್ತಪರ್ ವಿಟರ ಬಿಂಕಮನಂಕದ ಮಾಲೆಗಾರ್ತಿಯರ್ ೬೭೨
(ಧರ್ಮನಾಥಪುರಾಣಂ ೨-೮೦)

ನೋಡಿದೊಡೀಕೆ ಪೊಚ್ಚಪೊಸನೆಯ್ದಿಲಮಾಲೆಗಳಾದುವೋತು ಮಾ
ತಾಡಿದೊಡೋವೊ ಬಂದುಗೆಯ ಮಾಲೆಗಳಾದುವು ಮಂದಹಾಸಮಂ
ಮಾಡಿದೊಡಚ್ಚಮಲ್ಲಿಗೆಯ ಮಾಲೆಗಳಾದವಿದೊಂದು ಚೋದ್ಯಮಂ
ನೋಡಿರೆ ಮಾಲೆಗಾರ್ತಿಯೊ ದಿಟಕ್ಕಿವಳಗ್ಗದ ಮಾಯಗಾರ್ತಿಯೋ ೬೭೩
(ಧರ್ಮನಾಥಪುರಾಣಂ ೨-೮೧)

ಬಗೆಗೊಂಬೀಮದನಲೋಕಮಾತ್ರದೊಳ್ ಪ್ರಾಣ್ದೀ ಲೋಕಮುಂ ಗೆಲ್ದ ಕಂ
ತುಗೆ ಪ್ರಾಜಾರ್ಥಮಿದೆಂದು ಸುಯ್ಗೆ ಜಗಿದುನ್ಮತ್ತಾಳಿಯಿಂ ಬೀರದೇ
ಬಿತ್ತಗಳಂ ಪಾಡಿಸುತಂ ಜಯಧ್ವಜನನೆತ್ತಿರ್ಪಂತಿರೇಂ ತೀರ್ದ ಮಾ
ಲೆಗಳುಂ ತೋಳ್ಗೆ ಕೊಳೊಪ್ಪೆ ಕಂಗೊಳಿಸಿ ತೋರ್ಕುಂ ಪುಷ್ಪಲಾವೀಜನಂ ೬೬೪

ಎತ್ತಿದಪೊಂದು ಮಾಲೆ ಪೊಸಪೂವಿನ ಬಿಲ್ಲವೊಲಾಗೆ ಕೂಡೆ ಜಿಂ
ಬಿತ್ತುವ ನೋಟಮಂಗಜನ ಬಾಣದವೋಲಿರೆ ಕಾಯಕಾಂತಿ ಸ್ವೈ
ತ್ತೊತ್ತಿದ ಮಾರ್ಪ್ಪಿಯಂತಿರೆಸೆದಿಂದುವಿನೊಳ್ಮೃಗಮುಂ ಕಜುತ್ತು ಕೋ
ಲೆತ್ತುವ ಬೇಂಟೆಗಾರ್ತಿಯರವೋಲೆಸೆದರ್ ಮಿಗೆ ಮಾಲೆಗಾರ್ತಿಯರ್ ೬೬೫

(ಗಿರಿಜಾಕಲ್ಯಾಣಂ ೨-೮೮)

ತರತರದಿಂದೆ ಬಾಹುಲತೆ ಪುಷ್ಪಿತಮಾದುದೊ ಕಾಮಮಾರ್ಗಣಂ
ತರುಣಿಯರಿಂದೆ ಕಟ್ಟುವಡೆದಿರ್ದುದೊ ಪೇಳ್ ಸಜುಸುಯ್ಗೆ ಕೊರ್ತುಬಂ
ದುರುತರಮಾಲೆಯೊ....ಕೆ ಪೇಟಿಸೆ ದಿವ್ಯಸುಗಂಧದಿಂ ಮನೋ
ಹರಮೆನಿಸಿರ್ಪ ಪೊಜ್ಜಪೊಸಮಾಲೆಯನೆತ್ತುಗು ಮಾಲೆಗಾರ್ತಿಯರ್ ೬೬೬

ತರಳ ಕಟಾಕ್ಷಮಾಲೆಯೊ ಸಿತೋತ್ಪಲಮಾಲೆಯೊ ಕಯ್ಯ ಮಾಲೆಯೋ
ಸಿರಿಸದ ಮಾಲೆಯೋ ಮಿಸುಪ ಜಾತಿಯ ಮಾಲೆಯೊ ಪೇಟಿನಿಪ್ಪ ಸೀ
ಜರ ಸೊಬಗಂ ನೊಡಲ್ಗೆಡಿಸೆ ತೋಳಮೊದಲ್ಗೆ ಲಿಪ್ರಾಪನೆತ್ತುವಂ
ಶಿರೆ ನನೆಯಂಬುಗಳ್ಗೆ ಬೆರೆತ್ತುವರಲ್ಲಿಯ ಮಾಲೆಗಾರ್ತಿಯರ್ ೬೬೭

(ಮಲ್ಲಿನಾಥಪುರಾಣಂ ೨-೫೯, ಸೂಕ್ತಿಸುಧಾರ್ಣವಂ ೪-೧೨೦)

ಉಗುರ್ಗಳ ಕಾಂತಿಯುಂ ನಯನಕಾಂತಿಯುಮೊಂದಿ ಕದಂಬಮಾಗಿ ಸಂ
ಪಗೆಯೆಸಟಿಂತೆ ಸ್ಫೆಡಿಲಿಸಟಿಂತೆ ವಿಮೋಹಮನೀಯೆ ಮಾಜುಗೊಂ
ಡಗಲಲೊಡಂ ಬಟಿಕ್ಕೆ ಮಧುಮಲ್ಲಿಗೆಯಾಗಿರೆ ಬಂದು ಮಾಯವಾ
ಗವಿದು ಮಲ್ಲಿಗೆಂಬ ಪಿಟಿರಂ ನಗುವರ್ ಮಿಗೆ ಮಾಲೆಗಾರ್ತಿಯರ್ ೬೬೮

(ಸೂಕ್ತಿಸುಧಾರ್ಣವಂ ೪-೧೨೧)

ಪೂಗೊಳಲಿಂದು ಬಂದ ವಿಟಸಂತತಿಯುಳ್ಳೆರ್ದೆ ಡಿಳ್ಳವಪ್ಪಿನಂ
ಪೂಗಣೆಯುರ್ಚೆ ಮೂರ್ಛೆಗೊಳಗಾಗಲೊಡಂ ಕಡುಪಿಂದ ಮೃಗಕೋಳ್
ಪೂಗೊಳದತ್ತಲೊಯ್ದು ಮದನಾಗ್ನಿಯನಾಜಿಸುವಂತೆ ಮಾಡುವಾ
ಪೂಗಳನೊಪ್ಪೆ ಕಟ್ಟಿ ಪೊಸಮಾಲೆಯನೆತ್ತುವ ಮಾಲೆಗಾರ್ತಿಯರ್ ೬೬೯

ಭರದಿಂ ಪೂವಾಲೆಗಳಂ
ತರದಿಂ ಪಿಡಿದೆತ್ತಿ ನಿಂದ ಶಶಿಮುಖಿಯರ್ ಬಂ
ಧುರ ಶಶಿಕಲೆಗಳನೀವಂ
ತಿರುತಿರ್ದರ್ ವಿಟಚಕೋರಸಂತತಿಗಾಗಳ್ ೬೮೦
(ಗಿರಿಜಾಕಲ್ಯಾಣಂ ೨-೮೫)

ವರಮಲ್ಲಿಗೆ ಮಾಲೆಗಳೊಳ್
ಜೆರೆದಿಹ ಮಧುಕರಕದಂಬದಿಂದಂ ನೀಲೋ
ತ್ಕರಮುಂ ಮೌಕ್ತಿಕಮುಂ ಪೋ
ಲ್ತಿರೆ ಪೇಳುತಿರ್ದಳ್ ಮಾಲೆಗಾರ್ತಿ ಮಣಿಗಾರ್ತಿಯಪ್ಪೋಲ್ ೬೮೧
(ಗಿರಿಜಾಕಲ್ಯಾಣಂ ೨-೮೬)

ನಗೆಗಣ್ಗಳ ಕಾಂತಿಯ ಸೆ
ಳ್ಳಿಗುರ್ಗಳ ಕಾಂತಿಯು ಕರಪ್ಪುಮದ ಕಾಂತಿಯು ಮಾ
ಲೆಗಳಂ ಪೊಸಪೂವಿನ ಮಾ
ಲೆಗೆತ್ತು ಜೆಲಿಗೊಟ್ಟು ಕೊಂಡು ನಗಿಸಿದನೊರ್ವಂ ೬೮೨
(ಗಿರಿಜಾಕಲ್ಯಾಣಂ ೨-೮೭)

ಎತ್ತಿದುದೊಂದು ಸ್ರೂಸರಕೆ ಜಂದ್ರಮನಗ್ನಿಸುರಾಧಿಪರ್ಕಳುಂ
ಚಿತ್ರಮುಸಿಟ್ಟುದಲ್ಲದೆ ಸುಧಾಕರ ನಿಮ್ಮೆಯುಮನ್ನಿದೇವೆಯುಂ (?)
ಜಿತ್ತಿರಲಂತ್ಯದಿಂ ಹರಿಹರಾದಿಗಳಾಸೆ ನಿರಾಸೆಯಾದುದೆಂ
ದುತ್ಪಲಮಾಲೆಯುಂ ನೆಗಪಿ ತೋಜುಸುತಿರ್ದಳು ಮಾಲೆಗಾರ್ತಿಯುಂ ೬೮೩

ಸುರಪತಿ ಸೋಲ್ತಸಕ್ಕಟಿ ಸುಧಾಕರಸೋಲ್ತ . . . ಮತ್ತೆ ಭಾ
ಸ್ಕರಮಗಳೊಪ್ಪೆ ಮೂವಮಗಳೊತ್ತಿಸಲಗ್ನಿಯು ಸೋಲ್ತನೆಲ್ಲರುಂ
ಸಿರುತದಿ ಸೋಲ್ತರೊಮ್ಮೆ ಪದಿಮೂಜಾನ ಪೂವಿಗೆಯುಂದುಮಾಗಸ್ರ
ಸವನು ಎತ್ತಿ ತೋಜುಂದಳು ಜಂಪಕಮಾಲೆಯು ಮಾಲೆಗಾರ್ತಿಯುಂ(?) ೬೮೪

ಸಲ್ಲಸಗಲ್ಲು ವಿರ್ಪ ಸರಗಾರ್ತಿಯು ಬಲ್ಲಿರಹೀಣೆಯಾಗುತಂ
ಪುಲ್ಲಸರಂಗಳಂ ಕ್ರಯಮಮಾಡುತಲೊಪ್ಪುತಲಿಪ್ಪ ವೇಳೆಯೊಳ್
ಸಿಲ್ಲದೆ ಮನ್ಮಥಂ ಬರುತೆ ಬಾಣಮ ತೊಟ್ಟುಜುತ ಕೋಪವೇಟತ್ತಿಯಿಂ
ಬಿಲ್ಲಮನೆತ್ತಿ ತಂದ್ಲಿ ಸೆಂಪಿ ನಾರಿಯು ಖಂಡಿಸಿತೇನ್ನಿ ಚಿಕ್ರಸೋ ೬೮೫

ತರಳಾಪಾಂಗಂಗಳೊಳ್ ಪುಜ್ಜರಿಪಲರ್ಗಳೆಯುಂ ಕಟ್ಟಿ ತೋರ್ಪಂದದಿಂ ಚಾ
ಪುರಮುಂ ವಕ್ಷೋಜಸೀತಸ್ಥಿತ ಮದನಸ್ಪಸಂಗೆತ್ತುವಂತ್ರೆತ್ತಿ ಪೂವಂ
ದರಹಾಸಶ್ರೀಯಸೀವಂತಿರೆ ಪೊಸನಸೆಗಳ್ಗಂತವಂ ಸುಯ್ಯಕಂಪಿಂ
ಪೊರೆವಂತಾ ಸಂತೆಯಿಂದಂ ತೊಲಗದು ಸತತಂ ಪುಷ್ಪಲಾವೀಕದಂಬಂ ೬೮೬
(ಲೀಲಾವತಿ ೭-೧೪, ಸೂಕ್ತಿಸುಧಾಣವಂ ೪-೧೧೮)

ನಱುಸುಯ್ಗಂ ಮಾಲೆಗಂ ಸೂಱೆಱುವೆಱಗುವಿನಂ ತುಂಬಿಗಳ್ ಸೋಡಿದರ್ ಪೆಯರ್
ಮೞಿಪನ್ನಂ ಬಾಹುಮೂಲಂ ಪೊಗರನುಗುಱ್ವಿನಂ ಕಣ್ಮಲರ್ ಬಳ್ಳಿಮಿಂಚಂ
ಕೞಿವನ್ನಂ ಮಾಲೆಪೂವಂ ನೆಗಪಿ ಸೊಗಯಿಕು [1]ಪಾಂಥರಂ[1] ಪುಷ್ಪಚಾಪಂ
ಗುಱುಯೇಸಂ ತೋಱಲಂಬಂ ಪೊಡೆಗೆದಱುದವೋಲ್ ಪುಷ್ಪಲಾವೀಕದಂಬಂ ೬೮೭
(ಪಂಪರಾಮಾಯಣಂ ೧-೧೨೦, ಸೂಕ್ತಿಸುಧಾರ್ಣವಂ ೪-೧೧೯)

ಸಾರಸುಗಂಧದಿಂಡೆಸೆವ ಪೂವಿನಮಾಲೆಯನೀವೆನಿತ್ತುಬಾ
ಜಾರೆಲೆ ಧೂರ್ತಯೆಂಬವಳ ತೋಳಪೊಡಲ್ಗಳನುನ್ನತಸ್ತನಾ
ಕಾರಮನೆಯ್ದೆ ಕಂಡು ನಡೆಗೆಟ್ಟರೆ ದೂರದೊಳಿರ್ಪೆಯೇಕೆನಲ್
ದೂರಿತರಲ್ತೆ ಪುಷ್ಪವತಿಯಾದಳ ಕಂಡರೆ ನೀತಿಮಾರ್ಗದರ್ ೬೮೮

ಮುಘಮುಘಿಸುತ್ತಲಿರ್ಪ ನಱುಸುಯ್ ಪೊಸಪೂಗಳಕಂಪನೆತ್ತೆ ಸು
ಣ್ಗೊಗಮಿರದಚ್ಚದಾವರೆಯ ಮೆಯ್ ಸಿರಿಯಂ ಪಿಡಿದೆತ್ತೆ ನೀಳ್ದ ಪೆ
ಳ್ಗುಗುರ್ಗಳ ಜೆಳ್ಪು ಕೇದಗೆಯ ಕುತ್ತೆಸಱಿಯೋಳಿಯನೆತ್ತೆ ಸುತ್ತಲುಂ
ಸೊಗಯಿಸುತಿರ್ಪ ಬಾಸಿಗನುನೆತ್ತುವರಗ್ಗದ ಮಾಲೆಗಾರ್ತಿಯರ್ ೬೮೯
(ಕಬ್ಬಿಗರಕಾವಂ -೪೦-)

ಪೂವಿನ ಸಂತೆಯ ಪರಿಮಳ
ಮಾವೂರ ಗೃಹಂಗಳೊಂದಸುಣಿಸದೆ ಪೊಕ್ಕಾ
ಜೀವನ ದೇಹಗಳೆಲ್ಲವ
ನೋವೋ ಪರಿಮಳಿಸಲ್ಕಾವ ಲೋಕದ ಪೂವೋ ೬೯೦

ತುಂಬಿಯ ಮಾಲೆಯೋಯಲರಮಾಲೆ ನಖಾಳಿಯ ಕಾಂತಿಮಾಲೆಯೋ
ಯಂಬುಜಲೋಚನಾಂಶುಘನಮಾಲೆಯೊಳಾವುದಕೀವೆನರ್ಘಮುಂ
ರಂಭೆಗೆ ಪಾಟಿಯಾದ ವಧುವೆಂಡೆಸೆ ತನ್ನಕಟಾಕ್ಷದೋರೆಯಿಂ
ತಾಂ ಬೆದಕಲ್ಕೆ ಭಾಪು ಬೆಲೆಗೊಟ್ಟವನೆಯ್ದಿದನೇಂ ಪ್ರವೀಣನೋ ೬೯೧

---

[1]ನೀಱರೊಳ್ (ಸೂ)

ಎನಗಂ ಜೇಡಿಪ ಮಾಲೆಯುಂಟೆಂಪಿನೆಲೊರ್ವಂ ಬಾಲೆ ಕೈಮಾಲೆಯೊಂ
ದನೆ ತೋಱಲ್ಕೆಲೆ ಹೆಣ್ಣೆ ಕಣ್ಣ ಕಡೆಯಾ ಶ್ರೀಮಲ್ಲಿಕಾಮಾಲೆಯಿ
ರ್ದನಗಿಂದೀ ನನೆಮಾಲೆಯುಂ ನೆರೆಯೊಳೊಪ್ಪಂದೋರ್ಪುದೊಂದಪ್ಪುದೇ
ಯೆನೆ ನಕ್ಕಾ ಗುಣಿ ಮಾಲೆಗಾರ್ತಿ[1][ಯೊರೆದಾ][1]ಜಾಣ್ಮಾತದೇಂ ಚಿತ್ರಮೋ ೬೯೩

ಮಾಲೆಯನೆತ್ತಿ ನೋಡುತಿರೆ ತನ್ನನಿಯಂ ತಡೆದೆಯ್ದಲಾಗಳಾ
ಮಾಲೆಯಿ ಕೆಂಪನಾಳ್ದವನನೊಳ್ನುಡಿಗಾಣಿಸೆ ಜಿಹ್ವನಾಂತುದಾ
ಮಾಲೆಯ ನೋಂಕಲಾಕೆಯವನಂ ಕರಿದಾದುದಿದೇಂ ವಿಚಿತ್ರಮೋ
ಲೋಲತರಾಕ್ಷಿಯೊಳ್ ತ್ರಿಗುಣಮಾದುದು ನೋಟಿಪ್ಪೊಡೆ ಮಾಲೆಗಾರ್ತಿಯೊಳ್ ೬೯೪

## ಜೂಜುಗಾಱರ ವರ್ಣನೆ

ರಾಜಕುಮಾರಕರ್ ನಿಜವಿನೋದಿಗಳಂಗವಿಕಾರಿಗಳ್ ಕಳಾ
ಯೋಜಪರಾರ್ಥಿಗಳ್ ಸುಭಗಮೂರ್ತಿಗಳೊಪ್ಪುವ ನಾಗರೀಕನಾ
ನಾಜನಮಂದು ಸಂಸೆವ ಮಂದಿರದೊಳ್ ನೆರೆದುತ್ಸವಂ ಮಿಗಲ್
ಜೂಜುಗಳಂ ಸಮಗ್ರಮೆನಲಾಡುತಿರ್ದರದೊಂದು ತಾಣದೊಳ್ ೬೯೫

ಸದರದೆ ದಾಯಮಂ ಪಿಡಿವ ವಿತ್ತಮನೊಡ್ಡುವ ಜೊತ್ತುಗಾಱರಿಂ
ದಿದಿರವರಂ ತೆರಳ್ಚಿಸುವ ಧಾಳಿಸಿ ಮಿಯ್ಯಜಿಂದಕ್ಷಮಂ ಕರಾ
ಗ್ರದಿ ಗುಱುಮಂಡೆಗೊಳ್ಳೆ ತೆಗೆಯಾಗಳೆ ತಾಗಿತೆನುತ್ತ ಸಾರಿಯಂ
ಕೆದಱುವ ನೆತ್ತಗಾಱರ ವಿನೋದಮದೊಪ್ಪಿದುದತ್ಯಪೂರ್ವದಿಂ ೬೯೬

ತಾಗುವ ದಾಯಮಂ ತೆಗೆವ ತಪ್ಪಿಸಿ ಸಾರಿಯನೊಡ್ಡಿಕೊಂಬ ಗೆ
ಲ್ವಾಗಜಿಂದೊಡ್ಡನೇಱುಸುವ ಮಿಯ್ಯಜಿಂದಕ್ಷವನೊಯ್ಯನೆತ್ತಿ ಕೈ
ನೇಗಮೊಳಾರ್ದು ಧಾಳಿಸುವ ಪಾವುಗೆಸಾಕೆನಲೇಱ್ಪ ಬಿನ್ನಣ
ಕ್ಕಾಗರಮಾಗಿ ನೆತ್ತಗಳನೆತ್ತಣ ಜೊತ್ತುಗಳಿಂ ನೆಗಳ್ಚಿದರ್ ೬೯೭

ಡಾಳಿಸಿ ಹಾಸಂಗಿಗಳಂ
ಹೇಳಿದ ದಾಯವನು ಹಾಯ್ಕಿ ಪೆಟ್ಟಿಸಿ ಗಣಮಂ
ಸೋಲದೆ ಸಮವೆನಲಾಡುವ
ಲೀಲೆಯ ನೆತ್ತದಲಿ ಜೂಜುಗಾಱರ್ ಮೆಱೆದರ್ ೬೯೮

---

[1] ಯುದನಾ(ಸ)

ಅರಸೆನಲೀಯದೆ ಕರುವಂ
ಸರಿಗೊಳ್ಳದೆ ತುರಗಹಸ್ತಿತೇರ್ ಭಟರಿರುತಿರೆ
ಲರಸಂ ನಡುವಕೆ ಕಟ್ಟುವ
ಸಿರುತಂ ಚದುರಂಗದವರ್ ಮೆಱೆದರ್ ಪುರದೊಳ್ ೧೯೯

ಬಿರಯಿಗಳನೆಸುವ ಮದನನ
ಶರಾಸನಂಗಳಿರದೆ ಸಿಲುಕಿ ಮಿರ್ದುವನೆತ್ತುವ
ನಿರದೇ ಖಂಡಂಮಾಟಿಪ್ಪೊಲು
ತರತರದಿಂ ಕರ್ಪುರಜೂಜುಗಾಱರ್ ಮೆಱೆದಗುಂ(?) ೨೦೦

ಪೊಜಿಗೊಳಗು ಸಾವ್ಯವಿಲ್ಲದ
ಬರಹುಂಡಗೆ ಕೇಳೀವನವ್ರೋಲ್ ಕೆಣ್ಣೂಱಿನು
ತಿರದೆ ಪೊಡೆದೊಡೆವ ಜೂಜಿನೊ
ಳಿರಕದ ಜೆಂಪೆಂಗುಗಾಯ್ಗ್ಗಳೊಡೆಪರ್ ಮೆಱೆದಗುಂ(?) ೨೦೧

ಕುಂಕುಮದ ಪುಡಿಯು ಕೆಸಱಿನೊ
ಳಿಂ ಕಡುಸ್ಸೈರ್ಯದಲಿ ವಜ್ರಮುಷ್ಟಿಯನೆತ್ತುತ
ಲೌಂಕಿ ಸಮುಸಂದು ಹೆಣಗುವ
ಬಿಂಕದ ಮಲ್ಲಾಳ್ಗಳಘಟಗಾಳಿಗ ಮೆಱೆದಗುಂ ೨೦೨

ನೀಲಾದ್ರಿಯು ಮಱೆಯೆರಡಂ
ಶ್ವೈಲಾದ್ರಿಯೆ ಸೆಱೆಯತಂದುಪ್ರಲಿಯುತ್ತುದ್ದಕೆ
ಸಾಲಿಡೆ ಬಿಟ್ಟೊಲು ಮಹಿಷನ
ಕಾಳಿಗಗಳು ಸೊಗಸುತಿರ್ಪುವಾ ಬೀದಿಗಳೊಳ್ ೨೦೩

ತಳಿಯಿಟ್ಟು ಗಂಧಗಜಗಳ
ನಿಲಿಸುತಲಿಬ್ಬದಿಯೊಳೊಟ್ಟಿ ಮಾಪ್ರತರೆಪನಱ
ದಲೆದು ತಿವಿತಿವಿದು ಮೋಡಿಪ
ಬಲುಮದದಾನೆಗಳ ಕಾಳಗಂ ಕಣ್ಗೊಳಿಕುಂ ೨೦೪

ಮದವೆದ್ದು ಚರಿಪ ಜೀವ
ಗಿಣದಿರೊಳ್ ತಲೆದಾಗುಗಿಂತುಮೆಂಬವ್ರೋಲ್ ತಾಗುತ
ಲಿದಿರಾರ್ದು ಕಾದಿ ಕನಲುವ
ಪಡಿಲದ ತಗರುಗಳ ಕಾಳಗಂ ಕಣ್ಗೊಳಿಕುಂ ೨೦೫

ಆಯುಧದಭ್ಯಾಸಂಗಳ
ನಾಯಂಗಳ ತೋಱುತಂಗಮೊಳು ತೊಲಗದೆ ನಿಂ
ದೊಯ್ಯಾರದಿಂದಲಿಱುವ ವಿ
ಡಾಯದ ಮಾಸಾಳುಗಾಳೆಗಂ ರಂಜಿಸುಗುಂ ೨೦೬

## ವೇಶ್ಯಾವಾಟಿಯ ವರ್ಣನೆ

ರತಿರೂಪಾಂತಧ್ವಜಂ ಮನ್ಮಥನಿಚಿತಪತಾಕಾಳಿ ಸೌಧಾವಿಜೃಂಭಾ
ಯತ ಬಂಧದ್ವಾರಪುಂಗೋದ್ಭವಪರಿತ ಕಥಾಲೇಖ್ಯವದ್ಭಿತ್ತಿ ಪಾರಾ
ವತಕೀರ್ಣಶ್ರೇಣಿ ವಿಭ್ರಾಜಿತಮಣಿಮಯಕೂಟಂ ವಿಮಾಣಿಕ್ಯಶೋಭಾ
ನ್ವಿತನಾನಾವೇದಿಕಾಂತದ್ವಿಷಯಮೆನಿಸುಗಲ್ಲಲ್ಲಿ ವೇಶ್ಯಾಲಯಂಗಳ್(?) ೨೦೭

ಬತ್ತಲೆ ಬಂದ ಮುನೀಂದ್ರರ್
ಸುತ್ತುವರತಿವಿಭವದಿಂದಲುಟ್ಟಿರ್ದವರುಂ
ಬತ್ತಲೆಪೋಪರ್ ಸೊಬಗಿನ
ಬಿತ್ತರದಿಂದೆಸೆವುವವಱ ವೇಶ್ಯಾವಾಟಂ ೨೦೮
(ಸೂಕ್ತಿಸುಧಾರ್ಣವಂ ೪–೧೨೫)

ಮನಸಿಜನಾಣೆ ಮನ್ಮಥನ ಘೋಷಣೆ ದರ್ಪಕನೇಱಿತ್ತ ಕಂತುರಾ
ಜನ ವಿಜಯಪ್ರಶಸ್ತಿ ರತಿನಾಥನ ಸೃಷ್ಟಿ ಮನೋಜ್ಞನಾಜ್ಞೆ ಕಾ
ಮನ ಪೊಸದೇಸಿ ಚಿತ್ತಜನ ಬಿತ್ತಿ ಹರಾರಿಯ ಬೀರಮಂಗಜ
ನ್ಮನ ಬಿರುದಿಲ್ಲದಿಲ್ಲ ಮಱೆದೆಲ್ಲಿಯುಮಲ್ಲಿಯ ಸೂಳೆಗೇರಿಯೊಳ್ ೨೦೯
(ಸೂಕ್ತಿಸುಧಾರ್ಣವಂ ೪–೧೩೭)

ಗರುವರ ಗೊಟ್ಟಿಗಾಱರ ನೆಗೞ್ತೆಯ ಮಿಂಡರ ಮೇಳಗಾಱರ
ಕ್ಕರಿಗರ ಸಂದ ಕಬ್ಬಿಗರ ಜೋಡೆಯ ಭಂಡರ ಸಾರ್ದ ಸೆತ್ತಗಾ
ಱರ ಚದುರಂಗಗಾಱರ ಚದುರ್ನುಡಿಗಾಱರ ಬೀಣೆಗಾಱರಾ
ಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುದು ಸೂಳೆಗೇರಿಗಳ್ ೨೧೦
(ಕಬ್ಬಿಗರಕಾವಂ –೪೨–)

ಚದುರಿನವಾರ್ತೆದಾಣಪಲರಂಬನನಚ್ಚಿನನುರ್ಮೆ ಮಾಡ ಮಾ
ಱುದ ನೆಲೆಯೂರು ಜಾರುಳ ತವರ್ ತವದುಕ್ಕೆವದಿರ್ಕೆ ಟಕ್ಕರೇ
ಟದ ಬೆಳೆಗೆಯರ್ ತಗುಳ್ದಳುಪಿಸಂಗಡಿ ಗನ್ನದ ಗೊತ್ತು ತಪ್ಪುಸು
ನ್ನಡೆ ಸೇಱೆ ಸಂಬಂಧೇ ಕೃತಕರ್ಪೇಱೊಯನಲ್ಲಿಯ ಸೂಳೆಗೇರಿಯಂ ೨೧೧

ಅವಿರಳವಾದ ಕೇಳಿ ವನಕೇಳಿ ಸರೋವರಶೋಭೆಯಿಂ ಸುಧಾ
ಧವಳಿತರಮ್ಯಹರ್ಮ್ಯ[1]ಕುಲಮುಂ[1]ಬಕದಿಂ ವರವಾರಕಾಮಿನೀ
ವಿವಿಧ ವಿಡಂಬದಿಂ ಸೊಗಯಿಕುಂ ವಿಟವೃಂದವಿಹಾರಿಗಳ್ ಮನೋ
[2]ಜಯಕಾರಿಗಳ್ ಹೃದಯಹಾರಿಗಳಲ್ಲಿಯು[2] ಸೂಳೆಗೇರಿಗಳ್ ೭೧೨

(ಜಗನ್ನಾಥವಿಜಯಂ ೯-೯೯)

ಮುನಿಮುಚಿದಿರ್ಪ ಪ್ರೋಪ್ರುಚಿಮುಪ್ರೋಪೊಡೆ ಪಿಂದನೆ ಬರ್ಪ ಬಂದು ಕ
ಣ್ಣನಿ ಕಡೆಗಣ್ಣ ಪ್ರೋಣ್ಮುತ್ತಿರೆ ಕಾಲ್ಪಿಡಿಪೋಪನನೋಪಳುಯ್ದು ನಂ
ದನವನಮಧ್ಯಕೇಳಿಗೃಹಮಂ ಪುಗುತಿರ್ಪ ವಿಚಿತ್ರ ಭಾವನಂ
ಜನಿಯಿಪುದಾ ಸುಧಾಗೃಹದ ಭಿತ್ತಿಗಳುರ್ವಿಗಪೂರ್ವಭಿತ್ತಿಗಳ್ ೭೧೩

(ಜಗನ್ನಾಥವಿಜಯಂ ೯-೧೦೨)

ಲಲಿತೋಜ್ಜೃಂಭಿತರಾಜಹಂಸರಮಣೀಲೀಲಾಪರಿಧ್ಯಾನಸಂ
ಕುಳಮುದ್ಯತ್ಸುಮನಃಪ್ರತಾಪನಿಚಿತಂ ತಾರಾಳಿಮುಕ್ತಾಕರಾ
ವಳಿರಮ್ಯಂ ಪರಿಪೂರ್ಣಪುಷ್ಕರವಿಚಿತ್ರಾಕೀರ್ಣವರ್ಣಂ ಕರಂ
ಕೊಳನಂ ಪ್ರೋಮಮನೆಯ್ದೆ ಪ್ರೋಲ್ತುದು ನಿಜಾವಾಸಂ ಸರೋಜಾಸ್ಯೆಯಾ ೭೧೪

ಪೊಸತೆನಿಪ್ರೊಂದು ಪಕ್ವಫಲನೊಂದರುಣಾಧರಮಂ ಕದರ್ಪಂಕಲಾ
ಪಿಸುತಿರಲಾಡುಗಟ್ಟಿ ಭರದಿಂ ಸಿಲಿ ತತ್ಫಲಮೆತ್ತಪ್ರೋದುದೆಂ
ದಸಿಯುಳ ಹಸ್ತದಿಂದಿಟಿದು ತನ್ಮಣಿಕುಟ್ಟಿಮದೊಳ್ ತೊಳಲ್ದುವೀ
ಕ್ಷಿಸುವತಿಮುಗ್ಧರಾಜಸುಕದೊಪ್ಪುಗುಮಾ ಗಣಿಕಾಗೃಹಂಗಳೊಳ್ ೭೧೫

(ಜಗನ್ನಾಥವಿಜಯಂ ೯-೧೦೧)

ಟಂಕೃತಿ ಮಿಗೆ ಜೇವೊಡೆಯು
ತ್ತಂ ಕಬ್ಬಿನ ಬಿಲ್ಲನರಳಸರಳಂ ತೂಗು
ತ್ತಂ ಕರಮೆಸೆದಲ್ಲಿ ತೊಳ
ಲ್ವಂ ಕಡುಬಿಲ್ಗಾಜನತನು ಸಂಭ್ರಮದಿಂದಂ ೭೧೬

(ಜಗನ್ನಾಥವಿಜಯಂ ೯-೧೦೩)

ಕಳೆ ಕರ್ಪೂರದ ಕಸಮಂ
ತಳಿ ಕತ್ತುರಿನೀರನಿಕ್ಕು ಮುತ್ತಿನ ಕಡೆಯಂ
ಬೆಳಗು ಮಣಿದೀಪಮಂ ಪೊಗೆ
ಗೊಳಿಸಗರುವನೆಂಬರಲ್ಲಿ ಸೂಳೆವಳರ್ಕಳ್ ೭೧೭

(ಜಗನ್ನಾಥವಿಜಯಂ ೯-೧೦೦)

[1] ಸಿಕರಂ(ಅ) [2] ಭವನಧಾರಿಗಳ್ ತಪವಿದಾರಿಗಳಲ್ಲಿಯು(ಸ)

ಕಡಲೊಡೆಯನಿತ್ತ ರನ್ನದ
ತೊಡವಂ ತೊಡು ಗೌರಿಯಿತ್ತ ಪೊಂಬಟ್ಟೆಯ ನೀ
ನುಡು ಸಸಿಯಟ್ಟಿದ ಪೂವಂ
ಮುಡಿಯೆಂಬೀ ರವಮೆ ಸೂಳೆಗೇರಿಯೊಳೆಲ್ಲಂ ೭೧೮

ಅರುಣಾಧರೆ ಶಶಿಮುಖಿ ಕನ
ಕರೋಚಿ ಸೌವರ್ಣ್ಯಾಂಗಿ ವಿಮಲಗುರುಕುಚೆ ಸಿತವಿ
ಸ್ಫುರಿತವೃಶೆ ಮಂದಯಾನೆಯ
ನುರುಮುದದಿಂ ವಾರನಾರಿಯೆನ್ನದರೊಳರೇ ೭೧೯
(ಸೂಕ್ತಿಸುಧಾರ್ಣವಂ ೮-೪೬೧)

ಪೊಸನಗೆಯೊರ್ವನಲ್ಲಿ ನಸುನೋಟಮದೊರ್ವನ ಮೇಲೆ ಕೂರ್ತನಂ
ತೊಸೆದಿಹುದೊರ್ವನಲ್ಲಿ ಬಚಃಮಾತುಗಳೊರ್ವನ ಕೂಡೆಯಾಡಿ ಸಂ
ತಸಮೊಳೆ ಕೂಡಿ[ಸರ್ವ]ಸುಖಮಿರ್ಪುದಮೊರ್ವನಲಿಂತನೇಕ ದು
ರ್ವ್ಯಸನಿಯುರಪ್ಪ ಸರ್ವಜನವಲ್ಲಭೆಯುರ್ಕಳನಂತಮೊಪ್ಪುಗುಂ ೭೨೦

ಪೊಸನುಡಿ ಪುಷ್ಟಿದಾಲಯುಮಸಹ್ಯದಗೊತ್ತಮಮಾರ್ಗಮೇಟಿಗ್ಗೆ ವಂ
ಚಿಸಿ ಪರರರ್ಥಮಂ ಕವರ್ವ ಚಾಪಡಿ ನನ್ನದ ಬಯ್ಕೆ ಕೂರ್ತು ಛಿ
ದ್ರಿಸುವ ವಿಷಾದಮೆಂಬೆನಲು ಪೈಶಿಕಮೆ ವಧುರೂಪನಾಂತು ಬಂ
ದಸೆನವೊಲಪ್ಪ ಪಣ್ಯವನಿತಾಜನಮಿರ್ಪರನಂತಗಾಡಿಯಿಂ ೭೨೧

ಪೊರಡಿಸಿ ಮೋಹದಿಂ ಮುಳಿದು ಮುದ್ದಿಸಿ ಕೋಪಿಸಿ ಸೋಲ್ತರಂದದಿಂ
ಸುರಿದು ದೃಗಂಬುವಂ ಧನದಪೇಕ್ಷೆಯ ಮಾಡದೆ ಕೂರ್ತು ಕೂಡವಂ
ತಿರೆ ವಿಟಸೊಲ್ತ ಭಾವನನೆ ಕಂಡಪನರ್ಥವ ಕೊಂಬುದೆಂದುಮೀ
ಪರಿವಿಡಿಯಿಂದೆ ಮುಗ್ಧೆಯರ ಧೃಷ್ಟೆಯರೋದಿಸುತಿರ್ಪರಾವಗಂ ೭೨೨

ಜಯು[1]ವ[1]ಡೆದಿಕ್ಕುಚಾಪಮನೆ ಜರ್ಬುವ ಪುರ್ಬು ಪಳಂಚೆ ಲೋಚನಾ
ಸಿಯು ಪೊಳಪೇಜತ ಪೀವರಕುಚಂ ಕರಿಕುಂಭದ ಚೆಲ್ವನೆಯ್ದೆ ಕೈ
ಗೆಯ್ದು ಜಗಮಂ ಗೆಲಲ್ ಸಮಜಃಪಂಗಜಮೊಡ್ಡಣದಂತೆ ಸೂಳೆಗೇ
ರಿಯು ಮಣಿಮತ್ತವಾರಣದೊಳಿರ್ಪುದು ವಾರವಿಳಾಸಿನೀಜನಂ ೭೨೩
(ಲೀಲಾವತಿ ೭-೭)

---

[1] ಪೊ(ಅ)

ಱಂಗಳದೊಳ್ ಪೊದಱ್ದಸೆವ ಕೌಮುದಿ ಮುಗ್ಧೆಯರಿಂದುಕಾಂತಗೇ
ಹಂಗಳನೋಡಿ ಪೊಕ್ಕವಱ ಬೆಳ್ವೆಳಗಂ ಬಱಸಂದು ಬಂದ ಬೆ
ಳ್ದಿಂಗಳಿಗೆತ್ತು ನೀಳ ನಿಳಯಂಗಳ ಕಟ್ಟಿಲೆಯತ್ತ ಸಾರ್ದೊಡಾ
ಲಿಂಗಪರಲ್ಲಿ ಮೆಯ್ಗರೆದ ವಲ್ಲಭರಾಱಿಸಲಂಗಜಾಗ್ನಿಯಂ ೭೨೪

(ಲೀಲಾವತಿ ೭-೯)

ಹರಿಯುರದಲ್ಲಿ ಪೆರ್ಮೊಲೆಯ ಲಚ್ಚಣಮಿಟ್ಟಜನಾನನಂಗಳೊಳ್
ಚರಣದಲಕ್ತಕದ್ರವದಿನುಂಡಿಗೆಯೊತ್ತಿದ ರೂಢಿವೆತ್ತ ಶಂ
ಕರನೊಡಲರ್ಧಮಂ ಕವರ್ದುಕೊಳ್ವಿಳಪೆಂಡಿರ ಗಾಡಿಯಂ ಸಿರಾ
ಕರಿಪೆಸಕಂ ಜಸಂಬಡೆಯಲೊಪ್ಪುಗುಮಾ ಪೊಱಲಂಗನಾಜನಂ ೭೨೫

(ಧರ್ಮನಾಥಪುರಾಣಂ ೨-೮೭)

ಮುನಿವಧುಗಾತ್ರವಲ್ಲಭನಿತ್ತ ಪುಲೋಮಜೆ ಗೊಲ್ಲಪೆಣ್ಗೆ ನ
ಲ್ಲನನೆಡೆಗೊಟ್ಟ ಲಕ್ಷ್ಮೀ ಪತಿಯುಂ ಸುರಸಿಂಧುಗೆ ಪಚ್ಚುಗೆಯ್ದುಮಾ
ವನಿತೆಯಿವಳ್ದಿರೊಳ್ ದೊರೆಗಡೆಂಬಿನಮುಣ್ಮುಗುಮಲ್ಲಿ ಮೀನಕೇ
ತನನ ಕರಾಗ್ರದೊಳ್ ನಿಮಿರ್ದ ಕರ್ವಿನಬಿಲ್ದನಿಯೆಂಬ ಡಂಗುರಂ ೭೨೬

(ಧರ್ಮನಾಥಪುರಾಣಂ ೨-೧೦೯)

ಮನಸೊಲ್ದೊಡ್ಡೋಲಗಂಗೊಟ್ಟಱಿಕೆಯ ಗಣಿಕಾವಾಟದೊಳ್ ಪ್ರೇಕ್ಷ ಮುಕ್ಕ
ಣ್ಣನ ಕಣ್ಗೆಚ್ಚಂಬ ಕೈದೀವಿಗೆಯ ಬೆಳಗುಗೊಂಡೋಡೆ ಕೀರಾಳಿ ವೈಕುಂ
ಠನ ವಕ್ಷೋಭಾಗದೊಳ್ ವಾಗ್ವರನ ವದನದೊಳ್ ವಜ್ರಿಯಂಗಂಗಳೊಳ್ ಮು
ನ್ನಿನ ತಾಣಂದಪ್ಪದೇಂ ನೋಡುವನೊ ಕಲಿಯನಾಟೋಪದಿಂದಿಕ್ಷುಚಾಪಂ ೭೨೭

(ಧರ್ಮನಾಥಪುರಾಣಂ ೨-೧೧೧)

ಪುಸಿಯುಳಿಪಂ ನಿಮಿರ್ಚಿ ತಮಗಿಲ್ಲದ ಬೇಟಮನುಂಟುಮಾಡಿ ಕೂ
ರಿಸಿ ಕಡುಕೂರ್ತರಂತೆ ಪುರುಡಂ ಪೊಸಬೇಟಮನೆತ್ತಿ ಲಲ್ಲೆಯಂ
ಪಸರಿಸಿ ಪೊಯ್ದು ಕೈದಬಿಲನಗ್ಗಿಸಿ ಮುಟ್ಟದ ಮುನ್ನಮೆನ್ನರಂ
ದೆಸೆವಲಿಗೆಯ್ದರೇನೊ ಕಡುಘಾಳಿಯರೊಂದಿರುಳಲ್ಲಿ ಸೂಳೆಯರ್ ೭೨೮

(ಧರ್ಮನಾಥಪುರಾಣಂ ೨-೧೧೩)

ಸಮಸಂದಲ್ಲಿಯ ಸಿಂಬೆಗಂ ಸರಿಯೆ ಪೇಱಾ ರಂಭೆ ನೋಡಲ್ ತಿಲೋ
ತ್ತಮೆಗಿಂತುತ್ತಮ ರೂಪಮಾವೆಡೆ ವಿಲಾಸಂಬೆತ್ತ ತನ್ನೊಂದು ಬಿಂ
ಕಮನಾಳ್ದೂರ್ವಶಿಗೀ ವಶೀಕರಣಮೆಲ್ಲಿರ್ದಪ್ಪುದೆಂಬೊಂದು ವಿ
ಭ್ರಮದಿಂ ದಿಗ್ಭ್ರಮೆಯಂ ವಿಟರ್ಗೆ ಪಡೆಗುಂ ತದ್ವಾರನಾರೀಜನಂ ೭೨೯

(ಧರ್ಮನಾಥಪುರಾಣಂ ೨-೧೧೩)

ಇನ್ನುೞಿದಾದರೇಂ ಮೊರೆ ದೃಗಂಚಲದಂಜನದಿಂದೆ ಸಿದ್ಧರಂ
ಸನ್ನುತಮಾದಧರಪಲ್ಲವದಿಂದಮೃತಾಶನರ್ಕಳಂ
ಪನ್ನಗರಂ ಬೞಲ್ಮುಡಿಗಳಿಂ ಕಳಕಂಠಸುಕಂಠನಾದದಿಂ
ಕಿನ್ನರರಂ ಮರುಳ್ಗೊಳಿಪುದಲ್ಲಿಯ ವಾರವಿಲಾಸಿನೀಜನಂ ೭೩೦
(ಧರ್ಮನಾಥಪುರಾಣಂ ೨-೧೧೫)

ಬಿಸಿಲಂ ಲಾವಣ್ಯದಿಂ ಮಿಂಚಡರೆ ಬೆಳಗುತುಂ ನೀಳ್ದಪಾಂಗಂಗಳಿಂ ನು
ಣ್ಣಿಸುತುಂ ದಿಕ್ಕಾಮಿನೀಸಂಕುಲಮನಮಲಹಾಸಪ್ರಭಾಪೂರದಿಂ ಪು
ಟ್ಟಿಸುತುಂ ತಳ್ತಚ್ಚವೆಳ್ದಿಂಗಳನವಯವಶೃಂಗಾರವಾರಾಸಿಯೊಳ್ ತೇಂ
ಕಿಸುತುಂ ವಕ್ತ್ರೇಂದುವಂ ಬಂದುದು ನೆರೆದಿದಿರಂ ವಾರನಾರೀಕದಂಬಂ ೭೩೧
(ಲೀಲಾವತಿ ೧೨-೯)

ಬೆಳತಿಗೆಗಣ್ಣ ಬೆಳ್ಪು ನಗೆಗಣ್ಣ ಮುಗುಳ್ನಗೆ ಚೆಲ್ಲಗಣ್ಣ ಚಾ
ಪಳಮಲರ್ಗಣ್ಣ ಬಳ್ವುಳಿಕೆ ಮೀಂಬೊಣರ್ಗಣ್ಣ ನಿಮಿರ್ಕೆ ಸೊರ್ಕುಗ
ಣ್ಣಲಸತೆ ಪುಲ್ಲೆಗಣ್ಣಳತೆ ತಳ್ತೆಸೆಗಣ್ಣ [೧]ರೆಗಪ್ಪು [೧]ತೋಱಿಗ
ಣ್ಣೆಳಗಿನ ಸುಗ್ಗಿ ಕಾಣಲಣಮಾಯ್ತು ಪುರಪ್ರಮದಾಜನಂಗಳೊಳ್ ೭೩೨
(ಪುಷ್ಪದಂತಪುರಾಣಂ ೫-೨೪)

ಕವಿವ ಕುಬೇರಧೂಪದ ಕವಲ್ಗೊಗೆಯಂ ನವಮೇಘಮಾಲಿಕಾ
ನಿವಹಮೆ ಗೆತ್ತು ತೋರ್ಪ ಮಣಿದೀಧಿತಿಯಂ ಕುಡಿಮಿಂಚುಗೆತ್ತು ಪೊ
ಣ್ಮುವ ಪಟಹಪ್ರಣಾದಮನೆ ಮೇಘನಿನಾದಮೆಗೆತ್ತು ಕಾಲತಾಂ
ಡವಮನೊಡರ್ಚುಗುಂ ಶಿಖಿಕುಳಂ ಕನಕಾಯತಕೂಟಕೋಟಿಯೊಳ್ ೭೩೩
(ಕಾವ್ಯಾವಲೋಕನಂ ೭೧೧)

ಸರಸಿಜನಾಭನಂ ಸಿರಿ ಮನೋಭವನಂ ರತಿಯಿಂದುವಪೌಳಿಯುಂ
ಗಿರಿಜೆ ಸುರೇಶನಂ ಶಚಿ ಚತುರ್ಮುಖನಂ ವರವಾಣಿ ತಾರಕಾ
ಪರಿವೃಢನಂ ಸಮಂತೆಸೆವ ರೋಹಿಣಿ ಪಾರ್ಶ್ವದೊಳಿಟ್ಟುಕಾಯ್ವರಾ
ಪುರದ ವಿಳಾಸಿನೀಜನದ ಗಾಡಿಗೆ ಬೆಚ್ಚಿ ನಿಜಾತ್ಮನಾಥರಂ ೭೩೪
(ಸೂಕ್ತಿಸುಧಾರ್ಣವಂ ೪-೧೩೪)

ನಡೆಗಲಿಸುತ್ತುಮಂಚೆಗಳನೋದಿಸುತುಂ ಗಿಳಿಯಂ ಪಿಕಕ್ಕೆ ಮಾ
ಮಿಡಿಗಳನೀವುತುಂ ನವಿಲನಾಡಿಸುತುಂ ಪೊಣರ್ವಕ್ಕಿಯಂ ಪಿಣಿ
ಲ್ಪಿಡಿಸು ಬೞಲ್ಪಿನಂ ತಗುಳುತುಂ ಬನದೊಳ್ ಬಿನದಂ ವಿಲಾಸಮಂ
ಪಡೆದಪೆ ನಿರಂತರಂ ತೊಲಗದಿರ್ಪುದು ವಾರವಿಳಾಸಿನೀಜನಂ ೭೩೫
(ಮಲ್ಲಿನಾಥಪುರಾಣಂ ೨-೩೯ ; ಸೂಕ್ತಿಸುಧಾರ್ಣವಂ ೪-೧೩೬)

---

[೧]ಶೆಗಳ್ಪು(ಅ)

ಗಂಡನವೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದೊಡಾ
ಪೆಂಡಿರ ರೂಪುಮಂ ಸೊಬಗುಮಂ ಗುಣಮಂ ¹ಪೆಸರ್ಗೊಳ್ವುದೇ ಮನಂ
ಗೊಂಡಳನಂಗನಂ ರತಿಯೆನಲ್ ಚದುರೆತ್ರಣದಾಕೆಗೆಂಪು¹ ಕೆ
ಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಳಾಸಿನೀಜನಂ ೬೩೬

(ಮಲ್ಲಿನಾಥಪುರಾಣಂ ೨-೫೫)

ಗಿರಿಜಾವಲ್ಲಭನೊತ್ತೆಗೊಟ್ಟು ಪೆಱತಿಯುಂ ಸ್ವೈತಿಕ್ಕೆವೇಟಿರ್ ಬಂದಪಂ
ಹರಿ ಮುಂದಟ್ಟಿದನಿಂದು ಕೌಸ್ತುಭಮನಕ್ಕಂ ಕಂಡಳೇ ವಜ್ರಮಂ
ಸುರರಾಜಂ ಬಿಡಿಸಲ್ಕೆ ಬಂದು ಪೊಱಗಿರ್ದಂ ಕಾಮದೇವಂಗೆ ಬೋ
ಸರಿಗುಂ ನಿಂದುಬಿಱಿಯೆಂಬರಾ ಪುರದ ವೇಶ್ಯಾವಾಟದೊಳ್ ಚೇಟಿಯರ್ ೬೩೭

(ಸೂಕ್ತಿಸುಧಾರ್ಣವಂ ೪-೧೩೨)

## ರಾಜಾಲಯ ವರ್ಣನೆ

ವಿಮಲಪ್ರಾಸಾದಭಿತ್ತಿಪ್ರಕಟಘನಸುಧಾಕಾಂತಿಗಳ್ ಚಂದ್ರಿಕಾವಿ
ಭ್ರಮಮೆಂಬಂತೊಪ್ಪೆ ನಾನಾಮಣಿಮಯ ಕಲಶಶ್ರೇಣಿಗಳ್ ನಾಕದೊಳ್ ಚಿ
ತ್ರಮನೆತ್ತಂ ಬೀಱಿ ಭಾಸ್ವತ್ಕುಮುದಮನೊಲವಿಂ ಪೆರ್ಚಿಸುತ್ತಂ ಮಹಾಸಂ
ಭ್ರಮದಿಂ ಚೆಲ್ವಾದ ರಾಜಾಲಯಮಭಿನವಪೂರ್ವಾದ್ರಿಯಂತೊಪ್ಪಿ ತೋರ್ಕುಂ ೬೩೮

ಸ್ಫಟಿಕದ ಕುಟ್ಟಿಮಂ ಶಶಿಶಿಲಾಮಯಭಿತ್ತಿ ನವೀನ ವಜ್ರಸಂ
ಘಟಿತನಿಕಾಯಕೋಣತತಿ ವಿದ್ರುಮವಂದನಮಾಲೆ ಚಂದ್ರಿಕಾ
ಪಟಲಸದೃಗ್ವಿತಾನರುಚಿರಂಜಿತಮೌಕ್ತಿಕಪುತ್ರಿಕೆ ಚಕ್ರವಾಕಸಂ
ಪುಟಶಬಲಪ್ರಕಾಶದೊದವಂ ತಳೆಯಲ್ ಪೆಱತಿಗುಂ ನೃಪಾಲಯಂ ೬೩೯

ನೋಡುವೊಡಿಲ್ಲ ತತ್ಪುರದೊಳೋದದ ಕೀರಕುಳಂ ನವಿಲ್ಗಳಿಂ
ದಾಡದನಂದನಂ ಸುೞಿವ ಹಂಸಗಳಿಲ್ಲದ ರಾಜಖೇಡಕಂ
ಪಾಡದ ಚಂಚರೀಕವನಮಿಲ್ಲದ ಮಲ್ಲಿಗೆ ಗಾಳಿಯಿಂದೆ ತೂ
ಗಾಡದ ಮಾಧವೀಲತೆಯ ಮಂಟಪಮಿಲ್ಲದ ಗೇಹಸಂಕುಳಂ ೬೪೦

ವಿಲಸತ್ಸೇವಾಪುರಂಧ್ರೀನಿಕರಚರಣಮಂಜೀರತನ್ಮುದ್ರಿಕಾಮಂ
ಜುಳನಾದಂ ರಾಜಪುತ್ರಪ್ರಕರಪರಿವೃತಾಶೇಷಗೀತಪ್ರಣಾದಂ
ಜಲಪಾನಾಸಕ್ತಮುಕ್ತದ್ವಿಪಕುಲನಿಕರವ್ರಾತಸಂಭೂತನೂತ್ನೋ
ಜ್ವಳನಾದಂ ಪೊಣ್ಮುತಿರ್ಕುಂ ನರಪತಿನುತಕವೀಂದ್ರಾಸ್ಯಸಂಪ್ರೋಕ್ತನಾದಂ ೬೪೧

---

¹ಪ್ರಲೋಭಮುಜಾಬಿಂದತ್ತೆ ಲಕ್ಷ್ಮಿ ಪೈಮುನತಿಯೆಂಬೊಡೆಯಾರತಿಗಿಲ್ಲಹೇಮ(ಸ)

ಪಲತೆಱದ ವೀಣೆಗಳುಮಂ
ಪಲತೆಱದಾಳಾಪದಿಂದೆ ಬಾಜಿಸೆ ಕರ್ಣಂ
ಗಳ್ಗೆ ಸೊಗಸುಗಳ ಬೀಱು
ತ್ತಿರ್ಪಗಷ್ಟರಿಯೆನಿಪ ಗಾಯಕರ್ ಮೆಱೆದಿರ್ಪರ್ ೬೪೨

ವೇದವನೋದೆ ಕೇಳಿದ ಪರೀಕ್ಷಕರಾಯೆನಲುತ್ತರಂಗಳಂ
ವೇದಿಪ ಶಬ್ದಶಾಸ್ತ್ರ[1]ದಳುಪಂ[1] ಪರಿಭಾವಿಸಿ ತರ್ಕತಂತ್ರದೊಳ್
ವಾದಿಸೆ ವಾದಮಂ ಗೆಲುವ ಸರ್ವಕಲಾಕುಶಲಾಗಮಜ್ಞರಂ
ಭೇದಿಸಿಯೊಳ್ ವಿಶೇಷಮೆನಲೊಪ್ಪುವರಾ ಪುರದೊಳ್ ನಿರಂತರಂ ೬೪೩

ಶರ್ವಾಣೀಶನ ಗೃಹಕೆ ಸು
ಪರ್ವೇಂದ್ರನ ಗೃಹಕೆ ಮೆಱೆಯದಾತ್ಮೀಯ ಕಳಾ
ಸರ್ವಜ್ಞತೆಯಂ ಮೆಱೆದಂ
ಗೀರ್ವಾಣಸ್ಥಪತಿ ನಿಮ್ಮ್ಯಗೃಹವಿರಚನೆಯೊಳ್ ೬೪೪

ಜನಪದಮುಂ ವನಾವಳಿಗಳುಂ ಬೆಳೆಗೆಯ್ಗಳುಮಾಳ್ಗೆ ಗೋಪುರಂ
ತೆನೆ ಜೆಳೆಗಾವ ಪಾಮರಿಯರುಂ ಪ್ರಪೆಯುಂ ಕೊಣಸಂ ಪುರೋಪಸಂ
ದನಪರಿಭಾವನಪ್ರತತಿಯಾಪಣ ಪಣ್ಯಕಾಗೃಹ ದೇವತಾ
ಜನಪಗೃಹಂಗಳುಂ ಪುರವರೋಚಿತವರ್ಣನಕಪ್ಪುದಾಸ್ಪದಂ ೬೪೫
(ಸೂಕ್ತಿಸುಧಾರ್ಣವಂ ೪-೨)

ಓರಂತೆ ಮೆಚ್ಚಿದಂ ಕೃತಿ
ಸಾರಂ ಪುರವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೬೪೬

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣ
ಸುಕವಿಪುಂಗವ ಮಲ್ಲಿನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಪುರವರ್ಣನಂ ಚತುರ್ಥಾಶ್ವಾಸಂ

---
[1] ದೊಳುಪಿಂ(ಸ)

# ನಾಯಕಾಭ್ಯುದಯವರ್ಣನಂ

ಮುನಿಸಿಂದಾಂತರನಿಕ್ಕಿ ಭೂಪಳಯಮಂ ನಿಷ್ಕಂಟಕಂ ಮಾಡಿ ಕೀ
ರ್ತಿನಿಜಾಜ್ಞಾಸಹಿತಂ ದಿಶಾವಳಿಯುಮಂ [೧]ತಳ್ತೊಪ್ಪಿ[೧] ಸಂಗೀತಮಂ
ಜನನಾಥಂ ಮುದದಿಂದಮೋಲಗದೊಳೆತ್ತಂ [೨]ಕೇಳ್ವುತಂ[೨] ತ್ಯಾಗವ
ರ್ಧನಮಂ ಮಾಳ್ಪುದು ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ೧
(ಸೂಕ್ತಿಸುಧಾರ್ಣವಂ ೫-೧)

ಗೆಲವಿಂ ಭೂಮಿಜೆ ಕೈಗೆ[೩]ವಂದುದೆ[೩] ಫಲಂ ರಾಮಂಗೆ ಮುಂಪ್ರೋದ ಭೂ
ತಳರಾಜ್ಯಂ ಕ್ರಮದಿಂದೆ [೪]ಬಂದುದೆ[೪] ಫಲಂ ಧರ್ಮಾತ್ಮಜಂಗಾರ್ಪಿನಿಂ
ಸಲೆ ರಾಗೋತ್ಸವಸಿದ್ಧಿ ಸಾರ್ವುದೆ ಫಲಂ ಶ್ರೀಖೇಚರಂ[೫]ಗಾ ತೆಜಂ[೫]
ಫಲಯೋಗಸ್ಥಿತಿ ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ೨
(ಸೂಕ್ತಿಸುಧಾರ್ಣವಂ ೫-೨)

ಸಿರಿವಕ್ಷೋರಂಗದೊಳ್ ನರ್ತಿಸೆ ವಿಜಯಭುಜಾಟೋಪದೊಳ್ ವಿಕ್ರಮಶ್ರೀ
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ ನೆಲಸೆ ತನ್ನಾಜ್ಞೆ [೬]ವಿದ್ವಿಷ್ಟ[೬] ಭೂಪಾ
ಲರ ಕೋಟೀರಂಗಳೊಳ್ ನರ್ತಿಸೆ ವಿ[೭]ಶದಯಶಂ[೭]ಪೆರ್ಜಿ ವಾರಾಶಿ[೮]ಯೇಱುಂ[೮]
ಬರವಾಳ್ದಂ ವಿಶ್ವಧಾತ್ರೀತಳಮನತಿಬಳಂ ರಾಯರೊಳ್ ಸೋಯಿದೇವಂ ೩
(ಮಂಡ್ಯ - ೭೭; ನಾಗಮಂಗಲ-೨೫ ; ಸೂಕ್ತಿಸುಧಾರ್ಣವಂ ೫-೬)

ತವಟಿನಳು [೯]ಕರ್ಣಯುಂ[೯] ಮೊಱೞಿನ ಜೋಟಿನ ಸಂದಲೆಯೊಂದೆ ಕೈಗೆ ವಂ
ದುದು ಕರಿಕೋಟಿ ಬಂದುದು ಹಯಾವಳಿ ಬಂದುದು ರತ್ನರಾಶಿ ಬಂ
ದುದು ಬಗೆದಂತೆ ಚೇರಮನ ಜೋಟಿನ ಪಾಂಡ್ಯನ[೧೦]ನಾಡೆ[೧೦]ಕ್ಕೈಗೆ ವಂ
ದುದು ಕಡಿತಕ್ಕಮುಂ[೧೧]ಡಿಗೆಗ[೧೧]ವೋಲೆಗವಿೀ ಶುಭತುಂಗದೇವನಾ ೪
(ಸೂಕ್ತಿಸುಧಾರ್ಣವಂ ೫-೭)

---

[೧]ತಳ್ತಪ್ಪಿ(ಸೂ) [೨]ಕೇಳ್ದುತಾಂ(ಸೂ) [೩]ವರ್ಪುದೆ(ಸೂ) [೪]ಬರ್ಪುದೆ(ಸೂ) [೫]ಗಂತಜಂ(ಸೂ) [೬]ದಿಗ್ವಿಷ್ಟ(ಸ) [೭]ವಿಷಯಮುಂ(ಸ) [೮]ಯಂತಂ(ಸ) [೯]ಕರ್ಣನಿಂ(ಸ) [೧೦]ಕ್ಕೈಗೆ(ಸ) [೧೧]ಜಯಕಂ(ಸ)

ರನ್ನದ ಕಂಭ ನೀಲಮಯ ಬೋದಿಗೆ ಪಚ್ಚೆಯ ಚೆಲ್ವದೂಲಗಳ್
ಚಿನ್ನದ ಮೇಲುಮುಚ್ಚಳ ಸುಮೌಕ್ತಿಕ ಲೋವೆಯ ಚುಂಚು ವಜ್ರದಿಂ
ಚೆನ್ನೆಸೆದೊಪ್ಪುತಿರ್ಪ ಕಲಶಂ ಮೃಗನಾಭಿಯ ಸುತ್ತುಭಿತ್ತಿ ಬಾ
ವನ್ನದಿನರ್ಥಿಯಿಂದೆ ಮೆಱೆಗುಂ ಧರಣೀಶನ ಮಂತಣಾಗೃಹಂ ೫

ಸ್ಫುರಿತ ಸ್ವರ್ಣವಿಚಿತ್ರ[1]ತುಂಗವಿಟಪಂ ರಮ್ಯೇಂದ್ರನೀಲಾಳಿ[1] ಪ
ಟ್ಚರಣಾಲಂಕೃತವೆಂಬ ಕಲ್ಪತರುವೃಂದಾರಾಮಮೀ ಬಂದುದು
ರ್ವರೆಗೆಂಬಂತೆ ಸುವರ್ಣವಸ್ತ್ರರಚನಾ ಕಿರ್ಮ್ಮೀರಿತಂ ಬಂದುದಂ
ಬರದಿಂ ಭೋಂಕನೆ ವಿಶ್ವಕರ್ಮರಚಿತಂ ದಿವ್ಯಂ ಮಹಾಮಂಟಪಂ ೬

(ಜಗನ್ನಾಥವಿಜಯಂ ೮-೧೧೧)

ಗಿರಿಗಳ ಮಧ್ಯದೊಳ್ ಪಸುನಗಂ ಖಗಮಧ್ಯದೊಳಂಡಜೇಶ್ವರಂ
ಕರಿಗಳ ಮಧ್ಯದೊಳ್ ದಿವಿಜಗಜಂ ಗೃಹಮಧ್ಯದೊಳರ್ಕಮಂಡಲಂ
ತರುಗಳ ಮಧ್ಯದೊಳ್ ಸುರಕುಜಂ ಹಯಮಧ್ಯದೊಳುಚ್ಚೈಯಿಶ್ರವಂ
ಪಿರಿದೆನಿಸಿರ್ಪವೊಲ್ ನೃಪಸಮೂಹದ ಮಧ್ಯದೊಳಿರ್ದನಾನೃಪಂ ೭

ಉದಯ ನಗೇಂದ್ರಮಂ ತರಣಿ ಬಾಲರಸಾಲಮನಿಂದ್ರಕೀರನು
ರ್ವಿದ ಕರುಮಾಡಮಂ ನವಿಲು ಸೈಕತದೊಟ್ಟಿಲ ರಾಜಹಂಸೆ ಕೊ
ರ್ವಿದ ಸುರಪಾದ್ರಿಯಂ ಶಶಿ ಶಿತಾಭ್ರಮ[2]ಮಂ ಕುಡಿಮಿಂಚು[2] ಸಾರ್ವವೊಲ್
ಮುದದಿ ಸಭಾನಿಕೇತನದೊಳೋಲಗದೊಳ್ ಕುಳಿತಂ ನರೇಶ್ವರಂ ೮

ಮೆಯ್ಗೆ ದುಕೂಲದಿಂ ಪಣೆಗೆ ಕತ್ತುರಿಯಿಂ ಕಿವಿಗಾವತಂಸದಿಂ
ಕಯ್ಗೆ ಕಡಂಗದಿಂ ಬೆರಳಿಗುಂಗುರದಿಂ ಕೊರಳಿಂಗೆ ಹಾರದಿಂ
ಮಯ್ಗೆ ಸುಗಂಧದಿಂ ಮುಡಿಗೆ ಪುಷ್ಪಗಳಿಂ ಚರಣಕ್ಕೆ ಪೆಂಡ್ಯದಿಂ
ಬಾಯ್ಗೆ ನಿವೀಳ್ಯದಿಂ ಪಡೆದ ಸಿಂಗರದಿಂ ಸಭೆಗೆಯ್ದಿದಂ ನೃಪಂ ೯

ಅಗಲಂಬೆತ್ತುರುವಕ್ಷದಿಂದುರುಲಸದ್ರಕ್ತಾಂಬುಜಾತಾಕ್ಷದಿಂ
ಪೊಗರಿಂ ರಂಜಿಪ ವಕ್ತ್ರದಿಂ ಮಹಿಮೆಯಂ ತಾಳ್ದೊಪ್ಪುವಾಜಾನುಬಾ
ಹುಗಳಿಂದುನ್ನತ ಕಂಠದಿಂ ಕರಿರಿಪೂ ಹೃನ್ಮಧ್ಯದಿಂ ನೋಟ್ಪರ
ಕ್ಕಿಗೆ ಚೆಲ್ವಂ ಕಱೆಯುತ್ತಿಳಾಧಿಪತಿತಾಂ ಬಂದಿರ್ದನಾಸ್ಥಾನದೊಳ್ ೧೦

---

[1] ರತ್ನಮಯಶಾಖಾಪಲ್ಲವೋತ್ಫುಲ್ಲ(ಅ)    [2] ದಂ ತಳೆವಂತೆ(ಸ)

ಅವನೀದೇವಸಮೂಹವೇದನಿನದಂ ಮಾಂಗಲ್ಯಗೀತಾಸ್ಮಿತೋ
ತ್ಸವತೂರ್ಯಧ್ವನಿ ವಂದಿವೃಂದಜಯಜಯಾನಂದನಾದಂ [1]ಸುಹೃ
ನ್ನಿವಹಾಶೀ[1]ರವಮೊಂದನೊಂದು ಗೆಲವಂಪೆರ್ಚಿಕ್ಕೆಯಿಂ[2]ದುರ್ವಿ[2] ಪ
ರ್ವವಿನಂ ಘೂರ್ಣಿಸುತಿರ್ದುದೀ ನೃಪಗೃಹಂ ಕ್ಷುಭ್ಯತ್ಸುಧಾಂಭೋಧಿಯೋಲ್

(ಜಗನ್ನಾಥವಿಜಯಂ ೧೫-೬೮)

ಪರಿಕರಿಸಿರೆಯುಂ ಕರ್ಪೂ
ರರಜಂ ಕುಂಕುಮರಜಂ ಮಗೋದ್ಭವರಜಮೇಂ
ತೆರೆತೆರೆಗೊಂಡವೋಲಾ ಚಾ
ಮರ ಮರುದಾಹತಿಯಿನಂದೆ ಸಭಾಕುಟ್ಟಿಮದೊಳ್ ೧೨

ಕೆದ[3]ಱಿರ್ದು[3]ತ್ತಮಪುಷ್ಪಪುಂಜ ಘುಸೃಣಂ ಚೆಲ್ಲಿರ್ದ ಕಸ್ತೂರಿ ಸೂ
ಸಿದ ಶ್ರೀಖಂಡಯುತ ಕರ್ಪೂರರಜಂ ನೆಗೆದ ಧೂಪೋ[4]ದ್ಧೂತ[4]ಧೂಮಂ ಸಘೂ
ರ್ಣದನಾಂಭೋರುಹಗಂಧಮುಂ ಕದಡುವೃಪ್ಯತ್ ಚಾಮರೌಘಾನಿಲಂ
ಮುದಮಂ ಮಾಡೆ ಸರಾಜಲೋಕಸಭೆ ಚೆಲ್ವಾಗಿರ್ದುದಬ್ಜಾಕ್ಷನಾ ೧೩

(ಜಗನ್ನಾಥವಿಜಯಂ ೧೨-೧೬)

ನತನಾನಾಮರಮೌಳಿರತ್ನಕಿರಣಂ ನಾನಾಪ್ಸರೀ ಕೇಕರ
ದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ಪೊಯ್ಯುತಿರ್ದಂ ಜಗ
ತ್ಪತಿಯೊಡ್ಡೋಲಗದೊಳ್ ಚತುರ್ಮುಖಸತರ್ಕ್ಯಂ ಬ್ರಹ್ಮತೇಜಃಶಿಖಂ
ಪ್ರತಿಗಾಸ್ತೈಕಸುಖಂ ಸಮುತ್ಕೃತಮುಖಂ ವಾಣೀವಧೂಟೀಸಖಂ ೧೪

ನಿಮಿರ್ದೊಳ್ಗಣ್ಗೊಂಬಿನಿಂ ಕುರುಳ್ದುಱುಗಲಿಂ ವಕ್ಷೋಜದಿಂ ವಕ್ತ್ರವಿ
ಭ್ರಮದಿಂ ಕೆಂದಳದಿಂ ಸ್ಮಿತೋತ್ಪಳಮಯಂ ಭೃಂಗೀಮಯಂ ಚಕ್ರವಾ
ಕಮಯಂ ಚಂದ್ರಮಯಂ ಪ್ರವಾಳಮಯಮಾಯ್ತೋಲೋಕಮೆಂಬಂತದೇಂ
ಸಮಸಂದಿರ್ದುದೊ ಬಂದು ಗೊಂದಣಿಸಿ ತದಾತ್ರಜನ್ಯಕಾಂತಾಜನಂ ೧೫

(ಪುಷ್ಪದಂತಪುರಾಣಂ ೧೨-೧೦೬)

ನಿರುಪಮ ರೂಪಮಪ್ರತಿಮ ಯವ್ವನಮೂರ್ಜಿತವಿಭ್ರಮಂ ಮನೋ
ಹರದರಹಾಸಮುತ್ಕಟಕಟಾಕ್ಷ[5]ನಿರೀಕ್ಷಣಕಾಂತಿ ಮಂಗಳಾ[5]
ಭರಣಮೊಡರ್ಚೆ ಕಂತುಭುಜಶಕ್ತಿಯೆ ಕಾಂತೆಯರಾಗಿ ನಿಂದವೋಲ್
ಸರಸಿಜನಾಭನೋಲಗದೊಳಿರ್ದುದು ವಾರವಿಲಾಸಿನೀಜನಂ ೧೬

(ಜಗನ್ನಾಥವಿಜಯಂ ೧೧-೬೫)

---

[1] ಸಮುಂಪ್ಘವಹಾಶೀ(ಸ) [2] ಪೌರ್ವಿ(ಸ) [3] ರುತ್ತ(ಸ) [4] ದ್ಘಾನ(ಅ) [5] ನಿರಾಕರಂತಂ ತಿಮಿಂಗಿಳಾ(ಸ)

ಮುಗುಳ್ನಗೆ ಚೆಲ್ಲನೋಟ ಸವಿಮಾತು ಬೆಡಂಗಿನ ಬಿಂಕಬಿನ್ನಣಂ
ಬಿಗುಹಿನ ಜೇಟವಲಿದುಬ್ಬುವ ಪ್ಪೌಸಿರಿ ಮೇಕು ಜೋಕೆ ಕೊ
ರುಗುರಿನ ಕೂರ್ಪುನೇರ್ಪು ಬೆಡಗೊಂದಿದ ಮೆಲ್ನುಡಿ ಜಾತಿನೀತಿ ಜಾ
ಣ್ಮೆಗೆ ಮೊದಲಪ್ಪ ಪಣ್ಯಸತಿಯರ್ಕಳಿನೊಪ್ಪುಗು ಭೂಪನೋಲಗಂ ೧೭

ಕೊಂಕಿದ ಪುರ್ಬುಂ ತೆಳ್ವಸಿ
ಱುಂ ಕೋಮಲತನುವುಮೆಸೆಯೆ ನಡೆತಂದುದು ಜೆ
ಲ್ವಿಂ ಕದಳೀಪತ್ರದ ದೂ
ರ್ವಾಂಕುರದೆಳೆವಿದಿರ ಬಣ್ಣದಬಲಾನೀಕಂ ೧೮

(ಜಗನ್ನಾಥವಿಜಯಂ ೪-೧೧೬)

ವದನೇಂದುವ ಕಾಂತಿ ಕಟಾ
ಕ್ಷದ ರುಚಿ ದರಹಾಸದಂಶು ತಳ್ತಿರೆ ನಡೆತಂ
ದುದು ಹಂಸಯಾನದಿಭಯಾ
ನದ ಮಂದರಯಾನದಂಗನಾ ನಿಕುರುಂಬಂ ೧೯

(ಜಗನ್ನಾಥವಿಜಯಂ ೪-೧೧೭)

ಕಣ್ದಾವರೆಗಳ ಪೊಳೆವುಗ
ಳಿಣ್ದೆಸೆಯುಂ ಪುದಿಯೆ ಬಂದುವತಿಸ್ಮಿತಗತಿಯಿಂ
ಪೂಣ್ದೆಸೆವ ತೋರತೊಡೆಗಳ
ನುಣ್ದೊಡೆಗಳ ಬಟ್ಟಿಮೊಡೆಗಳಬಲಾನೀಕಂ ೨೦

ನಡು ಸೆಡೆಯೆ ಪೊಳೆಯೆ ಕಣ್ಗಳ್
ಪೊಡರೆ ಕುಚಂ ಮಿಳಿರೆ ಮೇಲುದೆಸೆಯೆ ವಿಲಾಸಂ
ನಡೆದರ್ ಕೇಸಡಿಗಳ ತಳಿ
ರಡಿಗಳ ಮೆಲ್ಲಡಿಗಳತನುಶರಸನ್ನಿಭೆಯರ್ ೨೧

ಉಡಿನೂಲು ಸಡಿಲೆ ಮೆಲ್ಲುಲಿ
ಪೊಡರೆ ನಿಜಾವಯವದ ಶೋಭೆ ರಂಜಿಸೆ ಬಂದರ್
ಗಡಣದಿ ನಲ್ನಡುವಿನ ಬಡ
ನಡುವಿನ ಸೆಳೆನಡುವಿನಸಿಯನಡುವಿನ ಸತಿಯರ್ ೨೨

ಲಲಿತ ನಿಜರೂಪು ವಿಭ್ರಮ
ವಿಲಾಸಮನುಮಿರ್ದೆಸೆಯೆ ಬಂದರಾಮಳಕಕುಚಂ
ಗಳ ನಾರಂಗಕುಚಂಗಳ
ನಳಿನೀಕುಟ್ಮಳಕುಚಂಗಳೆಳೆಜವ್ವನೆಯರ್ ೨೩

ಅವಯವದ ಚೆಲ್ವನುಂ ತ
ನ್ನವಯವದಿಂ ಗೆಲೆ ವಿಲಾಸಮುಮರಿಯದ ವಿಲಾ
ಸವನಿೞಿಸಲ್ ಬಂದರ್
ಪವಳಾವಳಿವಾಯ್ ತಳಿರ್ವಾಯ್ ತೊಂಡೆವಾಯೆಳವೆಂಗಳ್ ೨೪

ಜಗುಳೆ ಕಳಕಾಂಚಿಹಾರಮು
ನುಗುಳೆ ಕುಚಂ ನೆಗೞೆ ನೂಪುರಧ್ವನಿ ರೂಪಂ
ಪೊಗೞೆ ಜನರ್ ವಂದು ಬಂದರ್
ನಗೆಮೊಗದುಡುಮೊಗದ ಮುದ್ದುಮೊಗದಂಗನೆಯರ್ ೨೫

ಲಲಿತಾಕಾರಂ ವಿಭವಂ
ಬೆಳಗುವ ಲಾವಣ್ಯಮೆಸೆಯೆ ಬಂದರ್ ನಗೆಗಂ
ಗಳ ಚೆಲ್ಲಿಗಂಗಳಲರ್ಗಂ
ಗಳ ನಿಡುಗಂಗಳ ಬೆಡಂಗಿಯರ್ ಕೋಮಲೆಯರ್ ೨೬

ದೊರೆಯಾರೊ ಚೆಲ್ವಿನಿಂದ
ಜ್ಜರಸಿಂಪುರಕೆಯುದೊಳೆಸಿಸಿ ಮೆಱೆವರ್ ಸುಕ್ಕುಂ
ಗುರುಳ ಸುಳಿಗುರುಳ ನಿರಿಗುರು
ಳುರುಳಿಗುರುಳ್ತುಂಬಿಗುರುಳ ನಾರಿಯರೆಸೆದರ್ ೨೭

ಸುರಚಿರ ರತ್ನಾಭರಣಾಂ
ಬರನಾರೀರಚಿತ ರಾಸಮಂಡಲಬದ್ಧಾಂ
ತರವರ್ತಿನೃಪತಿ ಚಂದ್ರಂ
ಪರಿವೇಷಂಗೊಂಡ ಚಂದ್ರನಂತೆಸೆದಿರ್ದಂ ೨೮

ಸ್ಫುರಕರಡಿಂಡಿಮಸ್ವನಮನೇಳಿಸೆ ಕಂಕಣಕಿಂಕಿಣೀಸ್ವನಂ
ಸರಸಲತಾತ್ರಿಭಂಗಿಯುಮನದಿರ್ಪೆ ನಿಜಾಂಗಲತಾತ್ರಿಭಂಗಿ ಚಾ
ಮರರುಚಿಯಂ ಕಟಾಕ್ಷರುಚಿ ಮೇಳಿಸೆ ಚಾಮರಮಿಕ್ಕುವರ್ ಪಯೋ
ಧರವತಿಯರ್ ಸುರಾಜನಮೊಳ್ ಸುೞಿದಾಡುತಿಹಂಚೆವಿಂಡೆನಲ್ ೨೯

ಭಟರಿಂ ರಾವುತವರ್ಗದಿಂ ಸುಜನರಿಂ ವಿದ್ವಾಂಸರಿಂ ವಿಪ್ರರಿಂ
ನಟರಿಂ ಗಾಯಕಭಟ್ಟರಿಂ ಪಿರಿಯರಿಂ ದೈವಜ್ಞರಿಂ ವೀರರಿಂ
ವಿಟರಿಂ ಗಾಣಿಕೆಯರ್ಕಳಿಂ ಕವಿಗಳಿಂ ನಾನಾಪರೀಚಾರರಿಂ
ಪಟುವಾಗಿರ್ದುದು ಭೂಪನೋಲಗಮದೇಂ ನಾನಾವಿಚಿತ್ರಾರ್ಥದಿಂ ೩೦

ವಾರಸ್ತ್ರೀನಿಕುರುಂಬದಿಂ ಮಕುಟವರ್ಧರಿಂಪತಿಪ್ರೌಷರಿಂ(?)
ಪೂರರ್ ಕೋವಿದರಿಂ ಕಳಾನಿಳಯರಿಂ ಸಾಮಂತರಿಂ ಗಾನರಿಂ
ಧೀರರ್ ಭೂಪಕುಮಾರರಿಂ ಸುಭಟರಿಂ ಸಪ್ತಾಂಗವಿಪ್ರರ್ಕಳಿಂ
ಪೋರಂತಿರ್ದುದು ಭೂಪನೋಲಗಮಮೇಂ ಕಲ್ಯಾಣಮುಲ್ಲಾಸಿತಂ ೩೧

ಪಾಡುವರೊಂದು ದಿಕ್ಕು ಪರಿಹಾಸಕರೊಂದೆಸೆ ಬೀರನೆತ್ತಿಕೊಂ
ಡಾಡುವರೊಂದು ಮೂಲೆ ಇತಿಹಾಸಕರೊಂದೆಡೆ ಭಾವಚಿತ್ರದಿಂ
ದಾಡುವರೊಂದು ತಾಣೆ ಪಶರೀತಿಯ ವಿಭ್ರಮ ಹಾವಭಾವದಿಂ
ನೋಡುವರೊಂದು ಪಂಕ್ತಿಯೊಳೆ ಕಣ್ಗೆಸೆದಿರ್ದುದು ಭೂಪನೋಲಗಂ ೩೨

ಮಂತ್ರಿ ನಿಯೋಗಿ ಮಾಪ್ರತ ಭಟೋತ್ಕರ ಜ್ಯೋತಿಷ ವೈದ್ಯ ವಾದ್ಯಕರ್
ತಂತ್ರಿಗರಾಪ್ತಬಂಧುಗಳು ಕಾವ್ಯಪುರಾಣಿಕ ಸತ್ಕವೀಶ್ವರರ್
ಮಂತ್ರದರರ್ಥದಾಯಕ ವಿಲಾಸಿನಿಯರ್ಕಳು ಗಾನರೋದುವರ್
ಜಂತ್ರದರೂಳಿಗರ್ ಕರಣಿಕರ್ಕಳಿನೊಪ್ಪುಗು ಭೂಪನೋಲಗಂ ೩೩

ಕರಿಮಲ್ಲರ್ ಮಹಿಷೇಭಮೇಷಖಗಯುದ್ಧಂಗೆಯ್ವ ಸಂಗೀತಮಂ
ತುರು ಸಾಹಿತ್ಯವ ನೃತ್ಯಮಂ ಕವಿಗಳೋದಂ ಕೇಳ್ವ ನೆತ್ತಂಗಳಂ
ಪರಿಭೂಪಾಲರೊಳಾಡುತಿರ್ಪ ಬಹುರಾಜ್ಯಾರ್ಥಿಕೆಯುಂ ಮಂತ್ರಿಯೊಳ್
ನಿರುತಂ ಪೇಳುತಲಿರ್ಪರಾಗಳೊಲವಿಂ ರಾಜೇಂದ್ರನಾಸ್ಥಾನದೊಳ್ ೩೪

ವರವಿದ್ವಾಂಸರ ಶಬ್ದದಿಂ ಕವಿಗಳೋದಿಂ ಭಟ್ಟಕೈವಾರದಿಂ
ದುರು ಸಂಗೀತದ ಗಾನದಿಂ ಪರಿಹಸಂಗೆಯ್ವರ್ಕಳೊಂದಬ್ಬಿಯಿಂ
ತರದಿಂದಂದಿತಿಹಾಸದೊಳ್ಕಥೆಗಳಿಂ ಪೌರಾಣಿಕರ್ ಘೋಷೆಯಿಂ
ಧರಣೀಪಾಲಕನೊಪ್ಪವೋಲಗಸಭಾಸಪ್ತಾಂಗಮಾಗೊಪ್ಪುಗುಂ ೩೫

ನೀತಿಯಿ ರೂಪುಗೊಂಡ ತೇಜದಿಂ ನೆಲಸಿರ್ಪ ಮಹಾಪ್ರಧಾನರಿಂ
ಮಾತಿನ ಬಲ್ಮೆಯಿಂ ಸಭೆಗೆ ರಂಜಿಪ ವಾಗ್ಮಿಗಳಿಂ ಪ್ರಬಂಧದಿಂ
ಪ್ರೀತಿಯನೀವ ಸತ್ಕವಿಗಳಿಂ ಗಣಿಕಾಗಣದಿಂ ಪ್ರಭೂತಮಾಂ
ಧಾತನ [೧]ಶ್ರೀವಿಯಂತಿಳಿಗೆ[೧] ವಕ್ಷಿಣಪರ್ತಿಯ [೨]ರಾಜ್ಯಮೊಪ್ಪುಗುಂ[೨]

(ಸೂಕ್ತಿಸುಧಾರ್ಣವಂ ೫-೨೧)

---

[೧] ರಾಜ್ಯದಂತಿಳಿಗೆ(ಸೂ) [೨] ಚೆಲ್ವಿನೋಲಗಂ(ಸ)

ಭಾವರಸಂಗಳಂ ಮೆಱೆವ ಸತ್ಕವಿ ಸಂಕುಲಗೋಷ್ಠಿಯಲ್ಲಿ ರ
ತ್ನಾವಳಿ ಸರ್ವರಾಗರಸಸಂಭೃತ ಗಾಯಕಸಂಘದಲ್ಲಿ ರ
ತ್ನಾವಳಿ ವಾಜಿವಾರಣವಿನೋದವಿಲಾಸವಿಶೇಷದಲ್ಲಿ ರ
ತ್ನಾವಳಿ ವತ್ಸಭೂಪತಿಗದೇನೆಸೆದಿರ್ದುದೊ ಭೋಗಸಂಪದಂ ೩೭
(ಸೂಕ್ತಿಸುಧಾರ್ಣವಂ ೫-೨೨)

ಚಾರಿಸಿ ಚಾಮರಾದಿಗಳನಿಕ್ಕಿದ ಗದ್ದುಗೆಯೊಳ್ ಮಹಾಪ್ರತೀ
ಹಾರದ ಪೞ್ಕಿಯಿಂದೆಳಸಿ ಮತ್ತಮವರ್ ಪೆಸರ್ಗೊಂಡು ಪೋಗವೇ
ೞ್ದಿರವಗೇೞ್ದ ಮನ್ನೆಯರ ಮಂಡಳಿಕರ್ಕಳ ಭೂಷಣಾಂಶು ವಿ
ಸ್ತಾರದಿನೆತ್ತಲುಂ ಪರೆವಿನಂ ಪರೆಗುಂ ಧರಣೀಶನೋಲಗಂ ೩೮

ಅಱುಚದೆ ಪೋ ಮಾರೆಂಬೆಡೆ
ಯುಱುದಿರಿಸೆಂಬೇಱಲಿಕ್ಕಿಮೆಂಬೀಯೆಡೆಯಂ
ಪೆಱಸಾರೆಂಬಗ್ಗದ ಪಡಿ
ಯಱರ ರವಂ ನೆಗೞ್ದುದಾ ಮಹಾಸಾಯಿಕೆಯೊಳ್ ೩೯

ಇರದೊಗೆದುದಲ್ಲಿ ಸೂಳಾ
ಯ್ತುರ ಕಳಕಳವಜ್ಜುಳಾಯಿತರ ವೇತ್ರದಗಾ
ಯ್ತುರ ಘನಘರ್ಜನೆ ಕೆಳಲಾ
ಯ್ತುರ ಬಹಳಧ್ವಾನವಾ ಸಭಾಭ್ಯಂತರದೊಳ್ ೪೦

ಸುಡಿಯದಿರಿಂದ್ರ ಕೈಮುಗಿ ಕಳಿಂಗ ಕುಸಂಗೆಲೆವಂಗ ಕೇರಳಂ
ಗೆಡೆಗೊಂಡು ಚೋಟಿ ಲಾಳ ಪೆಱಸಾರ್ ಪುಗದಿರ್ ಮಗಧೇಶ ಕಾಣ್ಕೆಯಂ
ಪಿಡಿದಿರು ಪಾಂಡ್ಯ ಬಿನ್ನವಿಸು ಮಾಳವ ಗೌಳನೆ ಒಂಗೆನುತ್ತಣಂ
ಜಡಿವರಿಳೇಶರಂ ಪಡಿಯಱರ್ ಗಿರಿರಾಜಸಭಾಂತರಾಳದೊಳ್ ೪೧

ಎಡೆಗೊಡು ಚೋಟಿ ಪಾಂಡ್ಯ ತೊಲಸೊಯ್ಯನೆ ಕುಳ್ಳಿರು ಗೌಳ ಕಾಣ್ಕೆಯಂ
ಪಿಡಿ ಮಗಧಾಧಿನಾಥ ಹೆಸರೊಪ್ಪಿಸು ಗುಜ್ಜರ ಪಟ್ಟದಾನೆಯಂ
ತಡೆಯದೆ ತಂದು ಕೋಱು ನಡೆ ಮಾಳವ ಹೋ ತೊಲಗೆಂದು ರಾಯರಂ
ಪಡಿಯಱರೊತ್ತಿ ಚಪ್ಪರಿಪರೋಲಗದೊಳ್ ಕಲಿನಾರಸಿಂಹನಾ ೪೨

ಕೆಲಸಾರ್ ಕೇರಳ ಚೋಟಿ ಕುಳ್ಳಿರು ಕುರುಕ್ಷೋಣೀಶ ಹಿಮ್ಮೆಟ್ಟು ಸಾ
ರೆಲವೋ ವಂಗ ಕಳಿಂಗ ಬಾ ಮಗಧ ನೀನೇಱಿತೇಱು ಭೋಜೇಂದ್ರನಾ
ಬಲದೊಳ್ ತಾವಿದೆ ನೋಡು ಪಾಂಡ್ಯ ಸರಿ ಹೋ ಸಾರಯ್ಯ ಸಾಮಂತಯೆಂ
ದುಲಿವಾ ಕಂಚುಕಿವೃಂದದಿಂದೆಸೆದುದೀ ಭೂಪಾಲನೊಡ್ಡೋಲಗಂ ೪೩

ಉಂಟು [1]ಭುಜಾಬಲಂ[1]ಪಿರಿದು ಚಾಗವ[2]ಸಂಪದ[2]ಮೇಲು[3]ಮುಬ್ಬಿಯುಂ[3]
ದಾಂಟಿದುದಾತ್ತಕೀರ್ತಿ ಕ[4]ಡೆ[4]ಯೊಳ್ ಬಿನದಂ ತನಗೆಂದು ನಿಚ್ಚಲುಂ
ಕಂಟಕಿತಾಂಗನಾದ[5]ಪುದು[5] ಪಂಡಿತಮಂಡಳಿ ರಾಜ್ಯಮಂತೆ ನಿ
ಷ್ಕಂಟಕಮೆಂಬಿನಂ ಪಡೆದನಚ್ಚರಿಯುಂ ನೃಪ[6]ನೀಂ ವಿದಗ್ಧನೋ[6] ೪೪

ಕುಚಭಾರಾಲಸಗಾಮಿನೀಪರಿವೃತಂ ಗಂಗಾತರಂಗೋಪಮಾ
ನಚಳಚ್ಚಾಮರವಾತಶೀತ ನಿಜಸರ್ವಾಂಭಃಕಣಂ ದ್ರೌಪದೀ
ಕುಚಕುಂಭಾರ್ಪಿತ ಕುಂಕುಮದ್ರವವಿಲಿಪ್ತೋರಸ್ಥಳಂ ದಾಂಟೆ ಕೀ
ರ್ತಿ ಚತುರ್ವಾರ್ಧಿಯನಿರ್ದನಂದು ಸುಖದಿಂ ವಿದ್ವಿಷ್ಟವಿದ್ರಾವಿಣಂ ೪೫
(ಪಂಪಭಾರತಂ ೩-೭೫)

ರಿಪುಭೂಪವ್ರಾತನಾನಾಮಕುಟರುಚಿರವಿಭ್ರಾಜಿತಾಂಘ್ರಿದ್ವಯಂ ದಿ
ಗ್ವ್ಯಾಪ್ತಸತ್ವಂ ಮೇರುಶೈಲೋಪಮಭುಜಶಿಖರಂ ಗೋತ್ರಭೃತ್ಸಾಮ್ಯಕಲ್ಯಾ
ಣಪರಂ ಸರ್ವಾವನೀಮಂಡಲಪತಿ ಸಮರಾರಂಭಕಾಮಾರಿ ತತ್ಪ
ಪ್ಪಪ್ರೇಶಂ ರಾಜಹಂಸಂ ಭುವನವಿಷಯಕಾಂತಾಮನೋಜೀವಿತೇಶಂ ೪೬

ಸಕಲಧರಾಧಿನಾಥನವರತ್ನಕಿರೀಟವಿರಾಜಿತಾಂಘ್ರಿಪ
ದ್ಮಕನತಿಮಿತ್ರರಾಜರಮಣೀಯಫಲಪ್ರದಮರ್ತ್ಯಪಾರಿಜಾ
ತಕನಭಿಯಾತಿಭೂಪಗಜವಾಜಿರಥಾಪ್ತಪದಾತಿದರ್ಪಭಂ
ಜಕನೆನಲೊಪ್ಪುವಂ ಭುವನವಲ್ಲಭನುಗ್ರವಿರೋಧಿದುರ್ಲಭಂ ೪೭

ಅತಿಶಯ ಶುಕ್ಲಪಕ್ಷಶುಭದಂ ಬಹುಲಕ್ಷಣವಂಚಿತಂ ಸದಾ
ರತಿಪರತತ್ತ್ವಸಾರವರದಂ ಸಕಲಾಪ್ತವಾಂಛಿತಾಸ್ಪದಂ
ನುತಸುಖಚಾರಸಂಮದಕರಂ ಮಹಿಮಾನವಪುಷ್ಪದಂ ಮಹಾ
ವ್ರತಿ ಗುಣಿ ಚಂದ್ರಶೇಖರನೃಪಂ ಮಧುಮಾಧವರಂತೆ ಮೋಹಿಪಂ ೪೮

ನೆಱೆವಾ ಸಿಂಹಾಸನಸ್ಥಾನದೊಳೆ ಕಿಱುತನಂದಿಂದೆ ತಾನೊಂದನೆಂದುಂ
ಮಱೆದುಂ ಸೇರ್ಗ್ಗೆಯ್ಯನೋಸಂಬುಗದನುಲಮತಿಸ್ಫಾರಮಾರ್ಗ್ಗುಂಟುವಾಹಾ
ನೆಱೆ ಕಜ್ಜಂ ಕೋಟಿಬಂದಿರ್ದೊಡದನೆ ಪೆಱರಿಂ ಕೇಳದೊಲ್ ಮಾಳ್ಪ ಬಿಂಕಂ
ಮಿಱುಪಾತಂಗಲ್ಲದುಂಟೆ ತ್ರಿಜಗದೊಳೆನಲೊಪ್ಪಿರ್ದನಾ ಮೇದಿನೀಶಂ ೪೯

---

[1]ಭುಜೋಜ್ವಲಂ(ಸ) [2]ಸಂಪ್ರುಟ(ಸ) [3]ಪಾರ್ಥಿಯುಂ(ಸೂ) [4]ಳೆ(ಸೂ) [5]ಮಘು(ಸ)
[6]ನೀತನೊಚ್ಚತಂ(ಸೂ)

ಮಾಡಿದ ತಂತ್ರಪ್ರದೀಟಿಕ್ಕೆಗಳನಾಲಿಸೆ ಕರ್ಣವು ಸಾಲವಾರ್ಪಿನಿಂ
ಕೂಡಿದ ಚಾರುನಿತ್ಯಬಲದಂಗಮನಾರಯೆ ಭಾವವೆಯ್ದದಾ
ಜೋಡಿಸಿದತ್ಯಪೂರ್ವಪರವಸ್ತುವನಿಟ್ಟಿಸೆ ಕಣ್ಗಳೆಯ್ದವಾ
ರೂಢಿಯ ಚಂದ್ರಶೇಖರನೃಪಾಲನ ರಾಜ್ಯತೆ ರಾಜ್ಯಕಚ್ಛತಂ ೫೦

ಆತನ ರಾಜಮಂದಿರದ ದೂರದ ಬಾಗಿಲನೊಲ್ದು ಕಾವನಾ
ಮಾತನೆ ಶೇಷನಾಲಿಸುತ ಸೊಲ್ತವನಂತಿರದೊಪ್ಪೆನೆಂದು ತಾ
ನಾ ತಳಗಂಹರಕ್ಕಿಟಿಱದು ಗಾಳಿಯನಾಹುತಿಗೊಂಡು ತಾಪಸ
ಪ್ರೀತಿಯೊಳಿನ್ನುಮಿರ್ದಪನೆನಲ್ಕಿಡು ರಾಯನ ಜಾಣ್ಮೆಯೆಂತುಟೋ ೫೧

ಸೊಕ್ಕಿದ ಶತ್ರುವಂ ಸುಗಿದು ಕಂಧರಮಂ ಕಡಿಗೊಳ್ವ ವೈರಿಯಂ
ಸಿಕ್ಕನೆ ಸೀಳ್ದುಮೆಚ್ಚು ಕೊಲಬಂದರಿದೇಹವನಾರ್ಗೆಕಾಣದಂ
ತಿಕ್ಕಿ ಕಡಂಗಿ ಕಟ್ಟಿಲೆಯ ಮೆಯ್ಯೊಳೆ ಬಂದುರು ಕೊಲ್ವಮಿತ್ರನಂ
ಸಿಕ್ಕಿಸಿ ಚಂದ್ರಶೇಖರನೃಪಂ ಪರಿಪಾಲಿಪ ತನ್ನ ರಾಜ್ಯಮಂ ೫೨

ರಾಜ್ಯದೊಳಿಲ್ಲ ದ್ವಿತಯಂ
ಪೂಜ್ಯತ್ವದೊಳಸಮನಪ್ರಮಾಣಂ ತಂತ್ರದೊಳ್
ರಾಜ್ಯದ ದಮನದೊಳಭಯಂ
ಪ್ರಾಜ್ಯತ್ವದೊಳೆಲ್ಲನಾಮಯಂ ವಸುಧೇಶಂ ೫೩

ಜಸಮಿಳೆಯೆಲ್ಲಮಂ ಬಳಸೆ ಬಲ್ಪು ನೆಗಟಿತ್ತಯ ಬೀರಮಂ ಝಳ
ಪ್ಪಿಸೆ ಕಡುನನ್ನಿ ಬಂದು ಶರಣೆಂದವನಂ ತಲೆಗಾಯೆ ಭೋಗದೊಂ
ದೆಸಕವಲಂಪಿನಿಂದೆರೆವರಂ ತಣಿಪುತ್ತಿರೆ ತಕ್ಕರೊಲ್ದು ಬ
ಣ್ಣಿಸೆ ನೆಲದಾಣ್ಮನೆಯ್ದೆ ನೆಲನಂ ಬಲದೋಳ್ದಲೆಯಲ್ಲಿ ತಾಳಿದಂ ೫೪

ನುಡಿಸಲೆ ನನ್ನಿಗಿಕ್ಕೆವನೆಯಾದುದು ಜವ್ವನೆ ಬಂದಸಿಲ್ಗೆ ಕ(?)
ನ್ನಡಿಯೆನಿಸಿತ್ತು ಸೊಂಪು ಪಿರಿಯರ್ಗೆಡೆಗೊಟ್ಟುದು ಗಾಡಿ ರೂಢಿಯಂ
ಪಡೆದುದು ಬೀರಮುಗ್ಗಡದ ಸ್ಕೈರಣೆಗಾಗರಮಾಯ್ತು ನೋಟಿಱ್ಪೊಡೆಂ
ಪಡಿಗಡಿಗೊಲ್ದು ಬಣ್ಣಿಸುವುದಾ ನೆಲದಾಣ್ಮನನಾವಗಂ ನೆಲಂ ೫೫

ಪಗೆಗಳುಮಂ ಪೆಂಡಿರುಮಂ
ಮಿಗೆ ಸೋಲಿಪುದವನ ಗಾಡಿಯುಂ ಬೀರಮುಸುಂ ಪೆಱಂ
ದೊಗೆದರಸುವಕ್ಕಳುರೆ ಬಾ
ಳ್ದಿಗೆದಾರ್ ಬಾಳ್ವಪ್ಪರಾವರಿದಿರೊಳ್ ಪಗೆವರ್ ೫೬

ಪಡಿಮೊಗದೊಗಲೊಡಂ ಕ
ನ್ನಡಿಯಂ ನೋಟ್ಪವರ ತೆಱದಿ ಪೆಯ್ಗುಂದುವರು
ಗ್ಗಡದ ಭೂಪಾಲರೆಂದೆನೆ
ಪೊಡವಿಯೊಳೀತಂಗೆ ನೋಡೆ ಸರಿದೊರೆಯಾವಂ ೫೭

ಪರಭೂಪಾಲವಿಶಾಲಮೌಳಿಮಣಿಸಂಘಾತಪ್ರಭಾಪುಂಜವಿ
ಸ್ಫುರಪಾದಂ ನತಸರ್ವಲೋಕನಭಯಂ ತೀವ್ರಪ್ರತಾಪಂ ಮಹೀ
ಧರರಾಜಂ ಮಹಿಮಾಂಬುರಾಶಿಯಚಲಂ ಭರ್ಗಪ್ರಿಯಂ ಭೋಗಭಾ
ಸುರನುದ್ದಾಮಗುಣಂ ಪ್ರಚಂಡಭುಜನಿಂತೊಪ್ಪಿರ್ಪನುರ್ವೀಧರಂ ೫೮

ಎಱಗದ ಭೂಪರಿಲ್ಲ ಬೆಸಕಪ್ಪದ ರಾಜಕುಮಾರರಿಲ್ಲ ಕೂ
ರ್ತಱಯದ ಪೆಣ್ಗಳಿಲ್ಲ ತಲೆವಾಗದ ಚಾಗಿಗಳಿಲ್ಲ ತಳ್ತು ಕು
ಕ್ಕಱಸದ ವೀರರಿಲ್ಲ ನತರಾಗದ ಬಲ್ಲಿದರಿಲ್ಲ ಕೀರ್ತಿಯಿಂ
ತುಱುಗದ ದಿಕ್ಪ್ರತಾನಮಣಮಿಲ್ಲ[1] ದಿಟಂ ಗಿರಿಯೂಥನಾಥನೊಳ್ ೫೯

(ಗಿರಿಜಾಕಲ್ಯಾಣಂ ೨–೧೦೪)

ಅನ್ಯಾಯಮುಂಟೆಯಾ ನೃಪನ ದೇಶದೊಳಿಲ್ಲ ಸುಮಾರ್ಗವೃತ್ತಿಯೊಳ್
ಮನ್ನಣೆಯುಂಟೆಪ್ಪುಂಟುಮವಿಚಾರವನೀತಿಗಳುಂಟೆಯಿಲ್ಲ ಸಂ
ಪನ್ನರು ಸತ್ಕಲಾವಿದರ ಗೋಷ್ಠಿಗಳುಂಟೆನಲುಂಟು ಭಾಗ್ಯದೊಳ್
ತನ್ನೊಲುಪುಂಟೆಯಿಲ್ಲಪೆನಲಾ ವಿಜಯಾಧಿಪಭೂಪನೊಪ್ಪುವಂ ೬೦

ಲಾವಣ್ಯಕ್ಕೆಣೆಮಾರನಂಗಭವನಾರ್ಪಂಗೆಯ್ದು ರಘಾರ್ಥಿಗಳ್
ಭೂವಿಖ್ಯಾತಗುಣಕ್ಕೆ ಸಾಲವು ಮಹಾಕಾವ್ಯಂಗಳಾ ಪೂರ್ಣವಿ
ದ್ಯಾವಷ್ಟಂಭ ವಿಜೃಂಭಣಕ್ಕೆ ಮಱುಮಾತಂ ಕಾಣ್ಬತಿ ಪ್ರೌಢರಿ
ನ್ನೀ ವಿಶ್ವಕ್ಕೆನಿಪೊಂದು ಕೀರ್ತಿಪಡೆದಂ ಭೂಮಂಡಲಾಖಂಡಲಂ ೬೧

ಶುಚಿ ಧರ್ಮಂ ಪುಣ್ಯಜನಂ
ಪ್ರಚೇತನಹಿತಪ್ರಭಂಜನಂ ಧನದಂ ಸ
ದ್ರುಚಿ ರಾಜಮೌಳಿಯೆನಲೇ
ನುಚಿತಮೊ ಜಿಷ್ಣುಗೆ ಸಮಸ್ತದಿಗ್ಪಿಸುತಯಂ ೬೨

---

[1] ಲ್ಲಿನೆ ಬಾಚ್ಬಿನಗಾಧಿನಾಯಕಂ(ಅ)

ಇನ್ನೇನೆಂದೆಂಬೆನಾ ಭೂಭುಜನ ನಿಜಯಶಃಪ್ರೌಢಿಯಂ ಮೀಱೆ ಮಾಱಾಂ
ಪನ್ನರ್ ಮತ್ತಾರುಮಿಲ್ಲಾಜೊಡಮನುದಿನಮೆಕ್ಕೆಕ್ಕೆಯುಂ ಮಿಕ್ಕು ತೋರ್ಕುಂ
ತನ್ನೇಕಚ್ಛತ್ರದಂಡಂ ವಿನುತವಿಬುಧಸನ್ಮಾನದಾಸಂ ಸಪರ್ಶಾ
ಸನ್ನ ಶ್ರೀಮಾನಭೇದಂ ವಿರಹವಿಧುರ ಸೀಮಂತಿನೀಪ್ರೇಮಸಾಮಂ ೬೩

ಜಗದೊಳ್ ಕಣ್ ಪಡೆದಿರ್ದ ನೀತಿ ನಿಡುದೋಳಂ ತಾಳ್ದ ವಿಕ್ರಾಂತಿ ನಾ
ಲಗೆಯಂ ಪೆತ್ತ ಸಮುಸ್ತವಿದ್ಯೆ ಸೊಬಗಂ ಕೈಗೊಂಡ ಶೌಚಂ ಮಸಂ
ಬುಗೆ ಚೆಲ್ವಂಗಮನಪ್ಪಿದಾರ್ಪು ನೆಱೆ ಜೀವಂಬೊತ್ತ ಸತ್ಕೀರ್ತಿಯೆಂ
ಬ ಗುಣಕ್ಕಾಗರಮಾದುದಾ ಕೃತಿವಿಶೇಷಂ ತನ್ನರಾಧೀಶನಾ ೬೪

ಕ್ರಮದಿಂ ವಿಕ್ರಮದಿಂ ಕಡಲ್ಗಡೆವರಂ ಪೆರ್ಚಿರ್ದಮುಷ್ಕಾರಿವ
ರ್ಗಮಸಂಖ್ಯಾತಮನೆಯ್ದೆ ಗೆಲ್ದನೆನಲಿನ್ನಿರ್ದಲ್ಲಿ ಮೆಯ್ವೆರ್ಚೊಡ
ಕ್ರಮದಿಂದಾತ್ಮವಶಕ್ಕೆ ಸಿಲ್ಕಿದರಿಷಡ್ವರ್ಗಂಗಳಂ ನಾಡೆ ಗೆ
ಲ್ವ ಮಹಾಮಂತ್ರದ ಮೆಯ್ಮೆ ಸದ್ಗುಣನಿಧಾನಂಗೇನದಾಶ್ಚರ್ಯಮೋ ೬೫

ಪೆಱತೇಂ ರಾಜಕಳಾವಿಳಾಸನ ಕಳಾವಿನ್ಯಾಸಮಿಂಬಾದ ಬಾ
ಯ್ದೆಱೆಯಂ ಮುಚ್ಚಿಸೆ ಕೂರ್ಮೆಯಿಂ ಮುಗುಳೆ ವಾರಿಳ್ತಾಗಿದೊಂದಲ್ಲದೊಂ(?)
ದ ಱೆಗೋಳಿಂಬಿಂ ಮಡುಗಟ್ಟೆ ಕಾವೆನೆನುತಂ ನಾಲ್ಕುಂ ಮೊಗಂಬೆತ್ತನೇಂ
ಬಱಿದಾದಂ ಬಿದಿ ಭಾರತೀವನಿತೆ ಮತ್ತಲ್ಲಿರ್ಪುದಂ ಮಾಣ್ಬಳೇ ೬೬

ವಿದಿತಯಶಃಸ್ಫಟಿಕ ಮುಕು(?)
ದಮೊಳೊದವಿದ ಸಕಲಜನಮನೋರಾಗಂ ಪೋ
ಗದೆ ಬಿಂಬಿಸಿತೆಂಬಿನಮೆಸೆ
ದುದು ವಸುಧಾಧವನ ಭುವನಭುಂಭುಕತೇಜಂ ೬೭

ಮುಱೆವಮಾತೇಂ ಸಿಡಿಲಂತೆ ಕೂರಸಿ ಕಱುತ್ತುಗ್ರಾಜಿಯೊಳ್ ವೇಗದಿಂ
ಪೆಱಪಲ್ಲಿಂದೊಳಗಲ್ಕಿ ಬಂದೆಱಪ ಭೂಭೃತ್ಕೋಟಿಕೋಟೀರದೊಳ್
ಮಿಱುಗುತ್ತಿರ್ದಪುದನಾರತಂ ನೆಲಸಿದಾಜ್ಞಾದೇವತಾಪಾದಮು
ಚ್ಚಱಿಗುಂ ತರ್ಜಿತಮಾಗಿ ತೋರ್ಪ ಪದಪದ್ಮಚ್ಛಾಯೆ ಭೂನಾಥನಾ ೬೮

ಮದನವಿಟೀದೆಱಪರಿಬಾಹಾ
ಗ್ರದೊಳಾಜ್ಞಾದಂಡದವನೀಮಂಡಲಮೇನೊ
ಪ್ಪಿದುದೋ ಜಯಲಕ್ಷ್ಮಿತನೃಪ
ಪದಲಕ್ಷ್ಮಿಗೆ ತಂದ ಚಂದ್ರಿಕಚ್ಛತ್ರದವೋಲ್ ೭೦

ಬಳೆಸದ್ಬಾಹುವನುರ್ವರಾವನಿತೆ ವಕ್ಷೋರಂಗಮಂ ಲಕ್ಷ್ಮಿ ನಿ
ರ್ಮಳವಕ್ತ್ರಾಂಬುಜಮಂ ಸರಸ್ವತಿ ಮನಂಗೊಂಡಪ್ಪಿ ತಂತಮ್ಮ ಮೆ
ಯ್ವಳಿಯಿಂದಿರ್ಪಿನ ಮುನ್ನ ತೋರ್ಪ ಪುರುಡಿಂ ತಾನೆಯ್ದೆನೆಂದೆಂಬ ಬಾ
ಸುಳಿಯೊಳ್ ಲಕ್ಷಣಲಕ್ಷ್ಮಿ ಸಾರ್ದು ಬಿಡಳುರ್ವೀನಾಥಸರ್ವಾಂಗಮಂ ೬೧

ಪರಿರಂಭಂ ಗೆಯ್ವುದೊಂದಲ್ಲದೆ ಕರಮೆರಡಿಲ್ಲೋ ವೋ ದಿಗ್ದಂತಿಗೊಲ್ದಾ
ದರದಿಂ ಬಾಯ್ಗುಡಲಿಚ್ಚೈಪ್ಪಡೆ ಸುಡು ಪಲವುಂ ನಂಜುವಾಯ್ಗಳ್ ನಗೇಂದ್ರಂ
ಗಿರದಾನೋವಂತೆ ಪೆಂಬತ್ತಿಯುಮೆರ್ದೆಗುಡದೆಗ್ಗಾದ ಕೂರ್ಮಂಗೆನುತ್ತು
ರ್ವರೆ ಬಿಟ್ಟಾ ಮೂವರಂ ಭೂವರನ ಭುಜಮೊಳಿರ್ಪಳ್ ಮನೋರಾಗದಿಂದಂ ೬೨

ಕಮಠಂ ದುರ್ದರ್ಶನಂ ಭೀಷಣವಿಷವದನಂ ಶೇಷನತ್ಯಂತಮೂರ್ಖಂ
ಸಮದಾಶಾವಾರಣಂ ಕರ್ಕಶಮಖಿಳಕುಳಾದ್ರೀಂದ್ರಮೆಂದೊಲ್ಲದೆಂದುಂ
ಕಮನೀಯಂ ಪೂರ್ಣಚಂದ್ರಾನನನತಿಚತುರಂ ಸ್ನಿಗ್ಧನೆಂದೊಲ್ದು ಧಾತ್ರೀ
ರಮೆಯಿರ್ಪಳ್ ತನ್ನರಾಧೀಶನ ಗುರುಭುಜದೊಳ್ ಪೆಂಡಿರಿಂತಾಗವೇಡಾ ೬೩

(ಲೀಲಾವತಿ ೭–೩೧)

ಜಳನಿಧಿಯಲ್ಲಿ ಪುಟ್ಟಿ ಜಳಜಾಕ್ಷನ ಪೇರುರಮೆಂಬ ತೊಟ್ಟಿಲೊಳ್
ಬಳೆದು ವಿಳಾಸದಿಂ ಜಳಜದೊಳ್ ನಲಿದಾಡಿ ಬಳಿಕ್ಕೆ ಯವ್ವನಂ
ಪೊಳೆವುದುಮಾರುಮಂ ಬಗೆಯದಾ ನೃಪನೊಳ್ ಸಿರಿ ಕೂರ್ತು ಬಂದು ಕೋ
ಮಳೆ ನೆರೆದಿರ್ದಳಂತೆ ವಧು[1]ಕೂರ್ತೊಡೆ[2]ಪೆತ್ತರಮಾತ ಕೇಳ್ವಳೇ ೬೪

(ಲೀಲಾವತಿ ೭–೩೨)

ಬಳಸಿನ ಮಾತೇನೀ ನೃಪ
ತಿಳಕನ ವಾಗ್ವೈಭವಕ್ಕೆ ಮೂಱುಂ ಜಗಮಂ
ತೊಳಸಿದುದೊರ್ವನೆ ಸಮನಾ
ಗುಱಿದುದಱಿಂ ಶೇಷನೆನಿಪನಿನ್ನುಂ ಶೇಷಂ ೬೫

ಯಮದಂಡಾಶನಿಪಾತದೊಂದು ಸವಿಯಂ ಶ್ರೀಸಿಂಹಸೇನಪ್ರತಾ
ಪಮನುಗ್ರಾಜಿಯೊಳುಂಡು ಕಂಡ ಬಳಿಯಂ ಪ್ರಾಣೈಕಮಾತ್ರಪ್ರಸಾ
ದಮಹಾಲಾಭದಿನಾತನಾಜ್ಞೆ ತಿಳಕಂ ತತ್ಕೀರ್ತಿ ಪೂಮಾಲೆ ತೇ
ಜಮೆ ಚೂಡಾಮಣಿಯಾಗೆ ಬಾಳ್ವರಿಳೆಯೊಳ್ ವೀರಾರಿಭೂಪಾಲಕರ್ ೬೬

(ಅನಂತನಾಥಪುರಾಣಂ, ೨–೮ : ಸೂಕ್ತಿಸುಧಾರ್ಣವಂ ೫–೩)

---

[1]ಕೂರ್ತರೆ(ಸ) [2]ಯಿಂದಲೀಯಂ(ಅ)

ಸಂದುಗ್ರಾಹಿತ ರಕ್ತದಿಂದೆ ಕೆಸರಾದತ್ತೀ ಧರಾಚಕ್ರವಿ
ನ್ನೆಂದಿಂಗಾಱುಗುಮೊಟ್ಟಿದಟ್ಟೆಗಳ ಪೆರ್ಜೆಟ್ಟಂಗಳಿಂ ಬಟ್ಟೆಯಿ
ನ್ನೆಂದಿಗಪ್ಪುದು ಮಾರಿಗಂ ಪಸಿವದಿನ್ನೆಂದಪ್ಪುದೆಂಬಂದದಿಂ
ಕೊಂದಂ ಪೇಸದೆ ಸೈನ್ಯಮಂ ಸಮರದೊಳ್ ಬಲ್ಲಾಳ ಭೂಪಾಲಕಂ ೭೭

ಖುರಟಂಕಾಘಾತದಿಂ ಭೂತಳವೆನಿತನಿತುಂ ತೂಂತುವೋದಲ್ಲಿ ಭೋಗೀ
ಶ್ವರ ಚೂಡಾರತ್ನದೀಪ್ತದ್ಯುತಿ ನೆಗೆದು ಮಹಾಸೇನ ಭೂಪಪ್ರತಾಪಾಂ
ಕುರಮಾದಂ ದಂತಿದಾನೋದಕದೊಳೆ ತಳಿರೇಱುರ್ದುದೆಂಬಂದದಿಂ ತ
ಳ್ತಿರಲಿತ್ತಂ ಧಾತ್ರಿಯೊಳ್ ಸೈನ್ಯವಿವ್ರದಱು ನಿರಾಘಟ್ಟಧಾಟೀತುರಂಗಂ ೭೮

ಬಲಭಾರಕ್ಕಹಿನಾಥನಳ್ಕಿ ತಲೆದೊಂಗಲ್ ಪಿಂಗದಲ್ಲಾಡೆ ಭೂ
ವಲಯಂ ಬಾಲದ ಮೇಲೆ ಬೀೞೆ ಕಡುನೊಂದೋರಂತೆ ಪಾತಾಳದೊಳ್
ತಲೆಬಾಲಂಗೆಡುವಂ ಗಡೆಂದೊಡಿದಿರೊಳ್ ಮಾಱಾಂತ ನಿಕ್ಷೇಪದಿಂ
ತಲೆ ಬಾಲಂಗೆಡುವರ್ ವಿರೋಧಿಗಳಿವಂಗೆಂಪೆಂಬುದಾಶ್ಚರ್ಯಮೇ ೭೯

ಧರೆಗಾನಿರ್ದಂತೆ ತಾನುಂ ಸಕಲಧರಣಿಭೃನ್ನಾಥನೆಂಬೊಂದು ಬಿಂಕಂ
ಜೊರೆದಿರ್ದತ್ತೆಂದು ಕಾಯ್ಪಿಂ ಕಳುಪೆ ವಿಪುಳಬಾಹುಪ್ರತಾಪಾಗ್ನಿ ಬಂದಾ
ವರಿಸಲ್ ಸ್ವರ್ಣಾದ್ರಿ ಬೇಗಂ ಕರಗಿ ಪರಿದು ತೀವಿರ್ದುದೆಂಬಂದದಿಂ ಸಾ
ಗರಮೆಲ್ಲಂ ಕೆಂಕಮಾಗಲ್ ಪಸರಿಸಿತು ಮಹಾಭೂಪತೇಜೋವಿಲಾಸಂ ೮೦

ಧುರಜಲಧಿಯೊಳಾದೊಡೆ ಖೇ
ಚರಮೆನಿಸಿದುದನಿಮಿಷಾಳಿಯೆನಿಸೆ ಮತ್ತಿನ ಭೂ
ಚರಜಂತುಗಳೇಂ ತಿಳಿವುವೆ
ಪಿರಿದುಂ ವಿಕ್ರಮತಿಮಿಂಗಿಲಂಗಾನೃಪನಾ ೮೧

ಪೇೞತೇನೀ ಭೂನಾಯಕ
ನುಱುವಗುಣಂ ಪೂರ್ಣಚಂದ್ರನಂದದಿ ಕಲೆಯಿಂ
ನೆಱೆದಿರ್ದುದು ಭಾವಿಸಲೆಳೆ
ವೆಱೆಯಂತೆಱಗಿಪುದು ಸಕಲಭೂಮಂಡಲಮಂ ೮೨

ಅಮೃತವಿಷಂಗಳ ತೆಱದಿಂ
ಸಮುಗ್ರಕೋಪಪ್ರಸಾದ ಗುಣಮೆರಡುಂ ಸಂ
ಕ್ರಮಿಸಿರೆ ವಸುಧಾರಮಣಂ
ಸಮುದ್ರವೆಂತಂತಿರೊಳಗು ಮಾಡಿದನಿಳೆಯಂ ೮೩

ಪಡೆಮಾತೇಂ ತನ್ನಾಣೆಯ
ನಿಡೆ ತೊಟ್ಟನೆ ದುಷ್ಟಭೂಭುಜಂಗರ್ ಭಯದಿಂ
ಪೆಡೆಯುಡುಗುವರಾಕ್ಷಣವೆಂ
ದೊಡವೇಂ ಸನ್ಮಂತ್ರತಂತ್ರಸಿದ್ಧನೊ ಭೂಪಂ ೮೪

ಸ್ಥಿರೆಯಾದಳ್ ಶ್ರೀ ವಿಶ್ವಂ
ಭರೆಯಾದಳ್ ಕೀರ್ತಿಯಚಲೆಯಾದಳ್ ವಾಕ್‌ಸುಂ
ದರಿ ನೃಪನನೊಲಿಸಿ ನೆರೆದು
ವರೆಯೊಳ್ವಿಸಟೊಡನೆ ನಾಡೆ ಮುಸ್ಕರಿಸುನವೋಲ್ ೮೫

ಪಡೆಮಾತೇನಡಿಗೆಟ್ಟು ಪೇರಡವಿಯಂ ಪೊಕ್ಕಿರ್ದುವಾಗಲ್ ಬಳ
ಲ್ದುಡಿಯಂ ಕಟ್ಟಿರೆ ಪಾವುಪಾಜಿಕ ನಗೆಗಣ್ ಕಂಡೆಯ್ದುಗುಂ ವ್ಯಾಘ್ರವೊ
ಳ್ನಡುವಂ ಕಂಡು ಮದೇಭಮೋಡೆ ಮೊಲೆಗಂಡಾರ್ದಟ್ಟುಗುಂ ಸಿಂಹಮೊಂ
ದೆಡೆಯೊಳ್ ನಿಂದಿರಲೀಯವಂಗನೆಯರಂ ತದ್ವೈರಿಭೂಪಾಲರಾ ೮೬

ಗಜಕುಂಭಂಗಳ ಮುತ್ತುಗಳ್ ಬರವೆ ವಲ್ಕವ್ರಾತಮೇನಾದುದೋ
ಭುಜಗಪ್ರೌಢಫಣಾಮಣಿಪ್ರಚುರದೀಪಂ ಜೋದವೇ ಪಣ್ಣಲಂ
ಕುಜದೊಳ್ ಬೀತವೆ ಭೀತಿಗೊಂಡೆದೆಗೆಡಲ್ಕೇಡೆಂದು ತದ್ವೈರಿ ಭೂ
ಭುಜನಂ ನೆಯ್ಗೊಡುನಂತೆ ಸಂತವಿಡುವರ್ ಕಾಂತಾರದೊಳ್ ಕಾಂತೆಯರ್ ೮೭

ಎಡಹಿದ ಪಾದದಂಗುಟದ ನೆತ್ತರ ಬಿಂದುಗಳೆತ್ತಲಿತ್ತಲುಂ
ಸಿಡಿದಿರೆ ತೋರ ಬಾವುಲಿಯ ಮುತ್ತುಗಳೆಕ್ಕಸರಂ ಕಿಳುತ್ತ ಸಾ
ಲಿಡೆ ಕಲಿಕೊಂಡ ಕೇಸರಿಯ ಬಟ್ಟೆಯಿದೆಂದು ಕಿರಾತರೆಯ್ದೆ ಕೈ
ವಿಡಿವರರಾತಿಕಾಂತೆಯರ ಕಾನನದೊಳ್ ಛಲದಂಕಮಲ್ಲನಾ ೮೮

ಕಂಗಳ ನೀರ ಮಿಂದೆಳದಳಿರ್ಗಳನುಟ್ಟುಪವಾಸನಿರ್ದು ಸೌ
ಖ್ಯಂಗದ ಪಾತ್ರೆಯೊಳ್ ಪರಣವತ್ತಿಗೆನೆತ್ತರ ತೈಲವೂಡಿ ಶೋ
ಕಂಗುಡುವಗ್ನಿಯಿಂದುದಿತವಾಷ್ಪದಿ ಕಾನನದೇವಿಜಾತ್ರೆಯಂ
ಸಂಗಡಿಸಂತರಣ್ಯದಿ ರಿಪುಸ್ತ್ರೀಯರಾಚರಿಸರ್ ನೃಪಾಲನಾ(?) ೮೯

ಧುರದೊಳೆ ಸಿಲ್ಕಿಬಂದ ನಿಜವಲ್ಲಭರಂ ಬನದಲ್ಲಿ ಕಾಣಲುಂ
ತರುಣಿಯರಾ ತರುವ್ರಜದ ಶಾಖೆಯನೋಪವ ತೋರ್ಪ ಪ್ರತ್ಯಯಂ
ಪರಿಪರಿದಪ್ಪಿಕೊಳ್ವ ಮಿಗೆ ನೀರೆಡೆಯುಂ ಬಲುಕಟ್ಟುಗಟ್ಟುವರ್
ವರತೃಣಕೊಲ್ಲು ಕಾಪಿಡುವರಾ ಶಶಿಶೇಖರಭೂಮಿಪಾಲನಾ(?) ೯೦

ತರುಗಳ ನಟ್ಟ ಪೆರ್ಗೞೆಗಳಾಗಿರಲುಡಿಸು ಮೆಚ್ಚುಗೊಂಡು ಬಂ
ದರಮನೆಪೆಣ್ಗಳಿಂ ತೆರಳಿಸುಯ್ವೊಡೆ ವಾಜಿಗಳಾ ನೃಪಾಲರಾ
ಬರಬಲದಲ್ಲಿ ಸಂಚರಿಸೆ ತನ್ಮಯ ಮುಷ್ಟಿ ಭುಜಾಗ್ರದಲ್ಲಿಯೇ
ಧರಿಸಡಿಯಿಟ್ಟರಾಗ ಪಗೆಗಳ್ ಮಿಗೆ ಡೊಂಬಿಕೆ ಭಾರಿವಿದ್ಯೆಯುಂ (?) ೯೧

ಅರಿಗಳ ಶೂನ್ಯಮಂದಿರದ ಸೌಧಮೆ ಪುಸ್ತಮಪೆಂದು ಭಲ್ಲುಕಂ
ಕೆಱೆಯ ತಳಿಂ ಸಡಿಲ್ದು ಕೆಡೆದಿರ್ಪುವು ದಾಡೆಯ ಕೂರ್ಪು ಕಾಳ್ಪೊಡಂ
ಕಿಱು ಸಮುದಿತ್ಸು ಸ್ತಂಭಗತನಾ ಕರಿ ನೂಂಕಿತು ಭೋಂಕನೆ ಸುತ್ತಿ ಭಿತ್ತಿಯುಂ
ನರಪತಿಗಾಗವಿರ್ದವರ ಬಲ್ಸೆಯುಂ ತುಱು ಕೆಟ್ಟುಪೋಗದೇ (!) ೯೨

ಕೆದಱುವ ರತ್ನಸಂತತಿಯ ಸಿಂಗಳನೆಂದೊಲೆಗಿಟ್ಟು ಚಂದನೇ
ಜದ ಸಮಿಧಂಗಳಂ ತುಱುಗಿ ಪೋಗುಱು ಗಂಧಕೆ ಪಾಯ್ವ ಮತ್ತಷ
ಟ್ಪದಗಳ ಧೂಮಮೆಂದು ಪುಗುಬೂದುತಲಿರ್ಪರು ಮುಗ್ಧರಪ್ಪ ಸಂ
ಮದದ ಪುಳಿಂದಿಯರ್ ಪಗೆವರಾಲಯದೊಳ್ ಚಲದಂಕಮಲ್ಲನಾ ೯೩

ನಡೆನಡೆ ಕಣ್ಣನೀರ ಪೊನಲಿಂ ಕೆಸಱಬಿೞ್ದಡಮಲ್ಲಿ ಪೋಗುತುಂ
ಮಡಮವು ಜಾಱಿ ಬೀೞ್ದು ಬೞಿಕಾ ಕೆಸಱಿಂ ತೊಳೆಯಲ್ ತದಪ್ರುಗಳ್
ಬಿಡದಿರೆ ಮತ್ತೆ ಮತ್ತೆ ಕೆಸಱಾಗುತಿರಲ್ ತೊಳೆವುತ್ತಮಿರ್ಪುದುಂ
ಪಡೆದು ಪಲುಂಬಿ ವೈರಿಸತಿಯರ್ ಚರಿಪರ್ ಚಲದಂಕಮಲ್ಲನಾ ೯೪

ವಿರಹಶಿಖಿಪ್ರತಾಪದೆ ಶರೀರ ವಿಭೂಷಣ ಹೇಮಮೆಲ್ಲಮುಂ
ಕರಗುತೆ ಪಜ್ಜೆಪಜ್ಜೆಗಿೞಿದಲ್ಲಿಯೆ ನಿಂದಿರಲಶ್ವಮೇಧಮಂ
ವರಸಿಜಪಾದದೊಳ್ ಪಡೆದು ಕನ್ಯಕಸಿಂದಪೆ ಸಗ್ಗವಕ್ಕ ಕಾಂ
ತರ ಪಡೆದಪ್ಪ ಯಾಗದವೋಲೆಯ್ದುಕು ಶಾತ್ರವಕಾಮಿನೀಜನಂ ೯೫

ಪಿಡಿದಡಸಿ ಜಡೆಯಲಸಿವೆಣ್
ನಡುಗುವುದೇನರಿದೆ ಜಡಿದ ವಾರ್ತೆಗೆ ಪಿರಿದುಂ
ಕಡುಗಲಿಗಂಡರ್ ನಡನಡ
ನಡುಗುವರಳವೆಂತುಟೋ ನೃಪಾಲಾಗ್ರಣಿಯಾ ೯೬

ಪರಮಪ್ರತಾಪತಪನ
ಸ್ಫುರಣೆಯೊಳೆರ್ದೆ ಕಾಯ್ದು ಬಂದು ಸಂಗರಮುಖದೊಳ್
ಭರದಿಂದರಿನೃಪರಾ ಭೂ
ವರಸಿಧಾರಾಜಲಕ್ಕೆ ಬಾಯ್ವಿಡುತಿರ್ಪರ್ ೯೭

ಆ ಜನನಾಯಕನಸಿಧಾ
ರಾಜಲಮುಗಟಿಾಗೆ ಕೋಂಟೆ ತೋಳ್ಪಲಸಿ ವಲಂ
ನ್ನೈಜಮೆನಲಿಂತು ದೊರೆವಡೆ
ದೀ ಜಗತೀಭರಮನೊಂದೆ ಪುರಮೆನಲಾಳ್ಗುಂ ೯೮

ಬಗೆಯೊಳ್ ಜೆಣ್ಪಡೆ ಬಂದು ತಾಗಿದರಿರಾಜೋರ್ವೀಶರಂ ಕಂಡು ನೆ
ಟ್ಟಗೆ ಕಣ್ಗೆಟಮೋಡಾದ ಮತ್ಸರದಲಂಪಿಂ ಪ್ರೋರ್ವ ದಿವ್ಯಾಂಗನಾ
ಳಿಗೆ ನಣ್ಪಿಂ ನಿನಗೀತನೀತನೆನುತಂ ಕೈಯ್ಯಾರೆ ತಾನೊತ್ತುವಂ
ಡಿಗೆಗೋಲಂತೆಸೆದಿರ್ದುದಾಂತಿಜೀವ ಕುಂತಂ ಧಾರಿಣೀಕಾಂತನಾ ೯೯

ಅರಿಗಳ ನೊಸಲಕ್ಕರವೇಂ
ಧುರಧೀರನ ಖಡ್ಗಕಾಮನಂ ಕಾಣುತ್ತವೆ
ಹರಿತಂದಪ್ಪದೊಡಾದಂ
ತುರು ಖಳ್ಗದ ಮೆಯ್ಯೊಳಾದುವಾ ಹೊಗರಕುಲಂ ೧೦೦

ಪಿರಿದುಂ ಸಂಗರರಂಗದೊಳ್ ಕವಿವ ಧಾರಘಾತದಿಂ ಪಾಱುಗ
ಚ್ಚರಿಯಲ್ಲುದ್ಗತ ರಾಜಹಂಸನಿವಹಂ ಕಾದ್ವಾಹಿನೀಜೀವನಂ
ಪರಿಗೆಟ್ಟುಂ ಗಡ ಭಂಗಮುಂ ತಳೆವುದೋರಂತೆಂದೊಡೀ ನಿನ್ನನ
ಚ್ಚರಿಯುಂ ಪುಟ್ಟಿಸದೇ ನೃಪಾಲಕರವಾಳಾಮೇಘಮಾಮೋಘಮುಂ ೧೦೧

ಸಮುದವಿರೋಧಿವಿಕ್ರಮದವಾನಳನಾಱುಗುಮಾಗಳಂತೆ ಸಂ
ಕ್ರಮಿಸಿದ ಧಾರೆಯಿಂ ನಿಜಭುಜೋಜ್ವಲ ವಿಕ್ರಮಪಾವಕಂ ವಿರು
ದ್ಧಮಿಪೆನೆ ಬೆಟ್ಟಿ ಮುಗ್ಗಮುರಿಗುಂ ಪರಿಭಾವಿಸೆ ಪಾರ್ಥಿವಪ್ರಭಾ
ನಮೊ ಮೊರೆಪೆತ್ತ ತನ್ನೃಪಕೃಪಾಣಮದುಂ ಬಡಬಸ್ವಭಾವಮೋ ೧೦೨

ವಿಲಸತ್ ಕ್ರೂರಮುಖಂ ಮಹೋತ್ಕಟಶಿರಂ ಪ್ರೋದ್ಭಿನ್ನಲೀಲಾವಹಂ
ಕಲುಷಶ್ರೀಶತಕೋಟಿಖಂಡನಬಲಂ ನಾನಾಭಯಸ್ಥಾನದಿಂ
ಚಲದೋರ್ದಂಡನ ಮೂರ್ಧ್ನಕೋಶವಿಮಲಂ ಶ್ರೇಯಃಪರಂ ಪ್ರಾಣದಂ
ಲಲಿತಶ್ರೀಕರಚಂದ್ರಶೇಖರನ ಖಳ್ಗಂ ಕಾಲನಂತೊಪ್ಪುಗುಂ ೧೦೩

ನರಸಿಂಹಾ ನೃಪನಾಜಿಯೊಳ್ ಜಡಿವ ಬಾಳೆಂತಿರ್ದುದೋ ಜನ್ನಹೊ
ನ್ನರಿಭೂಪಾಲರ ನೆತ್ತರಂ ಕುಡಿದು ಮತ್ತೇಭಂಗಳಂ ಕುತ್ತಿ ಕಾ
ಳ್ನರರಂ ನುಣ್ಣನೆ ನುಂಗಿ ವಾಜಿಚಯಮುಂ ತಿಂದಿಕ್ಕಿ ಗಲ್ಕೆಂದು ಮೈ
ಮುರಿನಂತಿರ್ದುದು ಖಳ್ಗಕಾಳಭುಜಗಂ ಬಲ್ಲಾಳಭೂಪಾಲನಾ ೧೦೪

ಪೊನ್ನೊಱೆಯೆಂದೆನಿಪ್ಪ ಗುಹೆಯಿಂ ಪೊಱಮಟ್ಟು ವಿರೋಧಿಕುಂಭಿಯಂ
ಛಿನ್ನವ ಮಾಡಿ ತತ್ಪ್ರತಿಹತಧ್ವನಿಗರ್ಜನೆಗೆಯ್ದು ರೌದ್ರದಿಂ
ತನ್ನೊಳಿದಿರ್ಪರಿಲ್ಲೆನುತೇಕಸರೂಪಕವಾಗುತೊಪ್ಪುಗಾ
ಸನ್ನುತ ಖಳ್ಗಸಿಂಹ ರಣಕಾನನದೊಳ್ಗಕಳಂಕಮಲ್ಲನಾ (?) ೧೦೫

ಪಗೆಗಳ ರಕ್ತಧಾರೆಯಭಿಷೇಕ ಮಿದುಳ್ಳೆಲು ಗಂಧವಕ್ಷತಾ
ಯುಗಳ ಕರುಳ್ಪ್ರಸೂನ ಮುಸುಱಂ ನವಧೂಪ ತದಕ್ಷಿ ದೀಪ ಪ್ರಾ
ಣಿಗಳೆ ನಿವೇದ್ಯ ಖಂಡತತಿವೀಳ್ಯದೊಳಷ್ಟವಿಧಾರ್ಚನಂಗಳಿಂ
ಸೊಗಸಿತ್ತು ಖಳ್ಗಲಿಂಗ ರಣದೇಗುಲದೊಳ್ ಜಗದೇಕಮಲ್ಲನಾ ೧೦೬

ಅರಿನೃಪರಂಗರಕ್ತಜಲಕೇಳಿಯನಾಡಿ ಮುಖಾಂಬುಜಂಗಳಂ
ಕರದೊಳೆ ಕೀಳುತೆತ್ತಿ ಪಲಲಂಗಳ ಸಲ್ಲಕಿ ಪಲ್ಲವಂಗಳಂ
ಸರಸದೆ ಮೇಹುಗೊಂಡು ಚತುರಂಗಬಲಂಗಳ ಧೂಳಿ ಭಾಳಮಂ
ಶಿರದೊಳಗೊಟ್ಟಿಗೊಂಡು ಸುೞಿಗುಂ ನರಸಿಂಹನ ಖಳ್ಗಕುಂಜರಂ ೧೦೭

ರಿಪುಭೂಪಾಲಕರಂಗಮಾಂಸತೃಣಮಂ ಮೆಯ್ದುಲ್ಲಿ ತದ್ರಕ್ತಮಂ
ಬ ಪಯಃಪಾನತೆಗೊಂಡುಮಾಜಿರವಮೊಂಡೆಂಜೊಂಡು ಬಲ್ಲೆಂಪಿಯುಂ
ವಿಪರೀತಂ ಮಿಗೆ ಹಾಯ್ಕು ತದ್ಧುರಸಿಯಿಂಬಾ ಪುತ್ರಮಂ ಕುತ್ತುತೆ
ತ್ರಿಪುದತ್ತಾವಗಮೊಲ್ಪು ಖಳ್ಗವೃಷಭಂ ಬಲ್ಲಾಳಭೂಪಾಲನಾ ೧೦೮

ಕಿರಣಜಟಾಳಿಯಿಂ ಕರುಳತೊಂಗಲಮಾಲೆಯಯೋಗಪಟ್ಟದಿಂ
ಕರಿರವ ಸಿಂಹನಾದದುಲಿಯಿಂ ಬಲಧೂಳಿಯ ಭಸ್ಮಲೇಪದಿಂ
ಪರಿವರುಣಾಂಬುಮದ್ಯದುಣಿಸಿಂ ಕರಘಾತದಿ ಮೆಯ್ಯ ತೂಗಿನಿಂ
ಚರಿಸನು ಖಳ್ಗಯೋಗಿ ರಣಪೀಠಗಳೊಳ್ ನಿಕಳಂಕಮಲ್ಲನಾ ೧೦೯

ಬಿಡು ಸಮರಂಗಕೆನ್ನ ನಿಸಗಾಂತರಿಸೈನ್ಯಸಮೂಹಮೆಲ್ಲಮಂ
ಕಡಿದು ಪಿಶಾಚಕೋಟಿಗುಣಲಿಕ್ಕಿದೊಡಾ ಕ್ಷಣದಿಂದೆ ಪೆರ್ಮೆಯಿಂ
ಜಡಿವುದು ಗುಪ್ತದೊಳ್ ಸಭೆಯೊಳಂಗನೆಯರ್ಕಳ ಮುಂದೆ ಕೊರ್ವಿನಿಂ
ಜಡಿಯದಿರೆಂಬವೊಲ್ ಪೊಳೆವುತಿರ್ದುದು ಬಾಳ್ ಜಗದೇಕಮಲ್ಲನಾ ೧೧೦

ಬಾಳಿಯ ಮುಳ್ಳಿನಂತೆ ಮುಗಿಲಟ್ಟಳೆಯಿರ್ದುದು ಕೃಷ್ಣಕಾಕಕಾಂ
ತಾಳಿಯ ಭಂಗಿಯಂತಮರಪರ್ವತಮಿರ್ದುದು ಮುಂದಣೂರ್ಗೆ ದೀ
ಪಾಳಿಗೆಯೆಂಟುಗಾವುದಮದಂತೆಯಿಜುಂಕಿ ಬಳುಂಕಿ ಕೊಂಕುತಾ
ಕಾಳಿಯ ಕಯ್ಯ ಕತ್ತಿಯವೊಲಿರ್ದುದು ಬಾಳರುಹಂತದೇವನಾ ೧೧೧

ಫಲಮಾಲಾಪಲ್ಲವೋಲ್ಲಾಸಿತೆ ಮಲಮಲಿನಚ್ಛಾಯೆ ಭಿನ್ನೇಭರಕ್ತಾ
ವಿಲಮುಕ್ತಾಪುಂಜಗುಂಜಾಭರಣೆ ಧೃತದಳತ್‌ಖಂಡ ಪಾಲಾಶ ಪುಷ್ಪೋ
ಜ್ವಲೆ ತದ್ಭೂಪಾಲ ಶಸ್ತ್ರೀಶಬರಿ ಸುಭಟಸೇನಾಟವೀ ಶೀರ್ಷತಾಳೀ
ಫಲಮಂ ಪ್ರತ್ಯಂತಭೂಭೃತ್ಕಟಕದೊಳಘಟಿಂದಾಯ್ದು ಕೊಯ್ವುತ್ತಮಿರ್ಪಳ್ ೧೧೨

ಅರಿಗಳ ರುಧಿರಮೆ ಪೊಯ್‌ನೀರ್
ಸಿರಿಮಂ ಪೊಗರೆಲೆಗಳೆಸೆವ ಜಸಮೆ ಕುಸುಮೋ
ತ್ಕರಮುರು ಶೌರ್ಯಂ ಫಲಮಾ
ಗಿರಲೆಸೆದುದು ಖಳ್ಗಲತಿಕೆ ತನ್ನೃಪವರನಾ ೧೧೩

ಭೂರಿಭುಜವಿಜಯರಾಕ್ಷಸಿ
ವೈರಿಗಳಂ ನುಂಗಲೆಂದು ನೀಡಿದ ಜಿಹ್ವಾ
ಕಾರಮೆನಿಸಿದುದು ರಿಪುರುಧಿ
ರಾರುಣ ಕರವಾಲಮಾ ನೃಪಾಲಕಸುತನಾ ೧೧೪

ಅರಿಭೂವರರ ಶಿರಂಗಳ
ನರಿವೆಡೆಯೊಳ್ ಭರದಿ ಬಂದು ಸೇರಿದ ಭಾಳಾ
ಕ್ಷರತತಿಯೆಂದೆನೆ ಪೊಗರಂ
ಪಿರಿದುಗುಳುತ್ತಿರ್ದುದಾ ನೃಪಾಲಕೃಪಾಣಂ ೧೧೫

ಭುವನಂ ಬಣ್ಣಿಸೆ ಭೂಭುಜಂಗನೆಳಿಪೇಟಂ ನಾಂಟಿ ನಂಜಾಗಿ ಚಿ
ತ್ತವನುನ್ಮೋಹಿಪ ಗಾಹುಗೊಂಡು ನನೆವಿಲ್ಲಂ ಕೊಂಡು ಕಲ್ಲೋಲನು
ಜ್ಜ್ವನಿಸಂ ಮನ್ಮಥನೆಚ್ಚ ಪೂವಿನ ಪುಳುಂಬಿಂ ನೊಂದು ಪುಲ್ಗೊಂಡು ದೂ
ರುವ ಪೆಣ್ಬುಯ್ಯಲುಮಲ್ಲದಿಲ್ಲಮಱಯೆಂ ಮತ್ತಾವಪುಣ್ಬುಯ್ಯಲಂ ೧೧೬

ಅಳುಪಿಂ ರಾಜಮನೋಜನಂ ಬಯಸಿ ಬೇಗಂ ಲಂಚಮೀವಂದದಿಂ
ತಳಿವರ್ಾಸಿಂಗೊಡಲಂ ಪ್ರಸೂನಶರಘಾತಕ್ಕಾರ್ದ ಚಿತ್ತಂಗಳಂ
ಗಿಳಿವಿಂಡಿಂಗೆ ಕಟಿಲ್ದ ಬಾಯ್ದೆರೆಗಳಂ ಭೃಂಗಾಳಿಗುಳ್ಳೇೞ್ವ ಸು
ಯ್ಗಳ ಕಂಪಂ ತಪೆ ತೆತ್ತು ತೆತ್ತು ತವಿಲಕ್ಕುಂ ಕಾಮಿನೀಸಂಕುಳಂ ೧೧೭

ಗೆಲವಿಸ ಮಾತು ಬೀತ ನಳಿತೋಳ್ ಬಿಸವಲ್ಲಿಯ ಪಾಂಗನಾಳ್ವ ಪೆ
ರ್ಮೊಲೆ ತಲೆಗೊಟ್ಟು ತಾವರೆಯ ಮೊಗ್ಗುಗಳಂ ಮಱೆಗೊಳ್ವ ಕಣ್ಗಳು
ತ್ಪಳದಳಮಂ ಶರಣ್ಬೊಗುವ ಪ್ಪ ಮಲಯೋದ್ಭವಕಾಸೆಗೆಯ್ವ ಕ
ಕ್ಕಲಿತೆಯನುಂಟುಮಾಡಿದುದು ಪೆಣ್ಗಳೊಳಾವನಪಾಂಗವಿಭ್ರಮಂ ೧೧೮

ಅರಸಂಗ್ಪೈವೃದೆ ಪೇೞಿ ಪೆಣ್ಗೊಲೆಗೆನುತ್ತುಂ ತದ್ವಿಯೊಂಗಾಂತಸುಂ
ಪರಿಯರ್ ಪೊಕ್ಕ ವನಂಗಳಂ ಪುದರಿ ತಂದೀಡಾಡುವರ್ ನಾಡೆ ಬೆಂ
ದುರಿವುತ್ತಿರ್ದ ಮೃಣಾಳವಂ ಪುರಿದ ಬಂಬಲ್ಪೂಗಳಂ ಸೀದು ಸೀ
ಕರಿಯೋಪೊಳ್ಪಳಿರಂ ಸಮಂತು ವನಪಾಲರ್ ಮುಂದೆ ಭೂಪಾಲನಾ ೧೧೯

ವಿಳಸದ್ರುಕ್ಷಕಳಾವಿಳಾಸ ನಿಜಸೌಂದರ್ಯಕ್ಕೆ ಬೆಳ್ಕಾದ ಕೋ
ಮಳೆಯರ್ ಬಾೞ್ವಣನಾಗಿ ಬೀೞ್ತ ಬೞಿಪೆನ್ನಂ ದೂಱುಗುಂ ಲೋಕಮೀ
ಗಳೆನುತ್ತ್ರಯ್ದುಲರ್ವಿಲ್ಲನೆಯ್ದು ಸಕಲಂ ಮುಂದಿಟ್ಟು ಕೊಂಡಾಗ ಪೆ
ಯ್ಪಳಿಯಿಂದೋಲಗಿಪಂ ಮನೋಭವನಜಸ್ರಂ ಭೂಪನೀ ರೂಪಮಂ ೧೨೦

ಪರತ್ತರ ಚಂದ್ರಶೇಖರನೃಪಾಲಕನೊರ್ಮೆಯೆ ಕಂಡ ಕಾಂತೆಯರ್
ನೆರವಿಯುನಾಗಳೇ ಮಱೆದು ಕಣ್ಮದವಿಕ್ಕುತ ತೋಳ್ಗಳಪ್ಪುತಂ
ತೊರೆದಧರಕ್ಕೆ ದಂತವಿಡುತಂ ತಲೆದೂಗುತೆ ಸಾರದೂರುಮಂ
ಪರಿಪರಿದೊತ್ತಿಕೊಂಡು ತೊನೆದಾಡಡೆ ಮಾಣ್ಬರೆ ಮೂಱುಲೋಕದೊಳ್ ೧೨೧

ಮನದೊಲ್ದಾತನ ಗಾಡಿಯಂದಮನಣಂ ಕಂಡಾಕೆಗಳ್ ಪೂವಿನಂ
ಬಿನ ಕೋಳ್ಗಂ ತಳಿವಾಲಿನೀರ್ಗಮಲರ್ವಾಸಿಂಗಂ ಕುಳಿರ್ಕೊಳ್ವ ಚಂ
ದನಕಂ ನಂದನಕಂ ಪಸುರ್ಪೆಸೆವ ಬಾೞ್ತೊಂಪಕ್ಕವೊಂದೊಂದೆ ಕಂ
ಬನಿಯೊಳ್ ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇ ಪೋಪರೇ ೧೨೨

ಮನಸೊಸೆದಾ ನೃಪಾಲನ ವಿಳಾಸಮನೊಯ್ಯನೆ ಕಂಡ ವಾರಿಜಾ
ಸನಗೆ ಮರಾಳಗಾಮಿನಿಗೆ ಮೀನನಿಭಾಕ್ಷಿಗೆ ಚಾರು ಶೀತಲ
ಧ್ವನಿಗೆ ರಥಾಂಗತುಂಗಕುಚೆಗುತ್ಪಲಗಂಧಿಗೆ ಸೀಮೆಯಾಯ್ತು ಜೀ
ವನದಭಿಲಾಷೆ ಕಂತುಪರಿತಾಪದೊಳಿಂತದು ಚಿತ್ರಮೆಂಬಿನಂ ೧೨೩

ಮನಸಿಜನಂಬು ನಾಂಟೆ ಮನಮುಂ ತನುವುಂ ಮನವನ್ನನಾದ ಭೂ
ಪನ ಬೞಿಸಂದೊಡಾ ತರುಣಿ ಚಿತ್ರದ ಲೆಪ್ಪದಲಾದ ಪೆಣ್ಣರೂ
ಪೆನೆ ಮಱವಟ್ಟಳಾವಳನಸಂಗಶರಕ್ಕೆಡೆಮಾಡದಾವಳಂ
ಸೆನೆಯಿಸಿ ಕಾಡದಾವಳನದಿರ್ಪುದು ನೋೞ್ಪೊಡೆ ರೂಪ್ಪ ವಿಭ್ರಮಂ ೧೨೪

ಆ ನೆಗೞ್ದಿಂದ್ರನಾ ಮದನನಾ ನಳಕೂಬರನಾ ಜಯಂತನು
ದ್ದಾನಿಯ ಬೆಳ್ಪನೀ ಕಮಲನೇತ್ರನಪಾಂಗಮರೀಚಿಗಪ್ಪೊಡಂ
ತಾನೆಣೆವಾರದೆಂಬೆನಿಪ ರೂಪನದಾವಳದೊರ್ಮೆ ಕಂಡೊಡಂ
ಮಾನಿನಿಯರ್ ಮನೋಜನವಲಂಬಿನ ಕೋಳ್ಗೆಡೆಯಾಗದಿರ್ಪಮೇ ೧೨೫

ತಣ್ಣಾಳಿಗೆ ತಣ್ಣದಿರನ
ನುಣ್ಣದಿರ್ಗೆ ಪುೞಿಲ್ಗೆ ಪೂವಿನಂಬಿಂಗೆ ಕೆರಂ
ಕಣ್ಗಡೆ ಗುಱಿಮಾಡುವುದೆಳೆ
ವೆಣ್ಗಳಸೆಡೆವಿಡದೆ ನೆಗೞ್ದ ಭೂಪನ ರೂಪಂ ೧೨೬

ಕಳೆಯಿಂದುವಿಂ ಚತುರ್ಗುಣ
ಮಳವಡೆ ತನಗವನು ಮಿಕ್ಕ ಬುಧಕಳೆಯಂ ಸ್ವೈ
ತಿಳಿಕ್ಕೈದೆವ್ಮೊಡನೆಣಿಸದೆ
ಕಳೆಕಳೆಯೆನಿಪುವು ಕಳಾವಿಳಾಸನ ಕಳೆಗಳ್ ೧೨೭

ಐದಮರ ಭೂರುಹಂಗಳ್
ನ್ಪೈದೆಗೆಯದೆ ಕುಡುವ ನೃಪನ ವಿತರಣದಳವಿಂ
ಗ್ಸೈದದೆ ಜಗವಱಿಯಲ್ಕೀ
ರ್ಸೈದಾದೂದಲೆ ದಶಾಂಗವೆಂಬೀ ನೆವದಿಂ ೧೨೮

ಧರಣೀಭೃತ್ಪತಿ ಪದವಿಗೆ
ಸರಿಯಾದೊಡಮೇನೊ ಮಂದರಾಗಂ ಪ್ರಜೆಯೊಳ್
ಪರಮಾನುರಾಗಮಂ ಪಡೆ
ವರಸನ ಬಿಣ್ಪಿಂಗೆ ನೋಡೆ ಸರಿಯಾದಪ್ಪುದೇ ೧೨೯

ಕಡುಗುಣ್ಪಿಂ ಪೆಂಪಿಂದೆಣೆ
ನಡೆದೊಡಮೇನಕಟ ಕಂಡ ವಿಬುಧರ ಕೈಯೊಳ್
ಕಡಯಿಸಿಕೊಂಡುದು ಗಡ ಪಾ
ಲ್ಗಡಲದನಿನ್ನೀ ನೃಪಾಲನಂ ಪೋಲಿಸೆನೇ ೧೩೦

ಚಂದನಮಿನಿದಾದಂದಖಿ
ಳೇಂದುಗೆ ಕಱೆ ಪೊರ್ದದಂದು ವಸುಧೆ ವಸುಧೆಗೆ
ಬಂದು ಪೊಸಮುತ್ತು ಮೃದುವಾ
ದಂದೆಣೆಯಕ್ಕುಂ ನರೇಂದ್ರನುತ್ತಮಗುಣದೊಳ್ ೧೩೧

ಕನ್ನೆಯರಿವನಂ ಕಾಣದ
ಮುನ್ನಮೆ ಕಂಟಕಿತ ತನುಗಳಕ್ಕುಮೆನಲ್ಕಾ
ಸನ್ನಕರಸ್ಪರ್ಶನಮಿ
ರ್ದಂ ನಾಂಟವು ಕಂಟಕಂಗಳಿಳೆಯೊಳಿದೇನೋ ೧೩೨

## ಸಂಗೀತ

ಇನಿಯಳನಗಲಿರ್ದವಗಂ
ಮನಸಿಜನಲರಂಬು ತಾಗಿ ನೊಂದಿರ್ದವಗಂ
ಘನತಾಪ ಮನದಲೊದವಿದ
ಮನುಜಂಗೆ ಸಹಾಯಮಲ್ತೆ ಸಂಗೀತರಸಂ ೧೩೩

ಮುವದೆಡೆಗೆ ದುಃಖದೆಡೆಗಂ
ಸುದತಿಯರ ವಿಯೋಗದೆಡೆಗೆ ಕೂಡಿರ್ದೆಡೆಗಂ
ಕದಡಿರ್ದ ಚಿತ್ತದೆಡೆಗಂ
ಪದಪಿಂದಂ ಬಂಧುವಲ್ತೆ ಸಂಗೀತರಸಂ ೧೩೪

ತಿಂಗಳ ಬಿಂಬಮಂ ಪಿಳಿದು ಪಿಂಡೆ ಪಳಚ್ಚನೆ ಸೋರ್ವ ಸೋನೆಯಂ
ತಿಂಗಡಲಿಂ ಪೊದಟ್ಟಿಮರ್ದನೆತ್ತಿದೊಡೊಯ್ಯನೆ ಸೋರ್ವ ಸೋನೆಯಂ
ತಂಗಜನಿಕ್ಷುಕಾರ್ಮುಕವನೇಱಿಸೆ ಝುಮ್ಮನೆ ಸೋರ್ವ ಸೋನೆಯಂ
ತಿಂಗಳಿಸುತ್ತೆ ಪೊಣ್ಮಿದುದು ಗಾನರಸಂ ನೆಱೆ ಗಾಣಜಾಣರಾ ೧೩೫

ಇಂಗದಿರ್ಪೊಂಗಲಿಂ ತೊಳಪಮರ್ದುಱೆಯುಕ್ಕಿ . . ಪಾಯ್ದುದೋ
ತಿಂಗಳ ಜನ್ಮಸೋದಯಕೆ ಪಾಲ್ಗಡಲಾರಯೆ ಮೋಱೆದಪ್ಪಿತೋ
ಜೆಂಗೊಡದಿಂದೆ ಕೂಡಮರ್ದು ಕಾಟಿಱ್ಪನಲೋದುಮೊಯೆಂಬಮಾತು ತ
ನ್ನಂಗಮದಾಗೆ ಪೊಣ್ಮಿದುದು ಗಾನರಸಂ ನೆಱೆ ಗಾನಜಾಣನಾ ೧೩೬

ತಾಳನಿವರ್ತನಂ ಲಯದ ಮೆಯ್ಸಿರಿಯೊಳ್ ನೆಲೆ ಜ್ಪೆಕೆಮೋಱಿಂದಂ
ತಾಳಿತಿಗೆಯ್ದು ನಾದದೊದವಂ ಶ್ರುತಿಯಂ ಸರದಲ್ಲಿ ತೋಱೆ ಮೇಣ್
ಚಾಳಿಸಿ ರಾಗಮಂ ನಿರಿಸಿ ಗೀತದ ಭಾವದೊಳಾದ ಸಂಭ್ರಮಂ
ಮೇಳಿಸೆ ಲೀಲೆಯಿಂ ಮೊಖರಿಗಾಣತಿದೇವನ ಮುಂದೆ ಪಾಡಿದಳ್ ೧೩೭

ಸರಸೌಘಂ ರುಚಿರಾಜಿ ತಿಂಗಳ ನುಸುಂ ಮಾಧುರ್ಯಸಂಮಿಃಶ್ರಿತಂ
ಪರಸೌಖ್ಯಾಂಕುರಿತಂ ಧರಾತ್ರಿಮೃದುಲಂ ನಿಶ್ಯೇಷಜಿಹ್ವಾದ್ರುಮ
ಸ್ಫುರಿತಂ ಸೊಂಪಿನ ಸಂಪದಕ್ಕೆ ನೆಲೆಯಾದಾ ರಾಗಸಂಜೀವಮೇಂ
ದೊರೆಯಲ್ಕಾ ಫಳಮಂಜರೀರಚನೆಯಂ ತಾನೊರ್ವಳೇ ಪಾಡಿದಳ್ ೧೩೮

ಜನಸಂಸ್ಥಾನಮನೆಯ್ದೆ ತಾಂಕಿ ಬಿಡದಿರ್ಪಾ ಮಂದ್ರ ಮಧ್ಯೋರ್ಧ್ವ ಸು
ಸ್ವನದಂ ಸಶ್ರುತಿಮಾರ್ಗನಾಗಮುಕದಿಂ ತಾನಂಗಳಿಂ ವರ್ಣದಿಂ
ದಿಸಿದಂ ಗೀಱನೆ ತೋಱೆ ಪೋಪ ಪೊಳೆಪಿಂದಂ ಷಡ್ಗ್ರಹೋಚ್ಚಾರದಿಂ
ಸನಯಂ ನ್ಯಾಸದ ನಿಲ್ಕೆಯಿಂದೆ ವರ ಕಾಂಭೋಜಾಖ್ಯೆಯಂ ಪಾಡಿದಳ್

ಸುಧೆಗಳ ಸೂರೆಯೋ ಪರಿದು ಜೇನ್ಪಬಿಃ ಘೋರೆನೆ ಬರ್ಪ ಚೆಂವನೋ
ಮಧುಕರಗಂಘದೋಕುಳಿಯೊಯಿಂಗದಿರಾಟವೊಯಿಕ್ಷುವಾರ್ಧಿಯಂ
ವಿಧು ಕಲಕಿತ್ತೊ ಸರ್ವಮಧುರಂ ಮಡಾಗಟ್ಟಿತೊ ಕರ್ಬುವಿಲ್ಲನಾ
ಮಧುಗಳ ನೇಹಸಾರರಸಮುಕ್ಕಿತೊಯೆಂಬವೊಲಾಕೆ ಪಾಡಿದಳ್ ೧೪೦

ಕಬ್ಬಿನ ಬಿಲ್ಲನಂದೊಡೆದು ಝುಮ್ಮನೆ ಬಾಸುರೆ ಪೂಸರಂಗಳೆ
ಯ್ದುರ್ಬುವ ಚಂದ್ರನಂ ಬಿಗಿಯೆ ಘೋರೆನುತಾ ಸುಧೆ ಸೂಸಿತೆಂಬಿನಂ
ಪರ್ಬಿದ ತಾರದಾಸ್ವನಮ ಗಿರ್ರನೆ ಸುತ್ತುತೆ ಬ್ರಹ್ಮರಂಧ್ರದೊಳ್
ಗುರ್ಬಿಪ ಚಂದ್ರನಂ ಕಲಕೆ ಪಾಡಿದೊಳೊಪ್ಪುವ ಮಂಜುಘೋಷಿಯಂ(') ೧೪೧

ಸೊರೆಗಳ ನುಣ್ಪು ಪೆರ್ಗೊಲೆಯ ನುಣ್ಪು ವಿಭೂಷಣೆ ನಲ್ಕೆ ವೀಣೆಯಂ
ಕರದೊಳಗಾಂತು ಬಾಜಿಸುವ ನುಣ್ಪು ಸುತಾನದ ನುಣ್ಪುವಿಂಪಿನೊ
ಳ್ಚರಗಳ ನುಣ್ಪು ಕತ್ತರದ ನುಣ್ಪು ಸುಸೇಮದ ನುಣ್ಪು ತಾಯದಾ
ಸರಿಸದ ನುಣ್ಪು ನುಣ್ಪಿನೊಳೆ ಪ್ರೋಪುತಿರಲ್ಕವಳೊಲ್ದು ಬಾಜಿಸಳ್ ೧೪೨

ಸರಳತರಾಂಗುಲೀಮೃದುನಿವರ್ತನದಿಂ ಕಡೆಗಣ್ಮುತಿರ್ಪ ಬಂ
ಧುರ ರಸಗೇಯಮೆಂಬಮೃತಪೂರಮನೊಯ್ಯನಲಾಬುವಿಂದಮು
ತ್ತರಿಸುತಿಲಿರ್ದಳೀಕೆಯೆನೆ ಬಾಜಿಸಿದಳ್ ಪೆರಚುನ್ನತಸ್ತನಾಂ
ತರದೊಳಗಾಂಕಿ ವೀಣೆಯನದೇಪೊಗೞ್ವಂ ಗಮಕಪ್ರವೀಣೆಯಂ ೧೪೩

ಎನಗಿಂದಂ ಮಿಗಿಲೆಂದು ಪೆರ್ಗೊಲೆಯ ತಾಳಲ್ಕಂತು ಸಾಮರ್ಥ್ಯಮೋ
ನಿನಗೆಂದಂತದ ಕೋಪದಿಂ ಬಲುಪಿನೊಳ್ಮಾತಾಡುವೊಂದಂದದಿಂ
ವನಜಾತಾನನೆ ಪೇರುರಕ್ಕಮುರಿಕೊಂಡನ್ಯೋನ್ಯಸಲ್ಲಾಪದಿಂ
ಜನಸಮ್ಮೋಹನಮಾಗೆ ಕಿನ್ನರಿಯನೆಂತುಂ ಬಾಜಿಸುತ್ತೊಪ್ಪಿದಳ್ ೧೪೪

## ನೃತ್ಯ

ತಾಳಮನುಘ್ಘಡಿಯಿಸುವ ವಿ
ತಾಳಮನಲೆದೊತ್ತಿ ತೋರ್ಪ ಚೆಲ್ವ ಚಮತ್ಕೃತಿ
ಲೀಲೆಯನಚ್ಚಣಿಗಾನಿಲೆ
ತಾಳಧರಸ್ತ್ರೀಯರೀರ್ವರವರೊಳಗೆಸೆದರ್ ೧೪೫

ಕತ್ತರಮಲ್ಲದೊತ್ತದುಱಿ ಬೊಟ್ಟುಗಡಲ್ಲದೆ ಮುಟ್ಟದಿಂಪಿನೊಳ್
ಬಿತ್ತರಮಲ್ಲದೆತ್ತದೆ ಜಟಾಳದೊಳಲ್ಲದೆ ಕಯ್ಯನಿಕ್ಕದೋ
ಳ್ಗುತ್ತಮ ಶಬ್ದಮಲ್ಲದುರೆ ಬಾಜಿಸದೋಜೆಯನಲ್ಲದೊಪ್ಪದಾ
ತತ್ತದಿದೊಂಗದಿಂಪೆನಿಪ ಮರ್ದಳೆಗಾಱನದೇಂ ಸುಜಾಣನೋ ೧೪೬

ಜಂಝಾಪವನನ ಪೊಯ್ಲಿಂ
ತಾಂ ಝೇಂಕರಿಸುತ್ತಲೆೞ್ವ ತುಂಬಿಯ ಧ್ವನಿಯೋಲ್
ಝೇಂ ಝೇಂ ಝುಕರ್ಝೇಂ ಝೇಂಝುಕ
ಝೇಂಝುನಿಪಾವುಜದ ಕಾಂತೆಯರ್ ಕಂಗೊಳಿಸುಂ ೧೪೭

ತೋಳ ತೊಡರ್ಪು ಕಂಗೆಸೆಯೆ ಸಾರ್ಚಿದ ಪತ್ತುಮನೋಜನೋಜೆಯೊಳ್
ಮೇಳಿಸಿ ಘಂಘುಶಬ್ದದನೆ ಭೋಂಕನೆ ಪುಂಖಿಸಿಸುಂತ್ಯಮಾದಿಯಂ
ಜಾಳಿಸಿ ತುಂಬಿಯುಂಚರದ ಮೊತ್ತಮನೊತ್ತುವವೋಲ್ ಮೃದುಸ್ವರಂ
ಪಾಳಿಯನೊಪ್ಪುವಂತೆಸೆಯೆ ಬಾಜಿಸಿದಳ್ ಸವಿಲಾಸವಾಸವಂ(?) ೧೪೮

ಸಣ್ಣಸರದಿಂಪು ಸವಿಯಂ
ನುಣ್ಣನೆ ಕಿವಿಗೀಯಲುಂಚಧನಸಿ ಜೇಸೆಯ್ವುನಿ(?)
ವಣ್ಣಮೇಲಿಟ್ಟ ತೆಱದಿಂ
ಹೆಣ್ಣೆಬ್ಬರ್ ಮೆಱೆವುಪಾಂಗವಂ ಬಾಜಿಸಿದರ್ ೧೪೯

ಘಳಿಲನೆ ಕಣ್ಣೊಳ್ ಮಿಂಚಿನ
ಪೊಳಪುಮುಸಿಟ್ಟಂತೆ ಸಭೆಯೊಳಿರ್ದಿದ್ದಂತೇಂ
ಮೊಳೆತುದೊ ರತ್ನದ ಜವನಿಕೆ
ಪಳಚ್ಚನಾ ಸಭೆಯ ಕಣ್ಗೆ ಕೌತುಕಮಾಗಲ್ ೧೫೦

ಉತ್ತಮದ ಜಿಹ್ವೆಗೊಂದಿಸಿ
ಚಿತ್ರಜನಾಹವಕ್ಕೆ ನೆಲನೆಯ್ದಿಪವೋಲ್
ತುತ್ತುಗು ತುತ್ತುಗು ತುತ್ತುಗು
ತುತ್ತುಗು ತುಗುವೆಂದು ಕಾಳೆಯಂ ಬಾಜಿಸಿದಂ ೧೫೧

ಘಟಕುಚೆಯರಿರ್ವರೊಲವಿಂ
ಕುಟಿಲತ್ವದ ಕನಕಕೋಣಯುಗಮಂ ಪಿಡಿದಾ
ನಟಕು ತಟಕಿಟನಕಟತಟ
ಕುಟಿಮೆಸಿಸುವ ಕರಡೆಯಿರಡನೇಂ ಬಾಜಿಸಿದರ್ ೧೫೨

ವರವಾದ್ಯದ ಸವಿ ಕೂಡ
ಬ್ಬರಮಾಗಿರೆ ನಿಲಿಸಿ ನಾಟ್ಯಚಕ್ರೇಶ್ವರ ಬಂ
ದುರು ಚಂದ್ರಶೇಖರಸ್ಥಿರ
ಧರಣೀಶ್ವರ ನಿಟ್ಟಿಸೆಂಬ ಸಮನಂತರದೊಳ್ ೧೫೩

ಭೋಂಕನೆ ಜವನಿಕೆಯೊಡ್ಡಲ್
ಶಂಕೆಯೊಳಿರ್ದೆ ಜಗ್ಗಿನಲ್ಕೆ ಸಭೆ ಕಾಣುತೆ ಮೀ
ನಾಂಕನ ಬಲುವಿಲ್ಲಿಲ್ಲಿಗ
ದೇಂ ಕಾರಣ ಬಂದುದೆಂದು ಬೆಱಗಾಯ್ತಮಮ ೧೫೪

ಮುಗಿಲಿನಪೋಡೆ ತೋರ್ಪ ಸಲೆ ಚಂದ್ರನ ಚಂದ್ರಿಕೆ ಭೋಂಕನೊಪ್ಪುವೋಲ್
ಸೊಗಸುವ ಪೊತ್ತಪಾಲ್ದೆಗೆದ ಸಿಂಗರದಿಂಗಡಲಂತೆವೊಪ್ಪುವೋಲ್
ಸುಗಿಪೊರೆವೋಗಿ ಪುನ್ನಘನ ಕಯ್ಯೊಳೆ ಕೊರಸಿ ತಾನವೊಪ್ಪುವೋಲ್
ಮಿಗೆ ನಯನಾಂಪು ರನ್ನಪೊಡಪೆಯ್ವೊಳಪೊಪ್ಪಿತು ನರ್ತನೌಘದೊಳ್(?) ೧೫೫

ನೆಲದೊಳ್ ನಳಿತೋಳ್ ಕಂಪಿಸೆ
ಬಲಿದಿರ್ದೆದೆ ಬಂಧುರಮದೆನೆ ಸಹಜಮುಖಮೆ
ಯ್ಯಲುಕದಿರೆ ಸರಿಸದಿಂ ನಿಂ
ದೊಲಿಪುದೆ ಮೋಹನಮನೆಸಗಿದರ್ ನರ್ತಕಿಯರ್ ೧೫೬

ಇದೆ ನರ್ತನಕಿದೆ ಗಾನ
ಕ್ಕಿದೆ ತಾಳಕ್ಕಿದೆ ಸುವಾದ್ಯಕ್ಕಿದೆ ಪಾವುಜಕಿಂ
ತಿದೆ ಕಹಳಗೆ ಕರಡೆಗೆ ಮು
ತ್ತಿದೆ ಚೆಲ್ವನುಪಾಂಗಕಾದ ಸಾಲ್ವೆಣ್ಣರಸಾ ೧೫೭

ಉಗುರ್ಗಳ ಮಿಂಚು ಬಣ್ಣದೊಡೆಗುಪ್ಪಸವೊಪ್ಪುವಮಿಂಚು ರಾಸೆಯಾ
ಸೊಗಸುವ ಮಿಂಚು ಕಾಂಚಿಗಳ ಮಿಂಚುಜಿತ ಪೆರ್ಮೊಲೆಗಟ್ಟ ಮಿಂಚು ಬಾ
ಹುಗಳಲಿಪೇಟ್ಟಿ ಮಿಂಚು ಕಂಠಸರದ್ವಯದಚ್ಚಮಿಂಚು ಕ
ಣ್ಮೊಗಗಳ ಮಿಂಚು ರಂಭೆ ಗಿರಿಮಿಂಚಿನ ಪುತ್ಥಳಿಯಂತಿರೊಪ್ಪಿದಳ್ ೧೫೮

ತಿಳಿಪೆಳದಿಂಗಳೊಳ್ದಿರುಳ ಬಣ್ಣದ ಕಾಸೆಯ ಬೆಳ್ಪು ತೋರಮು
ತ್ತಳನಡೆ ಚಂದದಿಂ ಬಿಗಿದ ಪೆರ್ಮೊಲೆಗಟ್ಟಿನ ಬೆಳ್ಪು ಮೌಕ್ತಿಕಂ
ಗಳ ತೊಡಪೆಳ್ಪು ಮೂಗುತಿಯ ಮುತ್ತಿನ ಧಾಳದ ಬೆಳ್ಪು ಪೆಂಪ್ಯೊಳಂ
ಪ್ರೋಳಪಿಡಲಿರ್ದಳೂರ್ವಶಿ ಕರಂ ಸಲೆ ದಂತದ ಬೊಂಬೆಯೆಂಬಿನಂ ೧೫೯

ಹೊಂಪೊಡೆಗುಪ್ಪಸಂ ಮಿಸುನಿಹೊಂದೊಡೆದೊಪ್ಪುವ ಕಾಸೆ ಜೆಲ್ವಿನಾ
ಹೊಂದೊಡೆಜೊಡ್ಡಿವಾಣಮುಱಿ ಹೊಂದೊಡೆದಾ ಮೊಲೆಗಟ್ಟು ಮೆಯ್ಯೊಳಂ
ಹೊಂದೊಡವಾವಗಂ ಮಿಸುಗೆ ಮೇನಕಿ ಸುಂದರದಿಂದಲೊಪ್ಪಿದಳ್
ಕುಂದಣವೊಂದು ಪೆಣ್ಬಿದಿಮೆಯಂದದ ಬಂಧುರವೆತ್ತ ಭಾವದಿಂ ೧೬೦

ಕಪ್ಪಿನ ದಿವ್ಯ ಪಾರಿದೊಡೆಗುಪ್ಪಸಮಾಗಿರೆ ನೀಲರನ್ನದಿಂ
ನೇರ್ಪಡೆ ಸೇರಿಸಿರ್ದ ಬಲುಗಾಸೆಯ ಪೆರ್ಮೊಲೆಗಟ್ಟನಿಂದವಂ
ದಾರ್ಪನೆ ಜೆಲ್ವುದೋಱೆ ಮಿಗೆ ನೀಲದ ನಲ್ದೊಡವೊಪ್ಪೆ ನೃತ್ಯಕೆಂ
ದಿರ್ಪ ತಿಲೋತ್ತಮಾಂಗಿ ಮೆಱೆದಳ್ ಮಿಗೆ ನೀಲದ ಜೊಂಬೆಯೆಂಬಿನಂ(?) ೧೬೧

ಮಿಕ್ಕಿನ ಪಾತ್ರಂ ನೋಟಱೊಡೆ
ಲೆಕ್ಕಿಸಲರಿದೆಂಬ ತೆಱದೊಳಿವರ್ಗಳ ಸಾಲೊಳ್
ಸಕ್ಕರೆವಿಲ್ಲನ ಸೇನೆಯೊ
ಲಕ್ಕಾಡುತಲಿರ್ದುದುದಯ್ಯ ನಟನಾಟಕನೆ ೧೬೨

ಕಾವನ ದೊಣೆಯೊಳಗಿರ್ದಾ
ಪೂವಿನ ಸರಲ್ಗೈದು ಲಚ್ಚಣಂಗಳ್ ತೋಱುವ
ಭಾವಮನೆ ತೋರ್ಪ ರಂಭೆ ಸು
ಭಾವಂ ಭಾವಂ ವಿಲಾಸ ವಿಭ್ರಮವೆಸೆದಳ್ ೧೬೩

ಗತಿ ಗಮಕಕ್ಕೆ ಹಸ್ತಯುಗ ವಕ್ಷಕೆಯಕ್ಷಿಗಳೆಯ್ದೆ ಮಾನಸ
ಕ್ಕತಿಶಯಮಾನಸಂ ಪರಮಭಾವಕೆ ಭಾವಮುದಾರಮುದಾಹರಕ್ಕೆ ಸಂ
ಗತಿ ಕುಡೆ ಕೈಶಿಕೀ ವಿಲಸದಾರುಭಟೀ ಘನಸಾತ್ಯಕೀಶುಭಾ
ರತಿಯ ವಿಲಾಸವೃತ್ತಿಗಳನಾ ಸಭೆ ಹೋಯೆನೆ ರಂಭೆಯಾಡಿದಳ್ ೧೬೪

ಏಂ ಜವನೊವವಯವಂಗಳು
ಮಂ ಜಾನಿಸಿ ನೋಡೆ ಕುರುಪಿಗವು ಬಾರದಿರಲ್
ಹೊಂಜೆಳೆಯಿದೆನಿಸಿ ತಿರುಗುತೆ
ರಂಜಿಸಿದಳ್ ರಂಭೆ ಸಂಭ್ರಮಭ್ರಮರಿಗಳಂ ೧೬೫

ಉತ್ತಮೆ ಪಾದಮೆ ಪಾದಂ
ಸುತ್ತುವ ನೆರೆ ಕಾಸೆ ಜೆಲ್ವ ಚೌರಿಗೆ ಮೆಯ್ಯೊಳ್
ಪೊತ್ತಿದೆಯೆನೆ ಕಾಮಘಟೋ
ತ್ಪತ್ತಿಯನುಱೆ ಚಕ್ರದಂತೆ ಮೆಱೆದಳ್ ತಿರುಪಿಂ ೧೬೬

ಎತ್ತಿದ ಪಾದಂ ಗಿರ್ರನೆ
ಸುತ್ತುವ ಭರದಿಂದೆ ಮಿಸುನಿಸತ್ತಿಗೆಯಂತಿರೆ
ಚಿತ್ತಭವಚಕ್ರವರ್ತಿಗೆ
ಯೆತ್ತಿದ ಲೋಕೈಕಛತ್ರವೆನಿಸಿತ್ತಾಗಳ್ ೧೬೭

ತಿರ್ರನೆಯುಪ್ಪರಕ್ಕೆ ನೆಗೆಯುತ್ತವೆ ನೀಡಿದ ಕೈಯುಗಂ ಕರಂ
ಮಿರ್ರನೆ ಮಿಂಚುತಿಪ್ಪುಡುಗಳಾಗಿರಲಾಕೆಯ ವಕ್ತ್ರಚಂದ್ರಮಂ
ಸರ್ರನೆ ಪೋಗುವಾಗಸದ ಚಂದಿರನಲ್ಲಿಗೆ ಧಾಳಿಮಾಳ್ಪವೋಲ್
ಗಿರ್ರನೆಯಂತರಭ್ರಮಣೆಯಂ ಸಲೆ ತೋಱಿದಳಂದು ಚಂದದಿಂ ೧೬೮

ಶಿರ ಕೈ ಪೆರ್ಮೊಲೆ ಪಾರ್ಶ್ವವಚ್ಚ ಪೊಱವಾರ್ ಪಾದಂಗಳಿಂ ನುಂಗೊರಲ್
ವರ ಬಾಹೊಪ್ಪುವ ಜೆನ್ ಬಸಿರ್ ತೊಡೆ ಲಸಜ್ಜಂಘದ್ವಯಂ ನೋಟ್ಪಿಪಾಂ
ಗುರಮಂ ಭ್ರೂನಯನಂ ಸುನಾಸಿಕ ಕಪೋಲಂ ಜೆಲ್ಪಿನೋಷ್ಠಂ ಮಹೋ
ದ್ಧುರಪ್ರತ್ಯಂಗಮಿವಕ್ಕೆ ತಕ್ಕಭಿನಯಂ ಪಕ್ಕಾದವಾ ಕಾಂತೆಯೊಳ್ ೧೬೯

ಕೆಲಬರ ದಿಟ್ಟಿ ಕಾಲ್ಗಳೊಳೆ ಮತ್ತೆ ಕೆಲಂಬರ ದಿಟ್ಟಿ ಜಂಘೆಯೊಳ್
ಕೆಲಬರ ದಿಟ್ಟಿ ಕಾಸೆಯೊಳೆ ಮತ್ತೆ ಕೆಲಂಬರ ದಿಟ್ಟ್ಯುರೋಜಮೊಳ್
ಕೆಲಬರ ದಿಟ್ಟಿ ತೋಳ್ಗಳೊಳೆ ಮತ್ತೆ ಕೆಲಂಬರ ದಿಟ್ಟಿ ವಕ್ತ್ರದೊಳ್
ಕೆಲಬರ ದಿಟ್ಟಿ ಕಂಗಳೊಳೆ ಸಿಲ್ಕಿ ತೊಡರ್ಚೆ ಕಲಂಪನಾಡಿದಳ್ ೧೭೦

ಅರುಣಸರೋರುಹದಲರಂ
ಮುರಿಮುರಿದೀಡಾಡುವಂತೆ ನಿಟ್ಟಿಸಿ ನೋಡಲ್
ಕರಮುರಿದೆನೆ ಕರಮಿವು ಸಾ
ಸಿರಮೆನೆ ರಚಿಯಿಸಿದಳಾಕೆಯೆಡಕಂ ಬಲಕಂ ೧೭೧
(ಲೀಲಾವತಿ ೪-೧೪೧, ಸೂಕ್ತಿಸುಧಾರ್ಣವಂ ೩-೯೬)

ಬಲಗಾಲ್ ಸ್ವೈತ್ರೊಪ್ಪೆ ವಾಮಂ ಕೆಲಕೆ ತೊಲಗೆ ವಕ್ಷಸ್ಥಿತಂ ಮುಟ್ಟೆ ಚೆಲ್ವಾ
ಗೆ ಲತಾ[1]ಖ್ಯಂ ಕೈ ಕರಂ ಕಜ್ಗೊಳ್[1] ನೆಗೆಯೆ ಕುಚಂ ಕೊಂಕೆ ಮಧ್ಯಂ ದಳತ್ಸ್ವ
ಚ್ಛೈಳನೇತ್ರಂ ಬೀಱಿ ಜೆಳ್ಪಂ ಪ್ರಹಸಿತವದನಂ ಶೋಭೆಯಂ ಸೂಸೆ ಲೀಲಾ
ಲಲಿತಾಸ್ಯಕ್ರಾಂತದಿಂ ನಿಂ[2]ದು ಸುರ[2]ನರಸಭಾಚಿತ್ತದೊಳ್ ಕಾಂತೆ ನಿಂದಳ್ ೧೭೨
(ಲೀಲಾವತಿ ೪-೧೪೬, ಸೂಕ್ತಿಸುಧಾರ್ಣವಂ ೫-೧೫)

---

[1]ಖ್ಯಂ ಕೈಕರಂ ಕಜ್ಳೊಳ್(ಸ) [2]ದಮರ(ಅ)

ಚರಣಾಗ್ರಂ ಜಾನುವಂ ಜಕ್ಕುಲಿಸೆ ಬರಿ ನಿತಂಬಕ್ಕೆ ಪಕ್ಕಾಗೆ ಮಧ್ಯಂ
ಮುರಿವನ್ನಂ ದಕ್ಷಿಣಕ್ಕಪ್ಪಳಿಸಿದ ಕುಚದೊಳ್ ಕೈ[1]ದಳಂ[1] ಕೂಡೆ ವಾಮಂ
ಕರಕಂಜಂ ಕಾಂತಿಯಂ ತಳ್ತಳಿರ್ದುರ್ ಮಿಳಿರೆ ವಕ್ತ್ರಾಂಬುಜಂ ಕೊಂಕಿ ಚೆಲ್ವಾ
ಗಿರೆ [2]ಕಾಮಪ್ರೇಮಮುಮಂ[2] ಕಾಮಿಸಿ ತರುಣಿ ತಪಂಗೆಯ್ವವೋಲ್ ಕಣ್ಗೆವಂದಳ್ ೧೭೩
(ಲೀಲಾವತಿ ೪-೧೪೫)

ಒತ್ತಿದ ಶೃಂಗಾರದ ರಸ
ಜೊತ್ತೆನೆ ಕವಿಡೆ[3]ಯ್ದೆ ಸರಸಕ[3]ವಿತೆಯ ನೆಲೆಯುಂ
ಪೆತ್ತು [4]ಜಯುವೆತ್ತು[4] ಶೋಭಿಸೆ
ನೃತ್ತಸ್ಥನಿ ಲಾಸ್ಯಲೀಲೆಯಿಂ ಶೋಭಿಸಿದಳ್ ೧೭೪
(ಲೀಲಾವತಿ ೪-೧೪೪, ಸೂಕ್ತಿಸುಧಾರ್ಣವಂ ೫-೧೩)

ವಿವಿಧಾಲಂಕೃತಿ ಕೂಡೆ ಕೊಂಡ ಗಮಕಂ ಮಂದ್ರಾದಿಯುಂ ಮುಂದೆ ವ
ರ್ಣವಿಭಾಗಂ ಪವಣಾಗೆ ರಾಗರಮಣೀಯಚ್ಛಾಯೆಯುಂ ಕೂಡೆ ನೀ
ಡುವ [5]ನೀಲಾಳಕ[5]ಕೋಮಳಕ್ವಣಿತದೊಳ್ ತಳ್ಪೊಯ್ದು ಕೈಗಣ್ಮೆ ಪೊ
ಣ್ಮುವ ಗೀತಕ್ಕೆ ಮೃಗಾಕ್ಷಿಯಾಡಿ ಮೆಱೆದಳ್ [6]ನಾನಾಗತಿಪ್ರೌಢಿಯುಂ[6] ೧೭೫
(ಲೀಲಾವತಿ ೪-೧೪೭, ಸೂಕ್ತಿಸುಧಾರ್ಣವಂ ೫-೧೬)

ನಗೆಗಣ್ ಸೂಸೆ ವಿಲಾಸಮಂ ನಗೆಮೊಗಂ ಲಾವಣ್ಯಮಂ ಬೀಱೆ ಸಾ
ವಗಿಸುತ್ತುಂ ಕಚಬಂಧಮುಂ ಶಿಥಿಲನೀವೀಬಂಧಮುಂ ಕಾಂಚಿಯೊಳ್
ತೆಗೆಯುತ್ತುಂ [7]ಸ್ಮರಮಂತ್ರದೇವತೆಯವೋಲ್ ಬಾಹಾಲತಾಂದೋಳನಂ
ಬಗೆಯಂ ಬಲ್ಸೆಱೆಗೆಯ್ಯೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ[7] ೧೭೬
(ಪಂಪರಾಮಾಯಣಂ ೫-೪೨, ಸೂಕ್ತಿ ೮-೪೧೨)

ವಸಿತೆಯೊಳೊಪ್ಪುಗುಂ ಕಮಠಕುಂತಳವದ್ರಿಸಮಾಕ್ಷಿಯೆಂಬರಾ
ನನವಿಭಕುಂಭದಂತವಸನಂ ಮಣಿಸತ್ಕುಚಮಿಂದುಮಧ್ಯವ
ಬ್ಜನಿಭನಿತಂಬಮುರಪಾದಮಲಕ್ತಕರಸಪ್ರಕಾಶಮೋ
ಹನರುಚಿ ಧಾತುವೃತ್ತತನು ಕರ್ಕಶದಿಂ ಮೆಱೆದಿರ್ಪ ಪಾಂಗಿನಿಂ(?) ೧೭೭

---

[1]ಳಿರ್(ಅ) [2]ಕಾಮೋತ್ಪತ್ತಿಯುಂ(ಅ) [3]ತಂದು(ಅ) [4]ಜಡಿಯುತ್ತೆ(ಅ) [5]ವೀಣಾಕಲ(ಅ) [6]ಗೀತಾನುಗ ಪ್ರೌಢಿಯುಂ(ಅ) [7]ಪ್ರಣಯಾನುಬಂಧಮುಖಿಲೋರ್ವೀಶಂಗೆ ಶೃಂಗಾರಚೇಷ್ಟೆಗಳಿಂ ಕಣ್ಣೆಸೆದಿರ್ದುವೆದಿರ್ ಕೆಲದೊಳ್ ನಿಂತಿರ್ದ ಕಾಂತಾಜನಂ(ಅ)

ಶಿರದಂಸಂ ಪೊಸತಾಗೆ ಹಸ್ತವಲನಂ ಚೆಲ್ವಾಗೆ ಕಣ್ಚೆಲ್ಲವ
ಚ್ಚರಿಯಂಬೆತ್ತಿರೆ ಪುರ್ಬುಗುರ್ಬಿನ ಪದನ್ಯಾಸಂ ರಸಾವಾಸಮಾ
ಗಿರೆ ನಾನಾಕರಣಂ ಕರಂ ಮೆಱೆವಿಪೆ ಸಂಪಿಂಪಂಗಹಾರಂ ಪೊದ
ಳ್ದಿರೆ ನೃತ್ಯಾಭಿನಯಕ್ಕದೇಂ ಮೆಱೆದಳೋ ತತ್ಕಾಂತೆ ರಂಗಾಗ್ರದೊಳ್ ೧೭೮

ಮನದನುರಾಗಮಂ ಮುಖವಿಕಾಸದೊಳಾಸ್ಯವಿಲಾಸಮಂ ವಿಲೋ
ಚನಯುಗದೊಳ್ ಜಿತಾಕ್ಷಿಗಳ ವಿಭ್ರಮಮಂ ಪದಪಿಂ [ಪದೋರು] ಕಂ
ಪನದೊಳೆ ತತ್ತಿರೋವಿಧಮನೊಪ್ಪುವ ಹಸ್ತದೊಳಗ್ರಹಸ್ತ ಭಾ
ವನೆಯನಲಂಪಿನಿಂ ಕರಣದೊಳ್ ಕಮಲಾನನೆ ತೋಱಿಯಾಡಿದಳ್ ೧೭೯

ಪದವಿನ್ಯಾಸವಿಲಾಸದಿಂ ತನುಲತಾವಿಕ್ಷೇಪದಿಂ ಲೋಚನಾ
ಗ್ರದ ಸನ್ನರ್ತನದಿಂ ಕಪೋಲರುಚಿಯಿಂ ಸುಹ್ರೂಳಿ ದಿಳ್ಳಾಯ್ಲದಿಂ
ಮೃದುಹಸ್ತಾಲಯದಿಂ ಲಸದ್ಭ್ರಮಣಿಯಿಂ ಮೇಳಾಪದೊಳ್ಪಿಂ ತ್ರಿಭಂ
ಗದ ಸೊಂಪಿಂ ಸಲೆ ರಾಗರಂಜಿಸೆ ಕರಂ ಮೇಳ್ಕೈಸಿದಳ್ ಲಾಸ್ಯಮಂ ೧೮೦

ರಸಕವಿಕಾವ್ಯಮೇಕಿನಿಯಳಪ್ಪುಗೆ ನೋಟಱಿವೊಡೆ ತಾನದೇಕೆ ಚೆ
ಲ್ಪಿಸಕದ ನೋಟಮೇಕಿನಿದಿನೂಟಮನುಂಬುದದೇಕೆ ಗಂಧದ
ಪ್ರಸರಮದೇಕೆ ಮೋಹಿಸುವರಾಡುವ ನರ್ತನಮೊಂದ ನಿಟ್ಟಿಪಾ
ಜಿಸನಮೆ ಸಾಲ್ಗುಮೆಂಬ ತೆಱದಿಂ ಸಭೆ ನೋಡುತಮಿರ್ದುದಲ್ಕಿಱಿಂ ೧೮೧

## ಔದಾರ್ಯ

ತೊಡಳಿಲ್ಲಲ್ಲೆಲೆ ಕೊಟ್ಟು ಬಾಗೆಯವಿಭು ಶ್ರೀಮಲ್ಲಿನಾಥಾಂಕನಂ
ದದೆ ನಾನಾಭಯಬಂಧಬಾಧಿತಧರಾದೀನಾರ್ತರಂ ತನ್ನ ಕಂ
ಣ್ಣಿದಿರೊಳ್ ಕಂಡೊಡೆ ನೊಂದು ತಿಂದೆಡೆಗೆ ಕೈ ಬಪ್ಪಂದದಿಂ ಬಂದು ಕಾ
ಯ್ದುದನಂಗಗ್ಗದ ಬಂದಿ ಸೋಧನಿವನೆಂಬೀ ಕೀರ್ತಿ ಕೈಸೂರೆಯೇ(?) ೧೮೨
(ಧರ್ಮನಾಥಪುರಾಣಂ ೧-೮೯)

ಪ್ರಿಯವಚನಂಗಳಿಂ ಕರೆದು ಕೈಮುಗಿದೀ ಮಹಿಗೆಮ್ಮ ಧರ್ಮಕೀ
ರ್ತಿಯ ತವರಿನ್ನದಾರೆಮಗೆ ನೀಮಿರೆ ಬಂಧುಗಳೆಂದು ಬಂದ ವಂ
ದಿಯ ಬಗೆ ಮೆಚ್ಚೆ ದಿಚ್ಚೆಯಱಿದಾವಗಮೀವೊಡೆ ಭಾಪು ಕೊಟ್ಟು ಬಾ
ಗೆಯ ವಿಭು ಮಲ್ಲನಲ್ಲದಱಿವಾನಸರೇನೊಸೆದೀಯಲಾಪರೇ ೧೮೩
(ಧರ್ಮನಾಥಪುರಾಣಂ ೧-೯೦)

ಕೆಲರಿಂಗೀ ಕುಳವಕ್ತ್ರದೊಳ್ ಕೆಲಬರಿಂಗಾ ರಾಜಹಂಸಾಸ್ಯದೊಳ್
ಕೆಲರಿಂಗೊಪ್ಪಿಡಿ ಮುಷ್ಟಿಯೊಳ್ ಕೆಲಬರಿಂಗಂ ಕುಟ್ಮಳಾಂಭೋಜದೊಳ್
ಕೆಲರಿಂಗೇಯುವ ಸರ್ಪನೊಳ್ ಕುಡುವವೆಳ್ಪಂ ಹಸ್ತದೊಳ್ದಿಕ್ಕುತಾ
ನೊಲಿದೀಯಲ್ ಮುನಿಯರ್ಘ್ಯಹಸ್ತಮೆನಿಕುಂ ಶ್ರೀಭೋಜದಾನೋತ್ಸವಂ (?) ೧೮೪

ಪಡೆದಿನಿಸಂ ತಳರ್ಚುವ ತಳಿರ್ಚಿದುದಂ ಮೊಳಕಾಲ್ಗೆ ತರ್ಪ ತಂ
ದುದನೊಲವಿಂ ತಱುಂಬುವ ತಱುಂಬಿದುದಂ ಪೆಗಲಲ್ಲಿಗೆತ್ತುವೆ
ತ್ತಿದುದ ನೆತ್ತಿಯೊಳ್ ತಳೆದು ಪೊಂಗಳಭಾರಮನೊಯ್ವ ವಿಪ್ರವೃಂ
ದದ ಪಡೆಮಾತೆ ಪೇೞದೆ ಯುಧಿಷ್ಠಿರ ರಾಜನುದಾರದೇೞ್ಗೆಯಂ ೧೮೫

ಬಡವರ ಕಾಣೆ ಕಾಣಿಸಿಕೊಳಂ ನೆಱೆ ಕಾಣಿಸಿಕೊಂಡಡಾಕ್ಷಣಂ
ಕುಡುವನುವೊಲ್ದು ತನ್ನ ಸಮರಾಜ್ಯಮನಾವಗಮಿಂತು ರಾಜ್ಯಮುಂ
ಪಡೆದರನಂತಕೋಟಿ ಮಿಗಿಲೋಲಗಿಸಲ್ಮೆಱೆದಿರ್ಪನೀಶ್ವರಂ
ಪಡಿಯೆನೆ ಚಂದ್ರಶೇಖರನೃಪಂ ಧರೆಗೊಪ್ಪಿದನತ್ಯುದಾರಕಂ (?) ೧೮೬

ಪದಪಿಂ ಪಂಚಮಲೋಹರತ್ನನಿಚಯಂ ವಾಹ್ಯಾಳಿ ಸದ್ವಸ್ತ್ರವೊಂ
ದಿದ ಗಂಧಂ ಗೃಹಭೂಮಿಯೆಂಬಿವಿನಿತಂ ದೇಹೀತಿ ವಿದ್ವಾಂಸರಿಂ
ಗೆದೆ ಬಲ್ಪೋಡದೆ ಸಿಚ್ಚಸಿಚ್ಚ ಮೃದುವಾಕ್ಯಂ ಪ್ರೀತಿಯಿಂ ಭೋಜನೀ
ವ್ರದು ತಾಂ ಸಿಷ್ಟಯಮಂತೆ ಧಾರಿಣಿಯೊಳಂ ಮೆಚ್ಚಲ್ಕೆ ಸಪ್ತಾಂಗಮಂ ೧೮೭

ಹರಹಾಸದ್ಯುತಿಯಂ ನಿರಾಕರಿಸಿ ಗಂಗಾಸಿಂಧುಕಲ್ಲೋಲ ಶೀ
ಕರಮಂ ನಿಂದಿಸಿ ಸಿಂಧುವಾರಕುಸುಮಶ್ರೀಯಂ ಪಳಂಚಾಡಿ ವಿಭಾ
ಸುರ ಚಂದ್ರಾಂಶುವಿಳಾಸಮಂ [೧]ತೆಮರಿ[೧] ಮುಕ್ತಾಹಾರವಿಸ್ತಾರಡಂ
ಬರಮಂ ಮಿಕ್ಕು ಬೆಳರ್ಪುದುಜ್ಜ್ವಳಯಶಂ ಶ್ರೀಗಂಡಮಾರ್ತಾಂಡನಾ ೧೮೮

(ಕಾವ್ಯಾವಲೋಕನಂ ೮೬೩)

ಕಮಠನ ಕರ್ಪು ಮೇರುವಿನ ಹೊಂಬೆಳಗರ್ಕನ ಕೆಂಪು ನಿರ್ಜರ
ದ್ರುಮದ ಪಸುರ್ಪು ತಾವರೆಯ ಬೆಳರ್ವಣ್ಣಮೆ ಸಾಜಮಿವಕ್ಕಿದೆಂಬಿನಂ
ಸಮನಿಸೆ ಪನ್ನಗೇಂದ್ರ ರಜತಾಚಲ ಚಂದ್ರ ಸುರೇಭಕಾಂತಿಗ
ಳ್ಗನುಮ ಪೊಡರ್ಪನಾಗಿಸುವುದೀ ನರನಾಥನ ಸಂದ ಬೆಳ್ಜಸಂ ೧೮೯

(ಪಂಪಾವಿರೂಪಾಕ್ಷಸ್ಥಾನವರ್ಣನಂ ೧೦)

---

[೧] ತೆಗಟ್ಟು (ಅ)

ದರಹಾಸಕ್ಕೊಂದೆರಬ್ಬಿಕ್ಕರಿರಥಕೆರಡುಂ ಮೂಱು ನಾಗಾರಿ ನಾಗಾ
ರಿಗವಿಂಗಂ ಮೂಱು ನಾಲ್ಕಿಂದುವಿನ ರುಚಿಗೆ ನಾಲ್ಕೈದು ದುಗ್ಧಾಬ್ಧಿಗೈದಾ
ಅರವಿಂದಕ್ಕೆತ್ತಲಾಱೇೞಮರತಟನಿಗೇೞೆಂಟು ತಾರ್ಕ್ಷ್ಯಾದ್ರಿಯೆಂಬಾ
ಗಿರಿಗೆಂಟೊಂಬತ್ತು ಪತ್ತುಂ ಮಡಿಯ ಪಸರಿಕುಂ ಕೀರ್ತಿಯೊಳ್ ನಾಗವರ್ಮಂ ೧೯೦

ಧರೆಯೊಳ್ ಪೂಮೞೆ ಸೂಸಿದಂತೆ ನಭದೊಳ್ ಛತ್ರತ್ರಯಾಚ್ಛಪ್ರಭಾ
ಪರಿರಂಭಂ ನೆಗೞ್ದಂತೆ ದಿಕ್ಕಿನೊಳುದಂಚಚ್ಚಾಮರಂ ಚಿಮ್ಮಿದಂ
ತಿರೆ ಹೇಮಾಚಲದೊಳ್ ಜಿನಸ್ನಪನದುಗ್ಧಂ ತೀವಿದಂತಿರ್ಪುದೊ
ಪ್ಪಿರೆ ಕೀರ್ತಿಪ್ರಭೆ ಕೊಟ್ಟುಬಾಗೆಯವಿಭು ಶ್ರೀಮಲ್ಲಿನಾಥಾಂಕನಾ ೧೯೧
(ಧರ್ಮನಾಥಪುರಾಣಂ ೧-೯೧)

ವರ ಬಲ್ಲಾಳನ ಕೀರ್ತಿಕಾಂತೆ ಪರಿದುಂ ಪಾತಾಳಕಂ ಪನ್ನಗೇ
ಶ್ವರನಂಜಲ್ ತಲೆವಾಗಿಸಿತ್ತು ನಡೆದುಂ ಭೂಭಾಗಕಂ ರೌಪ್ಯಭೂ
ಧರ ಬೆಚ್ಚಲ್ ಬೆಱಗಾಗಿಸಿತ್ತು ಬರುತಂ ಬಾಂಬಟ್ಟೆಗಂ ರೋಹಿಣೀ
ಶ್ವರನಕ್ಕ್ರೀರ್ಪುಗಂದಿಸಿತ್ತು ಬಗೆಯಲ್ಕೀಂ ದೊಟ್ಟಿತೇಂ ಸಾಂದ್ರಮೋ ೧೯೨

ನೆಗೞ್ದ ನಳ ನಹುಷ ದಶರಥ
ಸಗರ ಹರಿಶ್ಚಂದ್ರ ದುಂದುಮಾರ ಭಗೀರಥ
ನೃಗ ಕಾರ್ತವೀರ್ಯನಿವರೋ
ರೆಗಂಪಿನಿಕುಂ ಪ್ರೌಢದೇವನೆಂಬ ನೃಪಾಲಂ ೧೯೩
(ಪಂಪಾವಿರೂಪಾಕ್ಷಸ್ಥಾನವರ್ಣನಂ ೫)

ತನಗೆ ಶುಭವೆಂಬ ವಂದಿಯ
ಮನೆಯಂಗಣದಲ್ಲಿ ಪಣ್ತು ಪರ್ವಿದ ಮಂದಾ
ರ ನಮೇರು ಪಾರಿಜಾತದ
ಬನದೊಳ್ ಸಿರಿ ಮೆಱೆವಳೆಲ್ಲಿ[೧] ವನಕೇಳಿಗಳಂ ೧೯೪
(ಅನಂತನಾಥಪುರಾಣ ೨-೧೦, ಯಶೋಧರ ಚರಿತ್ರೆ ೩-೨,
ಸೂಕ್ತಿಸುಧಾರ್ಣವಂ೩-೨೫)

ಕೆಲದೊಳ್ ಸಿಂದೂಳಿಗಕ್ಕಂ ಪರಿಪರಿದೆಱೆಯಾಡುತ್ತಲಿರ್ಪಂ ತುರುಷ್ಕಂ
ಬಲಮುಮ್ಮತ್ತ್ ಕ್ಲೇಶದಿಂದಂ ನಡೆವ ಪಡೆವಳಂ ಜೋಳನುಂ ಚಂಡ ಬಾಹಾ
ಬಳದಿಂದೆಯ್ದಪ್ಪ ಮಾಸಂತರ ಬಱಿವೆಸನಾಳ್ ಗೌಳನಿನ್ನಾವ ರಾಯರ್
ತಲೆದೋರ್ಪರ್ ನಾರಸಿಂಹಗನುಸು ಸಮರಸಿಂಹಂಗೆ ವಿಕ್ರಾಂತದಿಂದಂ ೧೯೫

---

೧ ಳಿರಲ್ಕೆರೆವವಲ್ಲಿ(ಸ)

ನಳ ಕಂದರ್ಪ ಜಯಂತ ಕೂಬರನುಪೇಂದ್ರಂಗೀಡು ಸೌಂದರ್ಯದೊಳ್
ಬಲ ಭೀಮಾರ್ಜುನ ಭಾರ್ಗವೇಶ ರಘುರಾಮಂಗೀಡು ಸಾಮರ್ಥ್ಯದೊಳ್
ಬಲಿ ಮಾಂಧಾತ ದಧೀಚಿ ಕರ್ಣ ಖಚರೇಂದ್ರಂಗೀಡುದಾರತ್ವದೊಳ್
ಚೆಲುವುಂ ಬೀರಮುಂ ಚಾಗಮುಂ ನೆಲಸಿರಲ್ತಾನೊಪ್ಪಿದಂ ಭೂಮಿಪಂ ೧೯೬

ತುರಗಾರೋಹಣದಿಂದದೊರ್ಮೆ ಗಜಶಿಕ್ಷಾಲೀಲೆಯಿಂದೊರ್ಮೆ ಕಾ
ವ್ಯರಸಾಸ್ವಾದದಿನೊರ್ಮೆ ಸ್ವೈಣಿಕಕೃತಪ್ರಸ್ತಾವದಿಂದೊರ್ಮೆ ಗ
ರ್ಘರಿಕಾಸ್ವಾದನದಿಂದಮೊರ್ಮೆ ವನವಾರಿಕ್ರೀಡೆಯಿಂದೊರ್ಮೆ ಚಿ
ತ್ರರುಚಿಪ್ರೀತಿಗಳಿಂದಮೊರ್ಮೆ ಕಳೆವಂ ಪೊೞ್ತಂ ಕಳಾವಲ್ಲಭಂ ೧೯೭

(ಚಂದ್ರಪ್ರಭಪುರಾಣಂ ೪-೨೮)

ಕ್ಷಿತಿತಳಮಂ ಪ್ರಧಾನಮುಖದಿಂ ಪ್ರತಿಪಾಲಿಸುತಿಂತು ಭಸ್ಮಸಾ
ತ್ಕೃತರಿಪುವರ್ಗನಾಗಿ ಮೃದುಸತ್ಸ್ವಪಿ ಚಿಂತೆಯನೆಯ್ದೆ ನೀಗಿ ವಿ
ಶ್ರುತ ಬಹುನೃತ್ಯಗೀತನುತವಾದ್ಯಕಲಾಪ್ರಿಯದೆಲ್ಲಭೋಗದಿಂ
ಪ್ರತಿದಿವಸಂ ಪ್ರಮೋದನೆಸೆದಂ ಸುತನಿರ್ಮಳ ಧರ್ಮದಿಂ ನೃಪಂ ೧೯೮

ಓರಂತೆ ಮೆಚ್ಚಿದಂ ಕೃತಿ
ಸಾರಂ ನೃಪವರ್ಣನಕ್ಕೆ ಹೊಯ್ಸಳ ವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೯೯

ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನಪುರಾತನಪ್ರಮಾಣ
ಸುಕವಿಪುಂಗವ ಮಲ್ಲಿನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ನೃಪವರ್ಣನಂ ಪಂಚಮಾಶ್ವಾಸಂ



# ವಿವಾಹವರ್ಣನಂ

ಪಸೆ ಪಂದಲ್ ದಟ್ಟ [೧]ಕುಡ್ಯಂ ಜಗತಿ[೧] ಬಿಗಿದ ಭೃಂಗಾರಿ ಮೇಲ್ಕಟ್ಟು ಚಿತ್ರಂ
ಪೊಸಕುಂಭಂ ಶಂ[೨]ಕು[೨] ನೂಲ್ವೆರಣೆ ತಳಿರ್ಗಳಸಂ ಸರ್ವಧಾನ್ಯಂ ಮೊಸರ್ ಭ
ಕ್ಷ್ಯಸಹಸ್ರಂ ಲಾಜೆಹೋಮಂ ಪಱಿ[೩]ನ[೩]ಡೆ ಗುಡಿ ಪೂದೋರಣಂ ಬಾಸಿಗಂ ಸೇ
ಸೆ ಸಮಸ್ತಸ್ತ್ರೀಜನಂ ಕನ್ನಡಿಜವಳಿಗಳುದ್ವಾಹದೊಳ್ ವರ್ಣನೀಯಂ ೧
(ಸೂಕ್ತಿಸುಧಾರ್ಣವಂ ೫-೧)

ಕಡು ಚೆಲುವಿನ ಮಂಟಪಮಂ
ನಡೆ ನೋಡಲ್ ಬಂದು ಬಾಗಿಲೊಳ್ ಪುತ್ಥಳಿಯುಂ
ಪಡಿಯರತಿಯರುಗಳೆರೆಬರ್
ನುಡಿಯಿಸಿ ನುಡಿಯುಮೊಡೆ ನಾಣ್ಚಿ ಕೆಲನಂ ಸಾರ್ವರ್ ೨

ಪಾದರಿಯ ಸಿಂಧುವಾರದ
ಜಾದಿಯ ಮಲ್ಲಿಗೆಯ [೪]ವೊಲ್ಲೆಗಳ[೪] ಸುರಗಿಯ ಹೊಂ
ಗೇದಗೆಯಿರವಂತಿಯ ಚೆ
ಲ್ವಾದಲರಿಂ ಸಮೆದ ಕುಸುಮಮಂಟಪಮೆಸೆಗುಂ ೩
(ಲೀಲಾವತಿ ೧೧-೫೨)

ಮನಸಿಜನ ರತಿಯ ಮದುವೆಗೆ
ಮನವೊಸೆದು ವಸಂತನೆಂತು ಮಾಡಿಪೊಡಂ ತಾ
ನಿನಿತೆಸೆಯದೆಂಬರಿನ್ನಱಿ
ಯೆನದಂ ಪಸುರ್ವಂದರಂದಮಂ ಮಿಗೆ ಪೊಗೞಲ್ ೪
(ಲೀಲಾವತಿ ೧೧-೫೩)

ಸನೆಕೇರಿಂ ಕಂಪಿಸಣ್ಪಿಂ ಕುಸುಮಿತಲತಿಕಾ[೫]ಕುಡ್ಯ[೫]ಸಂದೋಹದಿಂ ಕ
ರ್ಬಿನ ಸಾಲ್ಕುಂ ಕಂಭದಿಂ ತಾವರೆಯ [೬]ದುಗುಲ[೬]ದಿಂ ಮಲ್ಲಿಕಾಬಂಧದಿಂ ಚಂ
ಪಕದಣ್ಪಿಂ ತೊಯ್ದ ಸ್ರಾಗೊಂಚಲ ಸ್ಫೊದಕೆಗಳಿಂ ಸಾರ ಕರ್ಪೂರವೇದೀ
ಜನಿತಾಲಂಕಾರದಿಂದೊಪ್ಪುವ ನವಸುಮನೋಮಂಟ[೭]ಪಂ ಕಣ್ಗೊಳಿಕ್ಕುಂ[೭] ೫
(ಲೀಲಾವತಿ ೧೧-೫೮)

---

[೧] ಜಾಗಂ ಜಗಲಿ(ಸೂ) [೨] ಖ(ಸ) [೩] ಕ(ಸೂ) [೪] ಸಂಪಗೆಯು(ಅ) [೫] ದಂಡ(ಅ)
[೬] ಮುಕುಳ(ಅ) [೭] ಪಕ್ಕೆಯ್ದೆವಂದಳ್(ಅ)

ಒಂದಿದನೇಕರತ್ನರಚನಾರುಚಿರದ್ಯುತಿ ತಳ್ತು ತನ್ಮೊಳುಂ
ತೊಂದಿಯೆ ಸೋಂಕಿರಲ್ ಪರಿದು ಬಿರ್ಚಿಸಿದಂತೆವೊಲಾಗೆ ಬಂದು ಮಾ
ಕಂದಮಹೀಜದಂತೆಸೆಪ್ರಮುನ್ನಮಿತೋತ್ಸವಕೇತನಂ ಶುಭಾ
ನಂದಿತಲೋಕಚೇತನಮತೀವವಿನೂತನಮಾ ನಿಕೇತನಂ ೬

ಒದವಿದ ಚೆಲ್ವು ನೂರ್ಮಡಿಸೆ ನೂರ್ಮಡಿಕುಂ ಹರಿತಾಶ್ಮಭಿತ್ತಿಜಾ
ಲದ ಪಸುರಿಂದೆ ಜಾಗದ ಪಸುರ್ಪುಪಹಾರಮನೋಹರಪ್ರಸೂ
ನದ ಕಡುವೆಳ್ಪಿನಿಂದೆ ಕಡೆಯಿಕ್ಕಿದ ಮುತ್ತಿನ ಬೆಳ್ಪ ರತ್ನದೀ
ಪದ ಬೆಳಗಿಂದೆ ಮಾಣಿಕದ ಕಂಭದ ಕೆಂಬೆಳಗಾ ನಿವಾಸದೊಳ್ ೭
(ಜಗನ್ನಾಥವಿಜಯಂ ೧೦-೯೪, ಸೂಕ್ತಿಸುಧಾರ್ಣವಂ ೬-೧೫)

ಮಿಸುಗುವ ಮುತ್ತಿನ ಚೌಕದ
ಪಸೆವಾಸಿದ ಪಟ್ಟವಣೆಯ ದುಗುಲದ ರುಚಿಗಳ್
ಪಸರಿಸಿ ಪೊಂಜಗಲಿ ಪಿರಾ
ಜಿಸುತಿರ್ದುದು ಗಂಗತುಂಗಪುಳಿನಶ್ರೀಯೋಲ್ ೮

ಸಾರಸುವರ್ಣವೇದಿಕೆ ದುಕೂಲವಿತಾನಮಪೂರ್ವಭಂಗಿ ಭೃಂ
ಗಾರ ಘಟಾಳಿ ಪೂರ್ಣಕಲಶಂ ಮಣಿದೀಪಿಕೆ ಪಲ್ಲವೋಲ್ಲಸತ್
ತೋರಣಮುತ್ಸವಧ್ವಜಮೆನಿಪ್ಪವು ಮಂಗಳಲಕ್ಷ್ಮಿ ಕೊಟ್ಟಲಂ
ಕಾರಸಿಕಾಯಮಂತಿರೆ ಮನೋಹರಮಾಯ್ತು ವಿವಾಹಮಂಟಪಂ ೯

ಎಱಕೆ ಮರಲ್ದು ಗೋಣ್ಮುರಿದು ಚಂಚುಪುಟಂ ತೆಱೆದಕ್ಕಿವಾಱೆ ಬಂ
ದೆಱಗುವವಲ್ಲಿ ಚಂಚು[೧]ಗಳೊಳಂ[೧] ಕಡೆಯಿಕ್ಕಿದ ಪಚ್ಚೆಸಾರವಂ
ಕಿಱುವಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟೆಯಂ ಪಿಕಂ
ನಿಱುದಳಿರ್ಗೆತ್ತು ಲಂಬಣದ ಮುತ್ತುಗಳಂ ಮಱಿಗೆತ್ತು ಚಾತಕಂ ೧೦
(ಅನಂತನಾಥಪುರಾಣಂ ೬-೪೩, ಸೂಕ್ತಿಸುಧಾರ್ಣವಂ ೬-೪)

ನೀಲಾಬದ್ಧಸ್ಥಳೀಕಂ ಮರಕತಜಗತೀಮಂಡನಂ ಸ್ಫಾಟಿಕಸ್ತಂ
ಭಾಲಂಬಂ ಚಾರುಚಾಮೀಕರಮಯರುಚಿಮದ್ಭಿತ್ತಿ ವೈಡೂರ್ಯ ನಿರ್ವ್ಯೂ
ಹಾಲೀಢಂ ವ್ಯಕ್ತಮುಕ್ತಾಘಟಿತಪಟಳಸಂಪರ್ಕಕರ್ಕೇತನದ್ವಾ
ರಾಲಂಕಾರಂಗಳಿಂ ಕಣ್ಗೆಸೆದುದನುಪಮಂ ತತ್ಕೃತೋದ್ವಾಹಗೇಹಂ ೧೧
(ಚಂದ್ರಪ್ರಭಪುರಾಣಂ ೬-೪೪, ಸೂಕ್ತಿಸುಧಾರ್ಣವಂ ೬-೫)

---

[೧] ಮೋರೆಯೊಳ್ (ಸೂ)

ಆದಱ ನವರತ್ನಕೂಟಾ
ಗ್ರದಿನುಣ್ಮುವ ಪೆಱಕೆವೆಳಗು ತುಂಗಧ್ವಜಚೆ
ಹ್ನದ[1]ಕರಡಿಗೆಯೊಲ್[1] ಕಣ್ಗೆಸೆ
ದುದು ಹಾರಾವಳಿಯ ವಿಳಸವಿಕ್ಕಿದ ತೆಱದಿಂ ೧೨
(ಚಂದ್ರಪ್ರಭಪುರಾಣಂ ೬-೪೫, ಸೂಕ್ತಿಸುಧಾರ್ಣವಂ ೬-೬)

ಸಿರಿಸದ ಮಾಲೆಯಿಂ ಪೆಸೆವ ದಾಡಿಮ ಬೀಜಸಮಾಜಮೆಂದು ಸೌಂ
ದರ ಬಿಸಕಾಂಡಮೆಂದು ನಲವಿಂದಳಿಯುಂ ಗಿಳಿಯುಂ ಮರಾಳಮುಂ
ಪರಿಮರಿಯಾಡಿ ವಾಸಿಸಪೆ ಪೀರದೆ [2]ನೇರದೆ[2] ಮಾಣ್ದ ಪಚ್ಚೆಯೊ
ಳ್ಪರಲ ತೊಳಪ್ಪ ಮಾಣಿಕದ ಮುತ್ತಿನ ಲಂಬಣ[3]ವೆತ್ತ ನೋೞ್ಪಡಂ[3] ೧೩
(ಚಂದ್ರಪ್ರಭಪುರಾಣಂ ೬-೪೮, ಸೂಕ್ತಿಸುಧಾರ್ಣವಂ ೬-೧೦)

ಆದಱ ವಿತಾನಚೀನಪಟಚಿತ್ರಕದಂಬಕಮಿಂದ್ರನೀಲರ
ತ್ನದ ನೆಲೆಗಟ್ಟಿನೊಳ್ ಪೊಱಱದು ಮಾರ್ಪೊಳೆಯುತ್ತಿರೆ ಕಂಡು ಕುಂತಳಂ
ಕೆದಱ ಕುಚಂ ಕದಕ್ಕದಿಸೆ ಕೆತ್ತೆ ನಿತಂಬಮಿದೊಂದು ಧೂಳಿಚಿ
ತ್ರದ ಕಣಮೆಂದು ಮುಯ್ವಲಸೆ ಧಿಂಕಿಡುವರ್ ಕಡೆಯೊಳ್ ಲತಾಂಗಿಯರ್ ೧೪
(ಅಂತನಾಥಪುರಾಣಂ ೬-೪೪, ಸೂಕ್ತಿಸುಧಾರ್ಣವಂ ೬-೧೦)

ಅನಿಮಿಷವಧು ಕಸ್ತೂರಿಗದ
ಡಿನ ಚಳೆಯಂಗೊಟ್ಟಳಲ್ಲಿ ಸೆಳ್ಮುಗುರ್ಗಳ ತೆ
ಳ್ಪನೆ ತಿಳಿದ ಕಾಂತಿ ಕುಸುಮಿಸು
ವಿನೆಗಂ ಕಡಗಣ್ಣ ಕಾಂತಿ ಧವಳಿಸುವಿನೆಗಂ ೧೫
(ಅನಂತನಾಥಪುರಾಣಂ ೬-೪೬, ಸೂಕ್ತಿಸುಧಾರ್ಣವಂ ೬-೧೬)

ತಾರಗೆಗಳ ತತ್ತಿಗಳಂ
ಕಾರಿರುಳೊಳ್ ಕಱಪ ಗಗನಲಕ್ಷ್ಮಿಯೊಲೊರ್ವಳ್
[4]ಪೌ[4]ರಾಂಗನೆ ಹರಿನೀಲದ
ಕೇರೊಳ್ ಚಂದನದ ಬಿಂದುಮಾಲೆಯನಿಟ್ಟಳ್ ೧೬
(ಅನಂತನಾಥಪುರಾಣಂ ೬-೪೭, ಸೂಕ್ತಿಸುಧಾರ್ಣವಂ ೭-೧೭)

---

[1] ಕಡೆಗಡೆಯೊಳ್(ಸೂ) [2] ಕಚ್ಚ(ಸ)) [3] ಪಿಲ್ಲದೆಲ್ಲಿಯುಂ(ಸೂ) [4] ಸೌ(ಸೂ)

ಪಳುಕಿನ ಭೃಂಗಾರದ ಬೆ
ಳ್ಪೆಳಗುಂ ಜಾಗಂಗಳೆಸೆವ ಪಸುರ್ವೆಳಗುಂ ಪ್ರ
ಜ್ವಳಿಪ ಮಣಿಸ್ತಂಭದ ಕೆಂ
ಬೆಳಗುಂ ಪಸರಿಪುವು ಸುರಶರಾಸನ ಶತಮಂ ೧೭

(ಚಂದ್ರಪ್ರಭಪುರಾಣಂ ೬-೫೧ ; ಸೂಕ್ತಿಸುಧಾರ್ಣವಂ ೬-೧೪)

ಮಂಗಳಕೇತುವಿರಾಜಿತ
ಮಂಗೀಕೃತನೀಲಭಾನುತಮಸಂ ಪರಿಷ
ತ್ಸಂಗತಬುಧಗುರುಕವಿರಾ
ಜಂಗದಿತ ನವಗ್ರಹಂ ತದುದ್ವಾಹಗೃಹಂ ೧೮

(ಅನಂತನಾಥಪುರಾಣಂ ೬-೪೮, ಸೂಕ್ತಿಸುಧಾರ್ಣವಂ ೬-೧೮)

ಕಳಶದ ಮೇಲೆ ಕನ್ನಡಿ ತಗುಳ್ಚಿ ಕೆಲಂಬಿಡಿದಿರ್ದ ವೇದಿಕಾ
ವಿಳಸಿತ ಮಂಡಪಂ ಸ್ಫಟಿಕಭಿತ್ತಿಯೊಳಚ್ಚಱಂದಂತೆ ತೋಱೆ ಪೊಂ
ಗಳಸದ ಬಾಯ್ಗೆ ತಂದು ತಳಿರಂ ಮಣಿವೇದಿಕೆಗೆತ್ತು ಭಿತ್ತಿಯಂ
ಬಳಸಿ ಮಹತ್ತರಾಮರಿಯರಂ ನಗಿಪರ್ ಕೆಲರಲ್ಲಿ ಮುಗ್ಧೆಯರ್ ೧೯

(ಅನಂತನಾಥಪುರಾಣಂ ೬-೪೫, ಸೂಕ್ತಿಸುಧಾರ್ಣವಂ ೬-೧೧)

ತೊಟ್ಟಿಯ ಸುತ್ತುವೆತ್ತ ಪಸುರ್ವಂದರ ಮುತ್ತಿನ ಮಂಟಪಂಗಳೊಳ್
ಕಟ್ಟಿದ ಪಚ್ಚೆದೋರಣದ ಬಾಜಿಪ ತೂರ್ಯದ ಸಂಭ್ರಮಂಗಳಿಂ
ತೊಟ್ಟಿಡೆಯಾಡುವೆಯ್ದೆಯರ ಪಾವನಮಂಗಳಗೀತದೊಳ್ಪು ನೇ
ರ್ಪಟ್ಟುದು ನೋಟಕರ್ಗೊಸಗೆಯುಬ್ಬಣಮಪ್ಪಿನಮಾ ವಿವಾಹದೊಳ್ ೨೦

(ಸೂಕ್ತಿಸುಧಾರ್ಣವಂ ೬-೨೭)

ಮಸೆವಟ್ಟುಜ್ವಲದರ್ಪಣಂ ಪೊಸದಳಿರ್ ಪೂಮಾಲೆ ಮುಕ್ತಾಕ್ಷತಂ
ಬಿಸಸೂತ್ರಂ ಸಿತದೂರ್ವೆ ನೂತನಫಲಂ ಗ್ರೈವೇಯಕಂ ತನ್ನೊಳೊ
ಪ್ಪೆ ಸಮಸ್ತೌಷಧಿ ಪಂಚರತ್ನಸಹಿತಂ ಪೂತಾಂಬುಪೂರ್ಣಂ ವಿರಾ
ಜಿಸಿದತ್ತಂ[1]ಚಿತ[1]ಶಾತಕುಂಭಮಯಕುಂಭಂ ವೇದಿಕಾಮಧ್ಯದೊಳ್ ೨೧

(ಜಗನ್ನಾಥವಿಜಯಂ ೧೦-೯೬, ಸೂಕ್ತಿಸುಧಾರ್ಣವಂ ೬-೨೫)

---

[1] ದಭಿ(ಸೂ)

ಯವೆ ದಿವ್ಯೌಷಧಿ ಪಾರಿಜಾತಕುಸುಮಂ ಸಿದ್ಧಾರ್ಥಮಾದ್ರಾರ್ಕ್ಷತಂ
ಧವಳಾಬ್ಜಂ ಸಿತದೂರ್ವೆ ನೂತನಫಲಂ ಗೋರೋಚನಂ ಲಾಜೆ ಬ
ಣ್ಣವುರಂ ರನ್ನದ ತಣ್ಣೊಡರ್ ಮಲಯಜಂ ಕಸ್ತೂರಿ ಕಾಶ್ಮೀರಮುಂ
ಬಿವಜೀಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದಾ ಸದ್ಮದೊಳ್ ೨೨
(ಜಗನ್ನಾಥವಿಜಯಂ ೧೦-೯೮, ಸೂಕ್ತಿಸುಧಾರ್ಣವಂ ೬-೨೮)

## ಮದವಣಿಗ

ಜೊನ್ನದ[1]ಕಾಂತಿ[1] ನೇತ್ರಕುಮುದಕ್ಕಿನನಂಶು ಮುಖಾಂಬುಜಕ್ಕೆ [2]ಸ್ನೈ
ಪನ್ನದ[2] ಕಾಂತಿ ದೀಪ್ತಿಕೆಗೆ ಕಾರ್ಮುಕ[3]ಗಿಲೇ[3]ಟಿತ್ತು ಶಿರೋಜಕೇಕಿಗು
ತ್ಪನ್ನವಸಂತಮುಂಗಲತೆಗುಗ್ರಮುಮಂ ಭುಜದರ್ಪದಂತಿಗೆಂ
ಬನ್ನೆಗಮುಂದು ತಂದುದು ಕುಮಾರನ ಜವ್ವನಪೇಟಿತ್ತು ಲೀಲೆಯಂ ೨೩
(ಪುಷ್ಪದಂತಪುರಾಣಂ ೪-೬೫)

ಅಲರ್ಗಣ್ಣಂಭೋಜಮಂಡಂ ಮೊಗಸಿರಿ ಮಿಗುಗುಂ ಚಂದ್ರನಂ ಚಂದ್ರಮಾಟಂ
ದಲೆಗುಂ ಕಂಜಾಕ್ಷನಂ ಒಟ್ಟೈದುವು ಭುಜಮುರಂ ನಾಡೆ ವಿಸ್ತಾರಿ ಕರ್ನೈ
ಯ್ದಿಲ ಬಣ್ಣಂ ಮೆಯ್ಯ ಬಣ್ಣಂ ಕಿಱುವರೆಯಮೊಡಂಬಟ್ಟ ಲಾವಣ್ಯಮಿಂತ
ಗ್ಗಲಿಸನ್ನಂ ಪನ್ನತಂ ಕಣ್ಗೆಸೆದಪನಧಿಕಂ [4]ರೂಪ[4]ಕಂದರ್ಪದೇವಂ ೨೪
(ಲೀಲಾವತಿ ೧೧-೧೦೦)

ಶಶಿಯಂ ಜಿಕೀರ್ಡಾಡುತಿರ್ಕುಂ ಮೊಗಮುಲಘುಭುಜಂ ಜಾನುವಂ ಜಕ್ಕುಲಿಕ್ಕುಂ
ದಶನಂ ದಾಳಿಂಬ[5]ದೊಳ್ಳಿ[5]ತ್ತುಗಳಸಿಟಿಸುಗುಂ ನೀಲನಿರೇಜಶೋಭಾ
ವಿಶದ ಶ್ರೀನೇತ್ರಮುಂಗಂ ವಿಕಚಕುವಲಯಶ್ಯಾಮಲಂ ಪ್ರಾಯಮಷ್ಟಾ
ದಶವರ್ಷಂ ತಾನೆನಲ್ ಚಿತ್ರದೊಳಮವನ ರೂಪಾದುದಾದಂ ವಿಚಿತ್ರಂ ೨೫
(ಲೀಲಾವತಿ ೭-೯೫)

ಕುಸುಮಿತಮಾದ ಪದ್ಮಲತೆಯೊಳ್ ಪೊಸಕೇದಗೆಯುಳ್ಳೆಸಳ್ಗಳೊಳ್
ಪೊಸೆವಿಸಮುಣ್ಮಿ ಪೊಣ್ಮಿದನಿತಲ್ಲದೆ ತುಂಬಿಗಳಂ ಪೊದಬ್ಬಿ ಲಾ
ಗಿಸಿದಪುದೆಂಬಿನಂ ಸುದತಿಯರ್ ಪಡೆದಾತನ ದೇಹಮೆಯ್ದೆ ರ್ಶೋಂ
ಪಿಸುತಿರೆ ಪೂಸಿದರ್ ಮೃದುಕರಾಂಬುಜದಿಂ ನವಗಂಧತೈಲಮಂ ೨೬

---

[1] ರಾತ್ರಿ(ಅ) [2] ತೈಲಂ ನವ(ಅ) [3] ಕದೇ(ಅ) [4] ದೇವಿ(ಅ) [5] ದಿಂಬಿ(ಅ)

ಸಿಟಿಲತ್ತಟಂಗಳಲ್ಲಿ ಕುರುಳೊತ್ತಲು ಸೋರ್ಮುಡಿ ಬೆನ್ನೊಳಾಡೆ ಪೊಂ
ಘಟವನೆ ಪೋಲ್ವ ಪೆರ್ಮೊಲೆಯುಂ ಜಗ್ಗುಲಿಸುತ್ತಿರೆ ಹಾರವಲ್ಗೆವುಂ
ಗುಟವನೆ ಭೂಮಿಯೊಳ್ ಬಲಿದು ನಲ್ಲಳ ಕೆಂದಳದಿಂ ತಟಂತಟಂ
ತಟಿಲೆನೆ ತೈಲಮಂ ತಲೆಯೊಳೊತ್ತುವ ನೀಱಗೆ ಸೋಲನಾವನೋ ೨೭

ಉಗುರ್ಗೊನೆ [1]ಸೋಂಕದಂತು[1]ಗುರಿಪೋಜೆ ತರಂತರದಿಂ ಶಿರೋಜಮಂ
ನೆಗಪುವ ಭಂಗಿ ಬಿತ್ತರದಿನೊತ್ತುವ ಕೆಂದಳದೊಂದು ಲಾಘವಂ
ಸೊಗಯಿಸುತಿರ್ದಿನಂ ಸಹಜದಿವ್ಯಸುಗಂಧದ ಕೇಶಪಾಶಮಂ
ಮೃಗಮದಗಂಧಿ ಪೂಸಿದಳುಪಾಸಿತ ಚಂಪಕಗಂಧತೈಲಮಂ ೨೮
(ಜಗನ್ನಾಥವಿಜಯಂ ೧೦-೯೯, ಸೂಕ್ತಿಸುಧಾರ್ಣವಂ ೬-೩೦)

ಅಗಿಲುಂ ಚಂದನ ಕುಂಕುಮ
ಮೃಗಮದಸಂಯುಕ್ತವಟ್ಟಕಳಿಯಂ ಕಾಂತೆಯ
ರುಗಳತಿಜಾಣಿಂದಿಟ್ಟರ್
ಸೊಗಸಾಗಿರೆ ಧರಣಿಪತಿಯ [ನೀಳದ]ಕುರುಳಂ ೨೯

ಚತುರತೆಯೆಂಬಾ ರಾಜ್ಯಕೆ
ಸತತಂ ಪಟ್ಟಾಭಿಷೇಕಗೆಯ್ವಂದದೊಳಂ
ನುತ ರನ್ನದಂಬುಗೆಗಳೊಳ್
ಸತಿಯರ್ ಧರಣೀಶ್ವರಂಗೆ ಮಜ್ಜನಕೆಱದರ್ ೩೦

ಬಿಗಿದುತ್ತುಂಗಕುಚಂ ಕದಕ್ಕದಿಸೆ ಹಾರಂ ತೂಗೆ ಕಣ್ಣೈಲ್ಲನು
ಲ್ಲುಗೆ ಪೊನ್ನೋಲೆ ಕದಂಪನಪ್ಪಳಿಸೆ ಮಧ್ಯಂ ಬಳ್ಕೆ ಘರ್ಮಾಂಬು ಕೈ
ಮಿಗೆ [2]ಕಣ್ಗೊಂಡು[2] ಜಗಜ್ಜನೈಕವಿಭವಂ ಯೋಷಿಜ್ಜನಂ ಮಜ್ಜನಂ
ಬುಗಿಸಿತ್ತಂದು ಸುಹೃಜ್ಜನಂ ವಿರಚಿಪನ್ನಂ ಮಂಗಳಾಚಾರಮಂ ೩೧
(ಜಗನ್ನಾಥವಿಜಯಂ ೧೦-೧೦೦, ಸೂಕ್ತಿಸುಧಾರ್ಣವಂ ೬-೩೨)

ಮನಮನಲರ್ಚುತಿರ್ದ ನವಪುಷ್ಪಸಮೃದ್ಧಿ ವಸಂತಚೂತನಂ
ದನಮಲರ್ದಂತು ಮಾಂಗಳಿಕಸಾರಧನಂ ಧವಳಪ್ರಸಾಧನಂ
ತನಗಮರ್ದೊಪ್ಪೆ ತದ್ವಿಮಲಮೌಕ್ತಿಕಮಂಡನಕಾಂತಿಪೂರದಿಂ
ನೆನೆಯಿಸಿದಂ ಮುಕುಂದನಮೃತಾಬ್ಧಿಯೊಳಿರ್ದ ನಿಜಾದಿಮೂರ್ತಿಯಂ ೩೨
(ಜಗನ್ನಾಥವಿಜಯಂ ೧೦-೧೦೧, ಸೂಕ್ತಿಸುಧಾರ್ಣವಂ ೬-೩೩)

---

[1]ಯಿಂದವೋ(ಅ) [2]ಕೈಗೊಂಡು(ಸೂ)

ಆ ರಾಜಶೇಖರಂಗೇಂ
ರಾರಾಜಿಸಿದುದೊ ವಿಚಿತ್ರಮಣಿಗಣರಚನೋ
ದಾರಂ ಶೇಖರಮುಜ್ವಳ
ಮೇರುಶಿಖರಿ ಶಿಖರರತ್ನದೊಳ್ ಸರಿವರುತಂ ೩೩
(ಚಂದ್ರಪ್ರಭಪುರಾಣಂ ೬-೫೬. ಸೂಕ್ತಿಸುಧಾರ್ಣವಂ ೬-೩೪)

ಅಗಲದೆ ನೆಲಸಿದ ಲಕ್ಷ್ಮಿಯ
ನಗೆಗಣ್ಗಳ ಬೆಳಗು ಬಳೆದು ಬೀಟಲ್ವರಿದ
ತ್ತಗಲ್ದುರದೊಳೆಂಬ ತೆಱದಿಂ
ಸೊಗಯಿಸಿದುದು ವಿಮಲ ತರಳ ತಾರಾಹಾರಂ ೩೪
(ಚಂದ್ರಪ್ರಭಪುರಾಣಂ ೬-೫೪, ಸೂಕ್ತಿಸುಧಾರ್ಣವಂ ೬-೩೫)

ಅರಿಬಲಜಳನಿಧಿ ಮಥನೋ
ದ್ಧುರಭುಜ[1]ವನ್ಮಂದರಮನೆ[1] ಸುತ್ತಿದ ತಾರಾ
ಪರಿಕರಮೆನೆ ವಜ್ರಾವಳಿ
ವಿರಚಿತ ಕೇಯೂರವಳಯಮೇಂ ತೊಳಸಿದುದೋ ೩೫
(ಚಂದ್ರಪ್ರಭಪುರಾಣಂ ೬-೫೯, ಸೂಕ್ತಿಸುಧಾರ್ಣವಂ ೬-೩೬)

ಪ್ರೊದೆವ ಚಿನಾಂಬರಂ ಶಿರದ ರತ್ನಕಿರೀಟ ಕೊರಳ್ಗನುರ್ಚಿ ತೋ
ಱುದ ನವಹಾರದಿಂ ಕರದ ಕಂಕಣದಿಂ ಮಣಿಮುದ್ರಿಕಾಳಿಯಿಂ
ಮುದ ಮಿಗೆ ತೊಟ್ಟ ಪೇರಣೆಯ ಪೂಸಿದ ಚಂದನಲೇಪನಂಗಳಿಂ
ಮದನಧಿಪ್ಯವದಂತೆ ನೃಪನೊಪ್ಪಿದನೊಂದು ವಿಳಾಸದೇಟಿಗ್ಗಯಿಂ ೩೬

## ಸ್ತ್ರೀವರ್ಣನಂ

ಪೊಂಗಿದ ಪಾದಮುಂ ಸಮಪದಾಂಗುಲಿಯುಂ ಮೃದುಗೂಢಗುಲ್ಫಮುಂ
ಮಂಗಳವೃತ್ತಜಂಘೆಗಳೊಪ್ಪುವ ಕೋಮಲಪೂರ್ಣಜಾನುಯು
ಗ್ಮಂಗಳುಮೇಟಿಗೆತ್ತುರುಸಿತಂಬಮುಮಲ್ಪಸುಮಧ್ಯಮುಂ ಸಮು
ತ್ತುಂಗ ಭುಜಂಗಳುಂ ವಿಕಸಿತಾನನಮುಂ ಮೆಱೆದಿರ್ಪುರ್ವಾಕೆಯೊಳ್ ೩೭

---

[1] ಮಂದರಮನ್ನೆದೆ(ಸೂ)

ನಿಡಿಯೆ ಸೆಗಟ್ವಿ ಚೆಲ್ವ ಕಚವಲ್ಲಿಲಲಾಟವರೋಮಜಂಘೆ ಮೆ
ಲ್ಲಡಿ ಮಧುಗಂಧಮಾಂಸಳಮನೋಹರವಕ್ಷತದಭ್ರುಗಂಧದಿ
ಟ್ಟೆಡೆಯೆನಿಸಿರ್ಪಡರ್ದ ಜಘನಂ ಪರಿಪೂರ್ಣಪಯೋಧರಂ ಕರಂ
ಕುಡಿನಿಮಿರ್ದಕ್ಷಿಗಳ್ ಪೆಱತವ ನೀಳ್ದಿಹ ಪುರ್ಬುಗಳಿರ್ಪುವಾಕೆಗಂ ೩೮

ಸಲೆ ಚೆನ್ನೆಯ್ದಿಲ ಕಾವಸಿಂ ಮುಡಿಸಿದಂತೊಪ್ಪಿರ್ಪ ಕರ್ಣಂ ನಿಮಿ
ರ್ದೆಳನೀಲಚ್ಛವಿಯಂತೆ ರಂಜಿಪ ಲಸದ್ಭ್ರೂರೇಖೆಗಳ್ ಕುಂದಕು
ಟ್ಮಳಮಂ ಸೇರಿಸಿದಂತೆ ತೋರ್ಪ ರದನೋದ್ವೃತ್ತಪಂಕ್ತಿ ನೂತ್ನಪ್ರವಾ
ಳಲತಾಸಾರದೊಳದ್ದಿದಂತೆಸೆದುದಾ ಬಿಂಬಾಧರಂ ಕನ್ನೆಯಾ ೩೯

ಪದ ನಡು ಕಂಠ ಕರ್ಣಯುಗ ಪುರ್ಬು ಬೆರಳ್ಗಳು ಸಣ್ಣವಾಱು ಮು
ತ್ತ್ರಧರ ಕಪೋಲ ದಂತ ನಖ ಗುಹ್ಯ ಬಸಿರ್ ತೆಳುಸೆಂಬಿವಾಱು ಕೊ
ರ್ವಿದ ಕುಚ ನೇತ್ರ ನಾಸಿಕ ಕಟೀತಟವೊಳ್ದೊಡೆ ಕೇಶಬಂಧಮೆಂ
ಬಧಿಕವಿವಾಱು ಕಾಂತೆಯರ ಚೆಲ್ವಿಕೆಗಂ ಪದಿನೆಂಟು ಲಕ್ಷಣಂ ೪೦

ಯವೆ ಲಾಜಾಂಕುಶ ಚಕ್ರ ಚಾಪ ಮಕರೋದ್ಯಚ್ಚಿಹ್ನಸಂಗಯ್ಯೊಳಿ
ರ್ಪವಳುಂ ನೀರಜಮೂರ್ಧ್ವರೇಖೆ ಪದಪಿಂಪಂಗಾಲೊಳೊಪ್ಪಿರ್ಪಳುಂ
ಕಿವಿಯಂ ಚುಂಬಿಪ ಕಂಗಳುಳ್ಳವಳುಮೀ ಲಾವಣ್ಯಚಂಚತ್ತ್ರಿಭಾ
ಗವನಾಂತಿರ್ಪ ಕುಲಾಣಿಯಪ್ಪ ಸತಿಯೇ ವೈವಾಹಿಕಕ್ಕುತ್ತಮಂ ೪೧

ನಗೆ ನಸುಲಜ್ಜೆಯೊಳ್ ತೊಡರಲಿರ್ದುಪೆ ಬಲ್ಮಡೆ ಮಾಂದ್ಯಭಾವದೊಳ್
ಪುಗಲಿಡೆ ಬಾಸೆ ಸಾಲಱಪಲಿರ್ದುಪೆ ಸೂಸುವ ನೋಟವಾಸೆಯೊಳ್
ಮಿಗಲಿಡೆ ತತ್ಕುಚಂ ನಿಜದ ಸೀಮೆಗೆ ರೇಖೆಯನೊತ್ತಿ ಲಜ್ಜಿಸಲ್
ಬಗೆದಿವೆ ಯವ್ವನೋದಯಮೊ ಬಾಲ್ಯವಿಮೋಚನಮೋ ಭವಾನಿಯಾ ೪೨

(ಗಿರಿಜಾಕಲ್ಯಾಣಂ ೪-೫)

ಅಳಕಂ ತೆಱಪುಗೊಡಲ್ಕಿದೆ
ತಿಳಕಕ್ಕೆ ತದಾಸ್ಯಬಿಂಬಮಾದರ್ಶದೊಳಂ
ಪೊಳೆಯಲಿದೆ ನಾಭಿಮಂಡಳ
ಮೊಳಪುಗಲಿದೆ ನೋಡು ಮೇಸೆಯಂಬಿಕೆಯುರಮಂ ೪೩

(ಗಿರಿಜಾಕಲ್ಯಾಣಂ ೪-೬)

ದಂತಂ ಮುಸುಂಕುಗಳೆಯ
ಲ್ಕಾಂತಿವೆ ನೋಡು ತನುವನೆಳಸಲಿದೆ ನುಡಿ ಮೌನ
ಪ್ರಾಂತಮನೊತ್ತುಗೊಳಲ್ಕಿದೆ
ಕಾಂತಿ ಶರೀರಮನಮರ್ಚಲಿದೆ ಪಾರ್ವತಿಯಾ ೪೪

(ಗಿರಿಜಾಕಲ್ಯಾಣಂ ೪–೭)

ನವಕುಚಕಳಶಂಗಳಿನೊ
ಪ್ಪುವ ಮುಖದರ್ಪಣದಿನಳಕತೋರಣದಿಂ ಪೊ
ಣ್ಮುವ ಮುಡಿಗುಡಿಯಿಂ ಮಿ
ಕ್ಕುವವಯವದಿಂದಗಜೆ ಯವ್ವನಮನಿದಿರ್ಗೊಂಡಳ್ ೪೫

(ಗಿರಿಜಾಕಲ್ಯಾಣಂ ೪–೮)

ಮನದಾಸೆ ವದನದೊಳ್ ಲೋ
ಚನದೊಳ್ ನುಡಿ ನಗೆ ಕಪೋಲದೊಳ್ ಕೋಪಂ ಪು
ರ್ಬಿನೊಳಱಿವು ಬುದ್ಧಿಯೊಳ್ ಭಾ
ವನೆ ಚಿತ್ತದೊಳಮರ್ದುವಂಬಿಕೆಗೆ ಯವ್ವನದೊಳ್ ೪೬

(ಗಿರಿಜಾಕಲ್ಯಾಣಂ ೪–೧೪)

ನುಡಿಯೊಳ್ ಜಾಣ್ ನೋಟದೊಳ್ ವಕ್ರತೆ ಪೊಸನಡೆಯೊಳ್ ವಿಭ್ರಮಂ ಸಾರ್ದುದೆಯ್ದಿ
ತ್ತುಡಿಯುಟ್ಟತ್ತಾಹ ಕರ್ಣಾಮೃತಮತಿರುಚಿರಂ ಕಣ್ಣ ಪುಣ್ಯಂ ದಿಟಕ್ಕಿ
ರ್ಮಡಿಯಾ [1]ವಾಗ್ದೇ[1]ವಿಗಂ ನೂರ್ಮಡಿ ಕುಸುಮಶರಕ್ಕಂಜಿವಿಂಡಿಂಗೆ ಸಾಸಿ
ರ್ಮಡಿ ಸಾಹಿತ್ಯಂ ವಿಳಾಸಂ ಗಮಕಮುಮರ್ದುದಾರ್ಯಾಂಗದೊಳ್ ಕಣ್ಗೆ ಚಿತ್ರಂ ೪೭

(ಗಿರಿಜಾಕಲ್ಯಾಣಂ ೪–೧೫)

ಅತಿಮಧುರಮತಿಮನೋಹರ
ಮತಿಮಂಗಳಮತಿವಿಚಿತ್ರಮತಿಬಂಧುರಮಿಂ
ತತಿಸಂಭ್ರಮಮತಿವಿಭ್ರಮ
ಮತಿಯವ್ವನಮತಿವಿಲಾಸವತಿ ಪಾರ್ವತಿಯಾ ೪೮

(ಗಿರಿಜಾಕಲ್ಯಾಣಂ ೪–೧೨)

---

[1] ವಾಣೀ(ಅ)

ಮದನಮಂ ವಿಭ್ರಮಮಂ ವಿಲಾಸದೊದವಂ ಸೌಂದರ್ಯಮಂ ಸೌಖ್ಯಮಂ
ಸದಲಂಕಾರತೆಯಂ ಸಲಕ್ಷಣಮನಾಂತಿರ್ದಂಬಿಕಾಯವ್ವನಂ
ಪದೆಪಿಂ ಪೇಳಿಕೊಳ್ವಡದತ್ಯನೂನಪದಮತ್ಯಾಶ್ಚರ್ಯಮತ್ಯುಜ್ವಲ
ಪ್ರದಮತ್ಯೂರ್ಜಿತಮತ್ಯಸಾಧ್ಯಗುಣಮತ್ಯಾನಂದಮತ್ಯುನ್ನತಂ ೪೯

(ಗಿರಿಜಾಕಲ್ಯಾಣಂ ೪-೧೧)

ಉರಮಿಂಬಿಲ್ಲ ಪಯೋಧರದ್ವಯದ ಕೊರ್ಬಿಂಗಾಸ್ಯಮಿಂಬಿಲ್ಲ ಭಾ
ಸುರ ನೇತ್ರದ್ವಯಪ್ರಚಾರತೆಗೆ ಬೆನ್ನಿಂಬಿಲ್ಲ ಧಮ್ಮಿಲ್ಲ ಬಂ
ಧುರ ಸೀಮಾವಳಿಯಕ್ಕೆ ನೋಡೆ ನಡುವಿಂಬಿಲ್ಲೊಪ್ಪುವೀ ಬಾಸೆಗೀ
ಗಿರಿಜಾಯವ್ವನಸಂಪವಕ್ಕೆ ತನುವೆಂತಿಂಬಪ್ಪುದೋ ರುದ್ರನಾ ೫೦

(ಗಿರಿಜಾಕಲ್ಯಾಣಂ ೪-೫೮)

ವರವಕ್ಷೋಜಭರಕ್ಕೆ ನೂತ್ನ ತನುಮಧ್ಯಂ ಭಗ್ನಮಾದಪ್ಪುದೆಂ
ದಿರದಜ್ಞೋದ್ಭವಸೂರೆಗೊಟ್ಟ ನವನೀಲಸ್ತಂಭಮೆಂಬಂತೆ ಸೌಂ
ದರಮಾಗಿರ್ದುದು ಬಾಸೆ ನೀಳ್ದ ನಗೆಗಣ್ ಕರ್ಣಾಂತಮಾಗೊಪ್ಪಿರಲ್
ಗಿರಿಜಾಯವ್ವನಸಂಪದಕ್ಕೆ ತನುವೆಂತಿಂಬಪ್ಪುದೋ ರುದ್ರನಾ ೫೧

ಮೂಱಿಡೆ ಕಿಱಿದುಂ ದೊಡ್ಡಿತ
ಮೂಱಿಡೆಯೊಳ್ ರೋಮನಾಶ ರೋಮಂ ಪಿರಿದುಂ
ಮೂಱಿಡೆ ಕೆಂಪುಂ ಬೆಳ್ಪುಂ
ನೀಱಿಗೆ ನೆಲಸಿದುದು ಯವ್ವನಂ ನೆಲಸದೊಡಂ ೫೨

ಮನದ ವಿವೇಕಂ ಪೀನ
ಸ್ತನದೊಳ್ ನಾಲಗೆಯ ಮಾತು ಕಣ್ಗಳೊಳ್ ಕರತ
ರ್ಜನಮಡರೆ ನಿಮಿರ್ದ ಪುರ್ಬಿನ
ಕೊನೆಯೊಳ್ ನೆಲಸಿದುದು ಯವ್ವನಂ ನೆಲಸದೊಡಂ ೫೩

ಮುಗಮುಗಮಿಸಿತ್ತು ತೋಳಸೊದಲಾನನಮುಳ್ಳಲರಾಯ್ತು ಕಣ್ಮಲರ್
ಮಿಗೆ ಸಿಡಿದಾಯ್ತು ಮೂಡಿದುವು ಪೇರುರದೊಳ್ ಮುಕುಳಸ್ತನಂಗಳೂ
ರುಗಳಿಡೆ ನುಣ್ಣನಾಂತುದು ಬಸಿರ್ ಬಡವಾದುದು ಬಾಸೆ ನೀಳ್ದುದೀ
ಕೆಗೆ ಬರೆ ಯವ್ವನಂ ಬಟಿಕ ಬಂದುದು ಕಾಮನ ಕೈಗೆ ಕಾರ್ಮುಕಂ ೫೪

[1]ಸಾರಂ ಸಂಸಾರದೊಳಬ
ಲಾರತ್ನಂ ಸಾರಮಲ್ಲಿ[1] ಯವ್ವನಮದಜಾತೋಳ್
ಸಾರಂ ಮಧುರಾಕಾರಂ
ಸಾರಂ ಮತ್ತಂತದಕ್ಕುಮನುಕೂಲರಸಂ ೫೫
(ಕಾವ್ಯಾವಲೋಕನಂ ೬೬೦)

ಕುರುಳೊಳ್ ಕರ್ಪು ಕಟಾಕ್ಷದೊಳ್ ತರಳಭಾವಂ ಪುರ್ಬಿನೊಳ್ ವಿಭ್ರಮಂ
ಕೊರಲೊಳ್ ರೇಖೆ ಕಪೋಲದೊಳ್ ಪೊಳೆಪು ತೋಳೊಳ್ ಕೋಮಲತ್ವಂ ಪಯೋ
ಧರದೊಳ್ ತುಂಗತೆ ಮಧ್ಯದೊಳ್ ಕೃಶತೆ ಮೆಯ್ಯೊಳ್ ಮಾರ್ದವಂ ರಂಜಿಸು
ತ್ತಿರೆ ಬಾಣಾತ್ಮಜೆ [2]ರಂಜಿಸಳ್ ಮದನತೇಜಂ ಮೂರ್ತಿಗೊಂಡಂದದಿಂ[2] ೫೬
(ಜಗನ್ನಾಥವಿಜಯಂ ೧೭-೯೨)

ಮದನನ ಕೈದು ಕೂರ್ಪನೊಳಕೊಂಡುದೊ ಕಾವನ ಕಲ್ಪವಲ್ಲಿ ಪೂ
ತುದೊ ಕುಸುಮಾಸ್ತ್ರರಾಜನ ಜಯಧ್ವಜಪಟ್ಟಿಗೆ ಚಿತ್ರಿಸಿತ್ತೊ ಹೃ
ತ್ಸದನನ ಪುಷ್ಪಚಾಪಲತೆ ಪೂಗಣೆವೊಯ್ದುದೊ ಕಂತುದಂತಿ ಪ
ಣ್ಣಿದುದೊ ದಿಟಕ್ಕೆನಲ್ ಬಲಿಸುತಾತ್ಮಜೆ ಯವ್ವನದಿಂದಮೊಪ್ಪಿದಳ್ ೫೭
(ಜಗನ್ನಾಥವಿಜಯಂ ೧೭-೯೩)

ಈಕೆಯ ಲೋಚನಂ ಕುಸುಮಸಾಯಕಮೀಕೆಯ ಪುರ್ಬು ಕರ್ಬುವಿ
ಲ್ಲೀಕೆಯ ಕುಂತಳಂ ಭ್ರಮರಸಂಕುಳಮೀಕೆಯ ವಾಗ್ವಿಲಾಸಮೇ
ಕೋಕಿಲನಾದಮೀಕೆಯ ಮೊಗಂ ಸಸಿಯೀ ಜಗಮಂ ಗೆಲಲ್ಕೆ ಸಾ
ಕೀಕೆಯ ರೂಪಮೆಂದು ಮಕರಧ್ವಜನಾಕೆಯನೆಯ್ದೆ ಪೊರ್ದುವಂ ೫೮
(ಉದ್ಭಟಕಾವ್ಯಂ ೮-೪೩)

ದರಹಾಸಜ್ಯೋತ್ಸ್ನೆಯಿಂ ದರ್ಪಕವಿಶದಯಶಂ ಕೂರ್ಪೆ ಲಾವಣ್ಯದಿಂದಂ
ಸ್ಮರತೇಜಂ ಪೆರ್ಚೆ ಕಣ್ಗೊಂಡವಳ ಧವಳನೇತ್ರಾಂಚಳಾಲೋಕಮಾತ್ರಂ
ನೆರಮಾದತ್ತಂಗಜಂಗೀ ತ್ರಿಭುವನಮಿದಿರಿಲ್ಲೆಂಬವೋಲ್ ಪೂವಿನಂಬಂ
ತಿರುವಾಯೊಳ್ ಪೂಡಿ ಪುಷ್ಪಾಯುಧನಿರೆ ಕೆಲದೊಳ್ ಲೀಲೆಯಿಂ ಬಾಲೆಯಿರ್ದಳ್
(ಜಗನ್ನಾಥವಿಜಯಂ ೧೦-೧೭, ಸೂಕ್ತಿಸುಧಾರ್ಣವಂ ೬-೫೩)

---

[1]ಸಾರದೊಳಬಲಾರತ್ನಂ ಸಾರಂ ಸಂಸಾರದಲ್ಲಿ (ಅ) [2]ಯೊಪ್ಪಿದಳ್ ಮದನತೇಜೋ ಮೂರ್ತಿಯೆಂಬಂದದಿಂ (ಅ)

ಉಡದ ಸುವಸ್ತ್ರದಂತೆ ಗಿಳಿ ಸೋಂಕದ ಮಾವಿನ ಪಣ್ಣಿನಂತೆ ಪೊನ್
ತೊಡಿಸದ ರತ್ನದಂತೆ ಬಲು ಜಟ್ಟಿಗ ಕಾಯ್ದ ನಿಧಾನದಂತೆ ಕೈ
ದುಡುಕದ ಕಾಸಿಯಂತೆ ಕಳಿನೇಱದ ಕಾಳೆಗದಂತೆ ಕಂತುಕೋ
ಲಿಡದ ಧನುಪ್ರಕಾಂಡದವೊಲಿರ್ದಳು ಕನ್ನೆ ಕುಲಾಭಿಮಾನದಿಂ ೬೦

ಒಡೆಯದ ಕಂತುಮುಪ್ರೆ ಪುಲುಸೋಗದ ರಾಗದ ರಾಸಿ ನಿರ್ಜರರ್
ಕಡೆಯದ ಪಾಲ್ಗಡಲ್ ಗಿಳಿ ಕರ್ದುಂಕದ ಪಣ್ಗೊನೆ ತುಂಬಿ ಪಾಯ್ದು ಕೈ
ದುಡುಕದ ಪುಷ್ಪಶಾಖೆ ನೆಲೆಗಾಣದ ಕಾಮರಸಾಬ್ಧಿ ಕಾದಿ ಕೋ
ಳ್ಪಡೆಯದ ದುರ್ಗದಂತೆಸೆಯುತಿರ್ದಳು ಕನ್ನೆ ಕುಲಾಭಿಮಾನದಿಂ ೬೧

ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾ
ೞ್ಮೊದಲದು ಚಿತ್ತಜಂಗೆ ಕುಲದೈವಮ[೧]ದು ಸ್ಮರ[೧]ಚಕ್ರವರ್ತಿಗೆ
ತ್ತಿದ ನವಛತ್ರಮಂತದು ಮನೋಜನ ಕೈಪಿಡಿಯೆಂದು[೨] ಕಾಣ್ಬುದಾ[೨]
ಸುದತಿಯ ರೂ[೩]ಪುಮಂ ಪೆಱತುಪೆಂ[೩]ದೊಡೆ ಚೀಃ ಕರಂ ದೋಷಮಾಗದೇ ೬೨
(ಆದಿಪುರಾಣಂ ೨-೭೪, ಕಾವ್ಯಾವಲೋಕನಂ ೧೫೯)

ಕೆರುವಿಟ್ಟಂ ಕಾಮದೇವಂ ರತಿಯತಿಶಯದಿಂ ಬಣ್ಣವಿಟ್ಟಳ್ ಬಸಂತಂ
ಬರೆದಂ ಸರ್ವಾಂಗಮಂ ಕಣ್ದೆಱೆದನೊಸೆದು ಶೀತಾಂಶು ಚೈತ್ರಾನಿಲಂ ತೀ
ವಿರೆ ಜೀವಂಬೊಯ್ದನಂತಲ್ಲದೊಡೆ ಸೊಗೆಯಿಪೀ ರೂಪುಮೀ ಬಣ್ಣಮೀ ಪೈ
ಸಿರಿಯೀ ಕಣ್ಚೆಲ್ಲಮೀ ಭಾವಕಮೊಗೆಯದೆನಲ್ ಕಾಂತೆ ಕಣ್ಗೆಸ್ಪದಮಾದಳ್ ೬೩
(ಲೀಲಾವತಿ ೩-೪೭, ಸೂಕ್ತಿಸುಧಾರ್ಣವಂ ೬-೪೩)

ಮಲಯಸಮೀರನೊಲ್ದು ಪಡೆದಂ ಮದನಂ ಪೊರೆದಂ ಸುಧಾಕರಂ
ತಳಿರಡಿ ರಂಜಿಸಲ್ ನಡೆಸಿದಂ ಕಡುಗ್ಗೈದು ವಸಂತಕಂ ಬಿರ
ಙ್ಗಳಿನೊಸೆದಿತ್ತನೊಪ್ಪಿ ರತಿ ಮೆಲ್ನುಡಿಯಂ ಕಲಿಸಿಟ್ಟಳಲ್ಲದಿಂ
ದಳೆಯಳ ಸೌಕುಮಾರ್ಯದಿರವಂ ಸಲೆ ಬಣ್ಣಿಪನಾವನುರ್ವಿಯೊಳ್ ೬೪

ಮಸೆದಸಮಾಸ್ತ್ರ[೪]ಮನ್ಮಥನ[೪]ಬಾಣಶಲಾಕೆ ವಿಲಾಸದಿಂದಮೇ
ಱಿಸಿದಲರ್ವಿಲ್ಲನೈಕ್ಷವಧನುರ್ಲತೆ[೫]ಯುರ್ಕಿದ[೫] ಮೀನಕೇತುವೆ
ತ್ತಿಸಿದ ಸಮುಲ್ಲಸಜ್ಝಷಪತಾಕೆಯೆನಿಪ್ಪವೊಲಾಂತಳಾಕೆಯಾ
ಪಸದನದೊಳ್ ಜಗತ್ತ್ರಿತಯಚಿತ್ತವಿಮೋಹನಶಕ್ತಿಯೇೞ್ಗೆಯಂ ೬೫
(ಚಂದ್ರಪ್ರಭಪುರಾಣಂ ೬-೬೬, ಸೂಕ್ತಿಸುಧಾರ್ಣವಂ ೬-೫೦)

---

[೧]ದಂಗಜ(ಅ) [೨]ಮಾಣ್ದಿನಾ(ಅ) [೩]ಪನಿಂಪೆಱತನೆಂ(ಅ) [೪]ಯರ್ಚಿಸಿ(ಸೂ) ಬರ್ಚಿಸಿ(ಅ) [೫]ಸುನ್ಮದನ(ಅ)

ವಚನದೊಳಿಲ್ಲ ಪೆರ್ಮೆಲೆಯೊಳಲ್ಲದೆ ಕರ್ಕಶವೃತ್ತಿ ವಕ್ರಿಮಂ
ಸುಚರಿತದೊಳ್ ವಿಚಾರಿಸುವೊಡಳಕಾಳಿಯೊಳಲ್ಲದೆಲ್ಲಿಯುಂ
ವಿಚಲತೆಯಿಲ್ಲ ಚಿತ್ತದೊಳಪಾಂಗದೊಳಲ್ಲದೆ ಸಾರಸದ್ಗು[೧]ಣ
ಪ್ರಚಯದೊಳಿಲ್ಲ ಮಾಂದ್ಯ ಮೃದುಯಾನದೊಳಲ್ಲದೆ ತಲ್ಲತಾಂಗಿಯಾ ೬೬
(ಚಂದ್ರಪ್ರಭಪುರಾಣಂ ೧೧–೧೨೯, ಸೂಕ್ತಿಸುಧಾರ್ಣವಂ ೬–೪೬)

ಪಡೆದಂ ಪದ್ಮಜನೆಂತೊ ಭೂಷಣಕೆ ಭೂಷಾಲಕ್ಷ್ಮಿಯಂ ಜವ್ವನ
ಕ್ಕಡಿನೀಡಲ್ ಜವದಿಂ ವಿರಾಜಿಸುವ ಲಾವಣ್ಯಕ್ಕೆ ಲಾವಣ್ಯಮಂ
ಪಡೆದೀ ರೂಪಿನ ಕೋಮಲಾಂಗಿಯನೆನಲ್ ಕಣ್ಬೇಲಮಂ ನೋೞ್ಪರೊಳ್
ಪಡೆದುಂ ಮಾಣದೆ ದರ್ಪಕಂಗೆ ಪಡೆದಳ್ ದುರ್ವಾರದೋರ್ದರ್ಪಮಂ ೬೭

ಲಲನೆಯ ರೂಪು ಚಿತ್ರಮದನೋೞ್ಪೊಡೆ ದಿಕ್ಕುಗಳಲ್ಲರಣ್ಯದೊಳ್
ಜಲಗಣಮಧ್ಯದೊಳ್ ತಳಿರಶಾಖೆಗಳೊಳ್ ನದಿಯೊಳ್ ತಟಾಕದೊಳ್
ಫಲತತಿಯೊಳ್ ಸುಧಾರಸಸಮುದ್ರದೊಳೀಂ ನೆಲೆಗೊಂಡವಿಂತಿವಂ
ನಲವಿನೊಳೊಂದುಗೂಡಿ ಸಲೆ ವರ್ಣಿಸು ನೀಂ ಸುಚರಿತ್ರಕೋವಿದಾ ೬೮

ತರಳಾಪಾಂಗೆಯ ರೂಪುವಿಭ್ರಮವಿಲಾಸಾಶ್ಚರ್ಯಮಂ ನೋಡಿ ತ
ದ್ವಿರಹಾವಸ್ಥೆಯೊಳಂಗಜಂ ಕೊರಗಿದಂ ದೋಷಾಕರಂ ಕಂಡಿದಂ
ಮರವಟ್ಟಂ ಮಧು ತಾನಸಂಗತೆ ಕಳಂಕತ್ವಂ ಮರಂಜೋಲು ತೀ
ವಿರಲುಂ ತೋಱುವಳೆಂದೆನಲ್ ತಳೆದಳಾ ಲಾವಣ್ಯ ಸೌಭಾಗ್ಯಮಂ ೬೯

ಮೊಗಮುಂ ತಾವರೆಗಣ್ಣುಮುತ್ಪಲದಳಂ ಧಮ್ಮಿಲ್ಲಮುಂ ಸೋಗೆ ಸೆ
ಳ್ಳುಗುರಂ ಕೇದಗೆ ಪುರ್ಬನಂಗಜನ ಬಿಲ್ ದಂತಾಳಿಯುಂ ಮುತ್ತು ಕೈ
ಮುಗಿದಾರಾಧಿಸಿ ಪೋಲ್ತುಮೆನ್ನದೆ ಸರೋಜಾತಾದಿ ನಿಸ್ಸಾರವ
ಸ್ತುಗಳೊಳ್ ಪೋಲಿಪರಂತದೇಂ ಮರುಳರೋ ರೂಪಂ ವಿಚಿತ್ರಾಂಗಿಯಾ ೭೦
(ಆದಿಪುರಾಣಂ ೬–೮೫, ಕಾವ್ಯಾವಲೋಕನಂ ೬೭೨)

ಅಲರಂಬಾಕೆಯ ಚೆಂದದಿಂ ಸುೞಿದುದೋ ಮಿಂಚಂಗನಾಭಂಗಿಯಿಂ
ನೆಲಸಿತ್ತೋ ತ್ರಿಜಗನ್ಮೋಹನಸುಖಂ ಸ್ತ್ರೀವೇಷದಿಂ ಬಂದು ಸಂ
ಚರಿಸಿತ್ತೋ ಮಲಯಾನಿಲಂ ಸತಿಯ ರೂಪಂ ತಾಳ್ದುದೋ ಕಾಮಿನೀ
ಚಲದಿಂ ಚಂದ್ರಿಕೆ ಮೂರ್ತಿವೆತ್ತುದೆನಿಸಲ್ ಕಂಜಾಕ್ಷಿ ಕಣ್ಗೊಪ್ಪಿದಳ್ ೭೧

---

[೧] ಜೋಪ(ಸೂ)

ಮಕರಪತಾಕನಾರ್ಪು ವನಿತಾಕೃತಿವೆತ್ತುದೊ ಪೂರ್ಣಚಂದ್ರಚಂ
ದ್ರಿಕೆ ಸತಿರೂಪನಾಂತುದೊ ವಸಂತವಿಳಾಸವಗಣ್ಯಪುಣ್ಯಕ
ನ್ನಿಕೆಯೆನಿಸಿರ್ದುದೋ ಸಕಲಮೋಹನಮೂರ್ತಿಯದೊಂದು ವಿದ್ಯೆ ಬಾ
ಲಕಿವೆಸರಿಂ ನೆಗೞ್ದುದೆನೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ ೭೨

ಸರಸಿಜಲೋಚನಂ ಶಶಿಮುಖಂ ಹರಿಮಧ್ಯವಿಭೇಂದ್ರಯಾನಮು
ದ್ಧುರಕುಚಕೋಕವಾಸ್ತುತಿಮಿರದ್ಯುತಿವೇಣಿ ಮದಾಳಿ ಕುಂತಳಂ
ಸುರುಚಿರ ಚಂಪಕಾಭತನುವೊಂದೆಡೆಯೊಳ್ ನೆಲಸಿರ್ಪುದೇನಿದ
ಚ್ಚರಿಯೆನಿಸಲಾ ಲತಾಂಗಿ ಮಿಗೆ ಕಂಗೊಳಿಸಿರ್ದಳದೊಂದು ಭಾವದಿಂ ೭೩

ದರಹಾಸಂ ಮಿಗೆ ಬೆಳ್ದಿಂಗಳ ಸಿರಿ ಸರಿಯಲ್ಲಂ ಕಟಾಕ್ಷೇಕ್ಷಣಕ್ಕಾ
ಸ್ಮರಬಾಣಂ ಪಾಟಿಯಲ್ಲ ಮಿಱುಗುವ ನಿಡುಪುರ್ವಿಂಗೆ ತಾನಿಕ್ಷುಚಾಪಂ
ದೊರೆಯಲ್ಲಂ ಚಕ್ರವಾಕಂ ನೆಲೆಮೊಲೆಗೆಣೆಯಲ್ಲಂ [ವಿವೇ]ಕಪ್ರಭೂತಂ
ಪರಿದಿಗ್ದಂತದ್ವಿಯೋಗಾಕುಳಮಬಲೆಯ ರೂಪಿಂಗಿವೇಕೊಂದು ಮಾೞ್ಪಂ ೭೪

ಪಾಱುವ ತುಂಬಿಯುಂ ಕಳಿವ ಪೂಗಣೆಯುಂ ಮುಗಿಪಬ್ಜಮುಂ ತಮಂ
ದೋಱಲಗಲ್ವ ಚಕ್ರಯುಗಮುಂ ನಸುಬಳ್ಕುವ ಕಲ್ಪವಲ್ಲಿಯುಂ
ನೀಱತಿಯ ಕುಂತಳಕ್ಕೆ ನಯನಕ್ಕೆ ಮೊಗಕ್ಕೆ ಕುಚಕ್ಕೆ ತೋಳ್ಗೆ ಕೈ
ಮೀಱಿ ಸಮಾನಮೆಂದೊಡುಪಮಾನಕೆ ಹೀನಮದಾಗದಿರ್ಪುದೇ ೭೫

ವದನಸರೋಜದೀ ಪರಿಮಳಕ್ಕೆಱಗಿರ್ದಳಿಯೆಂಬ ಚೆಲ್ವನೊ
ಲ್ದೊದವಿದಕುಂತಳಂ ಚಿಕುರಬಂಧುರಬಂಧಮಹಾಂಧಕಾರಮಂ
ಬಿದಱಿಸುತಿರ್ಪಪಾಂಗನಯಣಾಧರಧಾತು ರಸಾನುಲೇಪನಂ
ಪ್ರದಿದ ಕಪೋಲಭಿತ್ತಿ ಮೆಱತಗುಂ ಪದಪಿಂ ಮೃಗಶಾಬನೇತ್ರೆಯಾ ೭೬

ತರುಣತಮಾಲಕುಂತಳೆ ಮನೋಭವಕಲ್ಪಲತಾಂಗಿ ಪಲ್ಲವಾ
ಧರೆ ನವಪದ್ಮಕುಟ್ಮಳಕುಚದ್ವಯೆ ಕೋಕಿಲನಾದೆ ಹಂಸಮಂ
ದರಗತಿ ಚಂಪಕಾಮಲತನುಪ್ರಭೆ ಕೈರವನೇತ್ರೆ ದಿಟ್ಟಿಗ
ಚ್ಚರಿವಡೆದಳ್ ಮನೋಭವನೃಪಾಲನ ಕೇಣಿಯ ತಾಣಮೆಂಬಿನಂ ೭೭

ನಡೆ ನವಿಲೇೞ್ಗೆ ನಟ್ಟನಡುಬಾಸೆ ಜನಂಗಳ ಕಣ್ಗಳಾಸೆ ತೆ
ಳ್ಪೊಡೆ ರಸಭಾವಮಿರ್ಪೆಡೆ ಮುಖಂ ಸುರತೋತ್ಸವಗೋಮಿನೀಮುಖಂ
ತೊಡೆಯೆಡೆ ಸೋಟಕರ್ ತೊಡಕಿ ಬೀೞ್ವಡೆ ಕೇಶವಸಂಗಪಾಶವೊ
ರ್ಪಡಿ ತನಗಿಲ್ಲ ತಾನೆ ಪಡಿಯೆಂದೆನಿಸಿರ್ದುದು ರೂಪು ಕಾಂತೆಯಾ ೭೮

ಕದಪು ಕಳಿಂಗದೇಶದ ಕುರುಳ್ ವನದೇಶದ ಪುರ್ಬು ಪೂರ್ವದೇ
ಶದ ಲಲಿತಾನನಂ ಮಲಯದೇಶದ ವೃತ್ತಕುಚಂಗಳಾಂಧ್ರದೇ
ಶದ ತನು ಮಾದ್ರದೇಶದ ಬೆಡಂಗು ಮನೋಹರಮಪ್ಪ ಜಾಳದೇ
ಶದ ಕಿವಿ ಚೋಳದೇಶದ ಕರಂ ಸತಿಗೆತ್ತಣದೆಲ್ಲಿ ಸಾರ್ದುದೋ ೭೯

ತಳಿರಂ ತಾವರೆಯಂ ಲಸತ್ಕದಳಿಯಂ ವೇತಂಡಕುಂಭಂಗಳಂ
ಸುಳಿಯಂ ಕಪ್ಪಿನ ರೇಖೆಯಂ ತ್ರಿವಳಿಯಂ ಚಕ್ರಾಹ್ವಯದ್ವಂದ್ವಮಂ
ವಿಳಸತ್ಕೋಮಲಮಾಧವೀಲತೆಗಳಂ ರಾತ್ರೀಶನಂ ಭೃಂಗಸಂ
ಕುಳಮಂ ಮುಂಬರಿದಿಟ್ಟು ತಿದ್ದಿ ಪಡೆದಂ ಮತ್ತಾಕೆಯಂ ಪದ್ಮಜಂ ೮೦

ಗಿಳಿಗಳಿಗಂಜಿ ಕೊಂಚೆ ವಚನಮುಂ ಕಚನಮುಂ ಕುಚಮುಂ ತಳಿರ್ಗೆ ಕೋ
ಗಿಲೆಗೆಳೆವಳ್ಳಿಗೂರ್ಗುದರಮುಂ ಕರಮುಂ ಸರಮುಂ ಗಜಕ್ಕೆ ಪೊಂ
ಜಳೆಗೆಳೆವಾೞ್ವೆಗೋಳಿನಡೆಯುಂ ಪೊಡೆಯುಂ ತೊಡೆಯುಂ ಝಷಕ್ಕೆ ಪೊ
ಗೆಲೆಗೆಣೆ ಕಣ್ಮಲರ್ಪಿನ ಸಂತಸುವುಂ ಹಸುವುಂ ವಧೂಟಿಯಾ ? ೮೧

ನಡುವಿಂಗೊಳ್ಳಡೆ ದೇಹಕಾಂತಿಗಳಕಂ ವಕ್ತ್ರಕ್ಕೆ ಪಾದದ್ವಯಂ
ಮುಡಿಗುತ್ತುಂಗ ಕುಚಂ ಭುಜಕ್ಕೆ ನಯನಂ ದಂತಕ್ಕೆ ಸ್ಮಿತಂಬದಿ
ಟ್ಟಿಡೆಯಂ ಮೆಲ್ನುಡಿಗಿಂಪುವೆತ್ತಧರಮಂ ಪೇೞಿರ್ ಬಲ್ಲವರ್ ಭಾವಿಸಲ್
ಕಡುಪಿಂದಂಜುವುದೆಂದೊಡೇಂ ಪೊಗೞ್ವೆ ನಾಂ ರೂಪಂ ವಿಚಿತ್ರಾಂಗಿಯಾ ೮೨

ಮನಸಿಜನಂಬುಜಂ ಮದನನದ್ರಿ ಮನೋಜನ ಪೂಸರಂ ರತೀ
ಶನ ಕಳಸಂ ಮನೋಭವನ ಕನ್ನಡಿ ಕಾಮನ ಖಡ್ಗ ಮತ್ತಮಾ
ತನ ಮಸೆದಂಬು ಮನ್ಮಥನ ಚಾಪಮನಂಗನ ತುಂಬಿ ಮೀನಕೇ
ತನನ ಪತಾಕೆಯೆಂದೆನಿಸಿ ಕಣ್ಗೆಸೆದಿರ್ದುದು ರೂಪು ಕಾಂತೆಯಾ ೮೩

ಮುಡಿಗರೆಲಕ್ಷಹೊನ್ನು ಬೆಲೆ ಶ್ರೀಮುಖಪಂಕಜಕೊಂದು ಕೋಟಿ ಮು
ತ್ತಿಡಿಕಿಱಿದಿರ್ದ ಪೀವರಕುಚಕ್ಕೆ ಭುಜಾಗ್ರಕೆ ಪತ್ತುಕೋಟಿಯುಂ
ತೊಡೆಯೆರಡಕ್ಕೆ ನೆರ್ಬುದದ ಸಂಖ್ಯೆಯೊಳಂ ಬೆಲೆಗೊಂಡ ಬಾಲೆಯಾ
ಬಡನಡುವಿಂಗೆ ಮೇರುಗಿರಿಯೆಯ್ದುದೇಕೆ ಸುವರ್ಣವಾದುದೋ ೮೪

ನಗೆಮೊಗದೊಳ್ಪು ಲೋಚನದ ಬೆಳ್ಪು ಕದಂಪಿನ ತೆಳ್ಪು ನೀಳ್ಪು ಸೆ
ಳ್ಪುಗುರ್ಗಳ ಕೂರ್ಪು ಕುಂತಳದ ಕರ್ಪು ಕುಚಂಗಳಡರ್ಪು ದೇಹದೊಳ್
ಸೊಗಯಿಪ ಕೆಂಪು ಮುಗ್ಧತೆಯ ಸೊಂಪು ಕರಾಗ್ರದ ನುಣ್ಪು ನೋಳ್ಪರಂ
ಬಗೆಗೊಳಿಸಿತ್ತು ಬಾಯಿಗೆಡಿಸಿತ್ತು ಮರುಳ್ಗೊಳಿಸಿತ್ತು ಸಲ್ಲಿರಂ ೮೫

ಅಗಲದ ಚಕ್ರಮುಂ ಕಠಿಣಮಲ್ಲದ ಮಾಣಿಕಮುಂ ದಿವಾಂತದೊಳ್
ಮುಗಿಯದ ಪದ್ಮಮುಂ ಬೆಳಗುಗುಂದದ ಮಿಂಚುಗಳುಂ ಪೊದಟ್ಟಿ ಸಂ
ಪಗೆಗಱಿಯಿಲ್ಲದಾಱಡಿಗಳುಂ ಪಡೆದಂ ಸ್ಮರನೆಂದು ಪದ್ಮಜಂ
ಮುಗುಡೆಯ ಚೆಲ್ವಮುಂ ಪೊಗೞಲಾನಱಿಯೆಂ ಧರಣೀತಳಾಗ್ರದೊಳ್ ೮೬

ಎಳೆಮಿಂಚಿಂದೊಪ್ಪವಿಟ್ಟಂತಮೃತದ ಕಳೆ ರೂಪಾದುದೆಂಬಂತೆ ಮುತ್ತಂ
ತೊಳೆದಿಟ್ಟಂತಂಗಜಾತಂ ಮಸೆದು ಪಿಡಿದ ಕೂರ್ವಾಳಿದೆಂಬಂತೆ ಘಾಳಂ
ಪೊಳೆಯುತ್ತುಂ ಸುತ್ತಲುಂ ನೋಟ್ಪರ ಬಗೆಗೆ ಭಯಂ ಪುಟ್ಟೆ ತಳ್ಪೊಯ್ಯೆ ತತ್ಕೋ
ಮಳೆ ಚೆಲ್ವಿಂದೊಪ್ಪಿ ಬರ್ಪಂಗಜನ ಗಜದವೋಲ್ ನೋಡೆ ಕಣ್ಗೆಡ್ಡಮಾದಳ್ ೮೭
(ಸೂಕ್ತಿಸುಧಾರ್ಣವಂ ೭–೨೮)

ಕಡೆದವೊಲಿರ್ಪ ಪೆರ್ಮೊಲೆ ತೊಡವಳ್ಕುಡಿ ಪೆಲ್ಕಡೆ ಚೆಲ್ವನಾಳ್ದ ತೆಳ್
ನಡು ನಳಿತೋಳ್ ಪೊದಟ್ಟಧರಮೊತ್ತಡೆಯುಂ ನೆಱೆಗೊಂಡ ಜಂಘೆ ಸೋ
ರ್ಮುಡಿ ನಡು ಬಿಣ್ಪುವೆತ್ತ ತೊಡೆ ತುಂಬಿದ ಪೀನನಿತಂಬಮೊಪ್ಪಿಯೊ
ಕ್ಕುಡಿತೆಯೆನಿಪ್ಪ ಕಣ್ ಕರಮೆ ರಂಜಿಸೆ ಕೋಮಳೆಯೊಪ್ಪಿ ತೋಱಿದಳ್ ೮೮

ಮದನಂ ಕರ್ಬಿನಬಿಲ್ಲುಗೆತ್ತಿವಳ ಪುರ್ವಂ ಗರ್ವದಿಂದೇಱಿಸಲ್
ಪಡೆನಂ ನೀಳ್ದಲರ್ಗಣ್ಣ ಸಣ್ಣವೆಳಗಂ ಬಾಣಾಳಿಗಳ್ಗೆತ್ತು ಮಾ
ಣದೆ ಕೈನೀಡುವನೊಡ್ಡುಗೊಂಡ ಕಬರೀಪ್ರಾಗ್ಭಾರಮಂ ತೋರ್ಕೆಗೆ
ತ್ತಿದ ಚೈತ್ರಧ್ವಜನೆಂದೆಗೆತ್ತು ಪೊಱೆವಂ ಮೀನಧ್ವಜಸ್ತಂಭಮಂ ೮೯

ಕನಕಘಟಸ್ತನಂ ರಜನಿರಂಜಿತದೀರ್ಘಲಸತ್ಕಚಾಳಿ ಕಾ
ನನಗಜಯಾನಸದ್ಗತಿಯನಂಗಶರಾಗ್ರಕಟಾಕ್ಷಕಾಂತಿ ಚಂ
ದನಘನಸಾರಗಂಧನಿಜದೇಹಲಸತ್‌ಸ್ಥಿತಿ ಗೋಚರಾಕ್ಷಿ ಕಾ
ಮನ ಕರವಾಳು ಬಾಹುಪೆನೆ ಕಂಗೊಳಿಸಿರ್ದಳದೊಂದು ಗಾಡಿಯಿಂ ೯೦

ನಗೆಗಣ್ ಮಿಂಚಿನ ಗೊಂಚಲಂ ನಗುವಿನಂ ಕರ್ಪಿಂ ಲಸದ್ವೇಣಿ ಕಾ
ರ್ಮುಗಿಲಂ ಗೆಲ್ವಿನಮಿಂದ್ರಚಾಪರುಚಿಯಂ ಭ್ರೂಕ್ಷ್ಮಾಮಣಿಜ್ಯೋತ್ಸ್ನೆಗಳ್
ಮಿಗುವಂತಿರ್ಪಿನಮೂರ್ತಿ ಯವ್ವನರಸಂ ತೀರ್ಕೈಪಿನಿಂ ಮಾರ್ತಪಂ (?)
ಚೆಗಳಂ ತುಂಬುವಿನಂ ಪಯೋಧರಿಯದೊರ್ವಳ್ ಚಿತ್ರದಿಂದೊಪ್ಪಿದಳ್ ೯೧

ಸರಸಿಜನೇತ್ರೆಗುಜ್ವಳಿಪ ತುಂಬಿಗುರುಳ್ ಕಮನೀಯಪಲ್ಲವಾ
ಧರೆಗೆ ಪಿಕಸ್ವನಂ ನವಸುಧಾಕಲಶಸ್ತನೆಗಾ ಕಪೋಲಬಿಂ
ಧುರಮಣಿದರ್ಪಣಂ ಪುಳಿನಪೂರ್ಣನಿತಂಬೆಗೆ ರಾಜಹಂಸಮಂ
ದರಗತಿ ಸಂತತಂ ಪೊಱೆವುದೆಂಬುದದೇನರಿದಾದ ವಿಸ್ಮಯಂ ೯೨

ಅನಿಮಿಷದೃಷ್ಟಿಯಾಗಿಯುಮಮರ್ತ್ಯವಿಳಾಸಿನಿಯಲ್ತು ಸೂಕ್ತಸಂ
ಜನಿತಶರೀರಿಯಾಗಿಯುಮುದಗ್ರತಪಸ್ವಿನಿಯಲ್ತು ಭಾವಿಸಲ್
ಮನರುಚಿರಂಜಿಪಬ್ಜಮುಖಿಯಾಗಿಯುಮೀಕೆ ಕಳಂಕಿಯಲ್ತು ಸ
ತ್ಕನಕವಿಭೂಷೆಯಾಗಿಯುಮುದಾನ್ವಿತೆಯಲ್ತೆನೆ ನೀಱೆಯೊಪ್ಪಿದಳ್ ೯೩

ನಿರುತಂ ಸೌಹಾರ್ದ್ರ ಸತ್ಕೋಮಲತನುಲತಿಕಾಚಿತ್ರಗಾಂಭೀರ್ಯಮವ್ಯೋ
ತ್ರರವಿತ್ರಾಕ್ಷ್ಲೀಷರತ್ನ ಶ್ರವಣಸುರಭಿದೋರ್ಮೂಲಸಂಪನ್ನೆ ಹಸ್ತಾಂ
ಬುರುಹಶ್ರೀರಮ್ಯೆ ಮುಗ್ಧಾರುಣಮಣಿಕಿರಣಾಕೀರ್ಣಸೌಂದರ್ಯಪೂರ್ವಾ
ಧರೆ ತಾರಾದೇವಿಯಂತುತ್ಫುಲ್ಲನಯನೆ ಕರಂ ಕಾಂತಿಯಿಂದೊಪ್ಪುತಿರ್ದಳ್ ೯೪

ಅಡಿ ಮುಡಿ ಜಂಘೆ ನುಣ್ಗೊರಳುಮೊಳ್ತೊಡೆ ಪುರ್ಬು ನಿತಂಬವಕ್ಷಿಗಳ್
ನಡು ಮೊಲೆ ಪೆಲ್ಪು ಬಿಣ್ಪನಿದು ಕೊಂಕುವ ದೀಧಿತಿ ಕಪ್ಪು ಗೌರವಂ
ಕಡು ನಿಡಿದಲ್ಪವುನ್ನತಮೆನಿಪ್ಪುದಱಿಂ ಸುಕುಮಾರವೃತ್ತಿಯುಂ
ಪಡೆದು ಸರೋಜನೇತ್ರೆ ಮದನೋರ್ವಿಪನಂಕದಿಭಂಬೊಲೊಪ್ಪಿದಳ್ ೯೫

ಸುಗಮುಶರೀರಮೆಲ್ಲವಯವಂಗಳೊಳೊಂದೆಡೆಯಲ್ಲಿ ತೋಱುವಾ
ಮಿಗೆ ತಿಲಮಾತ್ರಸೌಂದರಿಯ ಕೋರಗೆಯುಂ ಪಡೆದಪ್ಪೆನೆಂದು ಧಾ
ತುಗಳೆ ತಪಸ್ಸುಮಿರ್ದು ಬಱಿಕಂ ಪಡೆಗೊಳ್ಳದೆ ಸಂದ ಬೊಮ್ಮಲೊಂ
ಪಗಣಿತಮೆಂದೆನಲ್ಕೆಯರಿದಾದುದು ಸೌಂದರಭಾವಮಾಕೆಯಾ (?) ೯೬

ಸೊಗಯಿಪಜಕ್ಕವಕ್ಕಿಗಳನೇಳಿಪ ಪೆರ್ಮೊಲೆಯಿಂದೆ ಮೀಂಗಳಂ
ನಗುಮಲರ್ಗಂಗಳಿಂದೆ ಸುೞಿಯಂ ಪೞಿದೊಪ್ಪುವ ಪೊಕ್ಕುಳಿಂದೆ ಮೆ
ಲ್ಲಗೆ ನಡೆಮಂಜೆಯುಂ ಜಡಿವ ಮೆಲ್ಲಡಿಯಿಂದೆ ಸಮಂತು ನೋೞ್ಪರ
ಚ್ಚಿಗೆ ಪೊಸಪೂಗಳಿಂಬೊಲಮರ್ದೊಪ್ಪಿದಳೊರ್ವಳಮೊಂದು ಗಾಡಿಯಿಂ ೯೭

ಕೆಂಪಳಮೊಂದು ಕೆಂಪು ಕಿಸುಸಂಜೆಯ ರಂಜಿಸೆ ಕಪ್ಪುವೆತ್ತ ಕೇ
ಸಂ ದಳಮಾದ ಕತ್ತಲೆಯನೇಳಿಸೆ ನುಣ್ಬೊಗವಚ್ಚತಿಂಗಳಂ
ಸಂದಿಸೆ ಸೀಳ್ದ ಕಣ್ಬೆಳಗುಂ ನಾಲ್ದೆಸೆಗಂ ಪೊಸತಪ್ಪ ಜೊನ್ನಮುಂ
ಮುಂದಿಡಲೊರ್ವಳಲರಂಬಿನ ಕೈಪಿಡಿಯಂತಿರಲೊಪ್ಪಿದಳ್ ೯೮

ಕಡೆಗಂಗಳ್ ಕುಡಿಮಿಂಚನೀಯೆ ಸುಲಿಪಲ್ ಬೆಳ್ದಿಂಗಳಂ ಬೀಱೆ ಕೇ
ಸಡಿ ಕೆಂದಾವರೆಪೂಗಳಂ ಕೆದಱೆ ಪುರ್ಬಿಂಗೋಲಬಿಲ್ಲಂದಮಂ
ಕುಡೆ ತೋಳ್ ನೀಳ್ದೆಳೆಗೊಂಬಿನೊಳ್ ತೊಡರೆ ಗಲ್ಲಂ ನುಣ್ಪು ಕೈಮಿಕ್ಕು ಕ
ನ್ನಡಿಯಂ ಪೋಲ್ತಿರೆ ನೀಱೆ ತೋಱಿ ಮೆಱೆದಳ್ ಕಾಮಂಗೆ ಬಲ್ಬೀರಮಂ ೯೯

ಸ್ತನಮಂ ಮಾಡುತೆ ಮಾಡಿ ಶಂಕಿಪನವಂ ತನ್ಮಧ್ಯಮಂ ತೇಣಲೋ
ಚನಮಂ ಮಾಡುತೆ ಮಾಡಿ ಶಂಕಿಪನವಂ ಧಮ್ಮಿಲ್ಲಮಂ ಬಂಧುರಾ
ನನಮಂ ಮಾಡುತೆ ಮಾಡಿ ಶಂಕಿಪನವಂ ಹಸ್ತಂಗಳಂ ಸಂತತಂ
ವನಜಾತೋದ್ಭವನೆಂದಸಲ್ ಪೊಗೞ್ವಿರಾರ್ ಪಂಚಾಯುಧಾಧಾರ್ಂಗಿಯಂ ೧೦೦

ಮೊಗಮಂ ರೋಮಾವಳೀವಲ್ಲಿಯನತಿಮುದದಿಂ ಮಾಡಿ ವಕ್ಷೋಜಮಂ ಕೈ
ಮಿಗೆ ಭಾಸ್ವನ್ಮಧ್ಯಮಂ ಯಾನಮನತಿಮುದದಿಂ ಮಾಡಿ ಸ್ಫೈತಂಬಮಂ ಕಾಂ
ತೆಗೆ ಚಂಚದ್ಬಾಳಮಂ ಕಂಗಳನತಿಮುದದಿಂ ಮಾಡಿ ಸದ್ಭ್ರೂಗಳಿಂ ನೆ
ಟ್ಟಗೆ ಕಾಣಲ್ಬಾರದಂತಿಟ್ಟಜನಜಂತಕೆ ಕೊಂಡಾಡುವಂ ಪಂಚಬಾಣಂ ೧೦೧

ಸ್ತನಮಂ ಮಾಡಿ ಕಪೋಲಮಂಡಲಮನಾಕರ್ಣಾಂತವಿಶ್ರಾಂತಲೋ
ಚನಮಂ ಮಾಡಿ ತದಾಸ್ಯಮಂ ಪ್ರವಿಲಸತ್ಪಾದಂಗಳಂ ಮಾಡಿ ತ
ಧ್ವನಿತಾರತ್ನಕೆ ಯಾನಮಂ ಪದೆಪಿನಿಂದಂ ಮಾಡಿ ಕೊಡಿಟ್ಟ ಜೀ
ವನಜಾತೋದ್ಭವಯುಕ್ತಿಗಾರ್ದನವಂ ಪಂಚಾಯುಧಂ ಮೆಚ್ಚುವಂ ೧೦೨

ಮೊಗಕೆ ಕಚಂ ಕಚಕ್ಕೆ ಮೊಗಮಾ ಮೊಗಕಂ ಕಚಕಂ ಸಮಂತು ನೆ
ಟ್ಟಗೆ ಕುಚಮಾ ಕುಚಕ್ಕೆ ಮಗುೞ್ದಾ ಮೊಗಮಂ ಕಚಮಂ ಕುಚಕ್ಕೆ ತಾಂ
ಮೊಗಕಮಡರ್ತುಮಾ ಕಚಕಮಾಕೆಯ ಶೋಣಕರಂ ಕರಕ್ಕೆಯುಂ
ಬಗೆವಡೆವಂಜುತಿಪ್ಪುವೆಸಲಾರ್ ಪೊಗೞ್ವಿರ್ ಕವಿಪಂಚಮಾರ್ಗಣಾ ೧೦೩

ಅದನೇನೆಂಬೆನಜಂ ಸಮಂತವಳ ಭಾಸ್ವದ್ರೂಪನಿರ್ಮಾಣಕ
ರ್ಮದೊಳಾರ್ಪಿಂದಿರದೆಯ್ದಿ ಸಿಂದ ಪರಮಾಣುಶ್ರೇಣಿಯಿಂ ನಾಡೆ ಕೌ
ಮುದಿಯಂ ಚಂದ್ರನನಬ್ಜಮಂ ಕುಮುದಮಂ ಬಂಧೂಕಮಂ ನೋಡಿ ಮಾ
ಡಿದನೆಂದುಱಿ ಬಣ್ಣಿಸಲ್ಕಱಿವರಾರ್ ಪಂಚಾಯುಧಾಧಾರ್ಂಗಿಯಂ ೧೦೪

ಅಲರಂಬ್ಬೆದೊಂದೆಬಿಲ್ಲಿಂತಿನಱಱೊಳೆ ನೆಗೞ್ದೀ ದ್ವೀಪವೇೞುಂ ತ್ರಿಲೋಕಂ
ಗಳನೆಂತಾಂ ಗೆಲ್ವೆನೆಂದಂಜುವೆನೆಲೆಯೆನಗಿಂದೀಕೆಯಕ್ಷಿದ್ವಯಾಸ್ತ್ರಂ
ಗಳನೇೞುಂತೀಕೆಯುದ್ಯದ್ಭ್ರೂಕುಟಿಧನುಗಳಿಂತೀ ತ್ರಿಚಾಪಂ ಕಣಾ ಕೋ
ಮಲೆಯಿಂದೆಂದಾರ್ದು ಕಾಮಂ ರತಿಯುವತಿಯ ಕೈವೊಯ್ದು ಮಾತಾಡುತಿರ್ಪಂ ೧೦೫

ಮುಡಿ ಮದನಂಗೆ ಮುಂಗುಡಿ ನೊಸಲ್ ಸಸಿಯಿಂದ ಹಸಂ ಕದಂಪು ಕ
ನ್ನಡಿಗಳ ಸೊಂಪು ತೋಳಸಮಬಾಣನ ಬಾಳ್ ಬೆರಲಾತನೈಸರಲ್
ನಡೆಯೆ ಕರೀಂದ್ರನಿಂಗೆಡೆ ನಿತಂಬವನಂಗಕುಭೃನ್ನಿತಂಬವೊ
ಳ್ಪೊಡೆ ಪೊಸಬಾೞಿಯೇೞ್ಗಡೆ ಪದಂ ಚತುಸಂಪದಮಂಬುಜಾಕ್ಷಿಯಾ ೧೦೬

ಅಳಿಗೆ ತಳಿರ್ಗೆ ನೋಡೆ ಪಡಿ ಕುಂತಳಮುಂ ತಳಮುಂ ಸಮಾನಮು
ತ್ಪಳಿಕೆ ಸರೋರುಹಕ್ಕೆ ಪಡಿ ಕೇಕರಮುಂ ಕರಮುಂ ಭುಜಂಗಳು
ಜ್ವಳಮಳಿಗಳೆ ಪಾಸಟಿ ಕಚಾವಳಿಯುಂ ವಳಿಯುಂ ಸುವಜ್ರಕು
ಜ್ವಲತೆಯು ವಂಶಕಾಳಿ ನಖಸಂಕುಳಮುಂ ಕುಳಮುಂ ಲತಾಂಗಿಯಾ ೧೦೭

ಮುಡಿ ಮದನಂಗೆ ಮುಂಗುಡಿ ಸರೋಜದಳಂ ಸರಿಬಾರದೆಂದು ಕ
ಣ್ಣುಡುಪತಿ ವಕ್ತ್ರಬಿಂಬಕೆಣೆಯಾಗನೆನುತ್ತವೆ ಕಂದಿ ಕುಂದುವಂ
ನುಡಿ ಫಲವೇನೋ ಸಂಪಗೆಯರಲ್ತನುವಿಂಗೆಣೆಯಾಗೆನೆಂದು ನೇ
ರ್ಪಡುವಳಿಯಾಸೆಯಿಂದುಱುಮುದೆಂದೊಡೆ ಕಾಂತೆಯನಾರು ಬಣ್ಣಿಪರ್ ೧೦೮

ಹರಿನೀಲೋಪಮಮುಗ್ಧಕೇಶ ಶಶಿಬಿಂಬಾಸ್ಯೋಷ್ಠ ಸದ್ಭದ್ರಸಿಂ
ಧುರಕುಂಭೋಪಮಯಾನ ತುಂಗಕುಚ ಶೈವಾಲೋಲ್ಲತಾರೋಮರಾ
ಜಿ ರಟದ್ಬಾಹುವಿಲಾಸ ಚಂಚದರುಣಾಂಭೋಜದ್ವಯಾಪಾಂಗಿನೀ
ತರುಣೀನಾಮಂಗೆ ಪಂಚಬಾಣಕವಿಯೆಂಬೀ ವ್ಯೈಮೆಯಂ ನೋೞ್ಪುದೇ ೧೦೯

ತರುಣೀರೂಪನೆ ಬಣ್ಣಿಸಲ್ಕಳುಕಿ ಪುಷ್ಪಾಸ್ತ್ರೇಕ್ಷುಕೋದಂಡದಿಂ
ಧುರದೊಳ್ ಸೋತೆನೆನುತ್ತಮಂ ಬಿಸುಡುತಂ ಸ್ತ್ರೀಭ್ರೂಲತಾಚಾಪದು
ತ್ಕರವಕ್ಷೋರುಹಚಕ್ರದಂತಕುಲಿಶೋದ್ಯತ್ಕೇಶಪಾಶಂಗಳಿಂ
ಹರನಂ ಗೆಲ್ವೆನೆನುತ್ತ ಕಂತು ಬಲವಾನ್ ದೋರ್ದಂಡಮಂ ತೂಗುವಂ ೧೧೦

ನೆಲೆನೊಲೆ ಕೊತ್ತಳಂ ಜಘನಪಟ್ಟಳೆ ಮೇಲುದು ಪೊನ್ನಕೋಂಟೆ ಮೇ
ಖಲೆ ಪರಿಖಾಳಿ ನಾಭಿ ನಡುವೀಧಿ ಮುಖಂ ರಣಮಂಡಲಂ ಕಚಂ
ಲಲಿತಪತಾಕೆ ಕಾಂತಿ ಜಲಸಂಪದಮಕ್ಷಿಮರೀಚಿ ಶಸ್ತ್ರಸಂ
ಕುಳಮೆನೆ ನೀಱಳ ತೋಱುದಳನಂಗನ ಜಂಗಮದುರ್ಗಲಕ್ಷ್ಮಿಯೋಲ್ ೧೧೧

ಆನೇಂ ಕಾಂತೆಯ ರೂಪನೇನುಸುರಬಲ್ಲೆಂ ಬಣ್ಣಿಸಲ್ಕಾರ್ಥಮಂ
ತಾನುದ್ಯೋಗಿಸಿ ಭಾನುವಿಂಗೆ ಮುಳಿದಾ ಸ್ವರ್ಭಾನುವಂ ಬೈದುಮಂ
ತೇನಂ ಮಾಣದೆ ಪಂಚಬಾಣನಜನಂ ಬೈದಾತ್ಮಹಸ್ತಸ್ಥಸ
ದ್ಭಾನುದ್ಯನ್ನವರತ್ನದಾ ಮುಕುರಮಂ ಚೂರ್ಣೀಕೃತಂ ಮಾಡಿದಂ ೧೧೨

ತರುವನದರ್ಮೆದಾ ಚಂಪಕ ಕಾನನಕೆಯ್ದಿತೇಣ ಪಂ
ಜರದೊಳಗಿರ್ದುದಾ ಶುಕನು ಗಹ್ವರವೊಕ್ಕುದು ಸಿಂಹ ನೀರೊಳಂ
ತಿರೆ ನೆಲಸಿತ್ತು ಪದ್ಮದಳ ಕೋಮಲೆಯ ನಾಸಿಕ ಲೋಚನ ವಾಣಿ ಮಧ್ಯತ
ತ್ಕರತಳಮೆಂಬಿವಕ್ಕೆ ಸರಿಯಪ್ಪೊಡೆ ತೀರದೆನಿಪ್ಪ ಲಜ್ಜೆಯಿಂ ೧೧೩

ಸುದತೀನಿರ್ಮಾಣಪೊಳ್ ಜಾಣನೆ ಜಡಜಜನೇವಾಟಿತ್ತ್ರಯೆಂದಂಗಜನ್ಮಂ
ಪದವಿಲ್ಲಂ ಪೂವಿಸಂಬಂ ಬಿಡದೆ ಜಡಿದು ಕಾರ್ಕಶ್ಯಮಂ ತಾಳ್ವ ಕೈಗಳ್
ಪದನಲ್ಲೆಂದೊಲ್ಲದೇಕಾಂತದೊಳೆ ಮನಮೆ ಕೈಯಾಗೆ ಕಣ್ಗೊಳ್ವಿನಂ ಮಾ
ಡಿದನೀ ಮಾದೇವಿಗಂತಲ್ಲದೊಡಿನಿತುಮಪಂ ಸಾರ್ಗುಮೇ ಸೌಕುಮಾರ್ಯಂ

ಕಡೆಗಂಗಳ್ ತನ್ನ ಚೈತ್ರಧ್ವಜಕೆ ಪೊಳಪನೊಲ್ದೀಯದಂದಾಸ್ಯಬಿಂಬಂ
ಬಿಡದಂಭೋಜಾದಿಗೀವಂದಮೃತಕಳೆಗಳಂ ಬೀಱದಂದುರ್ವಿ ಪುರ್ವಿಂ
ಮುಡಿ ಚೆಲ್ವಂ ಕರ್ಬುವಿಲ್ಗೀವಡೆ ಕರುಣಿಸದಂದಾವಗಂ ಬಂದು ಚಿತ್ತಂ
ಬಿಡದೆತ್ತಂ ಪೋಗದಿಂತೋಲಗಿಪನೆ ತರುಣೀರೂಪಮಂ ಪುಷ್ಪಚಾಪಂ ೧೧೫

ನೋಡುವ ನೆಯ್ದಿಲೊಯ್ಯನುಸುರಿಕ್ಕುವ ಸಂಪಗೆ ಮುದ್ದುವೀಱ ಮಾ
ತಾಡುವ ದರ್ಪಣಂ ನಡೆವ ತಾವರೆ ಪಾಡುವ ಕಂಬುಮೋತು ಬಾ
ಯಾಡುವ ವಿದ್ರುಮಂ ಪ್ರಿಯದಿನಪ್ಪುವ ಚಂಪಕಮಾಲೆ ಮಾಲೆಯಂ
ಸೂಡುವ ಸೋಗೆಯೆನ್ನದವಳಂಗದ ಚೆಲ್ವನದೇನನೆಂಬುದೋ ೧೧೬

ಕಱೆಕಱೆಗುಂದಿದಂ ಮೊಗದ ಪೈಸಿರಿಗಂದಮೃತಾಂಶು ಲಜ್ಜೆಯಿಂ
ಕುಱುಕುಱುಗೊಂಡು ಕಾಲ್ವಿಡಿದುದೊಳ್ನಡೆಗಳ್ಕಿ ಮರಾಳನಾವಗಂ
ಪಱಪಱಯಾಯ್ತು ಪಜ್ಜಳಿಪ ಮೆಯ್ವೆಳಗಿಂಗೆಳೆಮಿಂಚೆನಲ್ಕದಾ
ರಱಂದಭಿವರ್ಣಿಪರ್ ಸತಿಯ ರೂಪಿನ ರೂಢಿಸಿದೊಂದು ಗಾಡಿಯಂ ೧೧೭

ಅದು ಕಂದಿಲ್ಲದ ಚಂದ್ರಬಿಂಬಮದು ಮೌರ್ವೀಬಂಧಮಂ ಮಾಣ್ದು ಕೊಂ
ಕಿದ ಕೃಷ್ಣೇಕ್ಷುಧನುರ್ವಿಳಾಸಮದು ಝೇಂಕಾರಕ್ಕೆ ಪಕ್ಕಾಗದು
ನ್ಮದಭೃಂಗಾಳಿಯದಾಗಳಂ ತಳಿಯದೊಪ್ಪಂದೋರ್ಪ ಮಿಂಚೆಂದು ಮಾ
ಣದೆ ಬೇಱೆಂಬುದೆ ಗಾಂಪ ನೀಱೆಯ ಮುಖ ಭ್ರೂ ಕುಂತಳಾಪಾಂಗಮಂ ೧೧೮

ಎಳಮಿಂಚಂಗಱೆವುತ್ಪಲಂ ಪೆಱಗೆ ಪಾಯ್ದೊಳ್ದುಂಬಿ ಬೆಳ್ದಿಂಗಳಂ
ಕೆಳೆಗೊಂಡಂಬುಜಮಿಂಬುವೆತ್ತಮೃತಮಂ ಜೈತಿಟ್ಟ ಬಂಧೂಕಮು
ಜ್ವಲ ವಜ್ರಾಂಶುವನಪ್ಪಿ ಮಾರ್ಪೊಳೆವ ಕುಂದಂ ಮಂದಯಾನಂ ಮನಂ
ಗೊಳೆ ತಮ್ಮೊಳ್ ಸಲೆ ಸಂದ ಕೆಂದಳಿರ್ಗಳಂದಂಬೆತ್ತವಜ್ಜಾಕ್ಷಿಯಾ ೧೧೯

# ಪಾದಾದಿಕೇಶಪರ್ಯಂತ ಶೃಂಗಾರ ವರ್ಣನಂ

ವಶವರ್ತಿಮಾಳ್ಕುಮಂಗಜ
ವಿಶಿಖದಿನೀಕ್ಷಿಸಿದ ವಿಟರನವಯವಮೊಳಗೆಂ
ಬ ಶಲಾಕೆಯೊಳಂ ಪ್ರತ್ಯೇ
ಕ ಶೋಭೆಯಿಂ ಸೊಗಸು ರಂಜಿಕುಂ ಬಾಲಕಿಯಾ ೧೨೦

ಸಲ್ಲದು ಸೆಣಸಲ್ ತನಗಿನಿ
ಸಲ್ಲದು ಚೆಲ್ವೆನಿಸಿ ಗೆಲ್ದ ಸತಿಯಡಿದಳಿರ್ಗಳ್
ಪಲ್ಲವಕಮನೀಯತೆಯಿಂ
ಪಲ್ಲವಕೆ ಮನಃಪ್ರಮೋದಮಂ ಪೆರ್ಚಿಸುಗುಂ ೧೨೧

ಮದಕಳಮರಾಳಗಮನೆಯ
ಪದಮಂ ಪಲ್ಲವದೆ ಪೋಲ್ವೆನೆಂಬನುರಾಗಂ
ಪುದಿದಿರ್ದಶೋಕವಲ್ಲರಿ
ಸುದತಿಯೊಳೆಡಗಾಲೊಳೊದೆಸಿಕೊಂಡಪುದಿನ್ನುಂ ೧೨೨

ಪೊಸಮುತ್ತನುಗುಳ್ವ ನವಶು
ಕ್ತಿಸಸಂಪುಟ ಕಡಲವಿದ್ರುಮಂ ಸೋಂಕಲೊಡಂ
ನಸುಗೆಂಪುವೆತ್ತವೆಂಬಂ
ತೆಸಗುಂ ನಖದೀಪ್ತಿ ಮೆಱೆವ ಪದಯುಗಮವಳ ೧೨೩

ಒಂದನೊಂದೊಂದು ಹಿಂದಿಡು
ವಂದದಿತಾಂ ಕಿನಿಸಿ ಕೆಚ್ಚನಾದವೊಲೆಸೆದುವು
ಸೌಂದರ್ಯದರುಣಚರಣಂ
ಮಂದಸ್ಮಿತವದನ ವಿದಿತ ಮದಮಾನಿನಿಯ ೧೨೪

ಮಿನುಗುವ ನಿಟ್ಟೆಸಳೊಳ್ ನೀ
ರ್ವನಿಗಳನೊಳಕೊಂಡು ತೋರ್ಪ ಕೆಂದಾವರೆಯಂ
ನೆನೆಯಿಸಿದುವು ಕಾಲುಗುರೆನ
ಎಸಸುಂ ಕಣ್ಗೊಳಿಪ ನಿಡಿಯ ಮೆಲ್ಲಡಿಯವಳಾ ೧೨೫

ಒದೆದಪೆನೆಂದೆತ್ತಲೊಡಂ
ಪುದಿದಸುಗೆಯ ತಳಿರ ಕೆಂಪು ಭೋಂಕನೆ ಪದವಿಡಿ
ದದಱ ಮೃದುಗಂಡು ಮೋಹಿಸಿ
ಕದಲದೆ ನಿಂತಂತೆ ಕಾಂತೆಯಡಿ ಕೆಂಪೆಸೆಗುಂ ೧೨೬

ಅಲರ್ವಿಲ್ಲನೆಂಬ ಬಾಲಂ ಸಲೆ
ಪಳುಕಿನ ಲಗ್ಗೆಯೊಡ್ಡಿ ಹಿಮ್ಮಡಸೆಂಡಿಂ
ಡೊಲೆದಿಟ್ಟೊಡನೋರಣದಿಂ
ನಿಲೆ ಬಿರ್ದವೊಲಾದುವವಳ ಪದನಖನಿಕರಂ ೧೨೭

ನುಡಿಯರಸಂ ಕಾಲ್ವೆರಲೊಳ್
ಪೊಡವಿಯ ಲಲನೆಯರ ಚೆಲ್ವ ನಿಲಿಸೆಡೆಯಾಡಿಪೊ
ಡೆಡಹದವೋಲ್ ಸೋಲಂಗಳ
ಪಡೆದಂದದೊಳಾದುದವಳ ನಖಪದದೊಳ್ಪಿಂ ೧೨೮

ತತ್ತರುಣಿಯ ಮೆಲ್ನಡೆಗಳ
ಬಿತ್ತರಮಂ ನೋಡಿ ನೋಡಿ ಸಂತಸದಿಂದಂ
ಪತ್ತುಮೊಗಮಾಗಿ ಮೆಲ್ಲಡಿ
ಮುತ್ತಂ ಮುಕ್ಕುಳಿಸಿದಂತೆ ಸೊಗಯಿಪುವುಗುರ್ಗಳ್ ೧೨೯

ಸ್ತನಸಂಗಮಿರಲ್ ಸದ್ಯ
ಸ್ತನಸಂಗಂ ನೆಗಟ್ಗೆಮೆಪ್ಪೊಳಧಿಪತಿಗೆ ಕುಚ
ಕ್ಕೆನಿಸುನ್ನತಿಯೇಕೆನುತಂ
ಕಿನಿಸುವವೋಲ್ ನಿಮಿರ್ದು ಕನ್ನೆಯುಂಗುಟಮೆಸಗುಂ ೧೩೦

ಕುಂದದ ರಶ್ಮಿತೆಯ ಮಡಂ
ಕುಂದದ ಚೆಲ್ವಿಂ ಮನೋಜರಾಜಕ್ರೀಡಾ
ಕಂದುಕಮೆನೆ ಜನದ ಮನ
ಕ್ಕಂದು ಕರಂ ಮುದವನೊದವಿಕುಂ ಮೃದುಗತಿಯಿಂ ೧೩೧

ಕಾಮನ ತಿಳಿಗೊಳನೆನಿಪ ನಿ
ಕಾಮನಖದ್ಯುತಿಜಲಪ್ರವಾಹದೊಳೆಸೆವಾ
ವಾಮೆಯ ಮೇಗಾಲ್ಸೊಗಯಿಸು
ವಾಮೆಯುನನುಕೊಳಿಸಿ ಮನವನಿಟ್ಟಿರ್ಗಳಿಗೊಳ್ಗುಂ ೧೩೨

ನಡೆನೋಡಿ ನಾಣ್ಚಿ ಕೈಕಾ
ಲೊಡಲಂ ಪುಗೆ ತಲೆಯನೆತ್ತಲಣ್ಮದೆ ಕೂರ್ಮಂ
ಮಡುವಂ ಬಿಟ್ಟಿನೆನಲ್ಕಾ
ಮಡದಿಯ ಮೇಗಾಲ ಪಾಂಗನದು ಪೋಲ್ತಪುದೇ ೧೩೩

ಮುನಿಸಿನೊಳೀ ಕಣೆಕಾಲ್ಗಳ
ನಿನಿಯಂ ಬಿಗಿಯಪ್ಪಿಕೊಂಡೊಡಾ ಮುನಿಸಂ ಮೇಣ್
ಘನವಂ ಮಾಡುವೆನೆಂಬುದ
ನನುಕರಿಸುತೆ ಬಿಡದೆ ಚರಣನೂಪುರವೆಸಗುಂ ೧೩೪

ಮದದಾನೆ ಸೋಲ್ವುದೆನ್ನಯ
ಮೃದುಗತಿಗೇವಾಟಿತ್ತ ನೀವೆನುತ್ತಂಚೆಗಳಂ
ಪದಲಕ್ಷ್ಮಿ ಜಱಿವ ತೆಱದಿಂ
ಸುದತಿಯ ನೂಪುರದ ನುಣ್ಚರಂ ಸೊಗಯಿಸುಗುಂ ೧೩೫

ಪೊಣರದು ಮದನನ ಡೊಣೆಗಳ್
ಪೊಣರದೆನಲ್ ನಂಬಿ ಕೇಳ್ವುದಾ ಯುವತಿಶಿಖಾ
ಮಣಿಯ ಕಿಱುದೊಡೆಯನೀಕ್ಷಿಸಿ
ಮಣಿಯದರಾರ್ ಮದನನಿಸುವ ಮೋಹಿನಿಶರಮಂ ೧೩೬

ಕಡುಪೞಿವನಂಗನಂ ಪೆಂ
ಬಿಡದುಪಜೀವಿಸುವ ಕೊರತೆಗಳ್ಕದೆ ತಮ್ಮೊಳ್
ತೊಡರ್ದೊಡೆ ಮಡದಿಯ ಕಿಱುದೊಡೆ
ತೊಡೆಯದೆ ಪೂಗಣೆಯ ಡೊಣೆಯ ಪಣೆಯಕ್ಕರಮಂ ೧೩೭

ಮದನನ ಬಾಣನಿಷಂಗಂ
ಸುದತಿಯ ಕಾಲ್ವಿಡಿದು ಪೆಂಪ್ರಪಡೆಯಲ್ ಬಂದಿ
ರ್ದುದೊ ಪೇೞ್ದಂಬ ವಿಳಾಸಾ
ಸ್ಪದದಿಂ ಸೆಱೆದಿರ್ಪುವವಳ ಜಂಘಾಕಾಂಡಂ ೧೩೮

ಕಾವನ ಪದ್ಮಾದ್ಯಶರ
ಕ್ಕಾವಗಮೊಳಗಾದ ಡೊಣೆಯನೆರಡಂ ಬ್ರಹ್ಮಂ
ಜೀವವನಿಟ್ಟೆಡೆಗೆಯ್ವುದೆ
ಭಾವಿಸಿ ಮಾಡಿದವೊಲವಳ ಕಣೆಗಾಲೆಸೆಗುಂ ೧೩೯

ರಂಭಾವಿಭವದಿನಧಿಕತ
ರಂ ಭಾವಿಸೆ ಪತಿಮನೋವಮದೇಭಾಲಾನ
ಸ್ತಂಭಮೆನಲ್ ನೋಡೆ ಸುಗತಿ
ಸ್ತಂಭವನೊಡರಿಪುವು ಬಟ್ಟದೊಡೆ ಬಾಲಕಿಯಾ ೧೪೦

ಕಣ್ದಣಿಯೆ ನೋಡಿ ಕಾಂತೆಯ
ನುಣ್ದೊಡೆಗಗ್ಗಳದ ಗೆಲವನಿತ್ತಂಗಭವಂ
ಪೂಣ್ದಡಿಯನಾರನಟ್ಟದೆ
ಮಾಣ್ದನೆ ಪೇಟಿವಕೆ ಕನಕಕದಳಿಯನಿಳೆಯೊಳ್ ೧೪೧

ಕಾಮನನಿಳಯಕ್ಕೊಲವಿಂ
ಸೋಮಂ ಶುಭಲಗ್ನದೊಳ್ ಪ್ರತಿಷ್ಠಿಸಿದ ಲಸತ್
ಕೋಮಲ ರಂಭಾಸ್ತಂಭನಿ
ಕಾಮುಪೆನಲ್ ಮೆಱೆವುವಾಕೆಯೂರುದ್ವಯಗಳ್ ೧೪೨

ಆ ಲಲಿತದ ರಂಭಾಳಿಯು
ನೇಳಿಸುತಂ ನಲ್ಲಮಲ್ಲನಭ್ಯಾಸಿಸುವಾ
ಜೋಳೀಗಂಬಗಳೆಂದೆನ
ಲಾ ಲಲನೆಯ ತೋರದೂರು ಸಾರದೊಳೆಸೆಗುಂ ೧೪೩

ಸೇರದೆ ಬಾಳೆಯ ಕಂಬವ
ನೋರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ
ಬಾರಿಸಿ ಸೊಬಗಿಂದೆತ್ತಿದ
ತೋರಣಗಂಬಂಬೊಲಿರ್ದವಾಕೆಯ ತೊಡೆಗಳ್ ೧೪೪

ಸ್ಮರನೆಂಬ ತೋಂಟವಾಳಿಗ
ನುರುತರದಿಂ ಬಿತ್ತಲೆಂದು ಚಿನ್ನದ ಬಟ್ಟಲೊ
ಳಿರಿದಾದ ಶಾಕಿಬೀಜವ
ನಿರದೆತ್ತಿದೊಲವಳ ಮದನಮಂದಿರಮೆಸೆಗುಂ ೧೪೫

ವಿಶ್ವಜಯಕೆಂದು ಮದನಂ
ವಿಶ್ವಾಸದೊಳರ್ಚಿಸುತ್ತ ಬಳಸುತಲಿರ್ಪಾ
ಅಶ್ವತ್ಥದ ಕಿಱುದಳಿರೆನೆ
ಭಾಸ್ವತ್ಕೋಮಲೆಯ ಮದನಮಂದಿರವೆಸೆಗುಂ ೧೪೬

ಕುಂದಣದ ತಗಡನುಬ್ಬಿಸಿ
ಹೊಂದಿಸಿ ಸಂಪಗೆಯ ಪೊಗ್ಗ ಹರವೇ ಬೀಜವ
ತಂದು ಚೆಲ್ಲಿದನೋ ಮನ್ಮಥ
ನೆಂದೆಂಬೊಲು ಕಂತುನಿಲಯ ಕಂಗೊಳಿಸಿರ್ಕುಂ ೧೪೭

ಅರುಣಿಮರೋಮದಿಂ ಕಡುರಸಿಕ್ತ ಶುಭಾಕೃತಿ ಕೋಮಲಂ ನಯಂ
ಸರಸ ಶರೀರಕಾಂತಿ ಸಮಧಾತು ನಿರೋಗತೆ ನಿರ್ಮಲಂ ಕರಂ
ಸುರುಧಿರಮಿಂದ್ರಿಯಂ ತ್ರಸಹರಂ ಸಫಲಂ ನರಮಿಲ್ಲದೊಪ್ಪಮುಂ
ಸುರಭಿಸುಯೋನಿಯಲ್ಲಿ ಪದಿನೆಂಟುಗುಣಂ ಗಡ ದಿವ್ಯಕಾಂತೆಯಾ ೧೪೮

ಕಾಂತನ ಹೃತ್ಕೇಕಿದಱಿಂ‌ೞೊಳ್
ಕಾಂತನನತಿಮುದಮನಲ್ಲಿಯಱೞ್ವುದರಿಂದಂ
ಕಂತುವಕೃತಕಾದ್ರಿಯೆನ
ಲ್ಕಿಂತು ವನಜಾಕ್ಷಿಗೆಸೆಗುವುದತಿಘನಜಘನಂ ೧೪೯

ಅಚ್ಚರಿಯಿದು ಪೊಗೞ್ವರ ಬಗೆ
ಯುಚ್ಚಿಡದಿರಲೊಡನೆ ಬಿಡದೆ ನೋೞ್ಪರ ಕಣ್ಗಂ
ದಚ್ಚಿರದ ಚಿತ್ತಜನ್ಮನ
ನಚ್ಚಿನ ರಥಚರಣವೆನಿಸುವಾಕೆಯ ಜಘನಂ ೧೫೦

ಮದನಶಬರಾಸ್ತ್ರತತಿಗ
ಳ್ಕಿದ ವಿಟಮೃಗಸಮಿತಿಗಡರ್ದು ಬರ್ದುಕುವ ಶೈಲಾ
ಗ್ರದ ತೆಱದಿನೊಪ್ಪುತಿರ್ಕುಂ
ಸುದತಿಯ ಗುರುತರ ನಿತಂಬವತ್ಯುನ್ನತಿಯಿಂ ೧೫೧

ಎಳೆಯಳ ಮೊಗದ ನೆಟಿಲ್ ತ
ಪ್ಮೊಳಗಿರೆ ಸಂತಸದೆ ಬೀಗಿ ಬೆಳೆದಿರ್ದ ಕುಚಂ
ಗಳ ಮಱೆಯೊಳ್ ಕಾಣದೆ ಮೊಗ
ದಳವಂ ನಡು ನೆನೆದು ಕಡುಬಡವನಾಂತಿರ್ಕುಂ ೧೫೨

ತುಂಗಕುಚಭರೆಯ ನಡುವಂ
ಭಂಗುರದೆವ್ವನದ ವಿಕಲತೆಯದೆನ್ನದೆ ನೀಂ
ಸಿಂಗದ ನಡುವೆಂದರೆ ಪೆಱ
ಪಿಂಗದೆ ಕರಿಕುಂಭಮೆಂತು ಮೇಲಿರ್ದಪುದೊ ೧೫೩

ಮಡದಿಯ ಸೆಳೆನಡು ತನ್ನಯ
ಬಡತನದಿಂ ಹರಿಯು ಮಧ್ಯಮಂ ನಯದಿಂ ಕೀ
ಳ್ಪಡಿಸುತ್ತಿರ್ಪುದನಱಿದುಂ
ಪಿಡಿಯೊಳಗಾಗಿರ್ಪುದೆಂಬುದದು ಪುಸಿಯಲ್ತೆ ೧೫೪

ಬಾಸೆಯ ತನಗದು ನೆರವೆಂ
ಬಾಸೆಯ ಪಿಡಿದಡರಿ ನೋಟ್ಪವೋಲ್ ನಡುವೆಂಬೀ
ದೆಸೆಗೆ ತಂದಂಗಜನುಂ
ದೇಸಿಗೆ ಸಲಲಬ್ಜದಳದ ತೆಳ್ಪಸುರೆಸುಗುಂ ೧೫೫

ಎಲ್ಲರ್ ಕಂಡವೊಲಿದು ನನೆ
ವಿಲ್ಲೊಳ್ಪಿಡಿಗಾಳಿಗಲುಗುವೆಳೆಲತೆಯೆಂದ
ಲ್ಲಲ್ಲಱಿ ಪೊಗಟ್ಟಿರಂತಾ
ಚೆಲ್ವಿನ ಸೆಳೆನಡುವನಱಿಯೆನಾ ಕೋಮಳೆಯಾ ೧೫೬

ಬಿಟ್ಟು ಬೆಳಸಿದರೆ ಬಾನೆಡೆ
ಗೆಟ್ಟಪುದೆಂದಡರಿ ನೋಡಿ ಜಘನಸ್ಥಳಮಂ
ನೆಟ್ಟನೆ ಬಿದಿ ಬಿಗಿದಂ ಪೊಂ
ಗಟ್ಟನೊಳೆನೆ ಕಾಂಚಿ ಕಣ್ಗೆವಂದುದು ಸತಿಯಾ ೧೫೭

ವನಿತೆಯ ತೆಳ್ಪಸಿಱಳತೆಯ
ವನಿತೆಯುದೇಂ ತನುವಸಿಟ್ಟ ಕುಳಿಯೆನೆ ಚಂದ್ರಾ
ನನೆಯ ಸುೞಿವೊಕ್ಕಳೆಸೆದುದು
ನನೆಯ ಶರಂ ನಾಂಟೆ ತನ್ನನೀಕ್ಷಿಸಿದವರಂ ೧೫೮

ಕಡುಚೆಲ್ವಿನವಯವಂ ಸ್ಮರ
ನಡರಿ ಕರಂ ಗುಣಿಸಿ ನೋಡಿ ನಡುವಿಲ್ಲೆಂದು
ಗ್ಗಡಿಸಿಟ್ಟ ಸೊನ್ನೆ[ಯಂದದಿ
ನೊ]ಡರಿಸಿದುದು ಕಣ್ಗೆಗವಳ ನಾಭೀವಲಯಂ ೧೫೯

ವಿಟರ ಚಳನಯನ ಶಫರಂ
ಚಟುಳತೆಯಿಂ ತಿರುಗುತಿರ್ಪ ಲಾವಣ್ಯರಸೋ
ತ್ಕಟಕೂಪವೆಂಬ ತೆಱದಿಂ
ಕುಟಿಲಾಳಕಿಗೆಸೆದುದಲ್ತೆ ನಾಭೀವಲಯಂ ೧೬೦

ಸ್ಮರರಾಮಂ ಲಾವಣ್ಯದ
ಶರಧಿಯ ರೋಮಾಳಿಸೇತುವೊಡೆಯುತೆ ತನ್ನಯ
ವರಧನುವಿಂ ತಿರುಪಿದವೋಲ್
ತರುಣಿಯ ಸುೞಿನಾಭಿ ಸುಗಮದಿಂ ರಂಜಿಸುಗುಂ ೧೯೧

ಮೊಗರಸಮೆ ಬಲಿದು ತೊಟ್ಟೆ
ಟ್ಟುಗೆವ್ರಗೆಳಡುವೆಂಬ (?)ಭೂಜಕೞಿಯಾದವೊಲೇಂ
ಬಗೆಗೊಳಿಸಿತೊ ಸುೞಿಪೊಕ್ಕುಳ್
ಸೊಗಸುವ ಕಾಂತಾಕದಂಬತಲೆಮಾಣಿಕದಾ ೧೯೨

ಹಿಂದುಮುಂಗಡಸಿ ನಾಲ್ವರ
ತಂಪೆಯೆ ಮಧ್ಯಸ್ಥದೊಡವೆಯುಂ ಹಱಿಹಱಿಹಱಿ
ದಂತಾದವೆಂಬಂತೆ ಮಧ್ಯಂ
ಸಂದೇಹಕ್ಕೊಳಗಾದುದಾ ಕೋಮಳೆಯಾ (?) ೧೯೩

ನಳನಳಿಸಿ ಬೆಳೆದು ವಿರಹಾ
ವಳಿ ನಳನಳಿಸುಗು ವಿಳಾಸರಸದ ತರಂಗಾ
ವಳಿಗಳನೞಿಸುವ ಮಧ್ಯದ
ವಳಿಗಳನೀಕ್ಷಿಸಿದ ನೀಱಿರುಂ ಬಾಲಕಿಯಾ ೧೯೪

ಇನ್ನೆಲೆ ಬಡವಾದೊಡೆ ನಿನ
ಗೆನ್ನಾಣೆ ವಸಂತನಾಣೆ ರತಿಯಾಣೆಯೆನು
ತ್ತಂ ನಡುವಿಂಗಂಗಜನಿ
ಟ್ಟಂ ನಿಯಮದ ಗೆರೆಯನೆನಿಪುವಾಕೆಯ ವಳಿಗಳ್ ೧೯೫

ಮೂಲೋಕದ ಸೊಗವೀಗಳ್
ಲೀಲೆಯೊಳಡಿಯಿಟ್ಟು ಬಂದು ತೆಳ್ಪಸಿಱೂಳಿಗನು
ಕೂಲದೊಳೆ ಪೊಕ್ಕ ದಾರಿಯ
ವೋಲೆಸೆದುವು ಚೆಲ್ವನಪ್ಪ ತಿವಳಿಗಳವಳಾ ೧೯೬

ಮಿಱುಪ ಸುೞಿವಡೆದ ಸಿಂಗರ
ದೊಱೆಯೊಳ್ ಪ್ಪೈರ್ದೋರ್ಪ ತೆಱೆಗಳೆಂಪೆಂಬಿನಮೇಂ
ಮೆಱೆದವೊ ಪೊಕ್ಕುೞ ಗಾಡಿಯೊ
ೞೆಱುಪುವ ತೆಳುವಸಿಱೊಳೊಸೆವ ತಿವಳಿಗಳವಳಾ ೧೯೭

ಬಾಲಕಿಗಳ ನಿಚಯಾಲಂ
ಬಾಲಕಿಗಾ ರೋಮರಾಜಿ ರಂಜಿಸುತಿರ್ಕುಂ
ನೀಲದ ಕಾಂಚೀಮಧ್ಯದ
ನೀಲದೊಳೆಸವನ್ನು ಖಪ್ರಭಾಲೇಖೆಯವೋಲ್ ೧೬೮

ನೆಲೆನೊಲೆಯೆರಡಱ ಸಂದಂ
ಸಲೆ ಭೇದಿಸೆನೆಂದು ಮದನನತಿಸಾಹಸದಿಂ
ನಿಲಿಸಿದ ನೀಲದ ಸಲುಗೆಯ
ನಿಲವೆನಿಸಿತ್ತಮಮ ರೋಮರಾಜಿಯವಳ್ಗಂ ೧೬೯

ಸಾರನನೆವಿಲ್ಲ ನುಣ್ಪಿನ
ನಾರಿಯನೊಲ್ದೀಗಳಿಂತು ಪಡೆವಪಳೆನೆ ಭೃಂ
ಗಾರೋಚಿರುಚಿಯೊಲಲೆಗುಂ
ನಾರಿಯ ನಿಡು ಬಾಸೆ ಕೋಮಳಚ್ಛವಿಯಿಂದಂ ೧೭೦

ನುಣ್ಣನೆಯ ಸಣ್ಣ ಬಾಸೆಯ
ಬಣ್ಣಂ ಬಳಿದಮಲದೇಹಗೌರಚ್ಛವಿಯಂ
ಪಣ್ಣಂ ನುಂಗಲು ಶಾಮದ
ಹೆಣ್ಣಿಂದಿಂದಾದವವಳ ಬಾಸೆಯದೆಂತೊ ೧೭೧

ಸಮನೆ ಪೊಣರ್ವಕ್ಕಿ ವಿಳಾ
ಸಮನೆನಸುಂ ತಳೆದ ಘನಕುಚಂ ನಿಬಿಡತೆಯಿಂ
ರಮಣಿಗೆ ಸೊಗಯಿಸುಗುಂ ಹಾ
ರಮಣಿಗೆ ನುಸಳಲ್ಕೆ ತೆಱಪುಗುಡದನವರತಂ ೧೭೨

ನಿಡುದೋಳಿಂದಮರ್ದಪ್ಪುವ
ಕಡುನೇಹದ ಕಾಂತನೆರ್ದೆಯನೊಡನಪ್ಪುಗೆಯಂ
ಬಿಡದೊಡನೆ ಬೆಳೆವ ನೆಲೆವೊಲೆ
ಸಡಿಸಿಂದೆ ಬಳಲಿಸವಸಿಯಳಯೆಳಜವ್ವನದೊಳ್ ೧೭೩

ಶಶಿಕಿರಣಮನಾಯ್ದಾಯ್ದೊಲ್
ಬೆಸೆಯಲ್ ಪವಣಿಸಿದ ತೆಱದಿ ಮುಕ್ತಾಹಾರಂ
ನಸುಸೋಂಕಿ ಮುಗಿದವೆಂಬಂ
ತೆಸೆಗುಂ ಕುಚಕಮಲಕುಟ್ಮಲಂ ಕೋಮಲೆಯಾ ೧೭೪

ಕೆಲನಿಸಿಸುಗಂಡ ಕಣ್ಣವಿ
ನೆಲಸಲ್ ನೆಲೆವೆಱಪ್ಪ ಸಾಲದೆಸೆ ಕೈಸೋಂಕಿನ
ಗೆಲವಂ ಬಣ್ಣಿಸೆನೆಂಬವ
ತಲೆ ಒಲಿಲಿತ್ತೆಂತೊ ತರುಣಿಯಾ ನೆಲೆಸೊಲೆಯಾ ೧೭೫

ಆಱಡಿಯಂತೆ ಸುಹೃತ್ಕಲ
ದಾಱಡಿಯಂತಚಲಭಾವಮುಗ್ನಸ್ಥಾನಂ
ಆಱಡಿಯಂತಾಱಡಿಯಂ
ತಾಱಡಿಯಂ ಪೋಲ್ತುವವಳ ವೃತ್ತಕುಚಂಗಳ್ ೧೭೬

ಚಿತ್ತಭವಚಕ್ರವರ್ತಿಯ
ತತ್ತರುಣಿಯ ಚಕ್ರಮೆಸೆಯೆ ದಿಗ್ವಿಜಯಕ್ಕೆಂ
ದೆತ್ತಿದನುಳ್ಗೊಡಾರದ
ಬಿತ್ತರಮಂ ಪೋಲ್ತುವವಳ ವೃತ್ತಕುಚಂಗಳ್ ೧೭೭

ಪರಿವೃತ್ತತೆಯಿಂ ನುಣ್ಪಿಂ
ಶರಕಂದಪ್ರತಿಮ ಚಾರು ಗೌರಚ್ಛವಿಯಿಂ
ಪರಿಪಕ್ವತಾಳಫಲಕೊಂ
ದೊರೆಯೆನಿಸುಗುಮವಳ ಘನ ಪಯೋಧರಯುಗಳಂ ೧೭೮

ಮದನೇಂದ್ರಜಾಲಿಗಂ ಲೋ
ಕದ ಬಗೆ ಸೆಂಡುಗಳನಗಲದಿಟ್ಟಳವಡೆ ಮು
ಚ್ಚಿದ ಮಿಸುನಿವೆಸದ ಕಣ್ಮಾ
ಯದ ಶೌಳಿಯನೆನಿಪುವವಳ ವೃತ್ತಕುಚಂಗಳ್ ೧೭೯

ಬಡನಡುವೆಂಬುದಂ ಮುಱಿಯದೇ ಭರದಿಂ ನಳಿತೋಳ ಮೂಲಮಂ
ಕೆಡಿಸದೆ ತನ್ನೊಳೊಟ್ಟಣಿಸಿ ಪೊಂಪುಱಿಯೋಗವೆ ವಕ್ತ್ರಪಂಕಜಂ
ಪಿಡಿದು ಮರಲ್ವಿನಂ ಚುಬುಕಗಂಡಮನೆತ್ತನೆ ಮಧ್ಯಲಿಂಗಮೀ
ನಡುವಿನ ಕಪ್ಪುರಕ್ಕೆ ಮಣಿಯಾಗದೊಡೀಕೆಯ ಕರ್ಕಶಸ್ತನಂ ೧೮೧

ಪಕ್ಕೊಳಗಾಗದಿರ್ದ ನವಯವ್ವನೆಯಂ ಗೆಲಲೆಂದು ಮನ್ಮಥಂ
ಬಿಸಜದ ಮೊಗ್ಗೆಯಿಂದವಡು ಬಾಣಗಳಂ ತಿರುವಿಂಗೆ ಪೂಡಿ ತಾ
ನೆಸುತಿರೆ ಮುಗ್ಧೆ ಕಂಡು ಭಯದಿಂ ತಿರುಗಲ್ಕವು ಬಿನ್ನ ನಟ್ಟು ಪಾ
ಯ್ದಿಸೆದವೊಲೊಪ್ಪುಗುಂ ತರುಣಿಗಾ ಸರಸೀರುಹಕುಟ್ಮಳಸ್ತನಂ ೧೮೨

ರತಿಕಾಂತನಸಿಯ ನುಣ್ಣೊಗ
ರತಿಕಾಂತದ್ಯುತಿಯನಾಂತು ಜೆಲ್ವಿನೊಳಧಿಕಂ
ಲತೆಯ ಪೊದಲ್ಗೆನೆ ರತಿಲೋ
ಲತೆಯುಂ ನಿನಗೀವುದವಳ ತೋಳಸೊಡಲ್ಗಳ್ ೧೮೨

ತಾಮರಸಮುಖಿಯ ನಳಿತೋಳ್
ತಾಮರಸಂ ಬೆಡಗುವೆತ್ತು ಸಿರಿಪದ ಸುಮನೋ
ದ್ದಾಮಕಮಂ ಗೆಲೆವಂದೆಸೆ
ದಾ ಮಕರಧ್ವಜನ ಪಾಶಮನೆ ಸೊಗಯಿಸುಗುಂ ೧೮೩

ಮೃಗನಯನೆಯ ಪೊಲೆ ಪೊಣರ್ವ
ಕ್ಕಿಗಳೆಡೆಯಾದಂಪು ಜಗಪೊಳಗಲಪೆ ತಲೆಯುಂ
ನೆಗಪಿ ನಗೆಜೊನ್ನವೆಳಗಿಂ
ಗಗಿಯಪೆ ಪೊಗಸಸಿಯಸಿಂತು ನಡೆನೋಡುಗುಮೇ ೧೮೪

ಅಣಿಯರದಿನತನು ತನುಲತೆ
ಗೆಣಿಸದೆ ಲಾವಣ್ಯರಸಮನೆತ್ತುವ ಪೊಸರಾ
ಟಣಮಾಲೆಯುಂತಿರೆಸೆದಿರೆ
ಮಣಿಹಾರಂ ನಾಭಿಸರಸಿವರಮುಂಗನೆಯಾ ೧೮೫

ಬಾಳದ ಪೊಗರದು ಸೆಣಸಲ್
ಬಾಳದು ತಾನಿದಱಿಂದೊಳೆಂದು ನೋಡರಿಕೆಯನು
ಜ್ಜೋಳೆ ಮನೋಭವಭೂಪನ
ಬಾಳದು ಬಾಱಿಂದು ಪೊಗಟಿರಾರಱಿವೆನ್ನ(?) ೧೮೬

ಸಲ್ಲಲಿತ ವಿಮಳ ಸುಮನೋ
ವಲ್ಲರಿಯುಂ ತಳೆದು ಪದೆಪಿನಿಂ ಪೆಲ್ಲಲರಿಂ
ದಲ್ಲಾಡುವ ಲತೆಗಳಿವೆನೆ
ಸೆಳ್ಳುಗುರಿಂಡೆಸೆವುವವಳ ನಿಡು ನಳಿತೋಳ್ಗಳ್ ೧೮೭

ರನ್ನಕೆ ಪೊಳೆಪುರ್ಚ ಮಿಸುನಿಯ
ಚಿನ್ನಕ್ಕೊಳ್ವಣ್ಣಮೆಸೆವ ಮುತ್ತಿಗೆ ಥಾಳಂ
ಕನ್ನೆಯ್ದಿಲ್ಗೆ ಮೃದುತ್ವಂ
ಚೆನ್ನೆಯ ನಳಿತೋಳ ದಯವಲಾಮುಪ್ರ ಮುನ್ನಂ ೧೮೮

ತರುಣ ಮೃಗಾಕ್ಷಿಯ ದೊರೆವೆ
ತ್ತರುಣತಳಂ ಬಾಹುಲತೆಯ ಪಲ್ಲವಮೆನೆ ಭಾ
ಸುರತರಮಾಗಿರೆಯಿನನೊಳ್
ಸುರತಮುಮಿಮ್ಮಡಿಸುಗುಂ ಕರಸ್ಪರ್ಶನದಿಂ ೧೮೯

ಕೆಂದಾವರೆಯೆಸಳ್ಗಳೊ ಪೊಸ
ಕೆಂಪಳಿರ್ಗಳೊ ಮೇಣಿವೆಂದು ಬಗೆವರ ಮನದೊಳ್
ಸಂದೆಗಮಂ ಮಾಣಿಸಿದುದು
ಕೆಂದಳಿದಂಗುಲಿಗಳುಗುರ ಬೆಳಗಂಗನೆಯಾ ೧೯೦

ಕದನಮನೊಡರ್ಚೆ ಮೂಲೋ
ಕದ ನವಯುವ್ವನರನಲೆವ ನನೆಗಣೆಗಳೆನಲ್
ಮದನಭುಜವಿಜಯಮುಮಂ ತಾ
ಮದನಭಿವರ್ಣಿಸುವುವವಳ ಹಸ್ತಾಂಗುಲಿಗಳ್ ೧೯೧

ಸೊಗಯಿಪ ಮೃಗನಯನೆಯ ಸೆ
ಳ್ಳುಗುರ್ಗಳ್ ಮೂವಳಿಸಿ ಮುತ್ತಿ ಮುಸುಕಿದ ಮುಳ್ಳಿಂ
ಬಗಿದೆಂತು ಪೊಕ್ಕು ಚದುರಿಂ
ತೆಗೆದುವೊ ಕೇದಗೆಯ ಮಿಸುಪ ಗಱಿಗಳ ಚೆಲ್ವಂ ೧೯೨

ಮನಮಂ ಸಲೆಸೋಲಿಸಿ ಕಾ
ಮನ ಮಂಗಳಶಂಖದಂತೆಯೆಸೆವವಳ ಕೊರಳ್
ಜನವಾದಮೆನಿಸಿ ವರಭಾ
ಜನಮಾದತ್ತುಪಮೆಗಾಸ್ಯಮುಕುರದ ಪಿಡಿಯೋಲ್ ೧೯೩

ಪರಿಕಿಸೆ ಕಳಾವಿಳಾಸದ
ಪರಿರಂಭಕ್ಕಮದರ್ಕೆ ಚುಂಬನಕ್ಕಿಂಬಾಗಿ
ರ್ದರಸಿಯ ಕೊರಲ್ಗಕ್ಕಟ ಕಂ
ಗುರುಡರ ಕೈಬಾಯ್ಗೆ ಬಂದ ಶಂಖಂ ದೊರೆಯೇ ೧೯೪

ಇಂಬಿನ ಕಂಬುಗ್ರೀವಮ
ಡೆಂಬರ ಮಾತಿರ್ಕೆ ಮೌಕ್ತಿಕಗ್ರೀವಂ ತಾ
ನೆಂಬುಪಮೆವೆತ್ತು ಶೋಭಾ
ಡಂಬರಮಂ ಪಡೆದುದವಳ ಕೋಮಲ ಕಂಠಂ ೧೯೫

ಪಿರಿದುಮನುರಾಗದಿಂ ಬಿಂ
ದಿರೆ ಸೊಗಯಿಪ ಸೊಬಗುಗುಂಡು ನಿಜಪರಿಮಳದಿಂ
ಪೊರೆದು ಮುಖಲಕ್ಷ್ಮಿ ಬಂದುಗೆ
ಯುಗಲಂ ಪೂಡಿದವೊಲಾಯ್ತು ಬಾಯ್ದೆಱೆ ಸತಿಯಾ ೨೧೦

ಪಿಂಗದೆ ಲಾವಣ್ಯದ ಸೊಂ
ಪಿಂಗದೆ ತಾ ನಿಲಯಮೆನಿಸಿ ಯವ್ವನಲಕ್ಷ್ಮಿಯ
ಮಂಗಳಮಣಿದರ್ಪಣಯು
ಗ್ಮಂಗಳವೆಂದೆನೆ ಕಪೋಲವಂಗನೆಗೆಸೆಗುಂ ೨೧೧

ತೊಲಗದೆ ನೋಡುವ ಮನ್ಮಥ
ಲಲನೆಯ ಮಣಿಮುಕುರದಳವನದಟಲೆವಾ ಕೋ
ಮಲೆಯ ಕದಪಿಂಗೆ ತಂಬುಲ
ದೆಲೆ ಸೆಣೆಸುವುದಾವ ಮೊಗನೊಳಕೊಂಡಿಳಿಯೊಳ್ ೨೧೨

ಕ್ಷೋಣಿಯನಲೆಯಲ್ ಸುಮನೋ
ಬಾಣಂ ಕುಸುಮಾಸ್ತ್ರವಿತತಿಯಂ ಮಸೆವ ಲಸತ್
ಸಾಣೆಯೆನಲೆಸೆವುತಿರ್ಕುಂ
ಮಾಣಿಕ್ಯಾಧರೆಯ ನುಣ್ಪುವೆತ್ತ ಕಪೋಲಂ ೨೧೩

ರಾಜಿಪ ಮುಖಲಕ್ಷ್ಮಿಗೆ ನೀ
ರಾಜಿತ ಮಣಿಪಾತ್ರಯುಗಳಮೆನೆ ಸೊಗಯಿಸುಗುಂ
ರಾಜೀವಮುಖಿಯ ತನುರುಚಿ
ರಾಜೀವಜಿತಾಕಲಾಪ ಕರ್ಣಯುಗಂಗಳ್ ೨೧೪

ತೊಳಗುವ ನಗೆಗಣ್ ನೆಯ್ದಿ
ಲ್ಗಳ ಕಾವಮೃತಾಂಶುಬಿಂಬಮಂ ಬಗಿದವೊಲು
ಜ್ಜ್ವಳಿಸಿದುವು ಕರ್ಣಪಾಳಿಕೆ
ಯೊಳಕೆಯ್ದೆಳಮುತ್ತಿನೋಲೆಯಿಂ ಬಾಲಕಿಯಾ ೨೧೫

ಕಿವಿಯೆಂದು ಬರೆಯುತಂ
ಮೊದಲವರ್ಣಮಂ ಮಱೆದು ಕಡೆಯವರ್ಣಮನಂಗೋ
ದ್ಭವನಲ್ತೆ ಬರೆದನೆಂದೆನೆ
ಸುವಿಚಾರಂಬೆತ್ತವವಳ ವರ್ಣಿತ ಕರ್ಣಂ ೨೧೬

ಸಂಪಗೆಯರಲೊಳ್ ತನಗಿನಿ
ಸಂ ಪಗೆ ಚೆಲ್ವಿಂದಮೆನಿಪ ನಾಸಾಮುಕುಳಂ
ಕಂಪನವ ಪೊಯ್ಸಿ ತುಂಬಿಗೆ
ಕಂಪನಮಂ ವಿಟಜನಕ್ಕೆ ಮಾೞ್ಪುದು ಸತಿಯಾ ೨೧೭

ಮುಂ ಪಡೆದುದವಳ ನಾಸಿಕ
ಕಂಪಿನ ಕಣ್ಮಿಂಗಳೆಂಬಮಳ್ವೞಿವಿಗೆಯಂ
ತಾಂ ಪೊತ್ತು ನಿಂದ ಮದನನ
ಸಂಪಗೆಯೊಳ್ಸನೆಯ ಕೇತುದಂಡಶ್ರೀಯೊಳ್ ೨೧೮

ಪಱಿಪೆಗಳೆಂಜಲಿಸದ ಮು
ನ್ನಱಿದು ವಸಂತಂ ಸುಗಂಧಮಂ ಬೈಚಿಟ್ಟಾ
ನಱುಗಂಪಿನ ಕುಪ್ಪಿಗೆಯೆಂ
ಬೆಱಕಮನೊಡರಿಸುವುದವಳ ನಾಸಾಮುಕುಳಂ ೨೧೯

ಕೈದುವನಿೞಿಕೈದು ದಿಟ
ಕ್ಕೈದುವನಲರಂಬನತನು ಜಗಮಂ ಗೆಲ್ವಂ
ನೈದಿಲನೆ ಜಱಿತವ ಚೆನ್ನೆ
ಯ್ದಿಲಣಂ ಸಾಲದೆನಿಸುವವಳಕ್ಷ್ಣಿಗಳಿಂ ೨೨೦

ಲಾವಣ್ಯರಸದೆ ತೆಕ್ಕನೆ
ತೀವಿದ ಮುಖಸರಸಿಯೊಳಗಣೆಳೆಮೀನೆನಿಸಿ
ದಾವಗಮಲರ್ಗಣ್ಣಗ್ಗದ
ಧೀವರರಂ ಬೆಱಗೊಳುಱಿತ ತೊಡರ್ಚುವುದವಳಾ ೨೨೧

ಲಲನಾರತ್ನವಿದೆನಿಸಿ
ರ್ಪೆಳೆಯಳ ಕಣ್ನೋಗುವುದಕ್ಕೆ ಸಮಯಂ ಬಡೆಯಲ್
ನೆಲಸಿರ್ಪಂಜನಲೇಖಾ
ವಿಲಸತೆಯಂ ಪಡೆದವವಳ ಕೀಲಿತವೆದುಜುಗಲ್ ೨೨೨

ಅಂಬುಜಪತ್ರಕ್ಕೆಱಗಿದ
ಎಂಬಿಯ ಮಱಿಯೆಂಬ ತೆಱದಿನಬ್ಜಾಕ್ಷಿಯ ಕ
ಣ್ಣಿಂಬಾಗಿರ್ದುವು ಸರ್ವರ
ಕಂಬುಗೆ ಕರಿಯಾಲಿ ನೀಲಮಣಿಸನ್ನಿಭದಿಂ ೨೨೩

ತಿಂಗಳ ಬೆಳಗಿನ ರಸದಿನ
ನಂಗಂ ಪ್ರಾಂಗಣೆಯನುರ್ದಿ ಚಿತ್ರಿಸಿದನೊ ಕ
ರ್ಣಂಗಳ ಸೀಮೆಯೆನಲ್ ನಿಡು
ಗಂಗಳ ಬಿಳಿಯಾಲಿ ರಂಜಿಕುಂ ಕೋಮಳೆಯಾ ೨೨೪

ನಡುವಣ ಕಪ್ಪುಂ ಕಡೆಯಣ
ಕಡುಪೆಳ್ಪುಂ ತುದಿಯ ಕೂರ್ಪುಮೆಸೆದಿರೆ ವಿಟಸಂ
ಬಿಡದಿಸಲ್ ತೆಗೆದ ಮದನನ
ನಿಡಿಯಲರ್ಗಣೆಗಳನೆ ಪೋಲ್ತುವಾಕೆಯ ಕಣ್ಗಳ್ ೨೨೫
(ಕಾವ್ಯಾವಲೋಕನಂ -೧೫೦-)

ಮೊರೆಯುದಳಿ ಮುಗಿಯುದಬ್ಜಂ
ಕೊರಗದ ನನೆಯಂಬು ನೀರೊಳಾಡದ ಮೀನುಂ
ಚಿರಮೆನೆ ಮೊಟಿಗದ ಮಿಂಚಂ
ಬರಚರಮಪ್ಲಿದ ಚಕೋರಮಲರ್ಗಣ್ ಸತಿಯಾ ೨೨೬
(ಚಂದ್ರಪ್ರಭಪುರಾಣಂ, ೧೧-೯೭)

ಆಕೆಯ ವಕ್ತ್ರಚಂದ್ರಮನನಾಗ್ರಹದಿಂ ಗ್ರಹಿಸಲ್ಕೆ ನಾಭಿಯೊಳ್
ಭೀಕರ ರೋಮರಾಜಿಭುಜಗಂ ಪೊಱಮಟ್ಟುದ ಕಂಡು ಬಟ್ಟಿಯುಂ
ತಾ ಕುಡಪಡ್ಡಮಿರ್ದಪುವು ವೃತ್ತಕುಚದ್ವಯಮೆಂಬ ಮಾತ ಮ
ತ್ತಾ ಕಿವಿಗಳ್ಗೆ ನೇತ್ರಯುಗಮಪ್ಪಿ ನಿರೂಪಿಸುತಿರ್ದವಾಗಳುಂ ೨೨೭

ಇರದೆ ನಿತಂಬಮೆಂಬಹಿನಿವಾಸದಿನೀಕೆಯ ರೋಮರಾಜಿಯೆಂ
ಬುರುಗನಣುರ್ಕೆಯಿಂ ಪೊಗಮಸೊಪ್ಪುವ ಚಂದ್ರನೆ ಗೆತ್ತು ಕೋಪದಿಂ
ಬರೆ ಬರಲೀಯದತ್ತ ಪೊಲೆಗಳ್ ತಡೆದಿರ್ದುವಿಪೆಂದು ಪರ್ಚುವಂ
ತಿರೆ ಕಿವಿಯೊಳ್ ಜಡಂಗಿಡಿಮು ತೋರ್ಕುಮಪಾಂಗದ ನೋಟವಾಕೆಗಂ ೨೨೮

ವದನಾಬ್ಜಾಸವಗಂಧಲಂಪಟರಟದ್ಭೃಂಗಂಗಳಂ ಸೋಯಲಿ
ತ್ತಿದ ನೀಳೋತ್ಪಳಮಾಲೆಯಂ ದ್ವಿಗುಣಿಸಲ್ಕಾರ್ತ್ತಿತ್ತು ಕರ್ಣಾಂತಗಾ
ಮಿ ದಳನ್ನೀಳಸರೋಜರೋಚಿ ಕುಮುದಜ್ಯೋತ್ಸ್ನಾವದಾತಪ್ರಭಂ
ಮದನೋತ್ತೇಜಿತಬಾಣವಿಭ್ರಮಮಪಾಂಗಾಲೋಕನಂ ನಲ್ಲಳಾ ೨೨೯
(ಅಜಿತಪುರಾಣಂ ೯-೩೯. ಕಾವ್ಯಾವಲೋಕನಂ. ೯೩೦)

ಮೀಂಗಳನೊರ್ಮೆ ಕೈರವಮನೊರ್ಮೆ ಚಕೋರಮನೊರ್ಮೆ ಚಂಚರೀ
ಕಂಗಳನೊರ್ಮೆ ಮೋಹನಶರಂಗಳನೊರ್ಮೆ ಬಸಂತದಚ್ಚ ಬೆ
ಳ್ದಿಂಗಳನೊರ್ಮೆ ಬಾಲೆಯ ಮದಾಲಸತರ್ ಸಂಚಲ ಮುಗ್ಧಸಸ್ಮಿತಾ
ಪಾಂಗಮನೊಲ್ದು ಬಣ್ಣಿಸುವರಾಕೆಯ ಚೆಲ್ವಿನ ಕಣ್ಣಮಾಲೆಯಂ ೨೩೦
(ಮಲ್ಲಿನಾಥ ಪುರಾಣಂ ೭-೭೦)

ಕಮನೀಯಂ ಸ್ಮರಧನು ಕೊಂ
ಕಮನೀಯಂದದೊಳೆ ಪಡೆಯಪ್ಪನೆ ನಿಡುಪುರ್ವಾ
ರಮಣೀಮುಖೇಂದುಬಿಂಬದ
ರಮಣೀಯ ಕಲಂಕಲೇಖೆವೋಲ್ ಸೊಗಯಿಸುಗುಂ ೨೩೧
(ಜಗನ್ನಾಥವಿಜಯಂ ೧೦-೪೨)

ಭಾವಭವನವಳ ಚೆಲ್ವಂ
ಭಾವಿಸೆ ಕಾಲಕ್ಕೆ ಕೈಪೆಯಾಗಿರಲಸಿತೋಳ್
ಜೀವಿನೆಸಳಿಟ್ಟ ಗಾಡಿಯ
ನಾವರಿಸಿದುದೆಸೆವ ಪುರ್ವು ಬಿಸಜಾನನೆಯಾ ೨೩೨

ಎಲೆ ಚಂದ್ರವದನೆ ನಿನ್ನಯ
ಕೆಳೆಯನ ಬಲ್ವಗೆಯ ಮಱುಗಳೆಂದಬ್ಜಭವಂ
ಮುಳಿದೊಪ್ಪುಗೊಟ್ಟ ರಾಹುವಿ
ನೆಳವಱುಯೆನಲಡರ್ದು ಪುರ್ವು ರಂಜಿಪುವವಳಾ ೨೩೩

ಚಕ್ಕನೆ ಚಕೋರವಕ್ಕಿಗ
ಳಕ್ಕೈಕ್ಕೆಯೊಳುಂಡು ದಣಿದು ತಿಂಗಳ ಬೆಳಗಂ
ಮುಕ್ಕುಳಿಸಿ ಮಗುೞೆ ಮಗುೞ್ದುಗು
ೞ್ವಕ್ಕಜಮಂ ಪಡೆದವವಳ ಧವಳಾಪಾಂಗಂ ೨೩೪

ಸಕಳಂಕಮಾದ ಪೆಱೆಯೆನೆ
ಸಕಳಂ ಜನಮೆಯ್ದೆ ಪೊಗೞಲಳಿಕದ್ಯುತಿ ಮೇಣ್
ಚಕಿತವತಿಕಾಂತರಾಂತಂ
ಚಕಿತ ಮೃಗೇಕ್ಷಣೆಯ ಪೆಱೆನೊಸಲ್ ಬಗೆಗೊಳಿಕುಂ(?) ೨೩೫

ಜನವಿನುತೆಯ ನೊಸಲೆಸೆದುದು
ನಿನಗೆಣೆಯಿಲ್ಲಖಿಳ ರಾಜಮಂಡಲವೆಂದಾ
ನನಕಧಿರಾಜತೆ ಸಲೆ ನಿಲೆ
ಮನಸಿಜನೆಳೆಪೆಱೆಯ ಪಟ್ಟಮಂ ಕಟ್ಟಿದವೋಲ್ ೨೩೬

ಕಮಲಕ್ಕೆಱಪಳಿಗಳೆನಲ್
ಕಮಲಕ್ಕೆ ಮುಖಾಂಬುಜಕ್ಕೆ ನಿಟಿಲಾಗ್ರಚಳತ್
ಭ್ರಮರಕ್ಕತಿಶಯಮೆಸೆಗುಂ
ಭ್ರಮರಕಂದಬಾಂಶುರುಚಿರ ಗುರುಕುಚಭರೆಯಾ ೨೩೭

ತೋರಣದಿನೆಸೆದುವಿಳೆಯುಂ
ಕೂರಿಸಿ ನಗೆಗಣ್ಣ ಮಿಂಚು ಮಿಱುಗುವಿನಂ ಶೃಂ
ಗಾರರಸಮಂ ನಿಮಿರ್ಚುವ
ಕಾರಮುಗಿಲ್ಮಾಲೆಯಂತೆ ಕುಂತಳಮವಳ ೨೩೮

ಪೋಲಿಸೆ ತಮ್ಮಯ ಕಣ್ಣ
ಕ್ಕಾಲಿಗಳಾಗಿರ್ದು ಬರ್ದುವಲ್ಲದೆ ದಿಟಮಾ
ಗಾಲಿಸಿ ಕಂಡೊಡೆ ನಾಣ್ಚಿದ
ಪೀಲಿಯ ಗಱಿಯವಳ ಜಡಿವ ಮುಡಿಯ ಬಿಡಂಗಂ ೨೩೯

ನಾಸಾಸಂಪಗೆ ಗಂಧ
ಕ್ಕಾಸುರದಿಂದಱಿಯಲೆಱಗಿದೆಳೆದುಂಬಿಗಳೊ
ಲ್ದಾ ಸೊಕ್ಕಿ ನೆಲಸಿದಪವೆನೆ
ದೇಸಿಯನಾಂತವಳ ಕುಟಿಲಕುಂತಳಮೆಸೆಗುಂ ೨೪೦

ಕಡಲೊಳ್ ಪುಟ್ಟಿದೊಡೇನವಂ ಕೊಳದೊಳಾನುಂ ಪುಟ್ಟಿನೇ ವೈರಮಂ
ಬಿಡನೆಂದುಂ ಖಳನಬ್ಜನೆನ್ನೊಳವನಂ ನೀಂ ಗೆಲ್ದು ಸರ್ವಸ್ವಮಂ
ಪಿಡಿದೆನ್ನಿಂಬರಮಾರೊ ಮಿತ್ರರೆನಗೆಂದಂಭೋರುಹಂ ಕೂರ್ತು ಕಾ
ಲ್ವಿಡಿದಂತಂತಿರೆ ತನ್ನ ಚೆಲ್ವನೆಸೆದತ್ತಾಸ್ಯಂ ಸರೋಜಾಸ್ಯೆಯಾ ೨೪೧

ಪ್ರಣುತ ಸುಧಾಗರ್ಭಮೆ ಕಾ
ರಣಮೀ ಕೋಮಳೆಯ ಮುಖಸುಧಾರುಚಿಗಳಿದಂ
ತೆಣೆಗೊಂಡು ತೊಳಗುತಿರ್ಪಾ
ಭಣಶಶಿಬಿಂಬಕ್ಕೆ ಕೃಶತೆಯೆತ್ತಣಿನಾಯ್ತೋ ೨೪೨

ವೀರವನತನುಗೆ ನಿಜಮೌ
ರ್ವೀರವಮಿದಱಿಂತು ಕುಡುದು ಕೋಕಿಲನಾದಂ
ಸಾರಮಿನಿತಿಲ್ಲದಮೃತದ
ಸಾರಮೆನಲ್ ಕಿವಿಗೆ ಸೊಗೆಯಿಕುಂ ದನಿ ಸತಿಯಾ ೨೪೩

ನಿರವಧಿ ಸೌಷ್ಟವದಿಂದಂ
ನಿರವಧಿಕಂ ಚೆಲ್ವುವೀಱೆ ಕಬರೀಭರದಿಂ
ಪರಭಾಗಂಬೆತ್ತಾಕೆಯ
ಪರಭಾಗಂ ಪತಿಯ ಮನಮನುರೆ ಸೆಱೆವಿಡಿಗುಂ ೨೪೪

ಬೊರೆಗಡ ಚೆಂಬೊನ್ನಿದಱಿಂ
ಬೊರೆಗಮಣಂ ಬಾರದೆನಿಸುವಾ ಪೀನಪಯೋ
ಧರೆಯ ತನುಕಾಂತಿ ಸತತಂ
ಧರೆಯನನನ್ಯಜನತೇಜದಂತಂಡೆಲೆಗುಂ ೨೪೫

ಕಾಂಚನದ ಬೊಂಬೆಗಳವಡೆ
ಮಿಂಚಿನ ಪ್ರೊಳಪಿಟ್ಟು ತಾನೆ ಜೀವಂಬೊಯ್ದಂ
ಪಂಚಶರನಕಟ ಪಱಿತಯು ವಿ
ಪಂಚನ ಕೈಚಳಕದಳವು ನಾನಱಿಯದುದೇ ೨೪೬

ನಿಲ್ಲದೆ ಕಣ್ಗಳೊಳ್ ಪೊಳೆದು ಪೋಪಱಿಮಿಂಚನೊಱಲ್ದು ಸೋಂಕೆ ಮೇಲ್
ನಿಲ್ಲದೆ ಬೆಂದ ಪೊನ್ನನೆಳೆಗಂಪಿನ ಗಾಳಿಗೆ ಬೆಚ್ಚಿ ತುಂಬಿವಿಂ
ದೊಲ್ಲದೆ ಪೋಪ ಸಂಪಗೆಯುನೇಂ ಪಗೆಯೆನ್ನದೆ ಪಾಟಿಯೆಂದಣಂ
ಸೊಲ್ಲಿಸಲಕ್ಕುಮೆ ಮಱೆದುಮಾಕೆಯ ಮೆಯ್ಪ್ಪೆಳಗಿಂಗೆ ಬಲ್ಲವಂ ೨೪೭

ವಳೆಯದ ನೂಪುರದುಲಿ ಭೂ
ವಳಯದ ಕಿವಿಗಮರ್ದುಗಱಿಯಲತನುಗೆ ವಿಟರೊಳ್
ಕಳಹಂಸಮನಿಸೆ ಮದವತ್
ಕಳಹಂಸಮನಿಱಿಪುವಲಸಗತಿ ಕೋಮಲೆಯು ೨೪೮

ನವಿಲೋಟಂ ಹಂಸೆಯನಡೆ
ತವೆ ಮಂದಾನಿಲನ ಸುಗತಿ ಮದಗಜಗಮನಂ
ತವತವಗೆ ಬೆಱಗುವಟ್ಟವು
ನವಿನಂ (?) ಬಾಲಕಿಯದೊಂದುಮೃದುಪದಗತಿಗಂ ೨೪೯

ಮದವತಿಯ ರೂಪುಗಂಡಳಿ
ಪಿ ದಿಟಂ ಪೆಱರಱಿಯದಂತೆ ನೆರೆದಪನೆಂದೋ
ವದೆ ಮನಸಿಜ ನೆನಿಸಿದನ
ಪ್ಪೊಡಂಗಜನಂತೆ ದೇಹಮುಂ ತೊಱೆದಪನೇ ೨೫೦

ಬಂಬಲ್ನಿಱಿ ಮದನನ ನನೆ
ಯಂಬಿನ ಪೊಡೆಯೆನಿಸಿ ಕಣೆಯುಮಳನಟ್ಟರೆ ಮು
ಯ್ವಂ ಬಳಸಿದ ಮೇಲುದು ಕುಚ
ಮಂ ಬಿಗಿದಿರೆ ಗುರುನಿತಂಬೆ ದುಗುಲಮನುಟ್ಟಳ್ ೨೫೧
(ಜಗನ್ನಾಥವಿಜಯಂ ೧೦-೧೦೬, ಸೂಕ್ತಿ ೬-೪೭)

ಗೆಲೆವಂದವ್ಮೃತಾರ್ಣವ ಫೇ
ನಲಕ್ಷ್ಮಿಯುಮಂ ಮಿಸುಪ ದುಗುಲದುಳ್ಪುಡೆ ಪಿರಿದುಂ
ಲಲಿತಾಂಗಿಗೆ ಸೊಗಯಿಸಿದ
ತ್ತ್ರಲರ್ದೊಂಗಲ್ ಕಲ್ಪಲತೆಗೆ ಸೊಗಯಿಪ ತೆಱದಿಂ ೨೫೨
(ಜಗನ್ನಾಥವಿಜಯಂ ೧೦-೧೦೭)

ಘುಸೃಣರಸದಿಂದಮೆಸೆದಳ್
ಕಿಸಲಯದಿನಶೋಕಲತಿಕೆ ಕೇಸರರಜದಿಂ
ಬಿಸಜಿನಿ ಕೆಂಗವಸಣಿಗೆಯಿ
ನಸಮಾಯುಧಚಾಪಲೇಖೆಯೆಸೆ[೧]ವಂತೆಸೆದಳ್[೧] ೨೫೩
(ಜಗನ್ನಾಥವಿಜಯಂ ೧೦-೧೦೫)

ತರುಣಿಯ ಪದ[೨]ಯುಗದ[೨]ಲತೆಗೆ
ಪೊರೆಜೆಸೆದುದು ತನ್ನ[೩] ನಾಯಕಂ[೩] ಮೂರ್ಧ್ನದೊಳಾಂ
ತಿರೆ ತನ್ಮಣಿಮಕುಟದ್ಯುತಿ
ಪೊರೆದಪುದೀ ಕ್ರಮಮೊಳೆಂದು ಸೂಚಿಪ ತೆಱದಿಂ ೨೫೪
(ಜಗನ್ನಾಥವಿಜಯಂ ೧೦-೧೦೯)

ವಿರುವನ್ಮಣಿನೂಪುರಯುತ
ಚರಣಾಬ್ಜದಿನೆಸೆದಳಸಿಯಳಬ್ಜಪರಾಗಂ
ಬೊರೆದು ಮೊಱೆವಳಿಗಳಂ ತಳೆ
ದರುಣಾಬ್ಜದಿನೆಸೆದು ತೋಱುತಿರ್ಪಬ್ಜಿನಿಯೋಲ್ ೨೫೫
(ಜಗನ್ನಾಥವಿಜಯಂ ೧೦-೧೧೧)

ಕನ್ನೆಯ ಸಿರಿಚರಣದ ಸೊಬ
ಗಿಂ ನೆಱೆ ಮಕುಟಕ್ಕೆ ಸಾರ್ವುದೆಂದುಲಿವಂತ
ತ್ಯುನ್ನತ ಪದದೊಳ್ ಮೆಱೆಗುಂ
ರನ್ನದ ನೇವುರದ ದನಿ ಸರೋಜಾನನೆಯಾ ೨೫೬

[೧]ಯಿಂತರವಳ್(ಅ) [೨]ತಳವಲ(ಅ) [೩]ನಚ್ಯುತಂ(ಅ)

ಧರಿಸಿದ ಮಣಿಮೇಖಲೆಯಿಂ
ಕರಮೆಸೆದತ್ತಲಘುಜಘನೆಯತಿಘನಜಘನಂ
ಸ್ಮರಕರಿಯ ಕುಂಭವಾಂತುದು
ಸುರತ್ನನಕ್ಷತ್ರಮಾಲಿಕೆಯುಸೆಂಬಿನೆಗಂ ೨೫೭

ಮಾರನರಮನೆಯ ರತ್ನದ
ತೋರಣಮೆಂಬಂತೆ ಮೆಱೆವ ನವರತ್ನದ ಕಿ
ರ್ಮ್ಮೀರರುಚಿ ಮೆಱೆಯೆ ಮೇಖಲೆ
ನಾರಿಯ ಸೆಳೆನಡುವಿನೊಳ್ ಮನಂಗೊಳಿಸಿರ್ದುದಂ ೨೫೮

ಸ್ತನಪುಳಿನದಲ್ಲಿ ಸೂಸಿದ
ತನುಲಾವಣ್ಯಪಗಾ ಪಯಃಕಣಗಣಮೆಂ
ಬಿನೆಗಂ ಕುಚದೊಳ್ ನೀಹಾ
ರನಿಜೋಜ್ವಳಹಾರಮೆಸೆಯೆ ಬಾಲಕಿಯೆಸೆದಳ್ ೨೫೯

ನಿಡುಗಣ್ಣೆಳಗಿನ ಭಾರಂ
ಕಡುಪಿಂ ಕಡೆಗೋಡಿವರಿಯೆ ಕಾಂಚೀಧಾಮಂ
ತಡೆಯಲ್ಕಿದಿರಡರ್ದುದೆನಲ್
ಮಡದಿಗೆ ಚೆಲ್ವಾಯ್ತು ತೋರಮುತ್ತಿನಹಾರಂ ೨೬೦

ಸ್ಮರಕರಿಣೀಹಸ್ತಾಗ್ರಂ
ಸುರಚಿರ ಬಿಸಕಾಂಡವಳಯವೇಲ್ಲಿತವಾದಂ
ತಿರೆ ನಳಿತೋಳ್ಗಳ್ ಮುತ್ತಿನ
ಸರಿಗೆಯನಾಂತೆಸೆಯೆ ಕಾಂತೆ ಬಿಂಕಮನಾಂತಳ್ ೨೬೧

ಈ ಲಲಿತ ಬಾಹುಯುಗದ ಸು
ಖಾಲಿಂಗದಿಂ ಮೃದುತ್ವಮಂ ಪಡೆದಪೆನಾನೆಂ
ದಾಲಿಂಗಿಸಿರ್ಪ ಮಣಿಯೆನೆ
ಬಾಲೆಯ ನವರತ್ನದಂಕಪಂಗಮೊಳಿರ್ದುದಂ ೨೬೨

ಕರೆಯ ನಿಪುಣೇಕ್ಷಣೆಗೆ ಮದಂ
ಜೊರೆದಾನೆಯ ಕಂಯ್ಯ ನಳಿನನಾವರಿಸಿದವೋಲ್
ಮರಕತ ಕಂಕಣಮೆಸೆದವು
ತಿರುಪ್ರೋಯ್ದುರೆ ಕಪ್ಪನಿತ್ತ ತಸ್ತ್ರರಂಪುಗಗಳ್ ೨೬೩

ಇರುಳಿನಿತುಂ ತಿಮಿರವಂ ಸಂ
ಹರಿಸಂ ಸಾಹಸ್ರಕರಮನಾಂತಿರ್ಪರ್ ಭಾ
ಸ್ಕರನೆಂದು ನಗುವವೋಲ್ ಭಾ
ಸುರ ಕಾಂತಿಯೊಳೆಸೆದವವಳ ಮಣಿಕಟಕಂಗಳ್ ೨೬೪

ಉಡಿಸಿದ ನನಗಣೆಯಂತಿರೆ
ತುಡಿಸಿದ ಮುದ್ರಿಕೆಯಿನೆಸೆವ ಬೆರಳಿಂ [೧]ಬೆರಳಿ
ನ್ಮಡಿಯಿಸಿದ ಕೋಮಲೆ [೧]ಜಗಮಂ
ಮೃಡರಿಪು ಬೆರಲೆತ್ತಿ ಗೆಲ್ವಿನಂ ಬಗೆಗೊಂಡಳ್ ೨೬೫

(ಜಗನ್ನಾಥವಿಜಯಂ ೧೦-೧೧೯)

ಅರುಣತಳದ್ಯುತಿತತಿಯೆಡೆ
[೨]ಬೆರಲ್ಗಳಿಂ[೨]ದುಣ್ಮುವಂದದಿಂ ಕೆಂಬೆರಲುಂ
ಗರದಿ[೩]ನೆಡೆ ಕಿರಣತತಿ[೩]ಮಂ
ಜರಿ ತಳಿರೇಱಿಸಿದುದೆಯ್ದೆ ಕರಶಾಖೆಗಳೊಳ್ ೨೬೬

(ಚಂದ್ರಪ್ರಭಪುರಾಣಂ ೬-೬೧; ಸೂಕ್ತಿಸುಧಾರ್ಣವಂ ೬-೩೮)

ಅಲರಂಬಿಂಗಣಸಂ ಮಣಿ
ಕುಲದಿಂ ಸಮೆದಂಗಜಂ ಪಡಂಗೊಳಿಸಿದವೋಲ್
ತಳತಳಿಸಿ ಪೊಳೆಯುತಿರ್ಕುಂ
ಲಲನೆಯ ಪೆಂಪೆಸೆವ ಬೆರಲ ಮಣಿಮುದ್ರಿಕೆಗಳ್ ೨೬೭

ಮಂಡಳಿಸೆ ನಿಂದುದೀಕೆಯ
ಪಾಂಡುರಲೋಲತ್ಕಟಾಕ್ಷಕಿರಣಚ್ಛವಿಗಳ್
ಗಂಡಸ್ಥಳದೊಳೆನಲ್ ಬಗೆ
ಗೊಂಡವು ಪೊಸಮುತ್ತಿನೋಲೆಗಳ್ ಶಶಿಮುಖಿಯಾ ೨೬೮

ಸಕಲಾಭರಣದ್ಯುತಿ ಕ
ರ್ಣಿಕೆಯಾದುದನಱಿಯಲಾಯ್ತು ವದನಸರೋಜಂ
ವಿಕಸಿತಮಾದುದಱಿಂದೆಂ
ಬ ಕೂರ್ಪೆಯಿಂ ಮುತ್ತಿನೋಲೆಯೊಪ್ಪಿದುವವಳಾ ೨೬೯

---

[೧] ಬೆರಳಂಮಿಡಿಯಿಸಿ ರುಕ್ಮಿಣಿ(ಅ) [೨] ದೆರಪುಗಳಿಂ(ಸೂ) [೩] ಪೊಗೆವರುಣ ರುಚಿ(ಸೂ)

ವದನಾಮೋದಕ್ಕೆಱಗುವ
ಮದಭೃಂಗದ ಕರ್ಣಪೂರಕ್ಕೆರವದ ನೆಱಲ್
ಪುದಿದತ್ತು ಕಪೋಲದೊಳೆನೆ
ಸುವತಿಗೆ ಮೃಗಮದದ ಪತ್ರಲೇಖೆಗಳೆಸೆಗುಂ ೨೭೦

ತಿಲಕಂ ತಮಾಲಪತ್ರಾ
ವಳಿ ಚಿತ್ರಕಮೆಸೆವ ಬನದೊಳಿರಲೊಲ್ಲದೆ ಕೇಳ್
ತಿಲಕಂ ತಮಾಲಪತ್ರಾ
ವಳಿ ಚಿತ್ರಕಮವಳ್ಗೆ ಮೆಱೆವುದಚ್ಚರಿಯಲ್ತೆ ೨೭೧

ಶಶಿಮೊಗದೊಳ್ ನಕ್ಷತ್ರಂ
ಮಿಸುಪುದು ಮರ್ಯಾದೆಯೆಂದು ಸಕಲಜನಂ ಭಾ
ವಿಸುತಿರೆ ನುಣ್ಪೆಳಗಿಂ ರಂ
ಜಿಸುಗುಂ ನಾಸಾಗ್ರದಲ್ಲಿ ಮೂಗುತಿಯವಳಾ ೨೭೨

ಬಗೆಗೊಳಿಸಿದುದಚ್ಚರಿಯೆನೆ
ಸೊಗಯಿಪ ತಾವರೆಯ ನಡುವೆ ನಳನಳಿಸುವ ಸಂ
ಪಗೆಯ ನನೆಯಲ್ಲಿ ಪೊಸಮ
ಲ್ಲಿಗೆಯ ಮುಗುಳ್ ಮೂಡಿದಂತೆ ಮೂಗುತಿಯವಳಾ ೨೭೩

ಫುಲ್ಲಶರ ತನಗೆ ಸಿಲ್ಕಿದ
ಕಲ್ಲೆದೆಯರನೆಸೆಯಲೆಂದು ಕಡೆಯಂಬಿನ ತುದಿ
ಯಲ್ಲಿ ಬಾಷ್ಪಗಳನೂಡಿದು
ದಲ್ಲಹುದೆನೆ ಕಣ್ಣ ಕಪ್ಪು ರಂಜಿಪುದವಳಾ ೨೭೪

ಬಿರಿದ ಸರೋರುಹಗಂಧಕೆ
ಚರಿಸುತ ಬಂದೆಱಗುತಿಪ್ಪ ಷಟ್ಪದವೆಂಬೋ
ಲೆರಡುಂ ಪುರ್ಬಿನ ನಡು ಕ
ಸ್ತುರಿತಿಲಕಂ ಪೆಱತೆನೊಸಲ್ಗೆ ರಂಜಿಪುದವಳಾ ೨೭೫

ಎಳೆವಿಸಿಲ ತಮದ ಮಱಿಗಳ್
ಕೆಳೆಗೊಂಡಿರ್ದಪುವು ಮುಗ್ಧ ಶಶಿಯುಸಮೀಪ
ಸ್ಥಳದೊಳೆನೆ ಚೆನ್ನಪೂಗಳು
ಮುಳಕಂಗಳು ಸಿಟಿಲತಟದೊಳೆಸೆದುವು ಸತಿಯಾ ೨೭೬

ಲೇಸೆನಿಸಿಯಾಲಿವರಲಂ
ಸೂಸುವ ನವಮೇಘದಂತೆ ಕುಸುಮಾವಳಿಯಿಂ
ಬಾಸಣಿಸಿ ಮೆಱೆತವ ಸೋರ್ಮುಡಿ
ಭಾಸುರಮೆನಿಸಿರ್ದುದೆಯ್ದೆ ಕಮಳಾನನೆಯಾ ೨೭೮

ವಿಲಸಿತಮಪ್ಪುದೊಂದು ಪೊಳೆಪಂ ತಳೆದಿರ್ಪುದನಿಂದುಲೇಖೆಯಂ
[1]ಪೊಳೆಯಲೆ[1]ವೇಳ್ಪುದೇ ಸಹಜಸುಂದರರೂಪೆಯನೀ ಮೃಣಾಳಿಕೋ
ಮಳಿಯನದೇನಲಂಕರಿಸವೇಳ್ಪುದೆ ಮಂಗಳವರ್ಧನಾರ್ಥಮೀ
ಲಲನೆ[2]ಯನಿಂದಲಂಕರಿಸುವರ್[2] ವಿವಿಧಾಭರಣಪ್ರತಾನದಿಂ ೨೭೯
(ಜಗನ್ನಾಥವಿಜಯಂ ೧೦-೧೦೨, ಸೂಕ್ತಿಸುಧಾರ್ಣವಂ ೬-೪೨)

ಸ್ಮಿತಮಧುರಂ ಮುಖಂ ವಿಮುಖವೃತ್ತಿಯನಾರ್ಗೆ ಕಟಿಲ್ಜದುತ್ಕುಚ
ದ್ವಿತಯಭರಾವಲಂಬಿಯೆಡೆಯಾರೆರ್ದೆಗೀಯದೊ ಚೋದ್ಯಮಂ ಸ್ಮಿತಾ
ಯತ ನಯನಂಗಳಾರ ಮನಸಂಗಳನಾಱಿಸವುನ್ಮದಾಲಸಂ
ಗತಿ ಗತಿಭಂಗಮಂ ಪಡೆಯದಾರ್ಗೆ ತದಂಗಜರಾಜ್ಯಲಕ್ಷ್ಮಿಯಾ ೨೮೦
(ಚಂದ್ರಪ್ರಭಪುರಾಣಂ ೧೧-೯೩)

ನೆಲೆಯುಂ ಗಾಡಿಯು[3]ಮಮರ್ದಿರೆ
ವಿಳಸಮನುರ್ದಂತು ಮುಡಿದ ಮುಡಿ ಮೆಱೆಸುದು ಕೋ[3]
ಮಳೆಗೆ ಜಗಮೆಲ್ಲಮಂ ಸಲೆ
ಗೆಲೆವಂದಸಮೇಷು ಪೂಣ್ದು ಮುಡಿಗಿಕ್ಕುವಿನಂ ೨೮೧
(ಜಗನ್ನಾಥವಿಜಯಂ ೧೦-೧೨೭)

ಎನ್ನ ಮೊಗಸುಚಿಗೆ ಸರಿಯಿಡೆ
ನಿನ್ನೆಸಕಂ ಸಮಸುಗಾಣದೆನುತಂ ಕಿನಿಸಿಂ
ಕನ್ನೆ ನಡೆನೋಳ್ಪ ತೆಱದಿಂ
ಕನ್ನಡಿಯಂ ಕರದೊಳೆತ್ತಿ ನೋಡಿದಳೊರ್ವಳ್ ೨೮೨

ಜಿತಚಂದ್ರಮಂಡಲಕ್ಕ
ಪ್ರತಿಮಕ್ಕೀಕೆಯ ಮುಖಕ್ಕೆ ಕಂಡೆವಿದೊಂದಂ
ಪ್ರತಿಮಾನಮನೆನೆ ವದನಪ್ರತಿ
ಕೃತಿ ಚೆಲ್ವಾಯ್ತು ಮುಕುರದೊಳ್ ಬಾಲಕಿಯಾ ೨೮೩
(ಜಗನ್ನಾಥವಿಜಯಂ ೧೦-೧೨೯)

---

[1]ಪೊಳೆಪಿದ(ಸೂ) [2]ಗೆನುತ್ತಲಂಕರಿಸಿದರ್(ಸೂ) [3]ಕುಳವತೆ ಲಲನೆ ಪೆಱಳ್ ದಿವ್ಯ ಮಾಲೆಯಂ ಮುಡಿಯಿಸಿದಳ್ ಮಲೆವ(ಅ)

# ವಿವಾಹವರ್ಣನಂ

ನವರತ್ನಸ್ತಂಭಗಳಿಂ
ನವಚಾಮರ ಪಟ್ಟನಿಚಯ ಮೇಲ್ಕಟ್ಟುಗಳಿಂ
ನವಮೌಕ್ತಿಕ ಲಂಬಣದಿಂ
ವಿವಾಹಮಂಟಪದ ನಡುವೆ ಪಸೆ ರಂಜಿಸುಗುಂ ೨೮೪

ಜಂತದ ಪಾವೆಗಳ್ ತಳಿರ ತುಂತುರನೋಸರಿಸುತ್ತೆ ಕೈಗಳಿಂ
ದಂ ತರುಣೀಸಮೂಹದ ವಿಳಾಸರಸಾಬ್ಧಿಯೊಳಾಗಳೀಸಿ ಬ
ರ್ಪಂತಿರೆ ಪರ್ಬಿದಾಕೆಗಳ ಕಣ್ಬೆಳಗಂ ಬಗೆದೊತ್ತಿ ಸೂಂಕಿ ಬ
ರ್ಪಂತಿರೆ ಬರ್ಪ ಭೂಮಿಪತಿ ಪೂಗೊಳದೊಳ್ ಬರುತಿರ್ಪ ಹಂಸನಂ ೨೮೫
(ಲೀಲಾವತಿ ೧೨-೧೪)

ಮುರಜದ ಮೊಟಗಿನ ಪಟಹದ
ಕರಡೆಯ ಜೊಂಬುಳಿಯ ಪಕ್ಕವಾದ್ಯಮುಮಂ ಕಂ
ಕರಿಯ ವಿಪಂಚಿಯ ಬಂಚದ
ಪರಿಕರಮುಮನಾಂತ ರೂಪುಗಳ್ ರಂಜಿಸುಗುಂ ೨೮೬
(ಲೀಲಾವತಿ ೧೧-೬೩)

ಮದನನ ರಾಜ್ಯಲಕ್ಷ್ಮಿಯೊದವಿಂತಿದು ಕಾಮನ ಪೆಂಡವಾಸಮಿಂ
ತಿದು ಕುಸುಮಾಸ್ತ್ರಚಕ್ರಿಯ ಜಗತ್ರಯಜೈತ್ರವಧೂಸಿಕಾಯಮಿಂ
ತಿದು ಮಧುಮಿತ್ರತಾಪತಪದಿಂ ಪಡೆವಗ್ಗದ ಸಗ್ಗಮಿಂತಿದೇಂ
ಬುದನೆನಿಸಿತ್ತು ಸುತ್ತಿಱಿದು ಸಂದಣಿಗೊಳ್ವಬಲಾಕದಂಬಕಂ ೨೮೭
(ಲೀಲಾವತಿ ೧೨-೧೫)

ಜಲಕನೆ ಕೆಂಪು ಬಾಂಪ್ಲಿಱಿಯಿಸೊಕ್ಕವೊಲೊಪ್ಪಿದುವಲ್ಲಿಗಲ್ಲಿಗಾ
ದಲತೆಗೆಪಜ್ಜೆಗಳ್ ತಳಿರ ಚಂದನದೊದ್ದೆಗಳಾ ಮೃಣಾಳಕೋ
ಮಱಿಯರ ಕಣ್ಣ ಬೆಳ್ಪೆಳಗೆ ತೀವಿ ತುಳುಂಕಿದವೋಲ್ ವಿಳಾಸಮು
ಗ್ಗಲಿಸುವಿನಂ ಬೆಳರ್ತೆಸೆವುದಾ ಪಸುರ್ವಂದರ ಭೂಮಿಭಾಗದೊಳ್ ೨೮೮
(ಲೀಲಾವತಿ, ೧೨-೧೩)

ಎಳೆವಿಂ[1]ಚಂ[1] ಪೂೞ್ವಿನ್ವೋಲೆಣ್ದೆಸೆಗಳನೆಳೆಯುಂ ನೈದಿಲಿಂ ತೀವುವಂತಾ
ಗಳೆ ಬಾನಂ ಮೀನ್ಗಳಿಂದಂ ಮುಸುಕುವ ತೆಱದಿಂ ಕಾಂತೆಯರ್ ಸೋೞ್ಪಿದುಂ ಕ
ಣ್ಗೆಳಗಾಶಾಪಂಕ್ತಿದಂತದ್ಯುತಿ ಬಳಸಿದುದೆಂಬಂತೆ ದುಗ್ಧಾಬ್ಧಿಪೂರಂ
ಬಳೆದತ್ತೆಂಬಂತೆ ಮಂದಾಕಿನಿಯೆ ಕವಿದುದೆಂಬಂತೆ ಪರ್ವಿತ್ತುಗುರ್ವಿಂ ೨೮೯
(ಲೀಲಾವತಿ ೧೨-೧೧)

ತಾಳ ಮದ್ದಳೆ ಮೃದಂಗಂ
ಡೋಳುಂ ತಂಬಟವು ಭೇರಿ ಮುರಜಂ ಬೊಂಬುಳಿ
ಕಾಳೆಯು ತಿತ್ತಿರಿ ಶಂಖಂ
ಪೇಳುವೊಡಂ ಬಹಳವಾದ್ಯಮುಣ್ಮಿದುವಾಗಳ್ ೨೯೦

ಧವಳಂ ಶೋಭನ ವಿಪ್ರರ
ವಿವಿಧಾಶೀರ್ವಚನ ಭಟ್ಟ ಕೈವಾರಿಗಳುಂ
ಭುವನಂ ಬಾಯ್ದೆಗೆದಂದದಿಂ
ವಿವಾಹಮಂಟಪದಿ ಭೋರ್ಗರೆದುದಾಯೆಡೆಯೊಳ್ ೨೯೧

ನನೆಯ ಸರಳ್ಗಳಂತೆ ನೆಱೆದಿಂಗಳ ತಣ್ಗದಿರಂತೆ ಕಂತುರಾ
ಜನ ಕರವಾಳ ಪೊಯ್ಪೊಳಪಿನಂತೆ ನವೋತ್ಪಲದಾಮದಂತೆ ಪ್ರಾ
ವಿನ ಮಱಿಯಂತೆ ತುಂಬಿಗಳ ಮಾಲೆ ತೆಱಂಬೊಳೆವಂತೆ ಲೋಲಲೋ
ಚನರುಚಿ ಸುತ್ತಿಮುತ್ತಿದುವಶೇಷನೃಪಾಲಸಭಾಂತರಾಳಮಂ ೨೯೨
(ಪಂಪರಾಮಾಯಣಂ ೫-೭೦, ಸೂಕ್ತಿಸುಧಾರ್ಣವಂ ೬-೬೭)

ನಲ್ಲರ ನಡುವುಪಚಾರಂ
ಸಲ್ಲಲಿತೇಕ್ಷಣದ ನಡುವೆ ಪಕ್ಷಪುಟಂ ಸಂ
ಫುಲ್ಲಧರಮಧ್ಯದೊಳ್ ಮಿಗೆ
ಸೊಲ್ಲಿರ್ಪಂತಿರ್ದುದಲ್ಲಿ ತೆಱ[2]ವರ[2]ಸಿದಿರೊಳ್ ೨೯೩
(ಗಿರಿಜಾಕಲ್ಯಾಣಂ ೧೦-೮೧)

ಪಾಸಿದ ದಣಿಂಬಮುಗುರ್ಗಳ
ಕೇಸಡಿಗಳ ಚರಣಭೂಷಣಂಗಳ ರುಚಿಗಳ್
ಬಾಸಣಿಸಿ ಚಿತ್ರಪಟಮಂ
ಪಾಸಿವವೊಲಿರೆ ವಧೂವರರ್ ನಡೆತಂದರ್ ೨೯೪
(ಅನಂತನಾಥಪುರಾಣಂ ೬-೫೪)

---
[1] ಚಿಂ(ಅ) [2] ಹ(ಅ)

ಉರದೊಳ್ ಹಾರಾಂಶು ಗಂಡಸ್ಥಳಿಯೊಳಮಳಿಕರ್ಣಾವತಂಸಾಂಶು ಮತ್ತಂ
ಶಿರದೊಳ್ ರತ್ನಾವಳೀಶೇಖರಶಿಖರಸಮು[1]ಕ್ತಾಂ[1]ಶುಗಳ್[2] ನೃತ್ಯಮುಂ[2] ಬಿ
ತ್ತರಿಪನ್ನಂ ಸಿದ್ಧ ವಿದ್ಯಾಧರ ದಿವಿಜಕುಮಾರರ್ಕಳಂ ಚೆಲ್ವಿನಂ ಮಾಂ
ಕರಿಸುತ್ತುಂ ಬಂದನಾಸಾದಿತ ನಿರುಪಮ ಶೃಂಗಾರಸಾರಂ ಕುಮಾರಂ ೨೯೬

(ಚಂದ್ರಪ್ರಭಪುರಾಣಂ ೬–೭೦; ಸೂಕ್ತಿಸುಧಾರ್ಣವಂ ೬–೬೦)

ಕಣ್ಗೊಳ್ ಕರ್ಬಿನಚಾಪಮಿಲ್ಲದ[3]ಸಮುಂ[3] ಪುಷ್ಪಾಯುಧಂ ಬರ್ಪವೋಲ್
ಮೆಯ್ಯೊಳ್ ಲೋಚನಮೊಂದುಮಿಲ್ಲದಮರಂ ವಜ್ರಾಯುಧಂ ಬರ್ಪವೋಲ್
ರಯ್ಯಂ ಬಂಬಳಬಾಡೆಯುಂ ವಿರಹದಿಂ ಕಾಂತಾಜನಸ್ವಾಂತದೊಳ್
ಪೊಯ್ಯುತ್ತುಂ ಪೊಸತೊಂದು ರಾಗರಸಮಂ ಬಂದಂ ಮನೋಜಾಯುಧಂ ೨೯೭

(ಲೀಲಾವತಿ ೧೨–೨೫)

ನಭಮಂ ಸಂಜೆ ಮುಗಿಲ್ ಪಗಿಲ್ತ ತೆಱದಿಂ ತಳ್ಪೊಯ್ಯೆ ಭೂಷಾಮಣಿ
ಪ್ರಭೆ ದಿಕ್ಚಕ್ರಮನಚ್ಚಜೊನ್ನಮೆಳಸಿತ್ತೆಂಬನ್ನೆಗಂ ತೀವೆ ದೃ
ಕ್ಪ್ರಭೆ ಭೂಭಾಗಮನೆಯ್ದೆ ಚೆಲ್ವಮರ್ದ ಪಾಂಗಿಂ ಪೆರ್ಚೆ ಪಾದೋಲ್ಲಸ
ತ್ಪ್ರಭೆ ಬಂದಳ್ ಕುಡುತಂ ಶಶಿಪ್ರಭೆ ಜನಾಕ್ಷೀಂದೀವರಾನಂದಮಂ ೨೯೮

(ಚಂದ್ರಪ್ರಭಪುರಾಣಂ, ೬-೬೯, ಸೂಕ್ತಿಸುಧಾರ್ಣವಂ ೬-೫೮)

ರತಿಗಳ್ ಶೃಂಗಾರಮಂ ಶೋಭೆಗಳತಿಶಯಮಂ ಜಾತಿಗಳ್ ರಾಗಮಂ ದೇ
ವತೆಗಳ್ ಕಾಮ್ಯಾರ್ಥಮಂ ನೀತಿಗಳುದಯಮನಾಕ್ಷೇಪದಿಂ ತರ್ಪವೋಲು
ದ್ಧತೆಯರ್ ತತ್ಕಾಂತೆಯರ್ಕಳ್ ತರೆ ಮಧುಸಹಿತಂ ಕಂತು ಬರ್ಪಂತೆ ಬಂದಂ
ಚತುರಾಮಾತ್ಯಪ್ರಯುಕ್ತಂ ಸರಸಕೃತಿಕಳಾನರ್ತಕೀನಾಟ್ಯರಂಗಂ ೨೯೯

(ಲೀಲಾವತಿ ೧೧–೧೦೨)

ಕುಡುಪುರ್ವಿಂ ಕರ್ಪುವಿಲ್ಲುಂ ಪರಪುವ ಕಡೆಗಣ್ಣಿಂ ಮನೋಜಾಸ್ತ್ರಮಂ ಸಾ
ಲಿಡುವೃತ್ಯನ್ಮೇಖಲಾಕೂಜಿತದಿನತನುಕೋದಂಡಟಂಕಾರಮಂ ಕ
ಸ್ನಡಿಪಂಕ್ತಿನ್ಯಾಸದಿಂ ತಾವರೆಗೆದಱುವ ಮಂದಸ್ಮಿತೋದ್ಯೋತದಿಂದಿಂ
ಗಡಲಂ ಬೇಱೊಂದನುತ್ಪಾದಿಸುವ ತೆಱದಿನಾನಂದದಿಂ ದೇವಿ ಬಂದಳ್ ೩೦೦

(ಜಗನ್ನಾಥವಿಜಯಂ ೧೩–೩ ಸೂಕ್ತಿಸುಧಾರ್ಣವಂ ೭–೫೯)

---

[1]ತ್ಥಾಂ(ಅ) [2]ಮೊತ್ತಮುಂ(ಅ) [3]ರಸಂ(ಅ)

ಶ್ರೀ ಶುಭ್ರಾಂಭೋಜದೊಳ್ ಭಾರತಿ ಕವಿಧವಳಾಸ್ಯೇಂದುವೊಳ್ ಗಂಗೆ ಹರ್ಮ್ಯಾ
ದ್ರೀಶಾಗ್ರಗ್ರಾವದೊಳ್ ಭೂವಧು ಫಣಿಪಫಣಾಪೀಠದೊಳ್ ಪೊರ್ದಿ ನಿಲ್ವಂ
ತಾ ಶೋಭಾಭೂಷೆ ವಿದ್ಯಾಧರೆ ಮಧುರುಮ್ಮುದುಚ್ಛ್ವಾಯಿ ಸಾಮೋದಶೋಭಾ
ವ್ಯೈಶದ್ಯೋತ್ತುಂಗದೊಳ್ ತಂದಣಿಸಿದ ಪಸೆಯೊಳ್ ದೇವಿ ಕುಳ್ಳಿರ್ದಳಾಗಳ್ ೩೦೧

(ಲೀಲಾವತಿ ೧೧-೪೯)

ಪೊಂಬಟ್ಟೆಯ ಬೋರೆಯದೊಳ್
ತುಂಬಿದ ಬಿಡುಮುತ್ತಿನಕ್ಕಿಯುಂ ಮೆಟ್ಟಿರ್ದಂ
ದೇಂ ಬಗೆವುಗಿಸಿದುದೋ ಹೇ
ಮಾಂಬುಜದ ಮರಾಳಮಿಥುನಮುಂ ತನ್ಮಿಥುನಂ ೩೦೨

(ಅನಂತನಾಥಪುರಾಣಂ ೬-೫೫; ಸೂಕ್ತಿ ೬-೬೩)

ಕಿವಿವೇಟಮನಿಱುಸುತ್ತಿರೆ
ನವವರನಂ ನೋಡುವಪ್ಪುವುತ್ಕಳಿಕೆಯಿನೇಂ
ಯುವತಿಯ ಕಣ್ಣುಂ ಮನಮುಂ
ಜವನಿಕೆಯಂ ಕನ್ನಮಿಕ್ಕಲಟಕಟಿಸುದುದೋ ೩೦೩

(ಅನಂತನಾಥಪುರಾಣಂ ೬-೫೭, ಸೂಕ್ತಿ ೬-೬೪)

ಕೋಮಳ[1]ಮಾದ ಪೂಗ[1]ಫಲದಿಂ ಬಲಗೈ ಕಳಮಾಕ್ಷ[2]ಪತ್ರ[2]ಪೂ
ರ್ಣಾಮಳಶಂಖದಿಂದಮೆಡಗೈಯೆಸೆಯುತ್ತಿರೆ ಬಂದನುತ್ಕಟ
ಪ್ರೇಮನುದಾತ್ತವೇದಮತಿ ಕೃಷ್ಣಸಭಾವಳಯಕ್ಕೆ ವಿಶ್ವವಿ
ದ್ಯಾಮಹಿತಂ ದ್ವಿಜೌಘಸಹಿತಂ [3]ಜಯಪೂರರತಂ[3] ಪುರೋಹಿತಂ ೩೦೪

(ಜಗನ್ನಾಥವಿಜಯಂ, ೧೦-೧೩೦)

ಶಂಕುಸಲಾಕೆಯುಂ ಗಱುಗೆವಟ್ಟಲುಮೊಪ್ಪಿರೆ ವೇದನಾದದೊಳ್
ಸಂಕರಮಾಗಿ ಪಾಠಕಪಟುಸ್ವನಮುಂಗಳಗೀತತೂರ್ಯಘೋ
ಷಂ ಕಡಲೂರ್ಮಿಯಂತುಲಿಯೆ ನರ್ತಿಸೆ ನಾರಿಯರಾಯ್ತು ಸಾರ್ಕೆ ಲ
ಗ್ನಂ ಕರೆಯಾ ವಧೂವರರನೆಂದುಸಿರ್ದಂ ಹಿತದೊಳ್ ಪುರೋಹಿತಂ ೩೦೫

(ಸೂಕ್ತಿಸುಧಾರ್ಣವಂ ೬-೫೭)

---

[1] ಮಾತುಳಂಗ(ಅ) [2] ತಪ್ಪ(ಅ) [3] ಯುಸುಮಂ ಶಹಿತಂ(ಅ)

ಕಳಕಳಮುಂ ನಿವಾರಿಸುತಲಾಯತ್ತಮೋ ಯೆನಲಾಯತಂ ಲಸ
ದ್ಗಳ ಬಳಮುಂ ವಿಸರ್ಜಿಸುತ್ತಮಾಯತ್ತಮೋಯೆನಲಾಯತಂ ಮನಂ
ಗೊಳಿಪಮಹಾಮುಹೂರ್ತದೊಳಗಾಯತ್ತಮೋಯೆನಲಾಯತಂ ನಿರಾ
ಕುಳಿತಮನಂ ಪುರೋಹಿತರೆಯಾಯತಮೋಯೆನೆ ತಪ್ಪದಾಯತಂ ೨೦೬

(ಗಿರಿಜಾಕಲ್ಯಾಣಂ ೧೦-೮೬)

ಬಳ[1]ವಿಗೆಯುಪ್ಪ[1] ವೇದರುತಿಗೇಯರವಂ ಪಟಹಸ್ವನಂ ಪುರೀ
ಕಳಕಳದಿಂ ದಳಂಬಡೆದು ವಿಪ್ರಜಗಜ್ಜನಕೀರ್ತನಾರವಂ
ಗಳಿಗಿನಿಸೇೞ್ಗವೆತ್ತು ದಿಗಿಭವ್ರಜಜೃಂಭಿತ ಭೂರಿನಾದದಿಂ
ದಳವಿಯನಾಂತು ಘೂರ್ಣಿಪಿಸಮಾ ಗೃಹಮುಂ ಪುಗುತಂದ[2]ನುರ್ವಿಪಂ[2] ೨೦೭

(ಜಗನ್ನಾಥವಿಜಯಂ ೧೦-೧೩೧)

ತೊಲಗೆ ದುಕೂಲಕಾಂಡಪಟಮುತ್ತಮಲಗ್ನದೊಳೊರ್ವರೊರ್ವರಂ
ನಲಿದೊಲವಿಂದೆ ದಂಪತಿಗಳೀಕ್ಷಿಸೆ ನೋಟದ ಬಳ್ಳಿವಳ್ಳಿ ನೆ
ಯ್ದಿಲ ಮೞೆಯೊಲ್ ಸುಧಾರಸದ ಸೋನೆಯೊಲಂಗಜಬಾಣವೃಷ್ಟಿಯೊಲ್
ಸಲೆ ನಿಲೆ ಕೊರ್ವಿ ಪರ್ವಿದುದು ಕೂಡೆ ವಿವಾಹಗೃಹಾಂತರಾಳದೊಳ್ ೨೦೮

(ಜಗನ್ನಾಥವಿಜಯಂ ೧೦-೧೩೨, ಸೂಕ್ತಿಸುಧಾರ್ಣವಂ ೬-೬೬)

ಸ್ತನಕಲಶಂಗಳಿಂ ಪಡೆದ ಪಲ್ಲವದಿಂ ಪುಳಕಾಕ್ಷತಂಗಳಿಂ
ವಿನುತಕಪೋಳದರ್ಪಣದಿನೂರ್ಜಿತನೂಪುರಶಬ್ದವಾದ್ಯದಿಂ
ಮನದನುರಾಗದಿಂ ವದನದೀಧಿತಿಮಂಗಳರತ್ನದೀಪ್ತಿಯಿಂ
ವನಿತೆ ವಿಳಾಸಮೊಪ್ಪೆ ಯುವರಾಜನನಂದಿರ್ಗೊಂಡಳೞ್ತಿಯಿಂ ೨೦೯

ಲೋಲಕಟಾಕ್ಷಮಾಲೆ ವನಮಾಲಿಗೆ ಚಂದ್ರಿಕೆವೀೞೆ ಕಯ್ಯ ಪೂ
ಮಾಲೆಗೆ ಭೃಂಗಮಾಲಿ ಮೊೞೆದೆಯ್ದೆ ಶಿರೀಷದಪುಷ್ಪಮಾಲೆಯುಂ
ಸೋಲಿಸುತೇಱುಸುತ್ತಿರೆ ಭುಜಂ ನಖಮಾಲೆ ಮಯೂಖಮಾಲೆಯುಂ
ಸಾಲಿಡೆ ಬಂದು ಬಾಲೆ ವನಮಾಲಿಗೆ ಮಾಲೆಯನೊಲ್ದು ಸೂಡಿದಳ್ ೨೧೦

(ಜಗನ್ನಾಥವಿಜಯಂ ೧೦-೮೬, ಸೂಕ್ತಿ ೬-೭೩)

---

[1]ಪದಪಾಠ(ಅ) [2]ನಚ್ಯುತಂ(ಅ)

ಸುದತಿಯರನುನಯದಿಂದಂ
ಪ್ರದಕ್ಷಿಣಂ ಬಂದು ದಕ್ಷಿಣಾವರ್ತಶಿಖಾ
ಸ್ಪದನಂ ಹೋಮಾನಲನಂ
ಮದುವಕ್ಕಳ್ ಮಿಸುಪ ಲಾಜೆಯಂ ಪೂಜಿಸಿದರ್ ೩೧೧

ಪರಿಕರಿಸಿ ಸುರಿವ ಪಟವಾ
ಸರಜ ಸುರಿದಮಳಮೌಕ್ತಿಕಾಕ್ಷತನಿಕರಂ
ಕರಮೆಸೆದತ್ತು ಬಿಸಿಲ್ ಮಱಿ
ಸುರಿವಂತೆವೊಲಾ ವಿವಾಹಸಮನಂತರದೊಳ್ ೩೧೨
(ಜಗನ್ನಾಥವಿಜಯಂ ೧೦-೧೩೪)

ಲಲಿತಾವಯವದ ಚೆಲ್ವಂ
ತೊಳಗುವ ಲಾವಣ್ಯರಸದಿನಬಲಾವಳಿ ತ
ನ್ನಿಳಯುಮಣಿಪುತ್ರಿಕಾಸಂ
ಕುಳದೊಳ್ ಸಲೆ ನೋಱಿಯುತಿರ್ದರಾ ದಂಪತಿಗಳ್ ೩೧೩
(ಜಗನ್ನಾಥವಿಜಯಂ ೧೦-೧೩೫)

ಶೀತಕರೋದಯದೊಳಂಬುಧಿ ಘೂರ್ಣಿಸುವಂದದಿಂ ಜಗತ್
ಖ್ಯಾತವಿವಾಹದುತ್ಸವದೆ ಘೂರ್ಣಿಸುತಿರ್ಪ ರಸಪ್ರಸಂಗ ಸಂ
ಗೀತನಿನಾದದಿಂ ದೆಸೆಯೊಳುಣ್ಮುವ ಮಾರ್ದನಿಗಳ್ ದಿಶಾಧಿಪ
ವ್ರಾತಮೆ ರಾಗದಿಂ ಪರಸುವಂತೆವೊಲೊಪ್ಪಿದುದಾ ನೃಪಾಲನಾ ೩೧೪
(ಜಗನ್ನಾಥವಿಜಯಂ ೧೦-೧೩೬)

ಮುಸುಕಿದುದು ದುಂದುಭಿಧ್ವನಿ
ದೆಸೆಯುಂ ಮಂಗಳದ ಗೀತ ತುಂಬಿದುದಂದಾ
ಗಸಮುಂ ಶಂಖಧ್ವನಿ ಪೂ
ರಿಸಿದುದು ತಳ್ವೊಯ್ದು ರೋದಿಸೀ ಮಂಡಲಮಂ ೩೧೫
(ಚಂದ್ರಪ್ರಭಪುರಾಣಂ ೬-೭೨; ಸೂಕ್ತಿ ೬-೭೪)

ಪ್ರಿಯತರಲವಂಗಲತಿಕಾ
ದ್ವಯಕ್ಕಮೇಕ್ಕೈಕ[1]ಲತಿಕ[1]ಶಾಖಾಯೋಗಂ
ನಯದೆ ಸಮನಿಪ[2]ವೊಲಂತಾ
ಪ್ರಿಯಂಗವಾ ಪ್ರಿಯೆಗಮಾಯ್ತು ಪಾಣಿಗ್ರಹಣಂ ೩೧೬
(ಚಂದ್ರಪ್ರಭಪುರಾಣಂ ೬-೭೩; ಸೂಕ್ತಿಸುಧಾರ್ಣವಂ ೬-೭೫)

---

[1] ಲಲಿತ(ಸೂ, ಅ) [2] ವೋಲಾ(ಅ)

ನೆಱೆದತ್ತೆತ್ತಾನುಮೀ ದಂಪತಿಯ ಬಯಕೆ ಸಂಪೂರ್ಣಮಾಯ್ತುತ್ಸವಂ ಕಣ್
ತೆಱೆದಂತಾಯ್ತೆನ್ನ ಸಾಮ್ರಾಜ್ಯದ ಫಲಮೆನುತಂ ರಾಗಮುಂ ಬೀಱಲಾದ
ಟ್ಕಿಱ ಪೆಂಪಿಂ [1]ಬೀಱುತಾ[1]ಗಳ್ ಕನಕಕಲಶಮುಂ ತಾನೆ [2]ತಂ[2]ದೆತ್ತಿ ಕೈನೀ
ರೆಱೆದಂ ಶ್ರೀವಜ್ರದಂತಕ್ಷಿತಿಪತಿ ಸತತೋತ್ಸಾಹಸಂದೋಹದಿಂದಂ ೩೧೭
(ಆದಿಪುರಾಣಂ ೪-೪೮; ಸೂಕ್ತಿಸುಧಾರ್ಣವಂ ೬-೬೯)

ಕುಲವೃದ್ಧರ್ ನಲಿದಾಡೆ ಬಂಧುನಿವಹಂ ಕೊಂಡಾಡೆ ಸಾಮಂತಮಂ
ಡಳಿ ಹಾರೈಸೆ ನಯುಂ ಪೊದಟ್ದಿ ಜಸನುಂ ತಕ್ಕೈಸೆ ವಾದಿತ್ರಕಾ
ಹಳಗೇಯಂ [3]ಜವ[3]ಮುಣ್ಮೆ ವೇದನಿನದಂ ಕೈಗಣ್ಮೆ ವೈವಾಹಮಂ
ಗಳಮಂ ಮಾಡಿದನಟ್ಕಿಱಿಂದವರ್ಗೆ ಸತ್ರಾಜಿನ್ಮಹೀಪಾಲಕಂ ೩೧೮
(ಜಗನ್ನಾಥವಿಜಯಂ ೧೧-೫೩)

ಓರಂತೆ ಮೆಚ್ಚಿದಂ ಕೃತಿ
ಸಾರೋದ್ವಹವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೩೧೯

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣಕವಿಪುಂಗವ ಮಲ್ಲಿನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್ ವಿವಾಹ ವರ್ಣನಂ ಷಷ್ಠಮಾಶ್ವಾಸಂ

---

[1]ತೋಱಲಾ(ಸೂ,ಅ) [2]ಬಂ(ಸೂ.ಅ) [3]ಸ್ವನ(ಅ)

# ಕುಮಾರೋದಯ ವರ್ಣನಂ

ತನುಭವಲಾಭ ದೌಹದ ನಿಮಿತ್ತದ ಸ[೧]ಂಗ[೧]ತಿ ತಕ್ಕ ನೋಂಪಿ ಮುಂ
ಗನಸು ಬಯಕ್ಕೆ[೨]ಯಟ್ಟಿದ[೨] ದೃಗುತ್ಸವಕಾರಣಗರ್ಭಚಿಹ್ನಮೊ
ಳ್ಪಿನ ದಿವಸಂ ಶುಭೋದಯ[೩]ವಿಳಾಸ[೩] ಮನೋಹರ ಭೂತಲಕ್ಷಣಂ
ಜನನುತ ಜಾತಕರ್ಮಮಿನಿತುಂ ಸುತಶೋಭನ ವರ್ಣನಸ್ಥಳಂ ೧

(ಸೂಕ್ತಿಸುಧಾರ್ಣವಂ, ೭–೧)

ಪಡೆದರುದಗ್ರ ಕುಲಮಂ [೪]ಕುಲಮಂ ಪಡೆದಂತೆ[೪] ಮೂರ್ತಿಯಂ
ಪಡೆದವರೇಂ ಸಮಂತು [೫]ಪಡೆಗುಂ ಪೊಸಮಾನ[೫]ಮೆನಿಪ್ಪ ಸಲ್ಮೆಯುಂ
ಪಡೆದ ನಿಳೇಶ[೬]ನುಂ ವಧುವುಮಂ[೬] ಪೆಱತಾವುದು ಮತ್ತೆ ಮಕ್ಕಳಂ
ಪಡೆವೊಡೆ ಸಾಲ್ಗುಮೆಂದವರೊಳೆಲ್ಲಿಜನಾಳ್ದುದು ಬಂಧುಸಂಕುಲಂ ೨

(ಸೂಕ್ತಿಸುಧಾರ್ಣವಂ, ೭–೨)

ಭವದೊಳ್ ಸಂಸಾರಸೌಖ್ಯಕ್ಕಿದುವೆ ಮೊದಲೆನಿಪ್ಪಾತ್ಮಜಾಲಿಂಗನಂ ಪೊ
ರ್ದುವದತ್ತೇಂದಂದನೆಂದುಂ ತವದ ತರುಣಿಯುಂ ಬೇಟ್ಪುದುಂ ಮಾಟ್ಪ ಕೃತ್ಯಾ
ದಿ ವಿತಾನಂ ನೀತ ವಿಶ್ವಾಸಯತೆ ಯುಚಿತ ಪಲ್ಯೋಪಮಂ ಜೀವಸಂ ವ್ಯೋ
ಮವಿಭಾಗವ್ಯಾಪ್ತಿಯಪ್ಪುನ್ನತತನುವಿನುತಂ ನಿಶ್ಚಯಂ ವ್ಯರ್ಥಮಲ್ತೇ ೩

ಬೇಟಕ್ಕೆ ತವದ ಕೂಟಂ
ಕೂಟಕ್ಕೆ ತನೂಜರಾ ತನೂಜರೊಳಂ ಮು
ದ್ದಾಟಂ ಫಲಮದೆ ತಮ್ಮೊಳ್
ನಾಟದು ಗಡ ಪೆಱವು ಸುಖಲವಂಗಳೊಳೇನೋ ೪

(ಚಂದ್ರಪ್ರಭಪುರಾಣಂ, ೩–೪೨)

ಸುತರಿಲ್ಲದ ಸಿರಿ ತುಹಿನೋ
ದ್ಗತಿಯಿಲ್ಲದ ವಾರಿ ಬೇಟಮಿಲ್ಲದ ಕೂಟಂ
ವ್ರತಮಿಲ್ಲದಜೀವು ವೃದುಪದ
ಗತಿಯಿಲ್ಲದ [೭]ಲಾಸ್ಯಲೀಲೆಯೇಂ[೭] ರಂಜಿಸುಗುಮೇ ೫

(ಚಂದ್ರಪ್ರಭಪುರಾಣಂ, ೩–೪೩)

---

[೧]ತ(ಸ) [೨]ಲಟ್ಟಿದ(ನ) ಗೆಂಟುಗೆ(ಸೂ) [೩]ವಿಳಾದಿ(ಸೂ) [೪]ಪಡೆವಂತಿರೆ ರೂಪು(ಸೂ) [೫]ಪಡೆವಂತು ಸವಾನ(ಸೂ) [೬]ನಿಂ ಪಡೆಪ್ರುದಿಂ(ಸೂ) [೭]ಸೌಖ್ಯವೇಂ(ಸ) ಲಾಸ್ಯವಿಂತಿವೇಂ(ಅ)

ಕಳಹಂಸಂ ಸುಳಿಯದ ಪೂ
ಗೊಳನಮೃತಮರೀಚಿಯಿಲ್ಲದಂಬರಚಕ್ರಂ
ಕಳಭಂ ಸಂಚರಿಸದ ವನ
ವಳಿಯುಂ ಸುತರಾಡದಂಗಳಂ ರಂಜಿಕುಮೇ ೬

(ಜಗನ್ನಾಥವಿಜಯಂ, ೨-೬೬)

ಕೃಪೆಯನಗಲ್ದ ಭೂಪತಿಯ ಪಟ್ಟಣದಿಂ ವನವಾಸವೆಗ್ಗಳಂ
ಕಪಟಿಯ ಸಂಗದಿಂ ಪುಲಿಯ ಸಂಗಮತೀವ ಸುಖಂ ದರಿದ್ರದಿಂ
ಕ್ಷಪಿಪುದಱಿಂದ ಲೇಸು ಮರಣಂ ಸುತರಿಲ್ಲದ ಬಾಳ್ಕೆಯಿಂ ಮಹಾ
ತಪದೊಳನಾರತಂ ತಪವನಾಂಪುದು [1]ಪ[1]ಥ್ಯಮಿದಲ್ಲವೆ ಲೋಕದೊಳ್ ೭

ಧನಧಾನ್ಯಂ ಬಂಧುಮಿತ್ರರ್
ವನಿತಾತತಿ ರಾಜ್ಯಮೆಂಬುದೇವುದೊ ಮುದ್ದಿಂ
ಬಿನದವನೊಡರ್ಚಿಯಾಡುವ
ತನಯಂ ಸಂಸಾರಸುಖದ ಸೀಮೆಯದಲ್ತೇ ೮

ಕನಸಿನ ಸಿರಿ ಕಾರ್ಮುಗಿಲೊ
ಡ್ಡಿನ ಚಿತ್ರಂ ಸತಿಯರೊಲ್ಮೆ ಮಿಂಚಿನಥಾಳಂ
ಜನಪತಿಯ ಕೂರ್ಮೆಯೆನಲಾ
ತನೊಳಾಯಾತ್ಮಜನ ಸೌಖ್ಯಮಿನ್ನೇವೊಗಳ್ವಂ ೯

ಸುತರುಳ್ಳೊಡೆ ಸಂಸಾರ
ಸ್ಥಿತಿ ಸುಖಮವರಿಲ್ಲದಂದು ಸಂಸಾರಿಗೆ ದು
ರ್ಗತಿದಪ್ಪದಪ್ಪುದದಱಿಂ
ಯತಿಮಾರ್ಗಂ ಸೌಖ್ಯಮಲ್ತೆ ಭಾವಿಪೊಡಿಳೆಯೊಳ್ ೧೦

ಅಪ್ಪೆಪ್ಪೆನುತ್ತ ಪರಿತಂ
ದಪ್ಪುವ ಜೈಮುಂಡೆನುತ್ತೆ ಸೊಸಲ್ಗೆಳಸುವ ಕೈ
ಚಪ್ಪಣೆಗುಟ್ಟಲ್ ಕುಣಿಕುಣಿ
ದೊಪ್ಪುವ ಬಾಲಕನ ಪಡೆವುದಂತದು ಭಾಗ್ಯಂ ೧೧

———

[1] ಸ(ಸ)

ಉಡೆಘಂಟೆ ಮುರುಹು ಮಾಗಾಯ್
ಸೊಡರ್ವಕ್ಕಿನ ಬೊಟ್ಟು ವ್ಯಾಘ್ರನಖ ಜೆಡೆದುಱುಗಲ್
ಸಡಗರದ ಗೆಜ್ಜೆಯಂದುಗೆ
ದೊಡವಿನ ಬಾಲಕನ ಪಡೆವನೇನು ಕೃತಾರ್ಥಂ ೧೨

ಚುಂಬಿಸಿ ಲೋಳವಾಯ್ದೆಱೆಯನೀಕ್ಷಿಸಿ ಮಕ್ಕಳ ಮುದ್ದುಗೆಯ್ತದೊ
ಳ್ಪಂ ಬಿಡದಪ್ಪಿ ಕೋಮಳತರಾಂಗಮನಾಲಿಸಿ ನು[1]ಣ್ಗೊರಳ್[1] ಪೊದ
ಟ್ದುಂಬಿನ ಮಾತನಕ್ಕಱೊಳೆ ವಾಸಿಸಿ ನೆತ್ತಿಯನಿಂತು ಸೌಖ್ಯಮಂ
ತುಂಬಿ ನಿಜಾಖಿಳೇಂದ್ರಿಯದೊಳಂ ತಣಿಪೆಯ್ದುವರೇಂ ಕೃತಾರ್ಥರೋ ೧೩

(ಚಂದ್ರಪ್ರಭಪುರಾಣಂ, ೩–೪೪)

ಪೊಗಮಂ ನೋಡುವ ಲಲ್ಲೆಗೈವ ನೊಳೆಯುಂಬಬಬ್ಬ ಜೋಯೆಂಬ ಕೆ
ಮ್ಮಗೆ ಕಾಲ್ಪತ್ತುವ ದೂರದಿಂ[2]ದ ಪರಿತಂದಪ್ಪ[2]ಪ್ಪೆನುತ್ತಪ್ಪುಪೊ
ಯ್ಯಗೆ ಜೆಯ್ಯಾಡುವ ಪೋಲುದಂ ಮುಸುಕಿಡುತ್ತೋಯೆಂಬ ದಾಯೆಂಬ ಮು
ದ್ದುಗಳಂ [3]ಬೀಱುವ ಕಂದ[3]ನೊಳ್ ನಲಿವ ಪೆಣ್ಣೇಂ ನೋಂಪಿಯಂ ನೋಂತಳೋ ೧೪

(ಜಗನ್ನಾಥವಿಜಯಂ ೨–೬೭: ಸೂಕ್ತಿಸುಧಾರ್ಣವಂ ೨–೬೭)

ಅನಪ ಭೂಮಿಪಾಲಕ ಕುಲಂಗೆ ಹಿಮಾಂಶುಕುಲಂಗೆ ಕೀರ್ತಿಸಂ
ತಾನಕುಲಂಗೆ ಪ್ಮೆಮೆಯ ಕುಲಾಂಗನೆಯಪ್ಪಿನಿತರ್ಕೆ ನೋಂತೆನಾಂ
ನೋನೆನೆ ನೋಡ ಕಂಸನ ವಿಜೃಂಭಣಮಂ ಜಯಿಸಲ್ ಸಮರ್ಥನಂ
ಭೂನುತನಂ ಯಶೋವಿದಿತನಂ ಸುತನಂ ಪಡೆವೊಂದು ನೋಂಪಿಯಂ ೧೫

(ಜಗನ್ನಾಥವಿಜಯಂ ೨–೬೮)

ಮಱಿಯದೆ ಬೆಚ್ಚನೀರೆಱೆದು ತೊಟ್ಟಿಲೊಳಿಟ್ಟು[4] ಬಸಿರ್ಗೆ ಜೋಲದೊ
ಳ್ಸೆಱಗನೆ ತಂದು ಸೂನುಗೊಲವಿಂ ಸೊಡರ್ವಕ್ಕಿನ ಬೊಟ್ಟನಿಟ್ಟು ತೂ
ಪಿಱಿದು ಪಲರ್ಪೆಯಿಂ ಪರಸಿ [5]ಪಾಡುವ ದಾದಿಗೆ [5]ಸಿಚ್ಚನಿಚ್ಚಮು
ಟ್ಕಿಱಿನೊಳೆ ಮೆಚ್ಚನಿತ್ತು ತನಿವೆರ್ಚುವ ಸ್ನೈಪನಗೆಂದು ಸಾರ್ಗುಪೋ ೧೬

(ಚಂದ್ರಪ್ರಭಪುರಾಣಂ, ೩–೪೫)

---

[1]ಣ್ಗೊದಳ್(ಅ) [2]ಪರಿದು ಬಂ(ಸೂ) [3]ತೋಱುವ ಚಿಣ್ಣ(ಸೂ) [4]ಸೋಗಿಲೊಳಿಟ್ಟು ತೆ (ಅ) [5]ಬಱಿಕ್ಕ ಚೀನದೊರ್ಚೆ(ಅ)

ಅರಿಸಿನದಂಚೆಯಂ ಪೊದಿಸಿ ಪೊಕ್ಕುಳಿನೆಣ್ಣೆಯ ಸೋಗಿಲೊಳ್ ಮುತ
ಲ್ದಿರಿಸಿ ಲಲಾಟದೊಳ್ ತಿಲಕಮಂ ಸೊಡರ್ವಕ್ಕಿನೊಳಿಟ್ಟು ಮುದ್ದಿಸೀ
ಪರ[೧]ದುರಮು[೧]ಣ್ಮೆ ಕಣ್ದೆಱೆಯದರ್ಭಕನಂ ನಡೆನೋಡಿ[೨]ಯೆತ್ತಿ[೨] ಪಾಲ್
ದೊರೆವ ಕುಚಂಗಳಂ ಬಿಡದೆ ಸೂಸುವ ಸೈಪಿನಗೆಂದು ಸಾರ್ಗುವೋ ೧೭
(ಮಲ್ಲಿನಾಥಪುರಾಣಂ, ೩-೧೧೩)

ಪಸಿದಳುತಿರ್ಪ ಬಾಲಕನ ನಾದಮನಾಲಿಸಿ ಗೇಯಕೃತ್ಯಮಂ
ಬಿಸುಟತಿವೇಗದಿಂ ಪರಿದು ಯತ್ನದೆ ಸೋಗಿಲೊಳಿಟ್ಟು ಕೂಡೆ ಚಿ
ಮ್ಮಿಸಿ ಪೊಲೆವಾಲ್ಗಳಂ ದೆಸೆಗೆ ನೋ[೪]ಡುತ ವಕ್ತ್ರಮನೇಕ ಚಿತ್ತದಿಂ[೪]
ಮುಸುಕದೆ ಸಾರ್ಚಿ ಸಾರ್ಚಿ ಪೊಲೆಯೂಡುವ ಸೈಪಿನಗೆಂದು[೫]ಸಾರ್ವುದೊ[೫] ೧೮
(ಸೂಕ್ತಿಸುಧಾರ್ಣವಂ ೭-೬)

ಮುದಮುರ್ವೀಶಂಗೆ ಹರ್ಷಂ ಸಕಲಪರಿಜನಕ್ಕುತ್ಸವಂ ಬಂಧುಗಳ್ಗ
ಭ್ಯುದಯಂ ವಂಶಕ್ಕೆ ಚಿಂತಾಭರಮಖಿಳಸಪತ್ನೀಜನಕ್ಕಮ್ಮಳಂ ದು
ರ್ಮದ ವೀರಾರಾತಿವರ್ಗಕ್ಕಭಿಲಷಿತಫಲಂ ವಿಶ್ವಧಾತ್ರೀಜನಕ್ಕಾ
ದುದೆನಲ್ ಸತ್ಪುತ್ರನಂ ನಾಂ ಪಡೆಯದುದು ವೃಥಾಯಾಸ ಮೀ[೬]ಶಾ[೬]ವಿಳಾಸಂ ೧೯
(ಮಲ್ಲಿನಾಥಪುರಾಣಂ ೩-೧೦೮; ಸೂಕ್ತಿಸುಧಾರ್ಣವಂ ೭-೧೦)

ಎಳವೆಱೆ ಬೆಳೆಯದ ಗಗನ
ಸ್ಥಳ ಸಸಿ ಬೆಳೆಯದ ಧರಿತ್ರಿ ಮೌಕ್ತಿಕರತ್ನಂ
ಬೆಳೆಯದ ಶುಕ್ತಿಕೆ ಗರ್ಭಂ
ಬೆಳೆಯದ ಬಾಲಕಿಯು ಬಸಿಱಿನರ್ಭಕನಲ್ತೆ ೨೦
(ಮಲ್ಲಿನಾಥಪುರಾಣಂ, ೩-೧೧೦; ಸೂಕ್ತಿಸುಧಾರ್ಣವಂ, ೭-೧೭)

ಪೊರೆದು ಪೊದಳ್ದ ಧೂಳಿವೆರಸಂಗಭವಂ ನಲಿದಾಡದಂಗಣಂ
ಪೊರಳದ ಸೋಗಿಲುಣ್ಣದ ಕುಚಂ ನಡೆನೋಡದ ವಕ್ತ್ರಮುಳ್ಳಿಱಿಂ
ತೊರೆದೊಡನೆಚ್ಚು ಪಾಯ್ವ ಪೊಲೆವಾಲೊಳೆ ನಾನದ ಮೇಲುದೆಂತುಮೊ
ಪ್ಪಿರದಿನಿತರ್ಕೆ ಮುನ್ನ ನೆಱೆ ನೋನವರೀಗಳಬಿಲ್ದೊಡಕ್ಕುಮೇ ೨೧
(ಸೂಕ್ತಿಸುಧಾರ್ಣವಂ ೭-೧೮)

---

[೧]ಪೊರಡು(ಸೂ) [೨]ನೋಡಿ(ಸೂ) [೩]ಪ(ಸೂ) [೪]ಡದೆ ವಕ್ತ್ರಮನೊಂದಿ ಚೆಲ್ಲದಿಂ(ಸೂ)
[೫]ಸಾಗರ್ವೋ(ಸೂ) [೬]ಶ್ರೀ(ಸೂ)

ಮಗುವಂ ತೊಟ್ಟಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ ಮೆ
ಲ್ಲಗೆಯಿಂ ಮುದ್ದುಮೊಗಂ ತುಳಂಕೆ ಪರಸುತ್ತುಂ ನೋಡಿ ಬಾ ದೇವ ಬಾ
ಜಗತೀವಲ್ಲಭ ಭಾರ ಮಾಣಿಕವೆ ಬಾರೆನ್ನಾನೆಯೆಂದೆತ್ತಿ ಮೆ
ಯ್ದುಗೆವನ್ನಂ ಮೊಲೆಯೂಡಿ ತೂಪಿಱುವ ಸೈಪೇಂ ನೋನದಳ್ಗಕ್ಕುಮೇ ೨೨

(ಅನಂತನಾಥಪುರಾಣಂ, ೧೨-೫೦, ಸೂಕ್ತಿಸುಧಾರ್ಣವಂ ೭-೧೩)

ತನಯನ ಮಾತುಗೇಳದ ತನೂಜನೊಡನಾಡದ ನಾಡೆಯಱಂ ಕುಮಾ
ರನನಮರ್ದಪ್ಪದಾತ್ಮಜನ ಬಾಯ್ಸವಿಯ ನಲಿದುಣ್ಣದೊಲ್ದು ನಂ
ದನನುಸಿರ್ಗಂಪನಾಲಿಸದೆ ರಂಜಿಪ ಕರ್ಣಯುಗಂ ವಿಲೋಲಲೋ
ಚನ ಭುಜ ಜಿಹ್ವೆ ನಾಸಿಕಮೆಯ್ದೆ ನಿರರ್ಥಕಮಾಗದಿರ್ಕುಮೇ ೨೩

ತಳರಡಿಯಿಡುತಂ ಕುಟ್ಟಿಮ
ತಳದೊಳ್ ಮಾರ್ಪೊಳೆಯುತಿರೆ ನಿಜಪ್ರತಿಬಿಂಬಂ
ಗಳನೀಕ್ಷಿಸಿ ಕೌತುಕಸಂ
ಚಳನಯನಂ ತನಯನೆಂದು ಬೞಸಂದಪನೋ ೨೪

(ಕಾದಂಬರಿ, ಪೂ. ಭಾ. ೩೬೦; ಸೂಕ್ತಿಸುಧಾರ್ಣವಂ ೭-೧೬)

ಉದಯಗಿರಿಶಿಖರದೊಳ್ ಬಾ
ಲದಿವಾಕರನಂತು ಬರ್ಪ[1]ವೋಲ್ ಘನಕುಚಕುಂ[1]
ಭದ ಮೇಲೆ ಬರ್ಪನಂ ಪರಿ
ದಿದಿರ್ಗೊಂಡಾತ್ಮಜನನೆಂದುನಿವಳಿಸಿದಪೆನೋ ೨೫

(ಅನಂತನಾಥಪುರಾಣಂ, ೧೨-೫೭; ಸೂಕ್ತಿಸುಧಾರ್ಣವಂ ೭-೨೩)

ಅರಸಂ ಕರತಳತಾಡನ
ಪುರಸ್ಸರಂ ದೇವ ಬನ್ನಿಮೆಂದೊಡ್ಡಿರೆ ಕೈ
ಗಳನೊಲ್ಲದೊಲವಿನೆನ್ನಯ
ಕೊರಳಂ ತಕ್ಕೈಪ ತನಯನೆಂದಾದಪನೋ ೨೬

ಮೊಲೆಯುಣುತಕ್ಕಱಿಂ ನಗುವ ನಿಂದಿರುತಪ್ಪುವ ಪಿಂಗಿ ಪೊಂಗುತಂ
ಮಲೆವ ಮರಳ್ದು ಕಂಗಳನಲರ್ಚುವ ಮುಚ್ಚುವ ನೋಡುತಾಡುತುಂ
ನಲಿನಲಿದುರ್ಬುತುಂ ತೊಲೆವುತಂತೆಳೆವಳ್ಳಿಯ ಮುದ್ದಿನೊಪ್ಪಿನೊಳ್
ನೆಲಸಿದ ಪುತ್ರಿಯುಂ ಬಯಸುತ್ತಿರ್ದಪುದೆನ್ನ ಮನಂ ಮನಃಪ್ರಿಯಾ ೨೭

---

[1] ನೆಂತು ಬರ್ಪನಂತಾ ಕರಿಕುಂ(ಸೂ) ನಂತೆತೋರ್ಪನಂಕದೊಳ್ ಭಕುಂ(ಅ)

ನಾಡಮಾತಿನೊಳೇನೊ ಪುತ್ರನನಟ್ಟಿಯಿಂದಿರದೆತ್ತಿ ಕೊಂ
ಡಾಡದಾಕೆಯ ಕೈ ಮುರುಳ್ಗಳೆ ಕೈ ಮನಂಬುಗವಟ್ಟಿಕೆಱಂ
ನೋಡದಿರ್ಪಳೆ ಕಂಗಳುರ್ಚಿದ ಪೀಲಿಗಣ್ಣುರೆ ಜೋಗುಳಂ
ಪಾಡದಿರ್ಪಳೆ ಬಾಯಿ ತಾನದು  ಪುಣ್ಣುಬಾಯೆನಸಲ್ಲದೇ ೨೮

ಸಾರಕಿಯ ಕೀರದಂಚೆಯ
ಪಾರಾವತದಿಂಚರಂಗಳಿಲ್ಲದ ಕೋಪಾ
ಗಾರಮನಾ ವಧು ಪೊಕ್ಕಳ್
ತೋರಣಮುಲ್ಲಾಡೆ ನಿಮಿರ್ದ ಸುಯ್ಯೆಲರಿಂದಂ ೨೯

(ಜಗನ್ನಾಥವಿಜಯಂ, ೧೨-೭೬)

ಪ್ರೀತಿಯನೀವ ಸಿಂಧುರದ ವಸ್ತ್ರಮನೊಲ್ಲದದೊಂದು ವಸ್ತ್ರಮಂ
ಶ್ವೇತಮನುಟ್ಟಳುಟ್ಟಿರೆ ಕದಂಬರದಿಂ ಪ್ರಿಯಕೋಪಚಿಹ್ನದಿಂ
ದಾ ತರಳಾಕ್ಷಿಗಾಗಳೆನಸುಂ ನಲವೋಡಿದುದಂತುಟಲ್ತೆ ಬಾ
ಲಾತಪದಿಂದಮುಪ್ಪ ನಲನಬ್ಜಿನಿಗಪ್ಪುದೆ ಚಂದ್ರಕಾಂತಿಯಿಂ ೩೦

(ಜಗನ್ನಾಥವಿಜಯಂ ೧೨-೭೭)

ತನಗೀರ್ಷ್ಯೆಯಿಂ ಶಿರೋವೇ
ದನೆ ಜನಯಿಸೆ ನಿಟಿಲಪಟ್ಟದೊಳ್ ತ್ರ್ಯಕ್ಷಂ
ದನ ತಿಲಕಾಯತಮಂ ಮಾ
ನಿನಿ ರುಚಿರದುಕೂಲಪಟ್ಟಮಂ ನಿಯಮಿಸಿದಳ್ ೭೧

(ಜಗನ್ನಾಥವಿಜಯಂ ೧೨-೭೮)

ಕಲುಷಕಟಾಕ್ಷೇಕ್ಷಣ ರುಚಿ
ಲಲಾಟ ಪಟ್ಟದೊಳೆ ಪೊದಳ್ದು ಪುದಿವತ್ತೆನೆ ಕೋ
ಮಲೆ ತದ್ದುಕೂಲಪಟ್ಟದ
ಕೆಲಗೆಲದೊಳ್ ತೊಡೆದಳರುಣಚಂದನಮಂ ೩೨

(ಜಗನ್ನಾಥವಿಜಯಂ ೧೨-೭೯)

ಪರಮಕ್ರೋಧಾದಿ ದೇವಾರ್ಚನಮೆನೆ ಪರಿದೊಟ್ಟುತ್ತೆ ಲೀಲಾಬ್ಜಪತ್ರೋ
ತ್ಕರಮಂ ಚಿಂತಾಲತಾವೃದ್ಧಿಯನೊಡರಿ[೧]ಸಲೋರಂತೆ[೧] ನೀರ್ವೊಯ್ವ ಪಾಂಗಿಂ
ಸುರಿಯುತ್ತುಂ ಬಾಷ್ಪಧಾರಾಜಲಪರಿಕರಮಂ ಸ್ನೇಹಶಾಸ್ತ್ರಕ್ಕೆ ಟೀಕಂ
ಬರೆಯುತ್ತಿರ್ಪಂದದಿಂದುಂಗುಟದೆ ಬರೆಯುತುಂ ಭೂಮಿಯಂ ಭಾಮೆಯಿರ್ದಳ್ ೩೩

(ಜಗನ್ನಾಥವಿಜಯಂ, ೧೨-೮೧)

---

[೧]ಚುಮಂತಾಗ(ಸ)

ಸಿರಿಗಂಪಿನಬಲೆ ಹೃದಯದೊ
ಳೊರಸುತ್ತುಂ ನೋವನಿದುವೆ ಪಡೆದಪುದೆಂದಾ
ಸಿರಿಕಂಡದ ಶುಕ್ತಿಕೆಯಂ
ಧರಣಿಯೊಳಪ್ಪಳಿಸಿ ಕಣ್ಣನೀರಂ ಸುರಿದಳ್ ೩೪

(ಜಗನ್ನಾಥವಿಜಯಂ ೧೨-೮೨)

ಬಂದು ಮೃದುಯಾನದಿಂದಾಂ
ಬಂದುದನೀ ದೇವಿಗರುಪಬೇಡೆಂದು ಸಖೀ
ವೃಂದಕ್ಕೆ ಪೇಟ್ದು ಸಂಜ್ಞೆಯಿ
ನಂದು ಮನೋರಮೆಯು ಕೋಪಗೃಹಮಂ ಪೊಕ್ಕಂ ೩೫

(ಜಗನ್ನಾಥವಿಜಯಂ, ೧೨-೮೩)

ಪಾರಾವತವುಲಿಯದ ಶುಕ
ಶಾರಿಕೆಗಳ್ ಮಧುರ ವಿರುತಿವೀಱದ ಕೋಪಾ
ಗಾರಮನೊರ್ವೆಯೆ ಪೊಕ್ಕೀ
ಕಾರಣವೇನೆನಗೆ ತಿಳಿಯೆ ಪೇೞಿಂದುಮುಖಿ ೩೬

(ಜಗನ್ನಾಥವಿಜಯಂ, ೧೨-೮೮)

ಸಿಂಧೂರ[೧]ವಸನವುಂ[೧] ಕಳೆ
ದೊಂದು [೨]ಸಿ[೨]ತಾಂಬರಮನುಟ್ಟು ನಿರ್ಮಳನಿರ್ಮೋ
ಕಂದಳೆದ ನಾಗಕನ್ನಿಕೆ
ಯಂದಮನಭಿನಯಿಸಿದಂದಮೇಂ ಲಲಿತಾಂಗೀ ೩೭

(ಜಗನ್ನಾಥವಿಜಯಂ, ೧೨-೮೬)

ತರುಣಿ ಕಳಂಕಮನಂತಃ
ಕರಣದೊಳಾಂತಮಳವೃತ್ತಿಯಂ ಕೂಡೆ ಬಹಿ
ಸ್ಫುರಿಪಂತೆ ಮಹಾ[೩]ರಜನಾಂ[೩]
ಬರಮಂ ಕಳೆದೇಕೆ ಧವಳಪಟಮಂ [೪]ಪೊದೆ[೪]ದಾ ೩೮

(ಜಗನ್ನಾಥವಿಜಯಂ, ೧೨-೯೦)

---

[೧] ನಿಚಯುವಮಂ(ಸ) [೨] ಷೀ(ಸ) [೩] ರಚಿತಾಂ(ಸ) [೪] ತಳೆ(ಸ)

ಹೃದಯದ ತಾಪದಿನುರ್ಕುವ
ವದನದ ಲಾವಣ್ಯರಸದ ನೊರೆಯೆನೆ ನೊಸಲಿನ
ಲಿ ದುಕೂಲಪಟ್ಟಮಂ ಕ
ಟ್ಟಿದಭಿಪ್ರಾಯಮುನವೋಘವಱಿಪುವುದಬಲೇ ೩೯

(ಜಗನ್ನಾಥವಿಜಯಂ, ೧೨-೯೧)

ನಸುಪೆಱೆತಯುತ್ತ್ರಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ
ನುಸುಳ್ದು ಸುಪಾಣಿಯಾಗಿ ಪೊಱಪೊಣ್ಮುವ [1]ಮೌಕ್ತಿಕಮಾಲೆಯಂತೆವೋಲ್[1]
ಮಿಸಗಿ ನಿರಂಜನಂಗಳೆನಿಸಿ ಪಕ್ಷ್ಮ ಪುಟಾಂತರದಿಂದಮೇಕೆ ಪೇೞ್
ಪಸರಿಸಿ ನೀಳ್ದು ಪೊಣ್ಮಿದುವು ಕಣ್ಮಸಿಗಳ್ ತರಳಾಯತೇಕ್ಷಣೇ ೪೧

(ಕಾದಂಬರಿ ಪೂ. ಭಾ., ೩೩೧)

ಕುರುಳ ಮದಾಳಿಮಾಲಿಕೆಗಡೇಕೊಳಗಾಗವು ಚಿನ್ನ ಪೂಮುಖಾಂ
ಬುರುಹಮನೇಕೆ ಸೂಸದು ಲತಾಂಗಿ ವಜೋಮುಕರಂದಮಂಗುಳಿ
ಸ್ಮರಶರಮಂಗುಳೀಯ ಮಣಿರಶ್ಮಿಗಳಿಂ ಗಱಿಗಟ್ಟದೇಕೆ ಪೀ
ವರ ಕುಚಕೋಕಮೇಕಳಸಲೊಲ್ಲವು ಬಾಲಮೃಣಾಳನಾಳಮಂ ೪೨

(ಅನಂತನಾಥಪುರಾಣಂ. ೧೭-೫೪, ಸೂಕ್ತಿ ೭-೧೧)

ಚರಣಾಂಗುಲಿಗಳ್ ಮಣಿನೂ
ಪುರಂಗಳಿಂಪೆಸೆದು ತೋಱುತಿರ್ದಪುವಿಲ್ಲೇ
ಕೆರಸಿ ಪರಾಗದರುಣಪ
ಟ್ಟರಣಂಗಳ್ ನೆಲಸಿದಬ್ಜದೆಸೆಪೆಸಳ್ಗಳವೋಲ್ ೪೩

(ಚಂದ್ರಪ್ರಭಪುರಾಣಂ, ೩-೫೫)

ಸ್ಮರರಾಜಕೇಳಿಕಮಲಾ
ಕರಕಳಹಂಸಂಗಳೆನಿಸಿ ಸೊಗಯಿಪ ಮಣಿನೂ
ಪುರಯುಗಳಂ ನಿನ್ನ ಪದಾಂ
ಬುರುಹಮನೊಂದಲ್ಕೆ ಪಡೆಯದಿಂದಿನ ತೆಜನೇಂ ೪೪

(ಕಾದಂಬರಿ, ಪೂ. ಭಾ. ೩೩೩)

---

[1] ಮುತ್ತಿನಮಾಲೆಯಂದದಿಂ(ಸ)

ಕಾಮನ ಕೃತಕಾದ್ರಿಗಳೆನಿ
ಪೀ ಪೊಲೆಗಳ ಮೇಲೆ ವಿಮಲನಿರ್ಝರ ಪೂರೋ
ದ್ದಾಮತೆಯಂ ನವಮೌಕ್ತಿಕ
ದಾಮದಿನೊಡರಿಸದ ತೆಱನಿರ್ದೇನಿಂದುಮುಖೀ ೪೫

(ಚಂದ್ರಪ್ರಭಪುರಾಣಂ, ೩-೫೭)

ಲಲಿತಾಂಗುಳಿದಳಸಂಕುಳ
ಕಲಿತಂ ಕರತಳಮಿದೇಕೆ ಕೋಮಳೆ ಕದಪಂ
ತಳೆದುದರದಳಿದು ರಕ್ತೋ
ಪಳನಂದದೆ ಕರ್ಣಪೂರಮಾದತ್ತೀಗಳ್ ೪೬

ಎರಡುಂ ಕರ್ಣದೊಳಂ ಪೊಳೆ
ವ ರತ್ನಮುಪಪತ್ರದಿಂದಮಿನಬಿಂಬಯುಗಾಂ
[೧]ತರವೆನಿ[೧]ಸುವಿಂದುಬಿಂಬದ
ಪರಿ[೨]ಯುಂ[೨] ಪರಿಭವಿಸದೇಕೆ ನಿನ್ನಯ ವದನಂ ೪೭

(ಚಂದ್ರಪ್ರಭಪುರಾಣಂ, ೩-೫೯)

ಒಗೆತಪ್ಪ ಬಹಳಬಾಷ್ಪಾಂ
ಬುಗಳಿಂದಂ ದ್ರಗನುಮಾದುದೇಕೆಯೊ ನಿನ್ನೀ
ಸೊಗಯಿಪ ಕಪೋಲವಾಳೀ
ಯುಗಳದ ಕಾಶ್ಮೀರಮಕರಿಕಾಪತ್ರಂಗಳ್ ೪೮

ನೊಸಲೊಳಮರ್ಕವೆತ್ತಲೆವ ಸೂಸುಗುರುಳ್ ಸಿಡುಮುಯ್ಯೊಳಟ್ಟಿ ಪ್ಪೈ
ಪೊಸೆ[ದಿರುವಂತೆ] ಜಾಡಿದ ಮೊಗಂ ಕರಪಲ್ಲವದಲ್ಲಿ ಕೀಱಿ ಕೀ
ಲಿಸಿದ ಕದಂಪು ಜಾಱಿದ ಜಗುಳ್ದುಡಿ ಜೇಱಿ ಬೆಡಂಗನೀಯೆ ಜಾ
ನಿಸುವರ ಭಾವಮೇಂ ಬಗೆಯೊಳಚ್ಚರಿದಿರ್ದುದೊ ತನ್ನರೇಂದ್ರನಾ ೪೯

ನಸುಬಿಸುಪಿಂಗೆ ಬೆಚ್ಚಿ ಸೆಱಸಾರೆ ಮದಾಳಿಗಳೋಳಿಗೊಂಡು ನಿ
ಟ್ಟುಸುರ್ಗಳ ಧಾಳಿಯಿಂ ನಿಜಸರೀರಶಲಾಕೆಯನೀಕೆ ನಾಡೆ ಕಂ
ದಿಸಿ ನಱುಗಂಪು ಸುಣ್ಪುಗಳ ಮೆಯ್ಸಿರಿಯಂ ಸಲೆ ಸೋಲ್ತು ಚಂಪಕ
ಪ್ರಸವದ ಪಾಡುಗುಂದಿದಳಿಗಾಡಿಯನೇಕೆಣೆಮಾಡಿಕೊಂಡಳೋ ೫೦

---

[೧]ತರಿತ(ಅ) [೨]ಜಂ(ಅ)

ಕೆಲದೊಳೆ ತೋರ್ಪ ಕೌಳುಡೆಯನೊಯ್ಯನೆ ಕಯ್ಯೊಳದಂಪೆ ಕಂಕಣಂ
ಗಲಕೆನೆ ಕಣ್ಣನೀರ್ ಪರಿಯೆ ಪೊಣ್ಮೆ ಪೊದಟ್ಟುಡೆ ನೂಲ ನುಣ್ಚರಂ
ನೆಲೆವೊಲೆಯಿಂದ ಪೊಂದಿನಿಸು ಜಾಱುವ ಪೇಲುದನೇಱಿಸೋಂತಳೆ
ಲ್ಲಲಘು ನಿತಂಬೆಯಿಂದಪೆರ್ಜೆಗೊಂಡುದು ರಾಜಕಳಾವಿಳಾಸನಾ ೫೧

ಜಗದಧಿಪತಿ ಸಮದುಃಖಂ
ಮೃಗನಯನೆಯ ಖೇದಮಂ ಪಚ್ಚುಗೊಳಲ್
ಬಗೆದಂ ವ್ಯಾಕುಳಚಿತ್ತಂ
ದೃಗಾಂಬುವಂ ತೊಡೆದು ಪೆಲ್ಲಿನಂದಿಂತೆಂದಂ ೫೨

ನಡೆಯೊಡನೇನುಮುಚ್ಚರಿಸಿದಂತೆ ನೆಗಟ್ಟಿತ್ತಯ ರಾಜಹಂಸೆ ಪೊ
ಳ್ನುಡಿಗಳ ಜಾಣ್ಮೆಯಂ ಸೆಳೆದುದೋ ಗಿಳಿ ಸೋಲದೆ ಸೋಗೆ ಬೀಗಿ ಸೋ
ಮ್ಮುಡಿಗೆಣೆಯಾದುದೇ ನುಡಿ ಮನೋಹರಿ ನಿನ್ನ ಪೊಗಂ ಕನಲ್ದು ನೀಂ
ನುಡಿಯುಪೆ ಮೌನಮಂ ಪಿಡಿಯೆ ತಾವರೆಯೊಳ್ ಸರಿಯಾಗಿ ಪೋಗದೇ(?) ೫೩

ಒದವಿದ ನಿಜಭೇದಕ್ಕಾ
ವುದು ಕಾರಣಮತಿ ಸರಕ್ತಮೆನಿಸಿರ್ದನ್ನೀ
ಹೃದಯಂ ನವಪಲ್ಲವದಂ
ದದೆ ಕಂಪಿಸಿದಪುದು ಕಂಡು ನಿನ್ನಯ ತೆಱನಂ ೫೪

ಪಂಕರುಹನಯನೆ ಮನದಾ
ಶಂಕೆಯದೇಂ ಸ್ನೇಹಮೆಂಬುದೆರಡೆಲ್ಲೆನ್ನೊಳ್
ನೀಂ ಕೇಳೆ ಸತ್ಯಭಾಮೆಯ
ಕಿಂಕರನೀ ಕೃಷ್ಣನೆಂಬ ಲೋಕದ ನುಡಿಯುಂ ೫೫

(ಜಗನ್ನಾಥವಿಜಯಂ ೧೨-೯೪)

ನಿನ್ನಾಣೆ ನಿನ್ನ ಘೋಷಣೆ
ನಿನ್ನ ಪೆಸರ್ ನಿನ್ನ ಜಸಮೆ ಜಸಮೆನಲೆನಲೀ
ಮನ್ನಣೆಯ ಮದನನಚ್ಚಿನ
ಚಿನ್ನೆಗೆ ಕಡುಸೋವಿದಾಪ ಕಡೆಯಿಂದಾಯ್ತೊ ೫೬

ನಿನ್ನೊಲವನರ್ಘವದಱಿಂ
ದೆನ್ನ ಸುಖಂ ನೆಗಟ್ಟಿದಱಿನಾತ್ಮಸುಖಾರ್ಥಂ
ನಿನ್ನನೆ ಮನ್ನಿಸುವೇ ನಾಂ
ನಿನ್ನಿಂ ಪ್ರಿಯಮಪ್ಪುವೆನಗೆ ಪೆಱತೊಂದುಂಟೇ ೫೭

(ಜಗನ್ನಾಥವಿಜಯಂ ೧೨-೯೯)

ದೇವಿಯ ಸೊಬಗ್ಗೆ ತನುಲತೆ
ಪೂವಿನ ಬಿಲ್ಲಂತೆ ಬಾಡಿ ಬಳ್ಕಿರುತಿರ್ದು೯ಂ
ಭಾವಿಸಿ ನೋಡಿ ಮನಂಗೊ
ಳ್ವೀ ವಿಸ್ಮಯರಸಮನೆನ್ನೊಳೇಂ ಮಾಡಿದುದೋ ೫೮

ಉಗುಟ್ದುಪುದಿಲ್ಲ ಚಂದ್ರಿಕೆಯನುಜ್ವಲ ಲೋಲ ವಿಲೋಚನಂ ಮನಂ
ಬುಗೆ ನಯನಂ ಪುದುಂಗೊಳಿಸಿತಿಲ್ಲ ಲತಾಂಗಿ ಲತಾಂಗಲೇಖೆ ಮೆ
ಲ್ನಗೆವೆಳಗಂ ತುಳುಂಕಿದಪುದಿಲ್ಲೆಸೆವಿಂದುಮುಖಿ ಮುಖೇಂದುವೇ
ಕೆಗ ಸಿಸಗಾವಕಾರಣದಿನಾದುದು ಪೇೞನಿತೊಂದು ಜೇವಸಂ ೫೯

(ಜಗನ್ನಾಥವಿಜಯಂ ೨-೬೩)

ಕಂದುವ ಕುಂದುವಿಂದುವಿನೊಳೊಂದುವ ದಂದುಗದಿಂದಲಿಂದುವೀ
ಸೌಂದರಿಯಾನನೇಂದುವನೆ ಸಾರ್ದು೯ ಬರ್ದು೯ಂಕುವೆನೆಂದು ಬಂದನೆಂ
ಬಂದದಿ ನೀಳ್ದ ಲೋಚನಚಕೋರಿಗಳಕ್ಕಿಸಲಾಱದಾ ಸುಧಾ
ಬಿಂದುಗಳಂ ಮರಳ್ಚಿದಪೆನಲ್ ಸುರಿದಳ್ ತರಳಾಕ್ಷಿ ಬಾಷ್ಪವಂ ೬೦

ಪಗಲೆ ಚಕೋರಂ ಪೊಣರ್ವ
ಕ್ಕಿಗೆ ತಿಂಗಳಬಿತ್ತಮನೊಯ್ಯುದ್ದ ಕುಟುಕ್ಕಿಕ್ಕುವ ಭಂ
ಗಿಗೆ ನೆಲೆಯಾದುವು ಮೇಲುದ
ನುಗುಬ್ದಿಬಲೆಯು ಪೊಲೆಂಪೊಳುಗುವ ಬಾಷ್ಪಕಣಂಗಳ್ ೬೧

ಇಂದೀವರಮನಿದೇನೆಲೆ
ಕೆಂದಾವರೆ ಭರದಿನಪ್ಪಿ ಪ್ಪೈದಡವಿದುದೆಂ
ಬಂದದಿಂ ಕಣ್ಣನಿಗಳನರ
ವಿಂದಾಸ್ಯೆಗೆ ತೊಡೆದನಮಳ ಕರಕಿಸಲಯದಿಂ ೬೨

ಕೆಂದಳಿದ ಕಾಂತಿ ಪೊರೆದುದೊ
ಬಂದಿನಿಯನನೀಕ್ಷಿಸಲ್ಕೆ ಮನದನುರಾಗಂ
ಮುಂದಿರ್ದುದೊ ಪೇೞಂಬಿನ
ಮಂದಲರ್ಗಣ್ ಕೆಂಪನೇಂ ಪುದುಂಗೊಳಿಸಿದುದೋ ೬೩

ದೇವಿ ಬಿಡು ಖೇದಮಂ ನಿನ
ಗಾವುದಱೊಳ್ ಕೊರತೆ ಬರಿದೆ ಜಲಕಳಿಕೆಗಳಂ
ತೀವಿ ನಿಜನಯನಮನೆ ಕೆಂ
ದಾವರೆಯೆಸಳೊಡನಿದೇಕೆ ಸರಿಗೈದಪೆಯೋ ೬೪

ಆನೊಳಗಾಗಿರೆ ಕೇಳೆಲೆ
ಮಾನಿನಿ ನೀನಿಕ್ಕಿದುಗುಟಿ ನಾಂ ದಾಂಟಿನೆನಿ
ಪ್ಪೀ ನುಡಿಗೇಳ್ದು ನಿಜಾಜ್ಞೆಯ
ನೇನನು ಮಿಗೆ ಮೀಱಿ ಮಿಕ್ಕು ನಡೆವರುಮುಂಟೇ ೬೫

ಅರಸಿಯ ನೆಗಱ್ತ್ತ ನೋಡಲ್
ಪಿರಿದುಂ ವಿಸ್ಮಯಮನಾಗಿಪುದು ದೇವ ಮನೋ
ಹರವೆನಿಪ ರಾಜ್ಯವಿಭವದ
ಪರಮಸುಖಂ ತನಗೆ ವಿಫಳಮಾದವೊಲೀಗಳ್ ೬೬

(ಕಾದಂಬರಿ ಪೂ. ಭಾ. ೩೪೨)

ಮನದೊಳ್ ಮಱುಗುತ್ತಿರೆ ಮ
ಜ್ಜನ ಭೋಜನ ಭೂಷಣಂಗಳೆಂಬಿವುಮಂ ಪ್ರಾ
ರ್ಥನೆಗೆಯ್ದು ದೇವ ನಿಚ್ಚಮು
ಮನುವಿಸಿ ಮಾಡಿದುದು ಪರಿಜನಂ ಮಾನಿನಿಯಾ ೬೭

(ಕಾದಂಬರಿ ಪೂ. ಭಾ. ೩೪೩)

ಇಲ್ಲಿಂದಿತ್ತಲ್ ದೇವರ್
ಬಲ್ಲಿರೆನುತ್ತುಸಿರದಿರ್ಪುದುಂ ತತ್ಸಖಿ ಭೂ
ವಲ್ಲಭನಱಿದಾಗಳ್ ನಿಜ
ವಲ್ಲಭೆಯುಂ ನೋಡಿ ದುಃಖದಿಂ ಬಿಸುಸುಯ್ದಂ ೬೮

(ಕಾದಂಬರಿ, ಪೂ. ಭಾ. ೩೪೬)

ಅರಯೆ ದುರ್ಘಟಮೆನ್ನಮ
ನೋರಥಮೆಂದಲಸಗಮನೆ ಮನದೊಳ್ ಪಿರಿದುಂ
ದೂರಿಸಲದೇಕೆ ಬಿದಿ ಕೈ
ವಾರಿಸಿದೊಡೆ ತೀರದಿರ್ಪುದಾವುದುಮುಂಟೇ ೬೯

(ಚಂದ್ರಪ್ರಭಪುರಾಣಂ, ೩-೬೭)

ಮುಗಿಲಿರ್ದಂತೆಳ ಮಿಂಚುಗಳ್ ಕಱತವವೋಲ್ ವಾರ್ಬಿಂದುವಂ ಬಂದು ತೋ
ರಗುರಳ್ ತಳ್ತಿಡಿದೊಪ್ಪೆ ಕಣ್ಮಲರ್ಗಳಿಂ ಪಾಯ್ದುರ್ವ ಬಾಷ್ಪಾಂಬು ಬಿಂ
ದುಗಳಂ ಪದ್ಮದೊಳೊಂದಿ ಸಿಂದ ಹಿಮಬಿಂದುವ್ರಾತಮಂ ನೂಂಕುವಂ
ತೊಗೆದರ್ಕಂ ಕರದಿಂದಮುಂದು ತೊಡೆದಿಂತೆಂದಂ ನೃಪಂ ನಲ್ಲಳಂ ೭೦

(ಲೀಲಾವತಿ ೭-೩೯)

ಅದು ಸುಕೃತಾನುರೂಪಮದು ನಮ್ಮ ಮನೋರಥದಂತೆ ತಿರ್ದಿ ಬ
ರ್ಪುದೆ ದೊರೆಕೊಳ್ವುದಕ್ಕೆ ದೊರೆಕೊಳ್ಳದುದ[1]ಕ್ಕಳಿಪಿಂ[1] ವಿವೇಕಿಗಳ್
ಪಡೆವರೆ ದೇವಿ ಮಾಣ ಮನದುಮ್ಮಳಮಂ ಭವದೀಯದಾನಧ
ರ್ಮದ ಸುದೃಢವ್ರತಾಚರಣವೃತ್ತಿಗೆ ಕೂಡದು[2]ದೇಂ ಮನೋರಥಂ[2] ೭೧

(ಅನಂತನಾಥಪುರಾಣಂ ೧೨-೭೫)

ವೀಳೆಯಮನುಗುೞಿ ಮುಡಿಯೊಳ್
ತಾಳಿದ ಕಮ್ಮಲರ ಸೂಸಿ ಮುತ್ತಿನ ಬೊಟ್ಟಂ
ಭಾಳದೊಳಗಿಟ್ಟು ಸೂಚಿಪ
ವೇಳೆಯ ಮಧು ರತ್ನಮಾಂತ ಸಮಯ ಮೃಗಾಕ್ಷೀ(?) ೭೨

ಪಾಯ್ವ ಕುಚಂಗಳಂ ಮಿಡಿದುನೋಡಿ ಕೌಂಕುಳನೆತ್ತಿ ಕಂಪನಾ
ರಯ್ವುತ್ತುಮೊತ್ತುತುಂ ಪೊಡವಿಯುಂ ಮೊಗಮಂ ಮೃಗನೇತ್ರ ದರ್ಪಣ
ಕ್ಕೊಯ್ವುದು ಮೆಲ್ಲಮುಂ ಕಳೆದು ಮಾಣಿಕಮಂ ಪೊಸಪೊಂಗಳಿಂದೆ ಕೈ
ಗೆಯ್ವುದುಮಾಕೆ ಕೈಗೆ ಸೆಳೆಯಂ ಸಖಿ ಕೊಟ್ಟಳದೇಂ ಪ್ರಗಲ್ಭೆಯೋ ೭೩

(ಲೀಲಾವತಿ ೭-೫೦, ನೇಮಿನಾಥಪುರಾಣಂ ೧೨-೧೦, ಸೂಕ್ತಿ ೭-೧೦)

ಮೊಗಶಶಿಪೇಱೆ ಕಡುಲಜ್ಜೆ ಕರಂ ಪೊರೆಯೇಱೆ ಗಾತ್ರದಿಂ
ಬೊಗೆದು ಮುದಾಶ್ರು ಜಾಱೆ ತೆಳುವೊಟ್ಟೆಯೊಳೊಯ್ಯನೆ ಶೂಲೆದೋಱೆ ಮ
ತ್ತೊಗಡಿಪ ಗಂಧಮುಂ ಸೊವಡು ನಾಱೆ ರಜಸ್ವಲೆಯಪ್ಪ ಭಾವಮಂ
ಬಗೆಗೊಳುತಿರ್ಪ ಭಾವಕಿಯ ಬಣ್ಣಿಸಿದಂ ಕವಿಪಂಚಮಾರ್ಗಣಂ ೭೪

ತೊಳಗುವ ಮೆಯ್ಗಳೊಳ್ ಸಿಮಿರ್ದ ಕುಂಕುಮದಿಂದಮದುರ್ಟ್ಟ ಮುಯ್ಪಿನಿಂ
ದಳವಡೆ ತೊಟ್ಟ ಪೊಂದೊಡಿಗೆಯಿಂ ಚಲಕೋಮಲಹಸ್ತ ಶಾಖೆಯೊಳ್
ಸೆಳಿಸೆಳೆಗೊಂಬಿನಂತೆ ಪೊಳೆವೊಂದು ವಿಳಾಸದಿನಗ್ಗಳಂ ತಳಿ
ರ್ತೆಳಲತೆಯಂತೆ ತೋಱಿದರುಣಾಧರೆ ಪುಷ್ಪಿತೆಯೆಂಬುದೊಪ್ಪದೇ ೭೫

ಸುಯ್ಗೆಱಗುವ ಮಘಮಘಿಸುವ
ಮೆಯ್ಗೆಱಗುವ ಜಘನಕೆಱಗುವಳಿ ಪೇೞ್ದಪು ತ
ಳ್ತ್ಯಗಣೆಯನ ಜಯಲಕ್ಷ್ಮಿಯ
ತಾಯ್ಗೆಱುವೆನೆ ಮಿಸುಪ ಸತಿಯ ಪುಷ್ಪೋದಯಮಂ ೭೬

---

[1]ಕ್ಕಧಿಕರ್(ಅ) [2]ದೆಮ್ಮ ಮನೋಹರಂ(ಸ)

ಸೆಳೆ ಬಿಸನಾಳಮಾಗಿರೆ ತಳಂ ದಳಮಾಗಿರೆ ಲೋಲನೀತ ಕುಂ
ತಳವಳಿಮಾಲೆಯಾಗಿರೆ ಪರಿಚ್ಛದಮಾದರುಣಾಧರಂ ಘಮಂ
ತೆಳಸಿದ ಬಾಲಭಾನುರುಚಿಯಾಗಿರೆ ಪುಷ್ಪಿತೆಯಾಗಿ ಪುಷ್ಪಕೋ
ಮಲೆ ಜಯರಾಮ ಕಾಮ ಕಮಲಾಕರದಬ್ಜಿನಿಯಂತೆ ರಂಜಿಸಳ್ ೭೭

ಕೃತಸಹಕಾರನಂದನವಿಲಾಸೆ ಸದಾರುಣಪಾದಪದ್ಮರಾ
ಜಿತೆ ಘನಸಾಮ್ಯನಿರ್ಗಳಪಯೋಧರೆ ಪೂರ್ಣಹಿಮಪ್ರಭಾಸ್ಯೆ ರಾ
ಜಿತ ಮಹಿಕಾಂತೆ ಮಾಸದ ವಿಲಾಸಮೆ ಮೆಯ್ಸಿರಿಯಾದ ದೇವಿ ತಾಂ
ಋತುಮತಿಯಪ್ಪುದಚ್ಚರಿಯೆ ವತ್ಸರಲಕ್ಷ್ಮಿಯೊಲಿರ್ಪ ದೂಸಱಿಂ ೭೮

ತರುಣಿಗೆ ಮಾಸಿದಂಗಲತೆ ಸೂಸಿದಕುಂತಳಮೊಯ್ಯನೊಯ್ಯನೋ
ಸರಿಸುವ ಭಂಗಿ ಕೈಯ ಸೆಳೆ ಬಾಡಿದ ಪೂಮುಡಿ ಶೂನ್ಯರೀತಿ ಸೌಂ
ದರತರಮಂಗದೊಳ್ ಸೊವಡು ಜಾಡ್ಯದ ಮೆಯ್ ಕಡುಲಜ್ಜೆ ಕಜ್ಜಲಂ
ಪರೆದಲರ್ಗಂಗಳೆಂಬಿನಿತು ಪೇೞವೆ ಮಾಣಿಕಮಾಂತ ಭಾವಮಂ ೭೯

ತೊಡೆಯುಗುರೊತ್ತಿಱಂಕಿ ನಡೆವುತ್ತಡಿವಜ್ಜೆಯ ಸಿಂದಿಡುತ್ತೆ ಸೋ
ರ್ಮುಡಿಯ ತೊಡಂಕಿಸುತ್ತೆ ಕರದೊಳ್ ಸೆಳೆಯಂ ಪಿಡಿವುತ್ತೆ ತೊಟ್ಟ ಪೈ
ದೊಡವನಿವಾರಿಸುತ್ತ ರುಧಿರಾಂಬುವಿನಂಕಮ ಸೂಚಿಸುತ್ತ ಸೊಂ
ಪಡಗಿರಲೆಯ್ದೆ ಪುಷ್ಪವತಿಯಾದವಳೊಪ್ಪಿದಳೊಂದು ಚೆಲ್ವಿನಿಂ ೮೦

ದುಂಡಿಸಿ ಬಿಂಕದಿಂ ಬಿಗಿದ ಪೆರ್ಮೊಲೆಗಳ್ ಮಱುದುಂಬಿವಿಂಡು ಮುಂ
ಕೊಂಡು ಮರಳ್ದ ಮೆಯ್ಯ ಸೊವಡುಣ್ಮುವ ಲಜ್ಜೆ ದರಸ್ಮಿತಂ ಮನಂ
ಗೊಂಡಿರಲೊಯ್ಯನೋಸರಿಪ ಪೆಂಡಿರಮಾಣಿಕಮುಂದು ಮಾಣಿಕಂ
ಗಂಡ ಬೆಡಂಗು ಜೇಱುೞಲವಸಿತ್ತುದು ಕಣ್ಗೆ ಕಲಾವಿಲಾಸನಾ ೮೧

ಮಿಱುಗುವ ಮಿಂಚಿನೋಲೆ ಸುಲಿಪಲ್ ನಸುಗೆಂಪಿನ ಸೀರೆ ಮೇಲುದಂ
ಪೊಱಮಡುವಂತೆ ಪೊಂಗಿದ ಕುಚಂ ತೊಡಹಂದೊಡೆದಂದಮಾದ ಪೈ
ಮಿಱುಮಿಱುಗೊಂಬ ತುಂಬಿಗುರುಳೊಪ್ಪಿರೆ ಪುಷ್ಪಿತೆಯಾಗಿ ಮುಂದೆ ನಿಂ
ದೞಿಯಳನಾಸೆವಟ್ಟುದು ಮನಂ ಕವಿರಾಜಕಲಾವಿಲಾಸನಾ ೮೨

ಎಸೆವ ಬೞಲ್ಮೊಗಮುಷ್ಣವ
ನುಸಿರ್ವುಸಿರನುರಾಗವೇಱುವಕ್ಷಿದ್ವಿತಯಂ
ಪೊಸಕಂಪನುಗುೞ್ವ ಕಕ್ಷಂ
ನಸು ಕೊರಗುವ ತನು ಮನೋಹರಂ ನಾಯಕಿಯಾ ೮೩

(ಗಿರಿಜಾಕಲ್ಯಾಣಂ ೩-೨೧)

ಸೆಡೆವ ನಡೆ ತೊಡೆಯ ತಡೆಗಾಲ್
ಸಡುವಿಂಗತಿಗಾಢದುಡಿಗೆ ಜಡತನು ಸೋಂಕಿಂ
ಗೆಡೆಗುಡದ ಮನಂ ಮಾತಂ
ನುಡಗುವ ಪರಿ ಸೊಗಯಿಸಿತ್ತು ಪಂಕಜಮುಖಿಯೊಳ್ ೮೪

(ಗಿರಿಜಾಕಲ್ಯಾಣಂ ೩-೨೨)

ಮುಟ್ಟಲ್ ಪಡೆಯದ ಬೆಮರಂ
ಬಿಟ್ಟಂ ನಡೆನೋಡಿ ಮದನತಾಪದಿನೋಪಳ್
ಮಿಟ್ಟನೆ ಮಿಡುಕದೆ ಮನದೊಳ್
ಕಿಟ್ಟಳದೊಳಮಿರ್ದೊಡಂದು ಮಿಂದವೊಲಧಿಪಂ ೮೫

(ಲೀಲಾವತಿ ೭-೫೩)

ಮಾನಿನಿಯೀ ತೆಱದಿಂ ಸಂ
ದಾ ನಾಲ್ಕುಂ ದಿವಸಮಿರ್ದು ಬೞಿಯಿಂ ಶುದ್ಧ
ಸ್ನಾನಾಂಗೀಕೃತ ವಿಮಳ
ಶ್ರೀನಿಧಿ ಮೇನಾಲತಾಂಗಿ [1]ಕಣ್ಗೆಸೆದಿರ್ದಳ್[1] ೮೬

(ಗಿರಿಜಾಕಲ್ಯಾಣಂ, ೩-೨೩)

ಸುಲಿಪಲ್ ಬಿಂಬಾಧರಂ ರಾಜಿಪನಯನ ಯುಗಂ ಚಂಪಕಾನಾಸಿಕಂ ಸಿ
ರ್ಪ್ಪಲ ವಕ್ತ್ರಂ ಶ್ರೀಲಲಾಟಮುಂ ಸುರಚಿರವರ ವಕ್ಷೋಜ[2]ಯು[2]ಕ್ತಾಂಗ ರಾಗಂ
ವಿಲಸತ್ಕಕ್ಷಾಂತದೊಳ್ ಪೂಸಿದ ಮೃಗಮದಮುದ್ಯದ್ದುಕೂಲಂ ಪ್ರಸೂನೋ
ಜ್ವಲಧಮ್ಮಿಲ್ಲಂ ಸರಾಗಂ ನೆಱೆಯೆ ನಿಜಪತಿಧ್ಯಾನದೊಳ್ ಮೇನೆಯಿರ್ದಳ್ ೮೭

(ಗಿರಿಜಾಕಲ್ಯಾಣಂ ೩-೨೫)

ಅಗ್ಗದ ರಾಜಹಂಸೆಗಳ ಯಾನಮನಲ್ಲದೆ ಕಾಯಕಾಂತಿಯುಂ
ಸುಗ್ಗಿಯ ತೋರಮಲ್ಲಿಗೆಯ ಗಂಧಮನಲ್ಲದೆ ಮೆಯ್ಯ ಬೆಳ್ಪುಮಂ
ಸಗ್ಗದ ಸಾರಮುಪ್ಪಮುರ್ದಿನಿಂಪುಮನಲ್ಲದೆ ನಿರ್ಮಲತ್ವಮುಂ
ಬಗ್ಗಿಸಿಕೊಂಡವೋಲೆಸೆದುದಂಗನೆಗಾ ಧವಳಪ್ರಸಾಧನಂ ೮೮

(ಲೀಲಾವತಿ, ೭-೫೪)

---

[1]ಯೊಪ್ಪುತಿರ್ದಳ್(ಸ) [2]ವು(ಸ)

ಸೊಗಯಿಸುವಚ್ಚ ಬೆಳ್ನಗೆಯ ತಾಯ್ಗೆಱು ಕಾಮನ ಕೀರ್ತಿ ಚಂದ್ರಲೇ
ಖೆಗೆ ಪರಮಂ ಸುಧಾರಸಮನಿತ್ತಧಿದೇವತೆ ತನ್ನ ಕಣ್ಣ ಬೆ
ಳ್ಪಿಗಳೆನೆ ಬೇಱಿತ ಬೆಳ್ಪಸದನಂ ತನಗೆಂಬೊಡೆ ಚೆಲ್ವಿನೇೞ್ಗೆಯಿಂ
ನಗುವುದದೊಂದು ವಿಸ್ಮಯಮೆ ವಿಭ್ರಮಲೇಖೆ ಮೃಣಾಳಲೇಖೆಯಂ ೮೯

(ಲೀಲಾವತಿ, ೭-೫೫)

ಸುದತಿಯ ದಿವ್ಯಗಂಧತನುಚಂದನ [1]ಶಾಖೆ[1]ಯೊಳಂಗಜಾಹಿಯಿ
ಕ್ಕಿದ [2]ಪೊ[2]ರೆಯಂತಿರುಟ್ಟದುಗುಲಂ ಕುಚಕೋಕಯುಗಂಗಳಡ್ಡಕ
[3]ಟ್ಟಿ[3]ದ ಬಿಸದಂತೆ ಹಾರಲತೆ ಕಣ್ಗೆ ಕರಂ ಸುಲಿಪಲ್ಲ [4]ಪಂಕ್ತಿ[4]ಯೊ
ಪ್ಪಿದುದು ಸುಧಾಂಶುಬಿಂಬವೆಳಮುತ್ತನೆ ಮುಕ್ಕುಳಿಸಿರ್ದುದೆಂಬಿನಂ ೯೦

(ಅರ್ಧನೇಮಿಪುರಾಣಂ ೨-೧೫)

ಕಡೆದನೊ ಚಂದ್ರನೀ ರಮಣಿಯಂ ಮದನಂ ಬಿಸಕಾಂಡಗರ್ಭದಿಂ
ಪಡೆದನೊ ಪದ್ಮಗರ್ಭನೆನೆ ಭೂಷಣವಸ್ತ್ರವಿಲೇಪನಾದಿಗಳ್
ಪಡೆಯೆ ವಿಲಾಸಮಂ ದಶನಸಂತತಿಯಿಂ ದರಹಾಸಲಕ್ಷ್ಮಿ ನೂ
ರ್ಮಡಿಸಿ ಬೆಡಂಗುವೆತ್ತುದು ನರೇಂದ್ರವರೂಥವರಪ್ರಸಾಧನಂ ೯೧

ಇಂಪು ಕುಲಾಧಿದೇವತೆ ಮನೋಹರೆ ನಿರ್ಮಲಪೂರ್ಣಚಂದ್ರಿಕಾ
ಚಂದನದಣ್ಪು........ತಾರಕಸಂಕುಳ ಪುಷ್ಪಮಾಲಿಕಾ
ಸ್ಪಂದದ ಮಧ್ಯ ಪುಷ್ಪಧವಳಾಂಬರಮಂ ಮನವೊಲ್ದು ತಾಳ್ದದೇಂ
ಬಂದಳೆನಲ್ಕೆ ಬೆಳ್ಪಸದನಂ ಮೆಱೆದಿರ್ದುದು ತಲ್ಲತಾಂಗಿಯಾ ೯೨

ನಿಸುಪಮುಕೂಲ[5]ಚೇಲಮುಡೆ[5] ಚಂದನಕರ್ದಮದಣ್ಪು ಮಲ್ಲಿಕಾ
ಕುಸುಮಮನಾಂತ ಕುಂತಳಭರಂ ಸುಲಿಪಲ್ಗಳ ಕಾಂತಿಯಿಂ ಬೆಳ
ರ್ತೆಸೆವಧರಂ [6]ವಿರಾಜಿಸುವ[6] ಮುತ್ತಿನ ಪಚ್ಚವಸಂಗಕೀರ್ತಿಯಂ
ಪಸರಿಸಿಕೊಂಡ [7]ಬೆಳ್ಪಸನಮೇಂ[7] ಬಗೆಗೊಂ[8]ಡು[8]ದೊ ಕೋಮಲಾಂಗಿಯಾ ೯೩

(ಜಗನ್ನಾಥವಿಜಯಂ ೨-೭೧ ಸೂಕ್ತಿ ೭-೩೦)

ಇದು ಚಿತ್ರಂ ನಿಜ ಶೋಭೆಯೊಳೆ ತಾರಾಧೀಶನಂ ಗೆಲ್ದುದ
ಲ್ಲದೆ ತತ್ತಾರಕ ಚಂದ್ರಿಕೋಜ್ವಲಮುಮಂ ಮುಕ್ತಾಫಲಾಲಂಕೃತಾ
ಘದುಕೂಲಂಗಳನೇಕೆ ಗೆಲ್ದಪಳೆನಲ್ ತನ್ವಂಗಿಗಂ ಚೆಲ್ವವೀ
ಱಿದುದೋ ಮುತ್ತಿನ ಪಚ್ಚಮುಂ ದುಗುಲಮುಂ ಮಾಂಗಲ್ಯ ಶೃಂಗಾರದೊಳ್ ೯೪

---

[1]ಶೋಭೆ(ಸ) [2]ಹ(ಅ) [3]ಚಿರ್(ಅ) [4]ಕಾಂತಿ(ಸ) [5]ದುಳ್ಳುಡುಗೆ(ಸೂ) [6]ತಳ
ತ್ತಳಿಪ(ಸೂ) [7]ಬೆಳ್ವಸದನಂ(ಸೂ) [8]ದು(ಸೂ)

ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ
ಪೊಳೆವಲರ್ಗಣ್ಣ ಸುಣ್ಣದಿರ್ಗಳಿಂ ತಿಸರಂಗಳ ನೀಳ ಥಾಳದಿಂ
ಬಳಿಸೆದಿರ್ಪ ಸೆಳ್ಳುಗುರ ಪೆಯ್ವೆಳಗಿಂ ಮಿಗೆ ಪೆರ್ಚುವೆತ್ತು ಕಂ
ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ ೯೫

ಕುಂಜರದಂತದಿಂದೆಸೆವ ಮಂಚದೊಳೊಪ್ಪುವ ಹಂಸತೂಳತ
ಳ್ಪಂ ಜಿತಚಂದ್ರಿಕಾಪಟಲಮೆಂದೆನೆ ಚಿತ್ರವಿತಾನದೇಳಿಗೆಯಿಂ
ರಂಜಿಸೆ ಶಂಖದಿಂದೊರೆದ ಭಿತ್ತಿ ಸುಮೌಕ್ತಿಕದರ್ಪಣಂಗಳೊ
ಳ್ಪಿಂ ಜಿನವಕ್ತ್ರಮಂ ಬೆಳಗಲೇಂ ಮೆಱೆದಿರ್ದುದೊ ಸೆಜ್ಜೆಯಾಲಯಂ ೯೬

ಇರೆ ಕುಸುಮಮಾಲೆಯಲ್ಲಿಗೆ
ವರ ಮಧುಕರನೆಯ್ದಿ ಬರ್ಪ ತೆಱದಿಂ ಬಂದಂ
ಧರಣೀಶಂ ಸ್ಮರರಾಗಾ
ತುರಭರಿತಂ ರತಾರ್ಥಿ ಮೂರ್ತಿವಿಳಾಸಂ ೯೭

ಪೂವಿನ ಬಿಲ್ಲನೈಸರಲನಾವೆಡೆಯೊಳ್ ಮಡಗಿಟ್ಟು ಬಂದನೀ
ಭಾವಜನೆಂಬ ಕೌತುಕದಿನೋತು ಸಖೀಜನಮೆಟ್ಟಿ ದೂರದಿಂ
ಭಾವಿಸೆ ಮಂದಸಂಚರಣಚಾಲಿತಕುಂಡಲನೆಯ್ದಿ ಬಂದನಾ
ದೇವಿಯರಿರ್ದ ತಾಣಕರಸಂ ಸರಸಪ್ರಣಯಾನುರಾಗದಿಂ ೯೮

ಉಗುರ್ಗಳ ನೀಳ್ದ ನುಣ್ಪೆಳಗು ಬಾಲಮೃಣಾಳಮನೀಯೆ ಮುತ್ತುವಂ
ಬಗೆ ಕಡುಬೆಳ್ಪ ಪೆಲ್ಲಡಿಯ ಕೆಂಬೆಳಪೊಂದಿದ ಚೆನ್ನ ತನ್ನ ಪಾ
ವುಗೆ ಪಳುಕಲ್ತು ಮಾಣಿಕದವೆಂಬ ನೆಗಳ್ತೆಯನಿಟ್ಟು ಪಜ್ಜೆ ಪ
ಜ್ಜೆಗೆ ಮಣಿನೂಪುರಂ ನೆಗಳೆ ಬಾಲಕಿ ಬಂದಳದೊಂದು ಲೀಲೆಯಿಂ ೯೯

ಲವಲವಿಸುವ ನೋಟಂ ಕೆ
ತ್ತುವ ತೋಳ್ ಕಂಪಿಸುವ ಹಸ್ತವೊಗೆವ ಬೆಮರ್ ಪೊ
ಣ್ಮುವ ಪುಳಕ ತೀವಿದಶ್ರುಗ
ಳವತರಿಸುವ ಗದ್ಗದಂ ಮನೋಹರಮಾಗಳ್ ೧೦೦

ಅಗಿಲುರೆ ಪಾಟಲೀಕುಸುಮಮಬ್ಜದಳಾಯುತ ಚೂತಪೂಗ ಮ
ಲ್ಲಿಗೆಯ ದಶಾಂಗಧೂಪದ ಮದಾಳಿಯ ಪೈರಿಯೆನಿಪ್ಪ ನಾಗಸಂ
ಪಗೆಯ ಪೊದಟ್ಟಿ ಕಸ್ತುರಿಯ ಸಾದು ಜವಾದಿ ಹಿಮಂಗಳಂದದಿಂ
ಮಘಮಘಿಸುತ್ತಿರ್ದೆಂ ನಿಜಾಯಮರ್ಚಿದುದಾ ಶತಪತ್ರನೇತ್ರೆಯಾ ೧೦೧

ಸುರತಾಸಕ್ತಂ ನಿಜೇಶಂ ಪಿಡಿದು ನಿಱಿಯನುರ್ಚಲ್ ಸರೋಜಾಕ್ಷಿ ಲಜ್ಜಾ
ಭರದಿಂ ತಾಂ ಮುಚ್ಚೆ ಕಯ್ಯೊಳ್ ಪೊಳೆವ ನಖಮಯೂಖಂ ಫಣಾರತ್ನಮೆಂಬಂ
ತಿರೆ ಕಾಮಂ ಕಾಪುಗೊಟ್ಟೀ ಮದನನಿಧಿಗೆ ಪಂಚಮೋಗ್ರಾಹಿಯೆಂದೆಂ
ಬಿರವಂ ಪೋಲ್ತಿರ್ದುದಾ ಕೋಮಲೆಯ ಕರಿಕಲಾಕಾರಮುಪ್ಪಾ ಕರಾಗ್ರಂ ೧೦೨

ಬಳಸುವ ಜೈವ ಬಗ್ಗಿಸುವ ಜತ್ತುವ ಬಾಯ್ದೆರೆನುಂಗುವಂತಿರ
ವ್ವಳಿಸುವ ಮುದ್ದುಗೈವ ಮಗುೞ್ಚುತ್ತುವ ಬೆಂಗೊಗೆವಕ್ಷಿಕಂಕಣಂ
ಗಳ ರುತಿಯುಣ್ಮೆ ಪಾಯ್ದುಗುವ ನಾಣೆಡೆಗೆಯ್ದುವ ಹಸ್ತಶಾಖೆ ಕಂ
ಟಳಿಸುವ ಗಂಡುಗೊಳ್ಪಡರೆ ಜರ್ಬುವ ಪುರ್ಬೆಸೆಯಲ್ಕೆ ಕೂಡಿದರ್ ೧೦೩

ಬರೆತೆಗೆದಪ್ಪಿಯಪ್ಪಿ ಮುದದಿಂ ಮೊಗದೊಳ್ ಮೊಗಮಿಕ್ಕಲಿಕ್ಕಿ ಸು
ಯ್ಯೆರಲೆಡೆಯಾಡೆ ಜಿಹ್ವೆ ನಲಿದಾಡೆ ಸುಖಂ ಸುಱಿದಾಡೆ ಲೀಲೆ ಮೋ
ಹರಿಸೆ ಗಳಂ ಚಮತ್ಕರಿಸೆ ಗದ್ಗದವಾಂತಿರೆ ಕಂಪನಂ ಕೊನ
ರ್ತಿರೆ ಪುಳಕಂ ಸೆಗಳ್ತಿರೆ ಪರಸ್ಪರವಾರ್ತದೊಳೊಲ್ದು ಕೂಡಿದರ್ ೧೦೪

ಪ್ರಿಯದಿಂದೆ ಮನಂ ಮನದೊಳ್
ನಯನಂ ನಯನಂಗಳೊಳ್ ಮುಖಂ ಮುಖದೊಳಗಾ
ಸುಯಿ ಸುಯ್ಯೊಳ್ ಕೈ ಕೈಯೊಳ್
ಮೆಯ್ ಮೆಯ್ಯೊಳ್ ಬೆರಸಿ ಕೂಡಿದರ್ ದಂಪತಿಗಳ್ ೧೦೫

ಸುರತಸುಖಂ ತವಿಲಱಿಯದೆ
ಭರದಿಂದಮುರ್ದಪ್ಪಿದಪ್ಪು ಸಡಿಲದೆ ತಮ್ಮೊಳ್
ಬೆರಸಿದ ಸುಯ್ ಬಿಚ್ಚದೆ ಬೇ
ರ್ವರಿದ ಮನಂ ಜೇಱಿ ನೆನೆಯದಿರೆ ನೆರೆದಿರ್ದರ್ ೧೦೬

ಅರಳುತಿರೆ ನಯನಕುಮುದಂ
ಪೊರೆಯೇಱುತ್ತಿರೆ ತನುಪ್ರಭಾಕೌಮುದಿ ಕಾ
ಮರಸಾಬ್ಧಿ ಮಿಕ್ಕು ಮೀಱು
ತ್ತಿರೆ ನೆರೆದರ್ ಭರಿತಸುರತ ಚಂದ್ರೋದಯದೊಳ್ ೧೦೭

ಸ್ಮಿತಧವಳ ಕಮಲವನದೊಳ್
ರತಿರಾಗದಿ ಹಂಸಿ ಹಂಸನಂ ಸೋಂಕುವವೋಲ್
ವಿತತ ಸಿತಶಯನತಳದೊಳ್
ಪತಿಯೊಡನಾ ಕಾಂತೆ ಸುರತಸುಖದಿಂದಿರ್ದಳ್ ೧೦೮

(ಜಗನ್ನಾಥವಿಜಯಂ ೨-೭೫)

ಅಲರ್ಗಣ್ ಬೆಂಡೇಱಿ ರೋಮಾಂಚನದೊಡವಿನಿತುಂ ತಾಱುಥಟ್ಟಾಗೆ ಬಾಯೊಳ್
ಪಲವುಂ ನುಣ್ಮಾತುಗಳ್ ಲಾವುಗೆಯ ಕೊರಳನಲ್ಲಾಡಿದಂತಾಗೆ ಜುಮ್ಮೆಂ
ದೊಲೆದಂಗಂ ತೂಗೆ ಸುಯ್ಲುಂತೊಳಗಿಱಿಯೆ ಗಳಂ ಬೀಗೆ ನಾಣ್ಸೂಸೆ ಕಾಮಂ
ಚಲದಿಂ ಕೈಮಿಕ್ಕಮಳ್ಚಂತ್ರಮನೆ ಕೆಡಪಿದಂತಿರ್ದರುಂ ಮೂರ್ಛೆಪೋದರ್ ೧೦೯
(ಸೂಕ್ತಿಸುಧಾರ್ಣವಂ ೧೪-೭೬)

ಎಡಗಯ್ಯಂ ತಲೆಗಿಂಬಿನೊಳ್ ಮಡಗಿ ವೃತ್ತಂಬೆತ್ತು ಕೆಂಪಪ್ಪ ನು
ಣ್ಮಡಮಂ ವಾಮಪದಾಲಗುಪ್ತದೆಡೆಯೊಳ್ ಸೈತಿಟ್ಟು ಹಸ್ತಾಬ್ಜಮಂ
ಕಡು ಚೆಲ್ವಪ್ಪ ನಿತಂಬದೊಳ್ ನಿಲಿಸಿ ಕಿಂಚಿತ್ ಶ್ವಾಸದಿಂ ಕಂಠದೊಳ್
ತೊಡವಲ್ಲಾಡೆ ಮೃದೂಲತಲ್ಪದೆಡೆಯೊಳ್ ನಿದ್ರಾಂಗಿ ಕಣ್ಗೊಪ್ಪಿದಳ್ ೧೧೦

ಸುರಚಿರಮಾದ ದಂತವಸನಂ ನಸುಕೆತ್ತುವಿನಂ ಸಿತಾಕ್ಷಿ ಸೀ
ಳ್ದರೆಮುಗಿದಿರ್ಪಿನಂ ಕವಪುಮುಂ ಬೆಮರೋಳಿಯನಾಂಪಿನಂ ಕುಚಾಂ
ತರದ ನಿಜೋತ್ತರೀಯವಸನಂ ತೊಲಗಿರ್ಪಿನಮಲ್ಪಮಧ್ಯ ತಾ
ಳ್ದಿರೆ ಮೃದುತಲ್ಪದೊಳ್ ಮೆಱೆದಳಂಗನೆ ಮಂಗಲಮಾದ ನಿದ್ರೆಯಂ ೧೧೧

ಕಳಕಾಂಚೀಮಂಜುಮಂಜೀರಕವಳಯರವಂ ಪೊಣ್ಮೆ ನೇತ್ರಾಂಬುಜಂ ಪಾ
ಟಳಕಾಂತಿಶ್ರೀಯಿನೊಪ್ಪುತ್ತಿರೆ ತನುಲತೆ ಸೌರಭ್ಯಮಂ ಬೀಱಿ ಸೂಸಿ
ರ್ದಳಕಂ ಜೋಲ್ದಿರ್ದ ಬಂಬಲ್ಮುಡಿ ಶಿಥಿಲತೆವೆತ್ತಿರ್ದ ನೀವೀಭರಂ ಕ
ಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳೆ ನಿದ್ರಾಂಗಿ ಶಯ್ಯಾಗ್ರದಿಂದಂ ೧೧೨
(ಜಗನ್ನಾಥವಿಜಯಂ ೨-೭೮)

ಸಾನಂದದಿನೆಚ್ಚಿತ್ತಂ
ಭೂನಾಥಂ ಮಾಣದೆಡೆಯನುರ್ಚುವ ಮದನಾ
ಸ್ತ್ರಾಸೀಕದಿನೆಚ್ಚಿತ್ತಂ
ತಾನೆನೆ ಪ್ಪೆಮುರಿದು ನಿದ್ರೆಯಿಂದೆಚ್ಚಿತ್ತಂ ೧೧೩

ದ್ಯುತಿಧೌತವ್ಯೋಮಚಂಡಾಂಶುವನಮಲಸುಧಾಸೂತಿಯಂ ದರ್ಪದ್ಸೈರಾ
ವತಮಂ ಪ್ರೋದ್ದಾಮಹೇಮಾಚಲಮನಭಿನುತಾಂಭೋಜಮಂ [1]ತುಂ[1]ಗದುತ್ತುಂ
ಗತರಂಗಾಂಭೋಧಿಯಂ ಸತ್ಫ[2]ಳ[2]ಕಳಿತ ಸುರೋರ್ವೀಜಮಂ ಶೈಲಶೃಂಗ
ಸ್ಥಿತ ಗರ್ಜತ್ಸಿಂಹಮಂ ಸ್ವಪ್ನದೊಳತಿಮುದದಿಂ ದೇವಕೀದೇವಿ ಕಂಡಳ್ ೧೧೪
(ಜಗನ್ನಾಥವಿಜಯಂ ೨-೭೬)

---

[1]ತ್ವಂ(ಅ) [2]ಲ(ಅ)

ಮೃಗಲಕ್ಷ್ಮಸಾಮ್ಯ ಮೊಗದಿಂ
ಮೃಗಸನ್ನಿಭನಯನದಿಂದೆ ಪೊಸವೆಳ್ದಿಂಗಳ್
ನಿಗನಿಗನೆ ಮಿಂಚಿ ಮುಂಚುತ
ಲೊಗೆತೆರೆ ನಿಜಪತಿಗೆ ಕಂಡ ಕನಸಂ ಪೇೞ್ದಳ್ ೧೧೫

ಪರಮಾನಂದರಸಾರ್ಣವ
ಪರಿಸರವೃಕ್ಷಮೆ ಕೊನರ್ತುದೆನೆ ವಸುದೇವಂ
ಧರಿಸುತ ಪುಳಕಮನಾ ಶುಭ
ಚರಿತೆಗೆ ತತ್ಫಲಮನಱುಪಲಂದಿಂತೆಂದಂ ೧೧೬

(ಜಗನ್ನಾಥವಿಜಯಂ ೨-೮೨)

ರವಿಯಿಂ ಭಾಸುರಮೂರ್ತಿ ಪೂರ್ಣಶಶಿಯಿಂ ಸದ್ವೃತ್ತನಿಂದ್ರೇಭದಿಂ
ದವನೀಭರ್ತೃ ಸುರಾದ್ರಿಯಿಂ ಸ್ಥಿರತರಂ ಪಂಕೇಜದಿಂ ಶ್ರೀವಧೂ
ಭವನಂ ವಾರಿಧಿಯಿಂದಪಾರಮಹಿಮಂ ಕಲ್ಪದ್ರುವಿಂ ಸತ್ವಗೌ
ರವಯುಕ್ತಂ ಮೃಗರಾಜನಿಂ ಪುರುಷಸಿಂಹಂ ನಂದನಂ ಪುಟ್ಟುಗುಂ ೧೧೭

(ಜಗನ್ನಾಥವಿಜಯಂ ೨-೮೩)

ಜಿನಪಂ ಪೂಜಿಸಿದಕ್ಕಿಮಾಲೆ ಸೊಡರ್ಗಳ್ ಧೂಪಂ ಫಲಂ ದರ್ಪಣಂ
ನನೆ ಗಂಧಂ ದಧಿ ದರ್ಭೆ ಪೂರ್ಣಕಲಶಂ ತುಂಗಧ್ವಜಂ ತೋರಣಂ
ತೆನೆ ಜಾಗಂ ಮಣಿವಿಷ್ಟರಂ ಚಮರಜಂ ಛತ್ರಾಳಿ ಘಂಟಾಘನ
ಧ್ವನಿ ಮುಕ್ತಾಫಲಮಂಟಪಂ ಕುಡುಗೆ ಕಂದರ್ಪಂಗೆ ದೀರ್ಘಾಯುಮಂ ೧೧೮

ದಾಸೇಭಂ ಪುಂಗವಂ ಕೇಸರಿ ಸಿರಿ ಸುಮನೋಮಾಲೆ ಚಂದ್ರಂ ಜಿನೇಂದ್ರಂ
ಮೀನಂ ಕುಂಭಂ ಕೊಳಂ ಪಾಲ್ಗಡಲಿಭರಿಪುಪೀಠಂ ಸುರೋದ್ಯದ್ವಿಮಾನಂ
ಶ್ರೀನಾಗಾವಾಸಮುಚ್ಚತ್ಕಣಿಚಯಮನಲಜ್ವಾಲೆಯೆಂದಿಂತಿವೆಲ್ಲಂ
ಮಾನಾಲಂಕಾರನೊಳ್ ಮಾಡುಗೆ ಜಿನಜನನೀ ಷೋಡಶಸ್ವಪ್ನದೊಳ್ಪಂ ೧೧೯

(ಲೀಲಾವತಿ ೩-೭೫, ಸೂಕ್ತಿ ೯-೮೦)

ಇದು ಕನಸಾಗಿಯುಂ ಕನಸಿನಂದಮಲ್ತಿದು ಕಣ್ಗೆ ಕಾಂತೆಯು
ಲ್ಲದೆ ಪೆಱತಾವುದುಂ ಪೊಳೆಯದೆನ್ನಯ ಚಿತ್ತದೊಳಿನ್ನುಮಾಕೆಯು
ಲ್ಲದೆ ಪೆಱತಾವುದುಂ ಪುಗದು ಮಾಣ್ದಿರ್ದೆಯುಂ ಗುಱಿ ಮಾಡಿದೇಸನ
ಲ್ಲದೆ ಪೆಱತಾವುದುಂ ಬಸಸೆಗಾಣವು ಕಾಮನ ಹಸ್ತಶಾಖೆಗಳ್ ೧೨೦

(ಲೀಲಾವತಿ ೩-೭೨)

ಪ್ರಿಯಮಿನಿಸಿಲ್ಲದೊರ್ವ್ಱ ನೆಗಟಿತ್ತೋಲಗಶಾಖೆಯೊಳೊರ್ವ್ಱ ಚಿತ್ರ ಶಾ
ಲೆಯೊಳಿನಿಸೊರ್ವ್ಱ ಮಂತಣಸಾಲೆಯೊಳೊಂದಿರದೊರ್ವ್ಱ ಚಂದ್ರಶಾ
ಲೆಯೊಳಿನಿಸೊರ್ವ್ಱ ಸಂದ ಸುತಕಾರದ ಶಾಲೆಯೊಳೊರ್ವ್ಱ ನಾಟ್ಯಶಾ
ಲೆಯೊಳಿನಿಸೊರ್ವ್ಱ ಕೇಳಿಗೃಹಶಾಲೆಯೊಳೊರ್ವ್ಱ ವಿನೋದಶಾಲೆಯೊಳ್ ೧೨೧

ಕೊಳಗಳೊಳೊರ್ವ್ಱ ಕೋಡುವೆಳಮಾವಿನ ಜೊಂಪದೊಳೊರ್ವ್ಱ ಜಾದಿಯೊ
ಳ್ಮೆಳೆಗಳೊಳೊರ್ವ್ಱ ತಣ್ಬುಟಿಲೊಳೊರ್ವ್ಱ ತಮಾಳದ ಸಾಲೊಳೊರ್ವ್ಱ ಶೀ
ತಳ ಕದಳೀಗೃಹಾವಳಿಯೊಳೊರ್ವ್ಱ ಕುಳಿರ್ಕೊಳುತಿರ್ಪ ಕೇತಕೀ
ತಳದೊಳದೊರ್ವ್ಱ ಪೊೞ್ತುಗಳೆವಂ ಕವಿತಾಕಳಿಕಾಮ್ರಕೋಕಿಳಂ ೧೨೨

(ಲೀಲಾವತಿ ೪-೧೪)

## ಗರ್ಭವರ್ಣನೆ :—

ವನಿತೆಯ ಗರ್ಭಚಿಹ್ನವತಿಕೌತುಕಮೆಂತೆನೆ ರತ್ನನೂಪುರ
ಧ್ವನಿಗಲಸಿತ್ತು ಮಂದಗತಿಯೊಳ್ ನಡುಕಾಂಚಿಗೆ ಭಿನ್ನವಾದುದಾ
ನನರುಚಿ ಚಂದ್ರನೆಂಬ ಪಣೆಗೊಪ್ಪಿದು ದುಗ್ಧಕುಚಾಗ್ರಮಕ್ಕೆ ಕ
ಪ್ಪನುನಯಮಾದುದಂಗಲತೆ ಕಾಂತಿಯನಾಂತುದು ಸೌಖ್ಯಭಾವದಿಂ ೧೨೪

ಮುಡಿಯ ಭರಕ್ಕುರೋಜದ ಭರಕ್ಕೆ ನಿತಂಬ ಭರಕ್ಕೆ ನಾಡೆ ಮೆ
ಲ್ಲಡಿಯಿಡಲೆತ್ತಲಾಱದೆಯೆ ಮತ್ತಮದಲ್ಲದೆ ಪುಣ್ಯಗರ್ಭದಿಂ
ಕಡು ಪಿರಿದಾದ ಭಾರದೊಳದೆಂತಡಿಯಿಟ್ಟಪಳೆಂತು ನಿಂದಪಳ್
ನುಡಿದಪಳೆಂತು ನೋಡುವಳದೆಂತು ಮನಃಪ್ರಿಯ ನೋಡು ಬಾಲೆಯಂ ೧೨೫

ನೊಲೆಗೆ ವಿಚಿತ್ರಪತ್ರಲತೆ ದುರ್ವಹಮೆಂಬ ವಿಲೋಚನಕ್ಕೆ ಕ
ಜ್ಜಲ ರುಚಿ ಭಾರಮೆಂಬ ತನುಲೇಖೆಗೆ ಚಂದನದಣ್ಪು ಬಿಣ್ಣಿತೆಂ
ಬಲಸಪದಕ್ಕಲಕ್ತಕರಸಂ ಪೊರೆಯೆಂಬಿನಿತೊಂದು ಚಿತ್ರಮಾ
ಲಲನೆಗೆ ದೇವಕೀವನಿತೆಗಾದುದು ಕೃಷ್ಣನ ಗರ್ಭದೇಟಿತ್ತೆಯೊಳ್ ೧೨೬

(ಜಗನ್ನಾಥವಿಜಯಂ ೨-೯೯)

ಅಸಿತಪಯೋಧರಾನನಮುಪಾತ್ತ ವಿಜೃಂಭಮುಖಾಂಬುಜಂ ಸಮು
ಲ್ಲಸಿತ ಜಡತ್ವಮುಚ್ಛ್ವಸಿತ ಬಂಧುರಗಂಧಸಮೀರಣಂ ಮನ
ಕ್ಕೆಸೆದುದು ಕಾರುಮಂ ಪೊಸ ಬಸಂತನುಮಂ ನೆಱೆ ಪೋಲ್ತು ಪೋಲ್ತು ಭಾ
ವಿಸೆ ಮದನನ್ಮರಾಳಮೃದುಯಾನೆಯ ನಿರ್ಭರಗರ್ಭವಿಭ್ರಮಂ ೧೨೬

(ಚಂದ್ರಪ್ರಭಪುರಾಣಂ, ೩-೮೮)

ಸೆಳೆನಡುವನುಡಿವ ಭರದಿಂ
ಬಳೆವಂತಿರೆ ಬಳೆಯೆ ಮೊಲೆಗಳವಱತೂಳ್ ಚಲದಿಂ
ಬಳೆವಂತು ಬಳೆಯೆ ನಡುವು
ಮ್ಮಳಿಸಿದವೊಲ್ ಕರ್ಗಿಕೊಂಡವವಱ ಮೊಗಂಗಳ್ ೧೨೮
(ಲೀಲಾವತಿ, ೭-೬೩)

ಪ್ರಿಯನ ಮೊಗಕ್ಕೆ ನಾಣ್ಚಿಯೆ ಬೆಳರ್ತವೊಲಾಯ್ತು ಮುಖೇಂದು ಮುಗ್ಧೆ ಮುಂ
ಬಯಕೆಯೊಳಪ್ಪಲೀಯದಿರೆ ಕಾಯ್ದಿನಿಯಂ ಕುದಿವಂತೆ ಕಯ್ಯ ಬೆಂ
ಕೆಯೊಳೆ ಕರಗಿದಂತೆಸೆದುದುತ್ಕುಚ ಚೂಚುಕಮೊಳ್ಪುಸಿರ್ಗೆ ಪೆ
ರ್ಮೆಯನಿಡೆ ಗರ್ಭಶೋಭೆ ಮುಳಿದಂತಿರೆ ಪೋಯ್ತು ವಳಿತ್ರಯಂಗಳುಂ ೧೨೯
(ಲೀಲಾವತಿ, ೭-೬೪)

ಎಳನಸಿಱತೂಳ್ ಸುಧಾಂಶುಮುಖಿಗೇನೆಸೆದಿರ್ದುದೊ ಬಂದ ನಂದನಾ
ವಳಿಯೊಳಗಾಡುತಿರ್ಪ ಪೊಸಮಲ್ಲಿಗೆಯುಂ ಮಡಿವಂಗಯಷ್ಟಿಯೊಳ್
ಮಳಯಜವಣ್ಪಸಿಕ್ಕುಪೆಣೆವಕ್ಕಿಯ ಕೇಳಿಯನೊಲ್ದು ನೋಟ್ಪ ಕೋ
ಮಳಕಳವಲ್ಲಕೀರವಮನಾಲಿಸುವೊಂದು ವಿಳಾಸದೋಹಳಂ ೧೩೦
(ಲೀಲಾವತಿ, ೭-೬೫)

ಸುದತಿಯ ಗರ್ಭಚಿಹ್ನಮನದೇವೊಗಟ್ದಪ್ಪುದೊ ಬಾಸೆ ಕಪ್ಪನಾ
ಳ್ದುದು ನಡು ಕೂಡೆ ಪೊಂಗಿದುದು ಬೀಗಿದುದುರ್ಬಿ ಕುಚಂ ಮೊಗಂ ಬೆಳ
ರ್ತುದು ವಳಿ ಪಿಂಗಿಪೋಯ್ತು ನಯಮೇಱದುದಂಗಪಲಾಕೆ ಗುಜ್ಜುಗೊಂ
ಡುದು ನಡೆ ಪೆಲ್ಪುಗೊಂಡುದು ಸರಂ ಕುಡಿಗೊಂಡುದು ಕುಂತಳೋತ್ಕರಂ ೧೩೧
(ಜಗನ್ನಾಥವಿಜಯಂ ೨-೯೬, ಸೂಕ್ತಿಸುಧಾರ್ಣವಂ, ೭-೫೪)

ಲಾಲಿತಮಾಗೆ ತನ್ನ ನಡೆ[1]ಯುಂ ನಡೆಯಲ್ತಡವಪ್ಪ[1] ಕೇಳಿ ಹಂ
ಸಾಳಿಯ ಬೆನ್ನೊಳೆಯ್ದೆ ನಡೆಯಲ್ ಬಸಮಲ್ಲದೆ ನಿಂದು ಕೈಗಳಂ
ಲೀಲೆಯನಾಂತು ರಾಗರಸಪೊಟ್ಟಳಿಯಾದವೊಲೆಟ್ದು[2] ಗರ್ಭ[3]ಭಾ
[3]ರಾಲಸೆ ಗುಜ್ಜುಗೊಂಡು ನಡೆವಳ್ ಮಿಗೆ ದೇವಕಿಗರ್ಭದುರ್ಬಿನೊಳ್[3] ೧೩೨
(ಜಗನ್ನಾಥವಿಜಯಂ, ೨-೯೭)

———

[1]ನಡೆಯಿಂ ನಡೆಗಲ್ತೊಡವರ್ಪ(ಅ) [2]ಮೆಟ್ಟಿ(ಅ) [3]ರಾಳಸದಿಂದವಾದ ಗಮನಾಲಸ
ವೃತ್ತಿಯನೇನನೆಂದಪೆಂ(ಅ)

ವಿಳಸತ್ಪ್ರಭಾಳಿ ಶಶಿಮಂ
ಡಳಮದು ಕುಮುದಾವಭಾಸಿಯೆನೆ ತಿಳಿಗೊಳದೊಳ್
ನೆಲಸುವ ತೆಱದಿಂ ಗರ್ಭಂ
ನೆಲೆಸಿದುದು ವಿಳಾಸವತಿಗೆ ಪುಣ್ಯೋದರದೊಳ್ ೧೩೩

ಅಮಳೋತ್ಪಳನಿಗೆ ಮಧ್ಯದೊ
ಳಮೃತದ್ಯುತಿಬಿಂಬಭಾಸುರಪ್ರತಿಬಿಂಬಂ
ಸಮನಿಪವೊಲುದರದೊಳಗಾ
ರಮಣಿಗೆ ನೆಲಸಿತ್ತು ಹರ್ಷಗರ್ಭಂ ಗರ್ಭಂ ೧೩೪

ಗರ್ಭಸ್ಥನಪ್ಪ ಶೌರ್ಯನ
ನಿರ್ಭರ ಸತ್ವಪ್ರಕಾಶವೀ ಜನನಿಯೊಳಾ
ವಿರ್ಭವಿಸಿದುದೆನೆ ತನುಸಂ
ದರ್ಭಕಗೌರವದಿನೆಸೆದುದಾ ಕೋಮಲೆಯಾ ೧೩೫

(ಜಗನ್ನಾಥವಿಜಯಂ ೨-೮೯)

ಎಳವಯಕೆಯಿಂ ಬೆಳರ್ತಂ
ಗಲೇಱೆ ಕಪ್ಪಡರ್ದು ಬಾಸೆಯಂ ಮಿಗೆ ತಳೆದ
ತ್ರುಳನೀಮಾಲೆಯ ತಿಱುವಂ
ತಳೆದಂಗಜಪುಷ್ಪಚಾಪಮೆನೆ ಬಾಲಕಿಯಾ ೧೩೬

(ಜಗನ್ನಾಥವಿಜಯಂ, ೨-೯೦)

ಉದರಾರ್ಭಕಂಗೆ ಮೇಲೆ
ತ್ರಿದ ಕುಚಯುಗಮೆಂಬ ಪೊನ್ನಿನಮುಳ್ಗೊಡೆಯಂ ತಾ
ಳ್ದಿದ ನೀಲದಂಡಮೆಂಬಂ
ದಡೆ ಸೊಗಯಿಪ ಬಾಸೆ ಭಾಮಿನಿಗೆ ಕರಮೆಸೆಗುಂ ೧೩೭

(ಕಾದಂಬರಿ ಪೂ. ಭಾ. ೪೦೪)

ಸ್ತನದಿಂ ಮುಖದಿಂದೊಪ್ಪುವ
ತನುಭವಲಾಭಕ್ಕೆ ಚಿಂತೆಯಿಂ ಕಂದಿದ ತ
ದ್ವನಿತೆಯ ಹೃದಯದ ಕಾಳಿಕೆ
ಯೆನೆ ಸೊಗಯಿಕುಂ ಮೇಚಕಂ ಕುಚದ ಚೂಚಕದೊಳ್ ೧೩೮

ಆ ದೇವಿಯ ಬಡನಡುವಿನೊ
ಳಾದ ರಸಾಯನವ[1] ದೇಸ[1]ಯಂತಿರೆ ವಳಿಯೇಂ
ಪೋದತ್ತೊ ಕೆಟ್ಟ ನಾಟ್ಗಿರ
ಸಾಪಂತಿರೆ ಮಧ್ಯದೇಶವೇಂ ತೀವಿದುದೋ ೧೩೯

(ಅನಂತನಾಥಪುರಾಣಂ, ೧೨-೭೩)

ಮೇದಿನಿಯ ಭಾರವಸುರರ
ಖೇದಂ ಖಳರೆಸಕವೆಂಬರಿಷ್ಟತ್ರಯಮಿಂ
ಪೋದಪುವೆಂದಱಿಪುವವೋಲ್
ಪೋದವು ಮಧ್ಯದ ವಳಿತ್ರಯಂ ದೇವಕಿಯಾ ೧೪೦

(ಜಗನ್ನಾಥವಿಜಯಂ, ೨-೯೩)

ತೊಳಗುವ ತೆಳ್ಪಸಿಱಿಕೂಳು ಶಿಶು
ಜೆಳೆವಿನಮಭಿಷೇಕವಿಧಿಗೆ ನಿಲಿಸಿದ ನೀಲೋ
ತ್ಪಲವಿಹಿತ ಹೇಮಕಲಶಂ
ಗಳಿವೆನಿಸಿದವಲ್ತೆ ನೀಲಮುಖಕುಚಯುಗಳಂ ೧೪೧

(ಕಾದಂಬರಿ, ಪೂ. ಭಾ, ೪೦೩)

ಘನತೀವ್ರತೇಜನಂ ಮಾ
ನಿನಿ ಗರ್ಭದೊಳಾಂತು ಗೌರವರ್ಣೆನಿಸಿ ಮಧ್ಯಂ
ದಿನರವಿಯ ಮಧ್ಯದೊಳಾಂ
ತು ನಿಂದ ಶರದಭ್ರ[2]ದಂತೆ ಕಂಗೊಳಿಸಿರ್ದಳ್[2] ೧೪೨

(ಜಗನ್ನಾಥವಿಜಯಂ, ೨-೯೪)

ತ್ರಿದಶಾರಿ ಧೂಮಕೇತುವ
ನುದರದೊಳೀ ದೇವಿ ತಳೆದುದರ್ಕೆಪೆ ದೃಷ್ಟಂ
ತದ ಧೂಮಲೇಖೆಯೆನೆ ಕ
ಪ್ಪೊದವಿದ ರೋಮಾಳಿ ರಂಜಿಕುಂ ಕೋಮಲೆಯಾ ೧೪೩

(ಜಗನ್ನಾಥವಿಜಯಂ ೨-೯೧)

---

[1] ಸೇವೆ(ಆ) [2] ದಂತೆವೊಲ್ ಸೊಗಯಿಸಿದಳ್(ಅ)

ತನುತನುವಾದ ಗರ್ಭಿಣಿಗೆ ತತ್ಸಮಯೋಚಿತ ಮಂಗಳಪ್ರಸಾ
ಧನಮೆಸೆದತ್ತು ಕರ್ಪುರದ ಕಂಟಿಕೆ ಬಣ್ಣದ ಸಣ್ಣಮಾಲೆ ತೆಂ
ಗಿನ[1]ದಳದೋ[1]ಲೆ [2]ತಾವರೆ[2]ಯ ನೂಲುಡೆನೂಲ್ ಸಿರಿಖಂಡದಣ್ಪು ಮು
ತ್ತಿನ ತಿಸರಂ ಮೃಣಾಳಿಕೆಯ ಮುದ್ರಿಕೆ ಪೂವಿನ ಪಿಂಡುಗಂಕಣಂ ೧೪೪
(ಪಂಪರಾಮಾಯಣಂ, ೩-೧೦೬, ಮಲ್ಲಿನಾಥಪುರಾಣಂ, ೪-೧೦೮; ಸೂಕ್ತಿ, ೭-೫೩)

ದೊರೆವಡೆದಾ ಕುಮಾರನ ಗರ್ಭದಿನೀ ಮೃಗಲೋಲನೇತ್ರೆ ಭಾ
ಸುರತರ ಚಂದ್ರಬಿಂಬ[3]ದ ಪೊಗಟಿತ್ತ್ರಯ ಗಾಡಿಗೆ[3]ರೂಢಿವೆತ್ತ್ರ ಸಿಂ
ಧುರ ಮೃದುಯಾನೆಯೆಂಬ ಮತಿಗುನ್ನತಿವೆತ್ತತಿ [4]ವೃತ್ತ[4]ಪೀನಪೀ
ವರಕುಚೆಯೆಂಬ ವರ್ಣನಕೆ [5]ತಾ ಪೊ[5]ದಲಾಶ್ರಯಮಾದುದೊಪ್ಪದೇ ೧೪೫
(ಸೂಕ್ತಿಸುಧಾರ್ಣವಂ ೭-೫೬)

ತರಳಮನಾಂತ ಚಂಪಕದಳಂ ಕೃತಿಭಾವಮನಾಂತ ವಸ್ತ್ರ ವಿ
ಸ್ತರಕೃತಿಭಾವ ವಿಕ್ರಮಮನಾಂತ ಲಸನ್ಮತಿ ಗಂಧಮಂ ಮನೋ
ಹರತೆಯನಾಂತ ಚಂದನಘನದ್ಯುತಿಯೆಂಬ ವಿಳಾಸಮುಂ ಸಮು
ದ್ಧರಿಸುವೊಲಾಂತಳಾ ಸತಿ ಮನೋತ್ಸವಮಾಗಿಯತೀವ ಗರ್ಭಮಂ ೧೪೬

ಕ್ಷಿತಿತಳಗರ್ಭಿತಂಬುಧಿ ಮೃಗಾಧಿಪಗರ್ಭಿತ ಮೇರುಮೇಖಲಾ
ಕೃತಿ ಸುರದಂತಿಗರ್ಭಿತ ಸುರಾಪಗೆ ಪೂರ್ವನಗೋತ್ತ್ರಭಾನುಗ
ರ್ಭಿತ ದಿನಲಕ್ಷ್ಮಿ ಪದ್ಮಗರ್ಭಗರ್ಭಿತ ಪದ್ಮಿನಿ ಪೂರ್ಣಚಂದ್ರಗ
ರ್ಭಿತ ವರ ವಾರ್ಧಿವೀಚಿಯೆನೆ ಕಂಗೆಸೆದಳ್ ಲತಾಂಗಿ ಗರ್ಭದಿಂ ೧೪೭

ತ್ರಿವಳಿಯು[6] ಪಿನದ್ಧ[6]ಮಾದುವು
ನವನಾಭಿ ನಿವಾರಿಸಿತ್ತು ಗುಣ್ಪಂ ಕುಚವಾಂ
ತುವು ಕುಡಿಗಪ್ಪಂ ನೋಟಂ
ತವೆ ತಳೆದುದು ನಸು ಬಟಿಲ್ಕೆಯಂ [7]ನಾಯಕಿ[7]ಯಾ ೧೪೮
(ಗಿರಿಜಾಕಲ್ಯಾಣಂ, ೩-೩೭)

ನಡೆ ನಾಡೆ ಮಾಂದ್ಯದೊಳ್ ಪುಗೆ
ಕುಡಿ ಮೂಡಿ ಕವಲ್ತು ಕದಪು ಕಾಂತಿಯನುಗೆ ಮೆ
ಲ್ನುಡಿ ನೀಡೆ ಮೃದು ಮಧುರಮಂ
ನಡು ಸೀಡುಂ ಪೊಂಗೆ ಮೇನೆಗೆಸೆದುದು ಗರ್ಭಂ ೧೪೯
(ಗಿರಿಜಾಕಲ್ಯಾಣಂ, ೩-೩೮)

---

[1] ತಿರುಳೋ(ಸೂ) [2] ಸಣ್ಣನೆ(ಸ) [3] ಮುಖಿಯೆಂಬ ಪೊಗಟಿತ್ತಿಗೆ(ಸೂ) [4] ತೋರ್ಪ(ಸ)
[5] ತಾನೆ(ಸೂ) [6] ವಿಳದ್ಧ(ಸ) [7] ಮೇನಕೆ(ಅ)

ಮಿಗೆ ಬಾಸೆ ಬಣ್ಣವೇಱಿತು
ಸೊಗಯಿಸಿದುದು ಮೊಗರಸಂ ತುೞುಂಕಾಡುತೆ ಮೆ
ಲ್ಲಗೆ ಸೂಸಿತ್ತು ಬೞಿಲ್ಕೆಯ
ಸೊಗೆದುವು [1]ಪೊಸಪೊಸ ಮನೋಹರಂ ನಾಯಕಿಯಾ[1] ೧೫೦

(ಗಿರಿಜಾಕಲ್ಯಾಣಂ, ೩–೩೯)

ಬಸಿಱಿಂದೆನಿಸುವ ಪೊಲದೊಳ್
ಶಿಶುವೆನಿಸುವ ಸಸಿ ಮಡಲ್ತು ಪೊಡಕರಿಸುತ್ತುಂ
ಪಸರಿಸಿ ಪರ್ವಿದವೋಲೆದೆ
ಯ ಸಿರಿಯು ಪಸುರೇಱಿತಂಗನೆಗೆ ಗರ್ಭದೊಳಂ ೧೫೧

ತೊಳಪ ಸರೋಜಗರ್ಭದೊಳಗೊಪ್ಪುವ ಬಾಲ ಮೃಣಾಳಪಿಂಡದಂ
ತಳವಡೆ ಶಾರದಾಭ್ರದೊಳಗಿರ್ಪ ಲಸಚ್ಛಶಿಲೇಖೆಯಂತಿರು
ಜ್ವಳಿಸುವ ಬೀಜದೊಳ್ ಬಳೆವ ಪುಣ್ಯಸುಧಾಲತೆಯಂತೆ ನಾಡೆ ಕಂ
ಗೊಳಿಸಿತು [2]ಗರ್ಭಮೂರ್ಜಿತವಿಶಾಲಸುಖೋದರದಲ್ಲಿ ಬಾಲೆಯಾ[2] ೧೫೨

(ಗಿರಿಜಾಕಲ್ಯಾಣಂ ೩–೩೫)

ಆದುದು ನವಮಾಸಂ ಪು
ಣ್ಯೋದರದೊಳ್ ಪಕ್ವಸಮಯಮಲರ್ದುದು ಸುಪಥಂ
ವೇದಿಸಿದುದು ಸುಮುಹೂರ್ತಂ
ಕಾದಿರ್ದುವು ಭರದೊಳೆಮಗೆತಮಗೆನುತಾಗಳ್ ೧೫೩

(ಗಿರಿಜಾಕಲ್ಯಾಣಂ, ೩–೪೧)

ತೆರೆಮಸೆಗೆ ಕಾಂತಿ ನಾಭೀ
ಸರಸಿಜಮಲ್ಲಾಡೆ ಜೀವಹಂಸಿ ಬೆದಱೆ ಬಂ
ಧುರ[3]ದಿಕ್ಚಕ್ರಂ[3] ನಗುವಂ
ತಿರೆ ಮೇನೆಯ ಗರ್ಭಸರಸಿಯಿಂ ಪೊಱಮಟ್ಟಳ್ ೧೫೪

(ಗಿರಿಜಾಕಲ್ಯಾಣಂ ೩–೪೪)

---

[1]ನವ ನವ ಮನೋರಥಂ ಮೇನಕೆಯಾ(ಅ) [2]ಪುಣ್ಯಗರ್ಭವತಿ ಶೈವ ಸುಖೋದಯದಲ್ಲಿ ಮೇನೆಯಾ(ಅ) [3]ಕುಚ ಚಕ್ರಂ(ಅ)

ಅಲರ್ದ ಸರೋಜದಿಂದಮೊಗೆತರ್ಪ ಲಸತ್ಕಳಹಂಸಿಯಂತೆ ನಿ
ರ್ಮ್ಮಲತರ ಮೇರುವಿಂದೆ ಪೊಱಪೊಣ್ಮುವ ದಿಙ್ಮಣಿಮಾಲೆಯಂತೆ ಸಿ
ಚ್ಛಳ ಪುರುಹೂತ ದಿಙ್ಮುಖದಿನೆಟ್ಟಿರುತಿರ್ಪ ಮೃಗಾಂಕಬಿಂಬದಂ
ತೞವಡೆ ಗೌರಿ ಗರ್ಭದೊಳಗಿಂ ಬರುತೊಪ್ಪಿದಳಂದು ಮೇನೆಯಾ ೧೫೫

(ಗಿರಿಜಾಕಲ್ಯಾಣಂ, ೩-೪೨)

ಮದನನ ಕರ್ಪುನಿಲ್ಗೆ ಮದವೇಱಿ ವಸಂತನ ಸರ್ವಭಾಗ್ಯಸಂ
ಪದ ಪಳಮೇಱಿ ಲೋಕನಯನೋತ್ಪಲರಾಜಿ ವಿಕಾಸಮೇಱಿ ಪೆ
ರ್ಚೊದವಿದ ಮೇನೆ ತತ್ಪತಿಗಳುತ್ಸವ ವಾರಿಧಿ ಮೀಱಿ ಗೌರಿ ತಾ
ನುದಯಿಸಿದಳ್ ಸುಧಾಂಶುಕಳೆ ಪಶ್ಚಿಮಭಾಗದಿ ಪುಟ್ಟಿದಂದದಿಂ ೧೫೬

(ಗಿರಿಜಾಕಲ್ಯಾಣಂ, ೩-೪೭)

ಲತೆಯುಂ ನಂದನಭೂಮಿ ದೀಪಿಕೆಯುನಗ್ನಿಜ್ವಾಲೆ ರತ್ನಾಕರ
ಕ್ಷಿತಿ ಮಾಣಿಕ್ಯಶಲಾಕೆಯುಂ ಪ್ರತಿಭೆ ಕಾವ್ಯಪ್ರೌಢಿಯುಂ ವೀಣೆ ಸಂ
ರುತಿಯುಂ ಪದ್ಮಿನಿಯುಂ ಮಹಾಸರಸಿ ಕಂದರ್ಪಾ[1]ಗ್ನಿ[1]ಯುಂ ಕಾಮದೇ
ವತೆ ಸೊಂಪಿಂ ಪಡೆವಂತೆ ಕಾಂತೆ ಪಡೆದಳ್ ಲೀಲಾವತೀದೇವಿಯುಂ ೧೫೭

(ಲೀಲಾವತಿ, ೭-೬೮)

ಎಳಲತೆಯಂತೆ ಕೋಮಳಿಕೆಯಿಂದೆಳಮಾಣಿಕದಂತೆ ಕಾಂತಿಯಿಂ
ದೆಳಗಿಳಿಯಂತೆ ಸೋಲಿಪ ತೊದಳ್ನುಡಿಯಿಂದೆಳಯಂಚೆಯಂತೆವೋಲ್
ತಳರಡಿಯಿಂ ಮನಂಗೊಳಿಸಿದಂತಿರೆ ಪತ್ತಿಸಿ ತಾಂ ಬೞಿಕ್ಕದೇಂ
[2]ತಳಿದಳೊ ಬರ್ದಿಯಂತೆ ಕಳಕೇಳಿಗೆ ಬಾಲಕಿ ಬಾಲ್ಯಕಾಲಮುಂ[2] ೧೫೮

(ಲೀಲಾವತಿ, ೬-೬೯)

ಜೋಜೋ ಶಂಕರನರ್ಧಮಂ ಕವರ್ದುಕೊಳ್ವತ್ಯಂತ ರೂಪಾನ್ವಿತೇ
ಜೋಜೋ ಸರ್ವಜಗಚ್ಛಿಶುಪ್ರಕರಮಂ ರಕ್ಷಿಪ್ಪ ಮಾತಾಮಹೇ
ಜೋಜೋ ಶೈವ ಸಮುದ್ರವರ್ಧನಕರಪ್ರಖ್ಯಾತಚಂದ್ರಾನನೇ
ಜೋಜೋ ರಕ್ಷಿಸೆನುತ್ತೆ ತೂಗಿ ನಲಿದರ್ ಶರ್ವಾಣಿಯಂ ಜಾಣೆಯರ್ ೧೫೯

(ಗಿರಿಜಾಕಲ್ಯಾಣಂ ೩-೬೯)

---

[1] ಜ್ಞೆ(ಸ) [2] ಕಳಿದಳೊ ಬಟ್ಟಿಯಂತೆ ಕಳಕೇಳಿಕೆ ಬಾಳಿಕೆ ಬಾಲ್ಯಕಾಲಮುಂ(ಅ)

ಉದರದೆ ತೊಟ್ಟಿಲಾಗೆ ಭುವನತ್ರಯಮುಂ ನೆಱೆ ತಾಳ್ದಿ ದೇಹಿವ
ರ್ಗದ ಕೃತಪುಣ್ಯಪಾಪಫಲಮಂ ಸಲೆ ತೂಗುವ ಕರ್ಮಸಾಕ್ಷಿಯುಂ
ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರಚ್ಯುತ ಜೋ ಮಹಾತ್ಮ ಜೋ
ಸದಮಲಬೋಧ ಜೋ ಪರಮ ಜೋ ಹರಿ ಜೋ ಎನುತಂ ಲತಾಂಗಿಯರ್ ೧೬೦

(ಜಗನ್ನಾಥವಿಜಯಂ ೩-೨೮, ಸೂಕ್ತಿ ೭-೭೧)

ಕಂದ ಜೋ[1] ಹರಿ ಜೋ ಪುರಂದರವಂದ್ಯ ಜೋ ಜಗದೀಶ[1] ಜೋ
ಕುಂದಕುಟ್ಮಳ[2]ಹಾಸ[2] ಜೋ ಕಮಲಾಕ್ಷ ಜೋ ಪರಮಾತ್ಮ ಜೋ
[3]ನಂದಗೋಪಕುಮಾರ ಜೋಚ್ಯುತ ಜೋ ಮುಕುಂದನೆ ಕೃಷ್ಣ ಜೋ
ಎಂದು ಪಾಡಿದರಕ್ಕಱಿಂ ನೆರೆದಿಂದ್ರಕಾಂತೆಯರಾಗಳುಂ[3] ೧೬೧

(ಸೂಕ್ತಿಸುಧಾರ್ಣವಂ, ೭-೬೪)

ಜೋ ನಳಿನಾಕ್ಷ ಜೋ ಭುವನವಲ್ಲಭ ಜೋ ನಯನಾಭಿರಾಮ ಜೋ
ಜಾನಕಿಯಾಣ್ಮ ಜೋ ಜನಮನೋಹರ ಜೋ ಜಗದೀಶ್ವರ ಕೃಷ್ಣ ಜೋ
ಜೋ ನರಸಿಂಹ ಬೇಡಬಿದಿರ್ಕೆ ಪೊಲೆ ವಾಲುಮನೀವೆನೆಂದು[4] ಚಂ
ದ್ರಾನನೆ ತೊಟ್ಟಿ[5]ಲೊಳ್ ಪಡಿಸಿ ತೂಗಿದಳೊಲ್ದು ಯಶೋದೆ ಕೃಷ್ಣನಂ[5] ೧೬೨

(ಅರ್ಧನೇಮಿ, ೭-೫೯)

ನೀರದೋತ್ಪಲವರ್ಣನಾಡಿದನಾಡಿದಂ ಕಮಲೇಕ್ಷಣಂ
ಚಾರುಹಾಸವಿಲಾಸನಾಡಿದನಾಡಿದಂ [6]ಸುಭಗಂ ಶುಭಾ[6]
ಕಾರನಾಡಿದನೆಂದು ಗೋಪಿಯರಾಡಿಸುತ್ತಮಿರಲ್ಕೆ ಸಂ
ಸಾರನಾಟಕಸೂತ್ರಧಾರಿ ಮುರಾರಿ ಕೈಪಱಿಗಾಡಿದಂ ೧೬೩

(ಜಗನ್ನಾಥವಿಜಯಂ ೩-೫೪)

ಒದೆದು ಪಾಸಿಕೆಯಂ ಕಡಂಗಿ ಮರಳ್ದು [7]ಮಿ[7]ಳ್ಳಿಱಿಪಾಡು[8]ತಂ[8]
ವದನಮಂ ನೆಱೆ ನೋಡಿದಾಯೆನೆ ನೋಡು[9]ತಂ[9] ದನಿತೋಱು[10]ತಂ[10]
ಪದುಳಮೆತ್ತಿದೊ[11]ಳೊಪ್ಪೆ[11] ಕೈಗಳ ನೀಡಿ ಮೆಲ್ನಗೆವೀಱುತಂ
ಸುದತಿಯರ್ಕಳನಂದು ಮೆಚ್ಚಿಸಿದಂ ಯಶೋದೆಯ ನಂದನಂ ೧೬೪

(ಸೂಕ್ತಿಸುಧಾರ್ಣವಂ ೭-೬೫)

---

[1] ವಸುಪ್ರಾಜ್ಯವರ್ಧನಜೋ ಜೋ ಪುರಂದರನಾಥ ಜೋ [2] ದಂತ(ಸೂ) [3] ಮಂದರಾಗ್ರ ಮಹಾಭಿಷೇಕ ವಿಭೂತಿಸಂಗತಿಸತ್ವ ಜೋಯೆಂದು ಪಾಡಿದರಚ್ಚರಿಂ ನೆರೆದಿಂದುವಕ್ತ್ರೆಯ ಗೀತನಂ(ಸೂ) [4] ಯುಂ ಪಿಡಿ ಹೊಯಿಯೆಂದು(ಅ) [5] ಲಂ ತೊನೆದು ತೂಗುತಮಾಡಿ ಯಶೋದೆ ಪಾಡಿದಳ್(ಅ) [6] ಸುಚರಿತ್ರಲಂ [7] ವ(ಸೂ) [8] ವಂ(ಸೂ) [9] ವಂ(ಸೂ) [10] ಸಂ(ಸೂ) [11] ಡಕ್ಕೆ

ಪರಮಸುಖಾರ್ದ್ರಲೋಚನದಿನೀಕ್ಷಿಸಿ ನಂದನನಂ ಸರೋರುಹೋ
ದರನನಿದಾರ ಮಾಣಿಕವಿದಾರ ನಿದಾನವಿದಾರ ಮುದ್ದಿದಾ
ರರಸನಿದಾರ ಬಲ್ಲಹನಿದಾರ ಕರೀಂದ್ರನಿದಾರ ಸಿಂಹಮೆಂ
ದಿರದಮರ್ದಪ್ಪಿದಳ್ ಪಡೆಸಿನಂ ಮೊಲೆವಾಲ್ ತೊರೆದೆಚ್ಚು ಪಾಯ್ವಿನಂ ೧೬೫

(ಜಗನ್ನಾಥವಿಜಯಂ ೩-೩೯, ಸೂಕ್ತಿ ೭-೬೦)

ಮೂಡುವ ಶೀತದೀಧಿತಿಗೆ ಕಾಲಪಿತಂ ಪ್ರಸವೋತ್ಸವಂಗಳಂ
ಮಾಡುವ ಮಾಟಿಕ್ಕಯಿಂದೆ ಸುರಭೂರುಹದಿಂ ಸೆಗೆದಂಕುರಕ್ಕೆ ಕೊಂ
ಡಾಡಿ ವಸಂತಕಂ ಜನನಕರ್ಮವನೊಪ್ಪಿರೆ ಮಾಡುವಂದದಿಂ
ಮಾಡಿದನಟ್ಕಿಱಿಂದೆ ಗಿರಿರಾಜನ ಜಾತೆಗೆ ಜಾತಕರ್ಮಮಂ ೧೬೬

(ಗಿರಿಜಾಕಲ್ಯಾಣಂ, ೩-೫೬)

ಒಂದಡಿಯಿಟ್ಟು ಹರಿ ಮ
ತ್ತೊಂದಡಿಯೆತ್ತುತಿರಾಗಳುಂ ವಿಕ್ರಮನಾ
ದಂದಿನ ಸಂಸ್ಕಾರಂ ಬಿಡ
ದೆಂದೆನೆ ಬಗೆಗೊಳಿಸಿದಂ ತಳರ್ನಡೆವೆಡೆಯೊಳ್ ೧೬೭

(ಜಗನ್ನಾಥವಿಜಯಂ ೩-೪೨)

ಎಡೆಗಿ[೧]ಡಿ[೧]ದರೆ ಪೊಂಗನಡಿಕೆ
[೨]ಬಿಡೆ ಫಲಿಕೆನೆ [೨]ಗೆಜ್ಜೆ ಮಿಱುಗೆ ದಶನಾಂಶು [೩]ಕುಸುಳ್
ಜಡಿಯೆ ತೊದಳ್ನುಡಿಯು ತಳ
ರ್ನಡೆಯು[೩] ಜಡಂಗಸುರವೈರಿಗಡಿಗಡಿಗೆಸೆಗುಂ ೧೬೮

(ಜಗನ್ನಾಥವಿಜಯಂ ೩-೪೪, ಸೂಕ್ತಿ ೭-೭೬)

ಒಡನೊಡನಾಡಿಗಳ್ ಗಡಣದಿಂ ಬರೆ ಗೆಜ್ಜೆಯ ಸುಜ್ಝಣಂ ಪೊವ
ಬ್ಬಿದೆವಣೆಯಿಂಚರಂ ಸೆಗಟಿತ ಕಣ್ಮಲರ್ಗಳ್ ಪೊಳೆದಾಡೆ ಧೂಳಿ ಮೆ
ಯ್ಗಡರ್ದಿರೆ ಮುಗ್ಧಜಲ್ಪವೊಸಡಂಬಡೆ ರಂಜಿಸೆ ತಾಯ ದಿಟ್ಟಿ ತ
ನ್ನೊಡನೊಡನೆತ್ತಲುಂ ಪರಿವಿನಂ ಪರಿದಾಡಿದ[೪]ನಬ್ಜಲೋಚನಂ[೪] ೧೬೯

(ಜಗನ್ನಾಥವಿಜಯಂ ೩-೫೦)

---

[೧]ಜಿ(ಸೂ,ಅ) [೨]ಯುಂಡೆವಣ ಕಿಱು(ಸೂ) [೩]ವಮುಳ್ನಿಡೆಯುದಳಲ್ ನಡೆಗೊಂಡೊಳ್ನುಡಿಯು(ಸೂ) [೪]ರಾಬಳಾಚ್ಯುತರ್(ಅ)

ಜಲಜಾಕ್ಷಂಗೇನೆಸೆದುದೊ
ಲಲಾಟ ಕಟಿ ಕರ್ಣ ಕಂಠ ಪದ ಕರದೊಳಗರ
ಳೆಲೆಯಿಂ ಮಾಗಾಯಿಂದಂ
ಪುಲಿಯುಗುರಿಂ ಪೊನ್ನ ಗೆಜ್ಜೆಯಿಂ ಕಂಕಣದಿಂ ೧೭೦

ಮಾಣದೆ ಧೂಳಿಕೇಳಿಗೆ ಕಡಂಗುವ ಸಾರ್ಚಿದ ತಾಯ ಜಂಘೆ ನಿ
ಶ್ರೇಣಿಯೊಲಾಗೆ ಪೊಟ್ಟೆ ತೊಡೆಯೇಱುವ ಚಿತ್ರದ ಪಣ್ಣಾಲಂಗಳಂ
ಕಾಣಿಸಿ [೧]ತಂಡೆ[೧]ಯಂ ಬಿಡದೆ ಬೇಡುವ ಕಂಡರ ಹಸ್ತತಾಳಕ
ಲ್ಯಾಣರವಕ್ಕೆ ನರ್ತಿಸುವ ಮುದ್ದುಗಳೊ[೨]ಪ್ಪುಗು ಮಾ ಮುಕುಂದನಾ[೨] ೧೭೧

(ಸೂಕ್ತಿಸುಧಾರ್ಣವಂ, ೭–೬೭)

ವೀಣಾರಂಜಿತ ಮಂಜು
ಕ್ವಾಣಮನಿಬ್ಬಿಕೆಯ್ದುದಲ್ಲಿ ನಿಲ್ಲೆಂಬಿನೆಗಂ
ಕ್ಷೋಣೀಶನ ಕಿವಿಯಂ ಸವಿ
ಗಾಣಿಸಿದುದು ಬಾಲ[೩]ರೊಡನೆ ಕುವರಂಗಾಗಳ್[೩] ೧೭೨

(ಚಂದ್ರಪ್ರಭಪುರಾಣಂ ೩–೧೦೧)

ತರುಣೇಂದು ದಿನಕ್ರಮದಿಂ
ಪರಿವರ್ಧಿಸಿ ವಾರಿನಿಧಿಯನೊದವಿಪ ತೆಱದಿಂ
ಮುರರಿಪು ದಿವಸಕ್ರಮದಿಂ
ಪರಿವರ್ಧಿಸಿ ಜನದ ಮುದಮನೊದವಿಸುತಿರ್ದಂ ೧೭೩

(ಜಗನ್ನಾಥವಿಜಯಂ, ೩–೪೧)

ಆನಂದಮೂರ್ತಿ ಸುಖಲ
ಕ್ಷ್ಮೀನಿಲಯಂ ಸಕಲಸಾರಸರ್ವಸ್ವನೆನಿ
ಪ್ಪಾ ನೀರಜನೇತ್ರನ ಲೀ
ಲಾನುಷ್ಠಿತ ಬಾಲಕೇಳಿ ಬಣ್ಣಿಪೊಡಳವೇ ೧೭೪

(ಜಗನ್ನಾಥವಿಜಯಂ ೩–೫೮)

---

[೧]ದಾದಿ(ಸೂ) [೨]ಪ್ಪಿದುದಾ ಕುಮಾರನೊಳ್(ಸೂ) [೩]ರೋದನೋದಿತನಾದಂ(ಅ)

ಸುರರಾಜೋದ್ಯಾನದೊಳ್ ಕಲ್ಪಕುಜದ ಸಸಿ ದುಗ್ಧಾಬ್ಧಿಯೊಳ್ ನೂತ್ನ ರತ್ನಾಂ
ಕುರಮಾ ಗೋತ್ರಾದ್ರಿಯೊಳ್ ಸಿಂಗದ ಸಿಸು ಬಳೆವೊಂದಂದದಿಂದಾರ್ಪುರ್ ತೇಜ
ಸ್ಫುರಿತಂ ವಿಕ್ರಾಂತಮೆಂಬೀ ಗುಣಮೊಡೆವೆಳೆಯುತ್ತಿರ್ಪಿನಂ[೧] ಶ್ರೀಮುಕುಂದಂ
ವರ ಗೋಪಾ[೧]ವಾಸದೊಳ್ ಶೋಭಿಸುತಿರೆ ಬೆಳೆದಂ [೨]ಶ್ರೀಜಗನ್ನಾಥದೇವಂ[೨] ೧೬೫

(ಚಂದ್ರಪ್ರಭಪುರಾಣಂ ೩–೧೦೩)

ಓರಂತೆ ಮೆಚ್ಚಿದಂ ಕೃತಿ
ಸಾರಂ ಸುತವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೬೬

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾನೂತನ ಪುರಾತನ ಪ್ರಮಾಣ ಸುಕವಿಪುಂಗನ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್ ಕುಮಾರ ವರ್ಣನಂ ಸಪ್ತಮಾಶ್ವಾಸಂ

[೧]ನಂದನಂ ತದ್ಧರಣೀಶಾ(ಅ) [೨]ಭಾರತೀ ಭಾಳನೇತ್ರಂ(ಅ)

# ಚಂದ್ರೋದಯ ವರ್ಣನಂ

ಮೊದಲೊಳ್ ನೇಸಱ ಪಕ್ಕೆ ಕೋಕವಿರಹಂ ಸಂಕೋಚಪದ್ಮಂ ತಮಂ
ಪುದಿದಾ ಸಂಜೆಯ ತೂರ್ಯಮಾ ಕುಲಟೆಯರ್ ತಾರಾಳಿ ದೀಪಂ ಬೞಿ
ಕ್ಕುದಯಂ ಕೆಂಪಳಿ[1]ಗೆಂಪು[1] ಚಂದ್ರಿಕೆ ಚಕೋರಂ ನೈದಿಲಿಂದೂಪಲಂ
ಮದಿರಾಂಡೋಳವಿಹಾರಲೀಲೆಯಿನಿತುಂ ಚಂದ್ರೋದಯಕ್ಕಾಸ್ಪದಂ ೧
(ಸೂಕ್ತಿಸುಧಾರ್ಣವಂ, ೮–೧)

ದಿವಸಕರಾಪಸಾರಣಮೊಳೆಯ್ದಿಸಿ ಬೆನ್ನನೆ ಬರ್ಪ ಪೆರ್ಬಲ
ಕ್ಕವತಮಸಪ್ರ[2]ಚಂಡಚರರಿಕ್ಕಿದ[2] ಸೊಪ್ಪೆನೆ ಬೆಂದುಱುಂಬಿನೊಳ್
ಕವಿವ ಬಿಸಿಲ್ಗಳೇಂ ಮಱಸಲಾರ್ತುವೆ[3]ದೊ[3] ತೀವ್ರಕರಾಭಿಘಾತದಿಂ
ದವನಿಯ ಬೆಂದ ಪುಣ್ಣ ಕಲೆಗಳ್ ಮಿಗೆ ಕೆಂಗಲೆಗಟ್ಟಿದಂದದಿಂ ೨
(ಅನಂತನಾಥಪುರಾಣಂ, ೭–೬೦; ಸೂಕ್ತಿ, ೮–೨)

ಅಂಬುಜದಳನೇತ್ರನ ಪೀ
ತಾಂಬರಮೊಳ್ ಸೆಣಸಿ ಭೀತಿಯಿಂದೋಡಿದುದೀ
ಕೆಂಬಿಸಲೆನೆ ಪಡುನೇಸಱ
ಕೆಂಬಿಸಿಲೆಸೆದತ್ತು ಗಿರಿಕುಚಾಗ್ರಸ್ಥಳದೊಳ್ ೩

ಅರುಣಾಂಶುಗಳಿಂ ಪಶ್ಚಿಮ
ಗಿರಿಕೂಟಮನರ್ಕ ಪೂರ್ವಪಲ್ಲವ ಚಯಮಂ
ನೆರಪೆ ಪಡುನೇಸಱೆಸೆದುದು
ಶರನಿಧಿನಾಥಂಗೆ ಪಿಡಿದ ಮಾಣಿಕಗೊಡೆಯೋಲ್ ೪

ಒದವಿ ಪೊದಟ್ದ ಪಜ್ಜಳಿಪ ತೇಜದ [4]ಕಾಯ್ಪಿನ[4] ಕೈಪೆಯೋಡೆ ಪ
ಣ್ತುದು ಬಿಸಿಲೆಂಬಿಸಂ ಬಿಸಿಲೊಳಾದುದು ಕೆಂಪು ಬೞಿಕ್ಕೆ ಪಾಱಿಪೋ
ದುದು ಬಿಸಿಲಪ್ಪಿದೊಂದರಿಸಿನಕ್ಕೆಣೆಯಾಯ್ತು ಬಿಸಿಲ್ ಬಿಸಿಲ್ಗೊಡ
ರ್ಚಿದ ವಿಹಗಾಳಿಂಬೊಬ್ಬುಳಿಯನೊಬ್ಬುಳಿಗೊಂಡವು ಸೂರ್ಯರಶ್ಮಿಗಳ್ ೫
(ಸೂಕ್ತಿಸುಧಾರ್ಣವಂ ೮–೩)

---

[1]ಳಗಪುರ್(ಸೂ) [2]ಚೂಡಶುಗಳಕ್ಕಿದ(ಸ) [3]ವೊ(ಸ) [4]ಸುಟ್ಟುಱಿ(ಸೂ)

ಇಳೆಯಿಂದಂ ಪೊಂಬಿಸಿಲ್ ಪೈದೆಗೆದು ನಗನಿಕಾಯಾಗ್ರದೊಳ್ ಸಾಂದ್ರಧಾತು
ಸ್ಥಳಿ ಹರ್ಮ್ಯೌಘಾಗ್ರದೊಳ್ ಮಾಣಿಕದ ಶಿಖರಮುದ್ಯಾನ ಮಾಲಾಗ್ರದೊಳ್ ಕೆಂ
ದಳಿರೆಂಬಾಶಂಕೆಯಂ ಮಾೞ್ಪನಮರುಣತೆಯುಂ ಪೆತ್ತು ಚೆಲ್ವಾದುದಸ್ತಾ
ಚಲ[೧]ಶೃಂಗಾರೂಢಮುದ್ಯದ್ಗಗನ ವಿಳಸಿತಾಲಂಬನಂ[೧] ಭಾನುಬಿಂಬಂ

(ಜಗನ್ನಾಥವಿಜಯಂ, ೧೬–೯೩ ಸೂಕ್ತಿ. ೮–೫)

ದಿನಲಕ್ಷ್ಮೀಕಾಂತೆ ಪೈನಿಟ್ಟೞಿಯೆ ಗಗನರಂಗಾಗ್ರದಿಂ ವಾರುಣೀಸೇ
ವನೆಗೆಯ್ತುರ್ಪಲ್ಲಿ ಕಾಲಿಂ ನವಮಣಿಮಯ ಮಂಜೀರಕಂ [೨]ಕಾಣುತಂ[೨] ತೀ
ವಿ ನಿಜಪ್ರದ್ಯೋತದಿಂ ಪಶ್ಚಿಮ ಶಿಖರಿ ಶಿರೋಭಾಗದೊಳ್ ಬಿಟ್ಟುದೆಂಬಂ
ತಿನಬಿಂಬಂ ರಂಜಿಸಿತ್ತಸ್ತಮಯ ಸಮಯದೊಳ್ ಮುಕ್ತಪಾದಾವಲಂಬಂ ೭

(ಕಾದಂಬರಿ, ಪೂ. ಭಾ, ೫೦೭, ಸೂಕ್ತಿಸುಧಾರ್ಣವಂ ೮–೬)

ಕಡುಬಿಸುಪಾಱಿ ಬೆಳ್ಪಣಮೆ ಪಾ[೩]ರ್ದು[೩] ಕರಂ ಕರಮೆಲ್ಲಪಕ್ಕದಿಂ
ದುಡುಗೆ ನಿಜಾಂಗತುಂಗ ಧವಳಾಕೃತಿ ಕಾಸಿದ [೪]ಬೆ[೪]ಟ್ಟನಂತೆ ಕೆಂ
ಪಡರ್ದಿರೆ ತನ್ನ ಮುನ್ನೊಗೆದ ತತ್ತ್ರಿಯ ರೂಪನೆ ಪೋಲ್ತು [೫]ಜಾಜಿನೊಳ್[೫]
ತೊಡರ್ದವೊಲೊಪ್ಪಿದಂ ಗಗನವೃಕ್ಷದ ಪಣ್ಗೆಣೆಯಾಗಿ ಭಾಸ್ಕರಂ ೮

(ಸೂಕ್ತಿಸುಧಾರ್ಣವಂ, ೮–೧೦)

ಬಿಸುಪಿಂದಂ ಸೋಂಕಿ ಬಾೞ್ತ್ನಯ್ದಿಲನೊಣಗಿಸುತುಂ ಮೆಯ್ಯುಸೀಡಾಡಿ ಮೆಯ್ಗಂ
ದಿಸುತುಂ ತಾರಾಪ್ರಸೂನಂಗಳನೆೞಪಿ ನವೀನ ಪ್ರವಾಳಂಗಳಂ ಚಾ
ಡಿಸುತುಂ ಕೈಗುತ್ತಿಕೊಂಡಿಕ್ಕಿಸುತುಮಖಿಳ ತೋಯಂಗಳಂ ತದ್ವಿಯೋಗಾ
ವಸಿತಂ ಬರ್ಪಂತೆ ಬಂದಾಱಿಂದನಪಗತ ಸಂಧ್ಯಾಪ್ರಸಂಗಂ ಪತಂಗಂ ೯

(ಲೀಲಾವತಿ ೧೦–೧೬)

ಅದು ಪೂರ್ವಾಂಗನೆಯಿಡೆ ನೆಗೆ
ದೊಡೆವುತೆ ಬೆಳಬೆಳಗುತೆಯ್ದೆ ಪಶ್ಚಿಮಶೈಲಾ
ಗ್ರದ ಮೇಲೆ ಬೀೞ್ವ ಮಾಣಿ
ಕ್ಯದ ಕಂತುಕದಂತಿರೆಸೆದುದರ್ಕನ ಬಿಂಬಂ ೧೦

---

[೧]ತುಂಗವ್ಯಾಘ್ರಜಂಭಾವೃತ ವದನಮೆನಿಪ್ಪಂದದಿಂ(ಸೂ) [೨]ನುಣ್ಪುವಂ(ಸೂ) ನುಣ್ಚುತಂ(ಅ) [೩]ಱಿ(ಸ) [೪]ಬ(ಸೂ) [೫]ಬೂದಿಯೊಳ್(ಸ)

ಮೂಡಣವಾರ್ಧಿಯೊಳೊಪ್ಪುವ
ಬಾಡಬಶಿಖಿ ಪಶ್ಚಿಮಾಬ್ಧಿಯೌರ್ವಾನಳನಂ
ನೋಡಲ್ ಬಪ್ಪಂತಿರ್ದುದು
ನೀಡುಂ ಕೆಂಪಡರ್ದು ಸಂಜೆಯೊಳು ರವಿಬಿಂಬಂ ೧೧

## ಸೂರ್ಯಾಸ್ತಮಯ

ಎನ್ನಿಂದಂ ದ್ವಿಜರಾಜಸತ್ಕುಲಮಹತ್ತ್ರೇಜಂ ಕರಂಗುಂದಿದ
ತ್ತೆನ್ನಿಂದಂ ಕುಮುದಂ ಮುಸುಳ್ದು ಕೊಱಗಿತ್ತಾ ದೋಷಮಂತಿರ್ಕೆ ಮ
ತ್ತೆನ್ನಿಂ ವಿಷ್ಣುಪದಕ್ಕೆ ಕಾಯ್ಪೊದವಿದತ್ತೆಂದಬ್ಜಿನೀವಲ್ಲಭಂ
ತನ್ನುದ್ಯೋಗದಲೆಯ್ದಿದಂ ತಪಮಿರಲ್ ತತ್ಪಶ್ಚಿಮಾಸ್ತಾದ್ರಿಯಂ ೧೨

ಕಡೆವಗಲೊಳ್ ನಿಜಾಂಗನಳಿರಕ್ತದಿನೊಪ್ಪಿರೆ ಬಲ್ಪುಗೆಟ್ಟು ತೀ
ರ್ಪೊಡೆಗೆಡೆಯಲ್ ತುರಂಗತತಿ ಮುಗ್ಗೆ ಸರೋಜಮುಖಂ ನಿರೋಧಮಂ
ಪಡೆದಿರೆ ಮಂಡಲಾಗ್ರಕರದುಗ್ರತೆಗುಂದಿರೆ ರಾಜಹಂಸನಂ
ಗೆಡೆಗುಡಲಾರ್ಪನೆಂಬ ಬಗೆಯಿಂ ದಿನನೆಯ್ದಿದನಸ್ತಶೈಲಮಂ ೧೩

ಮೃಗಗಣಮಿರ್ಕೆಯಂ ಖಗಕುಲಂ ಧರಣೀಜದ ಕೋಟರಂಗಳಂ
ಭಗವತಿಯೂರ್ಗಳಂ ವಿಟಜನಂ ಗಣಿಕಾಜನದಾಲಯಂಗಳಂ
ಗಗನಮುಮುರ್ವಿಯಂ ತಿಮಿರಪಕ್ಷಿಗಳಂ ಸುಖನಿದ್ರೆ ಸಾರ್ದಿರಲ್
ಖಗನಪರಾಬ್ಧಿಯಂ ಪಡೆದು ಸಾರ್ದನನಂಗಮನೋಜೆ ಸಾರ್ದಿರಲ್ ೧೪

ಅಸುರರ ನೇತ್ರರೊಳ್ ಪೊರೆದ ಕ್ಷೈದುಗಳಂ ತೊಳೆಯಲ್ ತಗುಳ್ದು ಧೂ
ಪಿಸಿದ ಹಯಂಗಳಂ ಜಲದೊಳಿಕ್ಕಲಿಳಾತಳಮಂ ನಿರಂತರಂ
[1]ಬಿಸಿಗದಿರಿಂದೆ[1] ನೋಯಿಸಿದ ಪಾಪಮನಿಲ್ಲಿಯೆ ನೀಗಲೆಂದು ಬಂ
ದೊಸೆದಪರಾರ್ಣವಕ್ಕೆ ಪರಿವಂತಿನನೆಯ್ದಿದನಸ್ತಶೈಲಮಂ ೧೫

(ಸೂಕ್ತಿಸುಧಾರ್ಣವಂ ೮–೮)

---

[1] ಬಿಸಿಲುಗಳಿಂದೆ(ಸ)

ಕುವಲಯ ಪೀಡೆಯುಂ ಪಡೆದು ಪುಷ್ಪಿತ ಪದ್ಮಿಸಿಗೋತು ಕಾಯ್ಪು ಸಂ
ಭವಿಸಿರೆ ಮಂಡಲಾಗ್ರಕರಮಂ ಕುಲಗೋತ್ರಶಿರಕ್ಕೆ ಸೀಡುತಿ
ರ್ಪವಗುಣದಿಂದಮೆಯ್ದಿದುದಧೋಗತಿಯೆಂದು ವಿರಕ್ತನಾದವೋಲ್
ದಿನಕರನಂಬರಂದೊಱೆದು ಪಶ್ಚಿಮವಾರ್ಧಿಗೆ ಪೆಯ್ಯಸಿಕ್ಕಿದಂ ೧೭

(ಜಗನ್ನಾಥವಿಜಯಂ, ೧೬–೯೪, ಕಾವ್ಯಸಾರಂ ೮೮; ಸೂಕ್ತಿಸುಧಾರ್ಣವಂ ೮–೧೧)

ಖಗತತಿ ಗೂಡನೆಯ್ದೆ ಪೊಣರ್ವಕ್ಕಿಗಳಿರ್ಕೆಯನೆಯ್ದಲಂಬುಜಂ
ದುಗುಡಮನೆಯ್ದಲುತ್ಪಲಿನಿ ಹಾಸ್ಯಮನೆಯ್ದಲೊಱಲ್ದು ಪಾಣ್ಬರೊ
ಯ್ಯಗೆ ನಿಜಸೂಚಿಕಾಗೃಹಮನೆಯ್ದೆ ವಿಯೋಗಿಗಳಂಗಜಾಸ್ತ್ರದ
ಗ್ನಿಗೆ ಗುಱಿಯಾಗಲೆಯ್ದೆ ದಿನನಾಯಕನೆಯ್ದಿದನಸ್ತಶೈಲಮಂ ೧೮

(ಸೂಕ್ತಿಸುಧಾರ್ಣವಂ ೮–೧೧ರ ಅಡಿಟಿಪ್ಪಣಿ)

ಸುಳಿವಳಿ ಪೂತಗೊಂಚಲೊಳಡಂಗೆ ಸುರುಳ್ದು ಮರಾಳಮಂಬುಜಂ
ಗಳ ಮಱೆಯೊಳ್ ಸುಯಿಲ್ಗಱೆಯೆ[1] ಬಗ್ಗಿಸುವಗ್ಗದ[1] ಕೋಕಿಳಾಳಿ ಕೆಂ
ದಳಿರೊಳೆ ದೂರಿಸುತ್ತಿರೆ ಶುಕಾವಳಿ ಪಣ್ಗಳನೊತ್ತುಗೊಂಡು ಕಂ
ಗಳನರೆಮುಚ್ಚಿ ತೂಂಕಡಿಸೆ ಸಾರ್ದ[2]ನಹಃಪತಿ ಪಶ್ಚಿಮಾದ್ರಿಯಂ[2] ೧೯

(ಸೂಕ್ತಿಸುಧಾರ್ಣವಂ ೮–೧೧ ಅಡಿಟಿಪ್ಪಣಿ)

ಘಲಘಲಸೆಂದು ಸಂಜೆವಱೆ ಸಾರೆ ಧರಾತಳದುಷ್ಣವಾಱೆ ಮಾ
ರ್ಮಲೆವಪರಾಬ್ಧಿ ಕೆಂಪು ನಸುದೋಱೆ ಸರೋಜದ ಲಕ್ಷ್ಮಿ ಜಾಱೆ ನೈ
ದಿಲ ಬಳಗಂ ಪೊದಱ್ದು ನಯವೇಱೆ ರಥಾಂಗವಗಲ್ದು ಪಾಱೆ ಕ
ತ್ತಲೆಯ ಸೆಱಂಗುದೋಱೆ ದಿನನಾಯಕನೇಱಿದನಸ್ತಶೈಲಮಂ ೨೦

(ಸೂಕ್ತಿಸುಧಾರ್ಣವಂ ೮–೧೧ ಅಡಿಟಿಪ್ಪಣಿ)

ಮುನಿಹಸ್ತಾಂಬುಜದಿಂದಮರ್ಘ್ಯಜಲಜಾಲಂ ಬೀೞೆ ನೀಲಾಬ್ಜಕಾ
ನನದೊಳ್ ಪಾಯ್ದಳಿ ಬೀೞೆ [3]ಜಾರರೆದೆಯೊಳ್ ರತ್ಯುತ್ಸವಂ[3] ಬೀೞೆ ಪ
ದ್ಮಿನಿ ಬೆಂಬೀೞೆ ಬೞಲ್ದು ಬೀೞ್ವ ಹತಕೋಕಾನೀಕದಿಂದುರ್ಬಿ ಕ
ಣ್ಬನಿಗಳ್ ಭೋರೆನೆ ಬೀೞೆ ಬಿೞ್ದನಪರಾಂಭೋರಾಶಿಯೊಳ್ ಭಾಸ್ಕರಂ ೨೧

(ಲೀಲಾವತಿ ೬–೧೦೫; ಸೂಕ್ತಿಸುಧಾರ್ಣವಂ ೮–೧೫)

---

[1] ಮುಗ್ಗುತಲಗ್ಗದ(ಸ) [2] ದಿನೇಶ್ವರನಸ್ತಶೈಲಮಂ(ಸ) [3] ನಾರಿಸಧಿಯೊಳ್ ತಳ್ತ ಕೃತ್ಯಮುಂ(ಸ)

ರಥಕೊಂದೆ ಗಾಲಿಯುಂ ಸಾ
ರಥಿಯಪ್ಪೊಡೆ ಪೆಳವನಸಮುಪಕ್ಷನುಮೆಂತುಂ
ಪ್ರಥಿತ ಪ್ರತಾಪದಿಂದಂ
ಮಥಿತ ಪ್ರತಿಪಕ್ಷಕುದಯಿಯಾದಂ ದಿನಪಂ ೨೨

(ಕಾವ್ಯಾವಲೋಕನಂ, ೭೫೧)

ಅದಿರೆ ನೆಲನುದಿರೆ ತಾರಗೆ
ಕೆದಱೆ ಸುರರ್ ಬೆದಱೆ ದನುಜರೊದಱೆ ಫಣೀಂದ್ರಂ
ಮದಿಲಡರ್ವ ಭೇಕನಂದದಿ
ಸುವಯತಟಾಗ್ರದಿನುರುಳ್ದನಿನನಂಬುಧಿಯೊಳ್ ೨೩

(ಲೀಲಾವತಿ, ೬-೩)

ಇದು ದಿನರಾತ್ರಿಯೆಂಜೆನಡು ರಾಸಿಯುನಂದಳೆಯಲ್ಕೆ ಬೊಮ್ಮ ಮಾ
ಡಿದ ಘನ ವಿದ್ರುಮಾಢಕಮೊ ಸಂಜೆಯ ನೋಟಿಱ್ಪೊಡೆ ಮೌರ್ವಕಾಂತೆ ಮೇ
ಲುಪಯುಸಿದತ್ತೊ ನೋಡಲರುಣಾಂಗನೆ ಕಟ್ಟಿದ ಕಂಠಸೂತ್ರಮ
ಧ್ಯದ ಪರಳೆಂಬ ಶಂಕೆಗೆಡೆಯಾದುದು ಪಶ್ಚಿಮ ಭಾನುಮಂಡಲಂ ೨೪

ಕುಮುದಿನಿಯಿಟ್ಟ ಶಾಪ ನೆಱೆ ತಾಗಿತೊ ನೊಂದ ಪಗಲ್ಗೆ ಮುಪ್ಪುಬಂ
ದಮರ್ದಪುದೆಂಬ ನೋವೊ ದಿವಮಾನಿನಿಯಂ ಜನರೆಲ್ಲ ನೋಡೆ ಕೂ
ಟಮನೆಸೆವಮಾಡಿದಂನಯಮೊ ಪೇಸದೆ ಮೀಂಗಳ ಪಾದಮೆಲ್ಲಮಂ
ಜಿನುಲತೆಗೆಟ್ಟು ನುಂಗಿದಬಿಲೋಯೆನೆ ಜಾಱಿದನರ್ಕನಬ್ಧಿಯೊಳ್ ೨೫

ಅಂಬರಗಂಗಾತೀರದೊ
ಳೆಂ ಬಿಸದದೊಳಾಡುತಿರ್ದ ಹಂಸಂ ವರುಣದಿ
ಶಾಂಬುಧಿಗೆ ಪಾಱಿದಪುದೆಂ
ದೆಂಬಂತಿನನಪರಜಲಧಿಗೆಯ್ದಿದನಾಗಳ್ ೨೬

ಕಿರಣಸಮೂಹಮನೊಲವಿಂ
ಭರದಿಂ ಪೊಱಗಟ್ಟಿ ಪದೆಪಿನಿಂದಂಬರಮಂ
ಪರಿಹರಿಸಿ ಪಡುವಣಬ್ಧಿಯ
ನರವಿಂದಸಖಂ ವಿಲಾಸದಿಂದಂ ಪಾಯ್ದಂ ೨೭

ದಿವಸಶ್ರೀ ರವಿರತ್ನಕುಂಭದಿನಲಂಪಿಂದೊಲ್ಮೆಯಿಂ ಪಶ್ಚಿಮಾ
ರ್ಣವ ಪಾನೀಯಮನೊಯ್ವೆನೆನ್ನುದಯದಾವಾಸಕ್ಕೆಯೆಂದಲ್ಲಿ ತುಂ
ಬುವ ಪೊತ್ತೊಂದು ಮಹೋಗ್ರಕಾಲಮಕರಂ ತತ್ಕುಂಭಮಂ ಕರ್ಚಿಪೋ
ಯ್ತುವಳಂ ಕೂಡಿಯೆನಲ್ಕೆ ಪಂಕಜಸಖಂ ಪೊಕ್ಕಂ ಪ್ರತೀಚ್ಯಬ್ಧಿಯಂ ೨೮

ಲೋಕಮನೆಲ್ಲಮಂ ಸಲೆ ತೊಳಲ್ದು ಬಳಲ್ದು ವರೂಥಮಂ ಹಯಾ
ನೀಕಮನೊಯ್ದು ಪಂಪಿನಪರಾದ್ರಿಯ ಕುಂಜದೊಳಿಟ್ಟು ಮತ್ತೆ ನಿ
ರ್ವ್ಯಾಕುಳದಿಂ ತದದ್ರಿತಟದೊಳ್ ಸುಖನಿದ್ರೆಯೊಳಿರ್ಪೆನೆಂಬವೋಲ್
ಕೋಕನದಪ್ರಿಯಂ ಪದೆಪಿನಿಂ ಪದೆದೆಯ್ದಿದನಸ್ತಶೈಲಮಂ ೨೯

ಜಲಜಂ ಮುಕುಳಮನೆಯ್ದಲ್
ಕುಲಟಾಂಗನೆಯರ್ ಮನೋನುರಾಗದಿ ನೋಡಲ್
ನಲವಿಂ ಕುಮುದಿನಿ ನಸು ನಗೆ
ಪೊಳೆಪಿಂದಪರಾಬ್ಧಿಗೆಯ್ದಿದಂ ದಿನನಾಥಂ ೩೦

ವಿಹಿತಸ್ಥಾನಮೆನಿಪ್ಪ ವಿಷ್ಣುಪದಮಂ ಬಿಟ್ಟೊರ್ಪೋದಲ್ ತದ್ವರಂ
ಮಿಹಿರಂ ಕ್ಷೀಣವಯಸ್ಕನಾಗಿಯುಮಿದೇಂ ರಾಗಾಶ್ರಯಂ ವಾರುಣೀ
ಸ್ಪೃಹೆಯಂ ಮಾಡಿದನೆಂದು ನಾಣ್ಚಿ ತಲೆವಾಗುತ್ತಿರ್ದುದೋ ಪದ್ಮಿನೀ
ಮಹಿಳಾಸಂಕುಳಮೆಂಬಿನಂ ದಿನಕರಂ ಪೊಕ್ಕಂ ಪ್ರತೀಚ್ಯಬ್ಧಿಯಂ ೩೧

ಸವನಳಿನೀವನಂಗಳ ಪರಾಗರಜಂಗಳನುಂಡು ಮುನ್ನವಾಂ
ತವ[೧]ನಿ[೧] ವಿಯತ್ತ್ರಳಭ್ರಮಣವಿಹ್ವಲನಾಗಿ ಬಳಲ್ದು[೨] ಕಾಂಸ್ಯದಂ
ದವೊಲಿರೆ[೨] ಕೆಂಪು ತತ್ಕಮಳಕಾನನಕಂಟಕಲಗ್ನಪಾದನಾ
ದವೊಲುಡುಗುತ್ತ್ರಮಾತ್ಮಕರಮಂ ರವಿ ಪೊರ್ದಿದನಸ್ತಶೈಲಮಂ ೩೨

(ಪಂಪಭಾರತಂ, ೪-೪೬, ಸೂಕ್ತಿಸುಧಾರ್ಣವಂ, ೮-೪)

ಉರವಣಿಯಿಂ ಕಾಲಗಜಂ
ಮುರಿ[೩]ವಾಯ್ದಾದಸ್ತ[೩]ಮೆಂಬ ಚೆಂದೆಂಗಿಂದಂ
ಸರಸಿಜಮಿತ್ರನ ಮಂಡಲ
[೪]ಪರಿಹೃತ ಫಳಮೊಡೆಯೆ[೪] ಬಿಟ್ಟುದಸ್ತಾಂಬುಧಿಯೊಳ್ ೩೩

(ಸೂಕ್ತಿಸುಧಾರ್ಣವಂ, ೮-೧೪)

---

[೧] ಗೆ(ಸೂ) [೨] ಕಾಜುವಂತೆಪೊಲಿರೆ(ಸೂ) ಕಾಂಸದಂಪಪೊಳಿರೆ(ಸೂ-ಕ) ಕಾಂಸವಂಪವೊ
ಲಿರೆ(ಸೂ-ಖ.ಬ) [೩] ವಾಯ್ದುಮಪಸ್ತ(ಸೂ) [೪] ಪರಿಗತ ಫಲಮೋಡಿ(ಸೂ)

ಕೞಿವವದನಾದ ಭಾಸುರವಿಸಿಲ್ ತೆರೆಯಂತಿರೆ ಬಟ್ಟಲಿಟ್ಟು ತಂ
ದಿೞಿಪಿದ ಲೋವೆಯಂತಿರಪರಾಚಲಕೋಟಿ ನಿಶಾತಮಿಸ್ರದೊಳ್
ತೊಳಗುವ ಧೂಳಿ ಸಂಜೆಯೆನೆ ಸಾರ್ದಿರೆ ಪಿಂಬಗಲೆಂಬಲಗ್ನಿಗಂ
[೧]ಸುೞಿಸಿದ[೧] ಬಟ್ಟಲಂತೆ ಮುೞುಗಿತ್ತಪರಾಬ್ಧಿಯೊಳರ್ಕಮಂಡಲಂ ೩೪

(ಅನಂತನಾಥಪುರಾಣಂ, ೭–೬೪; ಸೂಕ್ತಿ, ೮–೧೬)

ಕವಿದವು ಧೇನು ಮುಂ[೨]ದೆ[೨] ತುಱುಗಳ್ ಪೊಲದತ್ತಣಿನೂರ್ಗೆ ಬಾ[೩]ವ[೩]ಲಾ
ದುವು ಪಡುವಣ್ಗೆ ಪಾಱಿದುವು ಗೂಡಿನ ಸಾರ್ಕೆಗೆ ಪಕ್ಕಿ ಕೊಂಬುಗೊಂ
ಡವು ಮೃಗಮೂರ ಪೊರ್ದುಗೆಯ ಬಟ್ಟೆಗೆ [೪]ಮೆಟ್ಟನ ಕಾಯ್ಪಿನಿಂ[೪] ಮರ
ಳ್ದವು ದಿನನಾಯಕಂ ವಸುಣದಿ[೫]ಜ್ಮ್ರು[೫]ಮಂ ಮಱೆಗೊಂಬ ಕಾಲದೊಳ್ ೩೫

ಎನಗಿಂದೀ ಕೃತವಿಪ್ರವೇದಿಗೆ ಜಗನ್ಮಿತ್ರಂಗೆ ಶುದ್ಧಂಗೆ ಪ
ದ್ಮಿನಿಯಂ ತದ್ದಿನವೃಷ್ಟಪುಷ್ಪವತಿಯಂ ಚಾಂಡಾಳಿಕೋಪೇತಶೇ
ಷನವೀನಾಪ್ಪದೆಯಂ ಕರಸ್ಪರುಶನಂಗೆಯ್ದಿರ್ದ ದೋಷಕ್ಕೆ ಮ
ಜ್ಜನವೆಂಬಂತಿರಲೆಯ್ದೆ ಪೊಕ್ಕನಪರಾಂಭೋರಾಶಿಯಂ ಭಾಸ್ಕರಂ ೩೬

ಇನಿಸಂ ಪೊಂಗಾ[೬]ಲಿ[೬] ಮೇಲುಚ್ಚಳಿಸೆ ಹಯಚಯಸ್ಕಂಧಮಂ ತೇರ ಕೋಳಾ
ರ್ವಿನೆಗಂ ಮಾರ್ಕೊಂಡು[೭] ನೇಣಂ ಮಲರೆ [೭]ತೆಗೆವಿನಂ ಸೂತನಶ್ವವ್ರಜಂ ತೊ
ಟ್ಟನೆ ಕೀಲಿಂ ಕರ್ಚಿ ಘೋರೆಂದುರುಳೆವರಿವಿನಂ ಸಾರ್ದನಸ್ತಾದ್ರಿಯಂ ಕಾಂ
ಚಿಸ [೮]ರೋಚಿ[೮]ಷ್ಣು ಪ್ರಭಾಪಿಂಜರಿತ ಕಬಳಿತ[೯]ಜ್ಯೋತಿ[೯]ರಂಗಂ ಪತಂಗಂ ೩೭

(ಸೂಕ್ತಿಸುಧಾರ್ಣವಂ, ೮–೧೨)

ಪೂಡುವ ಕುದುರೆ ಬೆಸಂ ಕೊಂ
ಡೋಡುವ ತೇರ್ಗೊಂದೆ ಗಾಲಿ ಸಾರಥಿ ಪೆಳವಂ
ಕೇಡಿಂಗಲಸಿದೊಡಕ್ಕುಮೆ
ನೋಡೆನುತಿನ ಕೆಡೆದನಸ್ತಗಿರಿ ಮಸ್ತಕದೊಳ್ ೩೮

(ಲೀಲಾ ೧೦–೧೩, ಅರ್ಧನೇಮಿ ೫–೧೪, ಸೂಕ್ತಿ, ೮–೧೩)

---

[೧]ಘುೞಿಗೆಯ(ಸ.ಅ) [೨]ಚೆ(ಸೂ) [೩]ನ(ಸೂ) [೪]ಮೋಪಿನ ಕಾಪಿನಿಂ(ಸೂ) [೫]ಜ್ನಗ(ಸೂ) [೬]ಜಿ(ಸೂ) [೭]ನೇಗೊಂದಲಲಿಗೆ(ಸ) [೮]ರಾಜಿ(ಸೂ) [೯]ವ್ಯೋಮ(ಸೂ)

## ಸಂಧ್ಯಾಸಮಯ :—

ವನಿತಾಪಾನಕದೊಂದು ಪೊೞ್ತು ಸುವಿಟರ್ ಕೈಗೈದು ಲೀಲಾವಿನೋ
ದನದಿಂ ಬೀದಿಗೆ ಬರ್ಪ ಪೊೞ್ತು ಗಣಿಕಾಸಂದೋಹಮೊಂದಾಗಿ ಮೆ
ಲ್ಲನೆ ಬಂದೊತ್ತೆಗೆನಿಲ್ವ ಪೊೞ್ತು ಬಗೆವೀ ಪೊೞ್ತಿಂಗೆ ತಂಪೊೞ್ತು ಪೂ
ವಿನ ಪೊೞ್ತಿಂಬಿನಮಾಯ್ತು ಧಾರಿಣಿಗೆ ಭಾಸ್ವನ್ಮಂಡಲಂ ಮಂಡಲಂ ೩೯

(ಸೂಕ್ತಿಸುಧಾರ್ಣವಂ, ೮–೭)

ದಿನಯಾತ್ರಾನಿಗಮಕ್ರಮಕ್ಕೆ ವಿಷಮಂ ಸಪ್ತಾಶ್ವಮಿನ್ನೊಂದು ವಾ
ಹನಮಂ ತಂದು ಸಮಂತುರಂಗಮೆನಿಪಂತಾಂ ಮಾೞ್ಪೆನೆಂಬೊಂದು ಭಾ
ವನೆಯಿಂದುತ್ಸವ ರಾಗಮಂ ತಳೆದು ಸೂರ್ಯಂ ಪಶ್ಚಿಮಾಂಭೋಧಿಯಂ
ಮನವೊಲ್ದೆಯ್ದಿದನೆಂದು ಬಣ್ಣಿಸೆ ಜಗಂ ಚೆಲ್ವಾಯ್ತು ಸಂಧ್ಯಾಗಮಂ ೪೦

ಅರೆಮುಗಿವಬ್ಜಮುಳ್ಳಲರ್ವ ಕೈರವಮಾಕುಳಿಪಾ ಮಧುವ್ರತಂ
ಕೊರಗುವ ಕೋಕಮುತ್ಸವಿಪ ಜಾಱತಿಯರೊಂದೆಪಡೇೞ್ವ ಮೀನ್ಗಳಂ
ಕುರಿಪ ತಮಂಧಮಕ್ಕಱತೊಳೆ ಪಕ್ಕೆಗೆ ಸಾರ್ವ ವಿಹಂಗವೀಧಿ ಚೇ
ತರಿಸುವ ಮಾರುತಂ ನಸು ಕಲಂಕುವ ಸಾಂಧ್ಯಮಯೂಖಲೇಖೆಯೊಳ್ ೪೧

ಬಳಸಿಮದರ್ಕವಾಜಿ ಖುರಘಟ್ಟಿತಮಾದಪರಾದ್ರಿಯಿಂದಮು
ಚ್ಚಳಿಸುವ ಧಾತುರೇಣುವೆನೆ ಚಕ್ರಯುಗಂಗಳಗಲ್ಕೆಗಿಚ್ಚು ಪಾಂ
ಸುಳೆಯರ ರಾಗಮೇೞ್ಗೆ ದೆಸೆವೆಣ್ಗಳ ರತ್ನವಿಭೂಷಣಾಂಶುಪು
ಷ್ಪಳಿಸಿಯು ಕುಂಕು[1]ಮದ್ರವ[1]ದ ಸಿಂಪಿಣಿ ಸಂಜೆಯ ಕೆಂಪು ಲೋಕದೊಳ್ ೪೨

(ಚಂದ್ರಪ್ರಭಪುರಾಣಂ ೮–೪, ಸೂಕ್ತಿ ೮–೨೫)

ನಗಿಸುತ್ತುಂ ನೆಯ್ದಿಲಂ ದಟ್ಟಡಿಯಿಡಿಸುತ ತೆಂಗಾಳಿಯಂ ಗೂಡುವೊಟ್ಟಲ್ಗಂ
ಪುಗಿಸುತ್ತುಂ ಪಕ್ಕಿಯಂ ಕತ್ತಲೆಯ ಭುಜಮನೆತ್ತುತ್ತೆ ಕೋಕಕ್ಕೆ ಪೆರ್ದುಂ
ಬಿಗಳಿಂದಂ ಜೋಗುಳಂಬಾಡಿಸುತ ಕಮಲಮಂ ತೂಂಕಡಂಗೆಯ್ಯುತೆತ್ತಂ
ಮಿಗೆ ಸಂಧ್ಯಾಕಾಂತೆಯಾಗಳ್ ನೆಱೆದಳು ಪಲವುಂ ಮಕ್ಕಳಂ ಪೆತ್ತ ತಾಯೊಲ್ ೪೩

ಇನನಂ ಕಾಣದೆ ಸಂಚಲ
ತನುವಪರಾಶಾಪ್ರಪಂಚವಿರಹಿತ ಸಂಧ್ಯಾಂ
ಗನೆ ನೋಡೆ ಕರಗಿದಳ್ ಕೇ
ಳನುರಕ್ತೆ ವಿಯೋಗಯೋಗಮಂ ಸೈರಿಪಳೇ ೪೪

---

[1] ಮೋದಕದ(ಅ)

ಒಂದದ ಪಗಲಿರುಳೆರಡಱ
ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ
ಸಂಧಿಸಿ ಪೊಲಿದವೊಲೆಸೆದುದು
ಮುಂದ್ಮೈಸಿದ ಸಂಜೆಗೆಂಪು ಪಡುವಣದೆಸೆಯೊಳ್ ೪೫

(ಜಗನ್ನಾಥವಿಜಯಂ, ೧೬-೯೫, ಸೂಕ್ತಿ, ೮-೨೬)

ಅಂಬರಮಣಿ ಮುೞುಗಿದ[೧]ನೆನ
ಲಂಬುಧಿಯೊಳ್ [೧]ಹಿಮಕರಾಂಶುಗಳ್ [೨]ಪುಟ್ಟು[೨]ಗುಮೆಂ
ದಂಬರ ಹರಿ [೩]ಪೊದೆಯಲ್[೩] ಪೀ
ತಾಂಬರ[೪]ಮಂತೆಗೆಸಿದವೊಲಾಯ್ತು[೪] ಸಂಧ್ಯಾರಾಗಂ ೪೬

(ಲೀಲಾವತಿ, ೧೦-೨೦, ಸೂಕ್ತಿ ೮-೨೩)

ಪರಿಣತ ದಿನಶಿರದಂದದೆ
ಖರಕಿರಣಂ ಕಾಲಚಕ್ರಹತಿಯಿಂ ಕಿಡಿಯಂ
ಸುರಿಯೆ ಪರಿವರುಣಜಲದಂ
ತಿರೆ ಪಸರಿಸುತಿರ್ದುದಪರ ಸಂಧ್ಯಾರಾಗಂ ೪೭

(ಲೀಲಾವತಿ, ೧೦-೧೯, ಸೂಕ್ತಿ ೮-೨೨)

ಅಂಬರವಧು ಮಿತ್ರವಿಯೋ
ಗಂ ಬೇಗದೊಳಾಗೆ ಮನದುಮ್ಮಳದಿಂ ಕಾ
ಶಾಂಬರಮಂ ಪೊರೆದುದು ತಾ
ನೆಂಬಿನೆಗಂ ಸಂಜೆಗೆಂಪಿನಿಂ ರಂಜಿಸುಗುಂ ೪೮

(ಕುಸುಮಾವಳಿ, ೪-೨೭, ಸೂಕ್ತಿ, ೮-೨೪)

## ಮುಕುಳಿತ ಪದ್ಮ:—

ಏಕೆಲೆ ದೇವ ನಿನ್ನೊಳೆಡೆಗಣ್ ಬಲಗಣ್ ಸರಿಯೆನ್ನದಿಂತು ದೋ
ಷಾಕರನಂ ಸಮಂತು ತಲೆಗೇಱಿಸಿಕೊಂಡು ಮದೀಯ ಕಾಂತನಂ
ಪ್ರಾಕೃತನಂತಿರಸ್ತಗಿರಿಗೆಯ್ದಿಪೆಯೆಂದಭವಂಗೆ ವಾಸರ
ಶ್ರೀ ಕರವಂ ಕರಂ ಮುಗಿದವೋಲ್ ಮುಗಿದಿರ್ದುವು ಪದ್ಮಸಂಕುಳಂ ೪೯

---

[೧]ಸಂತಂಬುವಿಸಂ(ಸೂ) [೨]ಪತ್ತು(ಸೂ) [೩]ಪೊದೆದಾ(ಸೂ) [೪]ಪೊಸಸಿರ್ದುದಪರ(ಸೂ)

ಎನಸಗಾರಿರ್ದಪರೋ ರಥಾಂಗಮಿಥುನಕ್ಕೆಂತಲ್ಲದಾ ನೀಲಪ
ದ್ಮಿನಿಯೆನ್ನಂ ನಗುವಂತೆ ಮಾಡಿದೆ ಧರಿತ್ರೀನೇತ್ರ[1]ದಿಂದೆಮ್ಮ[1] ಕೇ
ಡನದೇ [2]ನೆಸೆದಪೆ[2]ಯೆಂದು [3]ನಾಸು[3]ಚಿತ ವಕ್ತ್ರಾಸಕ್ತ ಭೃಂಗೀಕ
ಸ್ವನದಿಂ ಕೂಗಿಡುವಂತಿರಾಯ್ತು ದಿನಪಂಗಂಭೋಜನೀ[4]ಕುಟ್ಮಳಂ[4] ೪೯

(ಅನಂತನಾಥಪುರಾಣಂ, ೭-೬೮; ಸೂಕ್ತಿ, ೮-೫೧)

ಇನನಸ್ತಂಗತನಾದನುತ್ಪಲಿನಿ ಪೇಱ್ಗಿಂ ಲಕ್ಷ್ಮಿಯುಂಟೆಂಬುದ
ಕ್ಕೆನ[5]ಗಂತ[5]ಪ್ಪುದು ರಾಜಬಾಧೆ ಬಱಿಕಂ [6]ಬೆಸತ್ತು ನಾನೆನ್ನ[6] ಜೀ
ವನಮುಂ ನೀಗುವನೆಂದು ನಂಜುರುಳಿಯುಂ ಪೋ ನುಂಗಿದಳ್ ಪಿಂ[7]ಗಿ[7]ದ
ಬ್ಜನಿಯೆಂ[8]ದೆಂಬ[8]ವೋಲಾಯ್ತು ಕುಟ್ಮಳಿತ ಕಂಜಾತೋದರೇಂದಿಂದಿರಂ ೫೧

(ಚಂದ್ರಪ್ರಭಪುರಾಣಂ ೮-೧೫, ಸೂಕ್ತಿ ೮-೫೦)

ಇನನಸ್ತಂಗತನಾದನಾತನಱುವಿಂದೇನುತ್ಸವಂ ಬೀತು ಕೋ
ಕನಿಕಾಯಕ್ಕಿನಿತಾಯ್ತು ಶೋಕವಿನನಸ್ತಪ್ರಾಪ್ತಿಯುಂ ಪಾಱುತಿ
ಪ್ಪನಿತೊಂದೊಂದುಪಮುತ್ಪಲಕ್ಕಿನಿತವಂ ನೋಡಲ್ಕೆ ತಾನಾಱದ
ಬ್ಜನಿ ಕಣ್ಮುಚ್ಚುವ ಮಾಱ್ಕೆಯಿಂ ಮುಗಿದುವೆತ್ತಂ ಪದ್ಮಪತ್ರೋತ್ಕರಂ ೫೨

ಇದು ಕೋಕಶೋಕಮಂ ನೋ
ಡದ ಕೃಪೆ[9]ಯಿಂ[9] ಪದ್ಮನಯನಮುಂ ಪದ್ಮಿನಿ ಮು
ಚ್ಚಿದಳೆನೆ[10]ಸದ್ಭಾವಿತಮ
ಲ್ಲದೆ ನಾಯಕಿ[11] ತೊಱೆದವಳಿನನಗಲ್ಕೆಯ ನೋವಂ ೫೩

(ಜಗನ್ನಾಥವಿಜಯಂ, ೧೬-೯೮, ಸೂಕ್ತಿ ೮-೪೬)

ಬಿಸರುಹಮಿತ್ರನೆಂದೆನಿ[1]ಸುತೆ[1]ಮ್ಮನುಪೋವದೆ ರಾಜಬಾಧೆಗೊ
ಪ್ಪಿಸಿ ಪೆಱಸಾರ್ದನೋಲಗಿಪ ಭೃಂಗ ಭಟಾವಳಿ ಪಿಂಗಿಪೋಯ್ತು ತ
ಕ್ಕೆಸೆವ ವಿಕಾಸಲಕ್ಷ್ಮಿ ಪಗೆಯುಂ ನೆಱೆ ಪೊರ್ದಿದಳೇವೆನೆಂತುಜೀ
ವಿಸುವೆನೆನುತ್ತ ಮೂರ್ಛಿಸುವವೋಲ್ ಮುಗಿದತ್ತರವಿಂದ ಸಂಕುಳಂ ೫೪

(ಕುಸುಮಾವಳಿ, ೪-೧೯, ಸೂಕ್ತಿ, ೮-೫೨)

---

[1]ನೊಂದೆನ್ನ(ಸೂ) [2]ನೆಂಡಪೆ(ಸೂ) [3]ಸಂಕು(ಸೂ) [4]ಸಂಕುಳಂ(ಸ) [5]ನಿನ್ನ(ಸೂ) [6]ಲೇಸಲ್ತು, ನೊಂದೆನ್ನ(ಸೂ) [7]ಗ(ಸೂ) [8]ಬಂತೆ(ಸೂ) [9]ಯೆನೆ(ಸ) [10]ಭಾವಕದಿಂದ ಭಾವಕಿ(ಸೂ) [11]ಸಿದೆ(ಸೂ)

ಮುಗಿವ ಸರೋಜಮಾಲೆಗಮರಲ್ವ ಸಿತೋತ್ಪಲಮಾಲೆಗಂ ಮನಂ
ತೆಗೆ ತೆಗೆ ಮಾಡೆ ಸ್ವೈರಿಸದೆ ಷಟ್ಪದ ಸಂತತಿ ರಾಜಬಾಧೆಯಿಂ
ಸುಗಿವ ನವಪ್ರಸಾದ ಫಳದಿಂ ದನಿವಾಯ್ವಗೃಹಕ್ಕೆ ಬಂದು ಬಂ
ದುಗಳವೆಯಾಡುವಂತೆಡೆಯಾಡಿದುವಂಬುರುಹಾಕರಂಗಳೊಳ್ ೫೫

[೧]ಆ ಸರಸೀಜ ಬಾಂಧವನ ಪಿಂಬಡಿಸೊಳ್ ಕಡುವಿನ್ನನಾದವಿಂ[೧]
ತೀ ಸರಸೀರುಹಂಗಳವನೀ ಪದದೊಳ್ ಬಿಸುಟಿಂತು ಪೋಪೆವೆಂ
ಬೀ ಸಮಕಟ್ಟಿನೊಳ್ ನೆಲಸಿದಂದದೊಳಿರ್ದುವು ಷಟ್ಪದಂಗಳುಂ
ಕೇಸರ ಕೋಟಿ ಸಂಕಟ ಕುಶೇಶಯ ಕುಟ್ಮಲಕೋಟರಂಗಳೊಳ್ ೫೬

(ಪಂಪಭಾರತಂ. ೪-೪೭; ಸೂಕ್ತಿ ೮-೫೩)

ರಸಗೀತಾತೋದ್ಯನೃತ್ಯ[೧]ಕ್ಕೆನುಗೊಳಿ[೧] ಕಹಳಾಶಂಖಭೇರೀಮೃದಂಗ
ಪ್ರಸರಂ ಮೇಳಾಪದೊಳ್ ಘೂರ್ಣಿಸೆ[೨] ಮಣಿಶಿಖರಾಗಾರಪಾರಾವತಂಗ
ಳ್ಗಸಿತೋದ್ಯದ್ಧೂಪಧೂಮಚ್ಛವಿಗಳರವನಂ ವಲ್ಲಭಾಲೋಭದಿಂ ಪು
ಟ್ಟಿಸೆ [೩]ದೇವೋತ್ತಾಲಯಂಗಳ್ಗೆಸೆದುದಸದಳಂ[೩] ಧೂಪವೇಳಾವಿಳಾಸಂ ೫೭

(ಅನಂತಪುರಾಣಂ ೭-೬೫; ಸೂಕ್ತಿಸುಧಾರ್ಣವಂ, ೮-೫೪)

ದಿನಕರನೆಂಬ ಸಿಂಹಮಿರದೊಯ್ಯನೆ ಪಾಯ್ತುರಲೆಂಪ್ದಿ ಕಂಡು ತ
ದ್ಘನತಿಮಿರೌಘದಂತಿ ಘಟೆಗಳ್ ಪರಿಧಾಳಿಯನಿಟ್ಟವೋಲ್ ತಮಂ
ಜನಿಯಿಸಲಂತದಕ್ಕೆ ಮಿಗೆ ಭಾಸ್ಕರನಿಟ್ಟನೊ ಜೇಹಿನಾಳ್ಗಳಂ
ಯೆನಿಸಿಯೆ ಸಂಜೆಗೆಂಪು ಪುದಿದೊಪ್ಪಿದುದಂಬರಮಬ್ಧಿಮಧ್ಯದೊಳ್ ೫೮

## ವಿಕಸಿತ ಕುಮುದ

ಪಗಲತಿ ಮಿತ್ರನೊಳ್ ಸುರತಗೋಷ್ಠಿ ಕರದ್ವಿಜರಾಜ ಪಾದದೊಳ್
ಪಗೆ ಮಧುಪಪ್ರಸಂಗವನಿಶಂ ಜಡಸಂಗತಿ ಕಂಟಕತ್ವಮೆಂ
ಬಗಣಿತ ದುರ್ಗುಣಕ್ಕೆ ನೆಲೆಯಾದ ಸರೋಜಿನಿ ಕೆಟ್ಟಳೆಂದಣಂ
ನಗುವವೊಲೇನರಲ್ದವೊ ಸುಧಾಕರಸಂಗಮದಿಂದಲುತ್ಪಲಂ ೫೯

---

[೧]ಆಸರಸೀಜ ಬಂಧುರವನೇ ಕವಿದುಂಡು ಬರ್ದುಂಕು ತಾವುವಿಂ(ಸ) [೧]ತ್ಯಾನುಗದೊಳಿ (ಸೂ) [೨]ಪ(ಸೂ) [೩]ದೇವಾಯತನಂಗಳ್ಗನುನಯನದೊಳಂ(ಸ)

ಬೆಮರುತಿರಲ್ ಶಶಿಕಾಂತಂ
ಕವಿವಾ ತಂಬೆಳಗಿನೊಳಗೆ ಕೋಕಂ ಬೇವುತೆ
ರವಿಕಾಂತದ ಮಱಿಡಯೊಗುತಿರ
ಲವ ನಿಟ್ಟಿಸಿ ನಗುವ ತೆಱಿದೊಳಲರ್ದುವು ಕುಮುದಂ ೬೦

ಮುಗಿವ ಸರೋರುಹಷಂಡಮು
ನಗಲುವ ಚಕ್ರಪ್ರತಾನಮುಂ ಕೋಟರದೊಳ್
ಪುಗುವ ವಿಹಂಗಗಳಂ ಮಿಗೆ
ನಗುವಂತಿರೆ ನೆಯ್ದಿಲೆಯ್ದಿದವು ವಿಸಸನಮುಂ ೬೧

## ಕೋಕ ವಿರಹ

ನೆರೆವನ್ನಂ ರವಿ [೧]ನಿಲ್ಲದ[೧]ಸ್ತಗಿರಿಯಂ ಸಾ[೨]ರ್ದಂ[೨] ಪ್ರಿಯಂ ಪೋಗಲಾ
ತುರುನಾಗಿರ್ಪೆನೆನುತ್ತ ಮತ್ತಿನನನಿತ್ತಾತ್ಮೇಶನಂ ನೋಡಿ ಕೋ
ಪರಸಾವೇಶಮನೊಂದು ಶೋಕರಸಮಂ ಮತ್ತೊಂದು ಕಣ್ ಕೈಕೊಳು
ತ್ತಿರಲೊಪ್ಪಿರ್ದುದು ಚಕ್ರವಾಕವಧು [೩]ಕಣ್ಗಿತ್ತಳ್ ನಟೀ[೩]ಲೀಲೆಯಂ ೬೨

(ಕಾವ್ಯಾವಲೋಕನಂ, ೬೫೭)

ಬಿಸರುಹಸಖನಸ್ತಾದ್ರೀಂದ್ರಮಂ ಪೊರ್ದೆ [೪]ಪೋದಯ್
ಬಿಸುಟೆ[೪]ನಿಯನೆ ನೀನುಂ ನಿನ್ನ ಬೆಂಬೆನ್ನೊಳೆನ್ನೀ
ಯಸುವುಮಿರದೆ ಪೋಗಲ್ಕಿರ್ದು[೫]ದಿಂದಿಂದೆನುತ್ತಂ[೫]
ಕುಸುಮ ಶರ[೬]ಶಲಾಕೆ[೬]ಕೀಲಿತಾಂಗಂ ರಥಾಂಗಂ ೬೩

(ಕಾವ್ಯಾವಲೋಕನಂ, ೬೫೬)

ಮಿಡುಕುವ ಕಂಠವಿರ್ದೆಸೆಯ ಜೊಲ್ಲು ಮರಳ್ಚಿದೆಱಂಕೆ ಬಿಟ್ಟಬಾಯ್
ಗಡಣದ ಕಣ್ಣನೀರ್ಗಳೆಱೆನುಚ್ಚಿದ ಕಣ್ ಬಿಸುಸುಯ್ವ ಸುಯ್ಲಿನಿಂ
ತಡಬಡವಾಗಿ ತನ್ನ ತನು ರಂಜಿಸೆ ಕೋಕಕುಲಂ ವಿಯೋಗದಿಂ
ಮುಡದಿಯನೆಲ್ಲಿಯುಂ ತಿರುಗಿ ಕಾಣದೆ ನಿಂದವಡೊಂದು ತಾಣದೊಳ್ ೬೪

---

[೧]ನಲ್ಲನ(ಸ) [೨]ರ್ವಂ(ಸ) [೩]ಣ್ಗಿತ್ತಂನದೀ(ಅ) [೪]ಪೊಯ್ದುಬ್ಬಿಸದಿ(ಸ) [೫]ದೆಂದಿಂತೊ ನಲ್ಗುಂ(ಅ) [೬]ಕಲಾಪ(ಸ)

ಕೂಡಿದೆವಿಲ್ಲಿ ಕೂಡಿ ನಲವಿಂ ನಲಿದೋಕುಳಿಯಾಡಿದೆವಿಲ್ಲಿ ಸಂಗಡಂ
ಪಾಡಿದೆವಿಲ್ಲಿ ಪಂಕಜದ ಕೋಮಳಕೋಶದ ಬೀಜರಾಜಿಯಂ
ತೋಡಿದೆವಿಲ್ಲಿ ಕರ್ಚಿ ಕುಟುಕಂ ಮನದಟ್ಕಱತೂ[1]ಳೀಗಳಿಕ್ಕಿ[1] ಬಾ
ಯ್ಗೂಡಿದೆವೆಂದು ತಮ್ಮನಿಯರಂ ನೆನೆದಟ್ಟುವು ಜಕ್ಕವಕ್ಕಿಗಳ್ ೬೫

(ಸೂಕ್ತಿಸುಧಾರ್ಣವಂ ೮-೪೦)

ಅತ್ತಿತ್ತಂ [2]ಮಿಸುಕ[2]ದೆ ಪ್ಟೆ
ಪತ್ತಿದ [3]ಚಿತ್ತಜ[3]ಸುಖೋತ್ತಮಾಂಗದೊಳಿರುತುಂ
ಮುತ್ತಿನ ಕಾಂತಿಗೆ ಭಯಮಂ
ಪೊತ್ತಿನವಕ್ತ್ರಮನೆ ನೋಡಿ ಸುಯ್ದುವು ಕೋಕಂ ೬೬

(ಗಿರಿಜಾಕಲ್ಯಾಣಂ, ೪-೬೭೦)

ಕಾಲ್ದೆಗೆಯೆ ಬಟ್ಟಿನಂ ಮಿಗೆ
ಸಾಲ್ದೆಗೆದಃದು ವಿಹಗವೀಥಿ ಮುಗಿಯುತ್ತಬ್ಜಂ
ಜೋಲ್ದುವು ನೊಂದು ರಥಾಂಗಂ
ಕೀಲ್ದೆಗೆದವೊಲಗಲಿ ಸಾರ್ದು ಕೊಱಗಿದುವಾಗಳ್ ೬೭

(ಗಿರಿಜಾಕಲ್ಯಾಣಂ ೪-೬೮)

ಬಗೆಗುಂದಿ ಚಕ್ರಮಿಥುನಂ
ಮಿಗೆ ನೊಂದೊಂದನಗಲಲಾಱದೆ ನೋಟಂ
ದೆಗೆಯುತ್ತಬಲುತ್ತೊರಲು
ತ್ತಗಲ್ದುವು ನೆಱೆ ಪಗಲನರಸಿ ತಿರುಗುವ ತೆಱದಿಂ ೬೮

(ಗಿರಿಜಾಕಲ್ಯಾಣಂ ೪-೬೯)

ಒಱತುಗುವ ಬಾಷ್ಪವಾರಿಯೊ
ಳೆಱಂಕೆಗಳ್ ನಾಂದು ಮಗುಟೆ ವಿರಹಾನಳನಿಂ
ನೆಱೆ ಬಱವದಾಗೆ ಪಡುನೇ
ಸಱತೂ[4]ಳಿರ್ದ[4]ವಗಲ್ದು ಚಕ್ರವಾಕದ್ವಂದ್ವಂ ೬೯

(ಚಂದ್ರಪ್ರಭಪುರಾಣಂ, ೮-೯, ಸೂಕ್ತಿ ೮-೩೪)

---

[1] ಳಿಕ್ಕಲಿಕ್ಷೆ(ಸ) [2] ಚಲಿಸ(ಅ) [3] ಮನ್ಮಥ(ಅ) [4] ಳಳುರ್ದು(ಸೂ)

ಜಳಜದ [೫]ಪೀಠದೊಳಂ[೫] ನ
ಲ್ಲಳ ನುಣ್ಗಱಿ ಸೋಂಕೆ ಸೋಂಕಿ [೬]ಕುಳ್ಳಿರ್ದಳಿನೀ
ಕಳಗೀತರವಮನಾಲಿಪ[೬]
ವಿ[೭]ಳಾಸ[೭]ಮಂ ನೆನೆದು ಕನಲ್ದುದೊಂದು ರಥಾಂಗಂ ೭೦

(ಚಂದ್ರಪ್ರಭಪುರಾಣಂ, ೮-೯; ಸೂಕ್ತಿ ೮-೩೪)

ಅಱಿಸಿ ಸುೞಿ ಸುೞಿದು ನಲ್ಲಳ
ನುಱಿ ಶೋಕದೊಳೊಱಲಿಯೊಱಲಿ ದನಿಗೆಟ್ಟೞಲು
ತ್ತೊಱೆತಪ್ಪ ಕಣ್ಣನೀರ್ಗಳ
ಲೊಱಗಿರ್ದತ್ತೊಂದು ಮೂರ್ಛೆಯೋಗಿ ರಥಾಂಗಂ ೭೧

ನೀಱಿಯನಂಬುಜದೊಳ್ ನೀ
ರೇಱಿದ ನೆಯ್ದಿಲ್ಗಳೊಳ್ ಕೊಳಂಗಳ ತಡಿಯೊಳ್
ಸಾಱಿ ಪರಿದಱಿಸಿ ಕಡು ಬಾ
ಯಾಱುತ್ತಿರ್ದತ್ತು ಜಾತಶೋಕಂ ಕೋಕಂ ೭೨

ನಳಿನೀ ಬೀಜಮನೊಲ್ಲದೆ
ಕುಳಿರ್ವಕ್ಕಹಮೆಂಬ ದನಿಗಳೊಳ್ ಸಲ್ಲದೆ ಪೂ
ಗೊಳದೊಳ್ ನಿಲ್ಲದೆ ವಿರಹಾ
ನಲನಿಂ ತಿರುಗಿತ್ತು ಚಕ್ರವಾಕಾನೀಕಂ ೭೩

ಬಿಸುಸುಯ್ವುತ್ತೀಪಳಂ ಕಾಣದೆ ಕಳವಳದಿಂ ಕಂಜಕಿಂಜಲ್ಕದೊಳೀ
ಕ್ಷಿಸಿ ಪೊಕ್ಕುಂ ಬೞ್ಚಿಯುಂ ತಾವರೆಯೆಲೆವಱಿಯೊಳ್ ನೋಡಿ ಶೈವಾಲದೊಳ್ ಸೋ
ದಿಸಿ ನೀಳಾಂಭೋಜದೊಳ್ ನಿಟ್ಟಿಸಿ ತೆರೆಯೆಡೆಯೊಳ್ ಪೊಕ್ಕು ಸುತ್ತಂ ತೊೞಲ್ದಾ
ಲಿಸುತಯ್ಯೋಯೆಂದಟಿಲ್ದತ್ತಸಮಶರನೆಸಲ್ ಕೀಲಿತಾಂಗಂ ರಥಾಂಗಂ ೭೪

## ಕತ್ತಲೆ ;—

ಇನನುೞಿದಪರದಿಶಾಕಾ
ಮಿನಿಯೊಳ್ ಕೂಡಿದೊಡೆ ನೋಡಲಾಱದೆ ಪೂರ್ವಾಂ
ಗನೆ ಮುಚ್ಚಿದಕ್ಷಿಪಕ್ಷ್ಮದ
ತಸಿಗರ್ಪೆನೆ ಪುದಿದು ಕೊನರ್ವ ಕತ್ತಲೆಯೆಸೆಗುಂ ೭೫

(ಸೂಕ್ತಿಸುಧಾರ್ಣವಂ, ೮-೫೮)

---

[೫] ಳ ಪೀಠದೊಳ್(ಅ) [೬] ಕುಳ್ಳಿರ್ದೆಯ್ತಪ್ಪಳಿಗಳಗೀತಮನಾಲಿಪ(ಸ) [೭] ಒಳಸನ(ಸೂ)

ನಸುಗಟ್ಟಿಲೆಯರೆಗಟ್ಟಿಲೆ
ಮುಸುಗಟ್ಟಿಲೆ ಭೇದವಱಿದ ಪೆರ್ಗಟ್ಟಿಲೆ ನಾ
ಲ್ದೆಸೆಗಟ್ಟಿಲೆ ಪೊಸಗಟ್ಟಿಲೆ
ರಸಗಟ್ಟಿಲೆಯೆನಿಸಿ ಕೂಡಿ ತೀವಿತು ತಿಮಿರಂ ೭೬

(ಗಿರಿಜಾಕಲ್ಯಾಣಂ ೪-೭೩, ಸೂಕ್ತಿ, ೮-೮೧)

ಇದು ಚೋರರ[1]ದೃ[1]ಶ್ಯಾಂಜನ
ಮಿದು ವೃದ್ಧಾಂಗನೆಯರೆಸೆವ ಪಲಿತೌಷಧಮಿಂ
ತಿದು ಕಾಮನ ಕೂರಲಗೆನಿ
ಸಿದುದ[2]ಭೃತ್ಸ್ನ[2]ರಮಂಧಕಾರಮಪಾರಂ ೭೭

(ಚಂದ್ರಪ್ರಭಪುರಾಣಂ, ೮-೩೦; ಸೂಕ್ತಿ ೮-೭೫)

ಇದು ಮಧುಕರನಿದು ಮಲ್ಲಿಗೆ
ಯಿದು ಕೋಕಿಲನಿದು ಮರಾಳನಿದು ಮದಗಜಮಿಂ
ತಿದು ಕಂಠೀರವನಿದು ಕರಿ
ದಿದು ಬಿಳಿಪೆಂದಱಿಯಬಾರದುರ್ವಿದ ತಮದೊಳ್ ೭೮

(ಗಿರಿಜಾಕಲ್ಯಾಣಂ, ೪-೭೭, ಸೂಕ್ತಿ, ೮-೮೦)

ಕಿಸುಸಂಜೆ ಕಿಚ್ಚುವೊಲ್ ಪೊ
ತ್ತೆ ಸುರನಿಕೇತನಮುಂದು ನಂದಿಸಲಿಂದ್ರಂ
ಬೆಸಸಿದ ನೀಲಾಂಭೋಧರ
ವಿಸರಮೆನಲ್ ಮೂಡಿ ಮೂಡುತಿರ್ದುದು ತಿಮಿರಂ ೭೯

(ಲೀಲಾವತಿ, ೧೦-೩೧)

ಅನುರಕ್ತನಾಗಿ [3]ವಾರು[3]ಣಿ
ಗೆ ನಲ್ಲಳಂ ರಾಜಬಾಧೆಗೊಪ್ಪಿಸಿ [4]ರಾಜೀ
ವಿನಿಯಂ[4] ಸತ್ಪಥಮಂ ತೊಱೆ3
ದಿನನಪಯಶಮೆನೆ ತಮಂ ಪ್ರೊದಟ್ಟಿದ್ದು ಜಗಮಂ ೮೦

(ಜಗನ್ನಾಥವಿಜಯಂ, ೧೬-೧೦೦)

---

[1] ವ(ಸ) [2] ಪಕೃತ್ಸ್ನ(ಸೂ) [3] ಧಾರಿ(ಸೂ) [4] ಪೋದಂಯಿನಿಯಂ(ಸ)

ಇನದೀಪಂ ನಂದಿರೆ ಬಂ
ದು ನಿಶಾರಾಕ್ಷಸಿ ಚರಾಚರೌಘಗ್ರಸನಾ
ರ್ಥಿನಿ ಭುವನಭವನಮಂ ಭೋಂ
ಕನೆ ಪಡಿಗೆತ್ತಂದವಾದುದಂದು ತಮಂಧಂ ೮೧

(ಜಗನ್ನಾಥವಿಜಯಂ ೧೬–೧೦೧)

ಅಱಿಯಿಂ ಪಿರಿದಂ ಪೊಗಟಿಲ್
ಪೆಱತೇಂ ಮುಚ್ಚಿದೊಡೆ ಮುಚ್ಚಿರಲ್ಕಲ್ಲದೆ ಕ
ಣ್ದೆಱೆದೊಡೆ ತೆಱೆದಂತಲ್ಲದೆ
ಮಱೆದಂತೆಸೆಯಿಕ್ಕಲೀಯದಿಡಿದ ತಮಂಧಂ ೮೨

(ಗಿರಿಜಾಕಲ್ಯಾಣಂ ೪–೭೫)

ಮನದೊಳಗಂ ಪೊಱಗಂ ತೆ
ಕ್ಕನೆ ತೀವಿದ ಮಬ್ಬಿನೊಳಗೆ ಮನಸುಂ ನೆನಸುಂ
ಕನಸುಂ ತಾನಂ ಕಟ್ಟಿಲೆ
ಯೆನಿಸಿರ್ದುದು ತಮದ ಘನವನದನೇನೆಂಬೆಂ ೮೩

(ಗಿರಿಜಾಕಲ್ಯಾಣಂ, ೪–೭೮)

ಪ್ರಾಚೀಮುಖಮೃಗಮದಮು
ದ್ವೀಚಳದಳಕಂ ನಭಸ್ಥಳೀನೀಳವಿಭೂ
ಷೋಚಿತ ಮರೀಚಿ ಪಸರಿಸೆ
[1]ಸೂಚೀಸಿರ್ಭೇದ್ಯ[1]ಮಾದುದಂದಿನ ತಿಮಿರಂ ೮೪

(ಲೀಲಾವತಿ, ೬–೧೦೮, ಸೂಕ್ತಿಸುಧಾರ್ಣವಂ ೮–೫೯)

ಜಗುನೆಯ ಕರ್ಮಡು ನೆಲನಂ
ದಿಗಿಭದ ಮದ[2]ವಪ್ಪ[2]ದೆಸೆಗಳೆಂ ರಾಹುಶಿರಂ
ಗಗನಮನೆಡೆಗೊಂಡತ್ತೆನೆ
ಜಗಮಂ ಪರ್ಬಿದುದು ಬಹಳ ತಮಸಂ ತಮಸಂ ೮೫

(ಮಲ್ಲಿನಾಥಪುರಾಣಂ, ೭–೨೧ ಸೂಕ್ತಿ, ೮–೬೨)

---

[1]ಸೂಚಿಸಲು ವಿಭೇದ(ಸ) [2]ವಟ್ಟ(ಸ)

ದೆಸೆಯಿದು ಭೂವಳಯಮಿದಾ
ಗಸಮಿದು ತಾನೆಂಬ ಭೇದಮಿಲ್ಲೆನೆ ತಮಮ
ರ್ಬಿಸಿದುದು ಜಗಮಂ ಕೃಷ್ಣಂ
ಬಸಿಱೊಳಗಿಟ್ಟಂತೆ ರಜನಿಚರಭಯದಿಂದಂ ೮೬
(ಲೀಲಾವತಿ, ೧೦-೨೯; ಸೂಕ್ತಿಸುಧಾರ್ಣವಂ, ೯೬೩)

ಈ ಮಂದಮಪ್ಪ ಕೞ್ತಲೆ
ಕಾಮಾಂಧಕ ಜನದ ಮನದ ಕೞ್ತಲೆಯಿಂದಂ
ಭೀಮಮೆನೆ ಕವಿದು ಕೂಡೆ ತ
ಮೋಮಯಮೆನಿಸಿದುದು ಸಕಲ ಭುವನಾಂತರಮಂ ೮೭
(ಸೂಕ್ತಿಸುಧಾರ್ಣವಂ, ೮-೬೮)

ಜಾರರ ಸಿರಿ ಚೋರರ ಸಿರಿ
ಮಾರಸರಂಡೋಱುತಿರ್ಪ ಗೂಗೆಯ ಸಿರಿ ಮ
ತ್ತಾರ ಸಿರಿ ತಮದ ಸಿರಿ ದೃ
ಕ್ಸಾರ ತೆಗೆದು ನಾಡೆ ಗೆಂಟು ಕೃಷ್ಣನ ಸಿರಿಯೋಲ್ ೮೮
(ಸೂಕ್ತಿಸುಧಾರ್ಣವಂ, ೮-೬೯)

ಘೋರಾಂಧಕಾರಮತಿದು
ರ್ವಾರಂ ನೆಲೆವೆರ್ಚೆ ಬಯಲೊಳಂ ಜಾರರ ಸಂ
ಚಾರಕ್ಕೆಡೆಗೊಟ್ಟತ್ತಪ
ಕಾರಿಯ ಸಿರಿ ಖಳರನಲ್ಲದೇಂ ತಣಿಪುಗುಮೇ ೮೯
(ಮಲ್ಲಿನಾಥಪುರಾಣಂ, ೭-೩೩; ಸೂಕ್ತಿ, ೮-೭೦)

ಧರೆಯೊಳ್ ಸತ್ವ ರಜೋಗುಣ
ಮೆರಡುಂ ಪುಸಿಯಾಗಿ ಘನತಮೋಗುಣಮೊಂದಾ
ವರಿಸಿತ್ತವನಿಯ ನೆನಲ
ಚ್ಚರಿಯೊಳ್ ತೀವಿರ್ದುದಂಧಕಾರಾಕಾರಂ ೯೦

ಲೋಕಜನ ಶಫರನೇತ್ರಾ
ನೀಕಮನೊರ್ಮೊದಲೆ ಬಂಧಿಸಲ್ ಕಾಲಂ ನಿ
ರ್ವ್ಯಾಕುಳದಿಂದಂ ಮಿಗೆ ಬಿಸು
ಟಾ ಕಪ್ಪಿನ ಬಲೆಯೊಳೆಯ್ದೆ ಪೆರ್ಚಿತು ತಮಸಂ ೯೧

ಬಗಿದು ಪುಗಿಲರಿದು ನೋಡಲ್
ಬಗೆಯಲ್ ಕಣ್ಸಲ್ಲದೊಯ್ಯನಡಿಯಿಡೆಯಿಡೆ ಚಿತ್ತ
ಕ್ಕೊಗೆಗುಮತಿ ಭೀತಿಯೆನಲು
ರ್ವಿಗೆ ದಟ್ಟೈಯಿಸಿರ್ದುದಂಧಕಾರಾಕಾರಂ ೯೨

ಭುವನಕ್ಕೆ ಲೋಚನೇಂದ್ರಿಯ
ವಿವಿಧವ್ಯಾಪಾರವಿನ್ನಿದೇಕೆನಲಾಕಾ
ಶವನವನಿಯ ನೆಣ್ದೆಸೆಯಂ
ಕವಿದೆಸೆದತ್ತಂಧಕಾರಮುದ್ಭುತ ಘೋರಂ ೯೩

ನೋಡುವೊಡಂಜನಗಿರಿ ಈ
ಜಾಡುವೊಡದು ಲವಣಾರ್ಧಿ ಕಳ್ಳಜನಂ ಕೊಂ
ಡಾಡುವೊಡೆ ರವಿಶಶಾಂಕನ
ನೋಡಿಸಿ ಪೆಸರ್ವೆತ್ತ ತಿಮಿರವೇನೊಪ್ಪಿದುದೋ ೯೪

ಸೋಂಕಿಂದಂ ಸ್ಥಾವರಮಂ
ಮೂಂಕೊಳ್ವುದಱಿಂದೆ ಜಂಗಮುವನಱಿಯಲ್
ಬಕ್ಕುಂ ಕಾಂತಿಯೆಂದೆನಲ್ ಬಗೆ
ಗೇಂ ಕಡು ಮುಂದ್ಮೈಸಿ ನಿಂದುದೋ ಘನ ತಿಮಿರಂ ೯೫

ನೀಲಿಯ ರಸದೊಳ್ ಕರಡಿಯ
ತೋಲಂ ತೊಯ್ದುಱದ್ದ ಮುಸಿಯೊಳದಱಿತೊಳ್ ಪುದಿದ
ತ್ರೈ ಲೋಕಮುಕ್ಕುಮೆನಿಸಿ
ತ್ರೈಲೋಕವಿರೋಧಿ ಬಹಳತಮಸಂ ತಮಸಂ ೯೬

(ಕಾವ್ಯಾವಲೋಕನಂ, ೭೩೫)

ತುಂಬಿಯ ಬಂಬಲಂತೆ ಬಲಿಭೋಜನರಾಜಿಗಳಂತೆ ಸೀಳ್ದ ನೀ
ಲಾಂಬರದಂತೆ ರಾತ್ರಿಯ ಶಿರೋರುಹದಂತೆ ಜಲಪ್ರವಾಹದೊಳ್
ತುಂಬಿ ಪೊದಟ್ದಿ ಕಮ್ಮುಡುಗಳಂತಿಡಿದಿದ್ದಿಲ ಪುಂಜದಂತೆ ಪಾ
ಪಂ ಬೆಳೆದಂತೆ ಕರ್ಗಿ ಕವಿದತ್ತು ತಮಂ ಭುವನಾಂತರಾಳದೊಳ್ ೯೭

ಗಿರಿಗಳ್ ನೀಲಾದ್ರಿಯೆಂಬಂತಿರೆ ನಿಖಿಳನದೀರಾಜಿ ಕಾಳಿಂದಿಯೆಂಬಂ
ತಿರೆ ವೃಕ್ಷಂಗಳ್ ತಮಾಲಾಕೃತಿಯಿನಿರೆ ಮೃಗಶ್ರೇಣಿ ಋಕ್ಷಂಗಳೆಂಬಂ
ತಿರೆ ನಾನಾಪಕ್ಷಿಗಳ್ ಕೋಗಿಲೆಯೋಲಿರೆ ನಭಂ ಕಾರ್ಮುಗಿಲ್ ಮುಚ್ಚಿದಂತಾ
ಗಿರೆ ಭೂ[1]ನೀಳಸ್ಥಳಂ[1] ಕುಟ್ಟಿಮ[2]ಮೆನಿಸಿರೆ ಪರ್ವಿತ್ತು[2] ಘೋರಾಂಧಕಾರಂ ೯೮
(ಸೂಕ್ತಿಸುಧಾರ್ಣವಂ, ೮-೮೨)

ಇದು ತಿಮಿರಾಪಹಾಂಜನಮುಲೂಕಕುಲಕ್ಕಿದು ಪುಂಶ್ಚಲೀರತ
ಕ್ಕುದಿತ ತಮಾಲಮಂಡಪಮಿದುತ್ಪಲಲಕ್ಷ್ಮಿಯ ಮಂಡನಕ್ಕೆ ಸು
ತ್ತಿದ ನವನೀಲಕಾಂಡಪಟಮಿಂತಿದು ಚಕ್ರಯುಗಕ್ಕಗಲ್ಚಲಿ
ಕ್ಕಿದ ಕಿಸುಸಪ್ಪ ಕರ್ವೊಗೆಯೆನಿಸಿಪ್ಪವೊಲಾಯ್ತು ಮಹತ್ತಮಂ ತಮಂ ೯೯
(ಚಂದ್ರಪ್ರಭಪುರಾಣಂ, ೮-೧೯, ಸೂಕ್ತಿ ೮-೭೪)

ಇಂದಿರೆ ಪದ್ಮಮಂದಿರದೊಳಿರ್ದು ಮಹಾಪ್ರಣಯಪ್ರಕೋಪದಿಂ
ದಂದಿರುಳಿಕ್ಕೆ ಮುಚ್ಚಳಮನಾ ಪುಗಿಲೊಳ್ ತೆಱಪಾಗೆ ಸೂಳ್ಗೆ ಕೃ
ಷ್ಣಂ ದಱಸುದಿಂದೆ ಬಂದು ಬಿಗಿಯಪ್ಪಿದೊಡಂಗನೆಯಂ ತದಂಗಕಾ
ರ್ಷ್ಣ್ಯಂದಿಱದಿಂ ಕವಲ್ತುದೆನೆ ಪರ್ಬಿದುದುರ್ಬಿದ ಚಿತ್ರಮಂ ತಮಂ ೧೦೦

ಪದೆಪಿಂದಂಬರಲಕ್ಷ್ಮಿಯೆಚ್ಚಿಕೊಳಲೆಂದೌತ್ಸುಕ್ಯದಿಂ ಕಜ್ಜಲಂ
ಪುದಿದಂ ಮೀರ್ದ ಕರಂಡಮಂ ತೆಗೆದು ತನ್ನುತ್ಸಾಹದಿಂ ಮುಚ್ಚುಳಂ
ಮುದದಿಂದಂ ತೆಱೆಯುತ್ತಮಿರ್ದ ಪದದೊಳ್ ಕೈತಪ್ಪಿ ಬಿದ್ದಂಜನಂ
ಕೆದಱುತ್ತಿಂಬಿನಮುರ್ವಿ ಪರ್ವಿ ಪರಿದತ್ತೆತ್ತಂ ದಿಶಾಭಿತ್ತಿಯೊಳ್ ೧೦೧
(ಅಭಿನವ ದಶಕುಮಾರಚರಿತೆ, ೩-೩೩)

ಕುಜಮೆಲ್ಲಂ ಬಗೆಯಲ್ ತಮಾಲ ನಗಮೆಲ್ಲಂ ನೀಲಶೈಲಂ ನದೀ
ವ್ರಜಮೆಲ್ಲಂ ಯಮುನಾಜಲಂ ಕಮಲಮೆಲ್ಲಂ ಕೋಮಲೇಂದೀವರಂ
ಪ್ರಜೆಯೆಲ್ಲಂ ಪುರುಷೋತ್ತಮರ್ ದೆಸೆಗಳೆಲ್ಲಂ ಕೃಷ್ಣಪಕ್ಷಾಖ್ಯಮೆಂ
ದು ಜಗಂ ಬಣ್ಣಿಸೆ ಮುರ್ಬುಮುರ್ಬಿ ಪದದಿಂ ಪರ್ವಿತ್ತು ಸರ್ವೋರ್ವಿಯಂ ೧೦೨

ಉಗುರಿಂದಂಟೆ ಜಿಱಂಟೆಯಂಜನಮದಕ್ಕುಂ ಚೌಕಮಂ ಕೀಱಿ ತಂ
ದೊಗೆದಾಚ್ಛಾದಿಸಲೆಲ್ಲ ನೀಲಪಟಮಕ್ಕುಂ ಬಟ್ಟಿತಂಮಾಡಿ ಸು
ತ್ತುಗುಮೆತ್ತಲ್ಕಸಿತಾತಪತ್ರದವೊಲಕ್ಕುಂ ತಾನಿಂದೆಂಬಂದದಿಂ
ಜಗದೊಳ್ ಕಣ್ಗೆ ವಿಚಿತ್ರಮಾಗಿ ಮಿಗೆ ದಟ್ಟೈಸಿತ್ತದೆತ್ತಂ ತಮಂ ೧೦೩
(ಗಿರಿಜಾಕಲ್ಯಾಣಂ, ೪-೭೬)

---
[1] ನೀಲಶ್ಮಯಾ(ಸ) [2] ದೆನೆನೆಗಟ್ಟಿತ್ತಂದು(ಸೂ)

ಕರಿದತ್ತಾ ತುಂಬಿಗಂ ಕಾರ್ಮುಗಿಲ ಬಳಗಮಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆ ತಾಂ ನೋೞ್ಪೊಡೆ ಕಡು ಕರಿದಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆಗಂ ಕಜ್ಜಳರುಚಿ ಕರಿದಾ ತುಂಬಿಗಂ ಕಾರ್ಮುಗಿಲ್ಗಂ
ಪರಪುಟ್ಟಚ್ಛಾಯೆಗಂ ಕಜ್ಜಳರುಚಿಗಮದೇಂ ಕಱ್ಪನಾಯ್ತೋ ತಮಂಥಂ ೧೦೪
(ಅ-ವಾ-ವಿ. ಕಾವ್ಯಸಾರ, ೮೯೭; ಸೂಕ್ತಿ ೮–೬೫)

ದಿವಿಜೇಂದ್ರೇಭ ಪ್ರ[1]ಭೇದಂ ದವನ[1]ದಹನಧೂಮಂ ಯಮೋಚ್ಚೈರ್ಲುಲಾಯ
ಚ್ಛವಿಕಂ ಕ್ರವ್ಯಾದಕಾಯದ್ಯುತಿ ವರುಣಗ್ರಹಸ್ಥಾಸ್ನು ಕೃಷ್ಣಪ್ರಕಾಶಂ
ಪವನೋದ್ಧೃತಕೃಷ್ಣಸಾರಪ್ರಭೆ ಧನದಪುರೀನೀಳಶಾಳಾಂಶುಜಾಳಂ
ಭವಕಂಠಚ್ಛಾಯೆ ಪರ್ಬಿತ್ತೆನೆ[2] ದೆಸೆದೆಸೆ[2]ಯುಂ ಮರ್ಬು ಪರ್ಬಿತ್ತಗುರ್ವಿಂ ೧೦೫
(ಲೀಲಾವತಿ, ೧೦–೨೭, ಸೂಕ್ತಿ ೮–೬೦)

ಭಗಣಲತಾಂತಸಂತತಿಗೆ [3]ಪಾಯ್ವ ವನೇಜವನಂ[3]
ಮುಗಿಯೆ ಮರಲ್ದು ಬಿಟ್ಟು ಬಿಸುಟೆಯ್ದೆ ಮದಶ್ರಮನುಂ
ದಿಗಿಭದ ಕರ್ಣತಾಳಕಗಿದೆಟ್ದಳಿಜಾಳದವೋಲ್
ಗಗನದೊಳುರ್ವಿಯೊಳ್ ನೆಱೆಯೆ ಪರ್ಬಿದುದಂದು ತಮಂ ೧೦೬
(ಲೀಲಾವತಿ, ೧೦–೨೮)

ಪದತಳಮುಂ ತಳರ್ಚಲಿನಿಸಿಲ್ಲೆನೆ ಧಾರಿಣಿ ಮಾಯವಾದುದೋ
ವದನಮನುದ್ದವೆತ್ತಲಿನಿಸಿಲ್ಲೆನೆ ವಾರಿದವೀಥಿ ಮೇಲೆ ಬಿ
ಟ್ದುದೊ[5] ತನುವಿಂಗೆ[5] ಸಾರಲಿನಿಸಿಲ್ಲೆನೆ ನಾಲ್ದೆಸೆ ತಾಪಿಸಿತ್ತೊ ಪೇ
ೞಿದು ವಿಪರೀತಮೆಂದು ಸುೞಿವರ್ ನಿಲೆ ಕಟ್ಟಿಲೆ ಪೆತ್ತುದೇೞ್ಗೆಯುಂ ೧೦೭
(ಸೂಕ್ತಿಸುಧಾರ್ಣವಂ ೮–೨೧)

ದಿನನಾಥಂ ಪೆಱಪಿಂಗೆ ಪೆತ್ತು ತೆಱಪಂ ಮೆಯ್ವೆರ್ಚೆ ರಾಗಂ ನಿಶಾಂ
ಗನೆಯಿಂ ಮುನ್ನ ಮೃಣಾಂಕನೊಳ್ ನೆರೆಯಲೆಂದಾಶಾವಧೂ ದೂತಿವ
ರ್ತನದಿಂದಂ ಗಗನಸ್ಥಳೀಕುಲಟಿ ಕೊಂಡಳ್ ನೀಲಚೇಲಾವಕುಂ
ಠನಮುಂ ತಾನೆನೆ ದಟ್ಟಮಾಗಿರೆ ತಮಂ ಪರ್ಬಿತ್ತು ದಿಕ್ಪ್ರಾಂತಮಂ ೧೦೮
(ಅನಂತನಾಥಪುರಾಣಂ, ೭–೭೩; ಸೂಕ್ತಿ ೮–೫೭)

---

[1]ಧಾನಂ ಬಹಳ(ಸೂ) [2]ದಶದಿರೆ(ಸೂ) [3]ತಾಯ್ವನೆ ಜೀವನಂ(ಸ) [4]ಯಾಗಸವೋಲೆ(ಸ)
[5]ಮೊದಲಿಗೆ(ಸ)

ಮೆಟ್ಟಿದುದಲ್ಲದಿಲ್ಲುಱಿದ ಭೂತಳಮೆಣ್ದೆಸೆಗಳ್ ನಭಸ್ಥಳಂ
ತೊಟ್ಟನೆ ಮಾಯಮಾಯ್ತು ತನುವಿರ್ದಸುವಿಲ್ಲೆನುತುಂ ಕರಾಗ್ರದಿಂ
ಮುಟ್ಟುತಮಿರ್ದ ತಾಣದೊಳೆ ಸುಮ್ಮನೆ ವಿಸ್ಮಯದಿಂ ಜನೋತ್ಕರಂ
ನಟ್ಟವೊಲಿರ್ಪಿನಂ ಸಿಮಿರ್ದು ಪರ್ಬಿದುದುರ್ವಿ ಮಹತ್ತಮಂ ತಮಂ ೧೦೯

(ಶಾಂತೀಶ್ವರಪುರಾಣಂ, ೧೧-೨೨)

ಕಮಲಭವಾಂಡಮೋವರಿಯ ಭಾಸ್ಕರದೀಪಕ ನಂದೆ ವಸ್ತುಭೇ
ದಮನಱಿಯಲ್ಕೆ ಬಾರದವೊಲುರ್ಬಿದ ಕತ್ತಲೆ ಪರ್ಬಿ ದಿಕ್ಕನಾ
ಕ್ರಮಿಸಿ ಕೌಂಗೆ ಕತ್ತಲಿಸಿ ಸೋಜಿಗಮಿಂತಿದೆನಲ್ಕೆ ಮರ್ತ್ಯಹೃ
ತ್ಕಮಲಂ ವಿರೋಧಮಂ ಪಡೆದುದೇವೊಗೞ್ವಂ ತಿಮಿರಾತಿರೇಕಮಂ ೧೧೦

ಇನನಿಲ್ಲದ ಶೋಕ ಕಪ್ಪು ಮೊದಲೆತ್ತಲ್ ತನ್ನ ಮಿತ್ರಂ ಸಮು
ದ್ರನನುಲ್ಲಂಘಿಸುತೆಯ್ದೆ ಪದ್ಮಿನಿಯ ವಕ್ತ್ರಂ ಕೆಟ್ಟು ತೋರ್ಪಂದಮೇಂ
ಘನಮೋ ಭೂಗೃಹಕಿಟ್ಟುದೊಂದು ಮಣಿದೀಪಂ ಪೋಗೆ ಮರ್ಬಿಲ್ಲವಾ
ನುಸೆಯಂ ತೀವ್ರಪ್ರದೊಂದು ಚೋದ್ಯಮೆಯೆನಲ್ಕಾ ಮರ್ಬು ಪರ್ಬಿತ್ತಹೋ ೧೧೧

ಇನನೆನ್ನಾಸೆಯನೊಲ್ಲದೀಗಳಪರಾಶಾಯೋಷಿದಾಸಕ್ತನಾ
ದನವಂ ಸಂಚಳನೆನ್ನ ಪಕ್ಕ[1]ದೊಳಗಿರ್ದು ಸಯ್ತಿರಂ[1] ಪೋಗಿ ಪ
ದ್ಮಿನಿಯಂ ಪೊರ್ದುವನೆಂದು ನೊಂದು ಹರಿದಿಕ್ಕಾಂತಾನನಂ ಕಂದಿತೆಂ
ಬಿಸೆಗಂ ಮರ್ಬು ಪೊದೞ್ದು ಪರ್ವಿದುದಗುರ್ವಿಂ ಪೂರ್ವದಿಗ್ಭಾಗಮಂ ೧೧೨

(ಶಾಂತೀಶ್ವರಪುರಾಣಂ, ೮-೯೯)

ಮುಂಬಿಟ್ಟು ಪರೆದ ಕತ್ತಲೆ
ಯಂ [2]ಬಿದಱಿ ತೆರಳ್ಚಿ ಬೆಳಪ ಬೆಳಗಿಂದೆಸೆದಿ[2]
ರ್ಪಂಬುಜಸಖನಂತಿರೆ [3]ಮಿಂ
ಚುಂ[3]ಬುಱು ಬೆಳಗಿದಪುದಖಿಳ ಗಗನಾಂತರಮಂ ೧೧೩

(ಕಾವ್ಯಾವಲೋಕನಂ, ೬೮೨)

---

[1]ದೆಸೆಯೊಳ್ ಸ್ಯೆವೆತ್ತಿರಂ(ಸ) [2]ಬಿದರಿಸೆ ತೊಳಗಿ ಬೆಳಗಿ ಕಿಱಿದಾಗಿಯೆ ತೋ(ಸ)
[3]ಮೀನುಂ(ಅ)

## ದೀವಿಗೆಯ ವರ್ಣನೆ ;—

ಪಣತೆಗೆ ಭಾನು ಬತ್ತಿಗೆ ಸರಸ್ವತಿ ಮೇಣುರಿಗಗ್ನಿಯುಗ್ರಕಂ
ಗಣಪಡೆ ಲಕ್ಷ್ಮಿ ತ್ರೈಲಕೆ ನಿಶಾಕರನಂತಧಿದೈವವಾಗಿ ಟಿಂ
ಟಣಿಸುತೆ ತೋರ್ಪ ಕತ್ತಲೆಯ ಮೊತ್ತಮನೋಡಿಸಿ ಸುಪ್ರಕಾಶದೊಂ
ದಣಿಯೆನಿಸಿರ್ಪ ದೀಪ ಪರಿಭಾವಿಸೆ ಮಂಗಳದಂಗಮಲ್ಲವೇ ೧೧೪

ಇವು ರವಿಯುಱಿಯಾಳ್ಗಳುಮೆನ
ಲಿವು ತಮವಾರಿಧಿಯ ಪವಳದೊಳ್ಗುಡಿಯೆಂದೆನ
ಲಿವು ರಾತ್ರ್ಯಂಗನೆ ತುಱುಬಿದ
ನವಚಂಪಕಪೂಗಳೆನಲು ಸೊಡರುಗಳೆಸೆಗುಂ ೧೧೫

ಇರುಳೆಂಬ ತೋಂಟವಾಳಂ
ಪರಿಪೂರ್ಣದಿ ಬೆಳೆದ ತಮಸಚಂಪಕ ತರುಗಳ್
ಬಿರಿಮುಗುಳನಾಂತವೆಂಬಂ
ತಿರೆ ದೀಪಗಳೆಟ್ದಿವಂದು ಮನೆಮನೆಯೆಡೆಯೊಳ್ ೧೧೬

ಪಿಂದಿಹ ತಮಮುಂ ಕಾಣದೆ
ಮುಂದಣ ಕತ್ತಲೆಯ ಪಿಡಿವೆನೆಂಬೀ ಲಜ್ಜೆಯೊ
ಳೊಂದಿ ಬಡವಾಗಿ ಮನೆಗಳೊ
ಳೊಂದಿದ ತೆಱನಂತೆ ದೀಪಗಳ್ ಕಂಗೊಳಿಕುಂ ೧೧೭

ಕತ್ತಲೆಗೆ ಬೆಚ್ಚಿ ಮನೆವುಗ
ಲತ್ತಲ್ ಬೆನ್ನಟ್ಟಿ ಬಂದು ನಿಂದಿದೆಯೆನಗಿಂ
ದೆತ್ತಣವಿಧಿಯೆಂದೆನುತಂ
ಚಿತ್ತದ ವ್ಯಾಕುಳದಿ ತಲೆಯನೊಲೆದುದು ದೀಪಂ ೧೧೮

ನೆಲಸಿ ನೆಲೆಗೊಂಡ ಪೆರ್ಗ
ತ್ತಲೆಯೊಳಗಂ ಕೂಡೆ ಕೂಡೆ ಮಿನಿಮಿನಿಸುತ್ತುಂ
ಪಲವುಂ ದೀವಿಗೆಗಳ್ ಕ
ತ್ತಲೆ ಪೂತಂತೊಪ್ಪುತಿರ್ದುವಾ ಮನೆಮನೆಯೊಳ್ ೧೧೯

ಒತ್ತಂಬಿಸಿ ಪರ್ವಿದ ಪೆ
ರ್ಗತ್ತಲೆಯೊಳು ಕೂಡೆ ಮಿನುಗಿ ಮಿನಿಮಿನಿಸುತ್ತುಂ
ಸುತ್ತಂ ಬೆಳಗುವ ದೀವಿಗೆ
ಕಟ್ತಿಲೆ ಪೂತಂತೆವೊಪ್ಪಿದುವು ಮನೆಮನೆಯೊಳ್ ೧೨೦

(ಗಿರಿಜಾಕಲ್ಯಾಣಂ, ೪-೭೯(ಅಧಿಕಪಾಠ)

ಮಹದಾಕಾರಂ ತಾರಾ
ವಹಮಾಯ್ತೆಂದದಕೆ ಪುರುಡಿಸುತ್ತುಂ ಲೋಕದ
ಗೃಹದಾಕಾಶಂ ಬಟುಕೆಂ
ಬಹು ತಾರೆಯನಾಂತ ತೆಱದೊಳೆಸೆದುವು ದೀಪಂ ೧೨೧

ತಮಮೆಂಗುಂ ಲಲಿತಾಪ್ರಸೂನತತಿಯಂತಾ ಸದ್ಮಮೆಂಬಾಗಸಂ
ಕ್ರಮದಿಂ ತಾಳಿದ ತಾರೆಯಂತಿರುಳ ನೋಡಲ್ಕೆಂದು ಸೂರ್ಯಂ ಕಳುಂ
ಪಿ ಮನಂಗೊಂಡುಱೆ ಬಂದ ಗುಪ್ತಚರರಂ ತಾರಾರಿಯೆಂಬಬ್ಧಿವಿ
ದ್ರುಮವಲ್ಲೀನನೆಯಂತೆ ತೋಱುದುವು ದೀಪಂ ಗೇಹಗೇಹಂಗಳೊಳ್ ೧೨೨

ಮಡದಿಯರೆಲ್ಲಂ ಪೊತ್ತಿಸಿ
ತಡೆಯದೆ ಕೈಮುಗಿದು ನೆನೆದು ಮನೆದೇವತೆಯಂ
ಕುಡಿವೆರಳೊ[1]ಳಿಟ್ಟು ಮಕ್ಕಿಂ[1]
ದಿಡುವರ್ ಬಾಲರ್ಗೆ[2] ರಕ್ಷೆಯಂ ಸೊಡರ್ಗುಡಿಯಿಂ[2] ೧೨೩

(ಸೂಕ್ತಿಸುಧಾರ್ಣವಂ ೮-೧೮೮)

ಆವರಿಸಿದ ಕಟ್ತಿಲೆಯಂ
ತೀವಿಯೆ ನೆಱೆ ನೋಟ್ಪುದೆಂದು ಸೂರ್ಯಂ ಕಟಿಪಿದ
ಜೀವಿನ ಚರರುಗಳೆಂದೆನೆ
ದೀವಿಟಿಗೆಗಳಿದ್ದವಿಂದು ನೃಪನೋಲಗದೊಳ್ ೧೨೪

ಆವರಿಸುತಿರ್ಪ ತಮಕೆ ತ
ನೋಪ್ಸೈರಿ[3]ಯುಮಿರದೆ ಕಳುಪಿದುಟಿಯಾಳೆನೆ[3] ದೀ
ಪಾವಳಿಗಳೆಸೆದವಖಿಳಗೃ
ಹಾವಳಿಯೊಳ್ [4]ಪೊಟಿಗಿ ಬೆಳಗಿ ರಂಜಿಸಿ ತೋರ್ಕುಂ[4] ೧೨೫

(ಸೂಕ್ತಿಸುಧಾರ್ಣವಂ, ೮-೧೮೭)

---

[1] ಳಂಟುಪಕ್ಕಿಂ(ಸೂ) [2] ಯಾ ಸೊಡಗರ್ಗುಡಿ ಕಪ್ಪಂ(ಸೂ) [3] ಧರಿತ್ರಿಗಿಟಿದುಳಿಯಾಳದನೆ (ಸೂ) [4] ಬರ್ಪ ಶಶಿಗೆ ನೀರಾಜಿಪವೋಲ್(ಸೂ)

## ಜಾರೆಯರು:—

ಅಳಿಯಂ ಕತ್ತುರಿಯಂ ಕೋ
ಕಿಳನಂ ಕಾಳಿಂದಿಯಂ ವಿನೀಳಾಂಬುದಮಂ
ಬಳನನುಜನನುಱಿ ಪಾಡಿದ
ಳಳವಟ್ಟತಿ ಜಾರೆ ಧೀರೆ ರಜನೀಮುಖದೊಳ್ ೧೨೬

(ಗಿರಿಜಾಕಲ್ಯಾಣಂ, ೪-೭೧)

ಪರಸಿದರಿದಿರ್ಗೊಂಡರಲಂ
ಕರಿಸಿದರಾದರಿಸಿದರ್ ಕರಂ ನುತಿಗೆಯ್ದರ್
ಬೆರಸಿದರೆಳಸಿದರಪ್ಪಿದ
ರೆರೆದರ್ ನಲಿನಲಿದು ಜಾರೆಯರ್ ಕಟ್ಟಿಲೆಯಂ ೧೨೭

(ಗಿರಿಜಾಕಲ್ಯಾಣಂ, ೪-೭೨)

ರಸೆಯಂ ನಭಸ್ಥಳಮನೆ
ಣ್ದೆಸೆಯಂ ದಟ್ಟೈಸುತಮಿರ್ದ ತಮದೊಳ್ ಜಾರ
ಪ್ರಸರಂ ಪೊಱಮಟ್ಟುದು ಶಂ
ಕಿಸದೊಲಿದಲ್ಲಲ್ಲಿ ಕುಟಿಲಪಥಸಮುತಳದೊಳ್ ೧೨೮

(ಗಿರಿಜಾಕಲ್ಯಾಣಂ, ೪-೮೧)

ಒದವಿದ ಪೆರ್ಗತ್ತಲೆಯೊಳ್
ಮುದದಿಂ ಪೊಱಮಟ್ಟ ಜಾರಮಿಥುನಾಳಿಗೆ ಕಂ
ಡುದೆ ಬರವೆಳಸಿತೆ ಮನವಿ
ರ್ದುದೆ ಮನೆ ಪಟ್ಟೆದುದೆ ಪಾಸು ಮುಟ್ಟಿತೆ ಮರ್ಮಂ ೧೨೯

(ಗಿರಿಜಾಕಲ್ಯಾಣಂ, ೪-೮೨)

ದಾರಿಯೊಳಿಡುಕುಱಿಬೊಳೋಣಿಯೊ
ಳಾರವೆಗಳ ತಳದೊಳಂಗಡಿಗಳೊಳ್ ಮನೆಯೊಳ್
ಕೇರಿಯೊಳಾವಗೆಗಳೊಳಂ
ಬೇರೂಱಿತು ಜಾರರನುಭವಂ ಕಟ್ಟಿಲೆಯೊಳ್ ೧೩೦

(ಗಿರಿಜಾಕಲ್ಯಾಣಂ, ೪-೮೩; ಸೂಕ್ತಿ, ೮-೧೩೬)

ತಾಗದ ಚುಂಬನಮುೞಿತೆ ಸೊ
ಪ್ಪಾಗದ ಕರಘಾತಮುಗಲದಿರ್ಪನುಭವದೊಳ್
ಸಾಗಿಸುವ ಸರಭಸಂ ಮಿಗೆ
ರಾಗಿಸುವ ಮನಂ ಮನೋಹರಂ ಜಾರೆಯರೊಳ್ ೧೩೧

(ಗಿರಿಜಾಕಲ್ಯಾಣಂ, ೪-೮೪)

ಆರ್ಪೈವ ಮನಂ ಸುಖದೊಳ್
ಪೂರ್ಪೈಪ ಶರೀರಮುಸಿರದಿರ್ಪಡಕಂ
ಸ್ಮೇರಾಸ್ಯಂ ಮೊಳೆನುಡಿ ಗತ
ಸೌರಂಭಂ ಸುರತಸಂಭ್ರಮಂ ಜಾರೆಯರಾ ೧೩೨

(ಗಿರಿಜಾಕಲ್ಯಾಣಂ, ೪-೮೫)

ಪುಳುಕಿಪ ತನು ಪೊಣ್ಮುವ ಸುಯ್
ಬಳೆವ ರತಂ ಬೆಮರ್ವ ಗಂಡಮಿೞಿವಶ್ರು ಸುಖಂ
ದಳೆವ ಮನಂ ಕಂಪಿಪ ಕೈ
ಕಳವಳಿಸುವ ಗಳಮನೂನಮುಪತೀಕುಳದೊಳ್ ೧೩೩

(ಗಿರಿಜಾಕಲ್ಯಾಣಂ, ೪-೮೬)

ಕಲ್ಲೆನ್ನದೆ ಮುಳ್ಳೆನ್ನದೆ
ಸಲ್ಲಲಿತಾಸ್ಥಾನಮೆನ್ನದಿರ್ದಿರ್ದೆಡೆಯೊಳ್
ಪಲ್ಲವಿಸಿತು ಪೂತುದು ಫಲ
ವಲ್ಲರಿಯಂ ಪಡೆದುದರರೆ ಜಾರರ ಸುರತಂ ೧೩೪

(ಗಿರಿಜಾಕಲ್ಯಾಣಂ, ೪-೮೭; ಸೂಕ್ತಿ, ೮-೧೫೭)

ಒಬ್ಬುಳಿಸದೆ ಸಮಸುಖದೊಳ
ಗುರ್ಬಿಸುತಿಂತೊಲೆದು ಪಲವು ತೆಱದಿಂದಂ ನಿಂ
ದುರ್ಬುಗೆ ಕೊರ್ಬುಗೆ ಪರ್ಬುಗೆ
ಗರ್ಬಿಸುತಭಿಸಾರಿಕಾನಿಕಾಯಂ ನಿಶಿಯೊಳ್ ೧೩೫

(ಗಿರಿಜಾಕಲ್ಯಾಣಂ, ೪-೮೮)

ಇಳೆಯುಸಮರ್ಚಿ ಮುಚ್ಚಿ ಮುಸುಕಿರ್ದ ತಮಂಧಮನಟ್ಟಿಯಿಂದೆ ಕಂ
ಡಳಿಕುಳಮೆಂದು ಕಾಳಿಮತರಂಗಿಣಿಯೆಂದು ವಿಸೀಳಮೇಘಮೆಂ
ದಳಕದೊಳೊತ್ತುತುಂ ಸಲಿಲ ಕೇಳಿಯುಮಂ ನವಿಲಾಟದೇಟಿತ್ತಯಂ
ತಳೆದಭಿಸಾರಿಕಾನಿಕರಮೊಪ್ಪಿದುದಾತ್ತ ರತಾಂತಲೀಲೆಯೊಳ್ ೧೩೬

(ಗಿರಿಜಾಕಲ್ಯಾಣಂ, ೪-೮೯)

ಸಡಿಲಿಸಿದಂಬರಂ ತೆರೆಯುದಿರ್ಪಧರಂ ನಸುಚುಂಬಸಂ ಮನಂ
ಬಿಡಿದಿಹ ಕಾತರಂ ಭಯಮೊಳೊಂದುವ ಚಿತ್ರವಡಂಗವಪ್ಪು ಮೆಯ್
ತೊಡರದ ಬಂಧ ಕಾಣಿಸದ ಚಿಹ್ನಮು ಮೇಲ್ಪಡೆದಿರ್ಪ ಪೆರ್ವಸಿರ್
ನಡುಗುವ ಕಾಯದಿಂ ಸುರತಗೋಷ್ಠಿಯೊಳಿರ್ದರು ಜಾರಜಾರೆಯರ್ ೧೩೭

ಮಾವನು ರೋಗಿಯತ್ತೆ ಮಿಗಿಲಂಧಕಿ ಜೇಟಿ ಗೃಹಕ್ಕೆ ಸೇರಳಾ
ಭಾವನು ಪ್ಪೆದುಸಂ ಪತಿಯುಮೂರಿಗೆ ಪೋದರು ಪೌಳಿ ಬಿಳ್ದುದೀ
ದೀವಿಗೆಗೆಣ್ಣೆಗಾಣೆ ಕಡೆಯೆಮ್ಮೆಯ ವಾಸಮು ಕಾವರಿಲ್ಲಮಿ
ನ್ನೇನೆನುವೊರ್ವಳೆಂದು ಪದಿರಿಂದಲಿ ಪೇಳ್ದಳು ಜಾರೆ ಜಾರೆಗಂ ೧೩೮*

ಪೊದೆದ ನವೀನನೀಲಪಟವಿಕ್ಕಿದ ಕಸ್ತುರಿ[೧]ಯಣ್ಪು ತೊಟ್ಟ[೧] ನೀ
ಲದ ತೊಡವೊಪ್ಪೆ ಜಂಗನು[೨]ತಮಃಕಳೆ[೨]ಯಂತೆ ತಮಸ್ತಮಾಲವೃ
ಕ್ಷದ ಚಳಶಾಖೆಯಂತೆ ತಮನೊಡ್ಡಿದ ಲೋಲಪತಾಕೆಯಂತೆ [೩]ಪೆ
ರ್ಚಿ[೩]ದ ತಮದೊಡ್ಡಿನೊಳ್ ಸುಟಿಲನೆಸ್ಫುಟಚಾರಿಯರಂದು ಜಾರೆಯರ್ ೧೩೯
(ಜಗನ್ನಾಥವಿಜಯಂ, ೧೬-೧೦೨; ಅ. ವಾ. ಕಾವ್ಯಸಾರ ೬೦೭; ಸೂಕ್ತಿ, ೮-೧೬೧)

ಕುಱುಕುಱುಗೊಂಡು ನಿಂದು ಸಲೆ ನೋಡುತ ಕೆಮ್ಮನೆ ಕೆಮ್ಮಿ ಕೆನ್ನೆಯಂ
ತುಱುಸುತ ಸನ್ನೆಯಿಂ ಕರೆದು ನಾಲಗೆಯಾಡುತ ನೆತ್ತಿ ಮೇಲುದಂ
ತೆಱೆದು ಕುಚದ್ವಯೋನ್ನತಮನೊಯ್ಯನೆ ತೋಱುತ ಭಾವಕೇಶಮಂ
ತೆಱೆಯುತ ಕಟ್ಟುತಂ ಬಿಡುತಲ್ಪೆದಿತು ಜಾರೆಯರೊಂದು ಭಾವದಿಂ ೧೪೦

ಎಱಗುವ ಕಣ್ಣಸನ್ನೆ ಬಗೆಮೋಱುವ ಪುರ್ವಿನ ಜರ್ವು ಜಾರರಂ
ಸೆಱೆಯಿಡುವಾನನಂ ಪದಿನನಾಡುವ ಸೂಳ್ನುಡಿ ದುಷ್ಟಚೇಷ್ಟೆಯಂ
ಮೆಱೆಯಿ[೪]ಪ್ಪುದೊಂದು[೪] ಭಂಗಿ ಮಱೆ[೫]ಮಾತು[೫] ಮನೋಜಸುಖಕ್ಕೆ ಸಂತತಂ
ಮಱುಗುವ ಚಿತ್ತದಿಂ ರಜನಿರಂಜನಮಾದುದು ಬಂಧಕೀಜನಂ ೧೪೧
(ಸೂಕ್ತಿಸುಧಾರ್ಣವಂ, ೮-೮೫)

ನೆರೆಮನೆಗೇಳದಂತೆ ಮನೆಯಾಣ್ಮನ ನಾಲಗೆಯೇಳದಂತೆ ಮು
ನ್ನಱಿವರು ಕಾಣದಂತೆ ಕೆಲಸುಂ ನೆಲಸುಂ ನಗದಂತೆ ಕಣ್ಣೊಳಾ
ದರಿಸುವ ಕಣ್ಣೊಳೋದಿಸುವ ಕಣ್ಣೊಳು ಭಂಗಿಪ ಕಣ್ಣೊಳಿಯ್ದೆ ಸಂ
ಹರಿಸುವ ಕಣ್ಣೊಳಂ ನೆರೆವ ಜಾತಿಯ ಜಾರನೆ ಜೀವಮಲ್ಲವೇ ೧೪೨

---

*ಈ ಪದ್ಯ ತೀರ ಹೊಸಗನ್ನಡ ಭಾಷೆಯಲ್ಲಿದೆ.
[೧]ಯಂಗವಾಟ(ಸ) [೨]ತಿರಸ್ಕಳೆ(ಸ) [೩]ಪರ್ಬಿ(ಸೂ) [೪]ಪ ತಮ್ಮ(ಸೂ) [೫]ವಾಱ(ಸೂ)

ವಾರಿಜಮಿತ್ರ[೧]ನಿಂ[೧] ಮಗುಳಿದಿರ್ಕೆ [೨]ತಮಂಧಮಿದೆಂದು[೨]ಮಿರ್ಕೆ ನೀ
ರೇರುಹವೈರಿಯುಂ ಸೆಱೆಯಲಿಕ್ಕುಗೆ [೩]ರಾಹು[೩] ಮನೋಜವಲ್ಲಭಂ
ಜಾರರಭೀಷ್ಟಮಂ ಕುಡುಗೆ ಲಡ್ಡುಗೆಯಂ ಬೆಸಕಂಗೆ ಹೆಂಡಮಂ
ಮಾರಿಗೆ ಬೊಮ್ಮಯಂಗೆ ಚವುರಂ ಪಿಡಿ[೪]ದೆತ್ತುವೆನೆಯ್ದಿ[೪] ಬೀಱುವೆಂ ೧೪೩
(ಸೂಕ್ತಿಸುಧಾರ್ಣವಂ, ೮–೪೪)

ಇಂದುಪವಲ್ಲಭಂ ಮು[೧೦]ನಿ[೧೦]ಯೆ [೧೧]ಕುಂಟಣಿಗಾದುದಜೀರ್ಣ ಬಿದ್ದಿನರ್
ಬಂದ[೧೨]ರುಣಲ್ಕೆ ಕಂಡನಬಿುತಿರ್ದಪನಿಂ [೧೨]ತ್ತೊಲಗಂ ಗೃಹಾಧಿಪಂ
ಬೆಂದುದು [೧೩]ಸೂಚಿ[೧೩]ಶಾಲೆ ಪೊಸತಾಯ್ತು ತಳಾರಿಕೆಯಿಂದು ಮೂಡಿದಂ
ಒಂದಡ[೧೪]ಸಲ್ಕೆಯೋ[೧೪]ಬಿಡಸಿತೆಂಬುದು ತ[೧೫]ಪ್ಪುಗುಮೋ ತ[೧೫]ಳೋದರೀ ೧೪೪
(ಸೂಕ್ತಿಸುಧಾರ್ಣವಂ, ೮–೧೬೩)

ನಿಱು ನಸು ಪಾಱೆ ಕಂಪಿನಿಸುಸೋಱೆ ಕುಚಂ ಬೆಮರೇಱೆ ಕಣ್ಮಲರ್
ಸೇಱುಮಿಱುದೆಯ್ದೆ ಮೀಱೆ ಕುಚಮುಂ ನಸು ಜಾಱೆ ಮುಖಾಬ್ಜ ದೂತಿಯೊಳ್
ಕೆಱುನಗೆದೋಱೆ ತೋಳ್ಗಳೆಡೆ ಪಾಱೆ ಮನಂ ನಲವೇಱೆ ರಾತ್ರಿಯೊಳ್
ಮಱುಕದೆ ಪಾಣ್ಬೆಯ್ದಿದಳನಂಗನ ಮಂಗಳಲಕ್ಷ್ಮಿಯೆಂಬಿನಂ ೧೪೫

ಮಾರುತನಂತೆ ಸಿಂದು ಜಲದಂತಿರೆ ಭೇದಿಸಿ ಚೋರನಂತಿರಲ್
ಸಾರಿ ತಮಂಧದಂತಡಗಿ ಸತ್ಕವಿಯಂತೆ ವಿಚಾರಿಸುತ್ತ ಪಂ
ಕೇರುಹದಂತೆ ಕೈಮುಗಿದು ರಾಕ್ಷಸನಂತೆ ತೊಟಲ್ದು ನೀಳನೀ
ರೇರುಹಮಿತ್ರನಂತೆ ತಲೆದೋಱುದಳೊಲ್ದಭಿಸಾರೆ ಜಾರನೊಳ್ ೧೪೬

ತನು ದಣಿವನ್ನಗಪ್ಪಿ ನಯನಂ ತಣಿವನ್ನಗ ನೋಡಿ ಪೆಂಪಿನಿಂ
ಘನಕುಚವಾಱೆ ತೀಡಿ ಮನಮುಂ ತಣಿವನ್ನೆಗ ಕೂಡಿ ಕೂರ್ಪುಕೊ
ರ್ವಿನ ಸುಖವಾಱೆ ಪೀರ್ದು ಮುಳಿಸಿಂ ಕಡು ಕಾತರ ಪಿಂಗೆ ಸಿಗ್ಗಿನಿಂ
ಕೊನರ್ವನುರಾಗದಿಂದೊಲಿದು ಕೂಡಿದಳೊರ್ವ ಲತಾಂಗಿ ಜಾರನೊಳ್ ೧೪೭

ಕೇರಿಗೆ ದೂರವಾದೆ ನಿನಗಾನೊಲಿದುಂ ಪೊಱಗಾದೆನಕ್ಕಟಾ
ಕೂರದ ಮೆಚ್ಚದರ್ಗೆ ಲಘುವಾದೆನನಂಗನ ಪುಷ್ಪಬಾಣದಿಂ
ಘೋರಕೆ ಸಂದು ಬೆಂದು ಮನೆಗಾಗಿರೆ ನಾಂ ಪಗೆಯಾದೆನೆಂದು ಸಂ
ಸಾರವು ಸಾರವೇಱೆನುತಲಿಕ್ಕಿದಳಂಗನೆ ಕಣ್ಣನೀರ್ಗಳಂ ೧೪೮

---

[೧] ಸುಂ(ಸ) [೨] ತಮಂ ತಪದೆಂದು(ಸೂ) [೩] ರಾಜ(ಸ) [೪] ದೆತ್ತುವೆನೆತ್ತಿ(ಸೂ) [೧೦] ಳೀ(ಸೂ)
[೧೧] ದೂಜವಿ(ಸೂ) [೧೨] ರಬುತ್ತಮಿರ್ದಪುದು ಕೂಸಿನಿಸಂ(ಸೂ) [೧೩] ದೂತ(ಸ) [೧೪] ಸಿದೊರ್ಣಜೇ
(ಸೂ) [೧೫] ಪ್ಪದಿದೇ(ಸ)

ನಿಡುಸುಯ್ವುಂ ತನ್ನೊಳೊತ್ತಂಬರದಿ ನಿಲಿಸುತಂ ಬಿಟ್ಟ ನಲ್ಕೇಶದಿಂದಂ
ತೊಡೆಯುತ್ತುಂ ತೊಂಡೆವಾಯಂ ಶ್ರಮಜಲಕಣಮಂ ಸೀರೆಯಿಂದಾಱಿಸುತ್ತುಂ
ನುಡಿಯುತ್ತುಂ ಪಾಣ್ಬನೊಳ್ ಕೂಡಿದ ವಿಷಯಸುಖವ್ಯಾಪ್ತಿಯಂ ದೂತಿಗಾಗಳ್
ನಡೆಯುತ್ತುಂ [1]ಬಂದು ನಿಂದಳ್ ನಿಜನುಣಿಭವನದ್ವಾರದೊಳ್ ಜಾರೆಯಾಗಳ್[1]
(ಸೂಕ್ತಿಸುಧಾರ್ಣವಂ, ಲ-೧೬೭)

ಬಿಡುಮುಡಿಯಂ ತೊಡರ್ಚಿ ಪರೆದಿರ್ದಳಿಕಂಗಳನೊತ್ತುತಂ ಸಡಿ
ಲ್ದುಡುಗೆಯ ಸುತ್ತುತಂ ಬಿರಕೆದಂಬುಲಮಂ ಬಿಸುಡುತ್ತೆ ಮೆಯ್ಯ ಕಂ
ಪಿಡುವ ಸುಗಂಧಮಂ ಸೆಱಗಿನಿಂ ತೊಡೆವುತ್ತತಿಜಾರೆ ಜಾರನೊಳ್
ತಡೆಯದೆ ಕೂಡಿ ಜಾರೆ ತವಕಂ ಮಿಗಲೆಯ್ದಿದಳಾತ್ಮಗೇಹಮಂ ೧೫೦

ಸರಭಸದಿಂದೆ ತತ್ಪತಿಯನಂಜಿಸಿ ರಾಕ್ಷಸರಂತೆ ರಾತ್ರಿಯೊಳ್
ಚರಿಯಿಸಿ ದುಷ್ಟವಾಜಿಯವೊಲೊತ್ತುಗಳಂ ಪಿಡಿತಪ್ಪಿ[2][ಪೋತ್ತಿ][2] ಬಪ್ಪ ಕ
ಳ್ಳರ ತೆಱನಂತೆ ಮೆಯ್ಗಳಿವ ಷಂಡನಿಯೋಗಿಯವೋಲ್ ನುಸುಳ್ದು ಸೌಂ
ದರಿಯನೆ ನೋಡಿದಂ ಸುಕೃತಧಾರೆಯನಾ ಬರುತಿರ್ಪ ಜಾರೆಯಂ ೧೫೧

ಮೊಲೆಬಿಣ್ಪಿಂ ಬಳ್ಕುತುಂ ಮೆಲ್ಲನೆ ಪದವಿಡುತುಂ ನೀಳ್ದಪಾಂಗಂಗಳಿಂದಿ
ರ್ಕೆಲನಂ ನೋಡುತ್ತುಮೆತ್ತಂ ಸುಱಿವ ನೆಬಿಲನಾರಯ್ಯುತುಂ ದೂಱದಿಂ ಬ
ರ್ಪುಲಿಪಂ ಕರ್ಣಾವತಂಸಕ್ಕೆಱಗುವಳಿಗಳಂ ಸೋವಿ ನಿಂದಾಲಿಸುತ್ತುಂ
ಚಳವೇಣೀಭಾರದಿಂದೋಸರಿಸುವ ಮುಸುಕಂ ಸಾರ್ಚುತುಂ ಪಾಣ್ಗೆ ಪೋದಳ್ ೧೫೨
(ಲೀಲಾವತಿ; ೩-೧೩, ಕಾವ್ಯ ಅ. ವಾ. ವಿ ೯೦೫; ಸೂಕ್ತಿ, ಲ-೧೫೫)

ಬಿಡದಿರು ಬೀಡನಣ್ಣ ಕಡೆಗ್ನೆಮನೆ ಬಪ್ಪವರಾರುಮಿಲ್ಲ ಮೇ
ಣಡಿಗಡಿಗಂ ತಳಾರರುಲುಹಿಲ್ಲ ಗೃಹಾಧಿಪನೂರ್ಗೆ ಪೋದನಾಂ
ನುಡಿಸಲುಬಾರದಾ ಭರದಜನ್ನನೆ ತಾಯತಿವೃದ್ಧೆ ಹೀನೆಯೋ
ಗಡಿಸುತಲಿಪ್ಪಳತ್ತೆಯೆನುತಂ ನುಡಿದಳ್ ಸಲೆ ಪಾಣ್ಗೆ ಜಾಣೆನೊಳ್ ೧೫೩

ಉಡುಪತಿ ಪಿಡಿಯಂಬರಮಂ
ಬಿಡು ಕತ್ತಲೆಯತ್ತ ಸಾರು ಸಾರು ಮದೀಶಾ
ತಡದಿರಿ ತಡದಿರಿಯೆನುತಂ
ಉಡುಪತಿಯುಂ ಪತಿಯಚಿತ್ತಮಂ ಸತಿ ಪಡೆದಳ್ ೧೫೪

---

[1]ಪಾಣ್ಬೆಯೊರ್ವಳ್ ನಿಜಮಣಿ ಭವನ ದ್ವಾರದೊಳ್ ಬಂದುನಿಂದಳ್(ಸೂ) [2]ಪ್ರತ್ರ(ಸ)

ಉಡುಪನೊಡನಾಡುವಳಿಯಂ
ಕೊಡಬೇಹುದು ಕಾಂತೆಯೆಂಪೊಡಾತಂಗೆಂದಳ್
ಕಡುಬಡುವರ ನಿಡುಹೊದಕೆಯ
ಕಡೆಸೆಜಗಂ ಕೊಟ್ಟಡಾನು ಕೊಡುವೆಂ ಚದುರಾ ೧೫೫

ಬಿಡಬೇಡೆಮ್ಮನೆ ಬೀಡರಕ್ಕೆ ಪಿರಿದುಂ ಕಣ್ಣಾಣಳೆಮ್ಮತ್ತೆಬೊ
ಬ್ಬಿಡೆ ಮಾವಂ ಕಿವಿಗೇಳನೆನ್ನಪತಿ ತಾಂ ಬೇಱೂರ್ಗೆ ಪೋಗಿರ್ದಪಂ
ಕಡೆಯಾ ಮೂಡಣ ಕೋಣೆಯಲ್ಲಿ ಶಯನಂ ಮತ್ತಾರುಮಿಲ್ಲಲ್ಲಿ ನೀಂ
ಬಿಡಬೇಡೆಂದತಿಜಾತಿಜಾರೆ ನುಡಿವಳ್ ಜಾರಂಗೆ ಜಾರೋಕ್ತಿಯಂ ೧೫೬

ಪಮುಳಿಸದಂಗಮೆಟ್ಟಿಱದ ಕಣ್ಮಲರಾಜದ ಸೇದೆ ಮುಗ್ಗಲಿ
ಕ್ಕದ ಪುಳುಕಂಗಳಿಂಗದ ಬೆಮರ್ ಮಿಡುಕೋಡದ ಪುರ್ವು[1] ಬೀಗಿಬೀ
ಯದ ತುಟಿ ಕೆತ್ತುಗುಂದದ ಕುಚಂ[1] ನಡುಕಂಗಿಡದೂರು ಗಂಡೆಯೇ
ಱದ ಕರಘಾತಮೊಪ್ಪೆ ಸುಸಿಲಂ ಸಮಿಪೊಯ್ಯನೆ ಜಾರೆ ಜಾಱದಳ್ ೧೫೭
(ಲೀಲಾವತಿ ೩–೧೫; ಕಾವ್ಯಸಾರ ಅ. ವಾ. ವಿ ೯೦೪; ಸೂಕ್ತಿ, ೮–೧೬೨)

ಪುರುಷರ ಸಮಕ್ಷದೊಳ್ ಕುಚ
ಭರಮುಂ ನೀವುವೊಡೆ ವಾಮಕರದಿಂ ಮುಡಿಯಂ
ಹರಿಣಾಕ್ಷಿ ಬಿಟ್ಟು ಮುಡಿವೊಡೆ
ನಿರಂತರಂ ಪಾಣ್ಬೆಯೆಂದು ಬಗೆಗಾ ವಧುವಂ ೧೫೮*
(ಮದನತಿಲಕಂ, ೬–೩೭)

ನೋಡದ ಮಾಬಿಕ್ಕಯಿಂಪಡರೆನೋಡುವ ಪುರ್ವಿನ ಜರ್ವಿನಿಂಪೆ ಮಾ
ತಾಡುವ ಕೂಸನೆತ್ತಿ ಪರಿ[2]ಚುಂಬಿಸಿ ತನ್ನ[2] ರತೋಪಚಾರದೊಳ್
ಮಾಡುವಳುರ್ಕೆ [2]ಕೈಗಱಿಯೆ[2] ತೋಱುವ ಸಂದಣಿಯಾಗೆ ಪೊರ್ದೆ ಬಾ
ಯ್ದೂಡುವ ಜಾರೆ ಜಾರನ ಸೆಗಬಿತ್ತುಯ ಕಾಮನ ಬಯ್ಕೆಯಲ್ಲಳೇ ೧೫೯

---

ಪುರುಷ ಸಮಕ್ಷದೊಳಂ ಕುಚ
ಭರಮುಂ ನೀವುತ್ತ ಮತ್ತೆ ತನ್ನಯ ಮುಡಿಯಂ
ಭರದಿಂದ ಬಿಟ್ಟು ಮುಡಿವೊಡೆ
ನಿರುತಂ ತಾಂ ಪಾಣ್ಬೆಯೆಂದು ಬಗೆದೋಱುವಿನಂ(ಸ)

[1] ಕೆತ್ತುಗುಂದದ ಕುಚ ಬೀಗಿ ಬೀಯುದಧರಂ(ಸೂ) [2] ರಂಜಿಸುತಂ ಸು(ಸ)

ಉಡೆಯಂ ಸಡಿಲಿಸಿಯುಡುವಡೆ
ನಡೆನೋೞ್ಪೊಡೆ ತನ್ನ ತಲೆಯುಮಂ ಕಿವಿಯುಮನಂ
ತಡಿಗಡಿಗೆ ತುಱಿಸಿಕೊಳ್ವೊಡೆ
ಪಡಿಮಾತೇಂ ನಿರ್ವಿಚಾರನುಱ ಪುಂಶ್ಚಲಿಯಂ ೧೬೦

ಪ್ರತಿಮೆಯ ಪೂಜೆ ದೇವತೆಯನೆಯ್ದುವವೋಲ್ ನೆವದಿಂ ಪೆಱರ್ಗೆ ಮಾ
ೞ್ಪತಿಶಯ ಚಾಟುವಂ ಮುಳಿಸುಮುಪ್ಪುಗೆಯುಂ ಮನದಾಸೆಯೊಳ್ಪು ಸಂ
ಗತರತದಲ್ಲಿ ಸಂತಸನೀವವೋಲ್ ಗೋಷ್ಠಿಗೆ ಜಾತಿಜಾರೆಯರ್
ಚತುರೆಯುಮಂ ಬೆಡಂಗಿಯುಮಭಂಗಿಗಳುಗಜಗೂಢಹೇತುಗಳ್ ೧೬೧

ಕೂಡಲ್ಪಡೆಯದೊಡಂ ಮಾ
ತಾಡಿ ಮೊಗಂ ನೋಡಿಯವರ ಗುಣವರ್ಣನಮಂ
ಪಾಡಿಸಿ ಮತ್ತಂ ದಣಿಯದ
ನಾಡಾಡಿಯ ಪಾಣ್ಬೆಗೊಳವು ಕುಟಿಲಮನೇಕಂ ೧೬೨
(ಮದನತಿಲಕಂ ೬-೪೮)

ವಿವಿಧಾನ್ನಪಾನ[1]ವೀಳೆಯ
ನವವಸ್ತ್ರಲೇಪನ[1]ಗಂಧ ಕುಸುಮಾದಿಗಳಂ
ನೆವಮಿಟ್ಟು ಪೆಱರ್ಗೆ ಮುಂದ
ಟ್ಟುವ ಪಾಂಗಿನ ಪಾಣ್ಬೆಯರವನಾರ್ [2]ಬಣ್ಣಿಸುವರ್[2] ೧೬೩

ನೆವದಿಂದಂ ಮನೆಯಾಣ್ಮನಂ ಮನೆಯುಮಂ ಗೆಲ್ದಿಯ್ದ ಸಂಕೇತಗೇ
ಹವನೊಲ್ದಂತಿರೆ ನಾಟಕಂ ನಲಿದು ಜಾರಂಗಿಂಬುಗೆಯ್ದಂಗಭಂ
ಗವ[3]ನೇನಂ ತೊಱೞ್ದಾಳಿ[3]ಗೊಂಡರಸಿ ಬೆನ್ನೊಳ್ ಬಂದರಂ ಬಂದು ಸಾ
ಧುವಿನಂತಿರ್ಪಳೆ ಜಾತಿಜಾರೆ ಸುಡು ದೂಱಂ ಪೇಳ್ವಿವಳ್ ಜಾರೆಯೆ ೧೬೪

ಕಱು ತಡೆವತ್ತು ಕೆಂಚನುಣಲೂ ಮನೆಯೂಕೆಗಳುಯ್ದುರಕ್ಕ ಮಿಂ
ದೞ್ತಯಪನಾಡಿದಪ್ಪನಸಗಂ ಮಡಿದಾರನೆ ಕೂಸನೇತಕೆಂ
ದಱಿಯೆನಪೊಂದು ಸೋಂಕಿಡಿದು ಪಾಡುವರಲ್ಲಿ ಬೆದಂಡೆದೊತ್ತನೆ
ತ್ತಱಿಸುವೆನೆಂದು ಪೋಪ ನೆವಮುಂ ಸಮಕಟ್ಟುವರಲ್ಲಿ ಪಾಣ್ಬೆಯರ್ ೧೬೫*
(ಸೂಕ್ತಿಸುಧಾರ್ಣವಂ, ೮-೧೩೪)

---

[1]ಖಾನಾದಿ ವಸ್ತ್ರಲೇಪನಸು(ಸೂ) [2]ಭಾವಿಸುವರ್(ಸೂ) [3]ನೆಂದುಂ ಪೊರೆದಾೞಿ(ಸೂ)

*ಈ ಪದ್ಯದ ಮೊದಲನೆಯ ಪಾದವನ್ನು 'ಶಬ್ದಮಣಿದರ್ಪಣ'ದ ೧೬೬ನೆಯ ಸೂತ್ರಕ್ಕೆ ಉದಾಹರಣೆಯಾಗಿ ಕೊಟ್ಟಿದೆ.

ಗಿಡುವಂ ಪಿತ್ತಿಲ[೧]ಸೊಡ್ಡ[೧]ಗೇರಿಡುಕುಜಂ ಪ್ರಾ[೨]ಸಾದಮುಂ ನುರ್ಗಿದಂ
ಗಡಿಯುಂ ಬೇಲಿಯುಸಿಕ್ಕಿಸಿರ್ದ ತಳಿಯುಂ ನೀರ್ದಾಣಮುಂ ತೋಂಟಮುಂ
ಮಡಲಿಟ್ಟಾರವೆಯುಂ [೩]ಬಚಿಲ್ದ ಮದಿಲಂ ಮಣ್ಗೊಂಡ ತುತ್ತಲ್ಗಳಿ[೩]
ಟ್ಟಿಡೆಯುಂ [೪]ಬಿಟ್ಟಿ[೪]ಬಿಸೇಗುಲಂಗಳಿಡೆಯುಂ ಕಾಯ್ದಿರ್ಪ[೫]ರಾ ಪಾಣ್ಬರುಂ[೫] ೧೬೬
(ಸೂಕ್ತಿಸುಧಾರ್ಣವಂ, ೮–೧೩೫)

ಆಗಳುಮಾ ತಳೋದರಿಗೆ ಮೇಖಲೆಯಾಗಿ ನಿತಂಬದೊಳ್ ಕುಚಾ
ಭಾಗದೊಳೆಯ್ದೆ ಹಾರಲತೆಯಾಗಿ ರದಚ್ಛದಪಲ್ಲವಂಗಳೊಳ್
ರಾಗವಿಶೇಷಮಾಗಿ [೬]ಪೊಡೆಯೊಳ್ ನಿಜಾಸೋಂಕಿಸಂದು[೬] ಸಂ
ಭೋ[೭]ಗಿಸೆ[೭] ಭಾಗ್ಯಮಿಲ್ಲೆನಗೆ[೮]ಮಾಡದೆ ಸಾಲದೆ[೮] ಗಂಡನಿರ್ದಪಂ ೧೬೭
(ಅನಂತನಾಥಪುರಾಣಂ, ೧೧–೨೨; ಸೂಕ್ತಿಸುಧಾರ್ಣವಂ, ೮–೧೩೮)

ದೆಸೆಯುಂ ನೋಡದಿರಕ್ಕ ನಿನ್ನ ಧವಳಾಪಾಂಗಂ ಪೊದಟ್ದಿಪ್ಪು[೯]ದಿ
ನ್ನು[೯]ಸಿಲ್ಪೀಡೆಲೆ ಮುಗ್ಧೆ ನಿನ್ನ [೧೦]ದಸನೇಂದು[೧೦] ಜ್ಯೋತ್ಸ್ನೆ ನೀಳ್ದಪ್ಪುದೆಂ
[೧೧]ದಸಮಾಲಂಬಿಕೆ[೧೧] ಮೌನಿಮಾಡಿ ಸಖಿಯುಂ ಸಂಕೇತಸದ್ಮಕ್ಕೆ ಪ
ಲ್ಲಿಸರಂದೋಜುತೆ ಮುಂತೆ ಮುಂತೆ [೧೨]ನಡೆದಳ್ ತನ್ನೂತಿ[೧೨] ಚಾತುರ್ಯದಿಂ ೧೬೮
(ಪುಷ್ಪದಂತಪುರಾಣಂ, ೮–೧೧೧; ಸೂಕ್ತಿಸುಧಾರ್ಣವಂ, ೮–೧೪೪)

ಕಳಿದು ಪಳಿಂಚಿನುಂಗುರವನೆಯ್ದೆ ಮುಸುಂಕಿ ಮುಗುಳ್ಚಿ ಸೆಕ್ಕಿ ಮೇ
ಖಲೆಯೊಳಡಂಗುವಂತೆ ನಿಜಾಯುಂ ಸೆಜಗಿಂ ಪೊಡೆಸುಟ್ಟು ದೂತಿ ಕೈ
ಗೊಳಿಸಿದ [೧೩]ಬಟ್ಟೆಯೊಳ್ ಪದವ ಬಲ್ಮೆಯೊಳಿಕ್ಕುತ ವಾಮ[೧೩]ದಂಘ್ರಿಯುಂ
ತಳದೊಳವುಂಕುತುಂ ನಡೆದು ಕಾಹಿನ ಗೇಹಮನೊರ್ವಳೆಯ್ದಿದಳ್ ೧೬೯
(ಸೂಕ್ತಿಸುಧಾರ್ಣವಂ, ೮–೧೪೫)

ಮುನಿಸಾಗಳೆ ತಿಳಿವಾಗಳೆ
ಮನದಾಸಜಮನುಸುರ್ವ ಮಾತುಮಾಗಳೆ ರತದಿಂ
ನನೆಗೊನೆಯೋಪುದುಮಾಗಳೆ
ಮನಸಿಜನ ಮಹೇಂದ್ರಜಾಲಮಮ ಜಾರೆಯರೊಳ್ ೧೭೦
(ಸೂಕ್ತಿಸುಧಾರ್ಣವಂ, ೮–೧೪೭)

---

[೧] ಸೋಣೆ(ಸೂ) [೨] ಕಾರ(ಸೂ) [೩] ಕಳಲ್ದ ಮುಗಿಲಂ ಮುಂಕೊಂಡು ಕೂತ್ತಾರ್ಗಳ್ಗಳಿ(ಸ) [೪] ಬಿಟ್ಟ(ಸೂ) [೫] ಪಾಣ್ಬರ್ಕಳುಂ(ಸೂ) [೬] ಪೊಳೆಪೊಳ್ದುಡೆಯೊಳ್ ನಿಜಾಸೋಂಕಿ(ಸೂ) [೭] ಗಿಪ(ಸೂ) [೮] ಯಾದೊಡೆ ಸಲ್ಲದೆ(ಸೂ) [೯] ದೀಯು(ಸ) [೧೦] ನಾಂಶು(ಅ.ಸೂ) [೧೧] ದುಸಮಾಲಂಗಿತ(ಅ) [೧೨] ನಡೆದೊಯ್ದಳ್ ದೂತಿ(ಸೂ) [೧೩] ಯಿಂದೆಡಪಿ ನೊಂದೊಡಮಾಯೆನಲಮ್ಮ(ಸೂ) [೧೪] ಬುದ್ಧಿ

ಗಳರುತಿ ತಾಲಸತ್ಕ್ರುತಿ ಸಚುಂಬನಸೀತ್ಕೃತಿ ಹಸ್ತತಾಡನಂ
ಗಳವೀಽಲಕ್ಷ್ಯಟತ್ಕೃತಿ ಲಯಂಗಳೊಳೊಂದಿ ರತೋತ್ಸವಂಗಳಂ
ಬಳೆಯಿಸಿ ಕಾದಲರ್ಗೆ ಪೆಱತಿದರ್ ಬಹುವಾದಿತ ಭೋಗದೇವತಾ
ನಿಳಯದ ಪಕ್ಕದೊಳ್ ಚಮರೊಡಂಬಡೆ ಕೂಡುವ ಜಾತಿಜಾರೆಯರ್ ೧೭೧

(ಸೂಕ್ತಿಸುಧಾರ್ಣವಂ, ಲ-೧೪೯)

ಇನಿಸಂ ಜಾರರ್ಗದೇಂ ಪ್ರೀತಿಯನೊಡರಿಸಿತೋ ಸ್ವೈರಿಣೀಸ್ವಲ್ಪಕಂಠ
ಧ್ವನಿ ಕಿಂಚಿತ್ ಚುಂಬನಂ ಸೀತ್ಕೃತಿ ವದನರವಂ ಮಂದನಿಶ್ವಾಸನಂ ಗೂ
ಢನಖಾಲೇಖಾಂಕಮೀಷದ್ವಚನ ರಚನವಾಕ್ಪ್ರೌಢಿ ಶೀಘ್ರಾಕುಳಾಲಿಂ
ಗನಮೀಷತ್ತಾಡನಂ ಸಂಕುಚಿತರತಿ ಚಳಾಪಾಂಗಮುತ್ಕಂಪಿತಾಂಗಂ ೧೭೨

(ಸೂಕ್ತಿಸುಧಾರ್ಣವಂ, ಲ-೧೫)

ಪಾವದೆ ಬರ್ಪ ದೂವನಿಸುವಂ ತವಕಂ ತವೆ ಮಿಕ್ಕುನೀವಿಯಂ
ಚಾರು ಕಳಾಪದೊಳ್ ನಿಲಿಸುತಂ ದೆಸೆಯಂ ನಸು ನೋಡುತುಂ ಪೊದ
ಱ್ದಿರುತಟಂಗಳಿಂದಿೞಿವ ನಾಣ್ಬಡನಂ ನಿಜಿಯಿಂದವೊತ್ತುತುಂ
ಜಾರೆಯರೆಯ್ದುತಿರ್ದರುಪಕಾಂತರನಾ ಬಹಳಾಂಧಕಾರದೊಳ್ ೧೭೩

(ಕುಸುಮಾವಳಿ, ೪-೩೫; ಸೂಕ್ತಿಸುಧಾರ್ಣವಂ, ಲ-೧೫೨

ಎಡಗಯ್ಯಿಂ ನೀವಿಯಿಂ ಸಾರ್ಚುತಮುರಸಿಜದೊತ್ತಂಬದಿಂ ಬಳ್ಕುತುಂ ಸೋ
ರ್ಮುಡಿಯಂ ಸೈತೊತ್ತುತುಂ ನೂಪುರಮನೆ ಪದದಿಂಪರ್ಚಿ ಕೈಗಿಕ್ಕುತುಂ ಕ
ಣ್ಗೆಡಿ ಬೆಳ್ಪಿಂಗಂಜಿ ಚೀನಾಂಶುಕದ ಸೆಜಗನಡ್ಡೈಸುತುಂ ನಾಡೆಯುಂ ಮೆ
ಲ್ಲಡಿಗೆಂಪಿಂ ಧಾತ್ರಿಯಂ ಚಿತ್ರಿಸುತುಮಸತಿಯರ್ ಪೋದರಂದತ್ತಮಿತ್ತಂ ೧೭೪

(ಕುಸುಮಾವಳಿ, ೪-೩೪; ಸೂಕ್ತಿ ಲ-೧೫೩)

ಪೊದಱಿವ ಲಜ್ಜೆ ಪಲ್ಲಟಿಸದಾಸನಮು[೧]ಳ್ಕದ[೧] ಜೈಗಳುಣ್ಮೆ ಪೊ
ಣ್ಮಿದ ನಱುಸುಯ್ಗಳುಚ್ಚಳಿಸಿ ಪತ್ತದ[೨] ಬಾಯ್ ಪಿಡಿದಾಗಳಾ[೨]ರ್ಪು ನಾಂ
ಟದ ನಖರೇಖೆ ಪಲ್ಲ[೩]ಕೊನೆದಾ[೩]ಗದ ಚುಂಬನವೆಂಬಿವಿಚ್ಛೆಯೊಳ್
ಪುದಿದಿರೆ ಪೆರ್ಚಿದಳ್ ನೆರೆದು ಪೋಪವಳೋಪನ ಜಾಣಕೆಣವುಂ ೧೭೫

(ಸೂಕ್ತಿಸುಧಾರ್ಣವಂ, ಲ-೧೫೪)

---

[೧]ಕೂರ್ಣವ(ಸ) [೨]ಯಿದ್ದಡಿದಾನನಾ(ಸ) [೩]ವಿಕೆತಾ(ಸ)

ಜಾರಂ ಸಂಕೇತಗೇಹಾಂತರದೊಳುೞಿ[1]ದು ತನ್ನೋಪವಳ್[1] ಬರ್ಪ ಸ್ವೈಪಂ
ಪಾರುತ್ತಿರ್ಪನ್ನವೊರ್ವಳ್ [2]ತ್ವರಿತದೆ [2]ಪರಿತಂದಾತ್ಮಚಿತ್ತೇಶನೆಂದಾ
ಜಾರಂ ತನ್ನಾಕೆಯೆಂ[3]ದೇಯೊ[3]ಡವೆರಸಿ ಬೞಿಕ್ಕೆಯ್ದೆ ಕಾಮಗ್ರಹಂ ತೀ
ರ್ದಾರಯ್ದೋರೋರ್ವರಂ ಕಂಡಹಹ ಎನುತವರ್ ನಕ್ಕು ಕೈವೊಯ್ದು ಪೋದರ್

(ಸೂಕ್ತಿಸುಧಾರ್ಣವಂ, ೮–೧೫೯)

ಪಡೆದವರ್ದಪ್ಪಿಯಾತುರಿಸಿ ನೋಡಿದ ಕೂಡಿದ ಕೂಡೆಮಾತನಾ
ಡಿದ ಪಡೆದಿತ್ತ ತಂಬುಲದ ಚುಂಬನದಿಂಬುಗಳಿಂದ್ರಜಾಲವ
ಲ್ಲಿದು ಕನಸಲ್ಲವಲ್ಲ ನನಸೆಂಬ ವಿಕಲ್ಪಮು[4]ನೀಯೆ[4] ಚಿತ್ತದೊಳ್
ಕುದಿಪಮಡಂಗದೆೞ್ದು ಸರಿದರ್ ತ್ವರಿತಂ ಸಲೆ ಸಂದ ಜಾರೆಯರ್ ೧೭೭

(ಸೂಕ್ತಿಸುಧಾರ್ಣವಂ, ೯–೧೬೦)

ಮದನಾಂಬುಪ್ಲವದುರ್ಕು ಮಿಕ್ಕಿದೆ ಲಸತ್ಪೀನಸ್ತನಂ ಕೆತ್ತುಗುಂ
ದದೆ ಸುಯ್ ನಿಲ್ಲದೆ ಕಣ್ಗಳೆಚ್ಚಱದೆ ಘರ್ಮಾಂಭಃಕಣಾನೀಕಮಿಂ
ಗದೆ ರಂಭೋರುವ ಕಂಪಮಿಕ್ಕಿದೆ ನಿಜೋಷ್ಠಸ್ಪಂದನಸ್ಫೂರ್ತಿ ಮಾ
ಣದೆ ಪ್ರಸ್ವೇದೆಯುಮಾಱದಿಂತು ಸುಸಿಲಿಂದಂ ಪಾಣ್ಬೆಯರ್ ಪಿಂಗಿದರ್ ೧೭೮

(ಕುಸುಮಾವಳಿ; ೪–೩೭; ಸೂಕ್ತಿ, ೮–೧೬೫)

ಒಂದೆರಡೊಳ್ನುಡಿ ತವಕದೊ
ಳೊಂದೆರಡಾಲಿಂಗನಂ ಮುಗುಳ್ನಗೆ ನೋಟಂ
ಸಂದಣಿಸುವ ಮುಂಬದನೊಳ
ಗಿಂದೀವರನಯನೆ ಪಾಣ್ಬನಂ ಬೀೞ್ಕೊಂಡಳ್ ೧೭೯

(ಸೂಕ್ತಿಸುಧಾರ್ಣವಂ, ೮–೧೬೬)

ಆರೈವುತ್ತುರ್ಬುತ್ತುಂ
ಸೇರುತ್ತುಂ ಬೆಚ್ಚುತಂ ಬೆದಱಿ ಬೆಮರುತ್ತುಂ
ದಾರಿ ಮಱವಿಟ್ಟು ಪೋಪವಿ
ಚಾರಂಗಳಿವೇೞು ಲಕ್ಷಣಂ ಜಾರರಿಗಂ ೧೮೦

---

[1]ದನಂ ತನ್ನವಳ್(ಸ) [2]ತುರಿಪದೆ(ಸ) [3]ದಂತೊ(ನೂ) [4]ನಿಟ್ಟು(ಸೂ)

ಶಶಿಮುಖಿ ಜಾರೆ ನಿಂದಿರಲು ಜಾರ ನಿರೀಕ್ಷಿಸಿ ತನ್ನ ಕಾಯಮಂ
ಬಸವಱಿವೃತ್ತ ಬೀಸೆ ಸತಿಯಷ್ಟಮಿ ಚಂದ್ರನ ತೋಱಿಲಾಕ್ಷಣಂ
ಬಿಸರುಹಮಿತ್ರನಂಗುಲಿಯ ತೋಱಿಲು ಕಾಮಿನಿ ಕಣ್ಣಮುಚ್ಚಿದಳ್
ವಸುಧೆಗೆ ಬಾಗಿದಂ ನಗುತ ಜೈತಲೆಗಿಟ್ಟಳು ತನ್ನ ಹಸ್ತಮಂ ೧೮೧

ಬಾಲಾಲಿಂಗನ ಚುಂಬನ
ವಾಲೋಕಂ ಹಾಸ್ಯ ತಕ್ಕೆ ಸನ್ನೆ ಪದಿರ್ ಬ
ಪಾರ್ಳಾಪಂ ಪುಟ್ಟುಗುಮಱಿ
ಲೋಲೇಕ್ಷಣೆ ಪಾಣ್ಬನಿದಿರೊಳಸತಿಗಪೋಘಂ ೧೮೨
(ಮದನತಿಲಕಂ, ೬–೩೯; ಸೂಕ್ತಿಸುಧಾರ್ಣವಂ, ೮–೮೮)

[೧]ರಮಣರಸತಿಯರ[೧]ನಿನನ
ಸ್ತಮಿಸಲೊಡಂ ಬಂದು ಪುಗಿಸಿ ಮಗುಱ್ದಂ ವಿಧುವ
ಸ್ತಮಿಸೆ ಪೊಱಮಡಿಸಿ ಕಳೆದುದು
ತಿಮಿರಂ ಪಾಣ್ಬೆಯರ[೨]ದೂತನಾಗಲೆ[೨]ವೇಟ್ಕಿಂ ೧೮೩
(ಲೀಲಾವತಿ, ೩–೧೦; ಸೂಕ್ತಿಸುಧಾರ್ಣವಂ, ೯–೩೫)

ಕುಱುಪಂ ಪುರ್ವಿನ ಜರ್ವೆ ತೋಱಿ ಬಗೆಯಂ ಕಣ್ಸನ್ನೆಗಳ್ ಪೇೞಿ ತ
ನ್ನೆಱಕಂ ತನ್ನ ಮನಕ್ಕೆ ಕೂಡೆ ಕೆಲಕಂ ಗಂಡಂಗಪೊಳ್ಪಂ ಕರಂ
ಪೆಱಿವಾ ಪೌಢೆಯ ಜೋಡೆಯಕ್ಕುಮೆಡೆಯೊಳ್[೩] ದೂಂಟೆಂದೆ ದೂಂಟೆಂಗೆ[೩]ಪೆ
ರ್ಪಱಿಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪಾಕೆಯೇಂ [೪]ಜೋಡೆ[೪]ಯೇ ೧೮೪
(ಪಂಪಭಾರತಂ, ೪–೮೨; ಸೂಕ್ತಿಸುಧಾರ್ಣವಂ, ೮–೯೩)

## ನಕ್ಷತ್ರವರ್ಣನೆ

ಮುಳಿದು ತಿಮಿರೇಭಕುಂಭ
ಸ್ಥಳಮಂ ಶಶಿಸಿಂಹಮೆತ್ತಿ ಸೀಱಿಲ್ ಮುಕ್ತಾ
ಫಲಮುದಿರ್ದುವೊ ನಭದೊಳಗೆನೆ
ಬೆಳಗಿದುವತಿ ಬಹಳ ತರಳ ತಾರಾನಿಕರಂ ೧೮೫
(ಕಾದಂಬರಿ ಪೂ. ೮೯೭; ಸೂಕ್ತಿ, ೮–೧೬೯)

---

[೧]ರಮಣನ ಸವತಿಯು(ಸ) ರಮಣವಸತಿಗಳ(ಅ) [೨]ದಂತಗಲಲೆ(ಸ) [೩]ದೂತಟ್ಟ ದೂಜಿಂಗೆ(ಸೂ) [೪]ಜಾರೆ(ಸೂ)

ಅಂಬರತಳದಿಂ ದಿನನಪ
ರಾಂಬುಧಿಯೊಳ್ ಬೀೞ್ತ ನೆಗೆದ ಸೀರ್ಪನಿಗಳೊ ಪೇ
ೞ್ತಂಬಿನೆಗಂ ತಾರಾನಿಕು
ರುಂಬಂ ಪಸರಿಸಿದವೆಯ್ದೆ ಗಗನಾಂತರದೊಳ್ ೧೮೬

(ಕಾದಂಬರಿ ಪೂ. ಭಾ ೨೭೯; ಸೂಕ್ತಿ, ೮-೧೭೨)

ತವತವಗೆ ಸಿದ್ಧಕನ್ಯಾ
ನಿವಹಂ ಸಂಧ್ಯಾರ್ಚನಕ್ಕೆ ಸೂಸಿದ ಕುಸುಮಂಗ
ಳಿವು ತಾನೆಂಬೊಲು ಕಂಗೊಳಿ
ಪ್ಪವು ತರದಿಂ ತುಱುಗಿ ಮಿಱುಪ ತಾರಾನಿಕರಂ ೧೮೭

(ಕಾದಂಬರಿ ಪೂ.ಭಾ, ೨೮೦)

ಗಗನಂ ಮಿತ್ರವಿಯೋಗದಿ
ನೊಗೆದಂತಶ್ಶೂನ್ಯಭಾವದಿಂದೊಳಮೆಯ್ಯೊಳ್
ಮಿಗೆ ಪನಿತುವು ಪಣ್ಬನಿಯೆನೆ
ಸೊಗಯಿಸಿದುವು ತರದಿನೊಗೆದು ತಾರಗೆ ಪಲವುಂ ೧೮೮

(ಚಂದ್ರಪ್ರಭಪುರಾಣಂ, ೮-೨೩; ಸೂಕ್ತಿ, ೮-೧೭೬)

ಶಿಶು ಬಂದನೆಂದು ವಾರಿಧಿ
ವಸುಧೆಯೊಳಿಹ ಜನದ ದೃಷ್ಟಿತಾಗುವುವೆನುತಂ
ಸಸಿನೆ ನಿವಾಳಿಸಿ ಚೆಲ್ಲಿದ
ಪೊಸಮುತ್ತಿನ ಸೇಸೆಯಂತೆ ತಾರೆಗಳೆಸೆಗುಂ ೧೮೯

ಮುಂದೆನ್ನ ರಾಹು ನುಂಗು
ತ್ತಿಂದಿನವೋಲ್ಬಿಡದಮರ್ದನುಂಬರ್ ಕೆಡದಂ
ತಿಂದು ಸುಧಾಬೀಜಂಗಳ
ನಂದಾಗಸನೆಲದಿ ಬಿತ್ತಿದಂತುಡು ಮೊಱ್ತಗುಂ ೧೯೦

ಆಗಸಮೆಂಬಾ ಭೂಮಿಯ
ನೇಗೊಡ್ಡಿದ ಬೞಿಯ ಗರ್ದುಗದಿಂದಿಸೆ ಬಟ್ಟಂ
ತಾಗೆಸೆಯೆ ಕಾಲವಟು ಕಂ
ಡಾಗಳ್ ಕೆದರ್ದಂತೆ ತಾರೆಗಳ್ ಕಂಗೊಳಿಕುಂ ೧೯೧

ನಾಗಾಧಿಪನೋಲಗದಿಂ
ದಾಗಸಮಾರ್ಗದೊಳೆ ಬಂದ ವಿದ್ಯಾಧರಿಯರ
ಮೂಗಿನ ಮೂಗುತಿಗಳೆ ಮು
ತ್ತಾಗಿರ್ದುವು ಗಗನರಂಗದೊಳ್ ತಾರಗೆಗಳ್ ೧೯೨

ಸ್ಥಿರರಾಜ್ಯಗೆಯ್ದು ಕಟ್ಟಿಲೆ
ಧರಣೀಪತಿಯಾಗೆನುತ್ತ ಜಾರಸಮೂಹಂ
ಪರಸಿಕ್ಕಿದ ಸೇಸೆಯವೊಲ್
ಪರೆದೆಸೆದುವು ಗಗನರಂಗದೊಳ್ ತಾರಗೆಗಳ್ ೧೯೩

ಓಸರಿಸೆ ಸಂಜೆ ಜವನಿಕೆ
ಲೇಸೆಸಿಸುವ ಸಂಜೆಯೆನಿಪ ನರ್ತಕಿ ಪುಗುತಂ
ಸೂಸಿದ ಪುಷ್ಪಾಂಜಲಿಯೆನೆ
ಬಾಸಣಿಸಿದುವಾಗಸಾಂಗಣದಿ ತಾರಗೆಗಳ್ ೧೯೪

(ಲೀಲಾವತಿ, ೧೦–೨೪; ಸೂಕ್ತಿ, ೮–೧೮೦)

ಉದಯಗಿರೀಂದ್ರರುಂದ್ರತಟದಿಂದೊಗೆತಂದ ಶಶಾಂಕನೆಂಬ[೧] ಪೊಂ[೧]
ಕದ ಮೃಗವೈರಿ [೨]ಪಾಱಿ[೨] ಪರಿದರ್ಬಿಸೆ ಪರ್ಬಿದ ದುಸ್ತಮಸ್ತಮೋ
ನ್ಮದಕರಿಯೂಥಮಂ [೩]ಪೆಳಱಿ ಪೋಱಿ[೩] ಪಿಸುಳ್ದ ತದುತ್ತಮಾಂಗದಿಂ
ಕೆದಱಿದ ಮೌಕ್ತಿಕಾವಳಿವೊಲಾದುವು ಮೂಡಣ ತಾರಕಾಳಿಗಳ್ ೧೯೫

(ಕಾವ್ಯಾವಲೋಕನಂ–೯೦೨)

ಇಳೆಗೆ ಪಟಿಕಾಲದಂಬರ
ವೊಳಸಾ[೪]ರ್ಗುಂ[೪] ಬೀೞ್ಗುಮೆಂ[೫]ದು ಧಾತ್ರಂ ಬಲ್ಪಿಂ
ದಳವಡೆ[೫] ಬೆಟ್ಟಿದ ಬೆಳ್ಳಿಯ
ಪೊಳೆಗ[೬]ಳೆನಲ್[೬] ತೊಳಗಿ ಬೆಳಗಿದುವು ತಾರಗೆಗಳ್ ೧೯೬

(ಜಗನ್ನಾಥವಿಜಯಂ, ೧೬–೯೯; ಸೂಕ್ತಿ, ೮–೧೭೪)

ನೆಟ್ಟನೆ ಬಂದಪನೆನ್ನಯ
ನಿಟ್ಟೆಯ ನಿಧಿ ಚಂದ್ರನೆಂದು ರಾತ್ರಿವಧು ತಾಂ
ಕಟ್ಟಿದ ಬಹುರತ್ನದ ಮೇ
ಲ್ಕಟ್ಟೆನಿಸಿದುದಂಬರಂ ಸುತಾರಾಗಣದಿಂ ೧೯೭

(ಗಿರಿಜಾಕಲ್ಯಾಣಂ, ೪–೯೩; ಸೂಕ್ತಿ. ೮–೧೬೮)

---

[೧]ಸೊಂ(ಅ) [೨]ಕೂಡೆ(ಅ) [೩]ಪಳಱೆಪೇಱೆ(ಸ) [೪]ರ್ಪುಗಂ(ಸ) [೫]ಬ ಕಳನೊಳ್ ಧಾತ್ರಂ ಗಳಿಲೆನೆ(ಸ) [೬]ಳಿಪೆನೆ(ಸೂ)

ಗಗನಂ ಪೂತುದೊ ತಮಮುಂ
ಮಿಗೆ ನೋಡುವ ಭರದೊಳಂಬರಂ [೪]ತಾಂ ಪಲವ[೪]
ಕ್ಷಿಗಳಂ ಪಡೆದುದೊ ಪೇೞೆನೆ
ಸೊಗಯಿಸಿದುವು ತೊಳಗಿ ಬೆಳಗಿ ತಾರಗೆ [೫]ನಭದೊಳ್[೫] ೧೯೮
(ಗಿರಿಜಾಕಲ್ಯಾಣಂ, ೪-೯೦; ಸೂಕ್ತಿ, ೮-೧೮೩)

ದಿನಕರನೆಸೆವಾಕಾಶಾ
ವನಿಯೊಳ್ ದಶಶತಕರಾನುಕೂಲಂ ಮನದೊಂ
ದನುನಯದಿಂ ಬಿತ್ತಿದ ಬೆಳೆ
ಗಿನ ಬೀಜಾಂಕುರಗಳೆನಿಸಿದುವು ತಾರಗೆಗಳ್ ೧೯೯
(ಗಿರಿಜಾಕಲ್ಯಾಣಂ, ೪-೯೧)

ಇಂದಮೃತಕರನ್ ಬಂದಪ
ನೆಂದು ದಿಶಾಂಗನೆಯರೊಲಿದು ಚೆಲ್ಲಿದ ಮೊಲ್ಲೆಯ
ಮುಂದೈಸಿದ ಮುಗುಳುಗಳೆನೆ
ಬಂದೆಸೆದುವು ಗಗನರಂಗದೊಳ್ ತಾರಗೆಗಳ್ ೨೦೦

ಅಂದಂಬರಾಂಗನೆಯ ಮುಳಿ
ಸಿಂದಂ ಕಾಳಿಂದಿಕಲಶಕೆ ಕಪ್ಪಾಗಲ್ಕೀ
ಲ್ಗೊಂದಿದ ಮಸಿವಳಿಯೆಂದೆನಿ
ಪಂದದ ತಾರಗೆಗಳೆಸೆದವಭ್ರಾಂಗಣದೊಳ್(?) ೨೦೧

ಅಮರಾಸುರರ್ಕಳೀರ್ವರ್
ಕ್ರಮದಿಂದಮೃತವನು ಕಡೆವ ಕಾಲದಿಂ ನಭಕಂ
ಸಮನಿಸಿ ಚಿಮ್ಮಿದ ಸೀರ್ಪನಿ
ಯಮರ್ದವೊ ತಾವೆನೆ ತಾರೆಗಳ್ ಕಂಗೊಳಿಕುಂ ೨೦೨

ಪಸಿದ ಚಕೋರಿಗಳೆಲ್ಲಕೆ
ಸಸಿ ಪಲವುಂ ತುತ್ತುಮಾಡಿ ತನ್ನಯ ಜೊನ್ನಮ
ನೊಸೆದೀವ ಬಗೆಯೊ ಪೇೞೆನೆ
ಯೆಸಗುಂ ತಾರಾಳಿ ಪಲವು ಗಗನಾಂಗಣದೊಳ್ ೨೦೩

---

ನೆಜ[೪]ತಾನ(ಸೂ) [೫]ಪಲವಂ(ಸ)

ಗಗನವೆಂದೆನಿಪ ವಲ್ಲಿಗೆ
ಬಗೆಬಗೆಯಲಿ ಪರ್ಬಿ ಪರಕಲಿಸುತಂ ಪಲವುಂ
ಮುಗುಳಂ ತಾಳಿದವೆಂದೆನೆ
ಝಗಝಗಿಸಿದುವಾಗಸಾಂಗಣದಿ ತಾರಗೆಗಳ್ ೨೦೪

ಅಂಬುಜನಿಜಸಖನಸ್ತಮ
ಯಂಬರವಂಬರದ ನಡುವೆ ಬಹು[೧]ಕರ[೧]ದಿಂ ನೆ
ಯ್ದಂಬರದೊಳ್[೨] ವ್ಯೈ[೨]ಗೊಳಿಸಿದ
ಚುಂಬಿತ ರತ್ನಂಗಳಂತೆ ತಾರೆಗಳೆಸೆಗುಂ ೨೦೫
(ಗಿರಿಜಾಕಲ್ಯಾಣಂ, ೪-೯೨; ಸೂಕ್ತಿ, ೮-೧೮೪)

ಅಕ್ಕಱು ಮಿಗೆ ತಾರಗೆಗಳ್
ಸಿಕ್ಕಿದವೆಮ್ಮಧಿಪಗೆಂದು ಸಂತಸದಿಂದಂ
ಮಿಕ್ಕು ಮಿಱುಲ್ಕೆ ನೋಡಲ್
ಶುಕ್ರೋದಯುವಾಗುತಿರ್ಕುಂ ಗಗನಾಂಗಣದೊಳ್ ೨೦೬

ಲೀಲೆವಡೆದೆಸೆವ ತಾರಾ
ಮಾಲೆಯೊಳುಜ್ವಲಿಸಿ ಪೊಳೆವ ಪೊಳಪುಗಳಿಂದಂ
ಸೋಲಿಸೆ ಪೂವಲಿಗೆದಱಿದ
ನೀಲದ ರಂಗದವೊಲೆಸೆದುದಾಕಾಶತಳಂ ೨೦೭
(ಸೂಕ್ತಿಸುಧಾರ್ಣವಂ, ೮-೧೭೧)

ತಾರಗೆಯು ಜೆಳ್ಪು ನವಸಂ
ಧ್ಯಾರುಣ ರುಚಿಯೊಳ್ ಪಳಚ್ಚನೆಸೆ[೩]ವಾಕಾಶ[೩]
ದ್ವಾರದಿ ನಿಮಿರ್ಚಿ ಪರ್ವಿದ
ಸಾರಂಗದ ತೊವಲವೋಲ್ ವಿರಾಜಿಸಿ ತೋರ್ಕುಂ ೨೦೮
(ಸೂಕ್ತಿಸುಧಾರ್ಣವಂ, ೮-೧೭೦)

ಪಡುವಣ ಸಂಜೆಯ ಕೆಂಪಿನೊ
ಳುಡುನಿಕರಂ ನೀಱಿಯರ್ಗೆ ಪಡೆದುದೊ ಮುದಮಂ
ಪೊಡೆಯೆಲರತದರ ಕಾಂತಿಯ[?]
ಲೊಡಗೂಡಿದ ದಂತಕಿರಣಶಕಲಂಗಳವೋಲ್ ೨೦೯

---

[೧]ತ(ಸೂ) [೨]ಕೈ(ಸೂ) [೩]ಯೆ ಮಹೋದ್ಯ(ಸೂ)

ಹರಹರ ನೋಂಪುತಕ್ಕಟಬಲುರ್ವಿರಲಯ್ಯೊಯೆನುತ್ತ ಸುಯ್ಯುತುಂ
ತರುಗಿರಿ ಕೂಡೆ ಗೋಳಿಡಲು ಗೋಳಿಡುತಂ ಸಸಿಗಲ್ಲ ಸಾಲ್ಗಳುಂ
ಕರಗಬುವಂತಳುತ್ತಮಿರೆ ಬಾಧಿಪ ರಾಜನ ನೋಡಿ ನೋಡಿ ತಾ
ವರೆ ನೆಱೆ ಬಾಯುಮುಚ್ಚಿಕೊಳೆ ಜೋಡೊಡೆದಿರ್ದುವು ಜಕ್ಕವಕ್ಕಿಗಳ್ ೨೧೦

ಜಗುನೆಯ ಪೂರಮೊತ್ತರಿಸಿ ಗಂಗೆಯನೊಡ್ಡಱಿವಂತೆ ಮರ್ಬಿನು
ರ್ಬುಗಿಬಗಿಯಾಗೆ ಬೆಳ್ಪು ನೆಗೆತಂದುದಯಾದ್ರಿಯ ಸೆಜ್ಜರಕ್ಕೆ ಪ
ಕ್ಕಗೆ ಬರುತಿರ್ಪ ದೇವಗಜದಂಗಮರೀಚಿಯ ಭಂಗಿವೆತ್ತಿರಲ್
ಬಗೆಗೊಳಿಸಿತ್ತು ಚಂದನರಸಂದೊಡೆದಂತಿರೆ ಪೂರ್ವದಿಙ್ಮುಖಂ ೨೧೧
(ಜಗನ್ನಾಥವಿಜಯಂ, ೧೬-೧೦೩; ಸೂಕ್ತಿ, ೮-೧೯೦)

ಉಡುಪತಿ ಪತಿ ಪಿಂತನೆ ಬಂ
ದಡಸಿ ಮುಸುಂಕಿರ್ದ ತಿಮಿರನೀಳಾಂಬರಮಂ
ಪಿಡಿಯೆ ಭಯ[1]ಮುತ್ತವೋಲ್ ಬೆ
ಳ್ಪ[1]ಡರ್ದುದು ವದನಕ್ಕೆ ಪೂರ್ವದಿಗ್ಬಂಧಕಿಯಾ ೨೧೨
(ಲೀಲಾವತಿ, ೧೦-೩೦, ಸೂಕ್ತಿ, ೮-೧೯೧)

ವಿತತಪ್ರಾಚ್ಯಾದ್ರಿಪೀಠಾಗ್ರಿಮದರುಣಶಿಲಾವಿದ್ಧಲಿಂಗಂಬೊಲಿಂಬಾ
ಗೆ ತರಂಗೊಂಡೇಱಿತ್ತಗಿಯಿಂ ರಾಗದಿನುಪಚಿತಚೇತಶ್ಚಕೋರೀಕದಂಬಂ
ಮ್ಮೃತವಲ್ಲೀಸ್ತಂಭನುಜ್ಜೃಂಭಿತಕುಮುದಕುಟುಂಬಂ ತಮಶ್ಶೈಲಶಂಬಂ
ರತಿಪಾಟೋಪಾವಲಂಬಂ ಜನಿತವಿಟವಿಡಂಬಂ ಸುಧಾಸೂತಿಬಿಂಬಂ ೨೧೩
(ಜಗನ್ನಾಥವಿಜಯಂ, ೧೬-೧೦೪; ಸೂಕ್ತಿಸುಧಾರ್ಣವಂ, ೮-೧೯೫)

ಶೋಣಿಮವೆತ್ತ ಮರೀಚಿ
ಶ್ರೇಣಿಯ ಕೆಂದಳಿರನಗ್ರದೊಳ್ ತಳೆದುದಯ
ಕ್ಷೋಣೀಧರದಾ ಕಳಸದ
ಮಾಣಿಕಗನ್ನಡಿಯೊಲೆಸೆದುದುಡುಪತಿಬಿಂಬಂ ೨೧೪

ಅವಿರಳಮಡರ್ದ ಪೆರ್ಬಾ
ಡವವಹ್ನಿಯ ಭೀತಿಯಿಂದಮೊಯ್ಯನೆ ಪೂರ್ವಾ
ರ್ಣವದಿಂದಂ ಪೊಱಮಟ್ಟುದೊ
ಪವಳದ ಕೆಂಪಡರ್ದ ಕೂರ್ಮನೆನೆ ವಿಧುವೆಸೆದಂ ೨೧೫

---

[1] ವೆತ್ತು ಬೆಳ್ಪೆಸರ(ಸ)

ಇದು ಸಂಕ್ರಂದನದಿಗ್ವಧೂನಿಟಲಸಿಂಧುರಾಂಶುವೋ ನೋಡು ನೋ
ಡಿದು ಪುಷ್ಪಾಯುಧಪದ್ಮರಾಗಮುಕುರಪ್ರದ್ಯೋತಮೋ ಪೆಱತೊಂದಿಂ
ತಿದು ವಿಸ್ತಾರಿತಕಾಮಹೋಮಹುತಭುಕ್ಪ್ರಜ್ವಾಲೆಯೋಯೆಂಬ ಸಂ
ಪದಮಂ ಬೀಱುದುದಿಂದ್ರದಿಗ್ವಿವರದೊಳ್ ಚಂದ್ರದ್ಯುತಿಪ್ರೋದ್ಭವಂ ೨೧೬

(ಗಿರಿಜಾಕಲ್ಯಾಣಂ, ೪-೯೫; ಸೂಕ್ತಿ, ೮-೧೯೬)

ಮುದದಿಂ ತಂದಿಕ್ಕೆ ಪೂರ್ವಾಂಗನೆ ಗಿರಿಶಿರದೊಳ್ ಪೀಠಮಂ ಸತ್ಪ್ರಭಾಸಂ
ಪದಮಂ ಕೈಗೊಟ್ಟು ಚೈತ್ರಂ ನಡೆತರೆ ಮದನಂ ಪುಷ್ಪಬಾಣಗಳಂ ಪೂ
ಡಿದ ಬಿಲ್ಲಂ ಪೊತ್ತು ಪಿಂತಂ ಬರೆ ನವಕುಮುದಾಮೋದಮಾಧುರ್ಯದಿಂ ಷ
ಟ್ಪದಗಾನಂ ಪೊಣ್ಮಿಸುತ್ತುಂ ಶಶಿಯುದಯದೊಳೊಪ್ಪಿತ್ತು ರಾಜೋಪಚಾರಂ ೨೧೭

(ಗಿರಿಜಾಕಲ್ಯಾಣಂ, ೪-೯೭; ಸೂಕ್ತಿಸುಧಾರ್ಣವಂ, ೮-೨೨೧)

ವಿದಳತ್ ಕೈರವರಾಜಿ ರಾಜಬಲದಿಂ ಸಂತೋಷಮಂ ಪುಟ್ಟಿಸಲ್
ಮುದಮಂ ತಾವರೆಯೆತ್ತಿಕಟ್ಟಿ ತಮಮಂ ಶೀತಾಂಶುವೆಟ್ಟಿಟ್ಟಿ ಪೆ
ರ್ಚಿದಗುರ್ವಿಂ ವಿರಹಾಳಿಯಂ ಕುಸುಮಬಾಣಂ ಕಾಯ್ದು ಬೆನ್ನಟ್ಟಿ ಮೆ
ಟ್ಟಿದನಿಂದ್ರಾಚಲಚೂಡ[1]ಮಂ ಕಿರಣವೀಧೀಸಾಂದ್ರಮಂ[1] ಚಂದ್ರಮಂ ೨೧೮

(ಗಿರಿಜಾಕಲ್ಯಾಣಂ, ೪-೯೦; ಸೂಕ್ತಿಸುಧಾರ್ಣವಂ, ೮-೨೧೮)

ಮದನನ ನಚ್ಚು ವಾರಿಧಿಯ ಪೆರ್ಚು ವಿಯೋಗಿಯ ಕಿಚ್ಚು ಕೈರವಾ
ಭ್ಯುದಯದರಲ್ಚು ತಾರಕಿಯ ಬಿಚ್ಚು ರಥಾಂಗದಗಲ್ಚು ಜಾರೆಯ
ರ್ಗೊದವಿದ ಬೆಚ್ಚು [2]ನೀರಜವ ಮುಚ್ಚು[2] ಜಗಜ್ಜನಪುಣ್ಯದಚ್ಚು ಬಂ
ದುದಯಗಿರೀಂದ್ರಮಸ್ತಕದೊ[3]ಳೊಪ್ಪಿದುದಂದು ಹಿಮಾಂಶುವುಂ[3]ಡಲಂ ೨೧೯

(ಸೂಕ್ತಿಸುಧಾರ್ಣವಂ, ೮-೨೨೪)

ನನೆಯಂಬಂ ಮದಪೇಱೆ ಕೈರವಕುಳಂ ನೀರೇಱೆ ಕಾಮಾರ್ಥಿಯ
ಪ್ಪನ ಜೀವಂ ನಡುನೆತ್ತಿಗೇಱೆ ಕರದಂಡಶ್ರೀಗೆ ಕಾಯ್ಪೇಱೆ ಕಾ
ಮಿನಿಯರ್ ಸಂತಸದುಯ್ಯಲೇಱೆ [4]ಭರದಿಂ[4]ದಂಭೋಧಿ ಮಿಕ್ಕೇಱೆ ಭೋಂ
ಕನೆ ಬಂದೇಱಿದನಲ್ತೆ ವಾಸವದಿಶಾಶೈಲೇಂದ್ರಮಂ ಚಂದ್ರಮಂ ೨೨೦

(ಸೂಕ್ತಿಸುಧಾರ್ಣವಂ ೮-೨೧೭)

---

[1]ದೂಢರುಚಿರ ಪ್ರಾನಂದಮಂ(ಸ) [2]ಕಜ್ಜಲೆ ಕಜಲ್ತು(ಸೂ) [3]ಳಿರ್ದಪು ಪೂರ್ಣಶಶಾಂಕ ಮಂಡಲಂ(ಸೂ) [4]ನೆಲೆಯಿಂ(ಸೂ)

ಇದು ಘುಸೃಣಾರುಣಂ ಸುರಹರಿದ್ವನಿತಾನಿಟಿಲಂ ದಿಟಕ್ಕೆ ತಾ
ನಿದು ಬರೆದಿರ್ದ ಸಿಂಧುರದ ಕೆಂಪಡರ್ದಿಂದ್ರಗಜೇಂದ್ರಕುಂಭಮು
ಲ್ತಿದು ಜನಿತೇರ್ಷ್ಯೆಯಿಂ ಮುಳಿಯೆ ತಾರಗೆ ಪಾಟಲಮಾದ ಯಾಮಿನೀ
ವದನಮೆನಿಪ್ಪಸಂಕ್ರಮದಿನುಣ್ಮಿದುದಿಂದುವ ರಕ್ತಮಂಡಲಂ ೨೨೮

(ಚಂದ್ರಪ್ರಭಪುರಾಣಂ, ೮–೨೬; ಸೂಕ್ತಿ, ೮–೧೯೪)

ಪುದಿದಿರೆ ಪಣ್ತೆಂದುವಬಿಂ
ಬದಾಲದಿಂ ಪಣ್ಗಳುದಿರ್ದವೆನೆ ಸೊಗಯಿಸಿದ
ತ್ತುದಯದೊಳೊದವಿದ ಕೆಂಪಿಂ
ಪುದಿಪೊಪ್ಪುವ ತಾರಕೋತ್ಕರಂ ಕೆಲಗೆಲದೊಳ್ ೨೨೯

(ಚಂದ್ರಪ್ರಭಪುರಾಣಂ, ೮–೨೮, ಸೂಕ್ತಿ. ೮–೨೦೬)

ಉದಯಂಗೆಯ್ದುತ್ಪಲಾಧೀಶ್ವರನನಮರಕಾಂತಾಳಿನೀರಾಜನಂ ಮಾ
ಡಿದ ಮಾಣಿಕ್ಯ ಪ್ರದೀಪಾವಳಿಯ ಬೆಳಗು ತದ್ವಾಮವಾಮೇತರಾಶಾ
ಸುದತೀಪಿಷ್ಟಾತ[೧]ಕಾ ಕೀ[೧]ರಣಕಪಿಶರಜಃಪುಂಜಮೆಂಬಂದದಿಂ ಪೊ
ರ್ದಿದುದೋ ಕಂದರ್ಪಯಾತ್ರಾಬಳಚಳನ ಪರಾಗಂ ತಮು[೨]ದ್ಯೋತರಾಗಂ[೨] ೨೩೦

(ಅನಂತನಾಥಪುರಾಣಂ, ೭–೭೫; ಸೂಕ್ತಿ ೮–೧೯೩)

ತೊರೆದುದು ಚಂದ್ರಕಾಂತವ[೩]ಮುಳ್ಳ[೩]ಕ್ಕಿಗಳಪ್ಪು ಸಡಿಲ್ದು ದಿಂಗಡಲ್
ತೆರೆಮಸಗುತ್ತಲಿರ್ದುದೊಗೆತಂದುದು ಚಂದ್ರಿಕೆ ಕೂಡೆ ಮೀನ್ಗಳಂ
ಕುರಿಸಿದುವುತ್ಪಲಂ ನಗುತಮಿರ್ದುದು ಕಣ್ಮುಗಿವಬ್ಜಮಂ ತಮಂ
ಪರೆದುದು ಮನ್ಮಥಂ ನಲಿದು ನರ್ತಿಸಿದಂ ಶಶಿ ಬರ಼್ ಪೊೞ್ತಿನೊಳ್ ೨೩೧

(ಸೂಕ್ತಿಸುಧಾರ್ಣವಂ ೮–೨೧೧)

ಒಸಜಿಲ್ಕಿದುದು ಚಂದ್ರಕಾಂತಮುರಲಲ್ಕಿರ್ದತ್ತು ಮುಗ್ಧೋತ್ಪಲ
ಪ್ರಸರಂ ಜಾದಿನ ಬಣ್ಣವಪ್ಪ ಬೆಳಗಂ ಕೈಕೊಳ್ವ ಪೂರ್ವಾಶಿಯು
ದ್ದಿಸೆಯುಂ ಕೇಡಿದಿರ್ವಾರಡಿರ್ದುವು ಚಕೋರಂ ಪಾಲ್ಗಡಲ್ [೪]ಮೇ[೪]ರೆಯುಂ
[೫]ಮು[೫]ಸಕಲ್ಕಿರ್ದುದು ಮೂಡಲಿರ್ದ ಪದದೊಳ್ ತಾರಾಮನೋವಲ್ಲಭಂ ೨೩೧

(ಸೂಕ್ತಿಸುಧಾರ್ಣವಂ, ೮–೨೧೨)

---

[೧] ಸಂಕೀ(ಸ) [೨] ದ್ಯಾಂತರಂಗಂ(ಸ) [೩] ಮುಣಿವ(ಸೂ) [೪] ಮೋ(ಸೂ) [೫] ಮಿ(ಸೂ)

ಪರೆದಿರೆ ತಿಮಿರಕಚಂ ನೆರೆ
ದಿರೆ ಭಗಣಸ್ವೇದಜಲಕಣೌಘದ ಪೂರಂ
ಜೊರೆದಿರೆ ಚಕೋರನಯನಂ
ಕಣ್ಮೆಸೆದಳ್ ನೆರೆದು ರಜನಿ ರಜನೀಪತಿಯೊಳ್ ೨೩೨
(ಚಂದ್ರಪ್ರಭಪುರಾಣಂ ೮-೩೨, ಸೂಕ್ತಿ ೮-೨೩೭)

ಸಂಗಡಿಸೆ ತನ್ನೊಳರುಣಪಿ
ಶಂಗ ಸಿತದ್ಯುತಿಗಳೆಂಬನುಕ್ರಮದಿಂ ಶ
ಕ್ರಂಗೆತ್ತಿದ ಮಾಣಿಕಗೊಡೆ
ಪೊಂಗೊಡೆ ಬೆಳ್ಗೊಡೆಗಳೆನಿಸಿದುದು ವಿಧುಬಿಂಬಂ ೨೩೩
(ಜಗನ್ನಾಥವಿಜಯಂ, ೧೬-೧೮೬; ಸೂಕ್ತಿಸುಧಾರ್ಣವಂ, ೮-೨೧೩)

ಉದಯೋರ್ವೀಧರ ಕುಂಕುಮೋದ್ಗಮರಜಂ ಪಾಯ್ವಂತೆ ಕೆಂಪೇಱಿತ ಪೂ
ರ್ವದಿಶಾಕನ್ನೆಯ ತೋಳೊಳಿರ್ದರಿಸಿನಂ ತಳ್ತಂತೆ ಪೊಂಬಣ್ಣಮೇ
ಱಿ ದಿವೌಕಃಪ್ಲವಮೊಳ್ ಮುಱಿಂಗಿ ತೊಳೆದೇಳ್ವಂತೆಯೆದ್ದು ಬೆಳ್ಪೇಱಿ ತ
ತ್ತ್ವದೃಢಾಭ್ಯಾಸಿಯ ಚಿತ್ತದಂತೆ ತಿಳಿದಂ ತಾರಾಮನೋವಲ್ಲಭಂ ೨೩೪
(ಅನಂತನಾಥಪುರಾಣಂ, ೭-೮೩; ಸೂಕ್ತಿಸುಧಾರ್ಣವಂ, ೮-೨೧೦)

ಇನಿಸಾನುಂ ಬೇಗದಿಂ ಬಂದುಗೆಯ ಮುಗುಳಲರ್ದಂತೆ ಕೆಂಪಾಗೆ ಮತ್ತೊಂ
ದಿನಿಸಾನುಂ ಬೇಗದಿಂ ಸಂಪಗೆಯ ಮುಗುಳಲರ್ದಂತೆ ಸೊಂಪಾಗೆ ಮತ್ತೊಂ
ದಿನಿಸಾನುಂ ಬೇಗದಿಂ ಮಲ್ಲಿಗೆಯ ಮುಗುಳಲರ್ದಂತೆ ಬೆಳ್ಪಾಗೆ ಮತ್ತೊಂ
ದಿನಿಸಾನುಂ ಬೇಗದಿಂ ಪ್ರಜ್ವಲಿಸಿತು ಜಗತೀಚಕ್ರಮಂ ಚಂದ್ರಬಿಂಬಂ ೨೩೫

ಕುವಲಯಮೀರ್ಘಮಲರುತ್ತಿರೆ ಮೂಡುವ ಮೀನ್ಗಳಾಕೆಯೊ
ಪ್ಪುವ ಮುಖಪದ್ಮದೊಳ್ ಪೊಡವಿ ಮೂಡಿದವೋಲಿರೆ ಕಾಲಮೆಂಬ ಶಂ
ಭುವಿನ ಶರೀರದೊಳ್ ಪುದಿದ ಗೌರಿಗೆ ರಾಗಮನೊಡ್ಡಿಕೊಂಡು ಮೂ
ಡುವ ಮೊಲೆಯಂತೆ ಮೂಡಿದುದು ಮೂಡಣ ದಿಕ್ಕಿನೊಳಿಂದುಮಂಡಲಂ ೨೩೬
(ಲೀಲಾವತಿ, ೨-೩; ಸೂಕ್ತಿಸುಧಾರ್ಣವಂ, ೮-೨೧೫)

ಇದು ಮಾಹೇಂದ್ರೀಲತಾಕೋರಕಮಮರಹರಿದ್ವಲ್ಲರೀಪಲ್ಲವಂ ಪೂ
ರ್ವದಿಶಾವಲ್ಲೀಫಲಂ ತಾನನೆ ತರತರದಿಂದೇಱಿ ಕಣ್ಗೆಡ್ಡಮಪ್ಪಂ
ತುದಯಂಗೆಯ್ದತ್ತು ಸಂಧ್ಯಾರುಣರುಚಿರುಚಿರಂ ಕಾಮಸಾಮ್ರಾಜ್ಯಲಕ್ಷ್ಮೀ
ಮದಲೀಲಾಲಂಬಮುಜ್ಜೃಂಭಿತಕುಮುದಕದಂಬಂ ಸುಧಾಸೂತಿಬಿಂಬಂ ೨೩೭
(ಮಲ್ಲಿನಾಥಪುರಾಣಂ, ೭-೨೮, ಸೂಕ್ತಿಸುಧಾರ್ಣವಂ, ೮-೨೦೯)

ಗಗನಮಹಾಂಬುರಾಶಿಯೊಳಗೊಯ್ಯನೆ ಕೊರ್ಬಿದ ಮುತ್ತು ಸುತ್ತಲುಂ
ಸೊಗಯಿಪ ಕೌಮುದೀಲತೆಯ ಬಿತ್ತು [1]ವಿಧುಂತಂದನುಂಬ[1] ತುತ್ತು ಕಾ
ಮಿಗಳನನಂಗನಾಜ್ಞೆಯೊಳೆ ಪೋಣಿಸಿದೋಲೆಯ ಸುತ್ತು ನೋಟಕ್ಕೊಡಂ
ಬಗೆಗೊಳಸಿತ್ತು ವಾಸವದಿಶಾನನಕುಂಡಲವಿಂದುಮಂಡಲಂ ೨೩೯

(ಸೂಕ್ತಿಸುಧಾರ್ಣವಂ, ೮-೨೨೨)

ಪ್ರಮಡಿಂ ಕಾಯ್ದೊಡೆಯಲ್ಕೆ ರೋಹಿಣಿಯ ಪಾದಾಲಕ್ತಕಂ ಮೆಯ್ಯನಾ
ವರಿಸಿತ್ತೋ ನಿಕಟಾಬ್ಧಿ ವಿದ್ರುಮ ಮಯೂಖಂ ತಳ್ತುದೋ ಪೂರ್ವಭೂ
ಧರಸಿಂಹಂ ಪೊಯಿ ನೊಂದುದೋ ಹರಿಣನೆಂಬಂತಾಗಳತ್ಯಂತ ಸುಂ
ದರಮಾಗಿರ್ದುದು ಕಣ್ಗೆ ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೨೪೦

(ಕಾದಂಬರಿ, ಪೂ. ಭಾ ೮೬೦; ಸೂಕ್ತಿ, ೮-೨೦೩)

ಇರುಳ ಸಿರಿ ಸಿರಿಯ ಮೆಯ್ಸಿರಿ
ವಿರಹಿಗಳುರಿ ಕಮಲದರಿ ಮನೋಜನ ಕರಿ ಪಾ
ಣ್ಬರ ದಳ್ಳುರಿ ತಣ್ಗದಿರ್ಗಳ
ಹರಿವರಿ ತಾರಾಧಿನಾಥನುದಯಂಗೆಯ್ದಂ ೨೪೧

(ಸೂಕ್ತಿಸುಧಾರ್ಣವಂ, ೮-೨೩೯)

ನನೆಯಿಂ [2]ಚಂದನದಾಲಿ[2]ನೀರ್ದಳಿಪದಿಂ ಕಾಮಾಗ್ನಿಯಂ [3]ಮುಗ್ಗಿ[3]ಸಲ್
ಮನಮಂ ತಂದ ವಿಯೋಗಿ ಜಾ[4]ರರೆ[4]ರ್ದೆಯಂ [5]ತಟ್ಟುರ್ಚಿ ಜಾರೇಟಿತ [5]ಬೆ
ಚ್ಚನೆ ಪಾಯ್ತೆಂದು ಪೊದಟ್ದರಕ್ತಜಲದಿಂ [6]ತೋದಿರ್ದ[6] ಕಂದರ್ಪರಾ
ಜನ ಚಕ್ರಕ್ಕೆಣೆಯಾಯ್ತು ರಕ್ತರುಚಿಯಿಂ ಬಿಂಬಂ ಸುಧಾಸೂತಿಯಾ ೨೪೨

(ಲೀಲಾವತಿ, ೨-೮; ಸೂಕ್ತಿಸುಧಾರ್ಣವಂ ೮-೨೦೧)

ಕೆಂದಳಿರ್ದೋರಂಗಲಾಗೆ ಕಿಸುಸಂಜೆ ಸಿತಾಕ್ಷತೆಯಾಗೆ ತಾರಕಾ
ವೃಂದ ಪಳಂಚಿ ರಂಜಿಪುದಯಾದ್ರಿ ಕನತ್ಕಲಶಾಗ್ರದಲ್ಲಿ ಪೆಂ
ಪಿಂದೆಸೆವೆಣ್ಗಳರ್ಚಿ ವನಕಾಮನ ಗೆಲ್ಲುವಾ ರತ್ನದರ್ಪಣ
ಕ್ಕಂದೆಣೆಯಾಯ್ತು ತುಬ್ಬಿದ ತಮಃಪರಿಖಂಡಲವಿಂದುಮಂಡಲಂ ೨೪೪

---

[1] ಸುಪರ್ವಣಜರುಂ(ಸೂ) [2] ಸೆಯ್ದಲಸಾಲಿ(ಸೂ) [3] ಸಂಡಿ(ಸೂ) [4] ಲದೆ(ಸೂ) [5] ಸುಟು
ರ್ಚಿಯೊಳ್ ಜಾಜಿ(ಸೂ) [6] ದಂತೋದ(ಸೂ)

ಗಗನಶ್ರೀಗನುರಾಗಮಂ ನೆರಪುತುಂ ಸಂಪ್ರೀತಿಯಿಂ ಜೊನ್ನವ
ಕ್ಕಿಗೆ ಜೆಳ್ದಿಂಗಳ ಸಾರಮಂ ಕಱೆಯುತುಂ ಪಂಕೇಜಿನೀಪಂಕ್ತಿ ಕಾಂ
ತಿಗಳಂ ದರ್ಪವತಂತ್ರದಿಂ ಜಜಱೆಯುತುಂ ಕಾಮಾಹಿ ಸಂದೋಹದಂ
ತಿಗಳುತ್ತುಂಗರದಂಗಳಂ ಮುಱಯುತುಂ ಮೆಯ್ದೋಱದಂ ಚಂದ್ರಮಂ ೨೪೫

ಕಿಸುಸಂಜೆ ಪಿಡಿದ ಜವನಿಕೆ
ಮಿಸುಗುವ ತಾರಾಳಿ ಮೆಱೆವ ಪುಷ್ಪಾಂಜಲಿಯಾ
ಗಸಮೆಸೆವ ರಂಗಮಾಗಲ್
ಶಶಿಪ್ರಭಾನಾಟ್ಯಮೇಂ ಮನಂಗೊಳಿಸಿದುದೋ ೨೪೬

ಕರಮೆಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ
ತ್ಕರದ ವಿಪತ್ತು ತಾರೆಗಳ ಸುತ್ತು ಸುಧಾರ್ಣವದೊತ್ತು ಕಾಮನೊ
ಲ್ದಿರುತಿಹ ಗೊತ್ತುವಂಬರಪುಳಿಂದಿಯ ಮೂಗಿನ ಮುತ್ತು ಜಾರಸೌಂ
ದರಿಯರ ಮಿತ್ತು ಮೂಡಡೆಸೆಯಿಂದುದಿಸಿತ್ತು ಹಿಮಾಂಶುಮಂಡಲಂ ೨೪೭
(ಗಿರಿಜಾಕಲ್ಯಾಣಂ, ೪-೯೬; ಸೂಕ್ತಿಸುಧಾರ್ಣವಂ, ೮-೨೨೩)

ಸುರಗಜನೆಯ್ದೆ ಸೊರ್ಕಿ ತಮರೇಂದ್ರನ ಗೇಹದ ಹೇಮಭಿತ್ತಿಯಂ
ಕರದೊಳೆ ನೂಂಕೆ ಪೂರ್ವನಗಕಂತದು ಸಂಧಿಸಲಲ್ಲಿ ಸಿಲ್ಕಿ ಚಂ
ದಿರನಿರಬಾರದೆಂದಿಱಕಿನೊಳ್ ಪೊಱಮಟ್ಟೊಡನಾದುದೆಂಬಿದಂ
ಬರವಿನಿಸಾಗಿ[ಬಿತ್ತರಿಸೆ ತಾಂ] ಮಿಗೆ ಮೂಡಿಮದಿಂದುಮಂಡಲಂ ೨೪೮

ಅಸ್ತಗಿರೀಂದ್ರಮಸ್ತಕದೊಳೊಪ್ಪುವ ಭಾಸ್ಕರಲಿಂಗದಗ್ರದೊಳ್
ಶಸ್ತತರೇಂದ್ರದಿಗ್ವಧು ಸುನರ್ತಕಿ ಸಂಜೆಯೊಳಾಡಲೆಂದು ತಾಂ
ವಿಸ್ತರಶುಕ್ರದೀಪವನೆ ಪೊತ್ತಿಸುತೆತ್ತಿದ ಮಂಗಳಾರತಾಪ್ರ
ಸ್ತುತಪಾತ್ರೆಯಂತೆಸೆಯುತಿರ್ದುದು ಪೂರ್ವದಿಶೇಂದುಮಂಡಲಂ ೨೪೯

ಇವನುರೆ ಪುಟ್ಟೆ ಪುಟ್ಟಲಿರದೆಣ್ದೆಸೆಯಲ್ಲಿಯ ದೋಷಮೋಡಿದೊ
ಪ್ಪುವ ಘನಶಾಂತಿ ಲೋಕದೊಳಗಾದುದು ಹೋ ಕುಮುದಕ್ಕೆ ಪೆರ್ಚು ಸಂ
ಭವಿಸಿತು ಕೂಡೆ ಕಂಡವರ್ಗೆ ತೇಜಮುದಾದು (ಸಂದು) ಕೀರ್ತಿಸಲ್
ಶಿವಶಿವ ರಾಜನೇನುದಿಸಿದಂ ಸಲೆ ಪೂರ್ವದ ಪುಣ್ಯಮೆಂತುಂಟೊ ೨೫೦

ಜಗದಾಲೋಕನದರ್ಪಣಂ ಪ್ರಥಮದಿಕ್ಕಾಂತಾನನಂ ಕಂತುರಾ
ಜಗಜೋದ್ದೀಪನಪಿಂಡಮಂಬರಸರಸ್ಯು[೧]ತ್ತುಂಗ[೧]ಹಂಸಂ ವಿಯೋ
ಗಿಗಣಾಕೂತಕುರಂಗಪೋತಭಯಭೃತ್ಕಂಠೀರವಂ ಚೆಲ್ವಿವೆ
ತ್ತೊಗೆದತ್ತರ್ಣವವೀಚಿನರ್ತನನಟಂ ಬಿಂಬಂ ಸುಧಾಸೂತಿಯಾ ೨೫೧

(ಅಜಿತನಾಥಪುರಾಣಂ, ೬–೪೨; ಕಾವ್ಯಾವಲೋಕನಂ, ೬೯೬೮; ಸೂಕ್ತಿ –೨೩೦)

ಮನಸಿಜನಿಟ್ಟ ಚಂದನದ ಬೊಟ್ಟು ಮನೋಜನ ದೀಹದಂಚೆ ಕಾ
ಮನ ಧವಳಾತಪತ್ರ ಕುಸುಮಾಸ್ತ್ರನ ಭಾಸುರ ಚಕ್ರವಿಕ್ಷುಚಾ
ಪನ ಶಶಿಕಾಂತದರ್ಪಣವನಂಗನ ಮುತ್ತಿನ ಚಂಡು ಪುಷ್ಪಕಾಂ
ಡನ ಕೃತಪುಣ್ಯಪುಂಜಮೆನೆ ಕಂಗೊಳಿಸಿರ್ದುದು ಚಂದ್ರಮಂಡಲಂ ೨೫೨

(ಸೂಕ್ತಿಸುಧಾರ್ಣವಂ, ೮–೨೩೧)

ಮುಡಿನವಿರಿಂದ್ರಮಾಣಿಕದ ಮಂಡನಮಂತಿರೆ ತಾರಕಾಳಿ ತ
ಳ್ತಿಡರ್ದರುಣಾಂಶುಗಳ್ ಕುರುಳ ಕುಂಕುಮದಂತಿರೆ ರೂಢಿಸಿತ್ತು ಕೆಂ
ಪಿಡಿದ ಜೆಡಂಗಿದೆಂಬಿನ ನಿಶಾಪ್ರಸವೋತ್ಸವದೊಳ್ ವಿಳಾಸಿನೀ
ಮುಡಿದ ಮಹೇಂದ್ರ[೨]ದಿಕ್ಕಿನ ಸುವರ್ಣದ[೨] ತೊಂಡಲೊಲಿಂದುಮಂಡಲಂ ೨೫೩

ಸ್ಮರಶಿಖಿಯಿಂ ವಿಯೋಗಿಹೃದಯಕ್ಕನುರಾಗಮನಾಗಳಾಗಳುಂ
ನೆ[೩]ರಪುತಲಿ[೩]ರ್ಪ ಕಾಮುಕಜನಾಶ್ರಯ[೪]ಮೋಹನಪಿಂಡಮೆಂದು[೪] ಬಿ
ತ್ತರಿಸಿರೆ ತಾ[೫]ಳ್ದಿದೆಂದುದಯಶೋಣಿತೆ [೫]ಶೋಭೆಯನೀಯೆ ಪೂರ್ವದಿ
ಕ್ತರುಣಿಯ ಪದ್ಮರಾಗಮಣಿದರ್ಪಣದಂತೆಸೆದಂ ಸುಧಾಕರಂ ೨೫೪

(ಪಾರ್ಶ್ವನಾಥಪುರಾಣಂ, ೧೦–೨೧; ಸೂಕ್ತಿ, ೮–೨೦೦)

ಅಮರಾಧೀಶ್ವರಗಂಧಸಿಂಧುರಶಿರಸ್ಸಿಂಧೂರಮಿಂದ್ರಾಲಯಾ
ಗ್ರಿಮ[೬]ಲೀ[೬]ಲಾರುಣರತ್ನರತ್ನಕಲಶಂ ಜಂಭಾರಿಶುಂಭತ್ಸರಾ
ಗಮುಯೂಖಾತಪವಾರಣಂ ಶತಮುಖಶ್ರೀವ[೭]ಕ್ಷ್ಮ[೭]ಕಾಶ್ಮೀರರಾ
ಗಮಿದೆಂಬೀಟಿಗ್ಗಿಯನಾಂತು ರಕ್ತರುಚಿಯಿಂ ಚೆಲ್ವಾಯ್ತು ಚಂದ್ರೋದಯಂ ೨೫೫

(ಪುಷ್ಪದಂತಪುರಾಣಂ, ೮–೧೦೪)

---

[೧]ತ್ತಂಸ(ಸೂ) [೨]ದಿಗ್ವಧು. ಬಣ್ಣದ(ಸ) [೩]ರೆದೆಸೆದಿರ್ಪ(ಸೂ) [೪]ಕೊಮೋ೯ದಲೀಯಲೆಂ
ದು(ಸೂ) [೫]ಳಿದಂತುದಯ ಶೋಣಮು(ಸ) [೬]ನೀ(ಸ) [೭]ಕ್ತ(ಸೂ)

ಚಂದ್ರಿಕೆ ಸುರವರಕರಿಯೆನೆ
ಚಂದ್ರಂ ತತ್ಕರಿಪು ಕುಂಭಮೆನೆ [1]ತಾರಕಿಗಳ
ವೃಂದಂ ನಯನಗಳೆನೆ [1]ಏಯ
ಇಂದ್ರನಪೇಂ ಭುವನಜನ[2]ಮ ಕಂಗೊಳಿಸಿದನೋ[2] ೨೫೬
(ಲೀಲಾವತಿ, ೨–೧೮; ಸೂಕ್ತಿ ೮–೨೪೩)

ಅಲೆದವ್ಮೃತದೊಡನೆ ತಾರಾ
ಲಲನೆಯರಡಿದಳಿರನೂಡಲೆಂದು ಪದಂಗೆ
ಯ್ದಲತೆಗೆಯ ಪಡಲದಂತೆವೊ
ಲಲೆದುದು ಪರಿಪಕ್ವಬಿಂಬಮಂ ವಿಧುಬಿಂಬಂ ೨೫೭
(ಲೀಲಾವತಿ, ೨–೮)

ಒಡನೆ ಸುರಾಸುರರ್ ಕನಕಪರ್ವತಮಂ ಕಡೆಗೋಲಮಾಡಿ ಪೇಣ್
ಪೆಡೆ ಪಲವಪ್ಪ ವಾಸುಕಿ ಮಹೋರಗನಂ ಕಡೆಗಣ್ಣಿಮಾಡಿ ಪಾ
ಲ್ಗಡಲನುಪಾಯದಿಂ ಕಡೆಯೆ ರಾಹುಗೆ ವಾಯುಪಥಾಗ್ರಮೆಂಬ ಪೆ
ರ್ಮಡಕೆಯೊಳಿಕ್ಕಿ ಕೊಟ್ಟ ಪೊಸಬೆಣ್ಣೆವೊಲಿರ್ದುದು ಚಂದ್ರಮಂಡಲಂ ೨೫೮
(ಶೂದ್ರಕಂ. ಅ. ವಾ ವಿ ಕಾವ್ಯಸಾರಂ. ೯೩೮)

ಇನನೇ ಪೋದ ಬಟಿಕ್ಕೆ ನಿನ್ನಿನಿಯನೀಗಳ್ ಬಪ್ಪನೆಂದಿಂತು ನಾ
ಕನಿಶಾಂತಕ್ಕುಡುರಾಜಿಯೆಂಬ ಸೊಡರಂ ತಾನೆತ್ತಿಕೊಂಡಿರ್ಪ ಯಾ
ಮಿನಿಯೊಳ್ ಕೂಡಿರೆ ಮತ್ತಿಸಂ ಬರಲವಳ್ ತಾನಂ ತದಾರಾಗದಿಂ
ತೆನಳ್ವಂತೆಕ್ಕಟಿಗಟ್ಟವೋಲಿರ್ದನಾ ಮಂದತ್ವದಿಂ ಚಂದ್ರಮಂ (?) ೨೫೯

ಭುವನಪತಿಗೇಟಿಕ್ಕ ಪೆರ್ಜಂ
ಸವೆವಂ ಸಕಳಂಕನಾದೊಡಾವಂ ಪೞಿವವ
ನವನಂ ಲೋಕದೊಳೆಂಬಂ
ತವಿಯುಪೆ ವಿಧು ಸಭವನಡರ್ದನತಿವೇಗದೊಳಂ ೨೬೦

ಕಾಲವಟುಲೀಲನಿಂದ್ರನ
ಮೂಲೆಗೆ ಚಿಗವಲ್ಲಿಯಿಟ್ಟ ಕರಗುಣದಿಂದಂ
ಮೇಲಕ್ಕೆ ತೆಗೆಯೆ ಸಜ್ರನೆ
ತೇಲುವವೊಲಡರ್ದನಿಂದು ಮಧ್ಯಾಂಬರಮಂ(?) ೨೬೧

---

[1] ತಾರಗೆಗಳ್ ಸಾಂದ್ರನಯನಂಗಳೆನೆ(ಸೂ) [2] ದಕಣ್ಗೊಪ್ಪಿದನೋ(ಸೂ)

ಇರುಳೆನಿಪೊರ್ವ ತಸ್ಕರನು ಭಾಸ್ಕರನೆಂದೆನಿಪೊಂದು ರನ್ನಮಂ
ತ್ವರಿತದಿ ಕಟ್ಟಿಕೊಂಡು ಪರಿದೆಯ್ದಲು ಪಜ್ಜೆಯನೆಯ್ದೆ ಪೂರ್ವಭೂ
ಧರಮೆನಿಪೊರ್ವ ಸಿದ್ಧನಿರದಿಕ್ಕಿದ ಬಟ್ಟಲ ಸತ್ಯಮೆಂಬಿನಂ
ಕರಮೆಸೆದತ್ತು ಕಡರ್ದೆಯ್ದುವ ಚಂದಿರನಂಬರಾಗ್ರದೊಳ್ ೨೬೨

ಸರಿರವ ಬೂದಿ ಚಂದ್ರಿಕೆಯದಾಗಿರೆ ಕಂಠದ ಸಿಂಹನಾದಮು
ಬ್ಬರದ ಕಳಂಕಮಾಗಿರೆ ಪರೀಪರಿವೇಷಮೆ ಯೋಗವಟ್ಟಮಾ
ಗಿರೆ ಖಚರತ್ವಮೇ ಪವನವಿದ್ಯೆಯದಾಗಿರೆ ವೇಷಜೋಗಿಯೆಂ
ಬುರುತರಭಾವಮಂ ಬಗೆಗೆ ಬೀಱುತಲೊಪ್ಪಿದನೋಷಧೀಶ್ವರಂ ೨೬೩

ಶಿರದೊಳ್ ತಾರಾ[1]ನಿಕಂಗಳ್ [1]ಪೊಳೆಯೆ ಕರಜಟಾಜೂಟಮಿಂಬಾಗೆ ಜೊನ್ನಂ
ಸುರಸಿಂಧುಸ್ರೋತಮಂ ಪೋಲ್ತಿರೆ ತೊಲಗೆ ತಮೋರಾಕ್ಷಸಂ ಚರ್ಮಚಿತ್ರಾಂ
ಬರಖಂಡಂ ಕೂಡೆ ಕಾಮಂ ಕರಮುರ್ಚಿವಿನೆಗಂ ಮಂಡಲಗೊಂಡು ಪರ್ವು
ತ್ತಿರೆ ಸಂಧ್ಯಾರಾಗನೇತ್ರಾಸಿಲನುದಯಿಸಿದಂ ಚಂದ್ರಚಂದ್ರಾರ್ಧಜೂಟಂ ೨೬೪
(ಲೀಲಾವತಿ ೧೦-೩೨, ಸೂಕ್ತಿಸುಧಾರ್ಣವಂ, ೮-೨೧೪)

ಮಿಸುಪಾ ಚಕ್ರಕೆ ಬೆಚ್ಚದುಂ ಸಡಿಲೆ ಭೂರಂಗಿಟ್ಟದಿಂಪೊಂದಿ ತಾ
ಮುಸನೆಂಬೀ ನಸಿದಿದ್ದಲಿಟ್ಟು ವಿರಹಪ್ರಾಪ್ತಾಗ್ನಿ ತೆಂಗಾಳಿಯೆಂ
ಬುಸುರಿಂದೂದಿ ಕರಂಗಿಸುತ್ತೆ ನಿಜಪಾಷಾಣಂಗಳಂ ವಲ್ಲಭ
ಪ್ರಸರಚ್ಚಕ್ರಮನೆಯ್ದೆ ಕಾಸಿ ಬೆಸುತಿರ್ದಂ ಚಂದ್ರನೇಂ ಸೊನ್ನರಂ ೨೬೫

ಇಳೆಯ ಸುಯೋಗಿಗಳ್ ನಲಿಯೆ ಪೂರ್ವಸುಶೈಲದ ಧಾತುರಕ್ತಮಂ
ಬಳಿದವೊಲಾತ್ಮರೂಪಮದು ಕೆಂಪಿನೊಳಂ ಮಿಗೆ ಮಾಚಿ ದೃಗ್ಘಟಾ
ವಳಿಯೆದೆಗೆತ್ತಿ ಚಿನ್ನದಸಿಯಂ ನಸುಗಾಣಿಸದಾ ವಿಯೋಗಿಸಂ
ಕುಳಪರಿವಾದಿಯಂ ಕೊಲಲು ಬಂದವನಂದದೊಳಿಂದು ಮೂಡಿದಂ ೨೬೬

ಕರುಣಂ ಚಕ್ರಕ್ಕೆ ಹಾಸ್ಯಂ ಕುವಲಯಕೆ ಭಯಂ ಜಾರೆಯರ್ಗದ್ಭುತಂ ಸಾ
ಗರಕಂ ಭೀಭತ್ಸ ನಕ್ತಂಚರವರತರುಣೀರಕ್ತಪಾನಕ್ಕೆ ವೀರಂ
ಸ್ಮರಭೂಪಾಲಂಗೆ ರೌದ್ರಂ ವಿರಹತತಿಗೆ ಶಾಂತಂ ಚಕೋರಕ್ಕೆ ಶೃಂಗಾ
ರರಸಂ ಕಾಂತಾಜನಕ್ಕಾಗಿರೆ ನವರಸಮಂ ಬೀಱುತಿರ್ದಂ ಶಶಾಂಕಂ ೨೬೭
(ಸೂಕ್ತಿಸುಧಾರ್ಣವಂ ೮-೨೩೫)

---

[1] ಕಪೋಲಂ(ಸೂ ಅ)

ಇಂದು ಸುಧಾಂಶುರಾಜನತಿಶೀತಳಶೀಲನಸೂನದಾನಿಯೆ
ಯ್ತಂದೊಡೆ ಕೈರವಕ್ಕೆ ಶಶಿಕಾಂತದ ಕಲ್ಗೆ ಚಕೋರಮಾಲೆಗಾ
ನಂದಮುದಾಯ್ತು ಪಂಕಜಕೆ ಚಕ್ರಯುಗಕ್ಕಸತೀಕುಲಕ್ಕೆ ಪೋ
ದಂದುಗಮಾಯ್ತು ಸರ್ವಜನಸಮ್ಮತಮಪ್ಪನದಾರು ಲೋಕದೊಳ್ ೨೬೮

ಅಧ್ವನಿ ಪೊಣ್ಮೆ ಪೊಯ್ಯಲುದಿರ್ದಂತೆವೊಲಿರ್ದುವು ತಾರಕಾಳಿ ತಾ
ರಧ್ವದೊಳಸ್ತಶೈಲಶಿಖರಾಗ್ರದೊಳಿರ್ದುದು ಚಂದ್ರಮಂಡಲಂ
ಸದ್ವಶದಿಂದುರುಳ್ದುದೆನಲೆತ್ತಿದ ತನ್ನೃಪತಿಪ್ರತಾಪತುಂ
ಗಧ್ವಜದಂತೆ ನೂಡಿದುದು ಮೂಡಣದಿಕ್ಕಿನೊಳಿಂದುಮಂಡಲಂ(?) ೨೬೯

ಯುವತೀನೇತ್ರೋತ್ಪಲಂ ಮುಂತಲರೆ ಕುವಲಯಂ ಪಿಂತೆ ಜೇತಶ್ಚಕೋರೀ
ನಿವಹಂ ಮುಂತಾ ಚಕೋರೀಪ್ರತತಿ ನಲಿಯೆ ಪಿಂತುರ್ಬೆ ಭೂಲೋಕರಾಗಾ
ರ್ಣವಮೆಲ್ಲಂ ಮುಂತೆ ಪಿಂತರ್ಣವಮೊಗೆವುದಿದೇಂ ರೋಹಿಣೀಮಾನನಮು[1]ಕ್ತಾ
ರ್ಣವ[1]ಲಗ್ನಾಪಾಂಗದ್ಯುತಿಲಲಿತಲಸಚ್ಚಂದ್ರಿಕಾ ಚಂದ್ರಬಿಂಬಂ ೨೭೦

(ಲೀಲಾವತಿ, ೧೦-೩೩)

ತಾರೇಶ ತಾರ್ಕ್ಷ್ಯನಂಶುವಿ
ಸಾರಿತಪಕ್ಷಂ[2] ಬರುತ್ತಲಿರೆ ನಂದನ[2]ಧಾ
ತ್ರೀರುಹಮಂ ಸುತ್ತಿದ ಕಾ
ಳೋರಗನೋ[3]ಡಿದವೊಲಾದುದಾ ತಿಮಿರಾಂಧಂ[3] ೨೭೧

(ಜಗನ್ನಾಥವಿಜಯಂ, ೧೬-೧೦೭, ಸೂಕ್ತಿ, ೮-೨೬೦)

ಕಡಲಂ ಸುರಾಸುರರ್ ಕಡೆ
ವೆಡೆಯೊಳ್ ಪಾಲ್ದೆರೆಗಳೊಳಗೆ ಪುಟ್ಟಿದ ಜೆಲ್ಪಿಂ
ಗೆಡೆಗೊಂಡು ಯಿರುಳಮುಗಿಲ್ಗಳ
ನಡುವೆ ಕರಂ ಮಿಱುಗಿದತ್ತು ಹಿಮಕರಬಿಂಬಂ ೨೭೨

ಇನನಸ್ತಾದ್ರಿಯನೆಯ್ದಲಾರುಣತೆಯಂ ಕೈಕೊಂಡು ಪೂರ್ವಾದ್ರಿಯೊಳ್
ಘನರಾಗಂ ಬೆರಸೆಯ್ದೆ ಪದ್ಮಿನಿಗೆ ಕಯ್ಯಂ ನೀಡೆ ತಜ್ಜೈತ್ರ್ಯದಿಂ
ದಿನಿಯಂ ತಾನಿವನಲ್ಲವೆಂದು[4] ಮೊಗಮಂ ಮುಚ್ಚಲ್ಕೆ[4] ಕೌಮೋದಿ ಕಂ
ಡಿಸಿಸುಂ ನಕ್ಕೊಡೆ ನಾಣ್ಚಿದಂತೆ ನಭದೊಳ್ ಬೆಳ್ಪೇಱಿದಂ ಚಂದ್ರಮಂ ೨೭೩

(ಸೂಕ್ತಿಸುಧಾರ್ಣವಂ ೮-೨೬೬)

---

[1] ಕ್ತಪ್ರವಿ(ಅ) [2] ಬರಲ್ ನಭಶ್ಚಂದನ(ಸೂ, ಅ) [3] ಡುವವೊಲೋಡಿಪೋದುದು ತಿಮಿರಂ (ಸೂ,ಅ) [4] ಮುಗಿಯಲ್ ಮೂಡಿರ್ದ(ಸೂ)

ವೃಂದಾರಕನರಭೂಭುಜ
ವೃಂದಸುಖಂ ತತ್ಸುಧಾಗುಣಂ ಛಾಯಾಂಗಂ
ಯಿಂದುದುಕೂಲಾಚಕ್ರಂ
ಬಂದುದು ಸಿತಪಕ್ಷರಜಕದಾರಕಲಸಿತಂ ೨೭೪

ಉರುತರ ಚಕ್ರವಾಕದುಱಿ ತೆಕ್ಕೆಯ ಸಿಕ್ಕನೆ ಸೀಳ್ದ ಚಕ್ರಮೋ
ಪರಮಚಕೋರನುಂಬಶನವಾನಗಮೊಪ್ಪುವ ರೌಪ್ಯಪಾತ್ರಮೋ
ಯಿರುಳೆಸಿಪಾಯುಧಂ ಶಿಖರಿಯಪ್ಪೊಡೆ ಕಾಲನುಡೆಂಬ ಕಾ[1]ರ್ಮ್ಮ[1]ಕಂ
ಕರದೊಳೆ ನೂಂಕುವಾ ಶಿಖರಿಯೊಳ್ಪೊಳೆಯೋಯೆನೆ ಚಂದ್ರನೊಪ್ಪುವಂ ೨೭೫

ಸಸಿಗಳೆ ಸೊಂಪು ಸಾಗರದ ಪೆಂಪು ಚಕೋರಿಗಳಿಂಪು ತಾರಕಾ
ಪ್ರಸರದ ನುಣ್ಪು ಕೈರವದಲಂಪು ಧರಿತ್ರಿಯ ತಂಪುನಭ್ರುದಾ
ದೆಸೆಗಳ ಗುಂಪು ಮನ್ಮಥನ ಹೆಂಪು ರತೌಘದ ಬಿಂಪಿವೀತನಿಂ
ದೆಸೆವುದು ಸತ್ಯವೆಂದು ಧರೆ ಬಣ್ಣಿಸೆ ಪೂರ್ಣಶಶಾಂಕನೊಪ್ಪುವಂ ೨೭೬

ಪಸಿದು ದಿನೇಶನೆಂಬ ಪಿಶಿತಾರುಣಖಂಡಮನೊರ್ಮೆ ನುಂಗಿ ರಾ
ಗಿಸಿ ಕಿಸುಸಂಜೆಯೆಂಬ ನವಲೋಹಿತದೊಳ್ ಪೊರೆ[2]ದೊಂದು[2] ಬಾಯಗು
ರ್ಬಿಸಿ ತಮಮೆಂಬ ತನ್ನ ಮುಸಕಂ ಕಳೆದಿರ್ದರುಳೆಂಬ ಕಾಳರ
ಕ್ಕಸಿ ನಗಲೆಂದು ಪಲ್ದೆಱೆದ ಮಾಟಿಕ್ಕೆವೊಲಿರ್ದುವು ಚಂದ್ರರಶ್ಮಿಗಳ್ ೨೭೭
(ಸೂಕ್ತಿಸುಧಾರ್ಣವಂ ೮–೨೫೯)

ಶಿವನೇಂ ಗಂಡುಲಲಾಟದೊಳ್ ತಳೆದನೀ ಜೆಳ್ವಾಳನೀ ಪಾವುಕೊಂ
ಡವನಂ ಪೆರ್ಮೊಲನೇಣವಾಲಕಲೆಯಾಗಿರ್ಪಾತನಂ ವ್ಯಾಧಿಯು
ಳ್ಳವನಂ ಪಕ್ಷದೊಳೆಯ್ದೆ ಪೊಂದುವವನಂ ಪೇಟಿಱಂದು ತನ್ನಂಗಿ ನೋ
ಡಿ ವಿಯೋಗಾಕುಳೆ ಸುಯ್ದು ಬೈದಳಮೃತಶ್ರೀಸಾಂದ್ರನಂ ಚಂದ್ರನಂ ೨೭೮

ಒಡವುಟ್ಟಿದ ವಿಷವಿದನಾಂ
ಕಡೆನೂಂಕಲದೇಕೆ ಕೂಡಿ ನಡೆವೆನೆನುತ್ತಂ
ಮೊಡಲೊಳಗಿಂಬಿಟ್ಟೆಯ್ದುವ
ಪಡಿಯೆನಲೊಪ್ಪಿತ್ತು ಲಾಂಛನಾಂಕಿತಚಂದ್ರಂ ೨೭೯

---

[1] ರು(ಸ) [2] ಪೊಂದಿ(ಸ)

ಮೀಂಗಳ ಮುತ್ತೆನಿಸುವ ಬೆ
ಳ್ದಿಂಗಳೆ ಪಾಲ್ಗಡಲನಿಱಿಸೆ ಮಂ[1]ಡಲ[1]ಶೇಷೋ
ತ್ಸಂಗ ಶಯನೀಯದೊಳೆ ಕೃ
ಷ್ಣಾಂಗದ್ಯುತಿಯಂತಿರೆಸೆದುದಿಂದುಕಳಂಕಂ ೨೮೦

(ಜಗನ್ನಾಥವಿಜಯಂ, ೧೬–೧೦೮)

ಮುಂದೆ ತಮಂಧವಿಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ
ಮುಂದುಗೊಳುತ್ತಮೆನ್ನನಿದು ಮಾಡುವ ಮಾಱ್ಕಿಯುಸಿಂದು ನೋಱ್ಪನಾ
ನೆಂದು ತದೀಯ ರೂಪನುಱೆ ನುಂಗಿ ತನುಚ್ಛವಿಯಿಂದೆ ತೋಱುತೆಂ
ಬಂದದೊಳೊಪ್ಪುತಿರ್ದುದು ನಿಶಾಕರಮಂಡಲದಲ್ಲಿ ಲಾಂಛನಂ ೨೮೧

ಉದಯಂಗೆಯ್ದೊಡೆ ಕಾಮರಾಯನಿದಿರೆದ್ದಾಲಿಂಗನಂ ಮಾಡಿದಂ
ದದೆ ಚೈತ್ರಂ ತನಗಿತ್ತ ನೀಲಮಣಿಹಾರಂ ಪೇೞುಪಕ್ಕೇಱಿದಂ
ದದೆ ರಾತ್ರಿಪ್ರಿಯೆ ಸೂಱೆಗ್ಗವಂದು ಪದಸಿಂ ಪರ್ಯಂಕದೊಳ್ ನೆಮ್ಮಿದಂ
ದದೆ ಕಣ್ಗೇನಮೃತಾಂಜನಂ ಮೆಱೆದುದೋ ಲಕ್ಷ್ಮಂ ಮೃಗೀಲಕ್ಷ್ಮನೊಳ್ ೨೮೨

(ಅನಂತನಾಥಪುರಾಣಂ, ೭–೮೪; ಸೂಕ್ತಿಸುಧಾರ್ಣವಂ, ೮–೨೪೪)

ತಿಳಿಗೊಳನಲ್ಲಿ ತೋಱುವಸಿತೋತ್ಪಲಮಂ ಫಣಿರಾಜತಲ್ಪದೊಳ್
ತೊಳಗುವ ಕೃಷ್ಣಕಾಂತವಪುವಂ ರತಿದೇವಿಯ ಕೇಳಿಗಿಟ್ಟ ನು
ಣ್ಪಳುಕಿನ ಬಟ್ಟವಂಜರದ ಕೋಗಿಲೆಯಂ ಗೆಲೆವಂದುದಿಂದುವಂ
ಡಳದ ಕಳಂ[2]ಕ[2]ರೇಖೆಯುಮರೇಂದ್ರವಧೂಮುಖಪದ್ಮವಿಭ್ರಮಂ ೨೮೩

(ಲೀಲಾವತಿ, ೨–೧೧; ಸೂಕ್ತಿಸುಧಾರ್ಣವಂ, ೮–೨೪೬)

ಇದು ಹರಿಣಂ ದಿಟಂ ಹರಿಣನಲ್ತು ಮೊಲಂ ಮೊಲನಲ್ತದಾಲಮಾ
ಲದ ಮರನಲ್ತು ಪುತ್ತು ಕಳೆ ಪುತ್ತುಮಿದಲ್ತೆನುತಿರ್ಪ ಮೂಢಲೋ
ಕದ ಪಡೆಮಾತದಿರ್ಕೆ ನೆವವಿಟ್ಟು ಕೊಲಲ್ ಮದನಂ ವಿಯೋಗಿಗೊ
ಡ್ಡಿದ ಘಟಸರ್ಪನೆಂದು ಬಗೆಯಿಂ ಹಿಮದೀಧಿತಿಹೃತ್ಕಳಂಕಮಂ ೨೮೪

(ಸೂಕ್ತಿಸುಧಾರ್ಣವಂ, ೮–೨೪೭)

---

[1] ಗಳ(ಸ) [2] ಲೇಖನಮುದಿಂದ್ರವಧೂಮುಖಪಕ್ಷ್ಮ(ಸೂ)

ಮುನಿದೀಶಂ [1]ತ್ರಪೆ[1] ಸುಟ್ಟು ಮುಂ ಕರುಣದಿಂದಿತ್ತಂ ಪುನರ್ಜನ್ಮಮಂ
ನಿನಗೆಂದಾ ರತಿ ಪಾಪಮುಂ ಪ[2]ದಪು[2]ಮುಂ [3]ಪ್ರೋಕೆಂದು[3] ಕಾಮುಂಗೆ ಮ
ಜ್ಜನಕೆಂದೆತ್ತಿದ ಚಂದ್ರಕಾಂತಘಟ[4]ದೊಳ್ ತೊಯ್ದ[4]ಟ್ಟಿಱಿಂ ಪುಷ್ಪವಾ
ಸನೆಗೆಂದಿಕ್ಕಿದ ನೀಲನೀರರುಹಮಂ ಪೋಲ್ದತ್ತು ಕರ್ಪಿಂದುವಾ ೨೮೫

(ಪಂಪಭಾರತಂ, ೪-೫೧: ಸೂಕ್ತಿಸುಧಾರ್ಣವಂ ೮-೨೪೮)

ಪುತ್ತಿಸೊಳಿರ್ದ ನಾಗರಫಣಾಮಣಿರಶ್ಮಿಯೊ ರಾಹುದಂತಮೋಂ
ಪತ್ತಿತೊ ಕೊಂಬಿನಿಂ ಹರಿಣಸೊತ್ತಿತೊ ಸಾನುಪುಳಿಂದನಿಂದಲೇಱಿರ್
ಪತ್ತಿತೊ ಪೇರ್ಣ್ ಶಶಂ ವಟಮಹೀಜಮೆ ಪಣ್ತುದೊ ಪೇಱೆನಲ್ಕೆ ಮೆ
ಯ್ದಿತ್ತು ಕಳಂಕ ನೀಲರುಚಿಯಿಂದೆಸೆದಿರ್ದುದು ಚಂದ್ರಮಂಡಲಂ ೨೮೬

(ಸೂಕ್ತಿಸುಧಾರ್ಣವಂ ೮-೨೫೧)

ಇರುಳೆಂಬ ಸತಿಯ ಮದುವೆಗೆ
ವರ ಶಶಿಮದವಣಿಗನಾಂತು ಬಂದ ಕಠಾರದ
ಪರಿಜಂ ದೂರದ ಲೋಕಂ
ಪರಮ ಕಳಂಕೆಂದು ಬಗೆವುದೇನಾಶ್ಚರ್ಯಂ ೨೮೭

ಇರುಳೆಂಬ ಕಾಂತೆ ಸುರಗಾರ್
ಪರಮಾನ್ನಮಿಟ್ಟು ಕಳುಪುತಾ ದೃಗ್ದೋಷಂ
ಪೊರೆಯದವೋಲ್ ಮುಚಿಯಿಟ್ಟಂ
ತುರು ಚಂದ್ರಕಳಂಕಂ ಕಣ್ಗೆ ತೋರ್ಪುದು ಸತತಂ ೨೮೮

ಇರುಳೆಱೆಯನೊಡಲ ಕಱೆಯುಂ
ಶರಧಿಯೊಳೇೞ್ದಲ್ಲಿ ಪತ್ತಿದಾ ಕೆಸಱನ್ನದೆ
ಹರಿಣ ವಟ ಪುತ್ತುಮೆಂಬುದು
ನರರುಪಮೆಯ ಮಾಡದಲ್ತುಮದು ಪುಸಿ ನೋಡಲ್ ೨೮೯

ಡೆಸೆವೆಣ್ಣಾಳಿಯುರಾರ್ದ್ರಕುಂಕುಮಮನಿಟ್ಟಾಂತಂತಿರಲ್ಕಲ್ಲಿಗಾ
ಶಶಿ ತಾನೊರ್ವನೆ ಬಂದರಿಟ್ಟರೆನಿಪಂತಾದತ್ತು ಕೆಂಪುದ್ದದೊಳ್
ನೆಸೆಯಲ್ ರೋಹಿಣಿಗಳ್ಕಿತಾ ರಜಮದೋಡಲ್ ಕುರ್ದಿದಂತಾಯ್ತು ಬೆ
ಳ್ಪಸಿದಾಂತಾ ಕಿಡಿ ಕಂದಿದಂತೆ ಶಶಿಯೊಳ್ ತಾನಾಯ್ತು ಹೋ ಲಾಂಛನಂ ೨೯೦

---

[1]ಸಲೆ(ಸೂ) [2]ಡಣ(ಅ.ಸೂ) [3]ಪೋಪಂತೆ(ಅ) [4]ದಿಂತಂದ(ಸೂ)

ಪರಮಚಕೋರಸಜ್ಜನರ ನಿರ್ಮಲಭೋಜನಕಾ ಪಿತಾಮಹಂ
ಪಿರಿದಹ ಜೊನ್ನಮೆಂಬ ಬಹುಲಾನ್ನಮನಾಗಸಮೆಂಬ ಕುಂಭದೊಳ್
ತರಿಸಿರುಳ್ಪೆಣ್ಣೆ ಸಿಂದುಪಟದಿಂದಲೆ ಬಂಧಿಸಿ ಚಿಹ್ನಮುದ್ರೆಯಿ
ಟ್ಟರಿಸಿದ ಮಾಟಿಕ್ಕೆಯಂತೆ ಚಂದ್ರಿಕೆ ಚಂದ್ರಕಳಂಕಮೊಪ್ಪುಗುಂ (?) ೨೯೧

ಪಸಿದ ಚಕೋರಿಗಳ್ [೧]ದ್ವಿ[೧]ಜಶರೀರಗಳೆಂದೆಱೆಯಲ್ಕೆ ಸಂಜೆ ಭಾ
ವಿಸೆ ಪೊಸಜೊನ್ನಮುಂ[೨] ಶ[೨]ಶಿಯ ಕಪ್ಪಿನಿತಿಲ್ಲದ ಮಾಟಿಕ್ಕೆ[೩]ಯಿಂದೆ[೩] ಶೋ
[೪]ಧಿ[೪]ಸಲದು ಶುದ್ಧವಾಗೆ ಬಟಿಯಿಂ ಸ[೫]ವೆಸಿ[೫]ಕ್ಕಿದ ಧಾರೆವಟ್ಟಲಂ
ಸಸಿ[೬]ಗಿರಿ[೬]ಸಿಟ್ಟವೋಲ್ ಮೃದುಕಳಂಕದಿನೊಪ್ಪಿದುದಿಂದುಮಂಡಳಂ ೨೯೨

(ಸೂಕ್ತಿಸುಧಾರ್ಣವಂ, ೮–೨೫೩)

ಚಿತ್ರಜನೆಂಬ ಘಟ್ಟಿವಳಸೊಪ್ಪಿರೆ ಚಂದನಚರ್ಚೆಗಿಕ್ಕಿದಂ
ಕತ್ತುರಿಯುಂಡೆಯಂ ಘುಸೃಣಕೇಸರಮುಂ ಶಶಿಕಾಂತ ಸಾಣೆಯೊಳ್
ಬಿತ್ತರದಿಂದೆನಲ್ಕೆ ನಸು ನುಣ್ಕಱೆಯುಂ ಕಿಸುಸಂಜೆಗೆಂಪನಾ
ಳ್ದಿತ್ತುದಯಾದ್ರಿಮಸ್ತಕದೊಳೊಪ್ಪುವ ಪೂರ್ಣಶಶಾಂಕಮಂಡಳಂ ೨೯೩

ನಲ್ಲರನಗಲಿದ ವಿರಹಿಗ
ಳೆಲ್ಲರುಮೊಂದಾಗಿ ಸುಯ್ದು ಸುಯ್ದಂತಂಗಿಯ
ಮೆಲ್ಲೆ ನಡು ಕರಗಿಪೋದುದು
ಅಲ್ಲದೊಡಾ ಚಂದ್ರಮಂಗೆ ಕಲೆ ರಂಜಿಪುದೆ (?) ೨೯೪

ಪಿರಿದುಂ ಲೀಲಾವತೀದೇವಿಯ ನಿಜವದನಜ್ಯೋತ್ಸ್ನೆಯುಂ ಕೊಳ್ಳೆ ನಾನೆಂ
ದುರಿಯಂ ತಳ್ಕೈಸಿ ದಿವ್ಯಂ[೭]ಬಿಡಿವ[೭]ವೊಲುದಯಾವಸ್ಥೆಯೊಳ್ ಸಂಜೆಗೆಂಪಾ
ವರಿಸಿತ್ತಲ್ಲಿಂ ಬಟಿಕ್ಕೇಟಿಡೆ [೯]ನಡೆದದನೀಡಾಡಿ ನಿಂದಂದೆ ಬೆಳ್ಪು
ಬ್ಬರಿಸಿತ್ತಲ್ಲಿಂ [೧೦]ಬಟಿಕ್ಕೇನೆಸೆದುದೊ ಶಶಿಯೊಳ್[೧೦] ಸೋಲ್ತು ಬೆಂದಂತೆ ಚಿಹ್ನಂ ೨೯೫

(ಲೀಲಾವತಿ, ೧೦–೩೪)

---

[೧]ನಿ(ಸ) [೨]ನಿ(ಸ) [೩]ಯಂತೆ(ಸ) [೪]ಭಿ(ಸ) [೫]ದಕಿ(ಸೂ) [೬]ನಿ(ಸ) [೭]ಮುದುಕ(ಸ)
[೯]ದೆಯೊಳ್ದಳದಿ(ಸ) [೧೦]ಮುಂತೇನೆಸೆದುದೊ ಶಶಿತಾಂ(ಸ)

## ಬೆಳದಿಂಗಳಿನ ವರ್ಣನೆ:—

ಸತತಂ ಸಂಧ್ಯಾಗ್ನಿನೇತ್ರಂ ಸುರಗಿರಿ ವೃಷಭಾರೋಹಣಂ ತಾರಕಾದೀ
ಧಿತಿ ಗಂಗಾನುಸ್ತ್ರಕಂ ಲಾಂಛನವಿಷಸಹಿತಂ ಪೂರ್ವದಿಕ್ಪಾರ್ವತೀಸಂ
ಯುತಮುದ್ಯತ್ ದ್ವಿಟ್ತ್ರಮೋಭಂಜಕನಭಿನವಲೋಕೇಶ ಶೀತಾಂಶುಜೂಟೋ
ದ್ಯುತಿಹಾಸಂ ಪರ್ವಿದಂತೇನೆಸೆದುದೊ ಜಗದೊಳ್ ಕೌಮುದಿಶ್ರೀವಿಳಾಸಂ ೨೯೭

ಪಗಲೆಂದುಂ ತಲೆಯೆತ್ತಲಮ್ಮಲಿರುಳುಂ ಚಂದ್ರಂಗೆ ಕೂರ್ತಂತೆ ಪ
ತ್ತುಗೆಗುಂದಳ್ ಮಿತಿಯಪ್ಪುದುಂ ಪರಿದು ದುಗ್ಧಾಂಬೋಧಿಯೊಳಾಡುವಳ್
ನಗುವಳ್ ನೈದಿಲೊಳೆಟ್ಟಿ ಚುಂಬಿಪ ಚಕೋರಂಗೊಲ್ದಟಿಲ್ವಾಸೆಯಿಂ
ಪುಗುವಳ್ ಕೌಮುದಿಯೆಂಬ ಪೊಚ್ಚಪೊಸಪೆಣ್ಣೇನೆಂಬೆನಾ ಜೋಡೆಯುಂ ೨೯೮

ಘನಸಂಧ್ಯಾರುಚಿರಜ್ಜುವಿಂದುದಯಶೈಲಸ್ತಂಭದೊಳ್ ಕಟ್ಟಿ ತೊ
ಟ್ಟನೆ ಕೈಕೊಳ್ವ ಕಳಂಕವತ್ಸನಸಲಂಪಿಂದೂಡಿ ತಾರಾನಿಬಂ
ಧನದಿಂದಂ ತಳೆಯಿಕ್ಕಿ ರಾತ್ರಿ ಕಱಿತದಳ್ ಬ್ರಹ್ಮಾಂಡಭಾಂಡಂ ಪಳ
ಚ್ಚನೆ ತೀವುತ್ತಿರೆ ಚಂದ್ರಮುಸ್ಸುರಭಿಯಿಂ ಜ್ಯೋತ್ಸ್ನಾಪಯಃಪೂರಮುಂ ೨೯೯

(ಸೂಕ್ತಿಸುಧಾರ್ಣವಂ, ೮–೨೬೧)

ಹಿಮರೋಚಿರ್ಮಂಡಲಂ ಕುಂಡಲಿತ ಕುಸುಮಕೋದಂಡಮುಂ ಪೋಲೆ ಶೃಂಗಾ
ರಮುಯಂ ಭೂಲೋಕಮಪ್ಪಂತಿರೆ ವಿರಹಿಗೆ ಶಶ್ವದ್ಧನುರ್ವೇದವಿದ್ಯಾ
ಶ್ರಮಮಂ ತೋಱಲ್ ಕಳಂಕಸ್ಮರಸಿಸೆ ಕುಱುಗಲ್ಗೊಂಡು ಪಾಯ್ಪಂತೆವೋಲ್ ಕೌ
ಸುಮಬಾಣಾಸಾರದಂತೇಂ ಸುರಿದುದೊ ನವನೀಹಾರಕಾಂತಿಪ್ರವಾಹಂ ೩೦೦

(ಲೀಲಾವತಿ, ೨–೧೩; ಸೂಕ್ತಿಸುಧಾರ್ಣವಂ, ೮–೨೬೨)

ವನಜಂ ಬಂದುದು ಮುನ್ನವೆನ್ನ ಬಸಿಱಿಂದಂ ಕೊಟ್ಟ ಕೂಸಿಂಗೆ ಗೋ
ಮಿನಿಗೆಂದುಂ ನೆಲೆಯಾಗಿ ನಿಂದುದಳಿಯಂ ನೀರೇಜನಾಭಂಗೆ ಲೋ
ಚನಮಾಗಿರ್ದುದದಕ್ಕೆ ಕಂದ ಮುಳಿಯಲ್ವೇಡೆಂದು ದುಗ್ಧಾಬ್ಧಿ ನಂ
ದನನಂ ಪ್ರಾರ್ಥಿಸಲೆಂದು ಬಂದ ತೆಱದಿಂ ಪರ್ಬಿತ್ತು ಚಂದ್ರಾತಪಂ ೩೦೧

(ಸೂಕ್ತಿಸುಧಾರ್ಣವಂ, ೮–೨೬೮)

ಆಗಸದೇಗುಲಂ ಕುಮುದಬಾಂಧವಮಂಡಲ ಸತ್ತ್ರಭಾಳಿ ತಾ
ನಾಗೆಸೆದಿರ್ಪ ಚಿಹ್ನಮಯಲಿಂಗಕೆ ಲೋಕದಶಾಂತಿ ಕೂರ್ತು ತಾ
ರಾಗಣರಾಜರೊಲ್ದಭಿಷವಂ ಮಿಗೆ ಮಾಡಿಸಲಾ ಮಹಾಮೃತಂ
ಭೂಗಗನಾಶೆಯೊಳ್ ಪರಿದುದೆಂಬಿನಮಾದುದು ಚಂದ್ರಿಕೋಜ್ಜ್ವಲಂ ೩೦೨

ಪರತರ ಕಾಲಜೋಗಿ ಪಡಿಸ್ಸೈಱುದಿಸಂ ಪೊದಲಾಗಿ ಕೂಡಿದಾ
ಸುರಚಿರ ಸತ್ಕಲೌಷಧಿಗಳಿಂದಮೆ ಬದ್ಧಮಾದ ಚಂದ್ರಸೆಂ
ಬುರುರಸದೊಂದು ಸಲ್ಗುಳಿಗೆಗೊಟ್ಟೊಡೆ ಕೊಂಡ ಪಯಃಪ್ರವಾಹಮಂ
ಧರೆ ನೆಱೆತಗಿಂತು ಕಾಱಿಸಿದಪನೆಂಬವೊಲಾದುದು ಕೌಮುದೀಕುಲಂ ೩೦೩

ನೆಗೆಪುತ್ತುಂ ಬಿಸುಪಂ ವಿಯೋಗಿಜನದೊಳ್ ಕಾಂತಾಮುಖಾಂಭೋಜಮಂ
ನಗಿಸುತ್ತುಂ ಸ್ಮರಸೂರ್ಯಕಾಂತಶಿಖಿಯುಂ ಸೂಸುತ್ತಲೆತ್ತಂ ಚಕೋ
ರಿಗಳೊಳ್ ತೃಷ್ಣೆಯನೀವುತುಂ ನೆರಪುತುಂ ಪ್ರೇಯೋರಥಾಂಗಂಗಳಂ
ಪಗಲಂ ಪುಟ್ಟಿಸುವಂತೆ ಪೊಕ್ಕಿರುಳೊಳೇಂ ಪರ್ಬಿತ್ತೊ ಚಂದ್ರಾತಪಂ ೩೦೪
(ಲೀಲಾವತಿ ೨-೧೫)

ಚೂತಮನಪ್ಪಿ ಪುಷ್ಪಿತೆಯದಾದುದು ವಲ್ಲಿಗೆ ಶೀತಕೃತ್ ಕರ
ವ್ರಾತಮನಪ್ಪಿಯೊಪ್ಪೆ ಕರಗಿತ್ತು ಹಿಮೋಪಲಮೋತು ತುಂಬಿಯುಂ
ಪ್ರೀತಿಯೊಳಪ್ಪಿ ಗರ್ಭಿಣಿಯದಾಯ್ತು ಸರೋರುಹಮುತ್ಪಲಂ ಪ್ರಸೂ
ನಾತುರೆಯಾಗಿ ಪೊತ್ತುದಳಿಯುಂ ನವಚಂದ್ರಿಕೆಯೊಳ್ ನಗೇಶ್ವರಾ ೩೦೫
(ಗಿರಿಜಾಕಲ್ಯಾಣಂ ೪-೧೧೩)

ಹರನುದ್ಧೂಳಿಸಿದತ್ಯನೂನ ಭಸಿತಪ್ರೋದ್ಯೋತಮೋ ಚಂದ್ರಶೇ
ಖರನಾನಂದಮಯಾಟ್ಟಹಾಸರುಚಿಯೋ ಸರ್ವೇಶಸತ್ಕೀರ್ತಿಯೋ
ಪರಮೋತ್ತುಂಗನುರುನ್ನದೀಪ್ರಬಳಗೌರಚ್ಛಾಯೆಭೂಭಾಗದೊಳ್
ಪರೆದತ್ತೋಯೆನೆ ಪರ್ವಿತುರ್ವಿಯನಗುರ್ವಿಂ ಸಾಂದ್ರ ಚಂದ್ರಾತಪಂ ೩೦೬
(ಗಿರಿಜಾಕಲ್ಯಾಣಂ ೪-೧೦೦)

ಮುಡಿವೊಡೆ ಮಲ್ಲಿಕಾಪ್ರತತಿ ಪೂಸುವೊಡುತ್ತಮ ನವ್ಯಚಂದನಂ
ತೊಡುವೊಡೆ ಮೌಕ್ತಿಕಾಭರಣಮೀಸುವೊಡಂತಮೃತಾಬ್ಧಿ ಪೊದ್ದುಕೊ
ಳ್ವೊಡೆ ಧವಳೋತ್ತರೀಯ ಬಿಡದೀಂಟುವೊಡಾ ನವದುಗ್ಧವಾರ್ಧಿಯೋ
ರ್ವೊಡೆ ರಜತಾದ್ರಿಯೆಂದೆನಿಸಿ ತೋಱಿತು ಮೀಱಿದ ಚಂದ್ರಿಕೋಜ್ವಲಂ ೩೦೭
(ಗಿರಿಜಾಕಲ್ಯಾಣಂ, ೪-೧೦೯)

ಮೃಡಹಾಸದ್ಯುತಿಯಂತೆ ಕಂತುಶರದಂತಿರ್ದಚ್ಚಬೆಳ್ದಿಂಗಳಂ
ಕಡುದಣ್ಪಿಂಗೆಡೆಗೊಂಡುದೊಂದು [೧]ಶಿಲೆಯೆಂ[೧]ದಾಶ್ಚರ್ಯದಿಂದಂ ಜನಂ
ನಡೆನೋಡುತ್ತ ಮಹೋತ್ಪಲೋತ್ಪಲನಿಮೇಷೋನ್ಮೇಷಚಿಹ್ನಂಗಳಿಂ
[೨]ಕಡುಬೆಳ್ಪಾದುದಿದೆಂಬು[೨]ದೇವೊಗಟಿತ್ವನೂರ್ಜಚ್ಛ್ರೀಯ ಬೆಳ್ದಿಂಗಳಂ ೩೦೮
(ಜಗನ್ನಾಥವಿಜಯಂ, ೪-೭೪)

---

[೧] ಬಿಸಿಲೆಂ(ಅ) [೨] ಗಡಬೆಳ್ದಿಂಗಳಿದೆಂಬು(ಅ)

ಇಂಗಡಲಿಂದಮಿಂದು ಗಡ ಪುಟ್ಟಿದನಂತದು ಕೆಮ್ಮನಿಂದುವಿಂ
ದಿಂಗಡಲಲ್ತೆ ಪುಟ್ಟಿತೆನೆ ರಂಜಿಸಿ ಗೋಪವಧೂಕದಂಬಕಾ
ಪಾಂಗರುಚಿಚ್ಛಟಾಪಟಲದಿಂ ದೆಳವೇಱಿ ಪಳಚ್ಚನಚ್ಚವೆ
ಳ್ದಿಂಗಳಶೇಷಮುಂ ಬೆಳಗಿದತ್ತು ನಿಶಾಲತೆ ಪೂತ ಮಾಟಿಕ್ಕೆಯಿಂ ೩೦೯

(ಜಗನ್ನಾಥವಿಜಯಂ ೪–೧೧೩)

ಕರಿಯುಂಡಂ ಕಾಮನಂದಂ ಕಮಲಭವನೆಯುಂದಂ ಖರಕ್ರೂರನಂದಂ
ಗಿರಿಯುಂಡಂ ಗೋತ್ರನಂದ ಗಿರಿಸುತೆವರನಂದಂ ಸರಿದ್ರಾಜನಂದಂ
[1]ಶತದಂಡಂ ಶಕ್ರನಂದಂ ಶಬರಿನಿಕರದಂಡಂ ಮುರುಚ್ಚಾಪದಂದಂ[1]
[2]ಹರಿಯುಂಡಂ ಪುಷ್ಪದಂದಂ ನಿಜನಿಳಯದೊಳಿಂತೊಪ್ಪುತಿರ್ದಂ ಶಶಾಂಕಂ[2] ೩೧೦

(ಸೂಕ್ತಿಸುಧಾರ್ಣವಂ, ೮–೨೩೨)

ಎಲೆ ಶೃಂಗಾರಾರ್ಣವಂ ಸಗ್ಗದಿನಿೞಿದುದತಿಶ್ವೇತಮೆಂಬನ್ನೆಗಂ ಕ
ಟ್ಟಿಲೆಯುಂ ಜೆಂಕೊಳ್ವವೋಲೆಣ್ದೆಸೆಯನನಿತುಮಂ ಬೇಱಿತವೇಱಿಲ್ಲ ತಾರಾ
ವಲಿಯುಂ ತಳ್ಕೈಸುವಂತಾಗಸಮನನಿತುಮಂ ಪರ್ವಿದತ್ತೂರ್ಮಿಯಿಂ ನೆ
ಯ್ದಿಲನೆಲ್ಲಂ ಚುಂಬಿಪಂತುರ್ವರೆಯನನಿತುಮಂ ಚಂದ್ರಪಾದಪ್ರವಾಹಂ ೩೧೧

(ಲೀಲಾವತಿ, ೨–೧೪; ಸೂಕ್ತಿಸುಧಾರ್ಣವಂ, ೮–೨೬೩)

ಬಳವೈರಿಯೆಂಬ ಸಾಧಕ
ನಿಳೆಯುಂ ಪೊಸನೂಷೆಮಾಡಿ ಸಸಿಮುಂಡಲಮುಂ
ಗುಳಿಗೆಯಿಡೆ ತಿಮಿರಕಾಳಿಕೆ
ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್ ೩೧೨

(ಅನಂತನಾಥಪುರಾಣಂ, ೭–೮೫, ಸೂಕ್ತಿ ೮–೨೬೪)

ಇದು ಜಲಧಿಯ ಬಸಿಱಿಂದೊಳ್ ಬಂ
ದುದು ಪುಸಿ ತಾಂ ಪೂರ್ಣಚಂದ್ರನಿಂ ಬಸಿಱಿಂದೊಳ್ ಬಂ
ದುದು ಪಾಲ್ಗಡಲೆಂದೆಂಬುದು
ಪುದಿದಿರ್ದುದು ತನುವ ನುಂಗಿ ಪೊಸವೆಳ್ದಿಂಗಳ್ ೩೧೩

---

[1]ಶಾಂತದಂಡಂ ಶರಭಸಿಕರದಂಡಂ ಶತಕೃತ್ವಿನಂದಂ(ಸ) [2]ಸುರರಂದಂ ಪುಷ್ಪದಂತಂಬರ ಪಳಯುದೊಳೊಪ್ಪಿದುರ್ದುದು ಚಂದ್ರಬಿಂಬಂ(ಸೂ)

ದಾಂಗುಡಿಯಿಟ್ಟುದಿಂಗಡಲ ಬೆಳ್ಪು ಕರಂ ನೊಳೆವೋದುದಿಂದುಕಾಂ
ತಂಗಳ ಬೆಳ್ಪು ಮೂಡಿದುದು ನೆಯ್ದಿಲ ಬೆಳ್ಪು ಮಡಲ್ತುದಚ್ಚವೆ
ಳ್ದಿಂಗಳ ಬೆಳ್ಪು ಬಳ್ಳಿವರಿದತ್ತೆಳವೆಂಡಿರ ಕಣ್ಣ ಬೆಳ್ಪು ಸೌ
ಧಂಗಳ ಬೆಳ್ಪು ಪರ್ಬಿದುದು ಬೆಳ್ಪಿನ ಬಲ್ಸರಿಯಿಂ ಸುಧಾಂಶುವಾ ೩೧೪
(ಸೂಕ್ತಿಸುಧಾರ್ಣವಂ, ೮–೨೭೫)

ಲವಣಾಂಭೋನಿಧಿ ದುಗ್ಧವಾರ್ಧಿಚಯದಂತಿರ್ದತ್ತು ಕಾಳಿಂದಿ ಜಾ
ಹ್ನವಿಯಂತಿರ್ದುದು ನೀಲಪರ್ವತಮೆ ಕೈಲಾಸಾದ್ರಿಯಂತಿರ್ದುದೀ
ಭುವನಂ ಕಪ್ಪುರದಿಂದೆ ಕಂಡರಿಸಿದಂತಿರ್ದತ್ತು ಕೃಷ್ಣಂ ಸದಾ
ಶಿವನಂತಿರ್ದನೆನಲ್ಕದೇವೊಗೞ್ವೆನೋ ಪೇೞಚ್ಚವೆಳ್ದಿಂಗಳಂ ೩೧೫
(ಸೂಕ್ತಿಸುಧಾರ್ಣವಂ, ೮–೨೭೩)

ನವರತ್ನಾನೀಕಮೆಲ್ಲಂ ಸುರಚಿರ ನವಮುಕ್ತಾಮಯಂ ಪುಷ್ಪಮೆಲ್ಲಂ
ಪ್ರವಿಭಾಸ್ವನ್ಮಲ್ಲಿಕೋಜ್ಜೃಂಭಿತ ಕುಸುಮಮಯಂ ಭೂಧರಶ್ರೇಣಿಯೆಲ್ಲಂ
ಸವಿಶೇಷೋತ್ಫೀತದಾಹೋತ್ಕರ ರಜತಮಯಂ ಭೂರಜೋಜಾಲಮೆಲ್ಲಂ
ಪ್ರವಹತ್ ಪ್ರಾಲೇಯಧೂಳೀಮಯಮೆನಿಸಿದುದಾ ಚಂದ್ರಿಕಾಶ್ರೀವಿಲಾಸಂ ೩೧೬
(ಸೂಕ್ತಿಸುಧಾರ್ಣವಂ, ೮–೨೮೯)

ತರತರದಿಂದ ನಾರುಗಿದು ತೋಳ್ವಳಿಮಾಡುವ ಕೊಯ್ದು ತಂದು ಪಾ
ದರಿಯೊಡಗಟ್ಟಿ ಸೂಡುವಲರ್ಗಂಗಳೊಳೊತ್ತುವ ಕೀಸಿ ಮೆಲ್ವ ನೀ
ಳ್ದಿರೆ ಪೊರೆಯೆತ್ತಿ ಕೊಂಡಾಡುವ ಪೊಂಗೊಡದೊಳ್ ಮಡಗಿಟ್ಟು ಪೊೞ್ತಱಿಂ
ಗಿರಿಸುವಲಂಪಿನಿಂ ಬಯಸುವರ್ ಪೂರ್ಣಚಂದ್ರಿಕೆಯಂ ಲತಾಂಗಿಯರ್ ೩೧೭
(ಸೂಕ್ತಿಸುಧಾರ್ಣವಂ, ೮–೨೭೭)

ಶಾರದದಿಂದ ಲೇಪಿಸಿದುದೋ ದೆಸೆ ನೀರದಮಾರ್ಗಮೆಯ್ದೆ ಕ
ರ್ಪೂರಪರಾಗದಿಂಡಿಯೆ ತುಂಬಿದುದೋ ಪೞಿಕೋಪಲಂಗಳಿಂ
ಧಾರುಣಿ ಕೂಡೆ ಹಪ್ಪಳಿಗೆಯೊತ್ತಿದುದೋ ಸಲಿಲಾಶಯಂ ಪಯಃ
ಪೂರಮನಾಂತುದೋ ದಿಟಕ್ಕೆ ತಾನೆನಿಸಿತ್ತಮೃತಾಂಶು ರಶ್ಮಿಯಿಂ ೩೧೮

ಉಡೆ ನಾಣ್ಮುಚ್ಚದ ನಾಗವಟ್ಟಣಿಗೆ ಪೊಕ್ಕೀಸಾಡೆ ಮೈನಾನದಿಂ
ಗಡಲಾಸ್ವಾದಿಸೆ ಹೊಟ್ಟೆತೀವಿದಮೃತಂ ಮೈಸಾರ್ಚಲುಷ್ಣತ್ವಮಂ
ಕುಡದರ್ಕಪ್ರಭೆ ಕೂಡೆ ತೋಱಿ ಮುಗುಳ್ದಿಂತಲ್ಲಾಡದೊಳ್ಮಿಂಚಿನಲ್
ಕಡು ಚೆಲ್ವಾದುದು ಕಣ್ಗೆ ಸಾಂದ್ರರುಚಿಯಿಂ ಚಂದ್ರಾತಪಾಡಂಬರಂ ೩೧೯

ಬಿಳಿದೆತ್ತಂ ಮುತ್ತಿಗಂ ಬೆಳ್ಪುಗಿಲ ಬಳಗವಾ ಮುತ್ತಿಗಂ ಬೆಳ್ಪುಗಿಲ್ಗಂ
ಕಳಹಂಸಚ್ಛಾಯೆ ನೋಡಲ್ ಬಗೆ ಮಿಗೆ ಬಿಳಿದಾ ಮುತ್ತಿಗಂ ಬೆಳ್ಪುಗಿಲ್ಗಂ
ಕಳಹಂಸಚ್ಛಾಯೆಗಂ ಚಂದನರುಚಿ ಬಿಳಿದಾ ಮುತ್ತಿಗಂ ಬೆಳ್ಪುಗಿಲ್ಗಂ
ಕಳಹಂಸಚ್ಛಾಯೆಗಂ ಚಂದನರಸರುಚಿಗಂ ಬೆಳ್ಪಗಾದತ್ತು ಜೊನ್ನಂ ೩೨೦

ಇದು ವಿರಹಕ್ಕಲ್ಲದೆ ಕಾ
ಯದ ಬಿಸಿಲಿದು ದಿಟ್ಟಗಲ್ಲದಿಂಟಲ್ಕಂ ಬಾ
ರದ ಸುಧೆಯಿದು ತಾಂ ಮನಕ
ಲ್ಲಮುಡಲ್ ಸಮನಿಸದ ದುಗುಲ ಪೊಸವೆಳ್ದಿಂಗಳ್ ೩೨೧
(ಚಂದ್ರಪ್ರಭಪುರಾಣಂ, ೮–೪೦, ಸೂಕ್ತಿ, ೮–೨೮೧)

ಕೆಂಪಿಲ್ಲದ ಬಿಸಿಲುಣ್ಮುವ
ಕಂಪಿಲ್ಲದ ಸಾಂದ್ರ ಚಂದನಕ್ಷೋದಂ ಮು
ತ್ತಿಂಪಿಲ್ಲದ ಪಾಲ್ಗಡಲೆಂ
ಬೆಂ ಪೊಸವೆಳ್ದಿಂಗಳಂ ಬಱಿಕ್ಕೇನೆಂಬೆಂ ೩೨೨
(ಚಂದ್ರಪ್ರಭಪುರಾಣಂ, ೮-೪೩, ಸೂಕ್ತಿ, ೮–೨೮೩)

ಅತ್ತಟಲೆ ರಥಾಂಗಾಸುರ
ರಿತ್ತೀಟೆ ಚಕೋರದಿವಿಜನಾಯಕರೇಂ ಸೂ
ಸಿತ್ತೋ ಗಗನಸ್ಥಲಿ ಹರಿ
ಯೆತ್ತಿದ ವಿಧು[1]ಬಿಂ[1]ಬವಮೃತಕರಥಾರೆಗಳಂ ೩೨೩
(ಲೀಲಾವತಿ, ೨–೨೦; ಸೂಕ್ತಿ ೮-೨೯೯)

ಸಲೆ ನೋಡಲ್ ಸುರಗಂಗೆ ಕೋಟಿಮುಖದಿಂದೆಲ್ತಿಂದಳಲ್ಲಲ್ತು ನಿ
ರ್ಮಳ ದುಗ್ಧಾಂಬುಧಿ ಮೇರೆದಪ್ಪಿ ಕವಿದತ್ತಲ್ತಲ್ತು ಗೌರೀಶನು
ಜ್ವಲ ಸತ್ಪಂಚಮುಸೂರ್ತಿ ಧಾರಿಣಿಯನಿಂದಪ್ಪಿರ್ದುದಲ್ಲಲ್ತು ಕೇ
ಳಿಳೆಯೊಳ್ ಕೌತುಕವೆಂಬಿನಂ ಪಸರಿಸಿತ್ತಾನಂದಚಂದ್ರಾತಪಂ ೩೨೪

ಶಿವಶಿವ ಚಂದ್ರಿಕಾನವಸುಧಾರ್ಣವಮೊರ್ವಿಯೆ ಮೇರೆಗೆಟ್ಟು ಹೋ
ಕವಿಯೆ ಧರಿತ್ರಿಯೇ ರಜತಭೂಮಿಯೊಲಾದುದು ಸಪ್ತನಂಗಳುಂ
ನವಕದ ಕಲ್ಪವೃಕ್ಷವನಮಾದುವು ಪಲ್ ನರನಾರಿಯರ್ಕಳುಂ
ವಿವರಿಸೆ ನಾರದ ಪ್ರಮುದ ಶಾರದೆಯಾದರದೇನ ಬಣ್ಣಿಪೆಂ ೩೨೫

---

[1] ಕುಂ(ಸೂ)

ಶ್ರೀಯಮರಾವತೀಪುರದ [೧]ಚಂದ್ರಿಕೆ[೧] ತೀವಿರಲಿಂದ್ರನಬಿತ್ತಿಯಿಂ
ದಾಯಿಭಮುಸ್ತ್ರಕಕ್ಕಡರ್ದನಲ್ಲದೊಡಾ ಸುರಗಂಧಮೆಲ್ಲಿತೆಂ
ದಾಯದೊಳಾದುದೀ ಯುರಗಲೋಕಮದೆಯ್ದುವುದೆಂಬ ಶಂಕೆಯಿಂ
ತೀಯುತ ಚಂದ್ರಿಕಾಲಹರಿ ಲೋಲವಿಲಾಸಮದಾಯ್ತು ಲೋಕದೊಳ್ ೩೨೬

ಅಂಗೈಯಗಲದ ಬೊಟ್ಟೆಂ
ಹೊಂಗಿದ ನವಚಂದ್ರಿಕಾವಿಲಾಸಂ ಮೂಲೋ
ಕಂಗಳನೆ ನುಂಗುತಿದೆ ಹೋ
ಯಿಂಗದಿರಂ ಸ್ವರ್ಗದಿಂದ್ರಜಾಲಿಗನಾದಂ ೩೨೭

ಶಿತಕರಕಲ್ಪವೃಕ್ಷಪರಿಪೂರ್ಣಜಟಾವಳಿ ಚಂದ್ರಸಿಂಹಸಂ
ಗತಘನಕೇಸರಾಳಿ ಕುಮುದಾತ್ತ್ರಮಹಾರಜತಾಚಲಾಗ್ರಶಾ
ಶ್ವತವಿಲಸತ್ಸ್ವಧಾಪ್ರತತಿಸಂಚಯಮುಬ್ಜಮರಾಳಪಕ್ಷಸಂ
ಹತಿ ಶಶಿಶಾರದೇಕ್ಷಣಮದಾದುದು ಪೂರಿತಚಂದ್ರಿಕೋಜ್ವಳಂ ೩೨೮

ಬೆಳ್ದಿಂಗಳ ಬಿಸಿಲೆನ್ನುತ
ಲೆಳ್ದವು ಗೂಡಿಂದೆ ಪಕ್ಷಿಸತಿಯರ್ ಪಸಿಯಿಂ
ಸೀಳ್ದೊಣಗಿಸ ಬಗೆದರ್ ಮಿಗೆ .
ತಾಳ್ದತ್ತುದ್ಯೋಗತತಿಯನಾ ನರನಿವಹಂ ೩೨೯

ಸುರಪಥವೃಕ್ಷದಿಂದುದಿರ್ದ ಪಕ್ವಫಳಂ ಬಿಳದಂತೆ ಕಾಲದೆಂ
ಬುರು ವನಪಾಲಕಂ ಪಿಡಿಯುತಂದದನೊತ್ತದ ಮುನ್ನ ರ್ಝುಮ್ಮನೆ
ಬ್ದಿ ರಸತತಿಪ್ರವಾಹ ಮಿಗೆ ಪೇಲ್ಕೆಟಿಗೋರೆಗೆ ಪಾಯ್ದುದೆಂಬಿನಂ
ಸರಳಿಸಿತೆತ್ತಲಂಶು ಮಿಗೆ ಚಂದ್ರನೆ ತೆಳ್ಪಿನ ಬಿತ್ತದಾಯ್ತು ಹೋ ೩೩೦

ಕರಗಿಸೆ ಬೆಳ್ಳಿಯಪ್ಪುದಿದು ತೆಳ್ಪೊರೆಯೆತ್ತೆ ದುಕೂಲಮು[೨]ಕ್ಕು[೨] ಕಂ
ಡರಿಸೆ ಮರಾಳನ[೩]ಕ್ಕು[೩]ರುಳಿಮಾಡಿ ಸರಂಗುಡೆ ತೋರಹಾರಮ
[೪]ಕ್ಕು[೪]ರೆಡೊಡೆ ಸೌಧಸಂತತಿಗೆ ಪಾಲ್ಪೊದೆಯ[೫]ಕ್ಕು[೫]ಗುರಿಂ ಕಟಿಲ್ಚೆ ಕ
ಪ್ಪುರ[೬]ಮಹುದೆಂಬ ಶಂಕೆಗೆಡೆಗೊಂ[೬]ಡುದು ಚಂದ್ರಿಕೆ ಸಾಂದ್ರಭಾವದಿಂ ೩೩೧

(ಸೂಕ್ತಿಸುಧಾರ್ಣವಂ, ೮–೨೮೬)

---

[೧]ತೆಕ್ಕನೆ[ಸ] [೨]ಪ್ಪ(ಸೂ) [೩]ಪ್ಪ(ಸೂ) [೪]ಪ್ಪ[ಸೂ] [೫]ಪ್ಪು(ಸೂ) [೬]ಪ್ಪುರವಳುಕಪ್ಪ ಗುರ್ವನೊಳಕೊಂ[ಸೂ]

ಇಂದುಪ್ರಾಲೇಯಶೈಲದ್ಯುನದಿ ಶಶಿಶಿರನ್ನೇಷಮುಕ್ತಾಂಬುಧಾರಾ
ವೃಂದಂ ಜ್ಯೋತ್ಸ್ನಾಪ್ರವಾಹಂ ಕವಿದುದು ವಿಧುಶಕ್ರೇ[೧]ಕ್ಷಿತಂ[೧] ಶೀತರೋಚಿಃ
ಕುಂಮೋದ್ಯನ್ಮಂಜರೀನಿರ್ಗತನಿಬಿಡರಜಂ ಚಂದ್ರರುದ್ರಾಟ್ಟಹಾಸ
ಸ್ಪಂದಂ ಪ್ರೋದ್ಭಿನ್ನಸೋಮಾಮರಕರಟಶಿರೋಪಾಂತಮುಕ್ತಾಚ್ಛವರ್ಷಂ ೩೩೨
(ಲೀಲಾವತಿ, ೨-೧೨; ಸೂಕ್ತಿಸುಧಾರ್ಣವಂ ೮-೯೪)

ಸೋಂಕಲೊಡಂ ನಿಶಾತರುಣಿಯುಂ ಶಶಿ [೨]ಸೋರ್ದುದು[೨] ಸಂಜೆ ಸೀರೆಯೊಲ್
ಪಂಕಜಲೋಚನಂ ಮುಗಿದುಪೆಟ್ಟುವು ಬಳ್ಳೆಮುರಂತೆ ತಾರಕಾ
ಸಂಕುಳಮಿಂದುಕಾಂತವಿತತಾಚಳತುಂಗನಿತಂಬಬಿಂಬದಿಂ
ದಂ ಕೊಳನಾಗಿ ಸೂಸಿದುವು ತೆಳ್ಪದ[೩]ದಂತೆ ನವದ್ರವಾಂಬುಗಳ್[೩] ೩೩೩
(ಲೀಲಾವತಿ, ೨-೪; ಸೂಕ್ತಿಸುಧಾರ್ಣವಂ, ೮-೨೧೬)

ಕಮಲಂಗಳೊಡನೆ ಧಾತ್ರೀ
ಕುಮುದಂ ಮುಗಿದಿರ್ದವರರೆ ಕುಮುದದೊಡನೆ ತ
ತ್ಕಮಲಂ ಮಿಕ್ಕಲರ್ದುವು ಚಂ
ದ್ರಮನುದಯದಿ ನೋಡಲಿಳೆಯೊಳೇಂ ಕೌತುಕಮೋ ೩೩೪

ಮುನ್ನಂ ಪಯೋಧಿ ಪಡೆದಂ
ತನ್ನಂ ಶಶಿ ಪಡೆದನಾ ಪಯೋಧಿಯನೆಂಬಂ
ತುನ್ನತಿವೆತ್ತುದು ರಾಜೋ
ತ್ಪನ್ನಮಭಿನ್ನಪ್ರಸನ್ನಮೊಪ್ಪುವ ಜೊನ್ನಂ ೩೩೫

ಸಕಲಜಗಂ ಕೌಮುದಿಯೆಂ
ದೆ ಕಡೆದು ಕಂಡರಿಸಿತೆಂಬ ನುಡಿ ಚಿತ್ರವೆ ಕೌ
ತುಕವರಸ ಚಂದ್ರಮುಂ ಚಂ
ದ್ರಿಕೆಗಟಿದ ಕಳಂಕಚಂದ್ರನಂತೆಸೆದಿರ್ದಂ ೩೩೬

ಶಿವಕೀರ್ತಿರಸದಿ ಬ್ರಹ್ಮಂ
ತವೆ ತೊಳೆದನೊ ಜಗಮನಮೃತವಾರ್ಧಿಯ ಜೆಳಗಿಂ
ಧವಳಿಸಿದನೊ ಪೇೞಿತನೆ ಭೂ
ಭುವನಸವನೆಡೆಗೊಂಡುದಚ್ಚ ಪೊಸವೆಳ್ದಿಂಗಳ್ ೩೩೭

---

[೧]ಕ್ಷಣಂ[ಸ] [೨]ಪೋದುದು(ಸೂ) [೩]ನಂತೆ ನವಾಮ್ರವಾಂಬುಗಳ್(ಸ)

ಪುಗಿಸಿದವಷ್ಟಪರ್ವತಗುಹಾಂತರಮಂ ಕೆಲವಂ ಗವಾಕ್ಷದಿಂ
ದುಗಿದವು ದೇವಸದ್ಮದೊಳಡಂಗಿದವಂ ಬಯಲಿಂಗೆ ಬಿರ್ದವಂ
ತಗುಳ್ದುಱೆಯಟ್ಟಿ ನುಂಗಿದುವು ಪೆರ್ಮರದೊಳ್ ಸೆಱೆಗೆಯ್ಯೆ ಪರ್ಣಸಂ
ಧಿಗಳೊಳೆ ಸಿಂದು ನಿಟ್ಟೊರಸಿ ಕೊಂದವು ಕೞ್ತಲೆಯಂ ಹಿಮಾಂಶುಗಳ್ ೩೩೮

ಸುಗಿದಿವೆ ಕಮಳಂ ಕುಮುದಂ
ನಗುತಿವೆ ಕೋಕದ್ವಯಂ ರತೀಶ್ವರನೆಸುಗೆಯೊ
ಳುಗಿದಿಬ್ಬಗೆಯಾಗುತ್ತಿವೆ
ಮಿಗೆ ಪೆರ್ಚುತ್ತಿವೆ ಸರಾಗಪೂರಚಕೋರಂ ೩೩೯

ನೆರೆದು ಚಕೋರಪ್ರಕರಂ
[1]ಖ[1]ರಚಂಚುವಿನುಡಿದು ತಿನೆ ಸುಧಾಕರಕಿರಣಾಂ
ಕುರುನಿಕರಮನನುರ್ದಿನ ಸೊನ
ಸುರಿದಪುದೆಸೆ ಪಸರಿಸಿತ್ತು ಪೊಸವೆಳ್ದಿಂಗಳ್ ೩೪೦
(ಲೀಲಾವತಿ ೨-೨೩, ಸೂಕ್ತಿಸುಧಾರ್ಣವಂ. ೮-೨೯೮)

ತೆರೆ ಮುಸುಗುತ್ತಲಿರ್ಪ ಘನ ಚಂದ್ರಿಕೆಯಂ ಪರಮಾನುರಾಗದಿಂ
ಪರಿದಿದಿರೇಱಿಯೇಱಿ ನಗೆಗಣ್ ಪೊಣರೊಳ್ ತೆಗೆದೆತ್ತಿಯೆತ್ತಿ ನಿ
ರ್ಭರತೆಯೊಳೀಂಟಿಯೀಂಟಿ ನೆಱೆದೋಕುಳಿಯಾಡಿಯಾಡಿ ಮು
ಚ್ಚರದೊಳೆ ತುಳ್ಕಿತುಳ್ಕಿ ನಲಿದಿರ್ಪುವು ಕೂಡೆ ಚಕೋರಸಂಚಯಂ ೩೪೧
(ಸೂಕ್ತಿಸುಧಾರ್ಣವಂ, ೮-೨೯೬)

ಕೊಳಕೆ ತಳಾಱನಾಯ್ತು ಕುಮುದಂ ಗಗನಕ್ಕೆ ತಳಾಱನಾಯ್ತು ಜಾ
ವಳಿಪ ಚಕೋರನೀ ಪೊಸ ತಳಾಱಿಕೆಯೊಳ್ ಪ್ರಿಯೆ ಪೋದ ಪುಯ್ಯಲ
ಗ್ಗಲಿಸಿದೊಡಾರುಮೂಳಿಗಕೆ ಬರ್ಪವರಿಲ್ಲೆನಗೆಂಬ [2]ವಾ[2]ಟಿಕ್ಕೆಯಿಂ
ದೊಳಱುವ ಕೋಕದೊಂದು ವಿಧಿ[3]ಗಟ್ಟಿವೋಲಾಯ್ತು[3]ಸನ್ನೆಂದವೋಪಲಂ ೩೪೨
(ಸೂಕ್ತಿಸುಧಾರ್ಣವಂ, ೮-೩೦೨)

ಮದಚಲ ಚಕೋರಚಂಚೂ
ವಿದಳನದಿಂದಮೃತರಸದ ಸೊನೆವಿಡುತಂ ಸೂ
ಸಿದ ಬೆಳ್ದಿಂಗಳ ತಿರುಳಂ
ದದಿನಪದಳಮೆಸೆದುದೊಸರ್ವ ಶಶಿಮಣಿವಿಸರಂ ೩೪೩
(ಲೀಲಾವತಿ ೨-೧೯; ಸೂಕ್ತಿ ೮-೩೦೩)

---
[1] ಕ(ಅ.ಕ.) [2] ಬಾ(ಸ) [3] ಯಂದವೊಳಾಯ್ತು(ಸ)

## ಎಳೆವೆಱೆಯ (ಬಾಲಚಂದ್ರ) ವರ್ಣನೆ :—

ಒತ್ತಂಬಡೆ ವಿರಹಿಗಳಂ
ಚಿತ್ರಭವಂ ಬಂದಿವಿಡಿದು ಗಂಟಲ [1]ಬೞಿಯೊಳ್
ತೆತ್ತಿಸಿದ ಬ್ರಹ್ಮಪಾಶದ[1]
ಕತ್ತರಿಯೆನೆ ತೊಳಗಿ ಬೆಳಗಿತೆಳೆವೆಱೆ ನಭದೊಳ್ ೩೪೪
(ಸೂಕ್ತಿಸುಧಾರ್ಣವಂ ೮-೨೫೬)

ಚಂದಿರನೆನಿಪ್ಪ ಪೂಪವ
ಬಂಧಿಸಿ ತೊಡೆವ್ರತ ತಿಸುತ್ತಲಿನಿಸಂ ಬಿಸುಟ್ಟುದೊ
ಚಂದದಲಿ ರಾಹುವೆಂದೆನೆ
ಚಂದಿರಗಱೆಯೊಪ್ಪಿದತ್ತು ಗಗನಾಂಗಣದೊಳ್ ೩೪೫

ಮಧುಲಕ್ಷ್ಮೀನೃತ್ಯಹಸ್ತಂ ರತಿಯುವತಿಪಯಃಕೇಳಿಶೃಂಗಂ ಸುಧಾಂಭೋ
ನಿಧಿಡಕ್ಕಾವಾ[2]ಮ[2]ಕೋಣಂ ಮನಸಿಶಯ ಮಹಾ[3]ಹಸ್ತಿ[3]ಹಸ್ತಾಂಕುಶಂ ವಾ
ರಿಧರಾಧ್ವಕ್ಷತ್ರ[4]ಶೀರ್ಷಂ[4] ಹಿಮಕರಸಲಿ[5]ಲೋದಾರಲೀಲಾ[5]ತಟಾಕಾ
ವಧಿಯೆಂಬೊಂದಂದದಿಂದಂ ನೆಱೆ ನೆಱೆ ಮೆಱೆದತ್ತಾರ ಕಣ್ಗಂ ಮನಕ್ಕಂ ೩೪೬
(ಸೂಕ್ತಿಸುಧಾರ್ಣವಂ, ೧೦-೬)

ಅಂಗಭವಾಗಮಾಂಕುರಮೊ ತಾರಕಮೌಕ್ತಿಕ ಶೀತಶುಕ್ತಮೋ
ತುಂಗತಮೋಗಜಾಂಕುಶಮೊ ಪಾಂಥಗಳಚ್ಛದ ಕರ್ತರೀಯಮೋ
ಸಿಂಗರವಾರ್ಧಿವೀಚಿಕಮೊ ಸಂಧ್ಯವಧೂವಿನಖಕ್ಷತಾಂಕಮೋ
ಪಿಂಗದೆ ಪೇೞಿಮಂಗರಿದೆನಿಪ್ಪವೊಲಾ ಪೆಱೆಯೇನದೊಪ್ಪಿತೋ ೩೪೭

## ಅರ್ಧಚಂದ್ರನ ವರ್ಣನೆ—

ಸಿರಿ ಬಂದಾಶ್ರೈಸಿದಳ್ ಮಾಧವನುದರದೊಳೊತ್ತಿಕೊಂಡಂ ದಿನೇಶಂ
ಪಿರಿದುಂ ಕೂರ್ಪಂ ಸುಧಾಸೂತಿಯೆ ಮುನಿದಪನೆಮ್ಮನ್ವಯಕ್ಕೆಂದು ನೀರೇ
ಜರುಹಂ ಕಾಯ್ಪಿಂ ನಿಜೋಗ್ರಾಯುಧದಿನಿಡೆ ಸಿಡಿಲ್ದೊಂದು ಭಾಗಂ ನಭಾಭ್ಯಂ
ತರದೊಳ್ ಸೂಸಿತ್ತೆನಲ್ಕೇನೆಸೆದುದೊ ಭಗಣಾಸೀಕದಿಂದರ್ಧಚಂದ್ರಂ ೩೪೮
(ಸೂಕ್ತಿಸುಧಾರ್ಣವಂ, ೧೦-೭)

---

[1] ಬೞಿಯಂ ಪತ್ತಿಸಿದ ಚಂದ್ರಕಾಂತದ [2] ದ್ಯ(ಸೂ) [3] ತ್ರಸ್ತ(ಸೂ) [4] ಸೀರಂ(ಸೂ)
[5] ಲಾಧಾರಲೀಲಂ(ಸೂ)

ಗಗನವಧೂಟಿ ಕೂರ್ತು ಶಶಿಕಾಂತದ ತಂಪಿನೊಳಾರ್ದ್ರಗಂಧಮಂ
ನೊಗೆನೊಗೆದಷ್ಟದಿಗ್ವನಿತೆಯರ್ಕಳ ಮೆಯ್ಯೊಳೆ ಚೆಲ್ಲಿ ತ
ನ್ನುಗುರ್ಗಳಿನಾತ್ಮದೇಹದೊಳು ಸಿಂಪಿಸಿಕೊಂಡಪಳೆಂಬ ಮಾಳ್ಕೆಯಿಂ
ಸೊಗಯಿಪ ಜೊನ್ನದಿಂ ಮೆಱೆವ ತಾರೆಯೊಳೊಪ್ಪಿದನರ್ಧಚಂದ್ರಮಂ ೩೪೯

ವಿರಹಿಗಳಂ ಮನೋಜನಲರಂಬುಗ[1]ಳಿಂ ತೆಗೆಪೂಡಿ ಬೇಗ[1]ಕೊ
ಕ್ಕರಿಸದೆ ಹೃತ್ಕವಾಟಪುಟಮಂ ನೆಱೆಯೆಚ್ಚೊಡೆ [2]ತದ್ವ್ರಣೌ[2]ಘದಿಂ
ಸುರಿವರುಣಾಂಬುವಂ ಕುಡಿದು ನರ್ತಿಸುತಿರ್ಪ ವಸಂತಡಾಕಿನೀ
ಕರದ ಕಪಾಲ[3]ದಂಡಮನೆ ಪೋಲ್ತುದು ಖಂಡ ಶಶಾಂಕ[3]ಮಂಡಲಂ ೩೫೦
(ಸೂಕ್ತಿಸುಧಾರ್ಣವಂ, ೮–೧೯೭)

ಗಗನವರಾಹದಾಡೆಯೊ ಮೃತಾಬ್ಜತನೂಜೆಯ(?)ಗಂಧವಟ್ಟಲೋ
ಭಗಣದ ಮೌಕ್ತಿಕಪ್ರಜಶುಕ್ತಿಯೊ ಅಂಗಜನಸ್ತ್ರಧಾರೆಯೋ
ಬಗೆಯೆ ಮಹೇಂದ್ರಭದ್ರಗಜದಂಕುಶಮೋಯೆನೆ ಪಶ್ಚಿಮಾದ್ರಿಯೊಳ್
ಸೊಗಯಿಪ ಜೊನ್ನದಿಂದೆಸೆವ ತಾರೆಯೊಳೊಪ್ಪಿದನರ್ಧಚಂದ್ರಮಂ ೩೫೦

....ತೆಮೆಯ್ಯೆ ಶರವ ತೀಡುವ
ಪಟಿಕದ ಮಸೆಗಲ್ಲೊ ಸುರರು ಕರ್ಚುತ್ತಲಮೃತವ
ಪುಟುಕಿಸುವ ಬೆಳ್ಳಿವಟ್ಟಲೊ
ದಿಟ ತಿಳಿಯಲ್ಕರಿದಿದೆನಿಸಿತರ್ಧಶಶಾಂಕಂ ೩೫೨

ಕಾಜಿನ ಕುಪ್ಪಿಗೆಯಮೃತವ
ನೋಜೆಯೊಳಂ ದಿವಿಜರುಂಡು ಮಿಕ್ಕದು ಮತ್ತಾ
ಭಾಜನದಿ ಮಡಗಿದಂದದೆ
ರಾಜಿಸುತಿದೆ ಗಗನದೆಡೆಯೊಳರ್ಧಶಶಾಂಕಂ ೩೫೩

## ಪೂರ್ಣಚಂದ್ರನ ವರ್ಣನೆ :—

ಶಶಿಬಿಂಬಂ ರವಿಬಿಂಬಮೆಂಬ ವರಘಂಟಾಯುಗ್ಮಮಂ ರೋಚಿಯಿಂ
ಪೊಸೆದಾ ನೇಣಿನೊಳಿಟ್ಟು ಕಟ್ಟಿ ನಭಮೆಂಬಿಂಬೇಭಕಂ ಪದ್ಮಜಂ
ಪೊಸತಾಗಿಬ್ಬದಿಯಲ್ಲಿ ಬಿಟ್ಟ ತೆಱದಿಂದಂ ಪೌರ್ಣಮೀ ಸಂಜೆಯಂ
ದೆಸೆವುತ್ತಿರ್ಪುದು ಮೂಡಲುಂ ಪಡುವಲುಂ ಚಂದ್ರಾರ್ಕಸನ್ಮಂಡಲಂ ೩೫೪

---

[1] ಳಂ ತೆಗೆದೂಱಿಕೊಂಡು(ಸೂ) [2] ತದ್ಗುಹೌ(ಸೂ) [3] ಮಿಂತೆಸೆವನೆ ಕಣ್ಗೆಸೆದಿರ್ದನು ಚಂದ್ರ (ಸೂ)

ಈಶನ ಮನೆಯಾ ಬಳಿಕೆಗೆ
ಯಾ ಸರಸತಿ ಪೂರ್ವಪಶ್ಚಿಮಾಬ್ಧಿಯ ಜಲಮಂ
ಬಾಸಣಿಸಿ ಮೊಗೆವುತೆತ್ತಿದ
ತ್ರಾಸಿನ ಕೊಡದಂತೆ ಮೆಱೆದುದಿನಶಶಿಬಿಂಬಂ ೩೫೫

ವರುಣನಮರೇಂದ್ರರಿರ್ವರು
ಸರಿಮಿಗಿಲಂ ಪೋರಿ ಕಾದಲೆಂದೆತ್ತಿದ ಕಡ
ವರ ಕಲಧೌತದ ಪರಿಗೆಗ
ಳಿರವೆನೆ ಪೌರ್ಣಮಿಯೊಳೆಸೆದುವಿನಶಶಿಬಿಂಬಂ ೩೫೬

ಗಗನಂ ತೊಲೆ ಕಿರಣಂ ನೇ
ಣುಗಳುದಯಾಸ್ತಾದ್ರಿ ಬಟ್ಟಲೆಂಡೆಸೆಸಲ್ ತ್ರಾ
ಸಿಗೆ ತಂದಜನೀಕ್ಷಿಪ ಮಣಿ
ಯುಗಮೆನೆ ಶಶಿಸೂರ್ಯರುಭಯಗಿರಿಗಳೊಳೆಸೆದರ್ ೩೫೭

ಆಗಸಮೆಂಬ ಬಚ್ಚು ದಿನರಾತ್ರಿಯುಗಂಗಳ ಪೆರ್ಚು ಕುಂದುಮಂ
ಜೇಗದಿ ನೋಱಿಪ್ಪೆನೆಂದು ಕಿರಣಂಗಳ ಸೂತ್ರದಿನೆಯ್ದೆ ಕಟ್ಟುತಂ
ತೂಗುವ ರನ್ನದಕ್ಕಡಿಯ ತಟ್ಟೆಗಳಂತೆಯೆ ತೋಱುತಿರ್ಪುವಿಂ
ಬಾಗಿರೆ ಪೌರ್ಣಮೀದಿನದ ಸಂಜೆಯೊಳೊಪ್ಪುವ ಭಾಸ್ಕರೇಂದುಗಳ್ ೩೫೮

ಇರುಳೆನಿಸಿರ್ಪ ತೋಂಟವಳನಂಬರಮೆಂಬ ಲತಾಂತವಾಟಿಯಂ
ಪೊರೆಯಲೆನುತ್ತ ಬಂದು ವರುಣೇಂದ್ರದಿಶಾರ್ಣವದೊಳ್ ಕಬಂಧಮಂ
ಸುರಚಿರರತ್ನಯುಗದಿಂ ಮೊಗೆದಪ್ಪನೆನಿಪ್ಪೊಲೊಪ್ಪುಗುಂ
ಪರಿಕಿಸೆ ಪೌರ್ಣಮೀದಿನದ ಸಂಜೆಯೊಳೊಪ್ಪುವ ಭಾಸ್ಕರೇಂದುಗಳ್ ೩೫೯

## ಪರಿವೇಷದ ಚಂದ್ರ :—

ಪ್ರತಿದಿನಪೂರ್ವಪಕ್ಷದೊಳೆ ಪೆರ್ಚಿದ ಬಿಂಬದಿನಾ ಸುಧಾರಸಂ
ಕ್ಷಿತಿಗೊಸರ್ಗೆಂದು ದೇವತತಿ ಕಟ್ಟಿದ ಕಟ್ಟೆಯೊ ರಾಹುಬಾಧೆಗಾ
ನ್ನತಮೆನಲೀಶ್ವರಂ ನೆಗಬ್ದಿ ರಕ್ಷೆಯೊ ರಕ್ಕಸರೊಯ್ಯದಂತೆ ತ
ತ್ಸತಿ ನಡೆಗೋಂಟೆಯಂ ರಚಿಸಿಕೊಟ್ಟಿರವೋ ಗುಡಿಗಟ್ಟೆದಿಂದುವೋ ೩೬೦

## ರಾಹುಗ್ರಸ್ತನಾದ ಚಂದ್ರ :—

ಇರುಳೆಂಬಂಬುಜಲೋಚನಂ ಚರಿಸುತಂ ಬಾಸೆಂಬರೇಪಳ್ಳಿಯೊಳ್
ವರ ಗೋಪಾಳನುನೆತ್ತುತ್ತೈತರೆ ತಮಂ ತಾನೆಂಬ ಗೋಪಸ್ತ್ರೀ ತ
ತ್ಕರದಿಂದಿಕ್ಕಲು ನೀಲದರ್ವಿಯಿಡೆಯುಂ ಪೆರ್ಣ್ಣೆಯುಂ ತಂದವೋಲ್
ಪಿರಿದುಂ ಪೌರ್ಣಮಿಯೊಳ್ ವಿಧುಂತುದ್ದಲೊಳ್ ಸಿಕ್ಕಿರ್ದನಬ್ಜಾಹಿತಂ ೩೬೧

## ರಾತ್ರಿವಿಹಾರ ;—

ಕರೆಯಲ್ಕಣ್ಮದೆ ಪೀಠಮರ್ದಕನುಮೆನ್ನಂ ಪಚ್ಚುವಂ ಮತ್ತೆ ನಾ
ಗರಿಕಂ ನೂಂಕಿದಪಂ ವಿಟಂ ಬೆರಲ ಕೊಂಕಿಂ ಸನ್ನೆಗೈದಪ್ಪನೆ
ಲ್ಲರ ಮಾತೇಂ ಭವದಂಘ್ರಿಪಲ್ಲವಮಪೀ ವಾತಾಯನೋಪಾತ್ತಶ್ರೀ
ತರುಚಿಪ್ರಾಂಶುಕರಂ ಕರಂ ಪಿಡಿದುದೆನ್ನೀ ಸಲ್ಗೆಯುಂ ಮನ್ನಿಸೈ ೩೬೨

(ಸೂಕ್ತಿ. ೮–೩೦೪, ಅನಂತನಾಥಪುರಾಣಂ, ೭–೮೮)

ಎಂದು ವಿದೂಷಕನರಸನ
ಮಂದಸ್ಮಿತ ಲೋಚನಾಂಶು ಮನದನುಮತಿಯುಂ
ಮುಂದಿಡೆ ಭೋಂಕನೆ ಕೈಗುಡ
ವಂದೊಳೆ ಪಸಾದವೆಂದು ಪೊಡವಡುತೆಲ್ದಂ ೩೬೩

(ಅನಂತನಾಥಪುರಾಣಂ, ೭-೮೯ ಸೂಕ್ತಿ. ೮–೩೦೫)

ಪರಿವೇದಿ ನಗರದೊಳ್ ನಾ
ಗರಕಂ ರತಕೋವಿದಂ ವಿಟಂ ಪ್ರಹಸನತ
ತ್ಪರನೆನಿಸುವವಂ ವಿದೂಷಕ
ನರಸನ ಪಡಿ ಪೀಠಮರ್ದಕಂ ನಾಯಕರೊಳ್ ೩೬೪

(ಅನಂತನಾಥಪುರಾಣಂ, ೭–೯೨; ಸೂಕ್ತಿ, ೮–೩೦೮)

ಅನುನಾಯಕರೀ ನಾಲ್ವರು
ಮನುಕೂಲಂ ದಕ್ಷಿಣಂ ಶಠಂ ದುಷ್ಟಂ ನೆ
ಟ್ಟನೆ ನಾಯಕರಿಂತೆಣ್ಬರ್
ಜನಭರ್ತೃಗೆ ಲಲಿತನಾಯಕಂಗೆ ಸಹಾಯರ್ ೩೬೫

(ಅನಂತನಾಥಪುರಾಣಂ ೭–೯೩, ಸೂಕ್ತಿ, ೮–೩೦೯)

---

¹ದದ(ಸ) ²ನನೆತ್ತಂ(ಸ) ³ಕುತಲಾ(ಸ) ⁴ವತ್ತಾದುವಾಪಾತ ⁵ಪರಿವಡೆನಗರದೊಳಂ (ಸ) ⁶ಪತ್ತುಗೆ ನೋಡಲಾಗ ಲಲಿತ(ಸ)

ಪ್ರೋಱಲನಿತುಂ ಪಳಚ್ಚನಮೃತಪ್ಲವದಿಂ ತೊಳೆದಂತೆ ಸೊಂಪು ಪೊಂ
ಪುೞಿಸೆ ವಿಮಾನಮಂ ನಭದೊಳ್[1]ಟ್ಟ[1]ಭಿವೀಕ್ಷಿಸಲಿಂದುಬಿಂಬದಿಂ
ದಿೞಿವಮೃತಾಂಶುಮೂರ್ತಿಯೆನೆ ಸಾಂದ್ರಸುಧೋಜ್ವಲ ಚಂದ್ರಶಾಲೆಯಿಂ
ದಿೞಿದು ನರೇಂದ್ರ[2]ಚಂದ್ರನೊಲವಿಂ[2] ತಳರ್ದಂ ನಿಜರಾಜಗೇಹದಿಂ ೩೬೬

(ಅನಂತನಾಥಪುರಾಣಂ, ೭–೯೧; ಸೂಕ್ತಿ ೫–೩೦೭)

ಅನುಕೂಲಾದಿಗಳೆಂಬ ಮಂದಪವನಂ ಚಂದ್ರಂ ವಸಂತಂ ಮುಗು
ಳ್ತ ನವಾಮ್ರಂ ಪಿಕಭೃಂಗಕಳಹಂಸಶ್ರೇಣಿ ಕೈಕೊಂಡು ಬ
ರ್ಪಿನೆಗಂ ಮನ್ಮಥಚಕ್ರವರ್ತಿ ನಡೆದೀ ಬಂದಪ್ಪನೆಂಬಂತೆ ಬಂ
ದನಲಂಪಿಂ ಪ್ರಜೆಮುಟ್ಟೆ ರಾಜಗೃಹಮಂ ಸಾಹಿತ್ಯರತ್ನಾಕರಂ ೩೬೭

(ಅನಂತನಾಥಪುರಾಣಂ, ೭–೯೪; ಸೂಕ್ತಿ ೮–೩೧೦)

ಸಕಳನಿಕೇತನಂಗಳೊಳೆ ದರ್ಪಕನುನ್ನತಿ ದರ್ಪಕಾಜ್ಞೆ ದ
ರ್ಪಕನ[3] ಕಥಾಳಿ[3] ದರ್ಪಕನ ವರ್ಣನೆ ದರ್ಪಕನ ಪ್ರಶಸ್ತಿ ದ
ರ್ಪಕನ ವಿಳಾಸವಿಭ್ರಮತೆ ದರ್ಪಕನುಜ್ವಳತೇಜದೇೞ್ಗೆ ದ
ರ್ಪಕನ ಸುಕೀರ್ತಿ ದರ್ಪಕನ ದಂಡಣೆ ದರ್ಪಕನಾಣೆ ಸುತ್ತಲುಂ ೩೬೮

(ಗಿರಿಜಾಕಲ್ಯಾಣಂ, ೪–೧೨೧)

ರತಿಯ ವಿಲಾಸದಿಂ ರತಿಯ ವಿಭ್ರಮದಿಂ ರತಿಯರ್ಚನಾಳಿಯಿಂ
ರತಿಯತಿತೇಜದಿಂ ರತಿಯ ನೋಂಪಿಗಳಿಂ ರತಿಯಾಣೆಯೋಜೆಯಿಂ
ರತಿಯ ಸುಗೀತದಿಂ ರತಿಯ ನವ್ಯಕಥಾರಸಪೂರಗೋಷ್ಠಿಯಿಂ
ರತಿಮಯಮಾಯ್ತು ಪಣ್ಯವನಿತಾಪರಿವೀಥಿಯೊಳೆಲ್ಲಿ ನೋೞ್ಪೊಡಂ ೩೬೯

(ಗಿರಿಜಾಕಲ್ಯಾಣಂ, ೪–೧೨೨)

ಉೞಿ ಕಳೆ ಸಿಸ್ಸನಂ ಕರಂ ಸಮರ್ಥಕನಂ ಬಿಡು ತಂದ ಮಂಡನಂ
ಗಳನೊಸೆದಟ್ಟಿಜಿಂ ರತಿಯನರ್ಚಿಸು ಕಾಮನ ನೋಂಪಿಗಿಕ್ಷುಸಂ
ಕುಳಫಳಪುಷ್ಪಮಂ ತರಿಸು ನವ್ಯದುಕೂಲಸುಗಂಧವೃಂದಮಂ
ತಳೆ ನಮನಂದನಕ್ಕೆ ನಡೆಯೆಂಬ ರವಂ ಸಲೆ ಗೇಹಗೇಹದೊಳ್ ೩೭೦

(ಗಿರಿಜಾಕಲ್ಯಾಣಂ ೪–೧೨೩)

---

[1]ದ್ದ(ಸ) [2]ನೋತೊಲವಿನಿಂ(ಸ) [3]ವಧಾಳಿ(ಸ)

ಎಱಗುಗುಮೆಂದು ಮೇಲುದಿನೊಳಂಘ್ರಿಗಳಂ ಮಱಸಿಮಾಡುತುಂ ಸ್ಮಿತಂ
ಪೊಱಮಡೆ ಮತ್ತಮೊಂದು ನೆವದಿಂದಮೆ ಮುಚ್ಚುತುಮೆಯ್ದೆ ನೋಟಮಂ
ಮಱಸಿಯಿಸಿ ನೋಡುತುಂ ನುಡಿಯಲುತ್ತರಮಂ ಸಖಿಗೀಯುತಿಂತು ತ
ನ್ನೆಱಸಿಯನೊಳೊಲ್ದು ಕೋಪಿಸುವ ಕಾಮಿನಿಗೀ ಮುಳಿಸೊಂದೆ ಸಾಲದೇ ೩೭೧
(ಗಿರಿಜಾಕಲ್ಯಾಣಂ, ೪-೧೪೪)

ಮಗಳೆ ಬಿಡಾತನಂ ಬಿಡೆನವಂ ಧನಮಂ ಪಿರಿದೀಯನಿತ್ತುದೇ
ಮಿಗೆ ಪಿರಿದೆಯ್ದುದೆಯ್ದುವುದು ಸಾಲದು ಸಾಲ್ವುದು ಬೇಡ ಬೇಟ್ಪುದೊ
ತ್ತಿಗೆ ನಡೆವೂಹು ಮೂರ್ಖತೆಯೆ ಮೂರ್ಖತೆ ಕೆಟ್ಟಪೆ ಕೆಟ್ಟಪೆಂ ಕೆಲಂ
ತೆಗಟಿಕ್ಕಿದಯಪ್ಪೆ ಕರಂ ತೆಗಟಿಕ್ಕಿದೆಯೆಂದೆನೆ ಪುತ್ರಿಯುಸಟ್ಟೆ ಪೋದಿದಳ್ ೩೭೨
(ಗಿರಿಜಾಕಲ್ಯಾಣಂ, ೪-೧೫೫)

ಪೊಲೆ ಮುಗುಳೊತ್ತವಕ್ಷಿ ಚಪಳತ್ವಮನೆಯ್ದುವು ಬಾಸೆ ಬಾರದು
ಜ್ವಳಿಸದು ಭಾಳರೇಖೆ ವದನಂ ಮದವೇಱದು ನೋಡೆ ತಳ್ತು ಕಂ
ಗೊಳಿಸದು ಮೇಲುದಗ್ಗಳಿಪ ನೋಟಮುಗುರ್ವಿಪ ಮಧ್ಯಮೊಪ್ಪುವೀ
ತಿಳಕಮನೂನಗಪ್ಪಿಮೊಲವಿಂ ನೆಲಸಿರ್ಪುದು ಚೋದ್ಯಮಲ್ಲವೇ ೩೭೩
(ಗಿರಿಜಾಕಲ್ಯಾಣಂ, ೪-೧೫೬)

ಆದರಿಸಂತೆ ಸಾರ್ವನುಪಚಾರಮನಾಡುವನಿತ್ತುದಂ ಸಮಂ
ತೋದುವನಾವಗಂ ಕಟಕಿಯಂ ನುಡಿವಂ ನಗುವಂತೆ ಕೋಪಿಪಂ
ಸಾದಿಸುವಂ ದಿಟಂ ಪುರುಡಿಪಂತೆ ನೆಗಟ್ಟುವನಟ್ಟಿ ಪತ್ತುವಂ
ಪೋದೊಡೆ ಪೋಗನಿರ್ದೊಡಿರನೀ ಶನಿಯಂ ಸಖಿಯೆಂತು ನೀಗುವೆಂ ೩೭೪
(ಗಿರಿಜಾಕಲ್ಯಾಣಂ, ೪-೧೫೭)

ತನುಲತೆ ಶೋಭೆಯಂ ತಳೆದು ನಿಲ್ವಿನೆಗಂ ಮುಖಪದ್ಮ ಪೂರ್ಣಚಂ
ದ್ರನನಿಳಿಕೆಯ್ದು ನಿಲ್ವಿನೆಗಮಾಭರಣಪ್ರಭೆಗಳ್ ಪೊದಟ್ದು ನಿ
ಲ್ವಿನೆಗಮಪಾಂಗಮಾಲಿಕೆ ವಿಜೃಂಭಿಸಿ ನಿಲ್ವಿನೆಗಂ ಮನೋಭವಂ
ನನೆಗಣೆದೊಟ್ಟು ನಿಲ್ವಿನೆಗಮೊತ್ತೆಗೆ ಸಿಂದೆಳೆವೆಂಡಿರೊಪ್ಪಿದರ್ ೩೭೫
(ಜಗನ್ನಾಥವಿಜಯಂ ೧೬-೧೧೧, ಸೂಕ್ತಿ ೮ ೪೦೫)

ತನುವಂ ಶೃಂಗಾರವೆಂಬಿಂಗಡಲ ನೊರೆಯೆ ಸುತ್ತಿರ್ದುದೆಂಬಂದದಿಂದಂ
ತನಗೊಪ್ಪಂಬೆತ್ತಿರಲ್ ಬೆಳ್ವಸದನಮುಮಳಜ್ಯೋತ್ಸ್ನೆಯೊಳ್ ಮಲ್ಲಿಕಾಗಂ
ಧ ನವಶ್ರೀಖಂಡಗಂಧಶ್ವಸಿತಪವನಗಂಧಾನುಮೇಯತ್ವದಿಂಮೊ
ಯ್ಯನೆ ಸಂಕೇತಾಲಯಕ್ಕೆಯ್ದುವಳ ನೃಪವರಂ ನೋಡಿಪಂ ಸಸ್ಮಿತಾಸ್ಯಂ ೩೭೬
(ಜಗನ್ನಾಥವಿಜಯಂ ೧೬-೧೧೯)

ನಿನಗಿಂದಾವಭುಜಂ[೧]ಗನಂ ಕರೆವೆನೆಂಬಾ[೧] ಮಾತುಗೇಳ್ದಂಬುದ
ಧ್ವನಿಯುಂ ಕೇಳ್ದವುರಾಳಿಯಂತೆ ಬೆದಱುತ್ತುಂ ದೂತಿಯಂ ಬೈದು ತಾ
ಯನು[೨]ವಿಂಗಂ[೨] ಪೊಗಸೋ[೩]ಲದಾವ [೩]ವಿಟರುಂ ಕೊಟ್ಟೊತ್ತಿಯಂ ಕೊಳ್ಳದಿ
ರ್ಪನೆಗಂ ಪ್ರೀತಿಯೆ ದೂತಿಯಾ[೪]ಗಿ ಬರೆ [೪]ಬಂದಂ ಕಾಂತನಾ ಕಾಂತೆಯಾ ೩೭೭
(ಜಗನ್ನಾಥವಿಜಯಂ, ೧೬-೧೨೦)

ಎಱಕಂ ಚಿತ್ತದೊಳಿಲ್ಲ ಕಾಲ್ಗೆಱಗಿ ನೀನೆಕಾಳಗೊಂಡಿರ್ಪೆ ಮಾ
ಣೆಱಗಿನ್ನಾ ಪ್ರೊಷವೇಟದಾಕೆಗೆನುತುಂ ಹೂಂಕಾರದಿಂ ಕಾ[೫]ಯ್ಪು ಕ[೫]
ಣ್ದೆಱೆಯಲ್ ನಾಮಪದಾಬ್ಜದಿಂ ಪೊಡೆಯೆ ನಲ್ಲಂಗಾದ ರೋಮಾಂಚದಿಂ
ಪೆಱಪಿಂಗಲ್ ಮುಳಿಸಾಕೆ [೬]ಪಕ್ಷ್ಮ[೬]ದೊಳೆ ಪಾಯ್ತುರ್ವಶ್ರುವಂ ತಾಳ್ದಿದಳ್ ೩೭೮
(ಜಗನ್ನಾಥವಿಜಯಂ, ೧೬-೧೨೧)

ನೋಡುವರಂ ಮನಂ ಬಯಸಿದಂತಿರೆ ನಲ್ಲ ತುಳುಂಕೆ ಬಿಂಕದಿಂ
ನೋಡುವುದೆಯ್ದೆ ಮಾತನೊಸೆದಾಡುವರೊಳ್ ಬಗೆ ಪೆರ್ಚದೋಱೆ ಮಾ
ತಾಡುವುದಿತ್ತು ಕೂಡುವರೊಳಿಲ್ಲದ ಬೇಂಟಮನುಂಟುಮಾಡಿ ನೀಂ
ಕೂಡುವುದೆಂದು ಮತ್ತಮುದುಗುಂಟಣಿ ಪುತ್ರಿಗೆ ದೀಕ್ಷೆಯಿಕ್ಕಿದಳ್ ೩೭೯
(ಸೂಕ್ತಿಸುಧಾರ್ಣವಂ, ೮-೪೩೧)

ಮುಡಿ ಸೊಪ್ಪಾಗದು ನೀವಿ ಬಿರ್ಚದಧರಂ ಬೆಳ್ಪೇಱದೊರುದ್ವಯಂ
ಪ್ರೊಡರ್ದುಂ ಕಂಪಿಸದಕ್ಷಿ ಕೆಂಪಡರದೊರ್ವಂಗೋತು ನೀನನ್ಯರೊಳ್
ಕೊಡಗೂಸಿರ್ಪವೊಲಿರ್ಪೆ ನಿನ್ನೊಳಗುಗಂಡರ್ ಗಂಡರಿನ್ನೇನುಮಂ
ಕುಡರೆಂದಿಂತು ಕನಲ್ದು ತಾಯ್ ಮಗಳನೊರ್ವಳ್ ಪುರ್ಬಿನಿಂ ಜರ್ಬಿದಳ್ ೩೮೦
(ಜಗನ್ನಾಥವಿಜಯಂ ೧೬-೧೨೬)

ಮದಿರಾಪಾನಕ್ಕೆ ಮೆಯ್ಯಾದರದೆ ಸುಯಿವೆಲರ್ ಪಾರದುದ್ಯಾನಮಂ ಸಾ
ರದೆ ಮಲ್ಲೀದಾಮಮಂ ಸೂಡದೆ ಹಿಮರುಚಿಯಂ ನೇರದಾನಂದದಿಂ ಪಾ
ಡದೆ ತಾಂ ಬೇಱೆಱಂ ನಲಂಪಿಲ್ಲದೆ ಕೆಳದಿಯರೊಳ್ ಸಲ್ಲದೇಕಾಂತದೊಳ್ ನಿ
ಲ್ಲದಿರಾಂ ಬರ್ಪನ್ನಪಾಯಂ ನಿನಗಿದು ವಿಗತಾಪಾಯಮೀ ಪೇಟ್ದುಪಾಯಂ ೩೮೧
(ಜಗನ್ನಾಥವಿಜಯಂ, ೧೬-೧೨೭, ಸೂಕ್ತಿ ೮-೪೮೧)

---

[೧]ಗಗಳ್ ನೆರವೆಂದಾ(ಸ) [೨]ವಕ್ಕ್ಯಂ(ಸ) [೩]ವಡಾದ(ಸ) [೪]ಯುತ್ತಮೆನೆ(ಸ) [೫]ಯ್ಪುತೆಂ(ಸ) [೬]ವಕ್ಷ(ಸ)

ಚರಿಯಿಸಿ ನಿಚ್ಚವಬ್ಜವನದೊಳ್ ವನದೊಳ್ ವನದೊಳ್ ಕಲಂಕಿದೆಂ
ಸುರಿವ ಮನೋಜ ಬಾಣ[೧]ತತಿ[೧]ಯಿಂ ಮತಿಯಿಂ ಧೃತಿಯಿಂದೆ ಕೆಟ್ಟೆಸೀ
ಸುರಚಿರ ಚಂದ್ರಿಕಾಪಟಿಕೆಳಾಪದ ತಾಪದ ಲೇಪದಚ್ಚಿಗಂ
ಪಿರಿದೆಡೆಗೂಡೆ ಚಾರು[೨]ತ[೨]ರನಂ ವರನಂ ಸ್ಮರಸನ್ನನಂ ಸಖೀ ೩೮೨
(ಜಗನ್ನಾಥವಿಜಯಂ, ೧೬-೧೨೮)

ಇರುಳ ರಥಾಂಗಿಯಂತಟಿಲುತುಂ ಪಗಲುತ್ಪಲಲಕ್ಷ್ಮಿಯಂತೆವೋಲ್
ಕೊರಗುತಮಭ್ರಕಾಲದ ಮರಾಳಿಕೆಯಂದದೆ ನೋವುತುಂ ಭವ
ದ್ವಿರಹದೊಳಿರ್ದ ವಲ್ಲಭೆಯನಾರಿಸು ಬಂದೊಸೆದಕ್ಕಟಿಂತು ನಿ
ಷ್ಕರುಣೆಯುಮಿಂತು ಕಲ್ಲೆರ್ದೆಯನಿಂತು ಸಗರ್ವನುಮಾಗಲಕ್ಕುಮೇ ೩೮೩
(ಜಗನ್ನಾಥವಿಜಯಂ, ೧೬-೧೨೯)

[೩]ಇ[೩]ರಪೋಪಂ[೪] ಕೋಪದಿಂ ಪೋಗೊಡೆ[೪] ಪೆಱಗನುಲೇಪಂ ವಿಭೂಷಾಕಲಾಪಂ
ವರ[೫]ರೂ[೫]ಪಂ ಸುಪ್ರದೀಪಂ [೬]ಪೊಗೆದೊಗೆಯದ[೬] ಕೋಪಂ ಸಶೋಕಪ್ರಳಾಪಂ
ಸ್ಮರ[೭]ರೂ[೭]ಪಂ ಪೆಣ್ಣರೂಪಂ ತಳೆದುಪೆನಿಸೆ ಲೇಪಂ ಸುಪ್ರಭಾಶೇಷರೂಪಂ
ಪರಿತಾಪಂ ತೋಱಲಾ ಪೆಣ್ಣೊಲನತಿಲಲಿತಾ[೮]ಲಾಪವಾ ವಿ[೮]ಪ್ರಲಾಪಂ ೩೮೪
(ಜಗನ್ನಾಥವಿಜಯಂ, ೧೬-೧೩೦)

ಇರು ನೀಂ ಪೋದಪೆ ನಾಂ ಮೃಗಾಕ್ಷಿಯೆನೆ ಕೇಳ್ದೆನ್ನೋಪಳಾ ಕಂದಿದೊಂ
ದಿರವಾ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಷ್ಪದೊಳ್
ಪೊರೆದಾಳೋಕನವಾ ಬಟಿಲ್ದ ತೆಱನಾ ಸುಯ್ದೊಂದು ಪಾಂಗಾ ಸ್ಮರ
ಜ್ವರಮಂ ತಾಳ್ದುವ ಭಂಗಿ ಪಿಂಗಿರದದೇಂ ಬೆಚ್ಚಿತ್ತೊ ಮಚ್ಚಿತ್ತದೊಳ್ ೩೮೫
(ಜಗನ್ನಾಥವಿಜಯಂ, ೧೬-೧೩೧)

ನೀನೆಱಗಿರ್ದ ಮನ್ಮನಮನಿನ್ನೆಱಗಿತ್ತಲರಂಬು ನಲ್ಲ ನೀಂ
ಮುನಿದುಟಿಱದಂದು ಕೇಳ್ದುಟಿಱಯಲೀಗುಮೆ ಮನ್ಮಥನೆನ್ನನೆಂದು ಮಾ
ನಿನಿ ಜಿನುಗುತ್ತುಮುಂಗುಟದಿನುರ್ವರೆಯಂ ಬರೆದಾನತಾಸ್ಯೆ ಕ
ಣ್ಬನಿಗಳನಿಕ್ಕುವೊಂದು ತೆಱ[೯]ನು[೯]ಕ್ಕಿದುದೆನ್ನೊಡಲಂ ಸ್ಮರಾಗ್ನಿ[೧೦]ಯಿಂ[೧೦] ೩೮೬
(ಜಗನ್ನಾಥವಿಜಯಂ, ೧೬-೧೩೨)

---

[೧]ಹತಿ(ಸ) [೨]ಚ(ಸ) [೩]ಮು(ಸ) [೪]ಪೋಪನೆಂತುಂಗಡ(ಸ) [೫]ಧೂ(ಅ) [೬]ಸೊಗಸ
ದೊಗೆದ(ಅ) [೭]ದೀ(ಅ) [೮]ದಾಳಾಪವಾಜ್ಞಾ(ಸ) [೯]ನಿ(ಅ) [೧೦]ಯೊಳ್(ಅ)

ಸುರತಕ್ಕೆಂದೊಲ್ದು ಸೋಂಕಲ್ ಸತಿ ಮುಳಿದವೊಲಾನಿರ್ಪುದುಂ ತನ್ನ ಬೆನ್ನೊಳ್
ಪರೆದೊಪ್ಪಲ್ ಕೇಶಪಾಶಂ ಕ[1]ರಿ[1]ಯ ಚಮರಿಯಂ ಕಟ್ಟಿದೊಂದತ್ಯಪೂರ್ವಂ
ಸ್ಮರಚಾಪಶ್ರೀಯ ಬೆಲ್ಪಂ ತಳೆದು ಪೆಱಗುಗೆಯ್ದಿ[2]ರ್ದೊಡಾಂ[2] ಸೋಂಕೆ ಸಾರಂ
ತಿರೆನುತ್ತುಂ ನೂಂಕಿ ಪುಯ್ಪೆನ್ನಿನಿಯಳ ತೆಱಸಿನ್ನುಂ ಮನಗೊಳ್ವುದೆನ್ನಂ ೩೮೭
(ಜಗನ್ನಾಥವಿಜಯಂ, ೧೬–೧೩೩)

ಕಿಱುವರೆಗಾಲದಿಂದುಟಿಪನೋಪಳನಾನವಳಂಪೆ ಗಂಡರಂ
ಪಱಿವೊರಸಾಗೆ ಮಾಡುವಪಳ್ಗೆ ಕುಚಂ ಕಚಮೂರುಭಾಗವ
ಳ್ಕಿಱಿದು ಪೊವಟ್ಟಿ ಕೊರ್ವಿ[3]ನಲವಿಂ ನೆಱೆ[3]ವಾಕೆಯೊಳಿಂಪ್ರಚಂಪ್ರರೆಂ
ಬಱಿಕೆಯ ದೇವಕೋಟಿ ಮನುಜಾಕೃತಿಯಿಂದೊಡಗೂಡದಿರ್ಕುಮೇ ೩೮೮
(ಜಗನ್ನಾಥವಿಜಯಂ ೧೬-೧೩೪)

ಕನಸಿನೊಳಿನ್ನ ವಲ್ಲಭನನಿಂತೊಡಗೂಡಿದೆನೆಂದು ಪೇೞ್ವ ಕಾ
ಮಿನಿಯುಮದಾತ್ತೆಯರ್ ಕೆಲಬರೇಂ ಕೃತಪುಣ್ಯೆಯರಕ್ಕ ದುಃಖಭಾ
ಜನೆಗೆನಗೆನ್ನ ವಲ್ಲಭನಗಲ್ಕೆಯೊಳಾಗದು ನಿದ್ರೆಯೆಂದೊಡಾ
ಕನಸೆನಗೆಲ್ಲಿ ಕೇಳಿನೆಗೆ ವಲ್ಲಭನೊಳ್ ನೆರೆವಾಸೆಯೆಲ್ಲಿತೋ ೩೮೯
(ಶೃಂಗಾರರತ್ನಾಕರಂ, ೪–೬೪)

ನಿಜಕೇಳೀಗೃಹದೊಳ್ ಬೆಡಂಗೆಸೆವ ನಿನ್ನೋರಂಗದಾ ಚಿತ್ರಮುಂ
ಗಜಕುಂಭಸ್ತನೆ ನೀನೆನಿತ್ತು ದಿಟದಿಂ ಮುದ್ದಾಡಿ ಮಾತಾಡಿಸ
ಕ್ಕಜವೇಕಿತ್ರ ಬರೆಂದು ತೊಟ್ಟನೆಬಿತಂದಂ ನೋಡಿ ತಾಂ ಕಾಣದಂ
ಗಜರೂಪಂ ಪೊಱಪೋಗದಂತೆ ಪಡಿಯಂ ಸಾರ್ಚಿಂಬಳೇಂ ಭ್ರಾಂತೆಯೋ ೩೯೦

ದೊರೆಗಿಡೆ ಬಾಂಪ್ಗಿ ಬಂದುಪನೆ ಜ್ಯೈನದಂ ಬಗೆಗೊಳ್ಳದೀ ಮುಖಾಂ
ಬುರುಹವನೆಯ್ದೆ ಚುಂಬಿಸುವನೋವದೆ ಬೆಟ್ಟಿತನೊಯ್ದೆ ನೊರ್ತುವಂ
ಕರವನೊಡರ್ತು ಕಾಯ್ದೊ ದೆವನಾಗಳೆ ಕಾಲ್ಪಿಡಿವಂದನೆಂತು ನಿ
ಷ್ಕರುಣದಿ ನಾನವಂಗೆ ಮೊಗದೊಳ್ ಮುನಿಸಂ ತಳೆದೆಂ ತಳೋದರೀ ೩೯೧

ಮುಳಿಯದೆ ಮುನ್ನಮೇಕಿರನೊ ಕಾಲ್ಪಿಡಿದೋಪನುಮೆನ್ನನಕ್ಕಟಾ
ತಿಳಿಪಿದೊಡೇಕೊ ಪೇೞ್ ತಿಳಿಪುಗೊಳ್ಳೆನೊ ವಲ್ಲಭನಲ್ಲಿಗೀಗಳಾಂ
ತಿಳಿಪುವೆನೆಂದು ಬೇಟೆಯುರನಟ್ಟುವೆನೇ ಸುಡು ಕಷ್ಟಮೆಗ್ಗಿನಿಂ
ಮುಳಿಪುದುಮಾಗಳಾಂ ತಿಳಿಯದಿಪ್ಪುದುಮೆನ್ನಯ ಪಾಪಮೆನ್ನಿರೇ ೩೯೨

---

[1]ಟ(ಸ) [2]ರ್ದಳಂ(ಸ) [3]ನಿಲಲಿನ್ನೆಗ(ಅ)

ಸುಡುಸುಡು ಪೋಗೆನೆಂಬೆನಿರಬಾರದು ಪೋದೊಡೆ ನೋಡೆನೆಂಬೆನೆಂ
ದೊಡೆ ನಯನಂಗಳಂತಿರವು ನೋಡಿದೊಡಂ ನಗದಿರ್ಪೆನೆಂಬೆನೆಂ
ದೊಡೆ ನಗೆಯಿಲ್ಲದಾ ನಗೆಯೊಳಾನನದೊಳ್ ಪುದುವಾೞ್ಕೆನೆಂಬೆನೆಂ
ದೊಡೆ ಬಗೆ ಪೇೞುವಾಯ್ದೆಳಸಿ ತಾನೆ ಕಡಂಗುವುದೇಪೆನಾಂ ಸಖೀ ೩೯೩

(ಶೃಂಗಾರರತ್ನಾಕರಂ, ೩-೮೬)

ನಲ್ಲರ ಕೂಟದೊಂದು ಸವಿಯಂ ಪರಿಭಾವಿಸುತಿರ್ಪ ಕಾಂತೆಯರ್
ಬಲ್ಲಿದರಕ್ಕ ಬಂದು ಪತಿ ಸೋಂಕೆ ಮನಂ ಮರುಳಾಗಿಸೆ ಲೀಲೆಯಿಂ
ದೆಲ್ಲಿಗೆ ಪೋಪೆನೇನನೊಸೆದಾಡುವೆನೇನೆನುತಿರ್ದಪೆನೆಂಬುದಂ
ಬಲ್ಲರೆ ಕಾಮನಾಣೆ ರತಿಯಾಣೆ ವಸಂತಕನಾಣೆ ಕೇಳ್ ಸಖೀ ೩೯೪

ಇಂಬಱಿದೆನ್ನನೋವಿ ನೆರಪಲ್ ಸಖಿಯಿಲ್ಲಭಿಮಾನಮೆಂಬ ರೋ
ಗಂ ಬಲವಂತನಾದಪುದು ನಲ್ಲನೆ ಕಟ್ಟಭಿಮಾನಿ ನಾಣಕಾ
ಪುಂ ಬಿಡದಿರ್ಪುದೀಗಳಿನ ಜವ್ವನಮುಂ ಬೞಿಕಿಲ್ಲ ಕಾಲಮಂ
ನಂಬಲೆಬಾರಪೆಂದಬಲೆ ಚಿಂತಿಸಿ ದೂಱುಸುತಂ ಪಲುಂಬಿದಳ್ ೩೯೫

ವಾಸವದತ್ತೆಯಾರಮುಗಳೇಂ ಕಡುಚೆಲ್ವೆಯೊ ಚಲ್ಲಕಾರ್ತಿಯೋ
ಲೇಸಱಿದಾಕೆ ಮೆಚ್ಚುವಳೆ ಮೆಚ್ಚಿದಳೀಗಳದಾವನಂ ಮನ
ಕ್ಕಾಸಜನಂಗಪಾತಕಸಿನಾಯ್ತು ಗಡಾದರದಿಂ ವಿದಗ್ಧವಾ
ಣೀಸಖ ಕೇಳಲಟ್ಟಿಯೆನಗಾದುದು ನಲ್ಲನೆ ಪೇೞಿದೆಲ್ಲಮಂ ೩೯೬

(ಲೀಲಾವತಿ ೯-೧೨೮)

ಇದು ಹರಿಯೊತ್ತೆಯಿಟ್ಟ ವನಮಾಲೆಯಿಂದಗಜವ್ವೈರಿ ಲಂಚಮ
ಟ್ಟಿದ ಶಶಿಲೇಖೆ ಪದ್ಮಮಿದು ಪದ್ಮಜನೇಱುವುದೆಂದು ತೋಱುವಂ
ದದೆ ಕುಚದೊಚ್ಚರಂ ಮುಡಿಯೊಳಾಗಡೆ ಕುತ್ತಿದ ಕೇತಕೀದಳಂ
ಕೆದಱಿ ಕರಾಬ್ಜದಿಂ ತಿರಿಪುವಬ್ಜಮದೇನೆಸೆದತ್ತೊ ಪೆಂಡಿರಾ ೩೯೭

(ಲೀಲಾವತಿ ೧೨-೧೯)

ಆಲದಪಣ್ಣೆ ಗೆತ್ತು ತುಟಿಯಂ ಗಿಳಿ ತಿಂದುದು ಹಂಸೆ ತೋಳ್ಗಳಂ
ಬಾಲಮೃಣಾಳಮೆಂದುಗಿದು ಸೀೞ್ದುದಿರುಳ್ ಕುಚಮಂ ರಥಾಂಗಿಯೀ
ಬಾಲೆಯ ಮೇಲೆ ಪಾಯ್ದು ಪತಿಶಂಕೆಗೆ ಚುಂಬಿಸಿತೆನ್ನ ನನ್ನಿಯಿಂ
ದಾಲಿಯರಾಳಿಗೊಂಡು ವಿಟರಂ ಪುಸಿವರ್ ಸುರತಕ್ಷತಂಗಳಂ ೩೯೮

(ಲೀಲಾವತಿ, ೧೨-೨೦)

ಕಾಂತರ ಕಾಂತದಂತನಖರೇಖೆಯನಾದಮುಲಂಪಿನಿಂದಮೋ
ಕಾಂತದೊಳೊಯ್ಯನೋಸರಿಸಿ ಮೇಲುದನೀಕ್ಷಿಸುವಾಗಳುನ್ನಮತ್
ಕಾಂತಕುಚಂಗಳೊಳ್ ಪೊಳೆದು ತೋಱುವ ತಮ್ಮ ನೆೞಲ್ಗಳಂಗನಾ
ಭ್ರಾಂತಿಯನೀಯೆ ನೋಡಲಣಮುಣ್ಮದೆ ನಾಣ್ಚುವರಲ್ಲಿ ಮುಗ್ಧೆಯರ್ ೩೯೯
(ಲೀಲಾವತಿ, ೧೨-೨೧)

ನೀಱೆ ನಿರೀಕ್ಷಿಸುತ್ತೆ ಮಣಿದರ್ಪಣಮಂ ನುಗುಳಿಂ ಬೞಲ್ದು ಕಂ
ಪಾಱದೆ ತಳ್ತ ತೋರಗುರುಳಂ ತೆಗೆಯುತ್ತಿರಲಲ್ಲಿ ಪಾಯ್ದು ಪೆ
ಣ್ಣಾಱಡಿ ಪಾಱೆ ಕೂರುಗುರ ತೋಳ್ಗಿದಾಗಳೆ ತನ್ನ ಕುಂತಳಂ
ಪಾಱುತೆ ಗೆತ್ತು ಪಾಡಱಿದು ಪಾಱಿದಳೇಂ ಕರಮಾಕೆ ಮುಗ್ಧೆಯೋ ೪೦೦
(ಲೀಲಾವತಿ, ೧೨-೨೨)

ಬಗೆವೊಡೆ ಗಂಡನಂ ಹರೆಯುವಾಳ್ವುದು ಪೇೞ್ವೊಡೆ ಪೆಣ್ಣ ಜವ್ವನಂ
ಮುಗಿಲದನಂತೆ ನಚ್ಚಿ ಪತಿಗಿಲ್ಲದ ದೋಷಮನಿಟ್ಟು ತೋಟಿಯಂ
ತೆಗೆವ ಚಲಕ್ಕೆ ಮುಂಪ್ದಿಗೆವ ಮೀಱುವ ಕಣ್ದೆಗೆವಾರ್ದು ಕಂತು ಬಿ
ಲ್ದಿಗೆಯೆ ಬೞಿಕ್ಕೆ ಕೈದೆಗೆವ ಗಾವಿಲಿಗಾವುದೊ ಬೇಟದಚ್ಚಿಗಂ ೪೦೧
(ಲೀಲಾವತಿ, ೧೪-೩೭)

ಭಾವಿಸೆ ಬೇಟಮೇಂ ಸತತಮು ಕಂಟಿಸುವಚ್ಚಿಗದಿಂದಮೊಂದಿರ
ಬ್ಬಾವಮನೊಂದೆರಟ್ಟಿಳಿಗೆಯುಂ ಪುರುಡಿಂ ಮುಳಿಸಿಂದಮೊಂದಿರುಳ್
ತೀವಿದ ತಿಂಗಳೊಪ್ಪುವಿರುಳಂ ಕಱಿದಕ್ಕ ವಿಯೋಗವಹ್ನಿಯಿಂ
ಬೇವುದು ಬುದ್ಧಿಯಲ್ತು ಕೆನೆಯುಂ ಕಳೆದಕ್ಕಟ ಕೆಚ್ಚುದಿಂಬುದೇ ೪೦೨
(ಲೀಲಾವತಿ, ೧೪-೩೯)

ಸೊಗಯಿಸಿ ಗೊಟ್ಟಿಯೊಳ್ ಪಿರಿದು ಸದ್ಗುಣಗಂಧಮನಿತ್ತು ಮೆಲ್ಲಮೆ
ಲ್ಲಗೆ ರಸಮಂ ಪುದುಂಗೊಳಿಸಿ ಮೆಲ್ದು ಮನಂಬುಗೆ ಗಂಡನೆಂಬ ತುಂ
ಬಿಗೆ ನಗೆವೆಳ್ಪಿನಿಂ ನಗಿಸುತಿರ್ಪುದು ಮಲ್ಲಿಗೆಯಂತೆ ಕಾಯ್ದು ಕೆ
ಚ್ಚಗೆ ಮೊಗವಾಗೆ ಸಂಪಗೆಯೊಲೇಂ ಬಗೆವಪ್ಪುದೆ ಬುದ್ಧಿವಂತೆಯರ್ ೪೦೩
(ಲೀಲಾವತಿ, ೧೪-೪೨)

ಪೂವಿನ ಸುಗ್ಗಿಯಲ್ತೆ ಪೊಸವೇಟಮದಾದೊಡೆ ಕಣ್ಣಳೋಪನಂ
ಕಾವುದು ಸುತ್ತಿ ಪತ್ತಿ ಸವಿಯೊಳ್ ಸೆಱೆಗೆಯ್ವುದು ಜೀವಮಂ ತಡಂ
ಗಾವುದು ಮೆಚ್ಚಿತಂ ಸಲಿಸಿ ನಲ್ಲರ ಮೆಯ್ಸುಖಕೆಂದೆ ದೇಹಮಂ
ತೇವುದು ತನ್ನ ತಾನೆ ಪಗೆಯಪ್ಪುದೆ ಬರ್ಪುದೆ ಪೋದ ಜವ್ವನಂ ೪೦೪
(ಲೀಲಾವತಿ, ೧೪-೪೩)

ಏಱಿದ ಜವ್ವನಂ ನಸು ಬೞಲ್ದುದು ಜೇಟದ ಬೆಂಕಿಯಿಂದೆ ಬೆಂ
ದಾಱಿದುದೆಯ್ದೆ ಚಿತ್ತಮತಿಚಿತ್ರರತಂಗಳೊಳಿಚ್ಚೆಯೋಗಲುಂ
ಸೀಱರನೀಗಳಾಯ್ದಱಸುತಿರ್ದಪುವೀಕೆಯ ಕೆಂಗಳೇಕೆ ಕಾ
ಯ್ದಾಱಿದ ಪಾಲ್ವೋಲ್ ಸವಿಯನಿನ್ನುಪಭೋಗಿಸಲಾರ್ಗೆ ಮಾಡಳೋ ೪೦೫

(ಲೀಲಾವತಿ, ೨–೯೦)

ಪುರುಡಿನ ಪಕ್ಕೆ ಗನ್ನದ ತವರ್ಮನೆ ಚುನ್ನದ ಜನ್ಮಭೂಮಿ ಸಿಂ
ಗರಪೆಡೆ ಮಾಲೆಗಣ್ಣ ನೆಲೆ ಜಾಣಿನ ಪೀಠ ವಿಕಾರದಾಲಯಂ
ಸರಸದ ನಾಡು ವೈಸಿಕದ ಬೀಡಪದಸ್ಥಿತ ಸೀಮೆ ಜೇಟದಾ
ಗರಮುಪಚಾರದಿಕ್ಕೆಯೆನಲೊಪ್ಪಿದುವಲ್ಲಿಯ ಸೂಳೆಗೇರಿಗಳ್ ೪೦೬

ಹದರಿನ ಗೋಷ್ಠಿ ಹಂಗಿಸುವ ನಾಣ್ನುಡಿಯಿಚ್ಚೆಯ ಮಾತು ಗೆಲ್ಲನೋ
ಟದ ಬಗೆ ಠಕ್ಕಿನೊಲ್ಮೆ ಹೊರೆಹಚ್ಚದಮೋಹದಸತ್ಯದಾಣಮಿ
ಲ್ಲದ ಹುಸಿ ತೀಟೆಯಿಲ್ಲದುಪತಾಪವೆನಿಸಿಪ್ಪ ಸಮಸ್ತವೈಸಿಕಂ
ಸುದತಿಯರಾದವೊಲ್ ಕರೆವುದಾ ಪುರದೊಳ್ ಗಣಿಕಾಕದಂಬಕಂ ೪೦೭

ವದನಸರೋರುಹಂ ನಯನನೀಲದಳೋತ್ಪಲ ದಂತದಾಡಿಮಂ
ಮೃದುಪದಕೆಂದಳಿರ್ಗಳು ಕುಚಾವಳಿ ಚಕ್ರಯುಗಂಗಳಿಂಪುದೋ
ಱದ ಸುೞಿನಾಭಿಕೂಪ ಮದನಾಲಯಮುಂಟಪ ವೃತ್ತದೂರುಗಳ್
ಕದಳಿಗಳಾಗೆ ವಾರವನಿತಾಜನದಿಕ್ಕೆ ವಸಂತಸಂತತಂ ೪೦೮

ದರ್ಪಕನಾಗಮಂಗಳೊಳು ದರ್ಪಕನುನ್ನತಿ ದರ್ಪಕಾಜ್ಞೆ ಕಂ
ದರ್ಪನ ದಾಳಿ ದರ್ಪಕನ ವರ್ಣನೆ ದರ್ಪಕನಾ ಪ್ರಶಸ್ತಿ ಕಂ
ದರ್ಪವಿಳಾಸವಿಭ್ರಮತೆ ದರ್ಪಕನುಜ್ವಳಪೇೞ್ಗೆಯಂತೆ ಕಂ
ದರ್ಪ ಸುಕೀರ್ತಿ ದರ್ಪಕನ ಡೆಂಡಣಿ ದರ್ಪಕನಾಣೆಯಿತ್ತಲುಂ ೪೦೯

ತನುಲತೆ ಶೋಭೆಯಂ ತಳೆದು ನಿಲ್ವಿನೆಗಂ ಮುಖಲಕ್ಷ್ಮಿ ಪೂರ್ಣಚಂ
ದ್ರನನಿೞಿಕೆಯ್ದು ನಿಲ್ವಿನೆಗಮಾಭರಣಪ್ರಭೆಗಳ್ ಪೊರಳ್ದು ನಿ
ಲ್ವಿನೆಗಮಪಾಂಗಮಾಲಿಕೆ ವಿಜೃಂಭಿಸಿ ನಿಲ್ವಿನೆಗಂ ಮನೋಭವಂ
ನನೆಗಣೆದೊಟ್ಟು ನಿಲ್ವಿನೆಗಮೊತ್ತೆಗೆ ನಿಂದೆಳವೆಣ್ಗಳೊಪ್ಪಿದರ್ ೪೧೦

ಉಗುರ್ಗಳ ಕಾಂತಿಯಿಂದಳಕವಲ್ಲಿಗೆ ನೀರ್ದಳಿಪಂತೆ ಮೆಲ್ಲಮೆ
ಲ್ಲಗೆ ತಲೆವಿಕ್ಕಿ ಚಂದ್ರಕಿರಣಂಗಳನಾಗಳೆ ರಾಹು ನುಂಗಿ ಮ
ತ್ತುಗುಳ್ದಪುದೆಂಬಿನಂ ಮುಡಿಸಿ ಬಾಲೆಯ ಸೋರ್ಮುಡಿಯಂ ಲಲಾಟದೊಳ್
ಮೃಗಮದಬಿಂದುವಂ ಪೆಱಗೆ ನುಣ್ಗಱಿಯಂ ಪಡೆವಂತೆ ತಿರ್ದಿದರ್ ೪೧೧

(ಪಂಪರಾಮಾಯಣಂ ೫-೪೩)

ಮಲಯಜವಣ್ಪು ಮಲ್ಲಿಗೆಯ ಸೋರ್ಮುಡಿ ಮುತ್ತಿನ ಕೊಪ್ಪು ಕೇತಕೀ
ದಳದೆಸಳೋಲೆ ಕಪ್ಪುರದ ಮೂಕುತಿ ವಜ್ರದ ಚೆನ್ನಗಂಕಣಂ
ಪೊಳೆವ ದುಕೂಲಮುಟ್ಟು ಶಶಿಕಾಂತದ ಛತ್ತ್ರಿಯನೆಮ್ಮಿ ಚಂದ್ರಮಂ
ಡಲದಧಿದೇವಿಯಂತೆ ನೆಗಱ್ದೊತ್ತಿಗೆ ನಿಂದವಳೊರ್ವಳೊಪ್ಪಿದಳ್ ೪೧೨

ಮಿಸುನಿಯ ಕಂಕಣಂ ಪೊಳೆವ ಪೊಂಬಳೆ[1]ಯಿಕ್ಕಿದ ನಾಗಕೇಸರಂ[1]
ಪ್ರಸರದ ಜೊಲ್ಲೆಹಂ ಹಳದಿಯಂಬರವೊಪ್ಪುವ ದೋರೆವಲ್ ಕರಂ
ಮಿಸುಗುವ ಪುಷ್ಯರಾಗಮಣಿಮುದ್ರಿಕೆಯಿಂದ[2]ಮಲಂಪು[2]ಗೊಂಡು ನಿಂ
ದಸಿಯಳು ಪೋಲ್ತಳಂಗಜನ ವಲ್ಲಭೆಯರ್ಚಿಪ ಪೊನ್ನ ಬೊಂಬೆಯಂ ೪೧೩

(ಸೂಕ್ತಿಸುಧಾರ್ಣವಂ ೮-೪೦೯)

ಮುತ್ತಿನ ಸೂಸಕಂ ಮುಡಿದ ಮಲ್ಲಿಗೆ[3]ಯಿಕ್ಕಿದ [3]ಮಿಂಚಿನೋಲೆ ಮಿ
ಯ್ಪೆತ್ತಿದ ಚಂದನಂ ಸುಲಿದ ಪಲ್ ಕಡೆಗಂಗಳ ಕಾಂತಿ ಕಾಲುಗು
ರ್ಗೆತ್ತಿದ ಮಿಂಚು[4]ವೃಟ್ಟುಡುಗುಲಂ ಘನಸಾರದ ಹಾರವೊಪ್ಪೆ [4]ಬಂ
ದೊತ್ತಿಗೆ ನಿಂದ ವೃತ್ತಕುಚೆ ಮುತ್ತಿನ ಪುತ್ಥಳಿಯಂತಿರೊಪ್ಪಿದಳ್ ೪೧೪

(ಸೂಕ್ತಿಸುಧಾರ್ಣವಂ ೮-೪೧೦)

ಬಾಲೆ ಶಿರೋಜಕೇಶಭರದಿಂ ಕೊರಳೊಯ್ಯನೆ ಕೊಂಕಿ ಮತ್ತಮಾ
ಕಾಳಿಸಗೊಂಡ ಪೆರ್ಮೊಲೆಗಳಿಂ ನಡುವೊಯ್ಯನೆ ಬಳ್ಕಿ ವಿಶ್ರುತ
ಸ್ಥೂಲಸಿತಂಬದಿಂ ತೊಡೆಯು ಕೊಂಕಿ ಬಳುಂಕಿಯಿಱುಂಕಿ ಕಂಕರಾ
ಕಾಳಿಸು ಕಯ್ಯ ಕತ್ತಿಯವೊಲಿರ್ದಳು ಭಾವಕಿ ನೆಮ್ಮಿ ಕಂಭಮಂ ೪೧೫

---

[1] ಪೊಪ್ಪುವ ನಾಗಚಂಪಕಂ(ಸೂ) [2] ಮಳಂಕೆ(ಸ) [3] ಯೊಪ್ಪುವ(ಸ) [4] ಮುಟ್ಟೆಘನ ಳಾಂಗದುಕೂಲವುಸಾರೆಸಾರೆ(ಸ)

ನೋಡುವರೊಳ್ ಮನಂ ಬಯಸಿದಂತಿರೆ ನಲ್ಮೆ ತುಳುಂಕೆ ಬಿಂಕದಿಂ
ನೋಡುವುದೆಯ್ದೆ ಮಾತನೊಸೆದಾಡುವರೊಳ್ ಬಗೆ ಪೆರ್ಚುವೋಱ ಮಾ
ತಾಡುವುದಿತ್ತು ಕೂಡುವರೊಳಿಲ್ಲದ ಬೇಂಟಮನುಂಟುಮಾಡಿ ನೀಂ
ಕೂಡುವುದೆಂದು ಮುತ್ತಮುದುಗುಂಟಣಿ ಪುತ್ರಿಗೆ ದೀಕ್ಷೆಯನಿಕ್ಕಿದಳ್ ೪೧೬
(ಸೂಕ್ತಿಸುಧಾರ್ಣವಂ ೮-೪೩೧)

ಜನನಿಯ ಕೊಂದೆನೆನ್ನ ನೆಱ ಸತ್ತೆಪೆನೇ ಬೞನೀರನೀಂಟು ಬೆ
ಬ್ಬನೆಬಿರುಗ್ಗೆ ಬಸಿರ್ ನಿಱಯ ದಾಂಟದು ಕರ್ಚುಗೆ ತಮ್ಮನಣ್ಣನೆಂ
ದನುವೊಡಬಂದರೇ ನೆಲನ ಪೊಯ್ಯದು ಸುಂಗುಮೆ ಮುಟ್ಟು ದೇವರಂ
ಕೊನೆವೆರಳಲ್ಲಿ ಪತ್ತುಗೆ ಮರುಳ್ಮಗಳೇ ಕಲಿಯೆಂತು ಗನ್ನಮಂ ೪೧೭

ಕಂಬನಿಯಿಕ್ಕು ಸೂರುಳಿಡು ಸುಜ್ರನೆ ಸುಯಿ ಮನದಂತಿರೇೞ ಬಾ
ಯ್ದಂಬುಲಮಂ ಕೞಲ್ಚು ಪುರುಡಿಂ ನುಡಿ ಕೆಮ್ಮನೆ ನೋಡಿ ಪುರ್ಬುಗಂ
ಟಂ ಬಲಿ ಮುಚ್ಚಿದಂತೆ ಬಿೞ ಮಾಯದ ಮುಸ್ದುಗಳಿಕ್ಕಿ ಬೇಟಮಂ
ತುಂಬಿ ಪಣಂಗಳಂ ಪಱವುದೆಂದು ಪುತ್ರಿಗೆ ಬುದ್ಧಿವೇೞದಳ್ ೪೧೮

ಗಾಣಿಗರೆಣ್ಣೆಯಂ ತೆಗೆವವೊಲ್ ಮಧುವಂ ಮಱದುಂಬಿ ಕೊಂಬವೋಲ್
ವಾಣಿಜರಂತಿರೊಂದಡಕೆಸೋಲದವೋಲ್ ಕಱುಪಿಂದೆ ಬಪ್ಪವೋಲ್
ಸಾಣೆಗಳೊಪ್ಪದಿಂ ಕೊಱವವೋಲ್ ಮಿಗೆ ನೇರಿರದೊಂದಿಪಂತುವೋಲ್
ಮಾಣದೆ ಪಿಂಡಿ ಪೀರ್ದು ವಿಟರಂ ಸುಲಿಯೆಂದುಱ ಬುದ್ಧಿವೇೞದಳ್ ೪೧೯

ಮುಳಿಸಂ ಮಾಣ್ ಮಾಣೆ ಮಾರ್ಗಂಗಳ ನಡೆ ನಡೆಯೆಂ ಕೆಟ್ಟಪಾ ಕೆಟ್ಟಪೆನ್ನೀ
ಚಲವೆನ್ನೊಳ್ ಬೇಡ ಕೇಳಿನ್ನಯ ನುಡಿಯನಿತಂ ಮೀಱದಾ ಮೀಱಪೆಂ ಮ
ತ್ಕುಲಮಂ ಕೀೞ್ಮಾಡದಿರ್ ಮಾಡುವೆನಧಿಕತಪಂಗೆಯ್ಯದಿರ್ ಗೆಯ್ವೆನೆಂದ
ಗ್ಗಳಮಾಗಲ್ ತನ್ನ ತಾಯಂ ಜಱಯುತ್ತೊರೆದು ವೈರಾಗ್ಯಮಂ ತಾಳ್ದಿ ನಿಂದಳ್ ೪೨೦

ದಿಟ್ಟಿಸಿ ನೋಡದಿರ್ ಬಯಸಿ ಬಾರದೊಡಂ ಮನಸೋಲ್ತು ಕೂಡದಿರ್
ಬಿಟ್ಟಿಡೆಯೀಯದಿರ್ದೆಡೆಯುಗಲ್ದೊಡೆಯನ್ಯವಧೂಜನಂಗಳೊಳ್
ನೆಟ್ಟನೆ ಚಿತ್ತಮಂ ಪರಿಯಲಿತ್ತೊಡೆಯಾನಬಲಾಜನಂಗಳೊಳ್
ಪುಟ್ಟಿದೆನೇ ಬೞಕ್ಕೆ ಪೊಲೆಯೊತ್ತೆನೆ ಪೇಸೊರೆಯೊತ್ತೆನಲ್ಲವೇ ೪೨೧

ಮಾಸಿದ ಚಿತ್ರದಂತೆ ಮಸಿಯೇಱದ ಪುತ್ಥಳಿಯಂತೆ ಧೂಳಿಯಿಂ
ದೂಸರಮಾಗಲಿಂಪೞದ ದರ್ಪಕದೇವತೆಯಂತೆ ಮೋಹದಿಂ
ಬಾಸಣಿಸಿರ್ದ ಚಂದ್ರಕಳೆಯಂತೆ ಮನಃಪ್ರಿಯ ನಿನ್ನ ದೂಸಱಂ
ದಾಸೆಯ ಜೀವಮಾಗಿ ತಲೆವಾಗಿಲೊಳಿರ್ದಳ ಕಂಡೆನೀ ಕ್ಷಣಂ ೪೨೨

ನಸು[1]ದೆಱೆದಿ[1]ರ್ದ ಬಾಯ್ ನಿಮಿರ್ದ ಗೋಣೆವೆಯಿಕ್ಕದ[2] ದೃಷ್ಟಿ ಸುತ್ತಲೊ
ಪೆಸೆಗೊಲಿದಿರ್ದ[2]ಪ್ಪ ಜಘನವಲ್ಲಿಯ ಕೈ ಮಱವಟ್ಟ ಚೇಷ್ಟೆ ಕ
ಣ್ಗೆಸೆದಿರೆ ಸುಯ್ಯಲುಂ ಪೞಿದು ಚಿತ್ರದ [3]ಭಂಜಿಕೆಯಂತೆ [3]ಬಾಗಿಲೊಳ್
ಶಶಿಮುಖಿ ನೋಡುತಿರ್ದಳಿನಿಯಂ ತಡೆದಿರ್ದೊಡೆ ಬರ್ಪ ಬಟ್ಟೆಯಂ ೪೨೩
(ಸೂಕ್ತಿಸುಧಾರ್ಣವಂ ೮-೩೫೪)

ಪಾಸುಂ ಮಂಚಮುಮಾಗಳುಂ ನಿನಗೆ ಕೊಟ್ಟಿರ್ಪಕ್ಕೆಯಿಂ ಪತ್ತಿದೆಂ
ಮೀಸಲ್ಪೋಗದ ಪ್ಕೆಗೆ ಪ್ಕೆಲಗೆ ಕರಂ ಕಾಲ್ಪೂಳಿಯೆಂದೆಂಬರೇ
ಶ್ವಾಸಂ ತಾಗಲು ನೀನಿರ್ದೇನು ಮುಳಿಪ್ಪೆ ನೀಂ ಕೂಡಲಾಂ ಕೂಡೆನೇ
ಶ್ರೀಕೈಲೇಶನಿವಾಸವಾಹನಗಡಾ ನಿನ್ನಾಣೆ ಕೂರ್ತೆಂ ಗಡಾ ೪೨೪

ಸಂಗೀತೋತ್ಸವ ಜೀವಿತೇಶ ವರವಿದ್ಯಾ[4]ವಾಸ [4]ಕಾಂತಾಜನಾ
ನಂಗಾಧ್ಯಕ್ಷ ರಸದ್ವಿಲಾಸ ಗುಣಜಾಲೋಪೇತ [5]ಸತ್ವಾ[5]ಧಿಕಾ
ಶೃಂಗಾರಾನ್ವಿತ ಲೋಕರಕ್ಷಕಯೆನುತ್ತೊರ್ವಳ್ ಮಹಾಪ್ರೌಢೆಯು
ತ್ತುಂಗೋರೋಜೆ ಮರಾಳಯಾನೆ ವಿಟನಂ ಕೊಂಡಾಡೆ ನಕ್ಕಂ ನೃಪಂ ೪೨೫
(ಸೂಕ್ತಿಸುಧಾರ್ಣವಂ ೮-೪೧೬)

ಇನಿಯಂ ಬಾರದೆ ಮಾಣ್ದನೇಕೆ ಗಡ ಪೊತ್ತುಂ ಪೋಯಿತಿನ್ನೇಪೆ ಕಾ
ಮಿನಿ ತನ್ನಾಸೆ ನಿರಾಸೆಯಾಗೆ ಬಿಸುಸುಯ್ಲುಂ ಸುಯ್ದು ಬೇಸತ್ತು ಕಂ
ಬನಿಯಂ ತೀವಿ ಕನಲ್ದು ತೊಟ್ಟ ತೊಡವಂ ಬೀಸಾಡಿ ಪೂಮಾಲೆಯುಂ
ಮುನಿಸಿಂದಂ ಪಱಿದಿಕ್ಕಿ ಕಾಂತೆ ನೊಡರಂ ನಿರ್ವೇಗದಿಂ ಬೀಸಿದಳ್ ೪೨೬

ಇನಿಯನಗಲ್ದು ಪೆರ್ನೆಲೆಗೆ ಪೋದೊಡೆ ಬಂಬಲುಬಾಡಿ ಚಿಂತೆಯಿಂ
ಕನಕಲತಾಂಗಿ ತನ್ನ ರಮಣಸ್ಥಲದೊಳ್ ಮಲಗಿರ್ದ ನಲ್ಲನಂ
ಕನಸಿನೊಳಪ್ಪಿಕೊಂಡು ಮುಸುಕಂ ತೆಱೆದೊಯ್ಯನೆ ನೋಡಿ ಕಾಣದಾ
ಮನೆಯೊಳಗಿರ್ಪನೆಂದು ನೊಡರ್ವತ್ತಿಸಿ ನೋಡಿದಳೊಂದು ಜಾವಮುಂ ೪೨೭

ಸುದತೀ ಪುತ್ಥಳಿ ಕಣ್ಣೊಳಂ ಮನದೊಳಂ ತಾನಿರ್ಪನಿರ್ದುಂ ಮುಳಿಂ
ಗಿದನಿಲ್ಲಶ್ರುಜಲಂಗಳೊಳ್ ಪುದಿದ ಹೃತ್ತಾಪಾಗ್ನಿಯಿಂ ಬೆಂದನಿ
ಲ್ಲಿದು ಚಿತ್ರಂ ಬಗೆವಾಗ[6]ಳುಂ ಕಿಱುಯಮಂ ತಾಂ ಮುಗ್ಧ ತಾನೆಂತು[6] ಪು
ಟ್ಟಿದನೆಂತೋದಿದನೆಂತು ಕಲ್ತನೋ ಜಲಾಗ್ನಿಸ್ತಂಭ[7]ಮಂತ್ರಂ[7]ಗಳಂ ೪೨೮
(ಸೂಕ್ತಿಸುಧಾರ್ಣವಂ ೧೫-೬೭)

---

[1] ಸಿಪಿ(ಸೂ) [2] ಸೋಲಿಪೆಂಪ್ಪಿ ಸೊಂದೆಸೆಗೊಳಗಿರ್ದ(ಸೂ) [3] ಪೆಣ್ಣ್ವೊಲೊಂದು(ಸೂ)
[4] ಧಾರ(ಸ) [5] ಪ್ರಸ್ತಾ(ಸ) [6] ಳಂಬಿನವನೋ ಪಾಯಾವಿ ಪೇಱಿಂದು(ಸೂ) [7] ವಿದ್ಯಂ(ಸೂ)

ನೆನೆಯಿಸಿ ಕಾಡುಗುಂ ಸತತಮಾತನುದಗ್ರ ಲಲಾಟಪಟ್ಟಮಾ
ತನ ಕಟಿ ವಕ್ಷಮಾತನ ತನೂದರಮಾತನ ಜೆಲ್ಲಿಗಂಗಳಾ
ತನ ಬಗೆಗೊಳ್ಪ ಪೆರ್ದೊಡೆಗಳಾತನ ಸಿಂಹಕಟೀತಟಂಗಳಾ
ತನ ಸಿಪುಮೋಳ್ಗಳಾತನಳಕಾಳಿಗಳಾತನ ನೀಳ್ದ ಪುರ್ಬುಗಳ್ ೪೨೯

ನಿನಗೀ ಮುದ್ರಿಕೆಯುಂ ಪ್ರಿಯಂಗೆ ಪಿರಿಕಂ ಸಂತೋಷದಿಂದಕ್ಕ ಕೇಳ್
ನಿನಗೀ ಸೂಸಕಮುಂ ಪ್ರಿಯಂಗೆ ಕುಸುಕಂ ಮಜ್ಜೀವಿತೇಶಂ ಬರಲ್
ನಿನಗೀಯಂಬರಮುಂ ಪ್ರಿಯಂಗೆಸೆವ ಮುರ್ಮುಸ್ಥಾನಮುಂ ಕೊಟ್ಟಪೆಂ
ವನಜಾತೇಕ್ಷಣೆಯಿನ್ನೊಳಂ ನೆರಪು ನೀಂ ಶ್ರೀರೂಪಕಂದರ್ಪನಂ ೪೩೦

ವದನಂ ಲಜ್ಜೆಯೊಳದ್ದಿದಲ್ಲಪೆಳಸಂ ಕಣ್ಬೆಳ್ಪುಮಂ ಸೂಸಿದ
ಲ್ಲದೆ ನೋಡಂ ಮುಖಮೆತ್ತಿಪಲ್ಲದೊಲವಿಂ ಮಾತಾಡಿಸಂ ತೋಳತ
ಕ್ಕೈರ್ದೆಗೊಂಡಲ್ಲದೆ ಸೋಂಕಸ್ಟೆ ಪುಳಕಮುಂ ಕಂಡಲ್ಲದಾಲಿಂಗಿಸಂ
ಮದನಂ ತುಳ್ಕಿಸೊಡಲ್ಲದೊಲ್ಲು ನೆರೆಯಂ ಮಜ್ಜೀವಿತೇಶಂ ಸಖೀ ೪೩೧

ನಿನ್ನೊಡೆಯಂ ಸುರೂಪಿಯೆ ಗುಣಜ್ಞನೆ ಕಾಮಕಲಾವಿಲಾಸನಂ
ಪನ್ನೆಸಂಗಸೌಭಗಿಯೆ ನೀತಿನಿವಾಸನೆ ವಿಕ್ರಮಪ್ರಭಾ
ಪೋನ್ನತ ಬಾಹುಸಾಹಸಿಯೆ ಸಜ್ಜನಸಂಗಿಯೆ ದೇವತಾರ್ಚನಾ
ಸನ್ನನೆ ಪೇಟಿರ್ ಸರೋಜಮುಖಿ ಕೌತುಕಮಾಗಿ ಮನೋನುರಾಗದಿಂ ೪೩೨

ವನಿತೆಯರೆಲ್ಲರೊಳ್ ಸುಕೃತಮಂ ಮಿಗೆ ಮಾಡಿದಳಾವಳಿನ್ನವೋಲ್
ಮನಸಿಜಮೂರ್ತಿಯಂ ಸುಭಗನಂ ಮೃದುಕೋಮಲಕಾಯನಂ ಪ್ರಸ
ನ್ನನನಭಿರಾಮನಂ ಪಡೆದು ಕಾಣ್ಬನಿತರ್ಕೆ ಸಮಂತಿದೆಲ್ಲಮೋ
ಪ್ಪಿನಗುಣಿ ಬಾಲಚಂದ್ರಿಕೆಯ ಕಾರಣದಿಂ ದೊರೆವತ್ತು ನಿಶ್ಚಯಂ ೪೩೩

ನೆನಹಿನಿತೆಲ್ಲಿದೇ ಕೆಳದಿ ನಿನ್ನ ಮನಃಪ್ರಿಯನಲ್ಲದುಂಟು ಕಾ
ಮಿನಿಯುವನಲ್ಲಿ ತನ್ನ ಮನಂ ಮನದೊಳ್ ಮೃದುನೋಟ ನೋಟದಿಂ
ತನುವಿನೊಳಿನ್ನ ಭಾವತನು ಜೆಂಬಿಡದಿಯ್ದುದುಪಕ್ಕಯೇನನಾಂ
ನೆನೆವನದೇನ ನೋಡುವೆನದೇನೊಡಗೂಡುವೆನೇನ ಪೇಳ್ವಪೆಂ ೪೩೪

ನೋಡುವ ನೋಡಿ ಸೊಲ್ಲಿಸುವ ಸೋಲ್ಲಜಂಪಪ್ಪುವನಪ್ಪಿ ಚುಂಬನಂ
ಮಾಡುವ ಮಾಡಿ ತಲ್ಲಣಿಪ ತಲ್ಲಣದಿಂ ನಿಲಲಾಜದಕ್ಕಜಂ
ಕೂಡುವ ಕೂಡಿ ಮೈಮುಜಿಳವ ಮೈಮುಜಿಳಪೆಚ್ಚಜಂ ಮ್ತು ಮಾ
ತಾಡುವ ಮಾತಿನೊಳ್ ನಿಮಿಷಕಂ ಬೆಳಗಾಯ್ತು ವಿಚಿತ್ರ ಕೇಳ್ ಸಖೀ ೪೩೫

ಅಮೃತದ ಕಂಡ ಸಕ್ಕರೆಯ ಕೂಟಮುಮೊಲ್ದಳೆ ಕೂಟಮುಂ ಸಮಾ
ನಮೆ ವಲವೊಲ್ಲದಂಗನೆಗೆ ನಟ್ಟ ವಿಟಂ ಬರೆ ಕೂಟವಿಂಪನೀ
ಗುಮೆ ಬೆಲೆಗೊಂಡೆ ನಾಂ ನಿನಗೆ ಮೈವೆಲೆಯುಂ ಮಿಗಿಲೀವೆನೆಂಬ ಕೂ
ಟಮುನದನೊಂದು ಕೂಟಮೆನಲಕ್ಕುಮೆ ನಂಜಿನ ಕಾಳಕೂಟಮುಂ ೪೩೬
(ಕಾವ್ಯಾವಲೋಕನಂ ೧೪೪, ಸೂಕ್ತಿಸುಧಾರ್ಣವಂ ೮-೩೯೮)

ಕುರುಳಂ ಕೊಟ್ಟಪಳೆಂಬುದಕ್ಕೆ ಕುಱುಪಿಂತೀ ಚಿನ್ನಪೂ ಜೇಡಿದೊ
ಪ್ಪಿರಳಂ ಕೊಟ್ಟಪಳೆಂಬುದಕ್ಕೆ ಕುಱುಪಿಂತೀಯುಂಗುರಂ ಮೀಸಲಾ
ದುರಮಂ ಕೊಟ್ಟಪಳೆಂಬುದಕ್ಕೆ ಕುಱುಪಿಂತೀ ಹಾರಮುಂ ಬಂದುವೆಂ
ದಿರದೆಯ್ತಂದು ಕಲಾವಿಲಾಸನಿದಿರೊಳ್ ತಂದಿಕ್ಕಿದರ್ ಧೂರ್ತೆಯರ್ ೪೩೭

ಕೃತಪ್ರಕ್ಷಾಲೋಪಚಾಪ್ರಸ್ತುತನನವಿರಳಾ[1]ಪಾಂಗ[1]ವಾರಿಪ್ಲವಾಂತ
ರ್ಗತನಂ ಸಂಭೋಗಲೀಲಾ[2]ಕೃತಕರಣ[2]ನಿನಾದಾಸ್ಪದಂ ವಲ್ಲಭಾನು
ಸ್ಮಿತ [3]ವಿಸ್ಪಷ್ಟಾವಲಂಬಪ್ರತಿಕರವಿನ್ಯಸ್ತಾಶ್ರಿತ್ವನಂ[3] ಬಿಟ್ಟು ಗರ್ವೋ
ದ್ಧತನಂ [4]ಕಯ್ಯಾರಲೆ[4]ಜ್ಜಂ ಪಡಲಿಡೆ ಬಹಳಾಕ್ಷೇಪದಿಂದಿಕ್ಷುಚಾಪಂ ೪೩೮
(ಚಂದ್ರಪ್ರಭಪುರಾಣಂ ೭-೬೭)

ಸ್ಮಿತಮಧುರಾಮುಖಂ ವಿಮುಖವೃತ್ತಿಯನಾರ್ಗೆ ಕಟಿಲ್ಪವಾ ಕುಚ
ದ್ವಿತಯಭರಾವಲಂಬಿಯೆಬೆಯಾರೆಸೆಗೆಯ್ದುದು ಕೊಡೆ ಸಂಸ್ಥಿತಾ
ಯತನಯನಂಗಳಾರ ನಯನಂಗಳ ನಾಂಟಿಸದುನ್ಮದಾಲಸಂ
ಗತಿ ಗತಿಭಂಗಮಂ ಪಡೆಯವಾರ್ಗೆ ತನಂಗಜರಾಜಲಕ್ಷ್ಮಿಯಂ ೪೩೯

ವಾಮಪದಾಂಗುಟಂ ಪದತಳಂ ಪರಡುಂ ಕಣೆ ಕಾಲು ಜಾನುವುಂ
ತಾ ಮಹಿಳಾಪದೂರು ಜಘನಂ ಸ್ಮರಮಂದಿರ ನಾಭಿ ವಕ್ಷಮುಂ
ಕೋಮಲ ಕಕ್ಷ ಕಂಠ ಕದಪೋಷ್ಠ ವಿಲೋಚನ ಭಾಳ ಮೂರ್ಧ್ನಿಯುಂ
ಕಾಮುಕಲಾಳಿಗಳ್ ಪೊಱತಿವ ತಾಣಮಿವಂ ತಿಳಿ ಪಕ್ಷಭೇದದಿಂ ೪೪೦

ಕಡೆಗಣ್ಣೋ ಕುಸುಮಾಸ್ತ್ರಸುರ್ಚಿದಲಗೋ ಹೃದ್ಭೂಧನುರ್ಮಧ್ಯಮೋ
ನಡುವೋ ಪೆರ್ಮೊಲೆಯೋ ಮನೋಜಕೃತಕಾದ್ರಿದ್ವಂದ್ವಮೋ ತಾಂ ಬಟಿ
ಲ್ಪುಡಿಯೋ ಕಂತುಪತಾಕೆಯೋ ಮದನಮಾತಂಗಂ ತುಲಾಸ್ತಂಭಮೋ(?)
ತೊಡೆಯೋ ಪೇೞಿರೆ ಮೋಹಿಸುತ್ತಬಲೆ ನಿಂದಿರ್ದಳ್ ನಿಜದ್ವಾರದೊಳ್ ೪೪೧

---

[1]ಪಾಂಗ(ಅ) [2]ಕರಳಕರಣ(ಅ) [3]ವಿಸ್ಪಷ್ಟಾಪಾಂಗನ್ಯಸ್ತಕರವಿಧೃತಸ್ತ್ರೀತ್ವನಂ(ಅ)
[4]ಕೈವೋಗದೆ(ಅ)

ಕಡು ಮುಳಿದಿರ್ದ ನಲ್ಲನಿದಿರಂ ಬರೆ ನಲ್ಲಳ ಬಾಯತಂಬುಲಂ
ಪುಡಿಯುಡವೇೞ್ಕು ಪ್ಪೆ ಬೆಮರವೇೞ್ಕು ಮೊಗಂ ಕಿಱಿದಾಗವೇೞ್ಕುಮೊ
ಳ್ನುಡಿ ತೊಪಲಾಗವೇೞ್ಕು ನಡೆನೋಡುವ ದಿಟ್ಟಿ ಕಲಂಕವೇೞ್ಕು ನಾ
ಣೆಡೆ ತಲೆಸೋಱವೇೞ್ಕುಮಿನಿತಿಲ್ಲದೊಡೊಲ್ಮೆಯನಿಕ್ಕು ಕಿಚ್ಚಿನೊಳ್ ೪೪೨

ಏಗೆಯ್ವೆನೆಂಬ ಚುಂಬನ
ವಾಗುಳಿಸತ್ತಪ್ಪುವಪ್ಪು ಪಡನಿಲ್ಲದ ಸಂ
ಭೋಗಂ ಸಾಲದೆ ವಿಟ ಪೋ
ಪೋಗೆಂದು ಪುಯ್ಯಲಿಡುವಳೇ ನೂಂಕುವಳೇ ೪೪೩

ಆರ್ದ್ರವನಿತಂಬಮನಿಶಂ
ಸಿಪ್ರಾಂಕಿತ ಮುಕುಳಿನಯನಮನೃತಾಲಾಪಂ
ಮುದ್ರಿತ ನಯನಂ ವಿಟಜನ
ಹೃದ್ರೋಗಂ ಕಪಟಕಾಮಿನೀ ಸಂಭೋಗಂ ೪೪೪

ಮನಮದು ಮನದನ್ನನ ಬೆ
ನ್ನನೆ ಪೋಗಿರೆ ತನ್ನ ಬಸನದಿಂದವಳೊಳ್ ಸಂ
ಮನಮಂ ಬಿಡೆ ಬೆಳೆಯಿಪ ಬೆ
ಳ್ಳನವದು ಪಾಟ್ಸಿಸೆಗೆ ಬಾಯಿಸಂ ಗುಡುವಂಪಂ ೪೪೫
(ಚಂದ್ರಪ್ರಭಪುರಾಣಂ ೮-೫೫, ಸೂಕ್ತಿಸುಧಾರ್ಣವಂ ೮-೩೯೬)

ಒಂದೆಡೆಗೆಯ್ದಿಹ ಚಿತ್ರವ
ನೊಂದೆಡೆಗೆಯ್ದಿಸುವೆನೆಂದು ತಿಳಿಯುವ ಮನುಜಂ
ಬಂದ ತೊಱೆಯುದಕಮಂ ಬಲು
ಪಿಂದಂ ಶೈಲಾಗ್ರಮಕ್ಕೆ ತಿಪ್ಪುವ ತೆಱದಿಂ ೪೪೬

ಸತಿಯುರದ ಮೇಲೆ ಕಾಲಂ
ಪತಿ ನೀಡಲ್ಕಳೆದುಕೊಳುತ ಮತ್ತಾ ಕಾಲಂ
ಸತಿ ತನ್ನ ಕಣ್ಣೊಳೊತ್ತಲು
ಅತಿಚತುರಂ ತಿಳಿದುಪೋದ ಕಾರಣವೇನೈ ೪೪೭

ತೆಱನಱಿದೀವ ಕಾರ್ಯವಱಿದಂಜುವ ಸೋಂಕಱಿದಿಂಬುಗೆಯ್ವ ಮಾ
ತಱಿದುಚಿತೋಕ್ತಿಯಂ ನುಡಿವ ಮುಂದಱಿದಲ್ಲಿಗೆ ಕೊಟ್ಟು ನೋಟ್ಪ ಕ
ಣ್ಣಱಿವರ್ದೆಗೊಳ್ಪ ಚಿತ್ತವಱಿದಾಲಿಪವೂರ್ಜಿತಬುದ್ಧಿಯಿಲ್ಲದಿಂ
ಬಱಿಯದ ಗಾವಿಲಂಗೆ ದೊರೆಕೊಳ್ವರೆ ಸೂಳೆಯರೆಂಬ ಡಾಳೆಯರ್ ೪೪೮

ಮನೆ ಸಲೆ ಹೇವಿಳಂಬಿ ಸಹಕಾರಿ ವಿಕಾರಿ ವಿರೋಧಿಕೃತ್ ಸುಶ್ಶ
ಜ್ಞನವು ಸಮಾನ ಮನ್ನಣೆ ವಿರೋಧಿ ಪರಾಭವಿ [1]ಭವಕಾರಿ[1] ಮಾವ ಷ್ಟ
ದುನನೆ ಕರಂ ಪ್ರಮಾಥಿ ನಿಜವಲ್ಲಭೆ ದುರ್ಮುಖಿಯೆಂಬೊಡೆನ್ನ ಪೆಂ
ಪಿನ ವಿಭವಂ ಪ್ಲವಂಗದವೊಲಾದುದು ಮನ್ಮಥಚಿತ್ರಭಾನುವಿಂ ೪೪೯

(ಸೂಕ್ತಿಸುಧಾರ್ಣವಂ ೮–೪೩೬)

ನುಡಿ ಸವಿ ನೋಟವೊಂದು ಸವಿ ನೋಂಕು ದಿಟಂ ಸವಿ ತೋಟಿಯಾವಗಂ
ಕಡುಸವಿ ಪೊಯ್ಯೆ ಮುನ್ನ ಸವಿ ಬಯ್ಯೆ ಕರಂ ಸವಿಯಪ್ಪ ಚುಂಬನಂ
ಗಡಣಮಿವಿಂತುಮೆಯ್ದೆ ಸವಿಯಪ್ಪುವು ತನ್ನ ಪಸಾದದಿಂದಮೆಂ
ದೊಡೆ ಸವಿಜೇಟದಿಂದೆ ಪೆಱತಾವುದೊ ಭಾವಿಸಿ ನೋಡೆ ನಾಡೆಯುಂ ೪೫೦

(ಚಂದ್ರಪ್ರಭಪುರಾಣಂ ೮-೫೫, ಸೂಕ್ತಿಸುಧಾರ್ಣವಂ ೮–೪೪೫)

ಪುಟ್ಟುವ ಜನ್ಮನಕ್ಕೆ ಮೊದಲೇ ತಲೆದೋಱುವ ಲಜ್ಜೆ ರಾಗದಿಂ
ದಿಟ್ಟಿಪ ನೋಟವಿಂಪೆಸೆವ ಮೆಲ್ನುಡಿಯುಂಕುರಿತಸ್ಮನಕ್ಕೆ ಮೇ
ಲಿಟ್ಟ ಸೆಱಂಗು ನುಣ್ಪೆಸೆವ ಕೋಮಲದೇಹಮೊಳನ್ಯಪ್ರತ್ತಿಯುಂ
ಪ್ರಟ್ಟಿಪ ನೇಹದಂಗನೆಗೆ ಸೋಲ್ವುದು ಪುಣ್ಯಮದಂಬುಜಾನನೇ ೪೫೧

ವನಜಾತಾನನೆಯುಂ ನಿಜಾಂಗಲತೆಯುಂ ತನ್ವಂಗಿಯುಂ ಹಂಸಗಾ
ಮಿನಿಯುಂ ಚಾಪಲನೇತ್ರೆಯುಂ ಚದುರೆಯುಂ ಶ್ರೀಲೋಲೆಯುಂ ಬಾಲೆಯುಂ
ಘನಪಕ್ಷ್ಮೋರುಹೆಯುಂ ವಿವೇಕನಿಧಿಯುಂ ಕೂರ್ಪಾಕೆಯುಂ ಕೂಡಿ ಮು
ತ್ತಿನಿಸಂ ಬಿಟ್ಟವರನ್ಯರೊಳ್ ನೆರೆವರೇಂ ಪಾಲುಂಡು ಮೇಲುಂಬರೇ ೪೫೨

ಸುರತದ ಸೋನೆ ಸೋರ್ಮುಡಿಯ ಜಾಣೆ ಮನೋಜನ ಪಟ್ಟದಾನೆ ಕೇಳ್
ಸರಸಿಜನೇತ್ರೆ ಮಾನಿನಿ ಕಲಾನಿಧಿ ಕೋವಿದೆ ಕೋಮಲಾಂಗಿ ಕ
ಸ್ತುರಿನಿಭಗಂಧಿ ನಿನ್ನ ರತಿಗೋಷ್ಠಿಯೊಳಾಟ್ಟಿವನನ್ಯನಾರಿಯುಂ
ನೆರೆವನೆ ಪೇಟು ನೀಂ ಶಿವಶಿವಾ ಸುಧೆಯುಂಡವ ಮೇಲುದುಂಬನೇ ೪೫೩

ಏನೋ ರೂಪು ನರೇಂದ್ರ ನಿನ್ನ ಗುಣಕಂ ನೀನಿರ್ಪ ಸುಪ್ರೌಢಿಗಂ
ನಾನಾಸತ್ಕಲೆಗಂ ಸುಜಾಣುನುಡಿಗಂ ಸೌಜನ್ಯಕೌಶಲ್ಯಕಂ
ನಾನಾರೀತಿಯೊಳೆಯ್ದೆ ಸೋತು ನಿನಗಂ ಬೆಂಬೀಟ್ಟಿ ಬೆಂಡಾದಳಂ
ನೀನುಂ ಕೈಬಿಡಲಪ್ಪುದೇ ಶಿವಶಿವಾ ಪಾಲುಂಡು ಮೇಲುಂಬರೇ ೪೫೪

———

[1]ಶರ್ವರಿಶಾಲಿ

ಸರಸಿಜಪತ್ರನೇತ್ರೆ ನೆನೆಯುತ್ತಿರೆ ಪೋದಪನೆನ್ನ ವಲ್ಲಭಂ
ಸುರುಚಿರ ನೀಲಕುಂತಳೆ ಮನೋಭವನುರ್ಕೆನೆವಾನೆ ನಲ್ಲನಂ
ಪರಸುವೆನೆಂದು ನೀಱೆ ಧವಳಾಕ್ಷತೆಯಂ ಪಿಡಿದೆಯ್ದೆ ಬಂದೊಡಂ
ಸ್ಮರಶಿಖಿಬಾಧೆಯಿಂದಲಗುದಾಗಲು ಬಾಗಿದಳುತ್ತಮಾಂಗಮಂ ೪೫೫

ಪೋದಪನೆಂದು ಪೇೞ್ದ ರಮಣಂಗಿರವಂಗನೆ ಬಾಗಿ ಕೂರ್ಮೆಯಿಂ
ಸಾದರದಿಂದೆ ಕರ್ಪುರದ ತಂದೊಡನೀವೆನೆನುತ್ತಲೆತ್ತಲಾ
ಮಾಧವಪುತ್ರತಾಪದಲಿ ಕಾಯ್ದುರಿಯೇಱುತ ಕಯ್ಯೊಳಾಗಳಾ
ಮೋದಮೊಳೊಪ್ಪುವಾರತಿಯನೆತ್ತುವ ಮಾೞ್ಕೆಯೊಳಾಯ್ತು ಸೋಜಿಗಂ ೪೫೬

ಪೊಡಮಡುವಪ್ಪಿಕೊಳ್ಳ ನೆನೆಯುತ್ತಿರೆಯೆಂಬ [೧]ವಿಭೂಷಣಂಗಳಂ
ತೊಡಿಸುವ ಕೂರ್ಮೆಯಿಂ[೧] ಪರಸಿ ಸೇಸೆಯನಿಕ್ಕುವ ಬುದ್ಧಿವೇ[೨]ೞುತಾ
ನೊಡಬಡಿಪಂಜದಿರ್ ಸುದತಿಯೆಂದಡಿಯಿಟ್ಟು ಮರಳ್ದು ನೋೞ್ಪ ಕೈ
ಲೆಡೆ ನಿಮಗೆಂದು ಪೇೞುವುಸತಾಪಮದೊ[೨]ಪ್ಪಿದುದಾ ಪ್ರಯಾಣದೊಳ್ ೪೫೭

(ಆದಿಪುರಾಣಂ ; ೪-೫೭, ಸೂಕ್ತಿಸುಧಾರ್ಣವಂ ೬-೧೦೮)

ಕೈರವನೇತ್ರೆ ಚಕ್ರಮಿಥುನಸ್ತನೆ ಕೀರವಚಃಪ್ರ[೩]ಣಾದೆ[೩]ಯಂ
ಭೋರುಹ[೪]ಲಾ[೪]ಸ್ಯೆ ಪೇೞ್ ನಿನಗೆಯೊತ್ತೆಯುಮೇನೆನೆ ಲೋಕ[೫]ವಿ[೫]ತ್ರ ತಾ
ರಾರಮಣಪ್ರ[೬]ಹಾಸ[೬] ಖಗಪ್ರಿರಿ ವಿಹಂಗನುಸಾಳ್ವ ಅಪ್ಪುದಿ
ಗ್ವಾರಣಸತ್ವ ಕುಳ್ಳಿರೆನೆ ತಾಂ ತಲೆದೂಗಿಯೆ ಪೋದನಾ ವಿಟಂ ೪೫೮

(ಸೂಕ್ತಿಸುಧಾರ್ಣವಂ, ೮-೪೧೪)

ವನಜಾತಾನನೆ ಕೇಳ್ ಸುಧಾಂಶುಯಶ ಪೇೞ್ ಹಂಸಾಂಗನಾಯಾನೆ ಕೇಳ್
ಘನ[೭]ನಾದಾನಿನ್ವಿತ[೭] ಪೇೞ್ [೮]ಮದದ್ವಿರ[೮]ದಕುಂಭೋರೋಜೆ ಕೇಳ್ ಸಿಂಹಶಾ
ತ್ಯನೆ ಪೇೞ್ [೯]ಮತ್ತಮದಾಳಿಕಾ[೯]ಕಬರಿ ಕೇಳ್ ಸಚ್ಚಂಪಕಾಮೋದ ಪೇ
ೞಿನಲಾ ಕಾಂತೆಯು ಬಿಟ್ಟುಪೋದನವದನಿನ್ನೇನೆಂಜಿನಾಶ್ಚರ್ಯಮಂ ೪೫೯

(ಪುಷ್ಪದಂತಪುರಾಣಂ; ೮-೧೧೧, ಸೂಕ್ತಿಸುಧಾರ್ಣವಂ, ೮-೪೧೫)

---

[೧]ಸಮಸ್ತವಸ್ತುವಂ ಕುಡುವ ವಲರ್ಮೆಯಿಂ(ಅಸೂ) [೨]ಪೇೞ್ದ ಕೈಯೆಡೆ ನಿಮಗೆಂದೊಡಂ ಬಡಿಪ ನಲ್ಲರಗಲ್ಕೆಗೆ ಕಣ್ಣನೀರ್ಗಳಂ ಮಿಡಿದ ಬಹುಪ್ರಕಾರ ಜನಸಂಕಟಮೊ (ಅ ಸೂ) [೩]ಯುಕ್ತಿ(ಸೂ) [೪]ದಾ(ಸ) [೫]ನೀ(ಸ) [೬]ಕಾಶ(ಸೂ) [೭]ದಾಹೋಪ್ವರ(ಸ) [೮]ಮನೋದ್ಧರಿತ(ಸ) [೯]ಷಟ್ಪದಮಾಲಿಕಾ(ಸ)

ಸರಸಿಜನೇತ್ರೆ ಕೇಳ್ ತರಣಿತೇಜನೆ ಪೇೞ್ ಕುಮುದಾಕ್ಷಿ ಕೇಳ್ ಮೃಗೋ
ದರಯುತ ಪೇೞ್ ಮಯೂರಕಚೆ ಕೇಳ್ ಗಿರಿಸನ್ನಿಭಧೈರ್ಯ ಪೇೞ್ ದಿಶಾ
ಕರಿಗಮೆ ಕೇಳ್ ಮಹೋದ್ಧರಿತಯಸ್ವನ ಪೇೞಳಿಮಾಲಿಕುಂತಳೋ
ತ್ಕರಭರೆ ಕೇಳ್ ಸುಗಂಧಗುಣವಾಸಿತ ಪೇೞಿತನೆ ಮೆಚ್ಚಿದಂ ನೃಪಂ ೪೬೦

ಅಳಿಯಳಕದ ಗಜಗಮನೇ
ನಳಿನಮುಖಿ ಪೇೞು ನಿನಗೇಂ ವೊತ್ತೆಯದೇನೆನ
ಲೊಳು ಸಂಪಗೆ ಮಱಿಸಿಂಹವು
ಕೆಳೆಯಾಣ್ಮಂ ಕುಳ್ಳಿರೆನಲು ಚಮರಂ ಪೋದಂ(?) ೪೬೧

ಗಿಳಿಗಳ್ ಚುಂಬಿಸಿ ಬಿಟ್ಟ ಚೂತಫಲಮಂ ಕಾಕಾಳಿಗಳ್ ಮುಟ್ಟವೇ
ಕಳೆಯಂ ನಿರ್ಜರರುಂಡು ಮಿಕ್ಕ ಶಶಿಯಂ ಜಕ್ಕಕ್ಕಿಗಳ್ ಪೀರವೇ
ಅಳಿಗಳ್ ವಾಸಿಸಿ ಬಿಟ್ಟ ಪುಷ್ಪಚಯಮಂ ಕಾಟ್ಮಿಕ್ಷಕಂ ಸೋಂಕವೇ
ಸಲೆ ಸತ್ಪ್ರೇಮದ ಕೂಡಿ ಬಿಟ್ಟ ಸತಿ ತಾನೇನಾದೊಡಂ ಭಂಗಮೇ ೪೬೨

ವಾರಿಜನೇತ್ರೆ ಭೃಂಗಕುಟಿಲಾಳಕಿ ಚಂದನಗಂಧಿ ನಿನ್ನೊಳಂ
ಕೂರುಮೆಯಿಂದ ಕೂಡಿದ ಕಲಾಕುಶಲಜ್ಞನದಾವನೆಂಬುದಂ
ಮಾರನ ಪಟ್ಟದಾನೆ ಮಱೆಯೇತಕೆಯೆನ್ನೊಳು ಪೇೞ್ವುದೆಂದೆನಲ್
ಸೇರಿದ ಮೂಱುಪಾವದವ ರೋಹಿಣಿಯಾಣ್ಮನ ಮುಂದೆ ನಾಲ್ಕಱಂ ೪೬೩

ಭಾವಕಿಯಾಗಿ ರೂಪವತಿಯಾಗಿ ಗುಣಾನ್ವಿತೆಯಾಗಿ ನಲ್ಮೆಯೊಳ್
ಕೋವಿದೆಯಾಗಿ ಸತ್ಕಲೆಯ ಬಲ್ಲವಳಾಗಿ ಕುಲೀನೆ ಕೂರ್ಮೆಯಂ
ತೀವಿದಳಾಗಿ ಲೇಸಿನವಳೊಬ್ಬಳೆ ಸಾಕುವನೇಕವೇತಕೋ
ಸಾವಿರ ಗಾಜುಗಟ್ಟುವುದಱಿಂ ನವಮೌಕ್ತಿಕವೊಂದೆ ಸಾಲದೇ ೪೬೪

ಮದನವಿಲಾಸೆ ಮನ್ಮಥಕಲಾನಿಧಿ ಮಾನಿನಿ ರನ್ನೆ ಬೇಗದಿಂ
ಸುದತಿಯಿದೆಲ್ಲಿಗೈದಿದಪೆಯೆಂದೆನುತೊರ್ವಳ ಕೇಳಲೊಬ್ಬ ಸ
ನ್ಮದ ಮಿಗೆ ನಲ್ಲ ನಿನ್ನನಱಸುತ್ತಮೆ ಬಂದೆನು ಬೇಗ ಬಾರೊ ನೀಂ
ಸದನಕೆ ಪೋಪೆವೆಂದು ಕುಡಿಕ್ಕೈವಿಡಿದೊಯ್ದಳು ಭದ್ರಶಾಲೆಗಂ ೪೬೫

ಪೊಸತೊಂಡಂ ತೀವಿ ಮತ್ತಾ ಕರಡಗೆಯ ಬಹಿರ್ಭಾಗದೊಳ್ ಕಾಂತೆಯೊರ್ವಳ್
ಪಸಿಯಂ ಸೂಡಿದ್ದನಂ ಚಂಪಕಮನಹಿಯನುಲ್ಲೇಖನಂ ಗೆಯ್ದು ತನ್ನಾ
ಪ್ರಸವೀಹಸ್ತಾಬ್ಜದಿಂದಟ್ಟಲವಳದನೆ ತಂದೀಯೆ ನೋಡುತ್ತೆ ಬೇಗಂ
ವಸುಧೀಶಂ ತಾನೆ ಬಂದಂ ಸುಗುಣರಱಿವುದಾ ವಸ್ತುವೇನೆಂಬುದೆಂದುಂ ೪೬೬

ಅಂಗನೆಯಲ್ಲಿಗೊರ್ವ ವಿರಹಾತುರನಾಗಿಯೆ ಪೋಗಲಾಕೆಯೊಳ್
ಸಂಗಮವಾಗಲೆಂದು ವಿಟಪೋಗಿ ಮಗುಟ್ಚಿತಿಪ್ಪೆನ್ಯಭಾವದಿಂ
ದಂಗನೆಯುಂಗುಟಾಗ್ರಮವನೆಚ್ಚಲು ಬೇಡೆನುತಾಕೆ ಬಾಗಲಾ
ವುಂಗುಟದಲ್ಲಿ ಮೀಸೆ ಮೊಲೆ ಜೆನ್ನಲಿ ಮೂಡಿದುದೇಂ ವಿಚಿತ್ರಮೋ ೪೬೭

ಚಿತ್ರಜನೊಲ್ದು ಕಾಮರಸದೊಳ್ನವಕಾಂಚನಕುಂಭಯುಗ್ಮಮಂ
ತೆತ್ತಿಸಿದಂದಮಪ್ಪ ಕುಚದಾ ಲಲಿತಾಂಗಿನಿ ದಿವ್ಯರೂಪದಿಂ
ಪಿತ್ತಿಲೊಳಿಪ್ಪೆ ಮೀವುತಿಹ ಕಾಮಿನಿಯಂ ನಿಜನಲ್ಲ ಕಾಣುತಂ
ಬತ್ತಲೆ ಕೊಂದುಕೂಗುವನಳುಟ್ಟರೆ ತೊಟ್ಟರೆ ಬಾಟಲೀವಳೇ ೪೬೮

ಅಳಿಗುರುಳೊಗ್ಗಿನಿಂ ನಿಮಿರದಂಗನೆಯೊಳ್ನಡು ಬಳ್ಕದನ್ನೆಗಂ
ಕಲಶಕುಚದ್ವಯಂ ಮೊಳೆಯದಂಗನೆ ಲಜ್ಜೆ ಮುಸುಂಕದನ್ನೆಗಂ
ತೊಳಗುವ ರೂಪು ಕಣ್ಣ ಬಳನಂ ಪಱವುತ್ತಿದೆ ನೋಟಿಇಪ್ಪಡಿಂತಿನಳ್
ಮೊಳೆಯೊಳೆ ಕೊಂದುಕೂಗುವವಳೇಟಿಇಲೆಯಾಪೊಡೆ ಬಾಟಲೀವಳೇ ೪೬೯

ನಡುವಂ ಪೆರ್ಮೊಲೆಯಂ ಸುಧಾಧರಮುಮಂ ವಿಭ್ರಾಜಿತಭ್ರೂಗಳಂ
ನಡೆನೋಡಲ್ಕೆ ನಿಜಾಕ್ಷಿ ಸಾಲದೆನುತಂ ಪಿಂಭಾಗಮಂ ತೋರ್ಕೆ ನೋ
ಮ್ಪುಡಿಯೊಳ್ಕಂಪು ಕಟೀತಟಂಗಳಿಂಪು ನೋಡಲ್ ಸಾಲವೇ ಗಂಗೆಗೀ
ತಡಿಯೇನಾ ತಡಿಯೇನಿದಕ್ಕೆ ಪುರುಡೇ ಪಂಕೇಜಪತ್ರೇಕ್ಷಣೇ ೪೭೦

ಇನಿಯನುಮನ್ಯಕಾಮಿನಿಯುಮ ನೆತ್ರವನಾಡುತಿರಲ್ಕೆಯಲ್ಲಿಗಾ
ಘನಕುಚೆ ಬಂದು ಬಾರೆನಲು ಬಂದಪೆ ನಿಲ್ಲೆನೆ ಬೆನ್ನಮೇಲೆ ಕಂ
ಬನಿಯುಗೆ ಪೋಗು ನೀನೆನಲು ಬಂದುದು ದೂರವೆನಲ್ಕೆ ಮೆಚ್ಚಿಯಾ
ವನಿತೆಯ ಹಸ್ತಮಂ ಪಿಡಿದು ಮೇಳದೊಳೊಯ್ದನು ಭದ್ರಶಾಲೆಗಂ ೪೭೧

ಮೊಗಮಂ ಚುಂಬನಟಮಾಡಿ ನೋಡಿ ಪಿಡಿವಳ್ ವಸ್ತ್ರಾಗ್ರಮಂ ಕಿಂಚಿತುಂ
ನಗುವಳ್ ಬಾಗಿಲೊಳಡ್ಡಬಂದು ಕರುಣಂ ಸಾರ್ವನ್ನ ತಟಿಕ್ಕ್ಯಸುವಳ್
ಬಗೆದುಂ ನೋಡದೆ ಪೋದೆ ಪಾಪಿಯೆನುತಂ ಕಣ್ಣೀರ್ಗಳಿಂ ತುಂಬುವಳ್
ಮೃಗಶಾಬೇಕ್ಷಣೆ ಮುನ್ನ ಬಿಟ್ಟಳಸುವಂ ಬಿಟ್ಟಳ್ ಬಟಿಕ್ಕೋಪನಂ ೪೭೨

ಮೊಲೆಯೆಂಬುನ್ನತ ದುರ್ಗಮಿರ್ದು ಭುಜಮೆಂಬಾ ತಾಡಿಲಾಗಿರ್ದು ತಾಂ
ಸಲೆ ಪುರ್ಬೆಱಿಸಿನಚ್ಚಬಿಲ್ಗೆ ತೊಡರ್ದಾ ಕಣ್ಣಂಬು ತಾನಿರ್ದು ಹೋ
ಕಲಹಂ ಬಂದೊಡೆ ಬೆಂಗೊಡಲ್ಕುಚಿತಮೇ ಮತ್ಕಾಂತೆಯೆಂದೆಂಬ ಕಾ
ದಲನಂ ಕೂರ್ತಿದಿರಾಗಿ ಬಂದು ರತಿಯುದ್ಧಂ ಮಾಳ್ಪಳೇಂ ಮುಗ್ಧೆಯೋ ೪೭೩

ಒಡನೆರಸಿರ್ದು ಬೇರ್ವರಿದ ಮೋಹಮನಕ್ಕಟ ಕಾಣುತನ್ಯರಿ
ಟ್ಟುಡುಗವ ಮಾತ ಕೇಳಿ ಮನದಲ್ಲಿ ವಿಚಾರಿಸಿ ನೋಡದೆನ್ನ ನೀಂ
ಬಿಡುವರೆ ಸತ್ಕಲಾಕುಶಲಕೋವಿದನಂ ನೆನೆಯೆಂದದೊಂದು ಪ
ಚ್ಚಡದೆಣೆಯಿತ್ತುಪೊಂದ ಪೊದಿಯಲ್ಕಡು ನೇರಿಪ್ಪುದೇ ಮನಃಪ್ರಿಯಾ ೪೭೪

ಪಡೆದಾಳೋಕಿಸುವಲ್ಲಿ ಮುದ್ದುಮೊಗದೋಳ್ ಲಜ್ಜಾರಸಾಭಾಸಮಿ
ಲ್ಲದೊಡಂ ತಳ್ತಮರ್ದಪ್ಪುವಲ್ಲಿ ಪುಳಕಂ ಸ್ವೇದಾಂಬುವಂ ತಳ್ತು ಪೊ
ಣ್ಮದೊಡಂ ಚುಂಬಿಸುವಲ್ಲಿ ಕಾಮರಸಕೂಪಂ ತೀವಿ ತಳ್ಳಂಕಗೊ
ಳ್ಳದೊಡಂ ಪಂಡಿರೊಳಾದ ನಲ್ಮೆಯನದೇನೆಂಬೆಂ ಸರೋಜಾನನೇ ೪೭೫

ನೋಟದಿ ಕೂರ್ಮೆಯಿಲ್ಲ ನುಡಿಯೊಳ್ ಪಟುವಾತಿನ ಜಾಣ್ಮೆಯಿಲ್ಲ ಚೆ
ಲ್ವಾಟದೊಳಿಲ್ಲ ದಟ್ಟಡಿಕೆ ರೂಪಿನೊಳಿಲ್ಲ ವಿಲಾಸವಿಭ್ರಮಂ
ಕೂಟದೊಳಿಲ್ಲ ಕೆಕ್ಕೆಯ ಗಳಧ್ವನಿ ಚುಂಬನ ಲಲ್ಲೆ ದೈನ್ಯ ಚಿಃ
ಮಾಟದ ಬೊಂಬೆಯಂತೆಸೆದು ಸೂಳೆಯೆಂಬೊಡೆ ಲಜ್ಜೆಯಿಲ್ಲವೇ ೪೭೬

ಮಿಸುನಿಯೊಳಚ್ಚಪೊಚ್ಚಪೊಸಬಣ್ಣದ ತಿಣ್ಣದ ಸುಣ್ಣಸಪ್ಪ ಕ
ಕ್ಕಸದೊಳಗುಕ್ಕಿ ಸೊಕ್ಕಿ ಮಳೆದುರ್ಬಿದ ಕೊರ್ಬಿದ ಪರ್ಬಿದೊತ್ತಿದಾ
ಮಿಸುಪಳಪಟ್ಟ ಬಟ್ಟಮೊಲೆಯಂ ನಸುದೋಱುತ ಮೂಱುಲೋಕಮಂ
ವಶಿಯಿಪ ಯವ್ವನಾಂಗಿಯರನಂಗನ ಸಾಹಸದಂತಿರೊಪ್ಪಿದರ್ ೪೭೭

ತೊಡೆಯೆಡೆಯಲ್ಲಿ ಕುಳ್ಳಿರಿಸಿ ಕುಂಕುಮದಣ್ಪ ಕುಚಕ್ಕೆ ಲೇಪಿಸು
ತ್ತೊಡನೊಡಸಿಲ್ಲದಪ್ಪಿಯಧರಾಮೃತಮಂ ಮಿಗೆ ಪೀರ್ದು ಪೀರ್ದು ನಾ
ಣ್ಬಿಡುಕಿಯನಂತಮಾದ ರತಿರಾಗಮನೆಬ್ಬಿಸಿ ಮೇಲೆ ಕೂಟದಿಂ
ಗಡಲೊಳಗದ್ದಿದಾ ವಿಟರನೀಕ್ಷಿಸುತೆಯ್ದಿದನಾ ನೃಪಾಲಕಂ ೪೭೮

ಪೊಂಗುವ ಚಿತ್ತ ಚಿತ್ತದೊಳಡಂಗಿದ ನೇಹ ನೇಹದೊಳ್
ಪಿಂಗದಡಂಗಿ ತೋರ್ಪ ಮನವಾ ಮನದೊಳ್ಮಗೆ ಭಾವ ಭಾವಮಂ
ನುಂಗಿದುದಾತ್ಮನುಂ ಪರಮನೊಳ್ ನೆರೆವಂಗನೆಯೇತಕನ್ಯಕೃ
ತ್ಯಂಗಳ ಮೋಹಮೀ ತುರಿಯಕಂತರಿಯೂಮುದನಾಗಮಂಗಳೊಳ್(?) ೪೭೯

ಒಲಿದಿರವಕ್ಷಿ ಭಾವಿಸದವೊಳ್ಮಡಿಯುಬ್ಬಿದ ರೋಮ ತಕ್ಕೆಯೊಳ್
ಬೆಳೆಯದ ಕಾಯ ಕಾತರಿಸದಿಂದ್ರಿಯಮೊಂದದ ಚಿತ್ತ ತಲ್ಲಣಂ
ಮೊಳೆಯದ ತೋಟಿ ಕಾಮರಸಮುಣ್ಮದ ನಾಣು ಕಲಾವಿಲಾಸಗೊ
ಳ್ಳಿಲಿಸದ ಕೂಟಮೇಂ ಫಲದ ನಾಗರಕಾಟಮದಾಗದಿರ್ಕುಮೇ ೪೮೦

ಪ್ರಸುಡಿಸಿ ಬಯ್ದು ಪ್ರೊಯ್ದು ಕಚಿಲ್ದು ತೊಡಿಲ್ದು ಜೋಲ್ದು ತಾ
ನಿಸದೆ ಬೆಸುತ್ತುಂ ಕೂರ್ತುಂ ಕರಮುಬ್ಬಿ ಸಿಡಿಲ್ದು ಕನಲ್ದೊನಲ್ದು ಕಾ
ತರಿಸುವ ತಟ್ಟೆಮುಟ್ಟೆ ಪಡಿಪಟ್ಟುಸುಪ್ಪುಂಕಿಯೆ ಸೊಂಕಿ ತೇಂಕಿ ತಾಂ
ಸೆರೆವ ಲತಾಂಗಿಯೊಳ್ ನೆರವುನಿಲ್ಲದ ಸೋಂಕು ಕನಿಷ್ಠವಾರೊಳಂ ೪೮೧

ಮಲಯಜರೇಣುಜಾಲ ಪರಿಪಾಂಡುರಮಾಯ್ತು ಕುಚದ್ವಯಂ ವಿಕ
ಜ್ಜಲಕೃತಲೇಪನಾಸನಮಾದುದು ಲೋಚನಯುಗ್ಮಪೆಯ್ದೆ ನಿ
ರ್ಗಲಿತ ಸರಾಗಭಾವನೆನಿಸಿತ್ತು ರದಚ್ಛದವಿಂಮುಮಂ
ಡಲಲಲಿತಾಸ್ಯೆ ಪೇಟ್ ನಿಜಮನಃಪ್ರಿಯನಪ್ಪಿದನೋವಗಲ್ದನೋ ೪೮೨

ಬಗೆ ನಗೆಯೊಲ್ಮೆ ನಲ್ಮೆ ಪೊಸಜಾಣ್ನುಡಿ ಪುರ್ಬುಂ ಜರ್ಬುಂ ಕೆ
ಮ್ಮಗೆ ಮಿಗೆ ಕೆಲ್ಲೆನೋಟವೊಡಗೂಟದಪೇಟಮೆ ಕೂರ್ಮೆ ಪೆರ್ಮೆ ಪೊ
ರ್ದುಗೆಯೊಗೆದಿಚ್ಚೆಮೆಚ್ಚು ವಿಟರಂ ಕೊಱಚಾಡುವ ಪಾಡ ಗಾಡಿಯೆಂ
ಬಗಣಿತ ಚೇಷ್ಟೆಗಳ್ ನೆಱೆದಿರಲ್ ತಱಿಸಲ್ವದು ಸೂಳೆವಿದ್ದೆಯೊಳ್ ೪೮೩

ಕಸ್ತುರಿಕರ್ದಮಾಂಗ ಜಳಕಪ್ರಿಯ ಚಾಮರನಿತ್ಯಶೋಭಿತಾ
ನುತ್ತಮನೋನುರಾಗ ಮಲಿತಾಹವಶೂರ ಸನಾದಮೋದನ
ವ್ಯೋತ್ತರ ಕೋಡುಗಯ್ಯುಚತುರಾಗಮುಲೋಲ ಮಹಾಮಹೀಶ ನೀ
ನುತ್ತಮನೆನ್ನುತೋರ್ವ ಸತಿ ಬಣ್ಣಿಸಿದಳ್ ವಿಟನಂ ವಿಚಿತ್ರದೊಳ್ ೪೮೪

ಘನಶಿಶಿರೋಪಚಾರವಿ[1][ಧ]ದಿಂ ಹೃದಿಯುಸ್ಥಿತನಾದ ದೇವ ನೀಂ
ನೆನೆದಪಳಬ್ಜಚಂದನದಳಂಗಳಿನರ್ಚಿಸಿ ನಿನ್ನ ರೂಪಭಾ
ವನೆಯೊಳೆ ಕೂಡಿ ನಿನ್ನತುಳನಾಮಜಪಕ್ರಿಯನೈಷ್ಠಬಟ್ಟಿ[2]ಯುಂ
(ಅನಶನ)[2]ವಾಗಿ ಸಾಧಿಸಿದಪಳ್ ನಿಜದೇಹವಿದಾಹಮುಕ್ತಿಯುಂ ೪೮೫

ಪಗಲೊಳೆ ಚಂದದಿಂ ಮಲಗಿ ಹೂವಿನ ಹೊತ್ತಿನೊಳೆಟ್ದು ತನ್ನ ಮೆಯ್
ಮೊಗಮೊಳೆಯುತ್ತ ಕತ್ತುರಿಯ ಬೊಟ್ಟೊಡನಿಟ್ಟು ಚೆಂದ ಯವ್ವನೋನ್ನದಂ
ಜಗಕತಿರೂಪನುರ್ಕೆ ಗತರಾತ್ರಿಯ ಕೂಟದ ಕೊರ್ವು ನಿಪ್ರಿಯೋ
ಸೊಗಸಿನ ಸೊರ್ಕು ಸೋಡೆ ಮೊಗವಲ್ಲಿರಪೊರ್ಣಳಪೊತ್ತಿಗೆಯ್ದಿದಳ್ ೪೮೬.

---

[1]ಕ್ಷ(ಪ) [2]ನಾನನಿಶಯ(ಪ)

ನಿಗಳಪ್ರಣತ್ಕೃತಿಪ್ರಚಯವಾ ನೆಲನಳ್ಳಿಱಿಯಲ್ ತುಱುಂಬಿನಾ
ಸೊಗಸುವ ದಾನಕೆಱಗಿರ್ದಳಿ ಝೇಂಕೃತಿ ಘೋಂಕೆನೊಪ್ಪೆ ವು
ತ್ತ್ರಗಿಸುವೆ ಕೊಡಿಬರ್ಪ ವಿಟಜೋದರ ಹೊಂಗನೆಗೋಲ್ಗಳಿಂಚರಂ
ನೆಗೞ್ದಿರಲೊರ್ವಳಂಗಜನ ಪಟ್ಟದ ಮತ್ತಗಜಂಬೊಲೆಯ್ದಿದಳ್ ೪೮೭

ಘಟಕುಚೆಯೇನು ನಿಂದೆಯುಡಿಗೆಟ್ಟೊಡೆ ಕೆಟ್ಟುದನುಂಟುಮಾಡುವೆಂ
ವಿಟತನದಿಂದೆ ಮಾಡುವುದು ಸಲ್ಲದು ನಿನ್ನೊಳೆ ಸಂಮದೆಂಬುದಂ
ಕಟಕಿಗಳಿಲ್ಲದೇ ಸಖಿರ ಕೇಳ್ವುದು ಕೇಳಲವೇಕೆಯೆನ್ನ ಸ
ದ್ವಿಟತನಕೆಂದೊಡಾಕೆ ಮಿಗೆ ನಕ್ಕೊಡೆ ನಕ್ಕುದು ತತ್ಸಖೀಜನಂ ೪೮೮

ಹೂವಿನ ಕೋಲ ಹಸ್ತು ಬಲಗೆಯ್ಯೊಳೆ ಬಂದು ಜಿಡಂಗನೀಯೆಯಾ
ಕಾಸನ ಹೊಂತಕಾರ್ತನಸೊಳಾವೆಡೆ ಹೋರುವ ಹಾವಭಾವವೆ
ಯ್ದಾವರಿಸಲ್ಕೆ ತುಂಬಿಗಳ ಬಂಬಲವಾ ತಳಿಯುತ್ತೆ ನೆತ್ತಿಗೊ
ಲ್ವೋಪ್ಪುದು ಕಂಡು ಕೈವಿಡಿದು ಸಜ್ಜನವಾಸವನೆಯ್ದಿದಂ ವಿಟಂ ೪೮೯

ಪರಿರಂಭಾರಂಭಣದಾ
ಸುರಸಮಯದೊಳಂ ಮನೋಹರಂ ವ್ಯಾಜದೊಳಂ
ವಿರಹದೊಳಂ ತನ್ನಿನಿಯಂ
ಬರೆ ಕಂಡಾಯುಬಲೆಗೆಂತು ಸಿಲ್ಪವು ಬಳೆಗಳ್ ೪೯೦

ನಲ್ಲನು ಪೋದಪನೆನಲಾ
ನಲ್ಲಳ ಕೈಬಳೆಗಳೆಲ್ಲ ಘಲಘಲನುದಿರ್ದವು
ಯಿಲ್ಲಿಲ್ಲ ನಿಂದನೆನಲಾ
ಗಲ್ಲಿಯು ಕೈಬಳೆಗಳೆಲ್ಲ ಛಿಳಛಿಳಲೆಂದೌ(?) ೪೦೧

ಮೆಚ್ಚಿದ ಕಾಂತೆ ನಲ್ಲನೊಡನೊಲ್ದುರೆ ಮಾಡ್ಪ ಮಹಾರತೇಚ್ಛೆಯಂ
ದುಚ್ಚಹಮಾಗಿ ಸಾಸಿರಮದೆಂದೆನೆ ಕೊಡುತೆ ಕೂಡಿ ಸುಯ್ದು ಮೆ
ಯ್ವಿಚ್ಚಸಿರಲ್ ತದಾಪ್ತಸರಿದೆಂಬೊಡಾತನ ಮೆಯ್ಗೆಮೆಂಕೆ ಕೂ
ಡಚ್ಚರಿಯಿಂದ ತೋಱಲವರೀರ್ವರ ಕೂಟಮದೇಂ ವಿಚಿತ್ರಮೋ ೪೯೨

ಮೆಚ್ಚಿದನೆಂಬುದೇ ಸತಿಗೆ ಕೂಸಕಪೆನ್ನಯ ಜೀವಕಾಂತೆ ಕೇಳ್
ಬಿಚ್ಚದ ತಾಯನಾರಯದೆ ಜ್ಯೆವರನಾಲಿಸದೊಲ್ದು ಬಂದ ಪ್ರೊ
ನ್ನಿಚ್ಚೆಗೆ ಚಿತ್ತಮಂ ಕುಡದೆ ಹೆಚ್ಚಿನ ಮಾತುಗಳಿಲ್ಲಿದಾ ಪ್ರಿಯಂ
ಬಿಚ್ಚುವನಲ್ಲಿ ನಲ್ಮೆ ದಿಟಮಲ್ಲವೆ ನಲ್ಮೆಯು ಕರ್ಪೂರ ಬಿಳ್ಪೊ ಪೇೞ್(?) ೪೯೩

ಪ್ರಿಯ ನಿನ್ನಂದೊಡಗೂಡಿದಂದಿನ ದಿನಂ ತಾನಿಂದುಪರ್ಯಂತರಂ
ನಯದಿಂದಾ ರತಿಸೌಖ್ಯಮಂ ಪಡೆದ ಕಾಮಬ್ರಹ್ಮನಾ ಕೋಟಮಂ
ಜಯದಿಂ ರಕ್ಷಿಪ ಚೈತ್ರಮಾ ಪ್ರತಿ ಸುಸಿಲ್ಗಂ ಬರ್ಪ ವಿಘ್ನಂಗಳಂ
ಭಯಗೊಳ್ವಿಕ್ಕುವ ಪದ್ಮಪೈರಿಧರನಿನ್ನುಂ ಬಾಳಿಸ್ಗೆ ನಿತ್ಯತ್ವಮಂ ೪೯೪

ಪೊಸಪೊಸ ಮೆಯ್ಯ ಸುಣ್ಪ ಪೊಸಕತ್ತುರಿ ಕುಂಕುಮದಣ್ಪು ಚಂದದಾ
ಪೊಸಪೊಸ ಮಾಲೆಗಂಪು ಪೊಸಕಪ್ಪುರದಂಬುಲದಿಂಪುಮಾವಗಂ
ಪೊಸತೆನೆ ಮಾಳ್ಪ ಪೆಂಪು ಪೊಸಕೂಟದ ಸೌಖ್ಯದ ಸೊಂಪು ಜೆಲ್ಪಿನಿಂ
ಪೊಸಪರಿ ಸೂಳೆಗೇರಿಯೊಳಗಿಂತವರೀರ್ವರೊಳುಂಟು ನಿಚ್ಚಲುಂ ೪೯೫

ಸವಿಯೆಲ್ಲಂ ತನು ಸುಣ್ಪವೆತ್ತ ತನುವೆಲ್ಲಂ ಸೌಖ್ಯಮಾ ಸೌಖ್ಯಮೆ
ಲ್ಲವನೀ ಮೋಹನಮೆಯ್ದೆ ಮೋಹನಮುಮೆಲ್ಲಂ ವಶ್ಯಮಾ ವಶ್ಯಮೇ
ಯುಮೆಯುಂ ಮುಚ್ಚಿಸದೆಲ್ಲರಂ ಬರಿಪ ಮಂತ್ರಂ ಮಂತ್ರಮೆಲ್ಲಂ ಧನಂ
ತವೆ ಸಂದಿರ್ಪ ಧನೌಘಮಿವಳೀ ಕಣ್ಸನ್ನೆಯೊಳ್ ಬಾರದೇ ೪೯೬

ಈಕೆಗೆ ಸಂದ ಸಲ್ಲನಿವಳಿಕ್ಕೆಯೊಳೊಲ್ದಿರೆಯೊರ್ವನೊತ್ತೆಯುಂ
ಜೋಕೆಯ ದೂತನಿಂ ಕಳುಪಲಂತದನಾ ಮನೆವೆಣ್ಗಳೀಕೆಗಂ
ತಾಕಿಸೆ ಗೋಪ್ಯದಿಂದಜಃಪ್ರತಾತನ ಸ್ಯೈಗುರೆ ಪುಷ್ಪಮಾಲೆಯುಂ
ನೂಕೊಡವೇಟ್ದು ಪೋಗಲವನೊತ್ತೆಯ ನಾಂ ತಳೆದೇಂ ಸುಜಾಣೆಯೊ ೪೯೭

ಸೂಳೆತನಕ್ಕೆ ಸೂಮುಳಿಪರಕ್ಕಟ ನೀಂ ಸಲೆ ನೀಜರಾದವರ್
ತೋಳೊಳಗಿರ್ದ ಕಾಲದೊಳೆ ತನ್ನವಳೆಂದಿರವೇಟ್ಕು ಸೂರುಳಿಂ
ಸೂಳೆಗೆ ಕೇಡು ತಾನದನೆ ತೊಟ್ಟನೆ ತಪ್ಪಿ ಬರ್ದುಂಕು ಭಾವಿಸಲ್
ಸೂಳೆಯೆ ಮಾರಿ ಮಾರಿಗೆ ಕರಂ ಸಲೆ ಮಾರಿಯದುಂಟೆ ಲೋಕದೊಳ್ ೪೯೮

ಇಂದಿರನಾನೆ ಸೂರ್ಯರಥಕಿಕ್ಕಿದ ತೇಜಿಗಳೆಯ್ದೆ ಬಾಗಿಲೊಳ್
ಚಂದದಿ ಕಟ್ಟಿ ಕೌತುಕದಿ ಮೇಯುತಿರಲ್ಕೆ ವಿಟಾಳಿ ಕಾಣುತೀ
ಸೌಂದರಿಗಾವುದೊತ್ತೆ ಯಿವಳಾರ ನಿರೀಕ್ಷಿಪಳಾರನೊಲ್ದಪಳ್
ತಂದೊಡನೀಯೆ ಪೆರ್ದೊರೆಜಃಯ ಮರ್ದಿನ ಗಾದೆಯನಾಡುತೆಯ್ದಿದರ್ ೪೯೯

ಊರ ಭುಜಂಗರೆಲ್ಲಮಜಃ ಜೇಟ್ಪುದನಿತ್ತಪೆನೆಂದು ಕೇಳಿಸಲ್
ದೂರದ ರಾಜಪುತ್ರರಿರದೆಯ್ದುತಲೊತ್ತೆಯಮೇಲದೊತ್ತೆಯುಂ
ಸೇರಿಸಲಾ ವಿಟಾಳಿ ಮುನಿದೀ ಪುರಮಂ ಬಿಸುಟಿಪ್ಪ ಸಿದ್ಧರೊಳ್
ಸೇರಿರಲಕ್ಕವೆನ್ನ ಮಗಳಿಂತಹಳೋ ಸಲೆ ಸೂಳೆಗೆಯ್ತದೊಳ್ ೫೦೦

ನಿಂದಾಂ ಪೋದೊಡೆ ನೋಡಳೊಂದಿನಿಸು ನೋಡಲ್ ಕೂಡೆ ಮಾತಾಡಳೊಂ
ದಂದಕ್ಕಿಕ್ಕಿದ ಮಾತನಾಡಳವಳೆನ್ನಂ ಸೋಂಕಳಾ ಸ್ವೈಪಿನಿಂ
ಬಂದೆಂ ಸೋಂಕಿಪೊಡಪ್ಪಳಪ್ಪಿ ಮಿಗೆ ಬಾಯ್ಗೂಡಳ್ ಮನಂಗೂಡಳಾ
ನಂದಂಚಿತ್ರ ರತಕ್ಕೆ ಸಮ್ಮತಿಸಳಾ ಬಿಬ್ಬೋಕವಂತಾಕೆಯೊಳ್ ೫೦೧

ನಡೆಯೊಳಗೆನ್ನನಿಂದು ಬರವೇಳ್ದಿವೊಲಿರ್ದುದು ಕೊಂಕುವಾತು ತಾಂ
ಜಡದಿರದೆನ್ನನೊಲ್ದು ಕರೆವಂತೆವೊಲಿರ್ದುದು ನೋಟ ದೊರೆ ತ
ನ್ನೊಡನೆರವಿರ್ಪುದೆಂದೆನಗೆ ಸೂಚಿಪ ಮಾಟಿಕ್ಕೆಯೊಲಿರ್ದುದೆಂದುಮಾ
ಕಡು ಬೊಜಗಾಳಿ ಭಾವಿಸುವವೋಲ್ ಸುಚಿತಪ್ಪುದು ಸೂಳೆಯಾದವಳ್ ೫೦೨

ನೋಟಕೆ ಕೂಡೆ ನೋಡಿ ತಲೆವಾಗದೆ ತನ್ನಯ ನೋಟದಾಸೆಯಂ
ಪಾಟಿಸದೆಯ್ದೆ ನೋಳ್ಪವರ ಮೆಲ್ಲೆರ್ದೆ ಜಗ್ಗನೆ ತೊಟ್ಟು ನೋಡದಾ
ನೋಟದ ಲೇಸುಗಂಡು ಸಲೆ ನೋಟವನಿಕ್ಕದೆವೊಂದು ನೋಟಮಂ
ಕೋಟಿ ತೆಱಕ್ಕೆ ತಾರದೊಡೆ ಸೂಳೆಗೆ ಸುಮ್ಮನೆ ಬರ್ಪರೇ ವಿಟರ್ ೫೦೩

ತೀವಿದ ಸೀಯದೊಂದು ಸೊಗಸೊಲ್ದುಱ ಮಾಳ್ಪ ಶತಾಪರಾಧಮಂ
ಭಾವಿಸಿ ಪೇಳ್ದನಾಪ್ತ ಸಖರಂ ಜಱವಂತುಟುಮಾಡಿ ಹೆಚ್ಚು ಕುಂ
ದಾವುದುವಿಂದೆ . . . . ಡುರೆ ಬಲ್ಮೆನೆಗಾಱರೆಂಬವರ್
ತಾವದನೇನುಮಂ ಬಗೆಯದಿರ್ದೊಡನಾಕೆಯೆ ಸೂಳೆ ಲೋಕದೊಳ್ (?) ೫೦೪

ರಾಜಿತರಾಜಕೀರ ಪರಮೇಶ್ವರ ಬಂದೆಯ ಬಂದೆನಕ್ಕ ಕೇ
. . . . . ಲ್ಲಭನ ಗಲ್ಲಕೆ ಪಾಯ್ದೊಡನಾತನೀಕೆಯಾ
ಕೂಜಿಪ ಕಂಠವಲ್ಲಿ ಮಣಿಮಾಲೆಯನಿಟ್ಟವಳಾಗಧೀಶನಾ
ರಾಜಿಪ ಬಾಹುವಲ್ಲಿಯೊಳೆ ಕೆಂದಳಿರಾಗಿಪಳಿರ್ವರಾಟಮಂ
ಯೋ . . . . . ಚ್ಚು ಕಡಿದಾಟಮಾದುದು ಪೋದ ರಾತ್ರಿಯೊಳ್ ೫೦೫

ಕೊಂಕಿದ ಕುಂತಳಂ ಮಿಱುಪ ಸುಣ್ಣೊಸಲೊಪ್ಪುವ ಚೆಲ್ಲಗಂಗಳಂ
ಬಿಂಕದಿ ತಿಣ್ಣನಪ್ಪ ಮೊಲೆ ಬಳ್ಕುವ ತೆಳ್ನಡು ವಿಂದಣಾಯತಂ
ಮಂಕದ ಸ್ನೈಕವಂದದ ಪದಂ ನಿನಗಕ್ಕ ಬೆಡಂಗಿವೆಂದು ಚಾ
ಣಾಂಕಿಯನೇಂ ಕರಂ ಸಲಹುತಿರ್ದಳೊ ಕೀರ್ತಿಸುತೊಂದು ತಾಣದೊಳ್ ೫೦೬

ನೆರೆಯದೆ ಪೋದಡೊಂದಱುಯೆನೆನ್ನಯ ತನ್ನಿಪ್ಪಯನಾವನಾದೊಡಂ
ನೆರೆದೊಡೆ ಶಂಭುವಾಗದೆ ರಮಾಪತಿಯಾಗದೆ ಭಾವಿಸಲ್ಕೆ ತಾ
ನುದು ಪರಮೇಷ್ಠಿಯಾಗದೆ (ಸುರೇಶ್ವರನಾ) ರವಿಚಂದ್ರರಾಗದಾ
ಪರಮ ವಸಂತನಾಗದಿರನೆಂಬಳ ಮಾತುಗಳೇಂ ವಿಚಿತ್ರಮೋ ೫೦೭

ಪುಸಿ ನುಸುಳೊತ್ತು ಜೊತ್ತು ಮದ ಮಾಯು ಕಲಂಕುಱಿ ಕೊಂಕು ಬಿಂಕವೊ
ಳ್ಪುಸಿ ಪುರುಡಕ್ಕೆ ಕಕ್ಕುಲಿತೆ ವಂಚನೆ ಸಂಚು ಠವಾಳ ಠಕ್ಕು ಮೆ
ಕ್ಕಸಿ ಪರಿ ಗನ್ನ ಚುನ್ನ ಮುಱಿ ಮೂದಲೆ ಕುತ್ತುದ ಪೊತ್ತು ಮುಂಡು ಭಂ
ಡಿಸೆ° ದಿರೆ ಸಂದ° ಭಾಗ್ಯದ ಪದಸ್ಥೆಯರೊಪ್ಪಿದರಲ್ಲಿ ಚೆಲ್ವಿನಂ(?) ೫೦೮

ಶಶಿವನದಲ್ಲಿ ಮಾಡಿಸಿದ ಪಜ್ಜೆಯ ಪಂದಲ ಹಂತಿಗೊಂಡ ಹೂ
ಹಸೆಗಳ ಮೇಲೆ ಸರ್ವವಿಟವೇಶಿಯರಂ ಬರಸಿಂಪಸೂಟಮಂ
ಪಸರಿಸಿ ಯಕ್ಷಕರ್ದಮಮನಿತ್ತು ಸುದಂಬುಲಗೊಟ್ಟು ಮುಂದೆ ದಲ್
ಪಸದನವಿತ್ತು ಪಂಚಶರಪರ್ವವನಾಗಿಸಿದಳ್ ವಿಳಾಸದಿಂ ೫೦೯

ಪೂಸಿದ ಗಂಧತೈಲಮದನಾ ಪಸಿನೀರೊಳೆ ಕೂಡಿ ಮಿಂದು ದಿ
ವ್ಯಾಸಮ ವಾಸವುಟ್ಟು ಸಕಲಾಭರಣಂಗಳ ತೊಟ್ಟು ಬೇಗ ಮೇ
ಣಾ ಸವಿಮೋಜುಮಿಂಪುಣಿಸನುಂಡು ಮರಾಳದ ತೂಲತಲ್ಪದೊಳ್
ಪೂಶರರೂಪನಂ ಬರಸಿ ಸೌಖ್ಯದೊಳಾವಗಮೊರ್ವಳೊಪ್ಪಿದಳ್ ೫೧೦

ಕಾವನನಾದೊಡಂ ಸುೞಿಸೆ ನೋಡದೆ ಸುಮ್ಮನೆ ಸೋಂಕದಿರ್ಪ ಮಾ
ದೇವನನಾದೊಡಂ ಬಯಸಿ ನೋಡಿ ಪರೀಕ್ಷಿಸದೊರ್ಮೆ ಕೂಡದಿ
ಪಾರ್ವನುಮಾದೊಡಂ ಪ್ರಿಯದಿ ಕೋಟಿಯನಿತ್ತತಿದೂತರಟ್ಟಲಾ
ಭಾವಸಿ ನೋಡದೆ ಬರಿಸದಿರ್ಪ ಪದಸ್ಥೆಯರೊಡ್ಡಿತೆಂತುಟೋ ೫೧೧

ಸನ್ನುತ ವಜ್ರಪಂಜರವ ತಾಂ ಪೊಱಮಟ್ಟು ಸುವರ್ಣಯಷ್ಟಿಯಂ
ಕನ್ನಡವಕ್ಕಿ ಸಾರ್ದು ಮಣಿದೀಪಿಕೆ ಮುಂದಿರೆ ಕಾಮಶಾಸ್ತ್ರಮಂ
ನನ್ನಿಯಳೋದಲೊಂದು ನೆರೆ ಕನ್ನಡವಕ್ಕಿ ಪದಾರ್ಥಮೆಲ್ಲಮಂ
ಕನ್ನಡಿಸಲ್ ಪದಸ್ಥಗಣಿಕಾಕುಲಮೊಲ್ದುಱಿ ಕೇಳ್ವುದಾವಗಂ ೫೧೨

ಉಡುವನನಕ್ಕ ಕಂಡೆಂಪಿನೆ ಕೇಳಿಪೆಯಾ ಮಧು ಬಂದನೆಂದೆನಲ್
ನುಡಿಯುವೆ ಮಂದಮಾರುತನಮಂ ಸುೞಿದಾಡುತಲಿರ್ದನೆಂದೆನಲ್
ಮಿಡುಕದೆ ಸುಮ್ಮನಿರ್ಪತನು ಬಂದಪನೆಂದೊಡನಾರನಾದೊಡಂ
ತಡೆಯಿರಿ ಯೆಂಬ ಗರ್ವದ ಪದಸ್ಥೆಯರಾ ಜೊತೆಯಲ್ಲಿಯೊಪ್ಪುಗುಂ ೫೧೩

---

°ದ ರಾಜ್ಯದ(ಸ)

ಪುರುಷರ ಸಂದ ಜಾಣ್ಮೆಯದು ಪೆಣ್ಗಳ ಮುಗ್ಧತೆಗೆಯ್ದದೆಂತೆನಲ್
ತಿರಸನಿಯಾದ ಸತ್ವದ ಪದಾರ್ಥದೊಳಾವುದು ಜಾಣ್ಮೆ ಜಾಣರಾರ್
ಸುರುಚಿರ ಜಿಹ್ವೆಗೆಯ್ದಲದು ಮೂರ್ಛಿಸದೇ ಕಿಱುಗಾಟಿಪೆತ್ತ್ರದೇ
ಗುರುತರ ಮತ್ಸ್ಯಮುಂ ಸತಿಯ ಮೂಢತೆ ಬಾಲ್ಯತೆ ನೋಡೆ ಜಾಣಹೋ ೫೧೪

ಕೆಳೆಯರ ತಂಪು ತಂದು ಸಲೆ ಸೂಳೆಯ ಪೆರ್ಮನೆಗೂಡಿ ತತ್ಸಖೀ
ಬೆಳಗುವ ಬೀದಿಯೊಳ್ ಬರುತ ದೂರದೊಳೊರ್ವನ ಮೇಲೆ ನಿಟ್ಟಿಸು
ತ್ತ್ರೀಳೆಗಿಱಿತಂದಸಿಂದುವೆನುತಾಗಸವಿಟ್ಟಿಸಲಲ್ಲಿ ಚಂದಿರಂ
ತೊಳಗೆರಡಿಂದು ಮೂಡೆ ವಿಟರಾಜರ ಕೇಡಿದುವೆಂದರಾ ಸಖರ್ ೫೧೫

ಆವನಾರ್ ಪೋಪವನಾರ್ ವಸಂತಕನವಂ ಮುಂಪೆಯ್ದಿ ಪೋಪಾತನಾರ್
ಪವನಂ ಚಂದದೆ ನಿನ್ನ ಮುಂದೆ ನಡೆದೆಯ್ತಪ್ಪಿತನಾರಂಗಜಂ
ತವೆ ಪುಸ್ತಾಗ್ರದೊಳಾರವಂ ಶಶಿ ಭಲಾ ನೀವೆತ್ತ ಪೋದಪ್ಪಿರೇಂ
ಜಗದಿಂ ಯೋಗಿವಿಯೋಗಿಯೆಂಬರಱಿಸುತ್ತೀ ಬೀದಿಯೊಳ್ ಬಂದಪ್ಪೆ ೪೧೬

ಚೆಲ್ಲುವ ರತ್ನದೀ ಸುರಪಗೋಪಮುದಾಗಿರೆ ಸೂಸುವುತ್ತ್ರು ತಾ
ನೆಲ್ಲೆಡೆಯಾಲಿಕಲ್ಲ ತೆಜನಂತಿರೆ ಮುಂದಣ ಪೊನ್ನ ರಾಶಿಯುಂ
ನಿಲ್ಲದೆ ಸೋವದಿಂ ಕೆಳಗೆ ತಾಂ ಸುರಿಯಲ್ಕದು ವೃಷ್ಟಿಯಾಗಲಾ
ನಲ್ಲನನೊಲ್ಲೆನೆಂದು ಮಘವ್ರೊಳ್ ಮಱಿಗಾಲಮನಂಟುಮಾಡಿದಳ್ ೫೧೭

ಸ್ಮರವರಶಾಸ್ತ್ರವಲ್ಲದುಱಿದಾದುವನೋದದ ಮನ್ಮಥೇಶನಂ
ಸ್ಮರಿಸುವ ಮಂತ್ರವಲ್ಲದಿತರೇತರ ಮಂತ್ರವನೊರ್ಮೆ ಮೋಸದಿಂ
ಸ್ಮರಿಸದ ಕಾಮಲೀಲೆಗಳನಲ್ಲದೆ ಮಿಕ್ಕುವನೆಂದು ಕೇಳದಾ
ಪರತರ ವೀರ ಕಾಮಿನಿಕರಂ ಮೆಱೆದಿರ್ಪುದದೊಂದು ತಾಣದೊಳ್ ೫೧೮

ಮಿಸುನಿಯೊಳೆಯ್ದಿ ತಿದ್ದಿ ಕರುಗುಟ್ಟುತೆಯುಂಗಜನೆಂಬ ಕಾರುಕಂ
ಪ್ರೋಷವಿರಹಾಗ್ನಿಯಿಂ ಶಶಿಯ ಕಾಸಿ ಕರಂಗುತೆ ಸೌಂದರೌಘದೊಳ್
ಮಿಸುಗುವ ಸಾರಮಂ . . . . . . ಹದಪ್ರೋಡದೆ ಕೂಡೆ ತೀರ್ದನೆಂ
ದಿಸುತೆಜದಿಂದೆ ದಿವ್ಯಗಣಿಕಾಜನದಂಗಮದೊಪ್ಪಿ ತೋಱುಗುಂ (?) ೮೧೯

ಮೂಜಗದಚ್ಚಮೋಹನದ ಮೂರುತಿಯೋ ಮಕರಾಂಕಕೋಟಿಗಳ್
ಭ್ರಾಜಿಪ ಸತ್ಕಲಾದಿಕುಲದೇವತೆಯೋ ಸುಖರತ್ನಸಂಚಯಂ
ರಾಜಿಪ ಪೊಂಗರಂಡಿಗೆಯೊ ಸರ್ವರ ಮೋಹಿಸುವಿಂದ್ರಜಾಲದಾ
ಸೋಜಿಗಮೋಱಿಸಲ್ಕೆ ಮೆಱೆದಿರ್ಪುದು ದಿವ್ಯವಧೂಟಿಕಾಜನಂ ೫೨೦

ಶಿವಶಿವ ನೋಡಲೆಲ್ಲರ ಮನಂ ನಿಜಚಿತ್ತಮದಾಗಿ ಮನ್ನಿಸು
ತ್ತವಿರಳಭೋಗಮಂ ಸಖಿ ಸಖೀಜನದೊಳ್ ಸಮನಾಗಿ ಭೋಗಿಸು
ತ್ತವರಿವರೆನ್ನದೆಲ್ಲ ಜನದಿಂದಿವಳೊಳ್ಳಿದಳೆಂಬ ಕೀರ್ತಿಯು
ದ್ಭವಿಸಿರೆ ದಿವ್ಯವೇಷೆ ಸುಗುಣಾರ್ಣವಭಾಸಿ ವಿಳಾಸಿಯೊಪ್ಪಿದಳ್ ೫೨೧

ಓದದೆ ಬಂದ ಸತ್ಕಲೆಗಳಿಂ ಸಲೆ ಮೀಯದೊಡೊರ್ಮೆ ಮಾಸದಾ
ಮೋದದ ಕೇಶಭಾರದೆ ಸುಗಂಧದನಣ್ಪಿಡದೆಲ್ಲ ಮೆಯ್ಯೊಳಂ
ವೇದಿಸಿ ತೋಱುತಿರ್ಪ ನಿಜಗಂಧದೆ ಪುಟ್ಟಿದ ವೇಳೆಯಲ್ಲಿ ತಾ
ಯೋದಿಸಿ ತಿರ್ದದೇ ಮೆಱೆವ ಸುಂದರದಿಂ ಸುರಕಾಂತೆಯೊಪ್ಪಿದಳ್ ೫೨೨

ಮೊಲೆಗಳ್ ಮೋಹನದೇಶದಚ್ಚಬಲೆಗಳ್ ಶೃಂಗಾರಸಂಪತ್ತಿನಾ
ನೆಲೆಗಳ್ ನೋಟಕದಿಟ್ಟಮೀನ್ಗೆ ಬಲೆಗಳ್ ಸ್ತ್ರೀಸ್ಪರ್ಶನಾನಂದದಾ
ಕಲೆಗಳ್ ಮನ್ಮಥನಾರ್ಪುಗೊಂಬ ಬಲೆಗಳ್ ಮೂಲೋಕದಾ ಮೋಹದಾ
ಶಿಲೆಗಳ್ ತಾವೆನಲೊಪ್ಪುತಿರ್ಪ ಯುವತೀಸಂದೋಹಮೇಂ ಬಂದುದೋ ೫೨೩

ಮುರಹರಸೂನುಸನ್ನಿಭ ದುಕೂಲವಿರಾಜಿತ ಚಾರುಮೌಕ್ತಿಕಾ
ಭರಣ ಕವೀಂದ್ರನಪ್ಪ ನಿಜದೂಸಱನಿಂ ಪರಿಭಾವಿಸಲ್ಕೆ ನಾ
ನೆರೆವುದಕಿಲ್ಲ ಪುಣ್ಯತನಗೆಂದವಳೊಪ್ಪದೆ ಪೇೞಲೊರ್ವನಂ
ತರದೊಳೆ ಲಜ್ಜೆ ಪುಟ್ಟೆ ತಲೆವಾಗುತೆ ಪೋದನದೇಂ ವಿಚಿತ್ರಮೋ ೫೨೪

ನಂಬಿದರಲ್ಲಿಗಿಂಬುಗುಡದಗ್ರಣಿಯುಷ್ಟವಧಾನಿ ನಿತ್ಯವಿ
ಜೃಂಭಣವಾಕ್ಯಪೂರದತಿಬಂಧವಿನೋದಕ ಕೂರುಗುರ್ಗಳೊ
ಳ್ಪಿಂ ಬಲುಗ್ಗೆಯ ಜಾಡ್ಯಹರ ಸರ್ವರಿಗಂಜುತೆ ಬಾಯ ಮುಚ್ಚದಾ
ಡಂಬರನೀತನೆಂದು ವಿಟನಂ ನುತಿಗೆಯ್ದಳದೊರ್ವಳಾಳಿಯೊಳ್ ೫೨೫

ಸುರಭಿಶರಂಗಳಂ ನಯನದೊಳ್ ಕುಡಿವುರ್ವಿನೊಳಿಕ್ಷುಚಾಪಮಂ
ಪರಿಚಿತಮೀನಕೇತನಮನಾವಗಮೊಪ್ಪುವ ಕೇಶಹಸ್ತದೊಳ್
ನಿರವಿಸಿ ಜೈತು ಮೈಗಱದು ಶೂಲಧರಂಗಗಿದಿರ್ಪನಲ್ಲಿ ಪೆಂ
ಡಿರ ಮನೆಯೊಳ್ ಮನೋಜನೆನೆ ಜೆಲ್ವೆಸೆದರ್ ಕಡುಗಾಡಿಕಾರ್ತಿಯರ್ ೫೨೬

ಹತಬಲನಾಗಿ ವಜ್ರಧರನಲ್ತು ಪಯೋಧಿಕನಾಗಿ ತಾರ್ಕ್ಷ್ಯನ
ಲ್ತತಿಜಡಭಾವಿಯಾಗಿ ಕಡಲಲ್ತು ನಿಜಕೃತಿಹೀನನಾಗಿ ಮಾ
ರುತಭುಕುವಲ್ತು ದಂಡಧರನಾಗಿ ದಿಟಂ ಜವನಲ್ತು ನೀರದ
ಸ್ಥಿತಿಗವಕಾಶನಾಗಿ ಗಿರಿಯಲ್ತೆನೆ ವೃದ್ಧನದೇಂ ವಿರುದ್ಧನೋ ೫೨೭

ಸುದತಿಯರಾನನಾಂಬುಜನನಕ್ಕೆ ಹಿಮಂ ನಯನೋತ್ಪಲಕ್ಕೆ ಸಿಂ
ಗದ ಬಿಸಿಲಂಗವಲ್ಲಿಗೆ ರೌದ್ರದವಾಗ್ನಿ ಮನೋಗಜಕ್ಕೆ ಸಿಂ
ಗದ ದನಿ ರಾಗನಾಗನಿಚಯಕ್ಕೆ ನವಿಲ್ ಪ್ರಣಯಪ್ರಕೋಪನೀ
ರದಕೆ ಸಮೀರನಲ್ತೆ ರತಿಲಂಪಟವೃದ್ಧನ ಭೋಗದಾಗ್ರಹಂ ೫೨೮

ಕಠಿಣತೆ ಸಲ್ಲದೆಂದು ಮೃದುವೊಳ್ ತನುವಾಗಿಸಿ ಕೃಷ್ಣಭಾವಮಂ
ದಿಟದೊಳೆ ನೆತ್ತಿಯಿಂದಿಱುಪುತಾ ಶಿವಭಾವಮನಾಂತು ಸಂತತಂ
ಶಠತೆಯ ಜಿಹ್ವೆಯೊಳ್ ನೆಱೆದನೆಂಮರದಾಳಿಯನೊಂದು ನೂಂಕಿದಾ
ಮಠದ ಮಹಾರ್ಯರೊತ್ತೆಗೊಡಬಂದಿರಿ ಯೆನ್ನಯ ಪುಣ್ಯಮೆಂತುಟೋ ೫೨೯

ತೊಡೆಯೆಸೆದೌಂಕಿ ಮೆಟ್ಟಿ ಮಿಗೆ ಜೊಳ್ಳಿನ ಮೀಸೆಯ ಕಿಳ್ತು ಕೈಯೊಳಂ
ಮಡಗುತೆ ಜೋಲ್ವ ಗಳ್ಳನಲುಂಗುತೆ ಕರ್ಣಮೊಳೊತ್ತಿ ಕೂಗುತುಂ
ನಡುಗುವ ಮುಷ್ಟಿಕಕ್ಕವಿರಳಾಂಗುಲಿಯರ್ಪಿಸುತಾರ್ದ್ರನೇತ್ರದಾ
ಕಡುಪರೆಯೆತ್ತುತಂ ತರಳೆ ವೃದ್ಧನನೇಂ ಕಪಿಮಾಡಿ ಕಾಡಿನಳ್ ೫೩೦

ಹತ್ತಿದ ಗಲ್ಲ ಸಬ್ಬಸದ ಬಂಗುವೊಗಂಗೀ ನಳಿಮೂಗು ಗುಂಗುರುಂ
ಮುತ್ತುವ ಕಣ್ಣೆಟಿಲ್ವ ತುಟಿ ನಾಱುವ ಜೊಲ್ಲಿನ ಜೋಡುನಾಯಿ ಮೆ
ಯ್ವೆತ್ತಿ ಸುರುಳ್ದ ನಾಯಿವೊಲೆ ಮುಂಕರಿಮೊಟ್ಟೆ ಜಗುಳ್ದ ತೋಳ್ಗಳಿಂ
ದೊತ್ತೆಗೆ ಬಂದು ನಿಂದು ಮುದಿಮೂಳೆ ವಿಟರ್ಕಳ ಸನ್ನೆಗೆಯ್ವುತಂ ೫೩೧

ಹರೆಯಮುದಾವಗಂ ಹಿರಿದು ಸದ್ಗುಣಮೇ ಕಿಱುದಾಸೆಯೆಂಬುದೇ
ಪರಿಕಿಸೆ ದೊಡ್ಡಿತಪ್ಪ ವಿನಯಂ ಸಣ್ಣಿತು ಚುಂಚುಗುಯ್ವುದೇ
ಧರೆಯನತೀವ ಲೇಸು ಪರಮಾಣುವ ಭಾಷೆಯೆ ಕೋಟಿ ನನ್ನಿಯೊಂ
ದರೆನಮೋರ್ಪ ಜಿಳ್ದಳೆಯ ವೃದ್ಧೆಯರೊತ್ತೆಗೆ ನಿಂದದಮ್ಮುತಂ ೫೩೨

ಪಡೆವೊಡೆ ಪುತ್ರಿಯಿಲ್ಲ ದುಡಿದಿಕ್ಕುವ ದಾಸಿಯು ಮುನ್ನವಿಲ್ಲ ಮೇಣ್
ಪಡೆದುಡೆ ಜೆಲ್ವನಪ್ಪ ಮಗ ತೊಳ್ತುತನಂ ತಮಗಾಗೆ ವೊತ್ತೆಯುಂ
ಪಡೆವೊಡೆ ವೃದ್ಧೆಯರ್ ತರದೆ ನಿಂದುದು ಸತ್ವಮದಣ್ಣ ನೋಡಿದು
ಕಡು ಹಿರಿದಿರ್ಪ ಕಕ್ಕುಲಿತೆಯಿಂ ಪುದಿಗಾವುದಿವರ್ಗೆ ತಕ್ಕುಮೋ ೫೩೩

ಶಿರದೊಳ್ ಸತ್ವಗುಣಂ ತಾ
ನಿರೆ ನಿನ್ನೀ ಚಿತ್ತದಲ್ಲಿ ತಾಮಸಗುಣಮಿರೆ
ಪರಮರಜೋಗುಣಮೊಂದು
ಬಿರಿಯುರೆ ಬಹುಕಾಲದಿಂದೆ ತೊಱೆದನು ಪಾಪಂ

ಮೊಲೆಗಳ್ ಬೀೞ್ದುವಿದೊಪ್ಪದೆಂದು ಮನದೊಳ್ ಚಿಂಬೀೞ್ದುದಿಲ್ಲೆಯ್ದೆ ಮುಂ
ದಲೆ ಬೆಳ್ಪೇಱಿದುದೆಂದು ನೊಂದು ಮನದೊಳ್ ಬಳ್ಕಿರ್ದುದಿಲ್ಲೆಯ್ದೆ ಮು
ಪ್ಪಲೆದಾರ್ಪಂಡಪ್ಪೊಲಾಗೆ ಮತ್ತಮೆನಗಂ ಮೆಯ್ಸ್ಪೇಳಮುಂ ತೋರ್ಪ ನಾ
ಣ್ಚಿಲಿಯುಂ ನೋಡಪ್ಪೊ ವೃದ್ಧೆಗೆನ್ನ ಜೊಱೆಯರ್ ಮೊಸ್ಕ್ರಕ್ಕಳಿಲ್ಲಾಗರೇ ೫೩೫
(ಸೂಕ್ತಿಸುಧಾರ್ಣವಂ ೮-೩೮೮)

ಬಾರ ಭುಜಂಗರಾಜ ಬರಲೇಕೆ ಪುರಾಣಧುರೀಣೆ ಪೊತ್ತೆಯುಂ
ತಾರ ವಯಸ್ಕೆಯೀಪುರದ ಮುಂದಣ ಕೆರ್ಮರಸೆಂದು ಪುಟ್ಟಿತಂ
ದಾರಯಿ ಪುಟ್ಟಿದಾ ನಿನಗಮೊತ್ತೆಯಿ ಪೊತ್ತೆ ಸುಜೀರ್ಣಪಾರಿಗೇಂ
ಕೂರಿಸಿಯೊತ್ತೆಗೊಟ್ಟರೊಳರೇ ಮಧುಪಾರಿಗೆನಲ್ಕೆ ನಾಣ್ಚರೇ(?) ೫೩೬

ಶಿರಕರಿದಾರಸೇರಿದುದು ಬಾಯ್ಲಿಱಿದಂಬುಲಿವಾರ ತಂಬುಲಂ
ನರಕುಚಚರ್ಮದೊಳ್ಪೊರಜೆಯುಸಿಲ್ಲ ಮುಮುಳ್ಕಿದೆಯುಮ್ಮ ನಿನ್ನನಾರ್
ಕರವಿಡಿದೆಬ್ಬಿ ಸುತ್ತೆ ಪುಡಿಯಲ್ಲಿಗೆ ತಂದವರಾರು ಮುಪ್ಪಿನೊಳ್
ನರವಿಟನೊತ್ತೆಗೊಟ್ಟು ಬರಲೇಂ ಮಸಿದಿಂಬಸೆ ಬಾಪು ಬಾಲಕೀ ೫೩೭

ನೆಱೆ ನರೆಗಂಡು ತುಂಬಿಮಸೆಯುಂ ಪರಿದಿಕ್ಕಿದನಿಂದು ಮುಸ್ಕ್ರಥಂ
ಸೆಱೆ ಬಿಡೆ ಜರ್ವುಗೆಟ್ಟು ಮಿಗೆ ಪುರ್ವನೆ ಕಂಡಿನಿವಿಲ್ಲನೆಲ್ಲಮುಂ
ಮುಱಿದನಸಂಗನೀ ಪರಿ ಪುದುಂಗಿದ ನಿನ್ನಯ ದಿಟ್ಟಿಗಂಡು ಹೋ
ಬಿಱುಸರಳಂ ಬಿಸುಟ್ಟನಕಟೀಗಳಿನಲ್ ಪ್ರತಿಮೇೞ್ವುದೆ ವೃದ್ಧೆ ಪೇಸದೇ ೫೦೮

ಪಿಡಿದೊಡೆ ಮುಂಗುರುಳ್ ಪದೆವ ಕೈಗಳಿಯಾಗಿದೆ ನಿನ್ನ ವಕ್ತ್ರಮುಂ
ಪಿಡಿದಲುಗಲ್ಪೊಟಕ್ಕು ಲೊಟಕೆಂಬುದನೆಮ್ಮೊಳಿ ಪೇೞುತಿರ್ಪನಂ
ಪಿಡಿಪೊಡೆ ಸತ್ಕುಚಂ ಬೆರಳ ಸಂದಿಗೆ ಸದ್ಗುಣದಂತೆ ಪೋಪಿನಂ
ಕಡು ಮುದುಪಾದ ಮತ್ತೆ ಮತ್ತೆ ಹಡದುಂಬುದಱಿಂ ಸಲೆ ಸಾಯಸಲ್ಲದೇ ೫೩೯

ಬಾಯ್ದೆಱೆಗೊಂಬುಗಳ್ಕಿ ಭಮುಖಕ್ಕೆಱೆಯಾದಳನೊತ್ತೆಗೇಳಲಾ
ನೆಯ್ದಿಡನಾಕೆ ಜೊಬ್ಬೆ ಬೊಜೊಯೆಂದೊಡೆ ಮೇಲುದನಾಯ್ದೆನಾ ಕುಚಂ
ಪಾಯ್ದು ನೆಲಕ್ಕೆ ಬೀೞ್ದು ಜಗರಂಬೊಲಡೆನ್ನಡಿಗುರ್ಚಿ ಬರ್ಪಿನಂ
ಬಯ್ದುಱಿ ಸೀರೆಯುಂ ಸೆಳೆಯುಯಾಮೊಳೆಯುಟ್ಟೊಡನೊಂದನಾಂತಳೋ ೫೪೦

ಮುಸುಡಂ ತಾಂ ಮಱಿವಪಾಡಿ ಪಿಂತೆ ಸೊಡರಂ ಬೈತಿಟ್ಟು ಬಲ್ಲಿಂತಿಮ
ಬ್ಬಸದಿಂದಂ ಕೊಳೆ ರಾಗಮುಂ ಬಗುಳುತಂ ಗಂಡೆಂಬ ಸಂದೇಹಮುಂ
ದೆಸರಂ ತೋಱಲು ಪೋಗಬೇಡ ನಿನಗಂಯೆನ್ನಾಣೆ ನೀನಿತ್ತ ಸಂ
ತಸದಿಂದಾರಯೆ ನೀಳ್ಪ ಸಾಕುಮೆನುತಿರ್ದರ್ ವೃದ್ಧವೇಶ್ಯಾಜನಂ ೫೪೧

ನಗೆವರಲೆನ್ನ ನಕ್ಕೆಳದು ಪೆಲ್ನುಡಿ ಬಲ್ಲಿತು ಜೆಲ್ಲಗಂಗಳೊ
ಳ್ನಗೆಯುಮ ನೋಟಕರ್ಗೆಯಜಾತಂ ಪೊಲೆಗಳ್ ಮುಗುಳೊತ್ತವಿಟ್ಟಿಗೆ
ಟ್ಟೆಗಡು ಕೊನಂಗಿ ಕೋಪ ಪಿರಿದುಂ ರತಿಯೊಳ್ ತವಕಂ ಕುಚೇಷ್ಟೆಕಾ
ರಿಗೆ ನೆಱೆ ಸೋಲರಕ್ಕಟ ವಿಟರ್ ಬಱಪೆಂಪುಱೆ ಪಾರಿ ಜರ್ಬಿದಳ್ ೫೪೧

ಅಡರ್ದ ಕುಚದ್ವಯಂ ದಯಿತೆ ಬಿಟ್ಟವಿವೇಕನೆ ಬರ್ದಯೆಂದಳಿಂ
ತಡಿಗಡಿಗೋಪ ನೀಂ ಸರಸಕಾಮನಿವಾಸದೊಳಿಟ್ಟ ಕೈಯನಿಂ
ಪಿಡಿದಿರೆ ತನ್ನೊಳಿಟ್ಟ ಸವಿದೋಱುವ ದೂಸಱನಿಂದಪರ್ನಿಶಂ
ಕೆಡೆದಪುದಲ್ಲಿಗಾ ಸವಿಗೆ ನೆರ್ಮೊಲೆಯಲ್ಲದೊಡಿಂತು ಬೀೞ್ಗುಮೇ ೫೪೨
(ಲೀಲಾವತಿ ೨-೧೦೯, ಸೂಕ್ತಿಸುಧಾರ್ಣವಂ ೮-೩೮೮)

ಜಲಜಾಕ್ಷಿ ಮದನಮೋಹಿನಿ
ಲಲಿತಾಂಗಿ ನಿನ್ನ ಕುಚಂಗಳೇಕೆಲೆ ಸರಿದುವು
ಬಲುವಿಟರು ತಳವನಗೆಯಲು
ಕುಲಗಿರಿಗಳು ಬಿಟ್ಟವಱಿ ಪಾರ್ದೇನರಸಾ ೫೪೩

ಪರಳಾಗಲ್ ಧರೆಯವರಂ
ಸರಸಿಜಕುಟ್ಮಂಗಳಾಲಾಗಸದವರಂ
ತಿರೆ ಗೆಲ್ದವೆಂದು ಕುಚಗಳ್
ಸರಿದುವು ಪಾತಾಳದವರನೀಕ್ಷಿಸಲೆಂದುಂ ೫೪೪

## ಮುಗ್ಧಭಾವ :

ಇನಿಯನಗಲ್ದು ಪರ್ದೆಸೆಗೆ ಪೋದೊಡೆ ಬಂಬಲುಬಾಡಿ ಚಿಂತೆಯಿಂ
ಕನಕಲತಾಂಗಿ ತನ್ನ ಶಯನಂಗಳೊಳ್ ಮಲಗಿರ್ದು ನಲ್ಲನಂ
ಕನಸಿನೊಳಪ್ಪಿಕೊಂಡು ಮುಸುಕಂ ತೆಱೆದೊಯ್ಯನೆ ನೋಡಿ ಕಾಣದಾ
ಮನೆಯೊಳಗಿರ್ಪನೆಂದು ಸೊಡರ್ವೆತ್ತಿಸಿ ನೋಡಿದಳೊಂದು ಜಾವಮಂ ೫೪೫

ಅಂಬುಜಮಿಲ್ಲಿ ಬಾಲಶಶಿಯಿಲ್ಲಿ ಪಟೋತ್ಪಲವಿಲ್ಲಿ ಪಣ್ತ ದಾ
ಳಿಂಬದ ಬೀಜವಿಲ್ಲಿ ನವಚಂಪಕವಿಲ್ಲಿ ಶಶಾಂಕವಿಲ್ಲಿ ದ್ಘುಱು
ನ್ನೈಂಬ ಮದಾಳಿಯಿಲ್ಲಿ ಸುರಚಾಪಮದಿಲ್ಲಿಯೆನುತ್ತ ತನ್ನ ರೂ
ಪಂ ಬಗೆಗೊಂಡು ದರ್ಪಣಮ ನೋಡಿದಳೊಯ್ಯನವೇಂ ಪ್ರಮುಗ್ಧೆಯೋ ೫೪೬

ಓದಿಸೆನೆಂದವೊಂದು ಗಿಳಿಯುಂ ಕರದಿಂ ಪಿಡಿಯಲ್ಕವೆಯ್ದಿ ಕೆಂ
ಪಾದುವು ತತ್ಕರದ್ಯುತಿಯೊಳಂತದನೀಕ್ಷಿಸೆ ಲೋಚನಾಂಶುವಿಂ
ದಾದುದು ಬೆಳ್ಪು ಸಾರಿಯಿದು ಮಾಯದ ಪಕ್ಷಿಯಿದೆಂದು ಮುಗ್ಧೆ ತಾ
ನೋದಿಸಲಂಜಿ ಭೀತಿ ಮಿಗೆ ಪಂಜರದೊಳ್ ಮುಸಿಕಿಟ್ಟು ಮುಚ್ಚಿದಳ್ ೫೪೭

ಪೊಸತೆನಿಪೊಂದು ಪಕ್ವಫಲಮೆಂದರುಣಾಧರಮಂ ಕರ್ದುಂಕಿ ನಾಂ
ಟಿಸುತಿರಲೌಡುಗರ್ಚಿ ಭರದಿಂ ನಿಲೆ ತತ್ಫಲಮೆಲ್ಲಿಪೋದುದೆಂ
ದಸಿಯಳ ಹಸ್ತದಿಂದಿೞಿದು ತನ್ಮಣಿಕುಟ್ಟಿಮದೊಳ್ ತೊೞಲ್ದು ವೀ
ಕ್ಷಿಸುವತಿಮುಗ್ಧ ರಾಜಶುಕಮಿರ್ದವು ತದ್ಗಣಿಕಾಲಯಂಗಳೊಳ್ ೫೪೮

ಅನುದಿನಮೆಯ್ದೆ ತನ್ನಿನಿಯ ನೋಡುವ ದರ್ಪಣಮಂ ಕರಾಗ್ರದಿಂ
ಘನಕುಚೆ ತಾಳ್ದಿ ತನ್ನ ನಿಜರೂಪಮನಲ್ಲಿಯೆ ಕಂಡು ಮಾಣದಾ
ವನಿತೆ ಕಡಂಗಿ ಮುಗ್ಧತೆಯನೊಂದಿ ಕನಲ್ದಿರದಂದು ತನ್ನ ನ
ಲ್ಲನ ವಧುವೆಂದು ಪೊಚ್ಚಪೊಸಗನ್ನಡಿಯಂ ಸತಿ ಸುಗ್ಗುಗುಟ್ಟಿದಳ್ ೫೪೯

ವರನಖಕಾಂತಿಯೊಳ್ ಪೊಳೆವ ಚಂದ್ರನನೀಕ್ಷಿಸಿ ಸತ್ಕಳೇಶ ಮ
ಚ್ಚರಣದೊಳೇಕೆ ಬಿರ್ದಪೆಯೆನುತ್ತಂ ಪದಮಂ ತೆಗೆಯಲ್ಕೆ ನೀಲದಿಂ
ವಿರಚಿತಮಾದ ಕುಟ್ಟಿಮದೊಳಂ ಪೊಳೆಯುತ್ತಿರೆ ಬರ್ದಪೇೞುನು
ತ್ತಿರದೆ ಕರಂಗಳಿಂ ತೆಗೆಯೆ ಬಾರದಿರಲ್ ಕಡುಮುಗ್ಧೆ ನಾಣ್ಚಿದಳ್ ೫೫೦

ಉನ್ನತಕುಚಯುಗೆಯೋರ್ವಳ್
ಕನ್ನಡಿಯಂ ಪಿಡಿದು ನೋಡಿ ಸ್ವೇದಜಗಾಗುತ
ತನ್ನ ನೊಸಲೆಂದು ಬಗೆವುತ
ಕನ್ನಡಿಯೊಳ್ ಪೊಳೆವ ನೊಸಲೊಳಿಟ್ಟಳು ಬೊಟ್ಟಂ ೫೫೧

ಅಂಬರದಿಂದೆಯ್ತಂದೀ
ತುಂಬಿದ ಕೊಡನೊಳಗೆ ಚಂದ್ರ ಸಿಲುಕಿದನೆನುತಂ
ಬಿಂಬಾಧರೆ ಮುಚ್ಚಿಟ್ಟಳು
ಯಿಂಬಿನೊಳಂ ತೆಗೆದು ನೋಡಿ ಕಾಣದೆ ಸುಯ್ದಳ್ ೫೫೨

ಪ್ರತಿಬಿಂಬಿಸಿದರ್ಧೇಂದುವ
ಸತಿ ಕುಚದೊಳ್ ಕಂಡು ಪೊಸನಖಪ್ರಣಮೆಂದಾ
ಪತಿಯೊಲ್ಲನೆಂದು ಕರದಿಂ
ಧೃತಿಗುಂದುತ ಮುಚ್ಚಿಕೊಂಡು ತಳನೆಳಗಾದಳ್ ೫೫೩

ಕಳಶೋದರದೊಳ್ ಚಂದ್ರನ
ನೆೞಲಂ ಕಂಡೆಲೆಲೆ ಸಿಲುಕಿದಂ ಶಶಿಯೆನುತಂ
ದೊಳಪೊಕ್ಕು ನೋಡಿ ಕಾಣದೆ
ಗೞಲನೆ ತಡವಳಿಸಿ ಮುಗ್ಧೆ ತಳವೆಳಗಾದಳ್ ೫೫೪

ಕರತಳಕಳಶೋದಕದೊಳ್
ಸುರುಚಿರ ಚಂದ್ರಮನ ನೆೞಲನೂನಂ ತೋಱು
ತ್ತಿರೆ ಬೆಳ್ಳಿವಟ್ಟಲೆಂದಾ
ತರುಣಿ ಕರಂ ತೆಗೆದು ನೋಡಿ ತಳವೆಳಗಾದಳ್ ೫೫೫

ಸುಗುಣೆ ತನ್ನಿನಿಯ ನೋಡುವ
ಮಿಗೆ ಕೈಪಿಡಿ ನೋಡಿ ತನ್ನ ರೂಪಂ ಕಾಣುತೆ
ತಿಗುಳತಿಯೋರ್ವಳ್ ತನಗೆಂ
ದಗಿವಳು ಸುಯ್ಯುತ್ತೆ ಮುಗ್ಧೆ ಚಿಂತೆಯೊಳೊರ್ವಳ್ ೫೫೬

ತಿಳಿವಿಲ್ಲದೆ ಶಶಿಕಾಂತದ
ಕಳಶಮನೇಕೊಯ್ದೆ ಕಾಂತೆ ನಿನ್ನ ಮುಖೇಂದೂ
ಜ್ವಳಕೌಮುದಿಯಿಂದೊಸರ್ದಪು
ದಿೞಪಿೞಪೆಂದೋರ್ವ ಮುಗ್ಧೆ ಸಖಿಯಂ ನುಡಿದಳ್ ೫೫೭

ಕಂಜದಳೇಕ್ಷಣೆ ನಿನ್ನಯ
ಮಂಜುಳರವದಿಂದೆ ಪಾಡೆ ನವಪರಪುಟ್ಟ
ಪ್ರಾಂಜುಳಮಧುರಧ್ವನಿಯೆಂ
ದಂಜುಪರೆಲೆ ಮುಗಳೆ ಪಾಡದಿರು ವಿರಹಿಣಿಯಿರ್ ೫೫೮

ಮಿಗೆ ದಟ್ಟೈಸಿದ ಚಂದ್ರಿಕೆ
ಸೊಗಯಿಸೆ ಕಂಡೊರ್ವ ಮುಗ್ಧೆ ದಗ್ಧವಿದೆಂದೆಂ
ದಗಲದೆ ಬದ್ಧಾಂಜಳಿಯಂ
ಮೊಗೆಮೊಗೆದಾ ಬಯಲನೀಂಟೆ ಬೞಲುತ್ತಿರ್ದಳ್ ೫೫೯

ತೀವಿದ ಕೌಮುದಿಯಂ ಕಂ
ಡೋವದೆ ಬಂದೊರ್ವ ಮುಗ್ಧೆ ಚಂದನರಸಮೆಂ
ದಾವರಿಸಿ ಪೂಸಿ ಮೆಯ್ಯೊಳ್
ಭಾವಿಸೆ ಸಜುವಿಲ್ಲದಿರಲ್ ತಳವೆಳಗಾದಳ್ ೫೬೦

ಇಂದಿರುಳು ಗ್ರಹಣ ಮಗಳೆ
ನಿಂದಿರದಿರು ಮನೆಯ ಮುಂದೆಯೆಲೆ ಶಶಿವದನೇ
ಚಂದಿರನಿಗಧಿಕವೆನುತಂ
ಬಂದಡಸುಗು ರಾಹು ನಿನ್ನ ಮುಖಮಂಡಲಮಂ ೫೬೧

ದಟ್ಟೈಸಿದ ಚಂದ್ರಿಕೆಯಂ
ಸಿಟ್ಟೈಸಿ ದೇವಾಂಗಮೆಂದು ತನ್ನಯ ನಡುವಿಂ
ಗುಟ್ಟೈಪೆನೆನುತಂ ತೆಗೆಯಲ್
ಕಟ್ಟಿದಿರಲ್ ಮುಗ್ಧೆ ನೋಡಿ ಸೈಪೆಜಗಾದಳ್ ೫೬೨

## ಚಕ್ಷುಪ್ರೀತಿ :

ಎತ್ತಣಿನೆಯ್ದಿಪಂ ಮದನಸಿಕ್ಷುಧನುರ್ಲತೆಯುಂ ಪ್ರಸೂನಕಾ
ಯ್ದೊತ್ತ ಶರಂಗಳಂ ಮಕರಕೇತನಮುಂ ರತಿಯುಂ ಸಮೀರನುಂ
ಮತ್ತೆ ವಸಂತನುಂ ಮಱೆಸಿಯೆಂದು ಕರಂ ಬೆಱಗಾಗಿ ನೋಡಿದಳ್
ಚಿತ್ತದೆ ಸಂಭ್ರಮಂ ಬೆರಸಿ ಕಾಂತೆ ಕಳಾಧರನಂ ಕುಮಾರನಂ ೫೬೩

ಹರಿನೀಲಚ್ಛವಿ ಪುಂಡರೀಕನಯನಂ ವಿಸ್ತೀರ್ಣವಕ್ಷಸ್ಥಲಂ
ಪರಿವೃತ್ತಾಯತ ಬಾಹು ಪೀವರನಿತಂಬಂ ಗಂಡರೊಳ್ ನೀಱನೆಂ
ಬರ ಮಾತಂ ಕಿವಿಯಾರೆ ಕೇಳ್ದು ಕಿವಿವೇಟಂಗೊಂಡು ಕಣ್ಣಾರ್ಪಿನಂ
ಹರಿಯಂ ನೋಡಿದಳಾಕೆ ತನ್ನ ಕಡೆಗಣ್ಗಳ್ ಬೀಱೆ ಬೆಳ್ದಿಂಗಳಂ ೫೬೪

(ಪಂಪರಾಮಾಯಣಂ ೨-೧೨)

ಕಡೆಗಣ್ಣಿಂ ಕಡೆಗೋಡಿಪೋಗೆ ಪಿರಿದುಂ ಚೆಲ್ಲಿಂ ಕುಚದ್ವಂದ್ವದಿ
ಟ್ಟೆಡೆಯಂ ಸ್ವೇದಜಲಂ ತುಳುಂಕೆ ಜಘನಾಂತರ್ದೇಶದಿಂದಾವಗಂ
ಬಿಡದುಣ್ಮುತ್ತಿರೆ ಮನ್ಮಥದ್ರವಮನಂಗಾವೇಶದಿಂ ಕಾಲ್ತೊಡಂ
ಬಡೆ ಬಂದಾಟಿಸಿ ನೋಡಿದಳ್ ಪವಸಿನಿಂ ಶ್ರೀವಿಪ್ರಮಾರ್ತಂಡನಂ ೫೬೫

(ಕಾವ್ಯಾವಲೋಕನಂ ೮೦೩)

ಮುತ್ತಿನ ಹಚ್ಚಮಂ ತುಡುವುದಂ ಮಱೆದೊಪ್ಪಿರೆ ಮೇಳದಾಕೆಯುಂ
ಕತ್ತುರಿಬೊಟ್ಟಿನಿಂ ತೀಡುವೊಡಂ ಸಿಲಲೊಲ್ಲದೆ ಸಾದುರ್ಗ ನಲ್ಮೆಯಿಂ
ಬೊತ್ತೆಯನಿತ್ತುದಂ ಬಿಸುಟು ಚೌರಿಗೆಯಿಂ ಪೊಱಮಟ್ಟು ಗಾಡಿ ಬೆಂ
ಬತ್ತಿರೆ ನಿಂದಳೊರ್ವಳೆವೆಯಿಕ್ಕದೆ ನೋಡುತಲೊಲ್ದು ಕಾವನಂ ೫೬೬

(ಕಬ್ಬಿಗರ ಕಾವಂ ೩೩೬)

ಸೋರ್ಮುಡಿ ಬೆನ್ನನಪ್ಪಳಿಸೆ ಬಿಂಕದಿಂ ಕಟ್ಟಿದ ರನ್ನದೈಸರಂ
ಪೆರ್ಮೊಲೆಯಂ ಪಳಂಚೆ ನಗೆಗಣ್ ಮಱಿವುಲ್ಲೆಯ ಚೆಲ್ಲಗಂಗಳಿಂ
ಸೂರ್ಪುಡಿ ಚೆಲ್ವವಾಗೆ ನೊಸಲೊಳ್ ಕುರುಳುಯ್ಯಲಾಡೆ ಬೇಗದಿಂ
ಕೂರ್ಮೆಯನಾಂತು ನೀಱೆ ನಡೆತಂದಲರ್ವಿಲ್ಲನನೆಯ್ದೆ ನೋಡಿದಳ್ ೫೬೭

(ಕಬ್ಬಿಗರ ಕಾವಂ ೩೩೭)

ಕುರುಳೋ ತುಂಬಿಯ ಬಂಬಲೋ ತೊಡೆಗಳೋ ಪೊಂಬಾಳೆಯೋ ಕಣ್ಗಳೋ
ಬಿರಿದಂತೊಪ್ಪುವ ನೆಯ್ದಿಲೋ ಬೆರಲೋ ಕೂರ್ಪಾಗಿರ್ಪ ಪೂಗೋಲ್ಗಳೋ
ಕೊರಲೋ ಸುಣ್ಣಳವಟ್ಟ ಕೌಂಗೋ ಪೊಸತಾಗಿರ್ದಪ್ಪುದೆಂದೆಯ್ದೆ ಮಿಂ
ಡರ ತಂಡಂ ಬಱಸಲ್ಕಿನಂ ಬಿಡದೆ ಬಂದುಂ ಕಾವನಂ ನೋಡಿದಳ್ ೫೬೮

(ಕಬ್ಬಿಗರಕಾವಂ ೩೦೯)

ಇಕ್ಕಿದ ರನ್ನದೋಲೆ ಪೊಸಮುತ್ತಿನ ಮೂಗುತಿ ತೋಳಬಂದಿ ನೀ
ಳ್ದಿಕ್ಕಸರಂ ತೊಳಪ್ಪ ಬೆಳುಂಗುರವಿಂಚರಮೀವ ನೇವುರಂ
ಚೊಕ್ಕಳಿಸುಪ್ಪ ಚೆಲ್ವನೊಳಕೊಂಡಿರೆ ಬೆಳ್ಳಿಯ ಬಳ್ಳಿಸಾಡನುಂ
ತಕ್ಕಿನೊಳೇಱೆ ನೋಡಿದಳೊರ್ವಳಿಗುರ್ವಿಸ ಕರ್ಬುವಿಲ್ಲನಂ ೫೬೯

(ಕಬ್ಬಿಗರಕಾವಂ ೩೪೦)

ಬಿಂಬಾಧರಕಾಂತಿ ಪ್ರತಿ
ಬಿಂಬಂ ಸುಲಿಪಲ್ಗೊಳಿಸೆಯೆ ಪಲ್ ಸುಲಿಯುವೆಗೆ
ತ್ತೇಂ ಬಾಲೆ ಮುಗ್ಧೆಯೋ ಮ
ತ್ತಂ ಬಿಡದಡಿಗಡಿಗೆ ನೋಡುವಳ್ ಕನ್ನಡಿಯಂ ೫೭೦

(ಕಾವ್ಯಾವಲೋಕನಂ ೯೪೩)

ಜಗುಳ್ವುತ್ತುಂ ಸಮನೊತ್ತಿ ಸೂಸುವಳಕಾನೀಕಂಗಳಂ ತಿರ್ದು ಮೆ
ಲ್ಲಗೆ ಪೋಗಿನ್ನುಡಿದಪ್ಪುದೊಳ್ನಡು ಕುಚಪ್ರಾಗ್ಭಾರದಿಂದೆಂದು ಬು
ದ್ಧಿಗುಡುತ್ತುಂ ನಡೆತರ್ಪ ಚೇಟಿಯರ ಮಾತಂ ಮೀಱಿ ಕೈಮೀಱಿದೊ
ಲ್ಮೆಗೆ ಪಕ್ಕಾಗಿ ನೀಱಳ್ ಮೃಗಾಕ್ಷಿ ಪರಿತಂದಬ್ಜಾಕ್ಷನಂ ನೋಡಿದಳ್ ೫೭೧

(ಜಗನ್ನಾಥವಿಜಯಂ ೧೬–೮೨)

ಎಱಕಂ ಚಿತ್ತದೊಳುಣ್ಮೆ ಪೊಣ್ಮೆ ನಡೆತಪ್ಪೌತ್ಸುಕ್ಯದೊಳ್ ಮೇಲುದ
ಳ್ಳೆಱೆ ವೃತ್ತುಂಗಕುಚಂಗಳಿಂ ತೊಲಗಲಂಗವ್ಯಕ್ತಿ ಪುಷ್ಪಾಸ್ತ್ರನಾ
ದೊರ್ಱಿತೆಯಿಂದುರ್ಚಿದ ಬಾಳನೇಱೆಸಿರೆ ತನ್ನಂ ನೋಟ್ಪಿಪರ್ ಸೋಲ್ತು ಮೆ
ಯ್ಮಱೆತಯಲ್ ಪೆಯ್ಮಱೆತದೊಲ್ದು ನೋಡಿದಳಪೊರ್ವಳ್ ಗೋಪಮಾರ್ತಂಡನಂ ೫೭೨
(ಜಗನ್ನಾಥವಿಜಯಂ ೧೬-೮೩)

ಮನದೊಳ್ ಕೂರ್ಪಾಸ್ಯದೊಳ್ ಮಾನತೆ ಬಗೆಯೊಳೆ ರೋಷಂ ಲಸದ್ವಾಕ್ಯದೊಳ್ ಗ
ರ್ಜನೆ ಚಂಚತ್‌ದೃಷ್ಟಿಯಿಂದೀಕ್ಷಣೆಯೊಳನುನಯಂ ಪುರ್ಬಿನಿಂ ಜರ್ಬು ದೂತೀ
ಜನದೊಳ್ ಚಿತ್ತಾನುತಾಪಂ ಪ್ರಿಯರತಿಮುಖದೊಳ್ ಕೋಪಮೊಪ್ಪಲ್ಕೆ ಪೆಂಪಾ
ದ ನವೀನ ಪ್ರೌಢಿಯಿಂದಂ ಪ್ರಣಯಕಲಹಮಾಯ್ತ್ತೇಪನೊಳ್ ಕಾಂತೆಗಾಗಳ್ ೫೭೩

ನಳಿತೋಳೆಂಬುರುಪಾಶದಿಂ ಬಿಗಿದುಮಾಗಳ್ ಕೋಪದಿಂ ಸೆಜ್ಜೆಗೊ
ಯ್ದೆಳೆಯಲ್ಕಾಳಿಯರೆಲ್ಲಂ ನೋಡಿ ಮುಗುಳ್ದಂ ದುಶ್ಚೇಷ್ಟೆಗೆಯ್ಯುತ್ತಲ
ಗ್ಗಳಮಾಯಿತ್ತುಪೆಸುತ್ತ ಮೆಲ್ನುಡಿಗಳಿಂ ದೂಱುತ್ತಮುತ್ತಿರ್ಪ ಕೋ
ಮಳೆ ಪೊಯ್ಯಲ್ ನಗುತೆಯ್ದೆ ಮಂಚಿಸುವ ಕಾಂತಂ ತಾನದೇಂ ಧನ್ಯನೋ ೫೭೪

ನಲ್ಲಳ ಕೂಡೆ ನಲ್ಲ ಮುಳಿಸಿಂ ಮೊಗಮಂ ತಿರುಪಿಟ್ಟು ಪಟ್ಟಿರಲ್
ಸಲ್ಲಲಿತಾಂಗಿಯುಃಫೆನುತ ಸುಯ್ದು ಮಲಂಗಿರಲಾ ವಿಟಂ ಮನಂ
ನಿಲ್ಲದೆ ಸೀಂತಡಂ ತರುಣಿ ಕರ್ಣದಪತ್ರಮನೋವಿ ತೀಡಲಾ
ಖುಲ್ಲಮನಂ ಕಲಂಕಿ ಚದುರಿಂ ಮೊಗದೊಳ್ ಮೊಗವೊಕ್ಕಲಿಕ್ಕಿದಂ ೫೭೫

ವಾರಿಜಾನನೆ ಸೆಂಡನಿಕ್ಕೆಲದೊಳ್ ನಿಮಿರ್ದ ಕರಾಗ್ರದೊಳ್
ಸಾರೆಮೆಟ್ಟುತ ಪೊಯ್ಯಲಂಗದ ನೂತ್ನ ಕಂಕಣ ರತ್ನಮಂ
ಜೀರಕಧ್ವನಿ ಪಂಚಬಾಣಶರಾಸನಧ್ವನಿಯಂತೆ ವಿ
ಸ್ತಾರದಿಂ ಪೊಱಪೊಣ್ಮಲಾಡಿದಳಂದು ಕಂತುಕಕ್ರೀಡೆಯಂ ೫೭೭

ಮೊದಲೊಳ್ ಮೆಲ್ಲನೆ ಸೆಂಡನಿಟ್ಟು ನೆಗೆಯಲ್ ಮೆಲ್ಪಿಂದಮೊಳ್ಪೊಯ್ದು ಪೊ
ಣ್ಮಿದ ಸೆಂಡಂ ನಬದೀಪ್ತಿ ರಂಜಿಸುವಿನಂ ಪೋಗೆಯ್ಯೊಳಾಂತಾಗಳಂ
ತದನಾಗಳ್ ಮುಗುಳ್ದುರ್ವಿಯೊಳ್ ಪೊಡೆದು ಗೋಮೂರ್ಧಂಬೊಲಿರ್ಪ್ಪಂಗೆ ತಾ
ಳದ ಸೂಳಂ ತಿಳಿದಾಡಿದಳ್ ಸುಮತಿ ಪೆಂಪಿಂ ಕಂತುಕಕ್ರೀಡೆಯಂ ೫೭೮

ಭ್ರಮರಿಗುಡುತ್ತ ಕಂತುಕವನಂಗನೆ ಪೊಯ್ಯೆ ಕುಲಾಲಚಕ್ರದಂ
ತಮರ್ದಿರೆ ಸೆಂಡು ಮಿತ್ರತೆಯೊಳಂಗನೆ ಮಧ್ಯದೊಳೊಪ್ಪುತಿರ್ದಳು
ತ್ರಮ ಪರಿವೇಷ ಮಧ್ಯದ ಶಶಾಂಕಕಲಾಕೃತಿಯಂತೆ ಚಿತ್ರವಿ
ಭ್ರಮಮನೊಡರ್ಚುತೆಲ್ಲರೊಳದೇ ಪೊಗಳ್ಪಂ ಕಮನೀಯ ಕೇಳಿಯಂ ೫೭೯

ಬಡನಡುವಿಂಗೆ ಲಂಘಿಸಿ ಕುಚಕ್ಕಡರ್ದುಂ ಕಟಿಯಂ ತುಡುಂಕಿ ಕಂ
ಗಡೆಗಿರದೆಯ್ದಿ ಪಿನ್ನಿಲೆಗೆ ಪಾಯ್ದು ವಿಟಾಗ್ರಣಿಯಂತೆ ಕಂತುಕಂ
ತೊಡರ್ದಪುದೆಂದು ಕಾಂತೆ ಮೃದುಹಸ್ತದಿನೋವದೆ ಪೊಯ್ಯೆ ಮತ್ತೆ ಮೆ
ಲ್ಲಡಿಗಳನಂಟೆ ಪೆರ್ಚುವುದದಲ್ತೆ ಗುಣಾಧಿಕನೀತಿಧಾತ್ರಿಯೊಳ್ ೫೮೦

ವಿಲಸತ್ಕಂತುಕಮಂ ಪ್ರಟಂ ನೆಗೆವಪ್ರೋಲಾರ್ಪೊಯ್ದು ಸೆಂಡೆಯ್ತರಲ್
ಸಲವಿಂದಂ ಪೊಱಗೆಯ್ದೆ ಳಾಂತು ಮಗುೞ್ದಾರ್ಪಿಂ ಮಾಣದೋರಂತೆ ತಾ
ಳಲಯಂ ರಂಜಿಸೆ ಚಿತ್ರಬಂಧಗತಿಯೊಳ್ ಮೇಲ್ಪೆಟ್ಟಿನೊಳ್ ಪೊಯ್ದು ಕೋ
ಮಲೆ ಪುಷ್ಪಾಸ್ತ್ರ ನೆಗಟ್ದಿ ಮೂಡಿಕೆಗಳಿಂ ಪುಷ್ಪಾಸ್ತ್ರನಂ ಪೊಯ್ಕಳೇ ೫೮೧

ನಡೆಸೆಂಡಂ ಪೊಡೆಸೆಂಡನಾರ್ಪಿನೊಡೆಸೆಂಡಂ ಪಾರ್ವಸೆಂಡಂ ಕರಂ
ಪಡಿಸೆಂಡಂ ಪುಡಿಸೆಂಡನಿರ್ದೆಸೆಗಳೊಳ್ ಪೋಸೆಂಡನೂರ್ಧ್ವಕ್ಕೆ ಪೊ
ಯ್ವಿಡುಸೆಂಡಂ ಪೊಱಗಯ್ಯೊಳಪ್ಪಳಿಪ ಸೆಂಡಂ ಚಿತ್ರಬಂಧಂಗಳೊಳ್
ತಡೆದೊಪ್ಪಂಬಡೆದಾಡಿದಳ್ ವಿಟಜನಂ ಕೊಂಡಾಡಿ ಬೆಂಡಪ್ಪಿನಂ ೫೮೨

## ಆಂದೋಳನ ಕ್ರಿಯೆ

ಪಱಿದಮಣೆಯುದಯನಗಂ
ತೋಱಿದ [೧]ಮುಖಬಿಂಬವಿಂದು[೧]ಬಿಂಬಮುಪಾಂಗಂ
ಮೀಱಿದ ಚಂದ್ರಿಕೆಯೆನೆ ಕಳೆ
ಯೇಱಿದ ಪಡಿಚಂದ್ರನಂತೆ ಸೌಂದರಿಯೆಸೆದಳ್ ೫೮೩

(ಗಿರಿಜಾಕಲ್ಯಾಣಂ, ೪-೧೫೮; ಸೂಕ್ತಿ ೮-೩೩೭)

ನೋಡುವನೇಕ ಸದ್ವಿಟಜನಂಗಳ [೨]ಪೆಣ್ಗಳ[೨] ಕಣ್ಗಳಾಡೆ ಕೊಂ
ಡಾಡುವ [೩]ತತ್ಸಖೀಜನದ ಚಾಗದ ಭೋಗದ[೩] ರಾಗವಾಡೆ ತೂ
ಗಾಡುವ ಬಾಲಕೀವ್ರಜದ ಕಂಕಣ ಝುಂಕೃತಿ ಘೋಂಕನಾಡೆ ತಾ
ನಾಡಿದಳುಯ್ಯಲಂ ಮುಖಶಶಿಪ್ರಭೆ ಮುಚ್ಚಿ ಮುಸುಂಕೆ ಚಂದ್ರನಂ ೫೮೪

(ಗಿರಿಜಾಕಲ್ಯಾಣಂ, ೪-೧೫೯; ಸೂಕ್ತಿ ೮-೩೩೬)

ಉಯ್ಯಲೆ ಚಿತ್ರನೃತ್ತಿಯಱಿದಾಡುವ ವಲ್ಲಭನಲ್ಲಿಗುಯ್ಯಲೇಂ
ಉಯ್ಯಲೆ ಜೇಟಮಂ ಬೆಳಸಿ ನಲ್ಮೆಯನಾಂಟಿಪಗೀಗ ಉಯ್ಯಲೇಂ
ಉಯ್ಯಲೆ ಪುಷ್ಪಚಾಪಶರಸನ್ನಿಭನಪ್ಪವನಲ್ಲಿಗುಯ್ಯಲೇ
ಉಯ್ಯಲೆಯೆಂದು ತಾಂ ರಭಸದಿಂ ಸತಿ ಪಾಡುತಲುಯ್ಯಲಾಡಿದಳ್ ೫೮೫

---

[೧] ಮೊಗಸೋಡಶಿಂದು(ಸೂ) [೨] ಪಿಂಗಳ(ಸ) [೩] ಸತ್ಸಖೀಕುಲದ ಛಾಗದ ಜಾಗದ(ಸ)

ನೆರೆದಳಿ ಪಾಱುವಂತಿರೆ ಕುರುಳ್ ಪೊಳೆಗಳ್ ಪೊಣರ್ವಕ್ಕಿ ಪಾಱುವಂ
ತಿರೆ ಪೊಳೆವಕ್ಷಿಗಳ್ ಚಳಚಕೋರಯುಗಂಗಳೆ ತಳ್ತು ಪಾಱುವಂ
ತಿರೆ ಶಿಖಿ ಪಾಱುವಂತಿರೆ ಬೞಿಲ್ಬುಡಿ ತಾನಲರಂಬು ಪಾಱುವಂ
ತಿರೆ ಮಿಗಿಯೇಱಿ ಪಾಱಿ ಗಗನೇಚರಿಯಂತೊಲೆದುಯ್ಯಲಾಡಿದಳ್ ೫೮೬
(ಲೀಲಾವತಿ, ೨-೩೮; ಸೂಕ್ತಿ ೮-೩೩೦)

ಗಗನಚರಂ ಗ್ರಹಾಧಿಪತಿಯೂರ್ಜಿತ ಪಾಂಡುಮಯಂ ಕಳಂಕನಾ
ಮೃಗಧರನಬ್ಜವೈರಿಯಹಿಪೀಡಿತನುನ್ನತ ದೋಷಕಾರಿ ನೆ
ಟ್ಟನೆ ನೆಲೆಗೆಟ್ಟ ಪಾಪಿಯೆನುತಂ ಕಡೆಬಯ್ದಿದಿರಿರ್ದ ಚಂದ್ರನಂ
ನೆಗೆದೊದೆವಂತಿರೆಯ್ದೆ ಜಡಿದುಯ್ಯಲನಾಡಿದೊಳೊರ್ವಳಚ್ಚಿಯುಂ ೫೮೭

ಅವಳಾಟಂ ವಿಟಕೋಟಿಯಾಪ್ತಧನಮಂ ಹೋಗಾಡುವಾಟಂ ಬೞಿ
ಕ್ಕವಳಾಟಂ ಮದನಾಂಗನಾಮಹಿಮೆಯಂ ಮೇಲಾಡುವಾಟಂ ಬೞಿ
ಕ್ಕವಳಾಟಂ ನೃಪ ನಿನ್ನ ಮೆಲ್ಲೆರ್ದೆಯನಿಂದಳ್ಳಾಡುವಾಟಂ ಮಹೀ
ಧವ ಪೇೞಲ್ಲದೊಡುಯ್ಯಲಾಟವೆ ತೊಲಂಗೈ ಮಾಣ್ದು ನಿನ್ನಾಟಮಂ ೫೮೮

ಪವಳದಿನಿಂಗಡಲ್ ಶಫರದಿಂ ಕೊಳನುನ್ಮದಭೃಂಗನಾದದಿಂ
ದವಿರಳಪುಷ್ಪಭೂಜಮೆಸೆವಂತಿರೆ ಚಂದ್ರಿಕೆ ರತ್ನಭೂಷಣಾಂ
ಶುವಿ[1]ನೊಳೆ ತೋರ್ಪ[1] ಮಾಪ್ರೊಳಪಿನಿಂ ಮೃದುಗೇಯದಿನೊ[2]ಪ್ಪ[2]ಲುಯ್ಯಲಾ
ಡುವ ಲಲಿತಾಂಗಿ ತನ್ನೆಡೆಗೆ ನೀಜರ ಚಿತ್ತಮನುಯ್ಯಲಾಡಿದಳ್ ೫೮೯

ಈ ಪೊಸಸುಗ್ಗಿ ರಂಜಿಸುದುದೀ ಪೊಸಜವ್ವನೆಯಿಂದಮೊಳ್ಜಸಂ
ವ್ಯಾಪಿಸೆ ಜಾಗಮಂ ಮೆಱೆದು ಕಾಮಿನಿ ಕಾಮಭುಜಾಗ್ರಮಂ ಜಯ
ಶ್ರೀಪರಿದೇಱಲೇಱಿ ತಳಿಮುಯ್ಯಲನಾ ಖಚರೀಜನಂಗಳೊಳ್
ರೂಪಿಡೆ ತನ್ನ ರೂಪ್ರೊಲಿದು ಪಾಡಿದಳಚ್ಯುತನಾಕಮಾಲೆಯುಂ ೫೯೦
(ಜಗನ್ನಾಥವಿಜಯಂ, ೧೬-೧೪೪; ಸೂಕ್ತಿ ೮-೩೨೪)

ಮೂಡಿದುದಿತ್ತಲೊಂದಭಿನವಂ ಶಶಿಬಿಂಬಮೆನಿಪ್ಪ ಶಂಕೆಯಂ
ಮಾಡೆ ಮನಕ್ಕೆ ಮುದ್ದುಮೊಗಮುಜ್ವಲಚಂದ್ರಿಕೆಯಲ್ಲಿ [3]ನೀಡುಮೋ[3]
ಲಾಡುವ ಲೀಲೆಯಿಂದೊಲೆ[4]ಯೆ ಮೆಯ್[4] ಮೃಗಲಕ್ಷ್ಮಮೃಗಕ್ಕೆ ಗೋರಿಯಂ
ಪಾಡುವ ಮಾಟಿಕ್ಕೆಯುಂ ಬಳೆಂಬಿ ಗೀತರವಂ ತಳಿಮುಯ್ಯಲಾಡಿದಳ್ ೫೯೧
(ಚಂದ್ರಪ್ರಭಪುರಾಣಂ, ೮-೪೮; ಸೂಕ್ತಿ ೮-೩೨೨)

---
[1] ಸಲಗರ್ಣ್ಣ(ಸೂ) [2] ಯ್ಯ(ಸೂ) [3] ಸಿಂದುಮೋ(ಸೂ) [4] ಯುಲೀ(ಅ)

ಕಡೆಗಣ್ಣಿಂದಿಸುವಂತೆ ಚಂದ್ರಕರಮಂ ತಂಗಾಳಿಯಿಂ ಜೋಲ್ದ ಪೂ
ಮುಡಿಯಂ ಶೋಭಿಸುವಂತೆ ಮುದ್ದುಮೊಗದಿಂ ಪೂರ್ಣೇಂದುಬಿಂಬಕ್ಕೆ ದಾ
ಟಿಡುವಂತೆಲ್ಲರ ಧೈರ್ಯಮಂ ಮೊಲೆಯ ಬಿಣ್ಪಂ ನುರ್ಗಿ ನೂಂಕಲ್ಕೆ ಧೀಂ
ಕಿಡುವಂತಾಡಿದಳುಯ್ಯಲಂ ತರುಣಿ ತಂದಳ್ ಕಾಮನಿಂ ಪುಯ್ಯಲಂ ೫೯೨
(ಅನಂತನಾಥಪುರಾಣಂ ೮-೬, ಸೂಕ್ತಿಸುಧಾರ್ಣವಂ ೮-೩೨೭)

ಇವಳೀ ಲೋಚನಮೆನ್ನ ಬಾಣಮಿವಳೀ ಪುರ್ಬೆನ್ನ ಕರ್ವಿಲ್ಲು ಮಾ
ಯ್ದುವಳೀ ಸೋರ್ಮುಡಿಯೆನ್ನ ಕೇತನದ ಚೆಲ್ವಂ ಕೊಂಡೊಡೇನೊಂದು ದೋ
ಷವಿದೆಯೆನ್ನೀಪಳ ರೂಪನೀಕೆ ಗೆಲಲೀಕೆಂದಂಗಜಂ ಕಟ್ಟಿ ತೂ
ಗುವವೋಲ್ ತೂಗಿದನುಯ್ಯಲೇಱಿಸಿ ವಿಟಂ ವಿಭ್ರಾಂತೆಯಂ ಕಾಂತೆಯಂ ೫೪೩
(ಲೀಲಾವತಿ ೨-೪೧, ಸೂಕ್ತಿಸುಧಾರ್ಣವಂ ೮-೩೨೮)

ತೂಗಿ ನಿಜೇಶನಾ ಸೊಬಗನಟ್ಟಿಸೆ ಸೋಲ್ಪಿನಮುತ್ತಮಾಂಗಮಂ
ತೂಗಿ ತಗುಳ್ದು ಸೋಲ್ಪ ವಿಟಕೋಟಿಗೆ ಮನ್ಮಥಸಾತ್ತ್ವಭಾವಮಂ
ತೂಗೆ ಪೊದಳ್ದ ಮಾಂದಳಿರ ತೋರಣಮಂ ಸುಚಿತಪ್ಪ ತಂಬೆಲರ್
ತೂಗೆ ವಿಲಾಸದಿಂದೆ ಪೊಸಪೊಂಜಿನದುಯ್ಯಲನೊರ್ವಳಾಡಿದಳ್ ೫೯೪
(ಸೂಕ್ತಿಸುಧಾರ್ಣವಂ ೮-೩೨೯)

ಆಡೆ ಕುರುಳ್ ನೊಸಲ್ವಿಡಿದು ಸೋರ್ಮುಡಿ ಜಿಂಬಿಡದಾಡೆ ಕಣ್ಗಳೊ
ಲ್ದಾಡೆ ವಿಲಾಸಹಾಸರಸದೊಳ್ ಮೊಲೆ ಮೇಲುದನೊರ್ಮೆಗೊರ್ಮೆ ಗೆ
ಲ್ದಾಡೆ ಮನೋಜರಾಜನಧಿಷ್ಠಿವತೆ ಕ್ಷಿಸಿರಿದಾಡೆ ಜೀಟದ
ಚಕ್ಕಡೆ ಮಡಾಳಿ ಸುಂಸ್ಗಿ ಸುಚಿದಾಡೆ ವಿಳಾಸದಿನುಯ್ಯಲಾಡಿದಳ್ ೫೯೫

ನಯನಮರೀಚಿಯುಂ ಕಬರಕಾಂತಿಯುಮಿರ್ದೆಸೆಗಿಂದ್ರನೀಲಮಾ
ಲೆಯ ನವಮೌಕ್ತಿಕಾವಳಿಯ ರಜ್ಜುಗಳಂತಿರೆ ಚಂದ್ರನಂ ರತಿ
ಪ್ರಿಯನುಮದೇಂ ತೊಡರ್ಚಿ ಪಿಡಿದೊಟ್ಟಿ ವಿರಾಜಿಸೆ ತೂಗುವಂಗಭಂ
ಗಿಯೊಳೊಲಿದುಯ್ಯಲಾಡಿ ಕಡು ಚಾಡಿಸಿದಳ್ ವಿಟರಂತರಂಗಮಂ ೫೯೬
(ಸೂಕ್ತಿಸುಧಾರ್ಣವಂ ೮-೩೩೩)

ವದನಶಿಕಾಂತಿ ತಾರಗೆಯ ಕಾಂತಿಯನೇಳಿಸೆ ಮುಯ್ಯ ಕಂಪಲ
ರ್ಗೊದವಿಸೆ ಕಂಪನಕ್ಷಿಗಳ ಚಂದ್ರಿಕೆಯುಚ್ಚ ಚಂದ್ರಿಕೆಯ ಪಳಂಚಿ ಗೇ
ಯದ ರುತಿ ಕಂತುಚಾಪರುತಿಯೊಳ್ ತಡವಾಗೆ ಮುಖೇಂದುವಿಂದುವಿಂ
ಗಿದಿರಿಡೆ ಕಾಂತೆ ಮಿಂಚು ಪೊಳೆದಾಡುವವೋಲ್ ಪೊಳೆದುಯ್ಯಲಾಡಿದಳ್ ೫೯೭

ಜಡಿವ ರವಂಗಳಿಂ ಸೆಳೆದ ಕೈದುಗಳಿಂ ಕರೆದೀವ ತೋಟಿಯಿಂ
ಜೊಡನೆಯ ವೀರರಿಂ ಪೊಡೆವ ಜೇಗಟೆಯಿಂ ಕಡುಪಾದ ತೋಟಿಯು
ಗ್ಗಡಣೆಗಳಿಂ ಮಹಾಧ್ವನಿಯ ಕೊಂಬುಗಳಿಂ ಭಯಮಂ ನೆಗಜ್ಞ್ತಿ
ರ್ಜಡೆಯೊಳು ಮುಂದೆ ಸಂದಣಿಸುವರ್ ಪುರರಕ್ಷಕರರ್ಧರಾತ್ರಿಯೊಳ್ ೫೯೮

ಓರಂತೆ ಮೆಚ್ಚಿದಂ ಕೃತಿ
ಸಾರಂ ಶಶಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೫೯೯

ಇದು ಸರಸ್ವತೀಸರ್ವಾಂಗವರ್ಣಾಯಮಾನ ಪ್ರತಿಭಾನೂತನಪುರಾತನಪ್ರಮಾಣ
ಸುಕವಿಪುಂಗವ ಮಲ್ಲಿನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಚಂದ್ರೋದಯವರ್ಣನಂ ಅಷ್ಟಮಾಶ್ವಾಸಂ

# ಸೂರ್ಯೋದಯವರ್ಣನಂ

ಕುಮುದಂ ಮೀನ್ ಚಂದ್ರಮಂ ಚಂದ್ರಿಕೆ ಕಳಿಯಱತಂ ಜ್ಯೋತಿಸಸ್ಯಂ ನಯಂಗುಂ
ದೆ ಮನಂ ಪಂಕೇರುಹಂ ತಣ್ಣೆಲರಪಸರತೂರ್ಯಂ ರಥಾಂಗದ್ವಯಂ ಸಾಂ
ಧ್ಯಮಯೂಖಂ ಪೆರ್ಜೆ ಮುರ್ಬುಂ ಸುಸಿಲವಱಪು ಪಕ್ಷಿಸ್ವನಂ ಭೈರವೀರಾ
ಗುಮುಗುರ್ವಂ ಬೀಱಿ ಪಾಂಥರ್ ನಡೆಯೆ ಕವಿಯಿನಕೋರ್ದಯಸ್ತೋತ್ರಮಕ್ಕುಂ ೧
(ಸೂಕ್ತಿಸುಧಾರ್ಣವಂ, ೯–೧)

ಹಳಿಹಳಸಿರ್ದ ತಾರೆ ಕಳೆಗುಂದಿದ ಚಂದ್ರನಲರ್ಕೆಗುಂದಿದು
ತ್ಪಲಮತಿ ಶೈತ್ಯಮುಪ್ಪೆಲರು ಸಂದುವ ದೀಪ್ತಿಯುಗಲ್ವ ಜಾರೆಯರ್
ಗಱಿಪ್ರವ ಕೋೞಿ ಶಂಖಮುರುಣಚ್ಛವಿ ಕೆಂಪಿನಮಂಡಲಂ ಕತ
ಕ್ಕೈಳಸುವ ಕೋಕಮಬ್ಜವಿಕಸಂ ಸಲೆಸೂರ್ಯನ ವರ್ಣನಕ್ರಮಂ ೨
(ಸೂಕ್ತಿಸುಧಾರ್ಣವಂ, ೯–೨)

ನಿರುಪಮ ಸುಕುಮಾರತೆಯಂ
ಧರಣಿಗೆ ನೆಱೆತಯಱಿಪಲುಷ್ಣಕರನ ಕರಂಗಳ್
ಪರೆಯದ ಮುಟ್ಟದ ಮುನ್ನಮೆ
ಮುರುಟಿದವೆನೆ ಮುಗಿದುವುತ್ಪಲಪ್ರಕರಂಗಳ್ ೩
(ಲೀಲಾವತಿ, ೩–೮; ಸೂಕ್ತಿಸುಧಾರ್ಣವಂ, ೯–೩)

ಅಮೃತಕರಸಂಗಮಂ ಮಾ
ಡಿ ಮಗುೞ್ದಿಂತುಷ್ಣಕರಗೆ ಮೆಯ್ಯೊಡ್ಡುವೆನೆಂ
ಬಮಳಿನ ಸುಕುಮಾರತೆಯಿಂ
ಕುಮುದಿನಿ ತಲೆವಾಗಿ ದುಗುಡಮಂ ತಳೆದಿರ್ದಳ್ ೪

ಪೊಳೆಪಿಂಬುವೋಯ್ತು ತಾರಗೆ
ಬೆಳಗಱತುದು ಹಿಮಕರಂಗೆ ನಾಡೆ ಚಕೋ[1]ರಾ
ವಳಿ ಬೆಱಗಾದುವು[1] ಕುಮುದಂ
ಗಳ ನಗೆಯುಗೆಯೆತ್ತಿ ಪೋಯ್ತು ಮುನ್ನೇಸಱಿನೊಳ್ ೫
(ಲೀಲಾವತಿ, ೩–೫; ಸೂಕ್ತಿಸುಧಾರ್ಣವಂ ೯–೪)

---

[1]ರಂಗಳಿಗೆ ಬಱವಾಯ್ತು(ಸ)

ನಿಲ್ಲದೆ ತವೋಗಜಂ ಕಿಱು
ದಿಲ್ಲದೆ ಬೆಳಿದೊಗೆದ ಪಡುವಣವನೀಜನಮುಂ
ಶಲ್ಲಿ ಮರವಾಯೆ ಪಡುಗಡ
ಲಲ್ಲುದಿರ್ದುವು ಬಹಳ ತರಳ ತಾರಾಕುಸುಮಂ ೬

(ಸೂಕ್ತಿಸುಧಾರ್ಣವಂ, ೯-೫)

ಒದವಿದ ಗಗನಾಂಗಣದೊಳ್
ಕೆದಱಿದ ಪೂವಲಿಯ ಕಸವನೇಂ ಕಳೆದರೊ ದಿ
ಕ್ಸುದತಿಯರೆಂಬಂದದಿನೊ
ರ್ಮೊದಲೊಳ್ ಮೀನ್ ಪರೆದು ಪೋದವರುಣೋದಯದೊಳ್ ೭

(ಸೂಕ್ತಿಸುಧಾರ್ಣವಂ ೯-೭)

ತುಱುಗಿದ ಗಗನಾಂಗಣದೊಳ್
ಮಿಱುಗುವ ತಾರಾನಿಕಾಯ ತಂಡುಲಕುಲವಾ
ಯ್ದುಱಿಸಿ ರುಚಿಚಂಚುವಿಂದಂ
ಕುಱುಕಿದುದು ಪತಂಗತಾಮ್ರಚೂಡಂ ಕ್ರಮದಿಂ ೮

ಅರುಣರುಚಿ ರುಚಿರಾಂಬರಂ ಲಂ
ಬರುಚಿ ಜಟಂ ಸೋದು ತಿಮಿರ ಮಧುಕರಕುಳಮುಂ
ಕರಕಿಸಲಯದಿಂದಂ ಭಾ
ಸ್ಕರಭೌತಿಕನಾಯ್ದನೆಯ್ದೆ ನೀರ್ಪೂವುಗಳಂ ೯

(ಲೀಲಾವತಿ, ೨-೧೦೧)

ಒದವಿದ ತಾರಗೆಗಳ್ ನಿ
ಲ್ಲದವೆಲ್ಲಂ ಪರೆದು ಪೋಗೆ ಬೆಳಗಪ್ಪಾಗಳ್
ಚದುರಂಗದ ಬೆಳ್ಗರವುಡು
ಗಿದ ನೀಲದ ಮಣಿಯ ಮಾಟಿಕ್ಕೆಯಾಯ್ತಾಕಾಶಂ ೧೦

(ಸೂಕ್ತಿಸುಧಾರ್ಣವಂ, ೯-೭)

ಎಸಗಿದುದು ತಣ್ಣೆಲರ್ ನಾ
ಲ್ದೆಸೆ ಪಳಚನೆ ತೊಳಗಿ ಬೆಳಗಿ ತುಱುಗಿದ ತಾರಾ
ಪ್ರಸರಮುವು ಕಂಚುಗಾಱ
ಪ್ರಸರಮನುಡುಗಿದವೊಲುಡುಗಿ ಪೋದವು ನಭದೊಳ್ ೧೧

(ಸೂಕ್ತಿಸುಧಾರ್ಣವಂ, ೯-೮)

## ಶಂಖ :

ಜನಿಸಿದ ತಾಣವೇಂ ಕಿಱಿದೆ ವಾರ್ಧಿ ಸಹೋದರಿಯೇಂ ದರಿದ್ರೆಯೇ
ಘನತರ ಭಾಗ್ಯಲಕ್ಷ್ಮಿಯೊಡಹುಟ್ಟಿದನೇಂ ಲಘುವೇ ಹಿಮಾಂಶು ಭಾ
ವನೆನಿಸಿಪನೇನು ಜಾವಳನೆ ಕೃಷ್ಣನುಮೆಂಬುದ ಕೇಳಿ ಮತ್ಸರಿ
ಸ್ಸನೆ ಮಿಗೆ ಕಚ್ಚಿ ಕೊಲ್ವರೆನುತೞ್ವವೊಲಾದುದು ಶಂಖನಿಸ್ವನಂ ೧೨

ವಾರಿಧಿ[1]ಜನ್ಮ[2]ನಂ ಹರಿಕರಾಶ್ರಯನುನ್ನತದೇವಪೂಜನಾ
ಕಾರಣನಂ [3]ವಿಶುದ್ಧಶುಚಿ ನಿರ್ಮಳನಂ[4] ದುರಿ[5]ತಾ[6]ಪಹಾರಿಯಂ
ಕಾರಣಮಿಲ್ಲದೀ [7]ಮನುಜರೆಂಜಲಮಾಡಿದರೆಂದು[8] [9]ಶಂಖದ
ಬ್ಬಾರಿ[10]ಘರಂಗೆ ಪ್ರಯ್ಯಲಿಡುವಂ[11]ತೆಸೆದಿ[12]ರ್ದುದು ಸುಪ್ರಭಾತದೊಳ್ ೧೩

(ಸೂಕ್ತಿಸುಧಾರ್ಣವಂ ೯-೨೫)

ಪರಮಪವಿತ್ರನಲ್ಲನೇ ಶಿವಾರ್ಚನಯೋಗ್ಯತೆ ಶೂರನಲ್ಲನೇ
ಹರಿಕರಪದ್ಮಮಂದಿರಕೆ ಸಿಂಗರಮಂಗಕೆ ಪಾಂಗಿಯಲ್ಲನೇ
ತರುಣಿಯರ್ಗೊಪ್ಪುವೆತ್ತ ಕೊರಳ್ಗಂ ದೊರೆಯೆಂಬುದ ಕಂಡು ಕೇಳಿ ಕಂ
ಗುರುಡನು ಕಚ್ಚಿ ಕೊಲ್ವನೆನುತಂ ಮೊಱೆಯಿಟ್ಟುದು ಶಂಖನಿಸ್ವನಂ ೧೪

ಅಟ್ಟಳೆಯಂ ಪಳಂಚಲೆದು ಗೋಪುರಮಂ ಪರಿದೇಱಿ ಕೋಂಟೆಯಂ
ಮೆಟ್ಟಿ ಸುಧಾಪ್ರಮಾವಳಿಗೆ ಲಂಘಿಸಿ ಹರ್ಮ್ಯತಳಕ್ಕೆ ಪಾಯ್ದು ಚಾ
ವಟ್ಟದೊಳೆಯ್ದಿ ದೇವಕುಲದಾಡಲೆಯಿಂ ಗಗನೋದರಕ್ಕೆ ಧೀಂ
ಕಿಟ್ಟಿದುದು ದುಂದುಭಿಸ್ವನಮನೇಳಿಸಿ ಭೋಂಕನೆ ಶಂಖನಿಸ್ವನಂ ೧೫

(ಪಂಪರಾಮಾಯಣಂ ೫-೧೦೭, ಸೂಕ್ತಿಸುಧಾರ್ಣವಂ ೯-೪೯)

ಸರಸೀಸಂಜಾತಜಾತೋ[2]ನ್ಮಿಶಿತ[3]ನಿಶಿತಸೌರಂಭನಾದಂ
ಧರಣೀದಿಗ್ವ್ಯೋಮಭಾಗಾವೃತಧರಿತಘನಧ್ವಾಂತಸಂಭೇದನಾದಂ
ಸುರತಾಸಿಕ್ತಪ್ರಜಾಲಿಂಗನಜಲನಕರಪ್ರೋಥಿತಾನಾದನಾದಂ
ಪರಿವರ್ತ್ತ್ಯ[8]ಗಳ್[9] ಪ್ರಮೋದಂ ಶಿವನಿಳಯಕುಳೋತ್ಪಾತನೀ ಶಂಖನಾದಂ ೧೬

---

[1]ಗರ್ಭ(ಸೂ) [2]ಕರಂ ಶುಚಿಯುಮುಜ್ಜ್ವಳನಂ(ಸೂ) [3]ತೋ(ಸೂ) [4]ಯುಘನುನೆಂಜನ ಮಾಡಿದನೇನು(ಸೂ) [5]ಪಾತಾರ(ಸೂ) [6]ನದೊಳಿ(ಸೂ) [7]ಸ್ಸಿ(ಸ) [8]ದಂ(ಅ) [9]ದಮಾ(ಅ)

## ಗತಜಾರೆ :

ದುಗುಲಮನುಟ್ಟು ತೊಟ್ಟು ಪೊಸಮುತ್ತಿನ ಚಂದನದಣ್ಪನಿಕ್ಕಿ ಮ
ಲ್ಲಿಗೆಯ ಸರಂಗಳಂ ಮುಡಿದು ಚಂಪಕಮಾಲೆಯ ಸುತ್ತಿ ಮೇಲೆ ತುಂ
ಬಿಗಳಿಡಿಯಾಡಮಂತಜ್ಜೆಯಲಾಗದವೋಲ್ ಚಂದ್ರಿಕಾಮರೀ
ಚಿಗಳೊಡಗೂಡಿ ಪೋದಳಭಿಸಾರಿಕೆ ಮುತ್ತಿನ ಜೊಂಪಿಯಿಂಬಿನಂ ೧೭
(ಲೀಲಾವತಿ ೨-೩೭; ಸೂಕ್ತಿಸುಧಾರ್ಣವಂ ೮-೩೩೮)

ಇನಿಯನಲಂಪಿನಿಂ ತೆಗೆದು ಚುಂಬಿಸಿ ತಂಬುಲಮಿ[1]ಕ್ಕಿ ಸುಯ್ದು ಪೊ
ಯ್ದನುವಿಸಿ ಕೂಡೆ ನೊಂದ ತುಟಿಯಂ ತುದಿನಾಲಗೆಯಿಂದೆ ಪತ್ತಿದಿಂ
ಪನೆ ಸವಿಮಂತಿರೆಂಟೆ ಕುಚದೊಳ್ ನಸುನಾಟಿದ ತನ್ನಖಾಂಕಮಂ
ತನುರುಹವೇಱಿ ಗ್ಯಂದಳ್[2]ವಿ ನೋಡುತಲಿರ್ದಳು ಸುಪ್ರಭಾತದೊಳ್ ೧೮
(ಲೀಲಾವತಿ ೩-೧೬; ಸೂಕ್ತಿಸುಧಾರ್ಣವಂ ೯-೩೪)

ನಸುನಸಿಮೊಯ್ದು ಸುಕ್ಕಲರೆ ಪೋಬಿದ್ದಲೆ ಕೆಂದಸೆ ಕೂಡೆ ಬಣ್ಣದಿಂ
ರಸದೊಸರ್ವಂತಿರೊಕ್ಕ ನಱುದಂಬುಲಕಂ ಮುಡಿಯಿಂ ಕಟಿಲ್ದು ಬಿ
ಟ್ಟಿದ್ದಸೆವಲಗರಂ ಮುಹಾಳಿ ಮೊರೆವಿಟ್ಟು ಜಗುತ್ತಿರೆ ಬೀದಿಗಳ್ಳಿರ
ಪ್ಪಸತಿಯರಿಬ್ಬು ಪೋಪುದನೆ ನೇಬ್ಬಿಪ್ರೋಲಿರ್ದಗು ಸುಪ್ರಭಾತದೊಳ್ ೧೯
(ಲೀಲಾವತಿ ೩-೧೭; ಸೂಕ್ತಿಸುಧಾರ್ಣವಂ ೯-೩೬)

ರಸದ ಮಳೆಯುಜದ ಘುಸೃಣದ
ಕುಸುಮದ ಕಪ್ಪುರದ ಕವಿವ ಸೊವಡಿಂಗಳಿಗಳ್
ಮುಸುಱಿ ನವನೀಲಪಟಮಂ
ಮುಸುಕಿದವೋಲ್ ಜಾರೆಯೊರ್ವಳಡಿಯಿಡುತಿರ್ದಳ್ ೨೦
(ಲೀಲಾವತಿ ೩-೧೨; ಸೂಕ್ತಿಸುಧಾರ್ಣವಂ ೯-೩೨)

ಉಗುತಂ ಪೂಮಾಲೆಯಂ ಸೋರ್ಮುಡಿಯನಡಿಗೆ ಬಿಚ್ಚಿಂಬವೋಲ್ ನೀವಿಯಂ ಸಾ
ವಗಿಸುತ್ತಂ ತೂಕದಿಂದಂ ನಡೆಗೆಡಿಪ ನಿತಂಬಂಗಳಂ ಕಟ್ಟುವಂತ
ಕ್ಕಗಳಂ ಮುಚ್ಚುತ್ತೆ ನಿವಾಸ್ರಜಪತೆಯಿನಡಿಗೋರೆರೊರ್ವ ಭೂಭಾಂಯಿಯಂ ನುಂ
ಗುಗುದೆಂಬಂತಾಗಳಕ್ಕೊರ್ದಮಯ ಭಯನಸದಿಂ ಪಾಣ್ಗೆ ಪೋತಂದಳೊರ್ವಳ್ ೨೧
(ಲೀಲಾವತಿ ೩-೧೪; ಸೂಕ್ತಿಸುಧಾರ್ಣವಂ ೯-೩೩)

---

[1] ಕ್ಕೆ(ಸ) [2] ಸಿ ನೋಡುತವೇಂ ಕಿಱುಗೊಳೆ ಪೋದಳೋ(ಅಸೂ)

ಏಕಾದುದು ಬೆಳಗೀಗಳ
ದೇಕಾದುದು ಸುಸಿಲ್ಗೆ ತವಿಲುಹೋಕಾದುದುವೆಂ
ದಾ ಕಾಮಿನಿಯರ್ ಸುರಪನ
ಧಿಕ್ಕರಿಸುತ ಜಾರರೊಡನೆ ಸುಡಿಪುತ ನಡೆದರ್ ೨೨

ನಸು ನಾಣುಬ್ಬುವ ಕಾತರಂ ಜಿನುಗುತಿರ್ಪಾ ಲಲ್ಲೆ ಸರ್ವೇಚ್ಛೆಯಿಂ
ಮುಸಿದಂಗಂ ಕೆರಗಿಪ್ಪ ಚಿತ್ರಮೊಱಿಸಿದ್ದಾ ಜೀವಮೊಂದಾಸೆಯೊಳ್
ಬಿಸುಪಿಂದುಣ್ಮುವ ಘರ್ಮ ಘರ್ಮಜಲಮೊರ್ಮೊಱಾಗಿ ತಾಂ ಮೂಡುವಾ
ಪ್ರಾಸಕೂಟಂ ಮಿಗಿಲಾಗೆ ಜಾರನೊಡನಿರ್ದಾ ಜಾರೆಯೇಂ ಜಾಣಱಿದಳ್ ೨೩

ಕರ್ದುಕಿಸದಧರಂ ತಾಂ ಪತಿ
ಗೆರ್ದಗಾಣಿಸದೆಯ್ದೆ ಕೇಳ್ದು ಮಾಡುವ ರತಿಯಿಂ
ಬರ್ದುಂಕಂ ಕೆಡಲೀಯದಸತಿ
ಬರ್ದಿಲಾಣ್ಮಂ ಮೆಚ್ಚುವಂತೆ ನಡೆತರುತಿರ್ದಳ್ ೨೪

ಇನಿಯನ ಕೂಟದೊಂದು ಸುಖದಿಂದಿರ್ದೆಯಂ ನೆಱೆ ತಾಗಲೊರ್ವಳಾ
ತನಿಸೊಗಸಿಂ ಪೊರಳ್ದು [ತನಿಸೋಂಕಿ] ಜಿನುಂಗುವಳಂತುಟಾಡಿ ಮೇಣ್
ನೆನೆವಿರದೊಯ್ಯನೋಸರಿಸಿ ಕಣ್ಣರಿಪೇಲಿಸಿಯಿಂದಿನಂದಮಂ
ದಿನದಿನಕಪ್ಪುದೇಂಯೆನುತ ನಲ್ಲನನಪ್ಪುತ ಜಾರೆ ಜಾಣಱಿಪಳ್ ೨೫

ಮನೆಯೊಳಗಿರ್ದರೊಳ್ ಪೊರೆ ಕರಂ ಪೊಗದಂತೊಳಪೊಕ್ಕು ಮುನ್ನಿಪೊ
ಲ್ದ ಸುದಿನ ಗಂಡನಿಚ್ಛೆಗಳನೇ ಹಿತೆಯೆಂಬವೊಲೆಯ್ದೆ ಮಾಡುವಾ
ಮನೆಯೊಳೆ ಮುನ್ನಸಟ್ಟೆ ಕರುಗಂಭದಮಾಳಿಕ್ಕೆಯೊಳಿರ್ಪ ರಾತ್ರಿಯೊಳ್
ನೆನೆಪುತಲೆಂಪ್ದಿ ಬರ್ಪ ಚತುರತ್ವದ ಜೆಲ್ಪಿನ ಜಾರೆ ಜಾಣಱಿದಳ್ ೨೬

ಮುದದಲರ್ದಂಗಮುಬ್ಬುವ ನವಿರ್ ಪರಿತಪ್ಪ ಬೆಮರ್ಕೆ ಸಿಕ್ಕುಗಳ್
ಕದಲದ ಜಮ್ಮನಂ ಕುಱುಪನಾನದ ಬಾಯ್ತೆಱೆ ತಾಗದಾ ಪೊಯಿಲ್
ಪದಿರ್ಪಡಿ ಸೀಳ್ದ ಸುಯ್ದ್ ಮಿಡಿಕುವಳ್ಳೆರ್ದೆ ಜರ್ವ್ವನ ಪರ್ವ್ವ ಚಿತ್ರದಿಂ
ಪೊದಪಿರೆ ಜಾತಿಜಾರೆ ನೆಱೆ ಜಾರನೊಳಿರ್ದ್ದ ಜಲಕ್ಕನೆಯ್ದಿದಳ್ ೨೭

## ಗತದೀಪ:

ಸಲೆ ಸಖನಾದೊಡಂ ಬಲವದುಳ್ಳೆ ನಿತಂ ಹಿತವಂತನಪ್ಪನೇ
ಕಲಿಯುಗವಲ್ಲವಂ ಬಡವನಾದೊಡೆ ಬಲ್ಲಿಳಿ ಶತ್ರುವಪ್ಪುದೇ
ನೆಲೆಯಿಸಿಪಂದನುಂ ಧರೆಗೆ ತೋಱುವವೋಲುದಯಾನಿಳಂ ಕನಂ
ಬಗಿದು ಗವಾಕ್ಷದೊಳ್ ಪುಗುತೆ ದೀವಿಗೆಯುಂ ಕೆಡಿಸಿತ್ತು ಸಂದುವೋಲ್ ೨೮

ಉಗುಬ್ಬಿವ ಪೀರ್ದ ಕಟ್ಟಿಲೆಯುನಟ್ಟಿಸಲಾಱದೆ ಕಾಱುವಂತೆ ಕಾ
ಡಿಗೆಗಳನಾಗಳೋಪವರ ಕೇಳಿಗಳಂ ತಲೆಯೆತ್ತಿ ನೋಡುವಂ
ತೊಗೆದುವ ನಾಡೆ ನಾಣ್ಚಿ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್
ತೆಗೆದುಡುಗಿರ್ದ[1]ವೋ ಜೆಳ್ಗುಡಿಗಳಂ ರತದೀಪಿಕೆಗಳ್[1] ನಿಶಾಂತದೊಳ್ ೨೯
(ಲೀಲಾವತಿ ೩-೧೯, ಸೂಕ್ತಿಸುಧಾರ್ಣವಂ ೯-೩೬)

ಕಡುನಲ್ಲಂ ನೆರೆದಿರ್ದನೆನ್ನೆ ಸವೆದಿತ್ತಿಲ್ಲಿನ್ನುಪೋಪೆತ್ತಸೋ
ವರ್ದಡಿಯಿಂ ಬಿಬ್ಬಿದು ಪುಷ್ಪಮಾಲೆಯೆನುತಂ ಮುಗ್ಧಾಕ್ಷಿ ಚಿಂತಾತುರ
ಕ್ಷೈಡೆಯಾಗಿರ್ದನಮಬಿತ್ತಿಜಂಕೆಯೆಲರಿಂದುದ್ಬುದ್ಧಪಾರಾವತಂ
ಸೊಡರಂ ಬೀಸಿದುವೆಂಬ್ಬೆ ಕೇಳಿಲೆನಿಸುಂ ತಾನಬ್ಬಿವಟ್ಟಂದದಿಂ ೩೦
(ಲೀಲಾವತಿ, ೩-೧೯; ಸೂಕ್ತಿಸುಧಾರ್ಣವಂ, ೯-೩೮)

## ಪಡುವಣ ಚಂದ್ರ:

[2]ತಳರ್ದ ವಿ[2]ಯೋಗಿನೀಹೃದಯವಾಃಕಣ[3]ದಂತಿರೆ ಕೂಡೆ[3] ತಾರಕಾ
ವಳಿ ಮುಸುಳಿತ್ತು ಯಾಮಿನಿಯ ಬೆನ್ನನೆ ಪೋಪ ದುಕೂಲಚೇಲನಂ
ಚಳಮನೆ ಪೋಯ್ತು ಚಂದ್ರಿಕೆ ನಭೋವಧು ಸೂಡಿ ಬಿಸುಟ್ಟ ಮಾಲ್ಯಮಂ
ಡಲಪೊಲಿರ್ದನಸ್ತಗಿರಿ ಮಸ್ತಕದೊಳ್ ತುಹಿನಾಂಶುಮಂಡಳಂ

(ಜಗನ್ನಾಥವಿಜಯಂ; ೧೬-೧೩೫; ಸೂಕ್ತಿ, ೯-೧೬)
ಪುಷ್ಕರಮಿತ್ರನಂಮನಾಪರ್ವತಮಂ ಪರಿವೇಱತ ತಾರೆಗಳ್
ನಿಷ್ಕಳಿಯಾಗಿ ಪೋಗೆ ಪೊಗೆಸುತ್ತಿದ ಮುತ್ತಿನೊಲಿರ್ದುವಾಗಳಾ
ಪುಷ್ಕರದೊಂದು ಪಾಂಡುರುಚಿಯುಂ ತಳೆದಿರ್ದುದು ಮೂಡಣಾಗಸಂ
ಶುಷ್ಕಪಲಾಶಪತ್ರದವೊಲಿರ್ದುದು ಪೂರ್ವಹಿಮಾಂಶುಮಂಡಲಂ ೩೧

---

[1]ಬೆಳ್ಗುಡಿಯುನಂತರ ದೀಪಿಕೆಗಳ್ (ಸ) [2]ಳಗೆನ (ಸ) [3]ಕಳಿಪದಿ (ಸ) [3]ಸಂಕಂಪದಂತೆ (ಸೂ)

ತೀರ್ದುದು ಸುವರ್ಣಮುಡುಪನೊ
ಳಿರ್ದಡೆ ಪದೆಪಾಗದೆಂದು ರವಿಯುಂ [1]ಪೊರೆಯು
ಲ್ಕಿರ್ದರುಣಕರಗಳೋಳಿಯೊ
ಳಿರ್ದ[1]ಪನುಱಿ ನಂದಿ ಪಡುವ[2]ಗಡೆ[2]ಯೊಳ್ ಚಂದ್ರಂ ೩೩

[ಅನಂತಪುರಾಣಂ, ೮–೯೦; ಸೂಕ್ತಿ, ೯–೧೦]

ಪೆಱಿದೆಗೆದು ಚಂದ್ರಿಕಾಜಲ
ವಱಿತೊಡೆ ಕೆಸಱಂತೆ ತೋಱಿ ಗಗನಚ್ಛವಿ ಬಾಂ
ದೊಱಿಯಪರತಟದೊಳೆಳೆಮೀನ್
ಗುಱುಕುವ ಬಕನಂತಿರಿರ್ದುದಿಂದುವ ಬಿಂಬಂ ೩೪

[ಲೀಲಾವತಿ, ೭–೯೯; ಸೂಕ್ತಿ, ೯–೧೧]

ಇಡಿದುಪ್ಪಂಚಿಕಿಪೇಱ್ತ್ಸಿ ಸೆಟ್ಟಿದ ಬಿದಿಗಾಱದೆಲ್ಲಮುಂ ಬೇಗಗಿ
ಚ್ಚಡರ್ವಂತಿರ್ದುದು ಸಂಜೆಗೆಂಪದಱ ಬಿತ್ತ್ರೊಂದೊಡಸಲ್ ತೋರ್ಪಿನಂ
ಪಿಡಿದಂತಿರ್ದುವು ಸಟ್ಟೆ ಬಾಂಪೊಱಿಯ ಮೀನೆಲ್ಲಂ ಕಟಿಲ್ತಂದ ಜೆಂ
ದೊಡೆಯಂತಿರ್ದುವು ಸಕ್ಕೆವೆಟ್ಟೆಡೆಯೊಳ್ ನೀಹಾರರುಙ್ಮಂಡಲಂ ೩೫

[ಸೂಕ್ತಿಸುಧಾರ್ಣವಂ, ೯–೧೨]

ರಸಮೊಸರ್ವ ಜೇನಬಱಿವು
ಟ್ಟೆ ಸುರಿದು ಕವಿದಿಟ್ಟ ಕಂದುವಳ್ಳಿಯು ಕೊಡಸಾ
ಟಿಸಿ ಮುಡಿಗೆ ಸುತ್ತಿ ಬಿನದದೆ
ಬಿಸುಟ್ಟ ಪ್ರಾಸಾಲೆಯೆನಿಸಿದುದು ವಿಧುಬಿಂಬಂ ೩೬

[ಸೂಕ್ತಿಸುಧಾರ್ಣವಂ, ೯–೧೩]

ವಾರುಣಿ ಕಳ್ಳನೀಂಟಿ ಸುಱಿದಿಕ್ಕಿದ ಬಟ್ಟಲೊ ಭೀತಿಯಿಂ ಸಿತಾ
ಸ್ವೈರಿಣಿ ಪೋಗಿ ಬಿರ್ದ ಕಿವಿಯೋಲೆಯ ಮೌಕ್ತಿಕಪತ್ರಮೋ ನಭೋ
ವಾರಣದೊಳ್ ಮದೋತ್ಕಟದ ಪಾಂಡುರಪಿಂಡಮೊ ಪೇಱಿಸಲ್ಕೆ ನೀ
ಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿಯೊಳ್ ೩೭

[ಲೀಲಾವತಿ, ೩–೩; ಸೂಕ್ತಿಸುಧಾರ್ಣವಂ ೯–೧೪]

---

[1] ಕರೆಯುಲ್ಕಿರ್ದಲರ ಧಾರೆಯುಮಾರ್ದವೊಲಿ(ಸೂ) [2] ದೆಸೆ(ಸೂ)

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ ಚಂದ್ರಮಂಡಲಂ
ಬಾಡಿದ ಮಾಧವೀಮಧುರಮಂಜರಿಯಂತಿರೆ ತಾರಕಾಳಿ ನೀ
ರೋಡಿ ಕಱಿಲ್ದು ಬಿೞ್ದ ಕಱುವೂಗೆಣೆಯಾಗಿರೆ ತಣ್ಣನಪ್ಪೆಲರ್
ತೀಡೆ ತಪೋವನಂಬೊಲತಿಪಾವನಮಾಯ್ತು ನಭಂ ಪ್ರಭಾತದೊಳ್ ೩೮

[ಮಲ್ಲಿನಾಥಪುರಾಣಂ, ೧೦-೧೫; ಸೂಕ್ತಿ, ೯-೨೨]

ಮೀನ್ ಗಗನಾಗ್ರದೊಳ್ ಪೊಳೆಯೆ ಮುತ್ತುವೊಲೊಂದೆರಡಿರ್ದುವಚ್ಚವೆ
ಳ್ದಿಂಗಳನೀಂಟಿ ಬಿಟ್ಟುವು ಬಱಿಲ್ದ ಚಕೋರಿಗಳಸ್ತಶೈಲದೊಳ್
ತಿಂಗಳೊಸರ್ವ ಜೇನ ಬಱುವಟ್ಟೆವೊಲಿರ್ದುದು ಚಂದ್ರಮಂಡಲಂ
ಕೆಂಗೊಳಿಸಿತ್ತು ಮೂಡಣೆಸೆ ಕಾಡೆಳವಕ್ಕಿನ ಕಣ್ಣ ಬಣ್ಣದಿಂ ೩೯

[ಸೂಕ್ತಿಸುಧಾರ್ಣವಂ, ೯-೨೩]

ಪಾಲ್ ತುಂಬಿದ ರಜತಘಟಂ
ಮೇಲ್ ತೊಱೆದುಗೂಡಿ ತಿಳಿಪವೊಲಂಗಪ್ಪುಗಳ
ಸಾಲ್ ತನ್ನೊಡವರೆ ಚಂದ್ರನ
ರಲ್ತಂದಂ ಪಶ್ಚಿಮಾಚಲಾಗ್ರಕ್ಕಾಗಳ್ ೪೦

ಭೋಗಿಗುಡೆಗುಡದ ಪುತ್ರಂ
ಮೇಗೊಂದು ಫಲಮಿಲ್ಲದಾ ಬಂಜೆವರಂ
ಸಾಗದೆ ಕಾಲ್ಗೆಟ್ಟಿಹ ಮಿಗ
ಮೇಗಳಿರಲ್ ನೊಂದು ಚಂದ್ರನುದಧಿಗೆ ಜಗುಳ್ದಂ ೪೧

ಲೋಕದಿ ತಾಯುದರಕೆ ನೆರೆ
ದಾ ಕುವರಂ ಪೋಪುದುಂಟೆ ಖರಕರಧಾಟಿಗೆ
ನೂಕಿ ಹೊ ಹೊ ಹೊಕ್ಕನೆನೆ ವಿಧು
ವಾ ಕಡಲೊಳ್ ಪೊಕ್ಕ ಭಯಕದಾರೇಂಗೆಯ್ವರ್ ೪೨

ತಾರಾಂಗನಾಸ್ವತಂತ್ರೋ
ದಾರಮಹತ್ತೇಜವೆಯ್ದೆ ಪೆರ್ಚಿತ್ತೇಂ ಸಾ
ಕಾರದಿನೆಂಬನುನಯದಿಂ
ಘೋರಿಸೆ ಕರಗಿದವೊಲಿಂದು ಕರಗಿದನಾಗಳ್ ೪೩

ಕಟ್ಟಿದ ಕುದುರೆ ದಶಂ ಬಿಳಿ
ದಷ್ಟಾದಶ ವಜ್ರಮುಮಲ ನೀಲಧ್ವಜದಿಂ
ಕಟ್ಟಿರಲು ಸೂತಶಂಖನ
ಕಟ್ಟಳೆಯಿಂ ಶಶಿಯುಂ ಕೆಡೆವನಸ್ತಂಗಿರಿಯೊಳ್ ೪೪

ಆವರಿಸಿ ನಿಂದು ನಿಜಕಿರ
ಣಾವಳಿಗಳನುಡುಗಿಕೊಂಡು ತೀವಿದ ಕೊಳದೊಳ್
ಕಾವುಡಿದ ಬಿಳಿಯ ತಾವರೆ
ಪೂವಾಟ್ದಿಪೋಲಾಟ್ದಿಸಂಬುನಿಧಿಯೊಳ್ ಚಂದ್ರಂ ೪೫

[ಸೂಕ್ತಿಸುಧಾರ್ಣವಂ, ೯-೧೬]

ವಾರುಣಿಯನೊಲಿದು ಮುಟ್ಟಿದ
ಕಾರಣದಿಂ ಮುೞುಗುವಂತೆ ತನ್ನಯ ಕಱಿಕಯುಂ
ನೀರೊಳಲೆವಂತೆ ಪಶ್ಚಿಮ
ವಾರಿಧಿಯೊಳ್ ಮಗ್ನನಾದನಂದಮೃತಕರಂ ೪೬

[ಲೀಲಾವತಿ, ೩-೬; ಸೂಕ್ತಿ, ೯-೧೮]

ತಾರಗೆಯ ಕುಮುದವನದ ಚ
ಕೋರಂಗಳ ಕಣ್ಗೆ ಕವಿದ ಕತ್ತಲೆಯೆನೆ ನೀ
ಹಾರಕರನಲಸಿ ಪೞಿಕ್ಕಗೆ
ನಾರಲೊಡಂ ಮುಗುೞ್ದ ಮರ್ಬು ಪರ್ಬಿತ್ತಾಗಳ್ ೪೭

[ಲೀಲಾವತಿ, ೩-೯; ಸೂಕ್ತಿ ೯-೨೦]

## ಕೋೞಿ :

ಪೊಕ್ಕಂದೀ ಪುರದೊಳ್ ಸುಖ
ವಕ್ಕಾಡಿತು ಚಂದ್ರನೆಂಬ ರಾಯಂ ಪೋಗಲ್
ದುಷ್ಕರ[1][ವಹ್ನಿಯೆ][1] ತೋಱಿದೆ
ಕುಕ್ಕೂಕೂಯೆಂದು ಕೋೞಿ ಕೂಗಿದುವಾಗಳ್ ೪೮

---

[1] ಪೊಹ್ನ (ಸ)

ಕಮಲಕೆಯುಪ್ಪಳಂ[1] ಬಿಸಿಲುವಕ್ಕಿಗನಾತ್ತ ವಚೋವಿಲಾಸಿತಂ
ಕುಮುದಕೆ ಜೋಗುಳಂ ಸಿತಗಸಂತತಿಗಂ ಪ್ರರಪಕ್ಷಗರ್ಜಿತಂ
ತಿಮಿರಕೆ ಭಾಸ್ಕರಂ ಪ್ರಸಿನದಂ ಸಲೆ ಯೋಗಿಗೆ ಬ್ರಹ್ಮಘೋಷಣಂ
ಸಮನಸುವೆಂಬವೊಲ್ ಬಿಡದೆ ಕೂಗಿಡುತಿರ್ದುವು ತಾಮ್ರಚೂಡಗಳ್ ೪೯

ಸರಸಿಜಮಿತ್ರ ಕೂ ತಮವಿದಾರಣ ಕೂ ಹಿಮಧೂಮಕೇತು ಕೂ
ನರರಜಹಾರಿ ಕೂ ಖಗಮೃಗಂಗಳ ಜೀವನ[2]ರಕ್ಷಪಾಲ[3] ಕೂ
[4]ಕಿರಣಸಹಸ್ರ ಕೂ ತ್ರಿಜಗಲೋಚನ ಕೂಯೆನುತಂ ದಿನೇಶಗಂ
ಪರಿದಱಿ ಪ್ರಯ್ಯುಲಿಕ್ಕುವೊಲು ಕೂಗಿಡುತಿರ್ದುವು ತಾಮ್ರಚೂಡಗಳ್[5] ೫೦

[ಸೂಕ್ತಿಸುಧಾರ್ಣವಂ, ೯–೨೯

ಸಲಿಲಜಮುತ್ಪಲಂ ಬಿಸಿಲುವಕ್ಕಿ ಚಕೋರವಿಂದುಕಾಂತದೊಳ್
ಗೆಲಲವಿರುದ್ಧವೀಯುಪಪಕ್ಷದ ಚಂದ್ರಮ ನಿನ್ನನೋಲ್ ಚತು
ರ್ಬಲವನೆ ಕೂಡಿ ಬಂದು ನೆಱೆ ದಂಡಿಱಿದಂ ದಿನನಾಥ ಕೇಳು ಕ
ಗ್ಗೊಲೆಗಿದು ವೇಳೆಯೆಂದು ಕರೆವಂದದಿ ಕೂಗಿದವಂದು ಕೋೞಿಗಳ್ ೫೧

ಹರಿಸೈಲಕ್ಕಾ ದಿನೇಶಂ ಬರುತಿರೆ ಗಗನಂ ಕೆಂಪನಾಳ್ದತ್ತು ನಿದ್ರಾ
ಭರಭಂಗೋನ್ಮೀಲಿತಾಕ್ಷಂ ಬಿದಿರ್ದೆಱಕೆಗಳಂತಿರ್ದ ಮೂರ್ಧಪ್ರದೇಶಾಂ
ತರಮಂ ಕೆತ್ತುತ್ತೆ ಗೋಣಂ ಕುಸಿದು ನೆಗೆಪುತುಂ ಕೇಸರಂ ಬಿರ್ಚಿ ಕೂಗು
ತ್ತಿರೆ ಘಂಟಾನಾದದಿಂ ಕಾಮುಕರಿಗೆ ವಿರಹೋದ್ರೇಕನಾ ತಾಮ್ರಚೂಡಂ ೫೨

ಕೊರಲೊಳ್ ಕೊಂಕಿರ್ದ ಗೋಣಂ ಬಿದಿರ್ದು ಝಾಡಿತೆಯಿಂ ಪಾದು ಪಕ್ಷಂಗಳಿಂದಂ
ಬರಿಕೆಯ್ಯಂ ಸೀವಿ ಮುಂಪಕ್ಕಮನೆರಡಡಿಯಂ ಚವಿಯುಂ ಕೆತ್ತುತುಂ ಪಾ
ಯ್ದುರಮಂ ಮುಂಗಾಲೊಳೊಂದುತ್ತಿಡಬಲದಡಿಯಿಂ ಮುಂದನಾರೈದು ಪೂರ್ವಾಂ
ಬರಮಂ ನೋಡುತ್ತೆ ಕೂಗುತ್ತಬುಜಜನಮುಮಂ ಬೀಡಿನೊಳ್ ತಾಮ್ರಚೂಡಂ(?) ೫೩

ಪಕ್ಷದ್ವಂದ್ವಂಗಳಂ ಝಾಡಿಸಿ ಕೊರಳ ಸಿವಿರ್ದೆತ್ತಿ ಮೂಗಿಂದೆ ಗೋಣಂ
ಪಿಕ್ಕುತ್ತಂ ಬಂದು ಪೇಹಾವಳಿಗಡಱಿ ದಿಶಾದೇವಿ ನೀಂ ಪೋಗುಪೋಗೀ
ಗರ್ಕಂ ಪೂರ್ವಾಚಲಕ್ಕೈದಿದಪನೆನುತೆ ಚೆರರ್ ಸಾಜುವೊಂದಂದದಿಂದಂ
ಕುಕ್ಕೂಕೂಹೆಂಬನಾದಂ ನೆಗೞೆ ನಗರದೊಳ್ ಕೂಗಿತಾ ತಾಮ್ರಚೂಡಂ ೫೪

---

[1] ವಂ(ಸ) [2] ರಕ್ಷಣಾರ್ಥ(ಸ) [4] ಪಿರಿದುಮುದಾರದಿಂದೆ ತಿಮಿರಂಗಳ ನುಂಗಿದ ಜಾರ ಚೋರರಾ । ಹರಣವಿರೋಧಿ ಕೂ ಎನುತ ಕೂಗುತಲಿರ್ದುದು ತಾಮ್ರಚೂಡನುಂ(ಸೂ)

ಊದಿದುದು ತಣ್ಣೆಲರ್ಗಳಳಿ
ನಾದಂ ಗಾಂಧಾರದೊಳೊಂದಿ ನೆಗೆಬ್ದುದು ಪದ್ಮಾ
ಮೋದಮಿನಿಸಂ ತೊವರ್ತೊವ
ರಾಮುವು ಕೂಗಿದುವು ತಾಮ್ರಚೂಡಚಯಂಗಳ್ ೫೫

[ಸೂಕ್ತಿಸುಧಾರ್ಣವಂ, ೯–೬೨]

ಮುಟ್ಟುವಡಾಯ್ತು ಜೊನ್ನದುಣಿಸುಂಬ ಚಕೋರಚಯಕ್ಕೆ ಬಂಧನಂ
ಬಿಟ್ಟುದು ಪದ್ಮಕೋಶದೊಳಕೊಂಡ ಮದಾಳಿಗೆ ಚಕ್ರವಾಕ ನೀಂ
ಬಿಟ್ಟಿರಬೇಡ ನಿಮ್ಮ ನಿಯದೊಳ್ ನೆರೆಯೆಂದುಱೆ ಸಾಱುವಂತೆ ಜೊ
ಪ್ಪಿಟ್ಟು ಕೆಡಂಗಿ ಕೂಗಿದುದುವಾಗಳೆ ಕುಕ್ಕುಟನೊಂದು ನಿಚ್ಚಟಂ ೫೬

[ಸೂಕ್ತಿಸುಧಾರ್ಣವಂ, ೯–೨೭]

ಒದವಿದ ನಿದ್ರೆ ಪಿಂಗೆ ಕುಸಿದೊಯ್ಯನಡಂಗಿದ ಗೋಣನೆತ್ತಿ ನೀ
ರದಪಥದತ್ತ ಕೊರ್ಗುಡಿಸಿ ¹ನೋಡುತ ನೆತ್ತಿಯ¹ ಕೇಸರಂಗಳಂ
ಬಿದಿರ್ದು ತಟಂತಟಂ ಪೆಱಕೆಗುಟ್ಟಿ ತಗುಳ್ದೊಡನೆತ್ತಿ ಕೋೞಿ ಕೂ
ಗಿದುದನುವರ್ಪ್ಪಿನೋಪರಿರ್ದ ಪಪ್ಪಸೆ ಪಾಱೆ ನಿಶಾವಸಾನದೊಳ್ ೫೭

[ಸೂಕ್ತಿಸುಧಾರ್ಣವಂ, ೯–೬೬]

ತಲೆಯೊಳ್ ವಿದ್ರುಮಮಂ ನಿಜಾಕ್ಷಿಯುಗದೊಳ್ ಮಾಣಿಕ್ಯಮಂ ಪಕ್ಷಸಂ
ಕುಲದೊಳ್ ಪಚ್ಚೆಯನಿಂದ್ರನೀಲವನಲಂಪಿಂ ಗರ್ಭದೊಳ್ ಮೌಕ್ತಿಕಾ
ವಲಿಯಂ ವಜ್ರಮನಗ್ರಚಂಚುಪುಟದೊಳ್ ಪಾದಂಗಳೊಳ್ ವಿಕಸ್ಪ ನಿ
ರ್ಮಳ ರತ್ನಂಗಳನಾವಗಂ ನೆನೆಯಿಸಲ್ ಸಾರ್ದಿರ್ದುವಾ ಕೋೞಿಗಳ್ ೫೮

ಚಲಿಸದ ದೃಷ್ಟಿ ಪುರ್ಬಡರ್ದು ನೀಡಿದ ಗೋಣ್ ನಿಶಿಯುಂ ತುಡುಂಕಲ
ಪ್ಪಳಿಸುವ ಚಂಚುಘಾತಿಯಿಱುವಾರ್ದೊಡೆವಾಲಿ ಮಿಡುಂಕುತಿರ್ಪ ತೊ
ಟ್ಟುಳಿಕೆ ಚಲಂ ಕವಲ್ತು ಪೆಡಮೆಟ್ಟದ ಬಲ್ಪು ವಿಚಾರಿಸಲ್ಕೆ ಸು
ಪ್ಪಲಿತನದಿಂ ತೊಡರ್ಚಿದವು ಕಾಳಿಗವಂ ಕಡುಗೆಯ್ದು ಕೋೞಿಗಳ್ ೫೯

ನೆಗಪಿದ ಚಂಚು ನೀಡಿ ನಿಮಿರ್ದಾ ಕೊರಲೊಳ್ ಕೆದಱಿರ್ದ ಕೇಸರಂ
ಮುಗಿಯದೆ ನಟ್ಟದಿಟ್ಟಿ ಸಲೆ ಜೋಲ್ದರಿವಿರ್ಚಿದೆಱಂಕೆ ಬೇಗದಿಂ
ಒಗೆಯದೆ ಬಂದು ನಿಂದು ಪುಟನೆಬ್ಬಿ ಪಳಂಚಿರಪೊಂದನೊಂದು ಕ್ಕೆ
ಪಿಂಗೆ ಪೆಱಗಾಲ್ಗಳಿಂದಿಱಿವ ಕೌತುಕಮಾದುದು ಕೋೞಿಕಾಳಿಗಂ ೬೦

---

¹ ನೋಡಿ ಶಿರೋಧರ(ಸೂ)

ಯೋಗಿಜನಕ್ಕೆ ತತ್ತ್ವಗತಿ ಸಂಸ್ಥಿತಿಯಂ ಕಳೆಯೊಳ್ ಕಳಾವಿದ
ರ್ಗೆ ಗುರುವೇಧೆಯಂ ಕವಿಜನಕ್ಕೆ ಕವಿತ್ವದ[1]ಸೌಖ್ಯ[1]ಮಂ ಬಹೂ
ದ್ಯೋಗಿಜನಕ್ಕೆ ತದ್ವಿಷಯಸಿದ್ಧಿಗಳಂ ನೃಪರ್ಗಸ್ವರಾಜರಾ
ಜ್ಯಾಗಮ[2]ವೃತ್ತಿ[2]ಯಂ ಮನಕೆ ಪೇರ್ಚಿಪುದೊಪ್ಪುವ ಸುಪ್ರಭಾತದೊಳ್ ೬೧

[ಸೂಕ್ತಿಸುಧಾರ್ಣವಂ, ೯-೪೦]

## ವಿಕಸಿತ ಪದ್ಮ :

ಕಂದನೆರ್ದೆಯಲ್ಲಿ ತಾಳಿದ
ಚಂದಿರಗಂ ಸೋಲ್ತ ಕುಮುದಿನಿಯು ಬಾಳುವೆಂಬೀ
ನೆಂದು ನಗುವಂತೆ ಕಮಲಗ
ಳೊಂದೊಂದೆಸಳೊಡೆದು ವಿಕಸಿಸಿದುವಂಬುದೊಳಂ ೬೨

ಕೆಂಗದಿರನ ಕರಕಿಸಲಯ
ಸಂಗದಿನಾರಕ್ತಮಾದ ಕೆಂದಾವರೆಗಳ್
ಸಂಗಡಿಸಿಯಲರ್ದವಂಗಜ
ಸಿಂಗಳಮಂ ಬಿರಯಿಗಳ್ಗೆ ಸಲಿಗೆವಡೆಪವೋಲ್ ೬೩

[ಸೂಕ್ತಿಸುಧಾರ್ಣವಂ, ೯-೪೩]

ತರುಣಿಯರಾಸ್ಯಕಂ ಹರಿಯನೇತ್ರಕೆ ಸಾಲ್ಮೊಗನಾದ ತಾಣಕಂ
ಸಿರಿಯನಿವಾಸಕಂ ಮದನನಾರಿಯ ಬಾಣಕೆ ತಾನೆಯಾಗಿ ಸಾ
ಸಿರದಳದಿಂ ಪವಿತ್ರತರಪುಷ್ಪಮದಾದರವಿಂದಸಂಕುಳಂ
ಬಿರಿದುವು ತನ್ನ ಕಂಡು ರವಿಯೆಂತಹ ಸ್ನೇಹಿಸ ರೂಪನಪ್ಪನೋ ೬೪

ಕುಮುದಿನಿಗಧಿಕಶ್ವಾಸಂ
ಸಮನಿಸೆ ಕಮಲಿನಿ ನಗುತ್ತ ಕೋಕಂಗಳ್ ತ
ದ್ಭ್ರಮರಧ್ವನಿಯಂ ತೋಱುತೆ
ಸಮಸುಖವಾಯ್ತೆಂದು ರತಿರಸಾಯನಮೆಸೆಯಲ್ ೬೫

---

[1]ಸಾರ(ಸೂ) [2]ವೃದ್ಧಿ(ಸೂ)

ಮುಂದೆ ಮಹಾಸುರಮಥನಂ
ಬಂದೇಱಿದನಮರಗಿರಿಶಿಖಾಗ್ರಮನೆಂದಾ
ನಂದದಿ ನೊರೆವಳಿಯುಂದರ
ವಿಂದೌಘದಿ ಮುಂಪೆ ಸಿಪ್ರ ತಿಳಿದವು ಕೊಳದೊಳ್ ೬೬

ಹರಗಿರಿಯಂ ಪರಿದೇಱುವ
ಹರಿಪಾದಕ್ಕಮುಮ ಪರಪಿದಂ ಶಶಿ ನೀಲಂ
ಬೆರಸಿದ ಪೀತಾಂಬರಮೆನೆ
ಬಿರಿದಲರ್ದುವು ತುಂಬಿವೆರಸಿ ಪೊಂದಾವರೆಗಳ್ ೬೭

[ಸೂಕ್ತಿಸುಧಾರ್ಣವಂ, ೯–೪೨)

ನಡು ನಸುಪ್ರೊಂಗಿ ಸುತ್ತಿಱಿಯೆ ಪೊತ್ತಿಪೆಸಟಿಶ್ಯಾನೆನೆರ್ಚಿ ತಣ್ಣೆಲ
ರ್ಗೆಱೆವೆಱಪಾಗೆ ಪ್ರೋಕ್ಷ್ಣ ಸುಟ್ಟಿಯುತ್ತಿರೆ ತಳ್ಪ ಸಡಿಲ್ದಗಲ್ದರಲ್
ಪಿಡಿದುಡುಗಿರ್ದ ಕೇಸರದ ಸುಜ್ಜೆನೆ ಸೂಸೆ ಮಸಲ್ದು ಜೆಲ್ವಿನೊಳ್
ಗಡಣಿಸಿವತ್ತು ಪುಂಬಗಲೊಳೆಂಬುದುಹಂ ಸರಸೀಸಮೂಹದೊಳ್ ೬೮

[ಸೂಕ್ತಿಸುಧಾರ್ಣವಂ, ೯–೪೫]

ಜಗಮಂ ಬೆಳಗುತಲಿರ್ಪಾ
ಮಗನಂ ಪೂರ್ವಾಶೆ ಪಡೆದಳೆಂದದ ನಿಟ್ಟಿಸೆ
ಮಿಗೆ ಬರುತಲೊಂದನೊಂದೊಂ
ದಗಲದೆ ಕಾಣುತ್ತ ಕೋಕಗಳ್ ಕೂಡಿರ್ದುಂ ೭೦

## ಕೋಕಕೂಟ :

ಮನಸಿಜನಂಬು ನಾಂಟೆ ಮನಮುಂ ತನುವುಂ ಮಿಗೆ ನೊಂದು ನೋ
ವಿನೊಳ್ ವನಿತೆಯುರಾತ್ರನಲ್ಲಿಭರನೆಯ್ದುತೆ ಕಾಣದೆ ತಮ್ಮ ನಲ್ಲರಂ
ವನರುಹಮಿತ್ರನೀಕ್ಷಣಮೇ ತಂದಪನೆಂದವು ಪೂರ್ವದಿಕ್ಕಿನೊಳ್
ಜನಿಸುವ ಭಾನುಮಂಡಲಮನೀಕ್ಷಿಸುತಿರ್ದುವು ಜಕ್ಕವಕ್ಕಿಗಳ್ ೬೯

ಪರಿಪರಿತಂದು ಪಕ್ಕಿಗಳಿರಡಿಲ್ಲಿನೆ ಪಕ್ಕದಿನಪ್ಪಿ ಕಂಗಳಿಂ
ಸುರಿಯೆ ಮುದಾಶ್ರು ಮುಂಪಲಿಯ ತುಪ್ಪುಟಿನೊಯ್ಯನೆ ಕರ್ಚಿ ಚಂಚುವಿಂ
ಸರಸಿಜಪತ್ರಕೋಟಿಯ ಕುಸುಂಕುಱುನತ್ತಳಿಪೊಯ್ದು ಕಾಂತನೊಳ್
ನೆರೆದು ರಥಾಂಗಕಾಂತೆಯಿರ್ದಿನಾಱುದುದಾಗಳಿ ಸುಪ್ರಭಾತದೊಳ್ ೭೧

ಬೆಳಗಪ್ಪ ಜಾವದೈಕಿ
ಲ್ಯೊಳೆ ಶೀತಕ್ಕಾಱದಳ್ಕಿ ತೊಟ್ಟೆರ್ದ ಧರಾ
ತಳವೆಂಬ ಪೆಣ್ಣ ಪೊಸಕಂ
ಬುಳಿಕೆಯ ಪೊಸಮುತ್ತಿನಂತಿರಾದುವು ಪನಿಪಲ್ ೭೨

(ಸೂಕ್ತಿಸುಧಾರ್ಣವಂ, ೯–೩೯]

ಪಡುವಲ್ ಚಂದ್ರನ ಬೆಳ್ವೆಳ
ಗೊಡರಿಸುವರುಣೋದಯಾಂಶು ಮೂಡಲ್ ಕೈಕೊಂ
ಡೆಡೆಯಣ ತಮಮೊಪ್ಪಿದುದಿರು
ಳುಡುಗಿದ ಕಟ್ಟಿಲೆಯ¹ ಬೆಳೆಯ ಮುಱಿಯೊಗುಪೆಕೆಯೊಲ್¹ ೭೩

[ಅನಂತನಾಥಪುರಾಣಂ, ೮–೬೩; ಸೂಕ್ತಿ, ೯–೫೭]

ಅಳಿದ ಕುರುಳ್ ತಡಂಬುಡಿದ ಸೋರ್ಮುಡಿ ಜಾಗಿ ಬೆಳರ್ತ ದೋರೆವಾಯ್
ಮುಳಿಮುಳಿಸುತ್ತಮಿರ್ದ ನಗೆಗಣ್ ನಸುಜೋಲ್ದುಡೆ ಕೊಂಕಿಪೋಲೆ ಚ
ಪ್ಪಲರ್ದ ಘನಸ್ತನಂ ನನನಖಾಂಕಮಲಂಕರಿಸಲ್ ಸಿಜೇಷ್ಟೆಯಿಂ
ಸುಳಿವಬಲಾಜನಂ ದಿನಕರೋದಯಕಾಲದೊಳೊಪ್ಪಿ ತೋಱುಗುಂ ೭೪

[ಸೂಕ್ತಿಸುಧಾರ್ಣವಂ, ೯–೬೧]

ಕಱಿತುದುವು ಪನಿ ಪುಲ್ಲೊಳ್ ಕಂ
ದೆಱಿತುದುವು ನವಿಲೆರ್ದು ಕರಿಣಿ ಕರ್ಣಂಗಳನೆ
ಚ್ಚಱಿಸಿದುವಾಗುಳಿಯಿಂ ಬಾಯ್
ದೆಱೆದುವು ಸಿಂಗಂಗಳಲ್ಲಿ ಮುನ್ನೇಸಱಿಸೊಳ್ ೭೫

(ಕಾದಂಬರಿ ಪೂ. ಭಾ ೧೪೨–೩೪; ಸೂಕ್ತಿ, ೯–೬೪]

ಭುವನಮನಾವಗಂ ಪುದಿದು ತೀವಿದ ತಣ್ಣದಿರೊಯ್ಯನೊಲ್ದು ಕೈ
ರವವನಮಾದುದೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ
ದುವು ಸುರಸಿಂಧುವಾದುವು ಸುಧಾರ್ಣವಮಾದುವು ಚಂದ್ರಕಾಂತಮಾ
ದುವು ಹಿಮಮಾದವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯಮಾದುದೇ ೭೬

[ಲೀಲಾವತಿ, ೩–೭; ಸೂಕ್ತಿ, ೯–೧೯]

---

¹ಬಱಿಯ ಮುಱಿಗಳಿವೆನಿಸಲ್ (ಸೂ)

ಇನನ ಬರವಿಂಗೆ ಪೂರ್ವಾಂ
ಗನೆ ಕುಂಕುಮಪಂಕದಿಂದಲಂಕರಿಸಿದಳೋ
ತನುವನೆನೆ ಸಂಜೆ ರಂಜಿಸಿ
ತಿನಸುದಯಮನಱುಪುವಂತೆ ಮೂಡಣದೆಸೆಯೊಳ್ ೭೬

[ಸೂಕ್ತಿಸುಧಾರ್ಣವಂ, ೯–೫೫]

ಕಮಲನಿಗಂ ಕೋಕದ್ವಯ
ಸಮುದಯಕಂ ಕೆಟ್ಟಿರೞದರೆಂದಿನನೆ ಪಸಾ
ಯಮನಟ್ಟಿದಂತೆ ಪೆಱತುದು
ನಿಮಿರ್ದರುಣೋದಯದೊಳೆಸೆವ ಸಂಧ್ಯಾರಾಗಂ ೭೭

[ಅನಂತನಾಥಪುರಾಣಂ, ೮–೬೫; ಸೂಕ್ತಿ, ೯–೫೬]

ಅಳಿಗಳ್ ಪಾಡುವಿನಂ ಸರೋಜಿನಿ ನಗುತ್ತುಂ ನೋಟ್ಪಿನಂ ಕೂಡೆ ಪುಂ
ಸ್ಕೋಕಿಲೆಯರ್ ಬಿಚ್ಚುವಿನಂ ರಥಾಂಗಯುಗಳಂ ಪಾರ್ಕೈವಿನಂ ತಂಬೆಲರ್
ಕಳಿಸ್ಪುವಂ ಬಜುಗ್ಗೆವಿನಂ ರವಿನಟಂ ಬಂದಾಡುವಾಗಳ್ ಸುಪಾ
ಟಳನತ್ತ್ರಂ ತೆಱೆಯಾದವ್ರೋಲ್ ಪೆಱೆದುದಾ ಪ್ರಾರ್ವಾಶೆ ನುಣ್ಣಂಪಿನಿಂ ೭೮

ದಿವಿಜಗಜಂ[1] ಚಚ್ಚರದಿಂ
ದವೆ ಪೊಱಮಡೆ ಸುರಪನೊಲ್ದು ಕಟ್ಟಿದ ಮಾಣಿಕ
ದವಿರಳಮೊಗನಡಮೆನೆ[1] ಚಿ
ಲ್ಪುವೆತ್ತುದಂದುದಯಸಮಯ ಸಂಧ್ಯಾರಾಗಂ ೭೯

[ಜಗನ್ನಾಥವಿಜಯಂ, ೧೬–೧೩೮]

ಕೆಂಪೇಱುತು ಮೂಡಣದೆಸೆ
ಸೊಂಪೇಱುತು ಚಕ್ರಮಿಥುನಮಬ್ಜಕದಂಬಂ
ಕಂಪೇಱುತು ಸಕಳಜನಂ
ಪೆಂಪೇಱುತು ಪದ್ಮಮಿತ್ರನುದಯಿಸುವಾಗಳ್ ೮೦

[ಗಿರಿಜಾಕಲ್ಯಾಣಂ, ೫–೪]

ಉಳ್ಳಲರ್ದ ಪದ್ಮಿನೀಕುಳ
ದೊಳ್ ಕಂಪಂ ಪಡೆಯಲುಷ್ಣಕರನ ಕರಂಗಳ್
ತೆಳ್ಳಗೆ ಮುಂಬರಿದಂದದೆ
ಬೆಳ್ಳನೆ ಬೆಳಗಾಯ್ತು ನೋಟ್ಪಡಾಕ್ಷಣಕಾಗಳ್

---

[1] ಪಜ್ಜರದಿಂ ಪರಿಬಿಜ್ಜಿಸೆ ಕಾಣಲದ್ರಿಯಾ ದಂತಿಗೆ ಕಟ್ಟುವ ಚಿನ್ನಾಗವವಮೆನೆ(ಅ)

ಪರಿಯೆ ಕುರುಳ್ಗಳಂತೆ ತಿಮಿರಂ ಮುಗಿಯುತ್ತಿರೆ ಸೆಯ್ಬ್ಬಲಕ್ಷ್ಮಿಯುಂ
ತಿರೆ ಪಿಸುರಂತಿರಾಜುತಿರೆ ತಾರಗೆ [1]ಕೂಡೆ [2]ವಿಭಾತಕಾಂತನೊಳ್
ನೆರೆದ ಸುಖಾಂತ್ಯದೊಳ್ ಕರಗುತಿರ್ಪ ಮನೋಹ[3]ರಮಾ[4]ದ್ರ್ರಕುಂಕುಮಾಂ
ಬರಮೆ [5]ಬಟಿಲ್ವವೋಲ್ ಬಳೆದು[6]ದ್ದೈಂದ್ರಿಯ ಸಾಂಧ್ಯಮಯೂಖಮಂಡಲಂ ೮೨

[ಲೀಲಾವತಿ, ೩-೮೦; ಸೂಕ್ತಿ, ೯-೫೪]

ಎಳೆದಳಿರಂತೆ ಪೆರ್ಚುರದ ಕೊಂಬುಗಳೊ[1]ಳ್ ಸಮ[2]ಧಾತುನಿರ್ಝರಂ
ಗಳ ಪೊಸಲಂತೆ ಶೈಲಶಿಖರಂಗಳೊಳುಜ್ವಲಮು[3]ಪ್ಪ [4]ಮಾಣಿಕಂ
ಗಳ ರುಚಿ ಪರ್ವಿದಂತೆ ಸುರಕೂಟ ಕನತ್ಕಲಶಂಗಳೊಳ್ ತಳ
ಥ್ಥಳಿಸಿ[5]ತು ಪೂರ್ವಭೂಧರದಿ ಭಾಸ್ಕರ[6]ಚಂಡಕರಾಂಶುಜಾಲಕಂ ೮೩

[ಲೀಲಾವತಿ, ೩-೮೧; ಸೂಕ್ತಿ, ೯-೭೭]

## ಕಿರಣೋದಯ :

ಒಳವು ಮಣಿನಿಕರಮುದಯಾ
ಚಳದೊಳ್ ಗಡಮೆಂದು [1]ನಿಂದನಗಗ[2]ಳ್ಗಿಂತ್ರಂ
ಕುಲಿಶದೊಳೆ ಮೀಂಟಿ [3]ಮೋಗು[4]
ಚ್ಚಳಿಸಿದ ಮಾಣಿಕ[5]ಮನರುಣಕಿರಣಂ[6] ಪೋಲ್ತಂ ೮೪

[ಸೂಕ್ತಿಸುಧಾರ್ಣವಂ, ೯-೬೯]

ತಡೆಯದೆ ತಮಮೆಲ್ಲಮನೊಂ
ದೆಡೆಯೊಳ್ ತಂದೊಟ್ಟಿ ಪೂರ್ವದೆಸೆಯೊಳ್ ಧಾತ್ರಂ
ಸುಡೆ ಸಿಡಿದುರಿವೆರಸಿದೆ ಬ
ಲ್ಗಿಡಿಯಂ ಪೋಲ್ತೆಸೆದನರುಣಕಿರಣಸಹಸ್ರಂ ೮೫

[ಸೂಕ್ತಿಸುಧಾರ್ಣವಂ, ೯-೭೦]

ಜಲಧಿಯ ತೀರದೂರ್ಧ್ವಪುಳಿನಂಗಳೊಳೊಪ್ಪುವ ಸತ್ಪ್ರವಾಳದಂ
ತಲೆವ ಸುದಿಗ್ಗಜಂಗಳ ಶರೀರದ ಮೇಲಣ ರಕ್ತಧೂಳಿನಂ
ತಿಳಿಯ ಮಹಾಪುರಂಗಳ ಸುಕೋಂಟೆಗಳಟ್ಟಳೆಯಲ್ಲಿ ತೋಱುವಾ
ಸುಲಲಿತ ಪದ್ಮರಾಗರುಚಿಯಂತಿನಕಾಂತಿಗಳೊಪ್ಪೆ ತೋಱುಗುಂ ೮೬

---

[1] ತೀರೆ(ಅ. ಸೂ) [2] ರಿಯಾ(ಅ. ಸೂ) [3] ನೆ ಬಾಲ್ದ ರಾಜ್ಞಿ ಕಮು(ಸ) ಜಗುಲ್ಬ ಪೋಲ್ ಬೆಳತು (ಸೂ) [1] ಕ್ಕೊಪ್ಪಳಿ(ಸ) [2] ಥ್ಯ(ಸ) [3] ದೀಕ್ಷದುಸ್ಮಿತಮುಂಪಕ(ಸೂ, ಅ) [4] ಬಂದುಸಿಂದ(ಸೂ) ಮುಗುಟ್ಟು(ಸೂ) [5] ದಲರುಣದಿರಮುಂ(ಸ)

ಇಳೆಯ ಮುಸುಂಕಂ ಮೆಲ್ಲನೆ
ಕಳೆವುತ್ತೆಚ್ಚಱಿಸುತಂ ರಥಾಂಗಮನಬ್ಜಂ
ಗಳನೆವೆದೆಱೆಯಿಸುತಂ ದೆಸೆ
ಗಳನೆಬ್ಬಿಸುತೆದ್ದುವಾಗಳಿನಕಿರಣಂಗಳ್ ೮೭

ಕೊರಗಿಸಿ ಕುಮುದಮನೆಬ್ಬಿಸಿ
ಯರವಿಂದಮನಾತ್ತತಮಮನೋಡಿಸಿ ದೋಷಾ
ಕರನಂ ಕಳೆಗುಂದಿಸಿ ಪರಿ
ವರಿದುವು ತರಣಿಯ ತಳಾರರಂತಿನ ಕಿರಣಂ ೮೮

ಮುಗಿಯುಲೊಡರ್ಚಿ ನಿಂದ ಕುಮುದಾವಳಿಯುಂ ಸರಸೀರುಹಂ
ಮುಗುಳ್ಗೆ ನಗುವಂತಿರಿರ್ದವು ಚಕೋರಿಗಳಸ್ತಗಿರೀಂದ್ರದತ್ತಲು
ಳ್ಳಿಗಮೊಳೆ ನೋಡುತಿರ್ದುವು ರಥಾಂಗಯುಗಕ್ಕೆ ಮನೋಜನಿಸೆ ಮೆ
ಲ್ಲಗೆ ತೊಲಗುತ್ತುಮಿರ್ದುದುದಯಾದ್ರಿಗೆ ಗೋಪತಿ ಬರ್ಪ ಪ್ರೊಟ್ಟಿನೊಳ್ ೮೯

## ಮಂಡಲೋದಯ :

ಮುದಯಿಸುತ್ತುಂ ಸರಸಿಜಮುಂ
ಜಿದಱಿಸುತ್ತುಂ ಕೈರವಂಗಳಂ ಘನಪಥದೊಳ್
ಕೆದಱುತ್ತುಂ ಕಿರಣಾಳಿಯ
ನುದಯಾಚಳಚೂಡದಲ್ಲಿ ಮೂಡಿದನರ್ಕಂ ೯೦

ಕಮಳಾಕರದಮಳ್ಳೆಕ್ಕೆಗ
ಳ ಮನೋರಥವರಳೆ ವಾಸವದಿಶಾಮುಖದೊಳ್
ತಮಮೆಂಬ ಮೊದೆ ಬೇಯುತ್ತಿರೆ
ವಿಮಲಜಗಚ್ಚಕ್ಷು ತೊಳಗಿ ಬೆಳಗುತ್ತಿರ್ದಂ ೯೧

ಜಗದ ತಮುಹರಣ ಜನದೊಳೆ
ಗೊಗೆವಾಯುವ ಪೊಗೆಮ ಸೂಸುವಧಿಕಗುಣಾಢ್ಯಂ
ಜಗದಂಬಕ ಜಲಜಾಧಿಪ
ಭಗಣಪದಮುಮಹೀಧರಾಗ್ರಕೆಯ್ದಿದನಾಗಳ್ ೯೨

ದೊರೆವೆತ್ತ ಪೂರ್ವದಿಗ್ಭೂ
ಧರಗುಹೆಯಿಂ ಕಿರಣನಖಮುಮಂ ಮುಸದಿಸಕೇ
ಸರಿ ಪೊಱಮಟ್ಟಳಿಯ ತಮೋ
ಕರಿಯಂ ಗುಳುಕೆಂದು ನುಂಗಿದತ್ತಾಕ್ಷಣದೊಳ್ ೯೩

ಮುಗಿಯಲನುವಾಯ್ತು ನೆಯ್ದಿಲು
ಮುಗಲಲ್ಕನುವಾಯ್ತು ಜಾರವಸಿತೆಯರೆಲ್ಲಂ
ನಗೆಯಂ ತಾಳ್ದವು ತಾವರೆ
ಜಗಮಂ ಬೆಳಗಲ್ಕೆ ಸೂರ್ಯನುದಯಂಗೆಯ್ದಂ ೯೪

ಪಿಡಿನಡುವಿನಮರ್ದ ಜಘನದ
ಕುಡುವುರ್ವಿನ ವೃತ್ತಕುಚದ ನಳಿತೋಳೆಡೆಯೊಳ್
ತೊಡರ್ದಿರಲೀಯದೆ ಮೂಡಿದೆ
ಪಿಡಿನೀನೊಕ್ಕುಡಿತೆ ನೀರನೆಲೆ ದಿವಸಕರಾ ೯೫

ತ್ರಿದಶಾರಿ ಕೇಶಿ ಮಡಿದಪ
ನಿದು ಶುಭದಿನಮೆಂದು ಶಕ್ರ ಮಂಗಳವಸನ
ಕ್ಕುದಯಾಚಲವೇದಿಯೊಳಿಟ್ಟ
ಪಿದ ಪೊಂಗಳಸಂಬೊಲಾಯ್ತು ದಿನಕರಬಿಂಬಂ ೯೬

(ಜಗನ್ನಾಥವಿಜಯಂ, ೫-೪೦]

ಜಲಜಕೆ ಬಾಗಿಲಂ ತೆರೆದು ರಾತ್ರಿಯ ಪಾಳೆಯಮೆತ್ತಿಪೋಗೆ ನೆ
ಯ್ದಿಲೆಯಗ್ರಹಂಗಳಂ ಬಲಿದು ಜಾರರು ಜೋರರಡಂಗಿ ಪೋಗೆ ತಿಂ
ಗಳ ತಿಳಿರಶ್ಮಿಗಳ್ ತೊಲಗೆ ತೇಜದಿ ಪ್ರಾರ್ಥಿಸೆ ವಿಪ್ರರೇಟಿಕ್ಕೆಯಿಂ
ಮಲಿವ್ರತ ಚೂಣಿ ಸೇರಿದುದು ಭಾನುದಯಾದ್ರಿಯೊಳಿತ್ತನೋಲಗಂ ೯೭

ತಿಮಿರಮಿದೆಂಬುದೇ ಪರೆದ ಕಾಂಡಪಟಂ ಮಿಗೆ ಮೂಡಣಾದ್ರಿ ಶಿ
ಲ್ಪಮಯಮಂಗಭೂಮಿ ಲಸದಂಬರಮೊಪ್ಪುವ ನಾಟ್ಯಗೇಹಮೆ
ಯ್ದೆ ಮಲಕರಂಗಳೊಲ್ದಭಿನಯಂಗುಡುತಿರ್ಪ ಕರಂಗಳಾಗಲಾ
ಕಮಲಿನಿ ನೋಡಲಾಡುವ ಮಹಾನಟನೆಂಬಿನಮರ್ಕನೊಪ್ಪಿದಂ ೯೮

ಕಳವೆಗಳಿಂದೆ ಪೆರ್ಮರ ಲತಾಳಿಯ ಸತ್ಫಲದಿಂದೆ ಪಾಲ್ಗೊಸರ್
ಜಲವನುಳೀಕ್ಷುವಾಜ್ಯದ ಪಯೋಧಿಗಳಿಂದಮೆ ನಾಡೆನೋಡಿ ತೋ
ರ್ಪೆಳೆಯಿಸಿಪ್ರೊಂದು ಸತ್ರಕುಟಿಯೊಳ್ ದ್ವಿಜನೂಟಕೆ ಸಾರೆ ಮುನ್ನ ತಾಂ
ದಿಟಿಪಿಪ ರತ್ನದಷ್ಟಗೆಯಂದದೊಳೊಪ್ಪಿತು ಸೂರ್ಯಮಂಡಲಂ ೯೯

ಕಮಲವರಳ್ದು ಕೈರವಮುಂ ಕಂಪಿಸೆ ತಾರಗೆಯೋಡೆ ಚಂದ್ರನಿಂ
ಹಿಮಕಿರಣಂಗಳುಂ ಸರಿಯೆ ಪಕ್ಕಿನ ನಿರ್ಜರವಾರೆ ಕುಕ್ಕುಟಂ
ತಮತನುಗೆಟ್ಟು ಸಾಱೆ ಸುರಜಾಲವ ಮನ್ಮಥ ಬೀಱೆ ಧಾತ್ರಿಯೊಳ್
ತಮವು ತೆರಳ್ಚೆ ಮೂಡಣುದಯಾದ್ರಿಯನೆಯ್ದಿದನಾ ದಿವಾಕರಂ ೧೦೦

ಸರಸಿಜಮಿತ್ರ ಕಾಶ್ಯಪಸುಪುತ್ರ ತ್ರಿಕಾಲಪವಿತ್ರ ಯಾಮಿನೀ
ಚರಜನಕಾಲಚಕ್ರ ಜಗತೀತಳನೇತ್ರ ತಮಾಬ್ಧಿಭೈತ್ರ ದಿ
ಗ್ವರಮಣಿಛತ್ರ ಸಪ್ತಹಯಪತ್ರ ಬುಧಪ್ರತಪಾತ್ರ ಮೇರುಮಂ
ತಿರುಗುವಚಿತ್ರ ಮೂಡುತುದಯಾದ್ರಿಯೊಳೊಪ್ಪಿತು ಮಿತ್ರಮಂಡಲಂ ೧೦೧

ಕಮಲವಿಕಾಸ ಮೂಡೆ ಮಧುಪಂಗಳ ಕಂಠದಿ ನಾದ ಮೂಡೆ ಚೆಂ
ಗುಮುದಕೆ ಚಿಂತೆ ಮೂಡೆಯೆಣೆಪಕ್ಕಿಯ ತೆಕ್ಕೆಗೆ ಹರ್ಷ ಮೂಡೆ ಬ
ಲ್ಲಿಮರಕೆ ಚಿಂತೆ ಮೂಡೆ ಕವಿತಾಜನಚಿತ್ತಕೆ ಯುಕ್ತಿ ಮೂಡೆ ಸಂ
ಭ್ರಮ ಜನಕಣ್ಗೆ ಮೂಡೆ ಉದಯಾದ್ರಿಯ ಮೇಲೆ ಜಗಾಕ್ಷ ಮೂಡಿದಂ (?) ೧೦೨

ಉದಯಗಿರೀಂದ್ರಮೆಂಬ ಪೊಸಕಂಭದಿನಾರ್ದು ಗಭಸ್ತಿಕೇಸರಂ
ಬಿದಿರ್ದು ಕರಂಗಳಂ ನೆಗೆಪಿ ಮುನ್ನರುಣೋದಯವಿಸ್ಫುಲಿಂಗಮಂ
ಕೆದಱಿ ತಮಿಸ್ರದೈತ್ಯನೊಡಲಂ ಬಗಿದಾ ಕಮಲಾನುಮೋದದಿಂ
ದುದಯಿಸಿದಂ ದಿನಾಧಿಪನೃಕೇಸರಿ ಧಾತ್ರ್ಯಹರಚ್ಯುತಾತ್ಮಕಂ ೧೦೩

ನಗೆಯುಂ ಪಂಕಜವಕ್ತ್ರದೊಳ್ ದುಗುಡಮುಂ ಸ್ವೈದಿಲ್ಗಳೊಳ್ ಲಲ್ಲೆಯು
ಪ್ಪುಗೆಯುಂ ಕೋಕಯುಗಂಗಳೊಳ್ ಪದಪಿನಿಂ ಕಣ್ಬೇನೆಯುಂ ಗೂಗೆಯೊಳ್
ಸೊಗಸಂ ದಿಕ್ತಟದೊಳ್ ಪೊದಳ್ದು [1]ಭಯಮಂ ಜಾರಾಂಗನಾ[1]ನೀಕದೊಳ್
ಮಿಗೆ ಮೂಡುತ್ತುದಯಾದ್ರಿಯೊಳ್ ನೆಲಸಿದಂ ಪಂಕೇಜಿನೀವಲ್ಲಭಂ ೧೦೪
[ಸೂಕ್ತಿಸುಧಾರ್ಣವಂ. ೯-೭೬]

ರವಿಶಶಿಯಂತೆ ತಣ್ಣದಿರ್ಗಳೆಯ್ದುದಯಾದ್ರಿಯ ಮೇಲೆ ಹಸ್ತಪ
ಲ್ಲವದಿನೊರಲ್ದ ಸಾಧುಜನವರ್ಧ್ಯಮನೆತ್ತೆ ಸರೋಜಷಂಡಮಂ
ದವಿರಳಪುಷ್ಪಿತಸ್ಥಿತಿಯನೊಪ್ಪೆ ಜಗಜ್ಜನನೇತ್ರಪುತ್ರಿಕೋ
ತ್ಸವಫಲವಾಗಲೆಂದುದಯಶೈಲಮನೇಱಿದನಂಬುಜಪ್ರಿಯಂ ೧೦೫

---

[1] ಜಯಮಂ ರಥಾಂಗಾ(ಸೂ)

ಯತಿಗಳ ಹೃತ್ಸರೋಜವನಗಳಲ್ ಮಿಗೆ ಕೌಶಿಕಲೋಚನೋತ್ಪಲೋ
ನ್ನತಿ ಮುಗಿಯಲ್ ಜಗಜ್ಜನದ ಜಾಡ್ಯತಮಂ ಬಿಱುತೋಡೆ ಸತ್ಕವಿ
ಪ್ರತತಿ ಮತಿಪ್ರಕಾಶಕಿರಣಂ ಮಿಗೆ ಸಜ್ಜನಚಕ್ರವಾಕದಾ
ಯತಸುಖಮಪ್ಪಿನಂದುದಯಶೈಲಮನೇಱದನಂಬುಜಪ್ರಿಯಂ ೧೦೬

ಕಮಲಾನಂದಕರಂ ತಮೋಹರಕರಂ ಚಕ್ರಪ್ರತಿಷ್ಠಾಪಕಂ
ಸುಮನಃಪ್ರೀತಿಕರಂ ಮಹೋದಯಯುತಂ ಪೀತಾಂಬರಾಲಂಕೃತಂ
ಸಮಿತಾಶಾಮುಖಶೋಭಿತಂ ಬಹಳದೋಷಾರಾತಿಲಕ್ಷ್ಮೀಶನೊಲ್
ತಮವರ್ಗಾಪಹಮೂರ್ತಿ ಸೂರ್ಯನುದಯಂಗೆಯ್ದಂ ಧರಾಧೀಶ್ವರಂ ೧೦೭

ಮುರರಿಪು ಪಾರಿಜಾತಕುಜಮಂ ಕೊಳೆ ಬಿಲ್ವಿಡಿದಂದು ಸೋಲ್ತ್ತಿ ನಾಂ
ಪರಿಣತನಪ್ಪೆನಿಡ್ವಣಗೊಳಿಂದೊಸೆದರ್ಚಿಸಿ ಮೂಡವೆಟ್ಟದೊ
ಳ್ಗರುಡಿಯೊಳಿಂದ್ರನಾಂತ ಪೊಸಮಾಣಿಕದಡ್ಡಣಮೆಂತುವೆಂಬಿನಂ
ಕರಮೆಸೆದತ್ತು ಶೋಣರುಚಿಯಿಂದುದಯಾದ್ರಿಯೊಳರ್ಕಮಂಡಲಂ ೧೦೮

[ಜಗನ್ನಾಥವಿಜಯಂ, ೧೬-೧೩೯; ಸೂಕ್ತಿ, ೯-೭೩]

ಸ್ಮರಪರಿತಾಪದಿಂ ಕರಗಿ ಕೋಟಲೆಗೊಂಡಿರ್ದಯಾಜಿ ಸುತ್ತಲುಂ
ಪರಿಪರಿದೊಲ್ದು ವಲ್ಲಭೆಯನೀಕ್ಷಿಸಿ ಕಾಣದೆ ಚಕ್ರವಕ್ಕಿಗಳ್
ಸರಸಮೃಣಾಳಮಂ[1] ಸತಿಗೆ ತೋಱುವವೋಲ್ ಮಱುಗುತ್ತಿರಲ್ಕೆ ತಾಂ[1]
ಕರುಣಿಸಿದಂತೆ ಬಂದುದಯಶೈಲಮನೇಱದನಂಬುಜಪ್ರಿಯಂ ೧೦೯

[ಸೂಕ್ತಿಸುಧಾರ್ಣವಂ, ೯-೭೪]

ಜಲಧಿಚಳೋರ್ಮಿಚಾಮರಚಯಂಗೆ ದಿಶಾಧಿಪದಿಗ್ಗಜೇಂದ್ರಸಂ
ಕುಳಪರಿವಾರಭೋಗಿಗೆ ನಭೋಮಣಿಮಂಟಪಮಂಡನಂಗೆ ಕ
ಣ್ಗೊಳಿಪ ಜಗನ್ಮಹಾಪ್ರಭುಗೆ[2] ನಿರೀಕ್ಷಿಸಲೆತ್ತಿದ ರತ್ನದರ್ಪಣಂ
ಬೆಳಗಿದುದೆಂಬಿನಂ ಸುರಪದಿಕ್ಕಿನೊಳೊಪ್ಪಿತು ಸೂರ್ಯಮಂಡಳಂ[3] ೧೧೦

(ಲೀಲಾವತಿ, ೩-೮೨; ಸೂಕ್ತಿ,೯-೭೧)

---

[1] ಶಿಖಿಗೆ ತೋಱುವವೋಲ್ ಕರಗುತ್ತಮಿರ್ಪುದುಂ(ಸೂ) [2] ನಂಗೆ ಚಂ(ಸ) [3] ಗಭೀಕ್ಷಿಸ ಲೆತ್ತಿದ ಸುಪ್ರಭಾತ ಮಂಗಳ ಮಣಿದರ್ಪಣಕ್ಕೆ ದೊರೆಯಾಯ್ತುದಯಾದ್ರಿಯೊಳರ್ಕ ಮಂಡಲಂ(ಸೂ-೮)

ನಿಶಿ ಬಿಟ್ಟೋಡೆ ಶಶಾಂಕನುನ್ನತಕರಂಗಳ್ ಬಾಡೆ ಕಂಜಾಳಿ ಸಂ
ತಸಮಂ ಸೂಡೆ [1]ಮದಾಳಿ ಪಾಡೆ ನಲವಿಂ[1] ಚ[2]ಕ್ರಾಹ್ವ[2]ಯಂ ಕೂಡೆ ಶೈ
ತ್ಯಸಮೀರಂ ನೆಱೆ ತೀಡೆ ಕೈರವನಿಕಾಯಂ ಕೋಡೆ ಪೂರ್ವಾದ್ರಿ ಕೆಂ
ಬಿಸಲಿಂದೊಪ್ಪಿರೆ ಮೂಡಿದಂ ಭಗಣಶೋಭಾತಸ್ಕರಂ ಭಾಸ್ಕರಂ ೧೧೧

(ಸೂಕ್ತಿಸುಧಾರ್ಣವಂ,೯–೭೫)

ಉದಯಗಿರೀಂದ್ರಮುದ್ವಹನವೇದಿಕೆ ರಂಜಿಪ ಸಂಜೆಗೆಂಪು ತ
ಳ್ತಿರ್ದವಿವ ತೋರಣಾವಳಿ ರಥಾಂಗಕಳಧ್ವನಿ ವೇದನಾದದಂ
ದದನಿರೆ ಬೇಗದಿಂ ತಿಮಿರಕಾಂಡಪಟಂ ಸೆಱಸಿಂಗೆ ರಾಗದಿಂ
ದುದಯಿಸಿದಂ ದಿವಾಸುವತಿಯೊಳ್ ನೆರೆವಂದದಿನಂಬುಜಪ್ರಿಯಂ ೧೧೨

ತಮವಿರದೋಡೆ ಜಾರೆ ಮನೆಗೋಡೆ ತಳಿರ್ಗಳು ಬಾಡೆ ಪೆರ್ಮೆಯಿಂ
ಭ್ರಮರಗಳಾಡೆ ಕಂತು ಪರಿದೋಡೆ ಧರಾತಳ ಕೂಡೆಯೆಲ್ಲರುಂ
ಕ್ರಮದಲಿ ನೋಡೆ ಭೈರವಿಯು ಪಾಡೆ ಹಿಮಂ ಕಱದೋಡೆ ಚಕ್ರಸಂ
ಭ್ರಮದಲಿ ಕೂಡೆ ಪದ್ಮ ನಲಿದಾಡೆ ಪ್ರಭಾಕರ ಮೂಡೆ ರಾಗದಿಂ ೧೧೩

ಕಮಲಂ ಕೈಪಱಿಗುಟ್ಟೆ ಚಕ್ರಮಿಥುನಕ್ಕಾನಂದಮಂ ಪುಟ್ಟೆ ಚೆಂ
ಕುಮುದಂ ತಳ್ತಿಸೆದೊಂದುಗುಟ್ಟೆ ವಿಹಗಂ ಕೊಂಬಿಂದಕೊಂಬಟ್ಟಲಾ
ಹಿಮ ಹಿಮ್ಮೆಟ್ಟೆ ಶಶಾಂಕನಳ್ಕಿ ಮನದೊಳ್ ದುಃಖಂ ಕರಂ ಪುಟ್ಟಲಾ
ಭ್ರಮರಂ ಕಂಪಿನ ಸಾಲಲಟ್ಟೆ ದಿನಪಂ ಪೂರ್ವಾದ್ರಿಯೊಳ್ ಪುಟ್ಟಿದಂ ೧೧೪

ಸರಸೀಸಂಜಾತಮೊಂದೊಂದಲರೆ ಕುಮುದಮೊಂದೊಂದೆಸಳ್ ಮುಚ್ಚೆವೊಂದೊಂ
ದು ರಥಾಂಗಂ ತನ್ನೊಳೊಂದುತ್ತಿರೆ ಬಹಳತಮೋಜಾಲ ಬೆಂದೋಱಿ ಸಿಂಗು
ತ್ತಿರಲಾತ್ತಜ್ಯೋತಿಯಿಂದಂಬರಮನಿರದೆ ಬಂದೇಱಿದಂ ಶಕ್ರದಿಗ್ಭಾ
ಘರಮಂ ಲೋಕಪ್ರದೀಪಂ ಸಕಲಮುನಿಜನಸ್ತೋತ್ರಘೋಷಂ ದಿನೇಶಂ ೧೧೫

ಪರೆಯಲ್ ತಾರಾನುರಾಗಂ ನೆರೆಯಲಿರುಳಗಲ್ದಿರ್ದ ಚಕ್ರಾಹ್ವಯಂ ತಾ
ವರೆಗಳ್ ತನ್ಮೊಂದಲಂಪಿಂದಲರೆ ದಿವಿಜರಾನಂದದಿಂ ವರ್ಣಿಸಲ್ ಭಾ
ಸುರ ಪೂರ್ವೋತ್ತುಂಗಶೈಲಾಗ್ರದಿನುದಯಿಸಿದಾದಿತ್ಯನಿಂದಂ ಪವಿತ್ರೀ
ಕರಮಾದೀ ಸುಪ್ರಭಾತಂ ಕುಡುಗೆ ನಮಗೆ ಸಂಪ್ರೀತಿಯಂ ಪ್ರೀತಿಯಿಂದಂ ೧೧೬

---

[1]ಮರಾಳಿ ಪಾಡೆಯೊಲವಿಂ(ಸೂ) [2]ಕ್ರದ್ವ(ಸೂ)

ಕಾಯಕ್ಲೇಶವದೆನ್ನೊಳಾಗೆ ಜಗದೊಳ್ ಸಂಚರ್ಚರ್ಗೆ ಮೆಯ್ವೆರ್ಚಿದ
ನ್ಯಾಯಂ ಕೈವಿಗಲೆನ್ನ ಕಾಂತನನಲಂಪಿಂ ಕೂಡಿದಳ್ ಪಶ್ಚಿಮಾ
ಶಾಯೋಷಿತ್ಕುಟಿಲಾತ್ಮೆಯೆಂದು ದಿವಸಶ್ರೀ ಜ್ಪಿದು ಬೆಂಬತ್ತಿದಳ್
ಛಾಯಾಸಂಕುಳದಿಂದೆನಲ್ಕೆ ಪಡೆಯಲ್ ಮುಂತಾದುವೆಲ್ಲಾ ನೆಟಿಲ್ ೧೧೭

ಚತುರಾನನಗೊಪ್ಪಿದ
ಸಿತಚಕ್ರವೊ ಧ್ರುವನು ಪಿಡಿದ ಶಂಖದ ಪರಿಯೋ
ಕ್ಷಿತಿಯೊಳ್ ಜಾವದ ವೇಳೆಯೊ
ಳತಿಶಯದಿಂ ಮೆಱೆವುತಿರ್ದನಾ ಮಾರ್ತಾಂಡಂ ೧೧೮

ಸುರಪಾಲನೆಂಬ ವಟುಕಂ
ಕಿರಣದ ನೂಲಿಂದೆ ಪಿಡಿಯುತಾಡಿಪ ಬಟುವಿನ
ಸುರಚಿರದ ವಾತಪೂರಣ
ದಿರವಂ ಪೋಲ್ತಿರ್ದನೆಂದು ಜಾವದ ದಿನಪಂ ೧೧೯

## ಮಧ್ಯಾಹ್ನ :

ದಿಕ್ಕುಗಳೆಂಟುಂ ಮೊಳೆಗಳ್
ಮೊಕ್ಕಳಕರ ಬಿಗಿದ ನೇಣುಮಂಬರದೊಲ
ಕ್ಕಿಕ್ಕಿದ ಮಾಣಿಕವಲ್ಲರಿ
ಜಿಕ್ಕಸಮಂಬಡೆದ ಸೂರ್ಯ ಮಧ್ಯಾಹ್ನದೊಳಂ ೧೨೦

ಸುರಪತಿ ಜಾರನಗ್ನಿ ಕಡುಗೋಪಿ ಯಮಂ ದಯಹೀನನಾಪಗಂ
ನಿರುತಿ ನಿಶಾಚರಂ ವರುಣನೇಂ ವಿಕಟಾಂಗನು ವಾಯುವೆಂಬನಂ
ಚರಿಸುತಲಿರ್ಪ ಸಂಚಲ ಕುಬೇರನು ಗರ್ವಿತನೀಶ ಭಿಕ್ಷುಕಂ
ಸ್ಥಿರಮಿವರಲ್ಲವೆಂದು ಗಗನಾಂಗಣಮಧ್ಯದೊಳಿರ್ದ ಭಾಸ್ಕರಂ ೧೨೧

ಧರೆ ಪೊತ್ತಲ್ ಸೂರ್ಯಕಾಂತಂ ಭುಗಿಲಿಡಲುಱಿ ಕಾಯ್ದಾಪಗಾವಾರಿ ಬತ್ತಲ್
ಗಿರಿಗಳ್ ಪೋಟಾಗಿ ಬೀಟಿಲ್ ದಿಗಿಭಸಮುದಾಯಂ ಗೀಟಿಡಲ್ ನೋಟಿಟ್ಟೋಡತ್ತಾ
ಸರಮುಪ್ಪ ವ್ಯೋಮಕೇಶಾಕ್ಷನ ನೊಸಲುರಿಕಣ್ಣೆಂಬವೊಲ್ ತೀವ್ರತೇಜೋ
ತ್ಕರಮಂ ಬೀಱುತ್ತೆ ಮಧ್ಯಾಹ್ನದ ಸಮಯದೊಳೊಪ್ಪಿರ್ದದಾದಿತ್ಯಬಿಂಬಂ ೧೨೨

ಸುರಪಥ ವಿಷ್ಣುನಾಭಿಕಮಲಂ ಗಗನಾಂಗನೆ ತೊಟ್ಟ ಪೇೞಲಾ
ಸ್ಥಿರತರಮಧ್ಯನಾಯಕಸುರತ್ನಮನಂತಲಸದ್ಘಟಂಗೆ ಸಂ
ದಿರಿಸಿದ ಬೆನ್ನಕನ್ನಡಿ ನಭೋದ್ವಿಪದಾ ನಡುಗಂಟೆಯೆಂಬಿನಂ
ಕರಮೆಸೆಯುತ್ತ ನೋಡಲಿನನಂಬರಮಧ್ಯದೊಳಿರ್ದ ಭೂಪತೀ ೧೨೩

## ಮೂಱುಜಾವ :

ಧ್ರುವನ ಮೇಲೆತ್ತಿ ವರುಣಂ
ಸವನಿಸುತಂ ಬರುತ ಪಿಡಿಸಿಕೊಂಡನೊ ಶೋಣಿಮ
ನವೀನಛತ್ರಮನೆಂದೆನೆ
ದಿವಕರನೊಪ್ಪಿರ್ದ ಮೂಱುಜಾವಮೊಳೊಲವಿಂ ೧೨೪

ಸುರಪತಿ ಪಶ್ಚಿಮಾಂಗನೆಗೆ ಕೂರ್ತೊಡನಟ್ಟುವ ರತ್ನದರ್ಪಣಂ
ಹರಿಪದಬಾಲಕಂ ಪಿಡಿಯುತಾಡುವ ಗುಂಜಿಯದೊಂದು ಕಂತುಕಂ
ವರುಣನ ರಾಜಧಾನಿಗೆಸೆದೊಪ್ಪುವ ಹರ್ಮ್ಯದ ಹೇಮಕುಂಭಮೆಂ
ಬುರುತ್ತರಭಾವದಿಂ ಕಿರಣಸಾಸಿರನೊಪ್ಪಿದ ಮೂಱುಜಾವಮೊಳ್ ೧೨೫

ಓರಂತೆ ಮೆಚ್ಚಿದಂ ಕೃತಿ
ಸಾರಂ ರವಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೨೬

ಗದ್ಯ || ಇದು ಸರಸ್ವತೀಸರ್ವಾಂಗವರ್ಣ್ಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣಸುಕವಿಪುಂಗವ ಮಲ್ಲನಿರ್ಮ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಸೂರ್ಯೋದಯವರ್ಣನಂ ನವಮಾಶ್ವಾಸಂ

# ಋತುವರ್ಣನಂ

## ವಸಂತಋತುವರ್ಣನಂ

ತರು ಮೃಗ ಪಕ್ಷಿ ಮೇಘ ಜಲ ವಾಯು ದಿಶಾಜನ ಕಾಯಭೋಗ ಭಾ
ಸ್ಕರ ವಿಧು ರಾತ್ರಿ ವಾಸರ ಸುರಾಲಯ ಪರ್ವ ರತೋಪಚಾರ ಸಿಂ
ಧುರ ಮಧುಜನ್ಮ ಯಾನ ಮದನೋದಯ ಸಸ್ಯವಿಶೇಷಭಾವದೊಳ್
ಪರಿಣತನಪ್ಪವಂಗೆ ಋತುವರ್ಣನವಿಸ್ತರವೊಪ್ಪಿ ತೋಱುಗುಂ ೧

(ಸೂಕ್ತಿಸುಧಾರ್ಣವಂ,೧೦-೧)

ಶಿಶಿರದ ಪೊಸಲತೆಯಂ
ಪೊಸವಸಂತಸಮಯಪ್ರವೇಶಮಂ ತವ್ವೊಳ್ ಸಂ
ದಿಸಿ ಬಣ್ಣಿಸಲಱಿದಾದೊಡ
ಮೆಸೆವಾಱು ಋತುಸಂಧಿಯಂ ವಿಭಾಗಿಸಿ ಪೇೞ್ವೆಂ ೨

ಮಾಮರ ಪೂ ಪಾಡಿವ ಸಂ
ಕಾಮಿನಿಯರ್ ಬನದೊಳುಯ್ಯಲಾಡುವ ದಿವಸಂ
ಕಾಮನ ಸರಳಿನ ದಿವಸಂ
ಪ್ರೇಮಂ ಪಿರಿದಾಯ್ತು ಧರೆಗೆ ಸುಗ್ಗಿಯ ದಿವಸಂ ೩

ಅಂತು ಬೆಡಂಗನಾಳ್ದ ಕಳಿಕಂ ಕುಸುಮಂ ಸಹಕಾರಭೂಜದಿಂ
ದಂ ತಲೆದೋಱಿದನ್ನವೊಸೆದನ್ಯಭೃತಂ ತಲೆದೋಱಿದನ್ನೆಗಂ
ರಂತೆ ವಸಂತಪೆಟ್ಟಿರವು ತೋಱುವವೋಲ್ ಪೊಸತೋಱಿದತ್ತು ವಾ
ಸಂತಿ ವಸಂತದೂತಿಪೆಸರೆಂಬುದು ಸಾರ್ಥಕವಾಗಿ ತೋರ್ಪಿನಂ ೪

ಮೊದಲೊಳ್ ತಂಬೆಲರ್ಗಾನೆ ಬೋದಣಿಗೆಗಂಪಂ ಬೀಱಿದಂ ಸುಗ್ಗಿ ಬ
ರ್ಪುದುಮೀ ನಂದನಕಾನೆ ಮುಂದುಗೆಡೆದೆಂ ಪುಷ್ಪೇಷುಗಂ ಪುಷ್ಪಬಾ
ಣದ ಮುಂಗಾಣ್ಕೆಯನಿತ್ತೆನಾನೆ ಪೆಱತೆನ್ನಂತಾದುದೇ ಪ್ಪುದೆಗಾ
ಪ್ಪದನೆಂಬಂತೆಸೆದಿರ್ದುದಾಯ್ತು ಮಾಧವಿ ಮದಾಳಿಧ್ವಾನಸಂತಾನದಿಂ ೫

(ಜಗನ್ನಾಥವಿಜಯಂ. ೧೪-೬೩: ಸೂಕ್ತಿ. ೧೦-೮೩)

ನಿನಗೆ ವಸಂತದೂತಿಪೆಸರೊಪ್ಪುವುದೆಂತೆನೆ ಮುಂದೆ ಬಂದು ನೀ
ನಿನಗೆ ವಸಂತನಾಗಮನಮಂ ನೆಱೆ ಸೂಚಿಸಿಕೊಟ್ಟೆಯೆಂದು ನಂ
ದನವನಲಕ್ಷ್ಮಿ ಕೀರರವದಿಂ ಪೊಗೞುತ್ತ ಪಸಾಯಮಚ್ಚಮು
ತ್ತಿನ ಪೊಸಪಚ್ಚೆಯಂ ತಳೆದವೋಲದಿರ್ಮುತ್ತೆ ಮುಗುಳ್ತುದೆತ್ತಲುಂ ೬

(ಚಂದ್ರಪ್ರಭಪುರಾಣಂ,೭-೪೧;ಸೂಕ್ತಿ,೧೦-೮೪)

ಪಳಚನೆ ಪೊಳೆವೆಳವೆಂಡಿರ
ಬಿಳಿಯಲರ್ಗಣ್ಣವರ ಚೆಲ್ವನೆಳಕುಳಿಗೊಂಡಂ
ತಳೆದರ್ ತೊಳಗಿದುವು ಕುಮುದಂ
ಗಳ ಸಿರಿಯೋಸರಿಸಿದತ್ತು ಶಿಶಿರಾತ್ಯಯದೊಳ್ ೭

(ಲೀಲಾವತಿ,೯-೭೬)

ಪೊಸಯಿಸಿ ನಸುಮಿಸುಪೇಱುದ
ಬಿಸಿಲೆಱೆಯೆ ಜಿನುರ್ತು ಬಿಂದು ಬಿಡುವವೊಲೆಸಪುಂ
ಪೊಸಮುಗುಳಂ ಪೊತ್ತಸೆದುದು
ವಸಂತದೂತಿಕೆ ವಸಂತಮಾಸದ ಮೊದಲೊಳ್ ೮

(ಲೀಲಾವತಿ, ೯-೮೮)

ನೂಂಕಿತ್ತರೆ ತೇರನೂಂಕುವ
ತೆಂಕಣೆಲರ್ ಬರ್ಪಿನಂತೆ ಭಯಮಿತ್ತವೊಲೇ
ಣಾಂಕನೆಡದೊಲಗಿ ಬರುತಿರೆ
ಪಂಕಜಸಖನುತ್ತರಾಯಣಕ್ಕೆಟ್ಟಿಂದಂ ೯

(ಲೀಲಾವತಿ, ೯-೮೨)

ಕರವೊತ್ತಿ ಕುತ್ತಿ ಖರಕರ
ಕಿರಣಂಗಳ್ ಪೊಸೆಯೆ ಪುಟ್ಟಿದಗ್ನಿಕಣಂಗಳ್
ಕರಗಿಸಿದುವು ಪೊರೆಯೆತ್ತಿದು
ಪ್ಪರಸಿದುವಾಕಾಶದಲ್ಲಿ ಪತ್ತಿದ ಹಿಮಮಂ ೧೦

(ಲೀಲಾವತಿ,೯-೮೩)

ಮೀಂಗಳ್ ಮಿಗೆ ಮೋಕ್ಷಸ್ನಾ
ನಂಗುಡುವವೊಲೊಡನೆ ಮುಳುಗೆ ತಾನುಗುಳ್ದುದು ಮುಂ
ನುಂಗಿದ ದಿನಕರನಂ ಮಿಗೆ
ಪಿಂಗುತ್ತುಂ ರಾತ್ರಿರಾಹು ಶಿಶಿರಾತ್ಯಯದೊಳ್ ೧೧
(ಲೀಲಾವತಿ,೯-೮೪)

ಶ್ರೀಪದ್ಮದೊಳೊದವೆ ಮನ
ಸ್ತಾಪಂ ಪುಟ್ಟಿದುದೋ ತನುಗೆ ರುಜೆಯಾಯ್ತೊ ದಿನಾ
ಸ್ವಾಪದಿನೆನೆ ನಯಮಿಳಿದವೊ
ಲೊಪ್ಪಿದುವು[1] ಮಧುಪ್ರವೇಶದೊಳ್ ಕುಮುದಂಗಳ್ ೧೨
(ಲೀಲಾವತಿ,೯-೮೭)

ನನೆಯಂ ಪೊತ್ತುದು ಮಾಧವಿ
ಪೊನಸಿದಸಂಕುರಿಪ ತಾಣವಿಮ್ರಾವುಗಳೊಳ್
ಜಿನುಗಿಡುದು ಕೋಕವಳಿ ಪಿಕ
ನನಂತರಂ ಬಿಲ್ಗೆ ಮದನನನುಮಾನಿಸಿದಂ ೧೩

ಪೊಸೆವ ಪೃಗಂತಿಯಿಂದೆ ನವಮಾಸವೊಡರ್ಚಿದುದನ್ಯಪುಷ್ಟನಂ
ಕಳರುತಿ ಪತ್ತಿ ಸಾರ್ದುದು ನವಾಮ್ರಕುಳಂಗಳೊಳಂಕುರಸ್ಥಳಂ
ತಳೆದುವು ತೆಂಬೆಲರ್ ಜನಿಯಿಸಿರ್ದುದು ಬಾಲ್ಯದೊಳತ್ತ ಮಾರನ
ಗ್ಗಳಿಸುವ ಮಾರ್ಗಣಂಗಳಿಸೆ ಚಿಂತಿಸುತಿರ್ದನದಾವಕಾಲಮೋ ೧೪

ಮುಗುಳೊತ್ತಿತ್ತದಿಮುರ್ತ್ತೆಯುಂಕುರಿಸಿತಾಮ್ರಂ ಬಂದು ಮಂದಾನಿಲಂ
ಪುಗುತಂದೊಂದಡಿಯಿಟ್ಟನನ್ಯಭೃತನಂತಂತೊಮ್ಮೆ ಕೂಗಿಟ್ಟು ಮೆ
ಲ್ಲಗೆ ಬಿಲ್ಲಂ ಗೊಲಿಗೆತ್ತಿ ಹೂಡಿದನಮೋಘಾಸ್ತ್ರಂಗಳಂ ದರ್ಪಕಂ
ಧಿಗಿಲೆಂದತ್ತು ವಿಯೋಗಿಸ್ವಂದಹೃದಯಂ ವಾಸಂತ ಮಾಸಾಂತ್ಯದೊಳ್ ೧೫

ತಳೆದುದು ಮಾಗಿ ಕೂಗಿದುದು ಕೋಗಿಲೆ ಪಲ್ಲವಿಸಿತ್ತು ಮಾಮರಂ
ತಳಿವೆಳಗಾಯ್ತು ಪಾಂಥಜನಮೊಲ್ದವರೊಳ್ ನವಭೋಗದುಜ್ಜುಗಂ
ಮೊಳೆತುದು ಕಾಮನೆಸು ಗುಜುಗುಂಡುಮು ತಂಡದಿ ನಿಂದ ನಂದನಂ
ತಳೆದುವು ಕೂಡೆ ಕೆಂಪಿನ ಪಸುರ್ಪಿನ ಕಪ್ಪಿನ ಜೆಳ್ಪಿನಂದಮಂ ೧೬

---

[1] ನಿಯಮಿಳಿಪಲುತಾಪದದು(ಸ)

ಮುವದಿಂದಂ ಮುಘದೂತಿಯುಂ ಪೊಗನುಲರ್ಜಾತ್ತಂ ವಿರಾಜಿಪ್ಪ ಚೂ
ತದ ಮೆಯ್ಯೊಳ್ ಪುಳಕಂಗಳಂ ನೆಗಪುತುಂ ಸಾರ್ದನ್ಯಪುಷ್ಟಕ್ಕೆ ಕಂ
ಠದ ನಾದಂ ನೆಲೆವರ್ಚಿಸುತ್ತೆ ಬನಮುಂ ಸ್ವೈವರ್ಣವಂ ಮಾಡುತು
ಬಿರ್ದಲಂಪಿಂದೆ ವಸಂತರಾಜನೊಸೆದೆಟ್ಟಿಂದಂ ಜಗದ್ವಲ್ಲಭಂ ೧೭

ಜನಪನುರಾಗದೇೞ್ಗೆ ಲಲನಾಜನಮುಂ ತೆಗೆದಪ್ಪೆ ಮೀೞ್ಗೆ ಸ
ಸ್ಮನಿನಿಕರಂ ವಸಂತಪವನೋವವೆ ಬಿಟ್ಟತಿಪೈಸ್ಯದಿಂ ಪಥೂ
ಸ್ತನತಟವೀಕ್ಷರಾಗೆ ಮೃಗವೀಥಿ ಮೃಗೀಕುಲದತ್ತ ಸಾರ್ದು ಜಿ
ಸ್ನಸೆ ಮಿಗೆ ಪೋಗೆ ಪರ್ಚಿತಿಳಿಯಲ್ಲಿ ವಸಂತ ವಿಲಾಸಸಂಪದಂ ೧೮

ನಮನಿ ವಿಯೋಗಿಗಳ್ ಸಡೆದು ಜೀವವನೊಪ್ಪಿಸಿ ದರ್ಪಕಂಗೆ ನುಂ
ದಡಿಯಿಡಲಾಜಿಪೊತ್ತರಿಸೆ ಪಾಂಥಜನಂ ಕಳಿಗುಂದಿ ಕಂದಿ ಪಾ
ಪಡರ್ದವೊಲಾಗುತಂ ಪೆದರಿ ನಲ್ಲರ ಮೈಸಿರಿ ಸವ್ಯಭೋಗದೊಳ್
ತೊಡರ್ದಿರೆ ಬಂದು ನಿಂದು ಕಳಿಯುಂ ದಳವೇೞ್ಗಿಸಿದಂ ವಸಂತಕಂ ೧೯

ಪೊರವಿಡೆ ನೋಂಕೆ ತೆಂಕಣೆಲರೂದಲೊಡಂ ಸ್ಮರವಗ್ದ ಭೂಜನುಂ
ಕುರಿಸವೆ ಚಿತ್ರಜನ್ಮನ ಲಸದ್ಭುಜಶಾಖಿಯೊಳೇಕೆ ವೀರಮುಂ
ಕುರಿಸವೆ ಜೇಟಮುಂ ಬಳಿದು ಬಾಬ್ವಿ ಜನಂಗಳ ಚಿತ್ತಬೀಜಮುಂ
ಕುರಿಸವೆ ಚೂತವೊಂದೆ ಪೊಸತಂಕುರಿಸಿತ್ತು ವಸಂತಮಾಸದೊಳ್ ೨೦

(ಲೀಲಾವತಿ,೯-೬೫)

ಕೊನರನೆ ಸಾರ್ದ ಕೋಗಿಲೆಯು ಸತ್ತ್ರಸರಂ ಪೊಸತಾಗಿ ಪುಟ್ಟಿತೆಂ
ಬಿಸಿತೆ ಬನಂಗಳೊಳ್ ಕೊನರ್ವ ಕನ್ನಡವಕ್ಕಿಯ ನಾದಮೊತ್ತ ರು
ದ್ರಸ ಮುನಿಸಿಂದೆ ಬೆಂದತನುವಂ ಮಜುವುಟ್ಟಿಗನಾದನಂದು ಮಾ
ವಿನ ಕಳಿಕಾರಸಂ ನವಸುಧಾರಸಮಲ್ಲವೆ ಚೈತ್ರಮಾಸದೊಳ್ ೨೧

(ಲೀಲಾವತಿ,೯-೬೬)

ಕಲಿಕೆ ಕವಲ್ತು ಮೂಡಿದುದು ಮಾಮರದೊಳ್ ಬನದೊಳ್ ಪೊದಳ್ದು ಸಾ
ಯಲೆ ಪೊಲಗೆಟ್ಟು ಪೊಕ್ಕುದು ವಿಯೋಗಿ ಮೃಗಾವಳಿ ಕೊಲ್ವುದೆಂದು ಮು
ನ್ನಲಿಯದೆ ಕೊಂಬುಗೊಂಡುಲಿದ ಕೋಗಿಲೆ ಕಬ್ಬಿನಬಿಲ್ಲಿ ಕೂರ್ತ ಕ
ಟ್ಟಿಳ ನನೆಗೊಬ್ಬಿನಿಂ ಕರೆವವೋಲ್ ಕರೆದತ್ತು ವಸಂತಮಾಸದೊಳ್ ೨೨

(ಲೀಲಾವತಿ,೯-೬೭)

ತಳಿರಂ ತಾಳ್ದಿ ಬೞಿಲ್ದು ಪೊತ್ತು ನೆಸೆಯಂ ಪೊಗೊಂಚಲಂ ಪೇಱಿ ಬ
ಳ್ವಳಿನಳ್ಪಾಡುವ ಭೃಂಗ ಕೋಕಿಳಶುಕವ್ರಾತಂಗಳಿಂ ಬೞ್ಕಿವೀ
ಸೆಳೆಗೊಂಬುಂ ಕೊನೆಗೊಂಬುಮೆಂತು ಫಳಬಾರಕ್ಕಾರ್ಪುವೆಂದಾಂತವೋಲ್
ಎಳಮಾವಂ ಮಲೆಯಾನಿಳಂ ಬಳಸಿಕೊಂಡಿರ್ದತ್ತು ಚೈತ್ರಾದಿಯೊಳ್ ೨೩

(ಲೀಲಾವತಿ,೯–೬೯)

ಗಿಳಿ ತಳಿರಂ ಮುಡಂ ಮುಗುಟ್ದಿ ಕೋಗಿಲೆ ಕೋರಕಮಂ ಮದಾಳಿ ಪೂ
ಗಳನರೆಗರ್ಚಿ ಪಾಱುಡುವು ನೂತನಮಂ ನವವಸ್ತುಜಾತಮಂ
ಬಳೆದೊಲವಿಂದಮೋಲಗಿಸಿ ಬಂದ ಬಸಂತದ ಸೊಂಪನಜ್ತ್ರಿಯಿಂ
ತಳೆದಱಿಪಲ್ಕೆ ಪೋಪ ವನಪಾಲಕರಂತೆ ಮನೋಜರಾಜನಾ ೨೪

(ಲೀಲಾವತಿ, ೯–೨೦)

ನನೆಯ ಪುಣಂಬುಮಂ ಮುಗುಳ ಮಿಟ್ಟೆಯುಮಂ ಮಱಿದುಂಬಿ ಪಾಯ್ದ ಪೂ
ವಿನ ಕವಲಂಬುಮಂ ತೊಡದ ಮುನ್ನಮೆ ಮನ್ಮಥನುರ್ಚಿ ಬಂದ ಮಾ
ವಿನ ಮುಗುಳ್ವೆತ್ತ ಮಲ್ಲಿಗೆಯ ಪೂತದಿಮುರ್ಚಿತ್ತೆಯ ಕೆಂಪೆ ಕೆಂಪಮಂ
ಕೊನರಿಸಿ ಕೊಂದು ಕೂಗಿಡುವು ತಾಗಿ ವಿಯೋಗಿಗಳಂ ವಸಂತದೊಳ್

(ಲೀಲಾವತಿ, ೯–೨೧)

ಫುಲ್ಲಶರಶಿಖಿಯ ಪೊಗೆಯೆನೆ
ಪಲ್ಲವಿಸಿದಶೋಕೆಯಿಂದೆ ಪುಗೆ ಬಂದಳಿಗಳ್
ಮಲ್ಲಿಗೆಯಲರ್ಗಣ್ಗಳಿನಲ
ರಲ್ಲೊಕ್ಕುವು ಬಾಷ್ಪಬಿಂದುವೆನೆ ನವಮಧುವಂ ೨೬

(ಲೀಲಾವತಿ, ೯-೧೧೧)

ಆನೆ ಮದನಂಗೆ ಪೊಸಮದ
ದಾನೆ ಜಗದ್ವಿಜಯಕೆಂದು ಮುಡಿಗಿಕ್ಕುವವೋ
ಲೇನುಕ್ಕಿದುದೋ ವಸಂತಾ
ಸ್ಥಾನಿಕೆಯೊಳ್ ಪಾಟಳದ್ರು ಜಠರಚ್ಛದಮಂ ೨೭

(ಲೀಲಾವತಿ, ೯–೧೧೨)

ಮದನನ ದಂಡು ಮಲ್ಲಿಗೆಯ ಬಂಡು ಪಿಕಾಳಿಯ ತೊಂಡು ಪೂತಚೂ
ತದ ತನಿಗೊರ್ಬು ಮಾಧವಿಯ ಪರ್ಬು ತಮಾಲದ ಮರ್ಬು ರಾಜಕೀ
ರದ ತನಿಸೊರ್ಕು ಕಾಮಿಜನದುರ್ಕು ವಿಯೋಗಿಯ ಸೆರ್ಕು ಕೂಡೆ ಬಂ
ದುದು ಮಧುಮಾಸಮಂ ವಿವಿಧಕೇಸರಮುದ್ಧತಧೂಳಿಮಾಸರಂ ೨೮

ಬಂದಪನಿಂದು ನಾಳೆ ಮದನಂ ವನಕೇಳಿಗೆ ರಾಜಕೀರ ಮಾ
ಕಂದದ ಕಾಪು ನಿನ್ನದು ಮದಾಳಿಯೆ ಪೂಗಳ ಕಾಪು ನಿನ್ನದೆ
ಲ್ನಿಂದಿರು ಬಾಗಿಲೊಳ್ ಪಿಕ ಸರೋವರಮಂ ಕಳಹಂಸ ಕಾಪುಗೊಳ್
ಸಂಧಿಸಿ ಗಂಧವಾಹ ಕೊಳಲೆಂದು ನಿಯಾಮಿಸಿದಂ ವಸಂತಕಂ ೨೯

(ಸೂಕ್ತಿಸುಧಾರ್ಣವಂ, ೧೦-೮೭)

ಮಲ್ಲಿಗೆಯೊಳ್ ಮದಾಳಿ ಫಳದೊಳ್ ಕೋಕಿಲೆ ಕೆಂದಳಿರ್ಗಳೊಳ್
ನಿಲ್ಲದೆ ಹಸೆಪಿಂಡು ಕೊಳದೊಳ್ ಕೃತಕಾಚಲದೊಳ್ ಮಯೂರಮಂ
ತೆಲ್ಲವನೋಜೆಯಿಂ ಬಳಸಿ ಮಂದಸಮೀರ ವಿಯೋಗಿವೃಂದಮಂ
ಮೆಲ್ಲನೆ ಸೋವುತಂ ಸುಳಿದನೆಯ್ದೆ ವಸಂತನ ಕಾಪಿನಾಳ್ಗಳ್ ೩೦

ಕೂಡುವ ಕೋಕಿಲಂ ಕೃತಕಶೈಲದೊಳಾಡುವ ಸೋಗೆ ಸೌರಭಂ
ಗೂಡುವ ಮಂದವಾಯು ಕೊಳದೊಳ್ ನಲಿವಂಚೆ ನವೋತ್ಪಲಕ್ಕೆ ಬಿ
ಟ್ಟೋಡುವ ಭೃಂಗಸಂಕುಳಮಗಲ್ದಿನಿಯರ್ಗಳ ಜೈದು ಭೀತಿಯಿಂ
ಮಾಡುವ ರಾಜಕೀರತತಿಯೊಪ್ಪಿದುವೆಯ್ದೆ ವಸಂತಕಾಲದೊಳ್ ೩೧

ಶಶಿ ಹಸನಾದನೊಪ್ಪುವ ಬನಂ ಮೊನೆಯಾದುವು ಕೋಕಿಲಾದಮಂ
ನಿಸುಗಿತು ತದ್ವಿಯೋಗಿಜನರೋಪರ ಭಾವಿಸಿದರ್ ಮದಾಳಿಗಳ್
ಕುಸುಮಕೆ ಪಾರ್ದನಂಗಜನು ಪೂರ್ವದ ಕರ್ಬನಬಿಲ್ಗೆ ನಾರಿಯಂ
ಪಸಿನೆ ತೊಡರ್ಚಿದಂ ಮಲಯಮಾರುತನುಣ್ಮಿದನಾ ವಸಂತದೊಳ್ ೩೨

ಮಲ್ಲಿಗೆ ಸೂತ್ನ ಪುಷ್ಪವತಿಯಾಗಿರೆ ಮಾವಿನ ಪೈಗುಳುರ್ಚೆ ಕಂ
ಕೆಲ್ಲಿಗೆ ರಾಗಮುಣ್ಮೆ ಮಧುದೂತಕಿ ಪೂದರೆ ಪಾಟಲವ್ರಜಂ
ಪೊಲ್ಲಿಗೆ ಪತ್ರಮಂ ಪಡಿಂಡಿಡಲ್ ಮಿಗೆ ಮೊಲ್ಲೆಗಳೆಲ್ಲ ಬೀಯಲಾ
ಪುಲ್ಲನೆ ಪೂತ್ತು ತುಂಬಿಗಿಡೆ ಮಾರುತನೊಪ್ಪಿದನಾ ವಸಂತಕಂ ೩೩

ರತಿಗೆ ವಿಳಾಸಮಾಯ್ತು ಮುಳಿಸಿಂಗೆಡೆಯುಪ್ಪುದೆಯೆಂದು ಕಾದಲರ್
ನುತಪಸಪ್ರೋಕ್ಷ ಮೆಯ್ಗರೆದರಲ್ಲಿ ವಿಯೋಗಿಗೆ ಪುಷ್ಪಬಾಣನಾ
ಹತಿ ಕನಸಲ್ಲಿ ತೋಱುಡುದು ಕರ್ಬಿಗೆ ಕೊರ್ಬುದಿಸಿತ್ತು ಪೂಗಳು
ಬರ್ಗತೆ ತಿರುಗೆಂದು ತುಂಬಿಗಳ ಜಾರ್ಚಿದನಂಗಜ ಚೈತ್ರಮಾಸದೊಳ್ ೩೪

ಸೊಸೆಯೊಳ್ ಮಿಂದುಜಿತ ಮಾಲಿಮಂಜಿಗುರುಳಂ ಕೂಹಕ್ಕೆಯೊಳ್ ಬಿಟ್ಟು ಕ
ಮ್ಮನೆಯಂ ಕೊಪ್ಪಪೊಲಾರಿಸೊಲ್ದು ಶಿಖಿಯಂ ತಾನುಂಟುಮಾಡುತ್ತೆ ಬಿ
ಳ್ಪನೆಯೊಳ್ ಹಾರಮನಾಂತು ಮಾಂದಳಿರ ಪಟ್ಟಂ ಪೂರ್ದ ನೋಟ್ಟಿಗೆ ಮೋ
ಹನದಿಂದುಟ್ಟು ಫಲಂಗಳೀವುತೆ ವಸಂತಾಧೀಶನೊಪ್ಪಿದಂ ೩೫

ಎಸೆವ ವಸಂತನ ದೂತಿಕೆ
ಪೆಸೆರ್ವೆತ್ತುದಿರ್ಮುತ್ತೆಯರಾಂತ ಪೂನೊಗವಿಂಪಂ
ಪಸರಿಸೆ ಪವನಂ ನಲಿದಂ
ಶಶಿಮುಖಿ ದೂತಿಯರ ವಚನಮೇಂ ಸವಿಯೋ ಶಿವಾ ೩೬

ಎಸೆವ ಬಸಂತಂ ಬಿಸಿಲುಮ
ನೆಸಕಮನಾಗಿಸವೆ ಮಾಣನೆಂದು ವಿಧಾತ್ರಂ
ಶಶಿಮುಖಿಯರ ಕಡೆಗಣ್ಣೊಳ್
ಪೊಸಜೊನ್ನಮನಿರಿಸಿ ಜಗಮನುಳುಹಿದನೊಲವಿಂ ೩೭

ಬಿಂಕದೆ ದೃಶ್ಯಾದೃಶ್ಯವ
ದಂ ಕಾಣಿಸಿ ನೋಡಲೊಡನೆ ಸೊನೆ ಜೆನುರಾಗಿಸು
ತಾಂಕಿ ರೋಮಾಂಕುರಂಗಳು
ಮಂ ಕಲ್ಪಿಸಿ ಮಧುಕುಚಕ್ಕೆ ಮುಘಮಮನಾದಂ ೩೮

ಅತಿರಾಗಂಬೆತ್ತು ಗತಾ
ಗತಭಾವಂದಾಳ್ದಶೋಕಪಲ್ಲವತತಿಯಾ
ಕೃತಿಗೆಯ್ದಿ ಬಂಧುರಾಳಿಯ
ನತವಾತಂಗನೆಯರಂಘ್ರಿಯೋಲ್ ಮಧು ಮೆಱೆದಂ (?) ೩೯

ನವರತ್ನೋಜ್ವಲನೂಪುರಕ್ವಣಿತಮೊಪ್ಪುತ್ತಿರ್ಪ ವಾಮಾಂಘ್ರಿಪ
ಲ್ಲವಸಂಘಟ್ಟನದಿಂ ತಳಿರ್ದಲರ್ದು ತಮ್ಮೊಳ್ ತತ್ಪದಾಲಕ್ತಕಾಂ
ಶುವ ಕೆಂಪುಂ ತಳಿರ್ಗೆಂಪುಮುಳ್ಳಲರಕೆಂಪುಂ ನಾಡೆಯುಂ ಚೆಲ್ವಮೀ
ಱುವಿನಂ ಮೂರವೆ ಕೆಂಪುಮೀಱುದುವಶೋಕಾನೋಕಹಂ ಚೈತ್ರದೊಳ್ ೪೦

(ಜಗನ್ನಾಥವಿಜಯಂ, ೧೪–೨೮)

ಹಸಿತಾಂಭೋಜಾಸ್ಯೆಯರ್ ಮುಕ್ಕುಱುಕಿಸಿಯುಗುಟ್ಟಿನಂತಾವಗಂ ಸಿಂಧುವಂ ಸೇ
ವಿಸಿ ಸೊಕ್ಕಿಂದೀ ಮಹೀಜಂ ತಳೆದು ಪುಳಕಘರ್ಮಾಂಬುಸಂದೋಹಮಂ ಸಂ
ತಸದೊಳ್ ಪಾಡುತ್ತಮಿರ್ದತ್ತೆನಿಸಿ ಮುಗುಳ್ಗಳಿಂ ಪೂಗಳಿಂ ತಾಳ್ದು ಭೃಂಗೀ
ರಸನದ್ಗೇಯಪ್ರಣಾದಾಕುಳಿನಕುಳಕುಳಂ ಚೆಲ್ವನೆತ್ತಿರ್ದುದೆತ್ತಂ ೪೧

(ಜಗನ್ನಾಥವಿಜಯಂ, ೧೪–೩೦)

ಲಲನೆಯರುನ್ನತಸ್ತನದ ಸೋಂಕಿನೊಳೀ ಮರನೇಂ ಪ್ರಮೋದದಿಂ
ಪುಳುಕಿತಮಾಯ್ತೊ ಕಾಂತೆಯರ ಪೆರ್ಮೊಲೆ ಸೋಂಕಿದೊಡಾರೊ ಮಾನವರ್
ಪುಳುಕಿತಮಾಗದಿರ್ದಪರೊ ತನ್ನಿಯ ರುದ್ಧಕುಜಂಗಳೊತ್ತಿನಿಂ
ಜಿಸಿದು ನವಾಂಕುರಂ ಕುರವಕೋತ್ಕರದೊಳ್ ಕರಮೊಪ್ಪಿ ತೋಱುಗುಂ ೪೨

(ಜಗನ್ನಾಥವಿಜಯಂ, ೧೪–೨೯)

ಬಂದೆಳಮಾವೆ ಚಿತ್ರಜನ ಬೀಡಿನೊಳಾವುದು ರಾಜವಾರ್ತೆ ಕಾ
ಮಂ ದಯೆಗೆಟ್ಟು ಕಾಮುಕಜನಕ್ಕೆಱತ ಜರ್ವಿ ವಸಂತರಾಜ ಕೊ
ಲ್ಲೆಂದುಱತ ದಂಡುವೇಟ್ದಿನಮವಲ್ಲದೆ ಮನ್ಮಥಚಕ್ರವರ್ತಿಯಿ
ಯ್ತಂದಪನಿಂದು ನಾಳೆ ಒದುಕಿಲ್ಲ ವಿಯೋಗಿಗೆ ಪಂಕಜಾನನೆ ೪೩

(ಸೂಕ್ತಿಸುಧಾರ್ಣವಂ, ೧೦–೪೫)

ಜಾತಿಗೆ ಸೊಂಪು ಪೋದುದು ಕುಜಾತಿಗೆ ಪೆಂಪು ತಳಿರ್ತುದುನ್ನಮ
ತ್ಯಾತಪಮಾಯ್ತು ರಾಜಗರಮಾಱಿಡಿ ಪೆರ್ಚಿದುದಾಮಗಂ ಜಡ
ಪ್ರೀತಿ ಮನಕ್ಕೆ ಪುಟ್ಟಿದುದು ಮಿತ್ರನೊಳಾಯ್ದುದು ಕಾಯ್ಪು ಸಾರ್ದು ಕಾ
ಮಾತುರಮಾದುದೀ ಜಗದಿದೇಂ ಕಲಿಕಾಲಮೊ ಚೈತ್ರಕಾಲಮೋ ೪೪

ಕಳಿಕೆಗಳೆಂಬ ಹರ್ಷಪುಳಕಾವಳಿಯಂ ತಳೆದಿರ್ಪಳಾಮ್ರಕೋ
ಮಳೆ ಮಧುಪಾವಳೀ ನಿನದಮೆಂಬ ಕಳಧ್ವನಿಯಿಂದೆ ಮಲ್ಲಿಕಾ
ಲಲನೆ ಕಡಂಗಿ ಪಾಡಿದಪಳಬ್ಜಿನಿ ತನ್ನ ಪರಾಗಮೆಂಬ ತಂ
ಬುಲಮುಗೆ ನಕ್ಕಪಳ್ ವಿಕೃತಿಯಂ ಮಧುಸಂಗತಿ ಮಾಡದಿರ್ಕುಮೇ ೪೫

(ಜಗನ್ನಾಥವಿಜಯಂ, ೧೪–೨೩)

ತಿಳಿಪಲ್ ವಾಸಂತಿಯಂ ಸಂದಿಸಿ ಪುಗಿಲೆನೆ ಪುಂಸ್ಕೋಕಿಳಂ ಕಾರ್ಶ್ಯದಿಂ ಬಂ
ದೊಳಪೊಕ್ಕೊಟ್ಟೈಸಿ ಮಲ್ಲೀಮುಕುಳಕಳಿತ ಭೃಂಗಾವಳೀನೀಳಮುಕ್ತಾ
ಫಳಮಂ ತಂದಿತ್ತು ಪಾವಂಬಿಡಿದು ನೆಗೆವಿನಂ ಕಂಟಕಂ ಜಾತಿಕಾಕೋ
ಮಳೆಯುಂ ನಿಶ್ಶೇಷದೋಷಂ ಮೆಱೆಯೆ ತಿಳಿಪಿದಂ ಪ್ರೇಮಕಾಂತಂ ವಸಂತಂ ೪೬

(ಅನಂತನಾಥಪುರಾಣಂ, ೬–೭೪; ಸೂಕ್ತಿ ೧೦–೧೦)

ಕರಿ ಚೂತಂ ವಾಜಿ ಕೀರಂ ಪರಿಜನಮಳಿವೃಂದಂ ಸಿತಚ್ಛತ್ರಮಾ ಪಂ
ಕರುಹಂ ವಾರಾಂಗನಾಳೀಕುಳಮಳಿಮರಾಳವ್ರಜಂ ದ್ವಾರಪಾಲರ್
ಮರುತ್ಪುಟ್ಟಂ ದಂಡನಾಥಂ ರತಿಪತಿ ಕುಳಿರ್ವಂ ಸೋಗೆಯಾಗಳ್ ವಿರಾಗಾ
ತುರಮರ್ಕಾತ್ರಿಭಿನ್ನಂ ಸದನತತಿಗಳೊಳಂ ಬೀಡುಬಿಟ್ಟಂ ವಸಂತಂ ೪೭

ತೆಂಬೆಲರೆಂಬ ಸುಯ್ ನಿಮಿರೆ ಮಲ್ಲಿಗೆಯೆಂಬ ಬೆರಲ್ಗಳೊಳ್ ಕರಂ
ತುಂಬಿಗಳೆಂಬ ಕಾಡಿಗೆಯ ಕಂಬನಿ ಪೊಣ್ಮೆ ಬೆಡಂಗುವೆತ್ತ ಮಾ
ವೆಂಬ ಲತಾಗೃಹಕ್ಕೆ ವನಲಕ್ಷ್ಮಿ ವಸಂತಕನಂ ಪಿಕಸ್ವನಾ
ಡಂಬರೆ ತಾನದೇನೆಱೆದು ತಂದಳೊ ಸಪ್ರಣಯಪ್ರಕೋಪದಿಂ ೪೮

ಪೊಸಮಕರಂದಮೆಂಬ ಬೆಮರುಣ್ಮಿರೆ ತೆಂಬೆಲರೆಂಬ ಸುಯ್ಯೆಲರ್
ಪಸರಿಸೆ ಗುಜ್ಜನೆಂಬ ಮೊಲೆ ಚಪ್ಪರಿಸೊಪ್ಪೆ ಸಿತಾಬ್ಜವೆಂಬ ಕಣ್
ಮಿಸುಪ ಪರಾಗಮೆಂಬ ನಸುಗೆಂಪಿನೊಳೊಂದಿರೆ ನಾಡೆ ಕಣ್ಗೆ ಶೋ
ಭಿಸಿದಳಲಂಪಿನಿಂ ನೆರೆದು ನಂದನಲಕ್ಷ್ಮಿ ವಸಂತಕಾಂತನೊಳ್ ೪೯

ವಿಕಸತ್ಪುಷ್ಪಾಟ್ಟಹಾಸಂ ಸ್ಮಿತಕುಸುಮರಜೋಭಸ್ಮವಿಭ್ರಾಜಿ ಮಾದ್ಯ
ತ್ಪಿಕನಾದಂ ಭೃಂಗಸಿದ್ಧಾಂಜನ ರಸಘುಟಿಕಂ ಪಲ್ಲವೋದ್ಯಜ್ಜಟಂ ಕ
ಯ್ಯ ಕಪಾಲಂ ಚಂದ್ರಬಿಂಬಂ ತನಗೆನೆ ಜಗತೀಚಕ್ರಮಂ ಚೈತ್ರಕಾಪಾ
ಲಿಕನೆಂಬಂ ಬಂದಿದೇಂ ಮೋಹಿಸಿದನೊ ಮಧುಬಿಂದೂಪ್ಯಮುಗ್ಗಂಧವಾಹಂ ೫೦

(ಲೀಲಾವತಿ, ೯–೧೧೯)

ಮಲಯಮರುಚ್ಚಮೂಪತಿಗಲಗ್ಗಳಸೌರಭವಂಗಚಿತ್ರಮಂ
ಕಳಪಿಕನಾಯಕರ್ಗೆ ಪೊಸಮಾಂಗೊನರಂಗದಿ ಸೂಱೆಯಂ ಶುಕಾ
ವಳಿಯಪದಾತಿಗಿತ್ತು ತನಿವಣ್ಗಳ ಪೊಟ್ಟಣಮಂ ವಸಂತನ
ಗ್ಗಳಿಕೆ ಬಂದು ಸಂವರಣೆದೋಱೆ ಮನಂಬಡೆದಂ ಮನೋಜನಂ ೫೧

ಹರನುರಿಗಣ್ಣೆ ನೀಂ ಸೊನೆಯ ಸೋನೆಯನಾಗಿಸು ಚೂತ ಕಂಠದೊಳ್
ಗರಳದ ಕರ್ಪನೊತ್ತಿ ಕಳೆ ಚಂದ್ರನು ಪೂಸಿದ ಬೂದಿ ಪಾಱೆ ಮೈ
ಕರಲಿಪೆ ಬೀಸು ಗಂಧವಹ ಕೆಂದಳಿರೊಂದಲಗಿಂ ಕಪರ್ದಿಯೊಳ್
ಬೆರಸು ಬೞಿಕ್ಕೆ ನೀನೆನುತೆ ನೋಡಿವನಂಗಭವಂ ವಸಂತನಂ ೫೨

(ಅನಂತನಾಥಪುರಾಣಂ, ೬–೮೭; ಸೂಕ್ತಿ, ೧೦–೮೬)

ಅರಗಳಿವಿಂಡು ವಾರನವ ಮೋಹರವಾಱಿಡಿವಿಂಡು ಬಿಲ್ಲಬೀ
ರರ ಪಡೆ ಕೊಂಚೆವಿಂಡು ಪೊಳೆವಡ್ಡಣದೊಡ್ಡ ಮಪ್ಪಕ್ಕಿವಿಂಡು ಮೆ
ಯ್ವೆರಸುವ ಕೊಂತಗಾಱರಣಿಯಾಗಿರೆ ಬಂದು ಬಸಂತರಾಜನಂ
ವರಣೆಯನೆಯ್ದೆ ತೋಱೆ ತಲೆದೂಗಿಸಿದಂ ನನೆವಿಲ್ಲಬೀರನಾ ೫೩

(ಕಬ್ಬಿಗರಕಾವಂ, ೨೧೧–೪೨)

ಕಳಿಕಾಸಂಜಾತಚೂತಂ ಮುಕುಳಿತವಕುಳಂ ಪಲ್ಲವೋಲ್ಲಾಸಿ ಕಂಕೆ
ಲ್ಲಿಲತಾಂತಾಕ್ರಾಂತವಾಸಂತಿಕಮೆಸೆದುದು ಯೋಗಿವ್ರಜಸ್ವಾಂತಕುಂತಂ
ವಿಲಸನ್ಮಲ್ಲೀಲತಾಂತಂ ರಟದಳಿಪಟಲಧ್ವಾಂತವಿಂದುಪ್ರಭಾಸಂ
ಕುಲಭಾಭಾಸ್ವದ್ದಿಗಂತಂ ಜಿತಸಕಲಜಗತ್ಕಾಂತುಕಾಂತಂ ವಸಂತಂ ೫೪

(ಜಗನ್ನಾಥವಿಜಯಂ, ೧೪-೪೨; ಸೂಕ್ತಿ, ೧೦-೧೩)

ಮೃಗಮದಲೇಪನಂ ಲತೆಯ ಮಂಟಪ ಗೋಷ್ಠಿ ಸಿವಣ್ಣ ಪಾನ ಮ
ಲ್ಲಿಗೆಯ ಸರಂಗಳುಂ ಪಿಕಕಳಧ್ವನಿಯುಂ ವನಕೇಳಿ ಜಾಯೆಯೊಳ್
ಸೊಗಸಿನ ನಿದ್ರೆ ಗೋದಮೆಯ ಭೋಜನ ಚೂತಲತಾಂತವಾತ ಪೆ
ಣ್ಣುಗಳೊಡನಾಟ ಸಣ್ಣ ಪೊವಸಿಂ ಮಧುಮಾಸದೊಳಿರ್ಕೆ ಭೋಗಿಗಳ್ ೫೫

## ಗ್ರೀಷ್ಮಋತು :

ವನಜಲಕೇಳಿಗಿಂಬುಗುಡುವಂತೆ ಪಗಲ್ ಪಿರಿದಾದುದೊಯ್ಯನೊ
ಯ್ಯನೆ ಕಿಱಿದಾದುದಂದನಿರುಳಾಱುಸುವಂತಿನನಿಂದಗಲ್ದ ಪ
ದ್ಮಿನಿಯ ನಿರೋಧಮಂ ಶಿಶಿರನಿಂ ಮುಳಿದಿಟ್ಟಪಸವ್ಯಗಂಧವಾ
ಹನ ಕರಚಕ್ರದಂತೆ ಬಡಗಲ್ ನಡೆದತ್ತು ಹಿಮಾಂಶುಮಂಡಳಂ ೫೬

(ಅನಂತನಾಥಪುರಾಣಂ, ೬-೭೯; ಸೂಕ್ತಿ, ೧೦-೭೭)

ಅನಿಶಾನುಂ ಮೃಗತೃಷ್ಣೆಯುಂ ಪಡೆಯುತುಂ ದಿಗ್ಭಾಗದೊಳ್ ತಳ್ತು ಕಾ
ನನದೊಳ್ ಬೇಗೆಯನಿಕ್ಕುತುಂ ಕದಡುತಂ ನೀರ್ದಾಣಮಾದಂತುಟಂ
ಬಿನದಂ ತಪ್ಪಿಡೆಯೊಳ್ ತೆರಳ್ಚಿ ತೊವಲಂ ಕಂದಿಕ್ಕುತುಂ ಬೇಂಟೆಗಾ
ಜನವೋಲ್ ಬೇಸಗೆ ಬಂದು ಪೊಕ್ಕು ಕವಿದತ್ತೀತ್ರ್ಯಂ ಮಹೀಭಾಗಮಂ ೫೭

(ಸೂಕ್ತಿಸುಧಾರ್ಣವಂ, ೧೦-೭೯

ಕಾವಸೆಯಾಗಿ ಪೋಯ್ತು ನಗನಿರ್ಝರಣಂ ತೊಱೆಗಳ್ ಪದಸ್ಥಮಾ
ಯ್ತಾವಗವಿಸ್ರಸಕ್ತೆ ಕೆಸಱಾಯ್ತು ಕೊಳಂ ಕೆಱೆ ಬತ್ತಿಪೋದುವಿ
ರ್ಕಾವಿಡೆಯಿಂಬಿನಂ ಬಱತು ಬೀಡಿಂಸುನಾಳ್ದುದು ಬೆಂಚೆ ಪೋಪೊ ಪೆ
ರ್ಚಾಪಿಂಹೊಱಂತೆಮೋಡುವಿನಿಗಂ ತಳಕೋಡಿದುದಾ ನಿದಾಘದೊಳ್ ೫೮

(ಸೂಕ್ತಿಸುಧಾರ್ಣವಂ, ೧೦-೮೦)

ತ್ರಸುಪಂಕಾಗ್ರಮುಹುರ್ಲುಠಚ್ಛಫರಮಾಬದ್ಧಾರ್ಕಸಂಧ್ಯಂತರಾ
ಳನಿವಿಷ್ಟೋರುಕುಳೀರಕಂ ತಳನದೀನಿರ್ಮಗ್ನಕೂರ್ಮಂ ಚಿರಾ
ಭ್ಯಸುಸಂಧಾನವಿಲೀನದೀನಮುಖಹಂಸಂ ಮ್ಲಾನಕಲ್ಹಾರಕೋ
ಕನದಂ ಕಣ್ಗೆ ನಿದಾಯುತ್ತು ತತ್ಸಮಯದೊಳ್ ಶುಷ್ಯತ್ಸರಸ್ಸಂಕುಳಂ ೫೯
(ಚಂದ್ರಪ್ರಭಪುರಾಣಂ, ೯-೮೨: ಸೂಕ್ತಿ, ೧-೯೧)

ಜಿಟ್ಟನೆಕಲ್ಲಸಂದಿಯೊಳಗೊಯ್ಯನೆ ಪೊಣ್ಮುವ ನಿರ್ಝರಕ್ಕೆ ಕೈ
ಯಿಟ್ಟು ಪಿಪಾಸೆಯಿಂದಲರೆಮೀಳಿತಲೋಚನನಾದ ದಂತಿಯಂ
ತೊಟ್ಟನೆ ಮುಟ್ಟಿ ಕಂಡದಱ ಪ್ಯೈನೆಬಿಲಾಸೆಗೆ ಜಾತಿವೈರಮಂ
ಬಿಟ್ಟೊಳಪೊಕ್ಕು ಪಟ್ಟಿತು ಬಿಸಿಲ್ಗಗಿದೊಂದು ಗಜಾರಿ ಬಿಚ್ಚತಂ ೬೦
(ಸೂಕ್ತಿಸುಧಾರ್ಣವಂ, ೧೦-೯೨)

ಬಟ್ಟೆಯ ಪಳ್ಳದೊಳ್ ಪಲಿವೊಜಂತೆಗಳಾದುವು ಕಾಡೊಳಿಟ್ಡ ಕಾ
ಲ್ವಟ್ಟಿಗಳೆಲ್ಲಮೆಯ್ದಱವು ನೀರ್ನೆಲೆಯಂ ಪಱಿಪಾಱುಬಾವಿಯೊಳ್
ಪುಟ್ಟಿದ ಸೊಪ್ಪು ಪೇಱ್ದುದು ಜಲೋದಯಲೋಭಮನೆತ್ತಿ ಪೊತ್ತು ದೋ
ಣಿಟ್ಟು ದನಕ್ಕೆ ನೀರೆಱೆವ ಸಂಭ್ರಮಮುಣ್ಮಿದುದೂರ ಪಕ್ಕದೊಳ್ ೬೧
(ಸೂಕ್ತಿಸುಧಾರ್ಣವಂ, ೧೦-೯೩)

ಕಾನನಮುರಿದುದು ರವಿಕಾಂ
ತಾನಳನಿಂ ನಗದ ಶಿಖರಮೊಡೆದುದು ಸಿಡಿಲ್ದ
ತ್ತಾನೆಯ ತಲೆ ಬಿರಿದುದು ಮು
ಕ್ತಾನೀಕಂ ತೋಱಿತು ಜೆಟ್ಟಿಜೇಸಗೆ ಬಿಸಿಲೊಳ್ ೬೨
(ಸೂಕ್ತಿಸುಧಾರ್ಣವಂ, ೧೦-೯೪)

ಬಿರಿಯದ ಬೆಟ್ಟಮಿಲ್ಲ ಮಱಿಲಾಗದ ಪೆರ್ಮೊಱಿಯಿಲ್ಲ ಬೆಂದೊಗಲ್
ಪೊರೆವೊರೆಯೆರ್ದು ಸಾಯದ ಮೃಗವ್ರಜಮಿಲ್ಲ ಬಿದಿರ್ ತಗುಳ್ದು ಮಾ
ಱಿಪೊಸದ ಕಿಚ್ಚಿನಿಂದಡಸಿ ಬೇಯದ ಕಾನನಮಿಲ್ಲ ತೃಷ್ಟೆಯಿಂ
ಮರುಳಿವ ಪಾಂಥರಿಲ್ಲ ವಿಷಮಾರ್ಕ ಕರೌಘದೊಳಾ ನಿದಾಘದೊಳ್ ೬೩
(ಸೂಕ್ತಿ ಸುಧಾರ್ಣವಂ, ೧೦-೯೫)

ವಿಸರದ್ದಾವಾಗ್ನಿಜಿಹ್ವಾಕಬಳಿತಲತಿಕಾನೋಕಹಶ್ರೇಣಿ ನಿರ್ನೀ
ರಸರಸ್ಸಂತಪ್ತಪಂಕಾಕುಲಿತಕಮಠಪಾಠೀನಸಂತಾನಮುತ್ಯುಗ್ರ
ಸಮೀರಾಘಾತಜಾತಸ್ಫುರದವನಿರಜಃಸ್ಪರ್ಶದುರ್ದರ್ಶಮುರ್ವೀ
ರಸಪಾನೋತ್ತಾನಭಾನುದ್ಯುತಿಯೆನಲೆಸೆದತ್ತ್ರಸ್ತಸೋಘಂ ನಿದಾಘಂ ೬೪
(ಸೂಕ್ತಿಸುಧಾರ್ಣವಂ,೧೦-೯೬)

ಸುರರಾಜಂ ಬೞಿಯಟ್ಟಿಲಾತುರಿಸುವಂ ಮೇಘಕ್ಕೆ ಕಾಯ್ದುಕ್ಕಿ ಸಾ
ಗರದಿಂ ಪೊಂಗಲೊಡರ್ಚುವಂ ವರುಣನುಗ್ರಂ ವ್ಯಗ್ರನಾತ್ಮೀಯ ಭೂ
ಧರದಿಂದಂ ಹಿಮವನ್ನಗಕ್ಕೆಳಸುವಂ ಪಿಂಗಂ ತಟಿಚ್ಛಾಯೆಯಿಂ
ಹರಿಣಾಂಕಂ ಭುವನಕ್ಕದೇಂ ಭಯವನಾಯ್ತೋ ಘೋರಘರ್ಮಾಗಮಂ ೬೫

(ಸೂಕ್ತಿಸುಧಾರ್ಣವಂ,೧೦-೯೭)

ನಟ್ಟನಡುವಗಲ ಬಿಸಿಲುರಿ
ಯಿಟ್ಟೊಡೆ ಸುಟ್ಟಪ್ಪುದೆಂಬವೊಲ್ ಪಸರಿಪ್ಪುದಂ
ಬಿಟ್ಟುಡುಗಿಯೊಂದೆ ಮೆಯ್ಯಂ
ಮುಟ್ಟಿರ್ದಪ್ಪೊಲಿರ್ದುವಂದು ತಾಟಿ ನೆೞಲ್ಗಳ್ ೬೬

(ಸೂಕ್ತಿಸುಧಾರ್ಣವಂ,೧೦-೯೯)

ಪಾಱುವ ಪಕ್ಕಿ ಕೋಡ ಗೞಿ ಸೀಯದವಿಲ್ಲೆಲೆಯಿರ್ದ ಪೆರ್ಮರಂ
ತಾಱದವಿಲ್ಲರಣ್ಯಮೃಗಯೂಥದ ಜೇ ಪುಣಿಚೆರ್ದು ಬಾಯ್ಗಳಿ
ಪಾರ್ಱದವಿಲ್ಲ ಬಿೞಿದ್ದಡೆದು ಪಾಱದವಿಲ್ಲ ಪಯೋಧಿ ತಾಪ್ಪುಬಿಲ್
ತೋಱದವಿಲ್ಲದೇಂ ಪ್ರಳಯಕಾಲಮೊ ತೀವ್ರ ನಿದಾಘಕಾಲಮೋ ೬೭

(ಸೂಕ್ತಿಸುಧಾರ್ಣವಂ,೧೦-೧೦೦)

ಕುಲಗಿರಿ ಕಾಯ್ಪು ಕರ್ಬುನದ ಬೆಟ್ಟುಮಪ್ಪೊಲಿರ್ದುವು ಧಾತ್ರಿ ಕಾದ ಕಾ
ವಲಿಯುವೊಲಿರ್ದುದಂಬುನಿಧಿ [೧]ದಿಬ್ಬಕೆ[೧] ಕಾಸಿದ ತೈಲದಂದದಿಂ
[೨]ಚಿಲಿಬಿಲಿಸುಕುರ್[೨]ತಿರ್ದುವು ದಿಶಾವಿವರಂ ಸಲೆ ಕಾಱುಗಾರನ
ಟ್ಟೊಲೆಯವೊಲಿರ್ದುದೇಂ ಪ್ರಳಯಕಾಲಮೊ ತೀವ್ರನಿದಾಘಕಾಲಮೋ ೬೮

(ಸೂಕ್ತಿಸುಧಾರ್ಣವಂ,೧೦-೧೦೧)

ಒಱೆಗಳ್ವೊಲ್ ಕಾಯ್ದುವೆಂಟುಂದಿಗಿಭದ ಬಿಮುಗಳ್ ಕಾಯ್ದ ಕೆರ್ಪೊನ್ನ ಸೆಗಾರ
ವಲಿಪೋಲಾಯ್ತಾ ನೆಲಂ ಸಂಪಳಿಯನೆಱಿದವೋಲ್ ಕಾಯ್ದು ಚುಂಬ್ಯಂದಪೇೞಿಂ
ಕುಲಪಾರಾವಾರದಿಂ ಬೇಸಗೆಯ ಬಿಸಿಲೊಕೇೞಿಂತಿದೇಕಾರ್ಣವಂ ಭೂ
ತಲಮುಕ್ಕ್ಯಂ ಸೇಱಿಸಲ್ ಪರ್ವಿದುವತಿಶಯಿತಗ್ಲಾನಿದಾಘಂ ನಿದಾಘಂ ೬೯

(ಜಗನ್ನಾಥವಿಜಯಂ,೧೭-೬೩;ಸೂಕ್ತಿ,೧೦-೧೦೨)

---

೧ದಿಬ್ಬೆಗೆ(ಸೂ) ೨ತಲೆಬೞೆದುಕ್ಕು(ಸೂ)

ರಸದಾಳಿಂಬದ ಪಣ್ಣ ಬಿತ್ತು ಬಿಸುಕಿಂ ತೋರ್ಪಂತೆಯುರ್ಚಿಟ್ಟಿ ಪೆ
ರ್ಚಿಸಿಲಿಂದಿರ್ಬಗಿಯಾದ ಮುಸ್ತಕದೊಳಾ ಸದ್ರಕ್ತಮುಕ್ತಾಳಿಗಳ್
ನಸುಮೋಚುತ್ತಿರೆ ನೆವ್ವಿ ಪೆರ್ಮರನನೊಂದಂ ಕಣ್ಗಳಂ ಮುಚ್ಚಿ ಸೂ
ರ್ಛಿಸಿದಂತಿರ್ದುದು ದಂತಪೇಷ್ಟಿತಕರಂ ಮತ್ತೊಂದು ಮತ್ತದ್ವಿಪಂ ೬೦

(ಸೂಕ್ತಿಸುಧಾರ್ಣವಂ, ೧೦-೧೦೩)

ಅಱಿಯದರವಿಂದದಲರಂ
ಪಱಿಮುದ ನೆವಮಿಟ್ಟು ಸುಟ್ಟಪಂ ರವಿಯೆನುತುಂ
ಮುಱುಗಿ ಮೊಱೆಯಿಡುವ ತೆಱದಿಂ
ಮುಱುಪೆತ್ತಿದುದಗ್ರಕರದಿಸಿಭಪೆಳಪಳಿರಂ ೬೧

(ಸೂಕ್ತಿಸುಧಾರ್ಣವಂ, ೧೦-೧೦೬)

ಹುತ್ತಿನೊಳುಚ್ಚಿಗೋಂಡು ಪ್ರೋಱಮುಟ್ಟಿ ಪಗಲ್ ಬಿಸಿಲಟ್ಟಿ ಕೆಂಡಮುಂ
ಪತ್ತಿಸಿದಂತೆ ಕಾಯ್ಪ ಮಣಿಯಿಂ ಪೆಡೆ ಬೇಯೆ ಪ್ರೊಡಟ್ಟಿ ಮೂಪೆಂಯೊಳ್
ಪೊತ್ತಿದ ಧೂಳಿವಟ್ಟೆಯೊಳುಮಂ ಪುಗುಳ್ಕೇಱಿ ಪೊರಳ್ದು ಪೋಗಿ ಪೊ
ಕ್ಕಿತ್ತಗಿದೊಂದು ಪಾಟಿ ಪಟಿವಾರಿಯು ನೀರ್ದೆಗೆದಿರ್ದ ಬೀಡೆಯುಂ ೬೨

(ಸೂಕ್ತಿಸುಧಾರ್ಣವಂ, ೧೦-೧೨೨)

ಭಾಸುಕರೋಷ್ಣದಿಂ [1]ಸಿಡಿದು[1] ಕೊಂಬು ಶಿರಂ ಬಿರಿಕೇಱಿ ತೋರ್ಕೆನೆ
ತ್ತಾನನದೊ[2]ಡ್ಡು[2] ಬಲ್ಪಿಟಿಯೆ ಬೆಂಗಡಿಪಂ ಕಿಱುವೀಡೆವೀಱಿ ನ
ಟ್ಟಾನಿಸಿದಂತೆ ಕಾಲ್ಗಳಿರೆ ಕಾ[3]ಡಟಿಪೇವರ[3] ನೋಂಪಿಗಿಟ್ಟ ಮ
ಣ್ಣಾನೆಯು ಸೂಟಿಕ್ಕಯಿಂ ಮಿಡುಕದಿರ್ದುದು ದಂತಿ ನಿದಾಘಕಾಲದೊಳ್ ೬೩

(ಸೂಕ್ತಿಸುಧಾರ್ಣವಂ, ೧೦-೧೦೮)

ಅಡಿಯೊತ್ತುವ ಬೇಸಗೆಯೊಳ್
ಪೆಡೆವಣಿ ಬಿಡೆಕಾಯ್ದು ನೆತ್ತಿ ಛಿಟಿಛಿಟಿಲೆನುತುಂ
ನಡೆಗೊಳ್ಳಿಯಂತೆ ನಡೆದುದು
ಗಿಡುಗಳ ನೆಟಿಲಾಸೆಗಹಿಪ [4]ಸುಡಲೊಡಲಸುವಿಂ[4] ೬೪

(ಸೂಕ್ತಿಸುಧಾರ್ಣವಂ, ೧೦-೧೧೦)

---

[1]ಡೊಣೆಪು(ಸೂ) [2]ಅಪ್ಪಿ(ಸೂ) [3]ಡೆಳವೇನತೆ(ಸ) [4]ನಕುನಿಡುತುಸಿರಂ(ಸೂ)

ನೆತ್ತಿಯೊಳಾನಗುಂ ತಳೆದ ಬಾಂದೊಱೆ *ಮಾಣದೆ ಭಾಳ*ಚೂಳದೊಳ್
ಪತ್ತಿಸಿದಾ ಹಿಮಾಂಶುಕಲೆಯುಪ್ಪಿದ ಹೈಮವತೀಲತಾಂಗಮೊ
ಪ್ಪೃತ್ತಿರೆಯುಂ ಪೊದಬ್ದಿರಿನ ಜೇಸಗೆಯೊಳ್ ನೆಱೆಬೆಚ್ಚಿ ರೌಪ್ಯಭೂ
ಭೃತ್ತ್ರಟಸಂದನಾವಳಿಯ ತ†ಣ್ಣೆಲಿ†ಲಂ ಬಿಡಸೊರ್ವೆಯುಂ ಮೃಡಂ ೭೫
(ಚಂದ್ರಪ್ರಭಪುರಾಣಂ, ೯-೪೧; ಸೂಕ್ತಿಸುಧಾರ್ಣವಂ, ೧೦-೧೧೪)

ಹಿಮಕರನಂ ತುಱುಂಬಿ ಹಿಮವಾರಿಯ ಗಂಗೆಯನಿಟ್ಟು ಜೂಟದೊಳ್
ಹಿಮಗಿರಿಪುತ್ರಿಯಂ ಮುದದಿನಪ್ಪಿ ಹಿಮಾಂಗದ ನಾಗಮಂಡನಾ
ಘಮನೊಸೆದಾಂತು ತಾಪಹರನೊಪ್ಪಿದನೀಶನುದರ್ಕದರ್ಶಿಮು
ನ್ನಮೆ ಸಮಕಟ್ಟಿ ನಿಂದನೆನೆ ಬೇಸಗೆ ಬೇಸಱಿಸಿತ್ತು ಲೋಕಮಂ ೭೬
(ಜಗನ್ನಾಥವಿಜಯಂ, ೧೦-೭೭, ಸೂಕ್ತಿಸುಧಾರ್ಣವಂ, ೧೦-೧೧೫)

ಗಂಟಲುಮಂಬಮಂ ಬಱತು ಗೋಣೆಬಿಲಲ್ ಕಡುಸೇದೆಯಿಂದೆ ಪ್ಕೈ
ಟಿಂಟಣಿಸುತ್ತೆ ಕೋಡ ಗಱಿ ಸೀದು ಮುಮಂಟೆ ವಿಹಂಗಸಂಕುಲಂ
ಗೆಂಟೆಱೆಯೊಳೊಂದಿ ತಾರೆಸು ಮರಂಗಳ ತೂಱಲುಗೊಂಬುಗೊಂಬಿನೊಳ್
ಸಂಟಿಗೆಗೋದ ಸಾಬಿಕ್ಕಯವ್ರೊಲಿರ್ದುವು ತೀವ್ರ ನಿದಾಘಕಾಲದೊಳ್ ೭೭
(ಸೂಕ್ತಿಸುಧಾರ್ಣವಂ, ೧೦-೧೦೯)

ಜಲನಿಧಿತಲ್ಪನುಂ ಜಲರುಹೋದರನುಂ ಜಲಜಾತನೇತ್ರನುಂ
ಜಲಧಿಸುತೇಶನುಂ ಜಲದವರ್ಣನುಮೆಂಬುದನೀ ನಿದಾಘಮುಂ
ಕಳಿಯಲಿ ಪಣ್ಣಿಕೊಂಡನಸುರಾರಿಯೊಲಾಪನಸಾಗತಜ್ಞನೆಂ
ದಿಳೆ ನುಡಿವಂತು ಪೆರ್ಚಿಸಿಲನುರ್ಚಿಸಿತುರ್ಚಿ ನಿದಾಘಮುರ್ಚಿಯೊಳ್ ೭೮
(ಜಗನ್ನಾಥವಿಜಯಂ, ೧೭-೭೬; ಸೂಕ್ತಿ, ೧೦-೧೧೬)

ಬಹುತಾಪಕ್ಕೆ ಬೆಗುರ್ತು ವಿಷ್ಣು ಪದದಂ ಪುತ್ತಸ್ರ್ಯನತಾಪಕ್ಕಿನಂ
ತುಹಿನಾದ್ರಿಂ ಪ್ರಮಸೊತ್ತಗೊಂಡು ನಡೆಸಂ ದೇಗಕರ್ಣಿಕಾಗ್ನೇಯಮಂ
ಮ ಹಪಿಭಾಗಗಮಂ ಪೊಲ್ಲದಿಂದುಕಳೆಯಂ ಕೊಳ್ಳಿರ್ ಪ್ರ್ಯಮಂ ಪಾರ್ವತೀ
ಸ್ಪೃಹೆಯಂ ಬಿಟ್ಟು ಮಹಾತ್ತ್ರರಂಗಿಣಿಯಮಂ ಪಾಲಿಂಗನಂ ಮಾಡುವಂ ೭೯
(ಪಂಪರಾಮಾಯಣಂ, ೭-೯೮; ಸೂಕ್ತಿ, ೧೦-೧೨೧)

---

*ಬಾಳವಿಮೂಳ(ಸ) †ಣ್ಬೆಲಿ(ಅ)

ಸ್ಮರರಾಗಕ್ಕಂತರಾಯಂ ಜಲನಿಧಿಗೆರ್ದೆಗಿಚ್ಚೀಕ್ಷಣಕ್ಕಂಕುಶಂ ಪು
ಲ್ಲುರಿ ದಿಗ್ಪಾಲಕ್ಕೆ ಶೈಲಕ್ಕಶನಿ ಕರಗಸಂ ಹಸ್ತಿಮಸ್ತಕ್ಕೆ ಪಾಂಥ
ಗರ್ಗರಿಯುಯ್ಯಲ್ ತಾಮುಗುತ್ತಂ ತರುಗೆ ತಪನ[೧]ಕೋಟೀ[೧]ಸಮೂಹಕ್ಕೆ ದಾಹ
ಜ್ವರಮುತ್ಕೃದ್ಧಾನುಭೀಮಾತಪ[೨]ಮೆನಲುರಿದತ್ತಿಂ[೨]ದಿಳ್[೩]ಘಂ ನಿದಾಘಂ ೮೦
(ಸೂಕ್ತಿಸುಧಾರ್ಣವಂ, ೧೦-೧೨೬)

ಬೇಸಗೆಯ ಬಿಸಿಲಿನೊಳ್ ಕೈ
ಲಾಸನಗಂ ನೆಱಯೆ ಕರಗಿ ಕಣ್ಣಿಟ್ಟು ಕರಂ
ಸೂಸಿ ಪರಿದಪ್ಪುದು ದೆಸೆಗೆ[೨]ನ
ಲಾ[೨]ಸುರಪಾಗಿರ್ದುದೊಗೆದ ಮೃಗತೃಷ್ಣಿಕೆಗಳ್ ೮೧
(ಚಂದ್ರಪ್ರಭಪುರಾಣಂ, ೯-೭೧; ಸೂಕ್ತಿ, ೧೦-೧೩೨)

ಒದವಿದ ಬೆಟ್ಟಬೇಸಗೆಯ ಪೆರ್ಬಿಸಿಲಬ್ಬಿಸೆ ಬೆಚ್ಚಿ ವಾಯುವೇ
ಗದಿ ಹರಿಣಂ ಸಮುತ್ಸುಕದಿನಿಂದುವಬಿಂಬವನೋಡಿ ಪೊಕ್ಕು ಮ
ಧ್ಯದೊಳೊಸಱುತ್ತಮಿರ್ಪ ಸುಧೆಗಂ ಕುಳಿರ್ವಾಲನೆಬಿಲ್ಗಮಲ್ಲಿ ಪೋ
ಗದೆ ನೆಲಸಿರ್ದುದಲ್ಲಿದೊಡಮಲ್ಲಿಯುಮೇಣಶಶಾಂಕಸಂಗಮುಂ ೮೨
(ಚಂದ್ರಪ್ರಭಪುರಾಣಂ, ೯-೭೬; ಸೂಕ್ತಿ, ೧೦-೧೩೬)

ಸರಸೀಜಾತಸಮಂ ಸಹಸ್ರಕರದಿಂ ಸರ್ವೋರ್ವಿಯೊಳ್ ಕೆಂಡಮುಂ
ಪರಪುತ್ತಿರ್ದನೊ ಮೇಣ್ ದವಾನಲಶಿಖಾಸಂತಾನಮಿಂತೀಗಳು
ರ್ವರೆಯೊಳ್ ಮೂರ್ತಿಯನಾಂತು ನಿಂದುದೊ ದಿಟಂ ಪೇೞಿಂಬಿನಂ ಕಾಯ್ಪು ನಿ
ರ್ಭರದಿಂ ಕ್ಷ್ಮೆವಿಗಲಂದು ಬಂದುದು ನಿದಾಘಂ ಮಾಘಸಂಹಾರಕಂ ೮೩

ಖರಕರತಾಪದಿಂದವನಿ ಹೆಚ್ಚಳಿಸಿತ್ತು ಶಿಲಾದ್ರಿಗಳ್ ಭಯಂ
ಕರಮೆನೆ ಕಾದ ಕಬ್ಬುನದವೋಲ್ ಮಿಡಿದತ್ತು ವನೋಹಕವ್ರಜಂ
ಮುರುಟಿದುವಧ್ವಗರ್ ಮಿಡುಕಿ ಕಿಚ್ಚಿನಕ್ರೀಡೆಯೊಲಾದರಾ ದಿಶಾಂ
ತರಮನಲಾಶಿಯಾನನೆನಲೀ ಪ್ರಗಟಿಪ್ಪಂ ಕಡುಪಿಂ ನಿದಾಘಮುಂ ೮೪

ವನಮೃಗರಾಜಿಗಳ್ ತೃಷೆಯ ಕೋಟಲೆಯಿಂ ವನಮಂ ತೊಱ
ಲ್ದಿನ ಕಿರಣಂಗಳಿಂ ಕೆಡೆದು ಜೀಷ್ಟಿಸೆ ಕಂಡು ಮರೀಚಿಕಾಜಲ
ಕ್ಷನುನಿಚಯದಿಂ ಪರಂಪರಿದು ಲಂಘಿಸುತಂ ಮೊಗೆ ಮೊಯ್ಯ ತಾಮುತ
ಟ್ಟಿಸಲಸುಮಿಂದಗಲ್ದುದಿನಿತಿಲ್ಲ ದುರಾಸೆಯೊಳಾರೊ ಬೀೞದರ್ ೮೫

---

[೧]ರಾಜೀ(ಸೂ) [೨]ತಪನಕರಂ ಹ್ಮಾಂ(ಸ) [೩]ನೆಮಾ(ಸೂ)

ಪೊಸಬಿಸಿಲಕುದುರೆಯೇಱುತೆ
ವಸುಧೆಯೊಳಂ ಧಾಳಿಮಾಡೆ ಬೇಸಗೆರಾಯಂ
ಮಿಸುಪ ಖುರಪುಟದ ಧೂಳಿನ
ಲೆಸಗಿತು ರಜತಪ್ರದಾನಮಾ ಬೇಸಗೆಯೊಳ್ ೮೬

ಮೊಗಸಿ ವನವಹ್ನಿ ಮನಮಂ
ಮಿಗೆ ತದ್ವನಜೀವಜಾಲಮಂ ಸುಡುವೆಡೆಯೊಳ್
ಮೃಗಮೊಂದು ಶಶಕನೊಂದುಂ
ನಗಮೊಂದುಂ ವಿಧುವ ಸೇರಿ ಬದುಕಿದುವಾಗಳ್ ೮೭

ರವಿರೋಚಿಸ್ಸಿರದುಷ್ಣಮುರ್ವಿಯಜನಂ ನೀರಾಟಿಪ್ಪಸಂ ದಿಗ್ಗಜಂ
ತವೆ ಕಾಲ್ಗೆಟ್ಟಿರುತಿರ್ಪಿನಂ ಧರತಳಂ ಕೆಂಪಪ್ಪಿನಂ ಗೈದನೂ
ರುವನಾವಾಜಿಯನೇಱಿ ಬಪ್ಪ ರಥಮುಂ ಕಾದತ್ತದಂತಲ್ಲದೇಂ
ಭುವಿಯೊಳ್ ಶ್ರೀಪ್ರಭುಕೋಪವೆಂಬುದನಿಶಂ ಸಾರ್ದಿರ್ದರೇಂಗೆಯ್ವರೋ (?) ೮೮

ಕಾಯ್ವುದು ನೆಲನನಿತೆಲ್ಲಂ
ಸುಯ್ವುದು ಪಥಿಕಪ್ರತಾನಮಾ ವಿರಹಿಜನಂ
ಬೈದುದು ವಿಧಿಯಂ ಮೀಂಗಳ್
ತೊಯ್ದ ರೆಗೆಸಱಲ್ಲಿ ಪೊರಳುತಿರ್ದುವು ನೋಡಲ್ ೮೯

ದೋಷಿಯನು ಪೆರ್ಚಲೀಯದೆ
ಪೂಷಕರಂ ಪೆರ್ಚಿಸುತ್ತೆ ಪರಜೀವನಮಂ
ಶೋಷಿಸಿರಾ ಜಲದಿಂದಂ
ಭಾಷಿಸಲೇಂ ಗ್ರೀಷ್ಮಧರ್ಮರಾಜಂ ಮೆಱೆದಂ ೯೦

ಉಸಿರಿಂದೂದಿದ ಕೆಂಡಮು
ನಸಿಗೆಯ್ಯದೆ ಕಡಿದು ಕಾಷ್ಠವಿಡಿದಕರ್ೋಪಲ
ವಿಸರದುರಿ ಮಸಗಿತಾಹಾ
ಪೊಸಬೇಸಗೆಯೆನಿಸುವಿಂದ್ರಜಾಲಕನಿಂದಂ ೯೧

ಅಹಿಕಮಲಂ ದಹಿಕಮಲಂ
ದಹಿಕಮಲಂ ದಹ್ಯಕಮಲಮಾದುದು ಚಿತ್ರಂ
ಬಹುಕುಮುದಂ ಬಹುಕುಮುದಂ
ಬಹುಕುಮುದಮುದಾಯ್ತು ನೋಟಿಪ್ಪೊಡಾ ಬೇಸಗೆಯೊಳ್ ೯೨

ಸುರಸಾಪಾಂಶುವಿರಾಜಿತಂ ಗುರುಶುಚಿಸ್ಥಾನಂ ಸುದೇಶಂಬೊಲು
ದ್ಧರಗೋಪಂ ಕಮಲಾಯುತಂ ಕವಿಪದಂ ಛೀತಾಪಕಾರಾಸ್ಪದಂ
ವಿರಸಂಬೋಲಾ ಜಗಮಾನಸಾಮುರಚಿತಂ ಲೋಕಾರ್ಥಸಾರಪ್ರದಂ
ವರಮಂತ್ರೀಶನವೋಲ್ ನಿದಾಘಸಮಯಂ ಸ್ವರ್ಗಾಪಮಾನಾಪಹಂ (?) ೯೩

ಪೆಸೆಯಂ ಕಾಯ್ಪೇಱಿಸುತ್ತುಂ ತೃಣಕುಲಲತೆಯಂ ಸೀದು ಕರ್ಪೇಱಿಸುತ್ತುಂ
ರಸೆಯಂ ಸಂತಾಪಿಸುತ್ತುಂ ಜಳಭರಿತತಟಾಂಕಗಳಂ ಶೋಷಿಸುತ್ತುಂ
ಪಸಿಯಂ ವೃಕ್ಷಾಳಿಯಂ ಸುಟ್ಟುರಿಪುತೆ ಮೃಗವಂ ಬೇಯಿಸುತ್ತದ್ರಿಯಂ ದ
ಳ್ಳಿಸಿ ಸೀಳುತ್ತುಂ ವಿಶಾಳಂ ದವಶಿಖಿಯವೊಲೆೞ್ದಿತ್ತಮೋಘಂ ನಿದಾಘಂ ೯೪
(ಗಿರಿಜಾಕಲ್ಯಾಣಂ, ೯-೧೭)

ಪೊಸಬೇಸಗೆಯೊಳ್ ಮೃಗತತಿ
ಮುಸುಪೆರಸಿರವೇೞ್ಕುಮೆಂದು ಕರುಣಿಸಿ ಮಿತ್ರಂ
ಬಿಸಿಲಂ ಹಿಂಡಲ್ ಬೆನ್ನೀ
ರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ ೯೫
(ಗಿರಿಜಾಕಲ್ಯಾಣಂ, ೯-೧೮)

ತರದಿಂದಂ ತೆರೆಮಸಗುವ
ಮರೀಚಿಕಾಜಲಮನಿಳೆಯಜಲಮೆಂದು ಕರಂ
ಹರಿಣಂಗಳ್ ಪರಿತಂದಾ
ತುರಿಸುತ್ತುಂ ಬಿಸಿಲಬಯಲನೀಂಟಿ ಬೞಲ್ದುಂ ೯೬
(ಗಿರಿಜಾಕಲ್ಯಾಣಂ, ೯-೧೯)

ವಹ್ನಿ ಧರೆಯೊಳಗೆ ತೀವಿರೆ
ಚಿಹ್ನವಿದೆಂಬಂತೆ ಬಿಸಿಲ ಬೇಗೆ ಕರಂ ಮ
ಧ್ಯಾಹ್ನದೊಳಳುರ್ದೊಡೆ ಮೃಗತತಿ
ಜಾಹ್ನವಿಯೊಳ್ ಪುಗಲೆ ಬಯಸಿದುವು ಬೇಸಗೆಯೊಳ್ ೯೭
(ಗಿರಿಜಾಕಲ್ಯಾಣಂ, ೯-೨೦)

ಘರಿಘರಿಲೆಂದು ಸೀದುವು ವಿಹಂಗಕುಲಂ ಕೆಱೆ ಬಾವಿ ಬೆಂಚೆಗಳ್
ಪುರಿದರಳೆಬ್ಬಿ ವೀ ಮನುಜರಾತಪತಾಪದೊಳಳ್ಕಿ ಬೞ್ಕಿದರ್
ಕರಿಮುರಿಪೋಯ್ತರಣ್ಯಮುಱೆ ಬೆಂದು ಮೃಗಾವಳಿ ಪೊಂದಿದತ್ತು ನಿಂ
ದುರಿದುವು ಬೆಟ್ಟನಿಂಗಿದುವು ವಾರಿಧಿ ಕಾಯ್ದುದು ಭೂರಿ ಭೂತಳಂ ೯೮
(ಗಿರಿಜಾಕಲ್ಯಾಣಂ, ೯-೨೧)

ಮೃಗಶಿಶುಗಳ್ ಕರಿಮುರಿ ಕ
ಣ್ಗೊಗೆದ ಮರಂ ಘುರಿಘುರಿಲ್ ಗಜಂ ಚಿಮಿಚಿಮಿಯಿಂ
ದಗನಿಕರಂ ಛಿಳಿಛಿಟಿಲೆನೆ
ಮಿಗೆ ಸೀದವು ಬೆಂದುಮುರಿದುಪೊಡೆದುವು ಬಿಸಿಲೊಳ್ ೯೯

(ಗಿರಿಜಾಕಲ್ಯಾಣಂ, ೯–೨೨)

ಮರದಡಿಯೊಳ್ ಕಾನನದೊಳ್
ಗಿರಿತಟದೊಳ್ ಬಟ್ಟಬಯಲಂಬರತಳದೊಳ್
ಕರಿಯ ಬಸಿಲುರಿಯ ಬಿಸಿಲ
ಚ್ಚರಿಯ ಬಿಸಿಲ್ ಸಿರಿಯ ಬಿಸಿಲಖಂಡಿತದ ಬಿಸಿಲ್ ೧೦೦

(ಗಿರಿಜಾಕಲ್ಯಾಣಂ, ೯–೨೩)

ನಡೆಯಲೊಲ್ಲಂಪಡಿಯುಟ್ಟು ಕಾಯ್ದು ನೆಲನಂ ಕಾಲ್ಸುಟ್ಟು ಚುಯ್ಯೆಂದು ಬೆಂ
ದೊಡೆ ಮತ್ತೊಂಪಡಿಯಿತ್ತಲಾಱದಬಿಲಿಂ ಕಣ್ಮುಚ್ಚಿ ಹಸ್ತಾಗ್ರಮಂ
ಕಡೆವಾಯೊಳ್ ಸೆಱೆಯುಟ್ಟು ನೆತ್ತಿ ಬಿರಿಯುತ್ತುಂ ಮುತ್ತುಗಳ್ ಸುತ್ತಲುಂ
ಸಿಡಿಯುತ್ತಿರ್ಪಿನಮಿರ್ದುದೊಂದತಿಮದೇಭಂ ಭೀಷ್ಮದೊಳ್ ಗ್ರೀಷ್ಮದೊಳ್ ೧೦೧

(ಗಿರಿಜಾಕಲ್ಯಾಣಂ, ೯–೨೪)

ಎಲೆಲೆಲೆ ನೋಡುನೋಡು ಕೆಲನುಂ ಬಲನುಂ ನೆಲನುಂ ದವಾಗ್ನಿ ಸು
ಟ್ಟೊಲೆಯುವೊಲಾಗೆ ಪೆಟ್ಟಿದಡಿಯಿತ್ತಿದ ಕಾಲುಱೆ ಸೀಯ್ಯೆ ನಿಂದಿರಲ್
ಚಲಿಯಿಸಲಾಱದಾತಪದ ಹಸ್ತಮನೆತ್ತಿಯೊಳಿಟ್ಟು ಘೀಳಿಡು
ತ್ತೊಲೆದುದು ಜೇಷ್ಟೆಗುಂದಿದುದು ಜೋಲ್ದುದು ಬೀೞ್ದುದು ಬೆಂದುದೊಂದಿಭಂ ೧೦೨

(ಗಿರಿಜಾಕಲ್ಯಾಣಂ, ೯–೨೫)

ಜಳಜಸಖನನಿಲಸಖನೆಂ
ದಿಳೆಯೊಳ್ ರಸವೆಸರನಾನದಿರ್ದೊಡೆ ಸೂರ್ಯಾ
ನಳರಿಂತು ಸಂತಮಿರ್ಪರೆ
ಘಳಿಲೆನೆ ಸಿಂದುರಿದುಪೋಗರೇ ಬೇಸಗೆಯೊಳ್ ೧೦೩

(ಗಿರಿಜಾಕಲ್ಯಾಣಂ, ೯–೨೬)

ಪಸಿವಿಂ ದಾವಾನಳಂ ಸುಟ್ಟುರಿಪೆ ತರುಗಿರಿವ್ರಾತಮಿಲ್ಲಾದುದೋ ನಾ
ಲ್ದೆಸೆಯೊಳ್ ಸೂರ್ಯಂ ಕ್ಷುಧಾಪೀಡಿತನಜಸುತೆ ಕೆಯ್ನೀಡೆ ನಿಸ್ಸಾರಕಾಷ್ಠ
ಪ್ರಸರಂ ಕೌಱಿಟ್ಟುದೋ ಸಿಂದಸುಸಮುತ್ಪಷಿತಂ ವಾಡಬಂ ಪೀಱಿ ತಾಂ ಪೋ
ಷಿಸಿತೋ ವಾರಾಶಿಯೆಂಬುಷ್ಣಮನೊದವಿಸಿತತ್ಸುಗ್ರಯೋಗಂ ನಿದಾಘಂ ೧೦೪
(ಗಿರಿಜಾಕಲ್ಯಾಣಂ, ೯-೨೮)

ಪೊಸತೊಂದಾವರ್ತ್ತೆಸಲ್ ಕಾರಿರುಳೆಸೆ ಶಿಖಿಗಳ್ ಸಂಜೆಯುಂ ವಿಸ್ಫುಲಿಂಗ
ಪ್ರಸರಂ ತಾರಾಳಿಯುಂ ಕರ್ಬೊಗೆ ತಮಮೊದವಿಂ ಪೆರ್ಚಿಗುರ್ಬಾಗೊಡಂ ಪಿ
ಣ್ದೆಸೆವೆಂಗಳ್ ತೊಟ್ಟ ಕರ್ಣೋತ್ಪಲಮುಲಿದರ್ದುವು ಸಪ್ತಾರ್ಚಿಷೋತ್ಕಾತರಂಗಂ
ಬಿಸುಸುಯ್ವುತ್ತಭ್ರಗಂಗಾಂಜುಳಿ ಮುಗಿದುದಪೇಂ ರೌದ್ರಮೋ ಕ್ಷೈಲದಾಹಂ ೧೦೫

ಕೆಸಱುಬ್ಬೆಱೆ ನೀರ್ ಬೊಬ್ಬುಳಿಸೆ ಬುಳುಬುಳೆಂದಿಂಕೆಪಂದೆಯ್ದೆ ಕಂಪಿ
ಲ್ಲಿಸಗುತ್ತಿಪ್ಪೆಡಸೇಂ ಪೆಂಪಡದರೆಗೆರೆಗಳ್ ಬೀಡೆಯಾಗಿರ್ದ ಮಣ್ಣೀ
ರೊಸೆದಾಣಂ ಬಾವಿಗಾಪತ್ತೊಸೆದು ಪರಿಪ ಪೆರ್ಬಳ್ಳದಿರ್ಬಕ್ಕದೊಳ್ ಕಿ
ತ್ತೊಸೆದಂದಂ ಜಾಳಿಸುತ್ತಿರ್ದದು ಜಳಸಪರಿಕಾಳಕೋಟಂಬಕೋಟಂ (?) ೧೦೬

ಎಳನೇಸಱೆಱೆಗ್ಗ ನಟನ
ಗ್ಗಳ ಕಣ್ಣುರಿಯೆನಿಸಿದತ್ತಾ ದಾವಾ
ನಳ ಭೀಷ್ಮಾಂತರಸಾಧ್ವಗ
ತುಳ ಪರ್ಷಂ ಪ್ರಬಳವಾರ್ಧಿಕೋಷ್ಮಂ ಗ್ರೀಷ್ಮಂ (?) ೧೦೭

ಉಱಿ ಕಾಯ್ದ ಸೂರ್ಯರಶ್ಮಿಗೆ
ಪೊಱಿಯಿಡಲೆಂದೆತ್ತಿ ಪಿಡಿವ ತೋಳಿದೆಂಬಿನೆಗಂ
ತುಱುಗಿರ್ದಾವರೆಗೊಂಬಂ
ಮುಱಿದು ನೆೞಲ್ಮಾಡಿಕೊಂಡು ನಡೆದರ್ ಪಥಿಕರ್ ೧೦೮

ಸಾರಲುಮಿರ್ದಮರಂಗಳ
ತೊವಲು ತುದಿಗೊಂಬನೇಱಿ ಬುಮಲಿಗಳಷ್ಟಂ
ಬಾರಿದವಳ್ಳಿದೆ ಪೌವ್ವನೆ
ಪಾರೆ ಕುಣಿಲ್ದಾಱಿ ಪಥಿಕಜನಸಂತಾನಂ (?) ೧೦೯

ಮಸೆದಿರ್ದ ಲೋಹತಾಪ
ಪ್ರಸರಂ ಕಾಲ್ಪರಡಮೆಲ್ಲಮುಂ ಮೆಯ್ವೆರಸಾ
ರಸಮುಂ ಗೋಪತಿ ತವೆ ಕುಡಿ
ಯಿಸಿದಂ ನಿಜಗೋಸಹಸ್ರಮಂ ಬೇಸಗೆಯೊಳ್ (?) ೧೧೦

ಕೆಱೆನೀರ್ ತವುತರೆ ಬಱಿ
ಗೆಱೆಯಾಪುವು ತೊಱೆಗಳುರ್ಕುಗೆಟ್ಟುಱೆತು ಬಱು
ಲ್ದೊಱೆಯಾದುವು ಬಾಂದೊಱೆ ಬಿಸು
ದೊಱೆಯಾದುವು ಕಾಲವಶನದೇನಾಗಿಸದೋ ೧೧೧

ಎಸೆವೆಮ್ಮಯ ಮತಿನಾವುದೆ
ಪೆಸರ್ವೆತ್ತರ್ ದಿವಿಜಸತಿಯರೆನಲೇಂ ನೋಟ್ಪಿಂ
ಗೆಸದಳಿಪೆಂದು ಬೆಡಂಗಂ
ಪಸರಿಸುವಂತಿರ್ದುವಲರ್ದು ಹೊಂದಾವರೆಗಳ್ ೧೧೨

ಶಿವ ತುಹಿನಾದ್ರಿಯತ್ತ್ರೆಳಸಿಯುಂ ಮೃಗಪ್ರೊಂದು ಹಿಮಾಂಶುಬಿಂಬಮಂ
ಧ್ರುವನೊಳಕೊಂಡುಮುನ್ನೆಗತಿಶೂನ್ಯವಿಭಾಸನಮಾತ್ತ್ರ.......ರಾಂ
ಬುವನೆ ನಿರಂತರಂ ತೆಗೆದು ಹರ್ಷದಿನೀಂಟಿಯುಮುಂಗತಾಪಮಂ
ತವಿಕುಮೆ ರೌದ್ರಮೀ ಬಿಸಿಲೆನಲ್ ಬಿಸಿಲಳ್ಕಿಪುದಧ್ವಗರ್ಕಳಂ ೧೧೩

ತರುಣಿಯರಲ್ಲಿಗಲ್ಲಿಗಱವಟ್ಟಿಗೆಯೊಳ್ ಕಡುಗಾಡಿವೆತ್ತ್ತ ತಂ
ಗರಗಮನೆತ್ತಿ ನೀರೆಱೆಯೆ ಸಾಲ್ದುವೆನಲ್ ಮಱೆದಾಪೊಡಮೀಂಟುತಂ
ಬರೆ ಬಿಸಿಲಟ್ಟಿ ಕೋಳ್ಪಿಸಕದಿಂ ಬಿಸಿನೀರ ಕರಂಗದಂದದಿಂ
ದಿರೆ ಬಸಿಱತ್ತ್ರು ಬಾಯೊಣಗಿ ಪಾಂಥಜನಂ ನಡೆವತ್ತ್ರು ಮಾಳದೊಳ್ ೧೧೪

ಬಿಸುಪಂ ಪಚ್ಚೆದ ಮುತ್ತುಮೆತ್ತೆ ಸರಸಶ್ರೀಖಂಡ ತಂಪ್ಪಿಡೆ ಖಂ
ಡಿಸೆ ಘರ್ಮಾಂಬುವನಾಂತ ಮಲ್ಲಿಗೆ ಕರಂ ತಮ್ಮಲ್ಲಿ ಕೋಟ್ಕಿಂಪನೆ
ಯ್ದುಸೆ ಸಾರೋದಯಮಾಗೆ ಸಾರಘನಸಾರಂ ಜಾಳಿವೇ ಚಪ್ಪರಂ
ಬಿಸಿಲಂ ಚಪ್ಪರಿಸಲ್ಕೆ ಭೋಗತತಿಯುರ್ಕಂ ಭೋಗಿದಾಣಂಗಳೊಳ್ (?) ೧೧೫

ಲತಿಕಾಮೂಲಪ್ರಸೂನಂ ಕನಕವಿತತಿಮುಕ್ತಾಕ್ಷತಂ ದರ್ಪಣಾಗ್ರಂ
ದ್ಯುತಿಪುಂಜಂ ಮುಗ್ಧಚಂದ್ರಾತಪ ಕಳಿಕೆಯೆನಲ್ ಕಾಂತಕಶ್ಲೈಷನೋರಾ
ಜತಳಂ ಚಂಚತ್ಕಪೋಲಂ ಸ್ಫುರಿತ ನಿಟಿಲಘರ್ಮಾಂಬು ಜಿಲ್ಲಾಗೆ ನೊರ್ಕಿಂ
ಸತಿಯರ್ ಕರ್ಪೂರಪಾಟೀಕೃತ ಸತಿಯರೆನಲ್ ನಲ್ಲರೊಳ್ ಕಂಪ್ರಪಂದರ್ ೧೧೬

ಅಸಮಬಿಂದಿಂಪ್ರಕಂಪ್ರ ಕಡೆಯಾಣೆಯ ಪೊನ್ನರಸಕ್ಕೆ ಕೂಡಿದಂ
ತೆಸಪ್ರದಿದರ್ಕ ನಲ್ಮೆಯುದಿನೊಮ್ಮೆಡಿಗಿರ್ಮಡಿಪೋಱುತಂ ಸುಧಾ
ರಸಮನೆ ಶೀಪಿಪೊತ್ತ್ರಸದಮಾವಿನಪಣ್ಗಳಸಿಟ್ಟಳಂಗಳಿಂ
ದೊಸರ್ದೆಡೆಯುಱೆ ಪೀರ್ದಮರ್ಪೀರ್ದವರಂ ನಗುಗುಂ ಜಗಜ್ಜನಂ ೧೧೭

ಹಿಮತಾಂಬೂಲೋರುರಾಗಾಧರಮೃಘಸಿತಂ[1]ಜಾಂಬರಂ ತಾಲವೃಂತೋ
ತ್ಥಮರುದ್ವ್ಯಸ್ತಾಲಕಂ ನಿಸ್ಸೃ[2]ತಮಧುಲಸದಾರ್ದ್ರೋದ್ಗಮಾಲಂಬಿಕೇಶಂ
ವಿಮಲೋದ್ಯದ್ಯಂತ್ರಧಾರಾಜಲಕಲುಷಿತನೇತ್ರಾಂಜನಂ ಚಂದನಾಪಾಂ
ಡಿಮಗಾತ್ರಂ ಗ್ರೀಷ್ಮಸಾಯಂಸಮಯಮೊಳೆಸೆದತ್ತಂದು[3] ಬಾಲಾಕಳಾಪಂ ೧೧೮
(ಚಂದ್ರಪ್ರಭಪುರಾಣಂ- ೯-೮೨, ಸೂಕ್ತಿ, ೧೦-೧೨೫)

ಪೂಸಿದ ಚಂದನಂ ಮುಡಿದ ಪಾದರಿ ತೊಟ್ಟೆಳೆಮುತ್ತು ಸುತ್ತಿನೊಳ್
ವಾಸದ ತೆಂಗಿನೋಲೆ ಹದನಾಱದ ಬೆಳ್ದಿಡಿ ಪೊಲ್ವ ಪಚ್ಚೆನೀ
ರ್ವಾಸು ತಗುಳ್ದ ಗಂಜಣಿಯೊಳೊಂದಿದ ಬಾಳದ ಬೇರಚಪ್ಪರಂ
ಬೇಸಗೆ ಸಂದ ಭೋಗಿಗೆ ವಿಲಾಸದ ದೇಸೆಯನುಂಟುಮಾಡುಗುಂ ೧೧೯
(ಸೂಕ್ತಿಸುಧಾರ್ಣವಂ ೧೦-೧೩೯)

ಪೂಸುವ ಬೀಸುವ ಮುಡಿಯುಂ
ಪಾಸುವ ನೀರ್ಗುಡಿಯುಲೆಱತನ ಕಿಱುತ್ಕ್ರಪೆಸದೊಳ್
ವಾಸಂತಂ ವಿಟರ್ಗಾದುದು
ಬೇಸಗೆಗಾದುದು ಬೊಜಂಗತನಮಬಲೆಯರೊಳ್ ೧೨೦
(ಸೂಕ್ತಿಸುಧಾರ್ಣವಂ, ೧೦-೧೪೦)

## ವರ್ಷಋತು

ನಲಿದುದು ಸೋಗೆ ತಂಪನೆಡೆಗೊಂಡುದು ಚಾದಗೆವಕ್ಕಿ ಮಿಕ್ಕ ಪೂ
ವಲರ್ದುದು ಸೊಂಪಿನಿಂ ಕದಪು ಕೆಂಪನೆ ಬೀಱಿದುದೆಯ್ದೆ ಬಿಟ್ಟಬಂ
ದಲರ್ದುದು ಪಚ್ಚಿನಾಸಿಲನು ಮುಚ್ಚಿತು ಕೇದಗೆ ಪೂದೊಡಂಬೆಯಂ
ಬಿಲದೊಳು ಪೊಕ್ಕವಂಜೆ ಮುಗಿಲೊಡ್ಡಣೆಯೊತ್ತಿತು ಕಾರಕೊರ್ಬಿನೊಳ್ ೧೨೧

ಹರುಷಂ ಮಿಗೆ ನಲಿದಾಡು
ತ್ತಿರೆ ಚಾದಗೆಯುರ್ವಿ ನಲಿಯೆ ನಾಲ್ಕುಂದೆಸೆಯುಂ
ಕರಿಯಂತಿರೆ ಗಿರಿಯಂತಿರೆ
ಧರೆಯಂತಿರೆ ನೆಗೆದವಂಬರಕ್ಕಬ್ದಕುಲಂ ೧೨೨

---

[1] ಶಾಂ(ಸ) [2] ದ್ಭಾಸ್ಥಳಾಂಕಂಶೃತ(ಸ) [3] ತ್ತಾವ(ಸ)

ಮುದಮುಡುಗಿತ್ತು ಬೇಸಗೆ ಕರಂ ತಲೆದೋಱುದುವಲ್ಲಿಗಲ್ಲಿಗಂ
ಬುದನಿಕರಂ ಸುರುಳ್ದುದು ಬಿಸಿಲ್ ನೆಗೆದತ್ತು ತಟಿಲ್ಲತಾಂಕುರಂ
ಬೆದಱುದುಮಂಜಿಯಾಡಲಡಿಯಿಟ್ಟುವು ಸೋಗೆಗಳೆಯ್ದೆ ಪಲ್ಲವಂ
ಪುದಿದ ಕದಂಬದೊಳ್ಮುಗುಳನೆಬ್ಬಿಸಲಿರ್ದುದು ಪಶ್ಚಿಮಾನಿಲಂ ೧೨೩

ಚಾದಗೆ ನಾಟಕಂ ನಲಿದುದದ್ರಿಕುಜಂಗಳ ಕೋಟರಂಗಳೊಳ್
ಪೋವಗೆ ತತ್ತಿಯಿಕ್ಕಿದುವು ಮಾನಸಪದ್ಮವನಕ್ಕೆ ಪೋಪ ಚಿ
ತ್ತೋದಯಮಂಜೆಗಾಯ್ತು ಮುಱುಗೋಗಿಲೆಗಳ್ ಗಱುವೊಯ್ದವಾಗಳುಂ
ಪೋದುವು ಪಾಱಿ ವಾಯಸದ ಗೂಡುಗಳಿಂದವೆ ಮೇಘಕಾಲದೊಳ್ ೧೨೪

ಬೆಟ್ಟದ ತೋಳಸಿಂಬಱಿದು ಸಾರ್ದುವು ಬೇಡರ ಪಳ್ಳಿ ಕಾಗೆಗೂ
ಡಿಟ್ಟುವು ತತ್ತಿಯಿಕ್ಕಿದುವು ಪೋದಗೆ ಮೇಲ್ಗವಲಲ್ಲಿ ಹಂಸೆಗಳ್
ತೊಟ್ಟನೆ ಪಾಱಿಪೋದುವು ಜಲಾಶಯದಿಂ ಮರದಿಂ ಮರಕ್ಕೆ ಧಿಂ
ಕಿಟ್ಟು ಕಳಾಪಿ ಕೇಗಿದುವು ಚಾದಗೆಯೇಱುದುವಭ್ರಮಾರ್ಗಮಂ ೧೨೫

(ಸೂಕ್ತಿಸುಧಾರ್ಣವಂ, ೧೦-೧೫೨)

ತರದಿಂ ಶಿಖಿ ಚಾದಗೆ ಮಧು
ಕರನಂಚೆ ಪಯೋಧರಂಗಳನುನಯದಿಂದಂ
ಕರೆದುವು ಮೊರೆದುವು ಪರೆದುವು
ತೊರೆದುವು ಬೇಗದಿ ನಿರಂತರಂ ಕಾರ್ಮುಗಿಲೊಳ್ ೧೨೬

ಹರುಷಂ ಮಿಕ್ಕಭ್ರಮಾತಂಗಮನತಿಭರದಿಂ ನೋಡಲೆಂದೆಟ್ಟಿವೋ ದಿ
ಕ್ಕರಿಗಳ್ ದೇವೇಂದ್ರನೊಳ್ ಕಾದುವ ಕಡುಮುಳಿಸಿಂದೆಟ್ಟಿವೋ ಗೋತ್ರಶೈಲೋ
ತ್ಕರವೀಶಂಗಾ ಹಿರಣ್ಯಾಕ್ಷನಿಗೊಗೆದ ಮನೋದುಃಖಮಂ ದೂಱಲೆಂದಾ
ತುರದಿಂದೆಟ್ಟಿತ್ತೊ ಧಾತ್ರೀತಳಮೆನೆ ನಭದೊಳ್ ತೀವಿತಭ್ರಪ್ರತಾನಂ ೧೨೭

ಮುಂ ಬಿಸಜೋದ್ಭವಂ ಸಮೆದನಂಬುದಮುಂ ಪವಮಾನಧೂಮತೇ
ಜೋಂಬುಗಳಿಂದಮೆಂಬ ನುಡಿ ತಥ್ಯಮದಲ್ಲದೊಡುಂತೆ ಕಾರಕಾ
ದಂಬಿನಿ ಮಾಳ್ಕುಮೇ ಬಿರುಸುಗಂಗಜನಗ್ನಿವಿಜೃಂಭಮುಂ ವಿಲೋ
ಕಾಂಬಕವಾರಿಯುಂ [೧]ತನುಸಿದಾಘಮ[೧]ನುತ್ಕಳಿಕಾಪ್ರಪಂಚಮುಂ ೧೨೮

(ಚಂದ್ರಪ್ರಭಪುರಾಣಂ, ೪-೩೩; ಸೂಕ್ತಿ, ೧೦-೧೬೦)

---

[೧]ತನುವಿದಾಹಮು(ಸ) ಹೃದಯತಾಪ(ಅ)

ಘನವಜ್ರಜ್ವಾಲಧೂಸಾವಳಿಯೊ ಗಗನಗಂಗಾತಟೋದ್ವೃತ್ತನಾಳೀ
ವನಮೋ ವಿದ್ಯುನ್ನಟೀಕರ್ಬುರಜವನಿಕೆಯೋ ಚಾರುಮೇಘಾಗಮಶ್ರೀ
ವನಿತಾಪಿಂಛಾತಪತ್ರಪ್ರಕರಮೊ ಎಯೆಮುತ್ತುಂಗಮಾತುಂಗ[1]ರುಕ್ಷಾ[1]
ಜಿನಪಕ್ಷತ್ರಾಣಮೋ ಪೇೞಿಕನೆ ನೆಗೆದುವಳಿಶ್ಯಾಮಳಂ ಮೇಘಜಾಳಂ ೧೨೯

(ಚಂದ್ರಪ್ರಭಪುರಾಣಂ, ೪-೩೧; ಸೂಕ್ತಿ, ೧೦-೧೫೫)

ಒಟ್ಟಿದ ವಾರಿಪೇರುಗಳವೋಲ್ ಕೆಲವೊಪ್ಪಿರೆ ದೂರಭಾಗದೊಳ್
ಕಟ್ಟಿದ ಗಂಧವಾರಣದವೋಲ್ ಕೆಲವೊಪ್ಪಿರೆ ತಳ್ತ ಕರ್ಪೊಡಂ
ಬಟ್ಟೆಸೆವೆತ್ತಿದೋಳಿಗುಡಿವೋಲ್ ಕೆಲವೊಪ್ಪಿರೆ ನೀರದಂಗಳಿಂ
ದಿಟ್ಟಳಿಸೊಪ್ಪಿದತ್ತು ಮೞೆಗಾಲದ ಬೀಡಿನವೋಲ್ ನಭಸ್ಥಳಂ ೧೩೦

(ಸೂಕ್ತಿಸುಧಾರ್ಣವಂ, ೧೦-೧೫೬)

ಜಳದೌಘಶ್ಯಾಮಧೂಮಪ್ರತತಿ ಚಳತಟಿಜ್ವಾಳಿಕಾಲೋಲಕೀಲಾ
ವಳಿ ಸಂಜಾತೇಂದ್ರಗೋಪಪ್ರಸರವಿಸರದರ್ಚಿಃಕಣಂ ಪಶ್ಚಿಮಾಶಾ
ನಿಳಕಾಂತೋಜ್ಜೃಂಭಿತಂ ಬಂದುದು ವಿರಹಿತರುವ್ರಾತಮಂ ಪರ್ವುವಗ್ರಾ
ನಳನೆಂಬಂತಬ್ದಕಾಲಂ ಸ್ತನಿತಧಗಧಗಧ್ವಾನರೌದ್ರಾಯಮಾನಂ ೧೩೧

(ಚಂದ್ರಪ್ರಭಪುರಾಣಂ, ೪-೨೯; ಸೂಕ್ತಿ, ೧೦-೧೫೮)

ಸ್ತನಿತಘನಬೃಂಹಿತಂ ದು
ರ್ದಿನಮದಪೂರಂ ಪಯೋದಗಜಘಟೆ ಸುೞಿದ
ತ್ತಿನರುಚಿಪಲ್ಲವಕುಳಕಬ
ಳನಲೀಲೆಯಿನಂತರಿಕ್ಷ ಕಕ್ಷ್ಯಾಂತರದೊಳ್ ೧೩೨

(ಚಂದ್ರಪ್ರಭಪುರಾಣಂ, ೪-೩೨; ಸೂಕ್ತಿ, ೧೦-೧೫೯)

ಇಂಬುಗಿಡಿಸಿದುವು ದೆಸೆಗಳ
ನಂಬರಮಂ ಪೀರ್ದುವಹಿಮಹಿಮಕರಕಿರಣಾ
ಡಂಬರಮಂ ನೊಣೆದುವು ಪಿರಿ
ದುಂ ಪೇಸಱಿಸಿದುವು ಬಿರಿಯಿಂಯಂ ಜಲದಂಗಳ್ ೧೩೩

(ಚಂದ್ರಪ್ರಭಪುರಾಣಂ, ೪-೩೪; ಸೂಕ್ತಿ, ೧೦-೧೬೧)

---

[1] ಭೂಷಾ(ಸೂ)

ಘುಳುಘುಳುಃ ಘುಡುಘುಡು ಘುಡುಗುಳು
ಛಿಳಿಚಿಟಿ ಗುಘುರ್ಘುಳಘುಳಘಾಳಂದಾಂದಳಚಿಂ
ಛಿಳಿಛಿಂ ಛಿಛಿಂ ಚಟಂ ಛಟಿ
ಘುಳುಘುಳು ಘುಳುಯೆಂದು ಮೊೞಗು ಮೊೞಗಿತ್ತಾಗಳ್ ೧೩೪

ಹರಿಗೋಪಾಲಪದಕ್ಕೆ ತೂರ್ಯಪಟುಘೋಷಂ ಕೇಕಿನಾಟ್ಯಕ್ಕೆ ಬಂ
ಧುರಢಕ್ಕಾನಿನದಂ ವಿಯೋಗಿನಿವಹಕ್ಕಂಗೋದ್ಭವಜ್ಯಾಲತೋ
ದ್ಧುರನಾದಂ ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀ
ರರವಂ ತಾನೆನೆ ನವ್ಯಮೇಘನಿನದಂ ಪೊಣ್ಮಿತ್ತು ರೋದೋಂತದೊಳ್ ೧೩೫
(ಜಗನ್ನಾಥವಿಜಯಂ, ೪-೮: ಸೂಕ್ತಿ, ೧೦-೧೬೩)

ನಲ್ಲರನಪ್ಪಿ ಮುಗ್ಧೆಯರು ದುರ್ಭರಸು ಸಂಭ್ರಮದಿಂದೆ ಹಂಸೆಗಳ್
ನಿಲ್ಲದೆ ಪಾಱಿಪೋಗೆ ಕೊಳದಿಂ ನವಿಲೊರ್ಮೆಯೆ ಕೇಳ್ದು ನರ್ತನೋ
ತ್ಸುಲ್ಲತೆಯುಂ ನೆಗೞ್ಗೆ ಮೊೞಗಿತ್ತು ಮುಗಿಲ್ ಘನಕಾಲ ಭೂಮಿಭೃ
ದ್ವಲ್ಲಭದಿಗ್ಜಯೋದ್ಯಮಮಹೋತ್ಸವದುಂದುಭಿ ತಾನಿದೆಂಬಿನಂ ೧೩೬

ತಳರ್ದಾತ್ತಾಲಯದಿಂದಿರುಳ್ ಪುಗುವ ಜಾರಸ್ತ್ರೀಯ ವಕ್ತ್ರೇಂದುವಂ
ಚಳವಿದ್ಯುನ್ನಯನಾವಲೋಕನದೆ ಕಂಡನ್ಯಾಯಮಾಯ್ತೀ ವಿಯ
ತ್ತಳಚೂಡಾಮಣಿ ಚಂದ್ರನೇಂ ಕಱಿತನೀ ವರ್ಷಾಂಬುವಂ ಕೂಡೆ ಭೂ
ವಳಯಕ್ಕೆಂದುಲಿವಂತವೇಂ ಮೊೞಗಿತೋ ಮೇಘಂ ನಿಶೀಥಂಗಳೊಳ್ ೧೩೭
(ಜಗನ್ನಾಥವಿಜಯಂ, ೪-೨೮; ಸೂಕ್ತಿ, ೧೦-೨೧೭)

ಪಿಕಮೌನವ್ರತದುಂದುಭಿಧ್ವನಿ ಬಲಾಕಾನೃತ್ಯಚೂಡೋಪಮಾ
ನಕರಾವಂ ಶಿಖಿನೃತ್ಯವಾದ್ಯರುತಿ ಪ್ರೋತಕ್ಕುದ್ಭಗರ್ಭೋತ್ಸವೋ
ತ್ಸುಕವಾದಿತ್ರರವಂ ಮರಾಳಗಮನಾತೋದ್ಯಸ್ವನಂ ಚಾತಕೋ
ದಕಕೇಳೀಕೃತತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ ೧೩೮
(ಚಂದ್ರಪ್ರಭಪುರಾಣಂ, ೪-೩೫: ಸೂಕ್ತಿ, ೧೦-೧೬೪)

ರಸನಾಲಂಪಟನಾಜ್ಯವಾಂಛಿತನಸಂತುಷ್ಟಂ ಸದಾಸರ್ವಭ
ಕ್ಷಕನುಸ್ತ್ರಾಟವಿಭುಂಜಿತೋಗ್ರನೆನಿಪೀ ದಾವಾಗ್ನಿಯಂ ಕಾಲ್ಗಳಿಂ
ಪೊಸೆಸೆಂ ಕಾಱಿತ್ಸೂನಲಿಂ ಪೊರಳ್ಚಿಪೆನರಣ್ಯಾಶ್ರಿಯೆ ಕೇಳೆಂದು ಗ
ರ್ಜಿಪಿ ಮೇಘಂ ಸುಡಿವಂದದಿಂ ಸ್ತನಿತಘೋಷಂ ಪೊಣ್ಮಿತಂದೆತ್ತಲುಂ ೧೩೯
(ಸೂಕ್ತಿಸುಧಾರ್ಣವಂ, ೧೦-೧೬೫)

ತಲೆ ಬೆಳೆದು ಪರ್ವತಾಕಾ
ಶವನೇಱುದ ಮುಗಿಲ ನೀರ ಸೇಡೆಯುಂ ಮಿಗೆ ದು
ಶ್ಚ್ಯವನಂ ಬಿಡಿಸುವ ಘನಶ
ಸ್ತ್ರವಣಂ ಪೊಳೆವಂತೆ ಮಿಂಚು ಮಿಂಚಿತ್ತಾಗಳ್ ೧೪೦

ಜಳಮಂ ವಾರಾಶಿಯೊಳ್ ಮಿರ್ೞ ಜಿರಸು ಮೊಗೆತರಲ್ ಮೇಘಮಾ ಬಾೞಮೀನ್ಗಳ್
ಪೊಳೆದಾಡುತ್ತಿರ್ದುವಾಕಾಶದೊಳೆನಲವಿಭಿನ್ನಾಂಜನಚ್ಛಾಯೆಯಿಂ ಗೊಂ
ದಳಿಸಿರ್ದಂಭೋದದಿಂದುಚ್ಚಳಿಸಿ ಪೊಳೆವ ವಿದ್ಯುಲ್ಲತಾಜಾಳಮಾಗಳ್
ತಳೆದತ್ತಾಸ್ಚರ್ಯಮಂ ಕಟ್ಟಿಲೆ ಬಿಡೆ ಬಿಸಿಲಂ ಕಾಱುದೊಂದಂದದಿಂದಂ ೧೪೧
(ಜಗನ್ನಾಥವಿಜಯಂ, ೪-೧೫; ಸೂಕ್ತಿ ೧೦-೧೬೯)

ಜಳನಿಧಿಯೊಳ್ ಮುಗಿಲ್ ಸಲಿಲಮಂ ಮೊಗೆದೆಯ್ತರುವಲ್ಲಿ ಬಾಡಬಾ
ನಳನನು ನುಂಗಲಂತದುದರಾಂತರಮಂ ಸುಡೆ ತಾಳಲಾಱದು
ಮ್ಮಳಿಸುತಲುಂ ಭುಗಿಲ್ ಭುಗಿಲನೇಂ ಕಡುವೇಗದಿ ಕಾಱುದಪ್ಪುದೆಂ
ದಿಳೆಯ ಜನಾಳಿ ಬಣ್ಣಿಪೊಲು ಮಿಂಚಿಸೆದಿರ್ದುದು ಕಾರಕೊರ್ವಿನೊಳ್ ೧೪೨

ರಾಗದಬಳ್ಳಿ ಚಾಪಗೆಗೆ ಕಾಂಚನಚಂಚಲಲಾಸ್ಯತರ್ಜನಂ
ಸೋಗೆನವಿಲ್ಗೆ ಮೇಖಲೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾ
ರಾಗಮನಕ್ಕೆ ಜಾತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್ ನಭೋ
ಭಾಗಮನೆಯ್ದೆ ಬಿತ್ತರಿಸಿದತ್ತು ತಟಿಲ್ಲತೆ ಲಾಸ್ಯಲೀಲೆಯಂ ೧೪೩
(ಪಂಪರಾಮಾಯಣಂ, ೭-೧೪೮, ಮಲ್ಲಿನಾಥಪುರಾಣಂ ೮-೮೮; ಸೂಕ್ತಿ ೧೦-೧೬೭)

ಸ್ತನವತಟೋಪಳಸ್ಫುರಿತಮಸ್ಮರಾಗಸುವರ್ಣರೇಖೆ ನೂ
ತನಜಳವಾಹಕೇಭನಿಗಳಂ ನವಚಂಪಕಮಾಲೆ ವಾರಿಭೃ
ಜ್ಜನಪತಿಹಸ್ತಖಡ್ಗಲತೆ ಮೇಘಗೃಹೋಜ್ವಳದೀಪಮಾಲೆ ತಾ
ನೆನೆ ಕಡುಗಾಡಿಯಂ ತಳೆದು ಮಿಂಚಿಸೆದತ್ತು ನಭೋವಿಭಾಗದೊಳ್ ೧೫೪

ಭೂತಳದ ಗೋತ್ರಗಳ ಪುರು
ಹೂತಂ ಮಿಗೆ ಗೆಲ್ದು ಮತ್ತನಲಬಾಣದೊಳಂ
ಪಾತಾಳದ ಗಿರಿಗಳನಿ
ಟ್ಟಾ ತೆಱದೊಳ್ ಸಿಡಿಲು ಬಿರ್ದುದಭ್ರಾಗದೊಳ್ ೧೫೫

ಘನಸಮಯನೃಪಾಲಕನೊಳ್
ಘನಪಾಣಿಗ್ರಹಣಮಾದ ಭೂವನಿತೆಗೆ ಮು
ತ್ತಿನಸೇಸೆಗಳಂ ಗಗನಾಂ
ಗನೆ ಸೂಸಿದಳೆನಿಸಿ ಬೀೞ್ದುವಾಲಿವರಲ್ಗಳ್ ೧೪೬

ಪಳುಕಿನ ಬಟ್ಟುಗಳ್ ಗಗನದಿಂದುದಿರ್ದಪ್ಪುವೋ ಚಿತ್ರಮೆಂಬಿನಂ
ಘಳಘಳನಭ್ರದಿಂದೆ ಮಿಡುಕಂಬನಿ ಸೂಸೆ ಬಱಿಕ್ಕೆ ವೃಷ್ಟಿ ಕಂ
ಗೊಳಿಸಿದುದಂದು ತೀವ್ರಪವನಾಹತಿಯಿಂ ತಟಿದಂಬನೆಂಬು ಕೆಂ
ಪೞಿಗಳನಾಂತು ಮೇಘಲತೆಯಿಂದಲರೋಗುತಲಿರ್ದಪೆಂಬಿನಂ ೧೪೭

ಸುರಗೋಪಂಗಳುಮಾಲಿಕಲ್ಲುಮೆಳವುಲ್ಲುಂ ಕೆಂಪಿನಿಂ ಬೆಳ್ಪಿನಿಂ
ಪರಿತಚ್ಛಾಯೆಯುಮಪ್ಪಿಗಲ್ಪಿಗೆಸಗುಂ ಮಾಣಿಕ್ಯದಿಂ ಮುತ್ತಿನಿಂ
ಗರುಡೋದ್ಗಾರದ ಪಚ್ಚೆಯಿಂ ಸಮೆದ ನಾನಾಭೂಷಣಾನೀಕಮಂ
ಧರಣೀವಲ್ಲಭೆಗಂಬುದಾಗಮಮಿದಂ ಕೈಗೆಯ್ದನೊಂದಂದದಿಂ ೧೪೮
(ಜಗನ್ನಾಥವಿಜಯಂ, ೪-೨೦, ಸೂಕ್ತಿ, ೧೦-೨೨೨)

ವಸುಧಾವಲ್ಲಭೆ ಮೇಘಕಾಲವಿಟನೊಳ್ ಸಂಭೋಗಮಂ ಮಾಡೆ ಬ
ಣ್ಣಸರಂ ಪ್ರೋರ್ಕಳಿಯಿಂದಮೇ ಪಱಿದು ಸೂಸಿತ್ತಲ್ಲದಂತೆತ್ತಣಿಂ
ಪೊಸಮುತ್ತಂ ಕಿಸುಗಲ್ಗಳುಂ ಕೆದಱಿ ಕಣ್ಗಂ ಬಾದುವೆಂಬಂತವೇ
ನೊಸೆದೊಪ್ಪಿರ್ದವೊ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ ೧೪೯
(ಪಂಪರಾಮಾಯಣಂ, ೭-೧೮೬; ಮಲ್ಲಿನಾಥಪುರಾಣಂ, ೮-೮೬, ಸೂಕ್ತಿ, ೧೦-೧೮೫

ವಾಸವಚಾಪಮೆಂಬ ಮಣಿಮಂಟಪದೊಳ್ ಮೊೞಗೆಂಬ ವಾದನಂ
ಘೋಷಿಸೆ ಮೇಘಮೆಂಬ ತೆರೆಯಿಂದೆ ತಟಿನ್ನಟಿ ಬಂದು ನಾಟ್ಯವಿ
ನ್ಯಾಸದೆ ಕೊಂಕಿ ನಿಂದು ಕುಸುಮಾಂಜಳಿಯಂ ಕುಡೆ ಮುತ್ತುಮಾಣಿಕಂ
ಸೂಸಿದುವೆಂಬಿನಂ ಪರೆದುವಾಲಿವರಲ್ಗಳುಮಿಂದ್ರಗೋಪಮುಂ ೧೫೦
(ಅನಂತನಾಥಪುರಾಣಂ, ೯-೧೨: ಸೂಕ್ತಿ, ೧೦-೧೮೬)

ಘನರಾವಂ ಪೊಣ್ಮೆ ಮೀನುಂ ಮೊಸಳೆಯುಮೊಡವಿಟ್ಟಿತ್ತೆನಲ್ ಮೇಗಣಿಂದಂ
ಬಿನ ಕಟ್ಟಂ ಬಿಟ್ಟವೋಲ್ಸಂಧಿಸಿ ಕೊಡಗೊಡಮೊಳ್ ಪೊಯ್ದವೋಲ್ವ್ಯಾಗ್ರ[1]ಘೋರಪ್ರೋ
ರಿಸುತಂ ಸಂವರ್ತಮೆತ್ತಂ ಜಳಚಳಕುಳದೊಂದಂದದಿಂ ಗೋಕುಲಂ ಬ
ಲ್ವಿಸಲೊಳ್ ತೇಂಕಾಡುವನ್ನಂ ಕಱಕಿದುವು ಮುಬಿಕೆಯಂ ನೂತ್ನಜೀಮೂತಜಾ[2]ತಂ
(ಸೂಕ್ತಿಸುಧಾರ್ಣವಂ, ೧೦-೨೨೪)

---

[1] ಲಾಗೆ (ಸೂ) [2] ಲಂ (ಸೂ)

ವಿಳಸಲ್ಲೋಲಪ್ರವಾಳಪ್ರತತಿಯಿನಪರಾಂಭೋಧಿವೀಚೀಚಯಂ ಕೆಂ
ಪಳಿರಿಂ ತದ್ವಾರ್ಧಿವೇಳಾವನಸಮಿತಿ ದವಜ್ವಾಲೆಯಿಂ ನೀಳ್ವೆಲಾ
ವಳಿ ಕ್ಕೈಕೊಂಡಭ್ರಮುಂ ತಳ್ತುಡರ್ದಪ್ರೋಲಡರ್ದತ್ತೆತ್ತಲುಂ ಬಳ್ಳಿಮಿಂಚಂ
ತಳೆದಾಶಾಮಂಡಲಂ[1]ಕಗ್ಗನೆಗ[1]ಸಿಯೆ ಜಳಸೀತಜೀಮೂತಜಾತಂ ೧೫೨

(ಜಗನ್ನಾಥವಿಜಯಂ, ೪-೧೪)

ಒದವಿದ ಕೇಕಿ ನೀಳ್ದ ಕೊರಲೆತ್ತಿದ ಪಕ್ಷಮುರಲ್ಚುತಿರ್ದಿನಂ
ಮದನನ ಪಂಚರತ್ನಮಯ ಪೀಟಕದಂತಿರೆ ಬಿರ್ಚೆ ಬರ್ಹಮಂ
ಪದೆದು ನವಿಲ್ಗಳಾಡೆ ಚಪಲಾಕ್ಷಿ ಘನಾಗಮ ಲಕ್ಷ್ಮಿ, ಕಂಡು ಹ
ರ್ಷದಿನುಗುತಿರ್ದ ಕಂಬನಿಯ ಸೋನೆಯೊಲಾದುವು ಭೂರಿವೃಷ್ಟಿಗಳ್ ೧೫೩

ಗಗನಂ ಕೆಟ್ಟುದು ಚಂದ್ರಸೂರ್ಯರಱಿಂದರ್ . . . . . . .
. . . . . . . . . ಜಲದೊಳ್ ಪೂೞ್ದಿತ್ತು ಧಾತ್ರೀತಳಂ
ಖಗಸಂಚಾರತೆ ಶೂನ್ಯಮಾದುದು ನಿರುದ್ಯೋಗಕ್ಕೆ ಪಕ್ಕಾದುದೀ
ಜಗಮೆಂದೆಂಬಿನಮೆಯ್ದೆ ಕಟ್ಟೆ ಕರೆದತ್ತಾಸಾರಮೀ ಲೋಕದೊಳ್ ೧೫೪

ಮೊೞಗುವ ಮೇಘ ನೀಳ್ದುಱುಪಳಂಚುವ ಮಿಂಚು ನಭಕ್ಕೆ ಘೂಳಿಯಂ
ಬಱಿಸುವ ಘಾಳಿ ಚೂಣಿಯ ಬಿದಿರ್ವನಿ ಪೆರ್ಚುವ ಸೋಗೆ ಶೋಕಮಂ
ತಱಿಸಿನ ಮರಾಳ ಮಂದಮತಿಯೆಯ್ದುವ ಕೋಗಿಲೆ ರಾಗಮೇೞ್ಗೆಯೊಳ್
ಮುೞುಗುವ ಜಾರೆಯರ್ ಕುಣಿಯೆ ಕಾರೆಸೆದತ್ತು ನವಪ್ರದೇಶದೊಳ್ ೧೫೫

ಪರಿವ ಮುಗಿಲ್ ಪಳಂಚೆ ಖಚರೀಚಯಸ್ತನತೋರಹಾರದ
ಸ್ಸರಿ ಪಱಿಯಲ್ ಪ್ರೋದಟ್ಟಿ ಬಿಡುವೀವಿಘನೋಪಳಮೊಂದು ರೂಪದಿಂ
ಸುರಿಯಲನುತ್ತರಂ ಬಱಿಯವಾರತಿಬಿಲ್ಪ್ರಮೆಂಬ ಚೆಲ್ವನಾ
ವರಿಸಿದುದಂದು ಸಂದಣಿಸಿ ನೀಳ್ದ ಪಯೋಧರ ವಾರಿಧಾರೆಗಳ್ ೧೫೬

ಶುಕನಿಕುರುಂಬಮುಗ್ಗಡಿಸೆ ಕೋಕಿಲನಾದದ ತಾಳಮುಣ್ಮೆ ಸೌ
ಖ್ಯಕರ ಕದಂಬಪುಷ್ಪರಸದಿಂ ದಣಿದೊಯ್ಯನೆ ಪಾಡೆ ಷಟ್ಪದಂ
ವಿಕಸಿತಪಕ್ಷ್ಮಮೂರ್ಧಗಳನುಣ್ಮೊಗದುಚ್ಚರಿತಸ್ವನಂ ಬಳಾ
ಹಕ ನಿನದಕ್ಕೆ ಪೆಕ್ಕಣವನಾಡಿದುವೊಂದು ಮಯೂರಸರ್ಥಿಯಿಂ ೧೫೭

---

[1]ಕಟ್ಟಿನೆಕು (ಅ)

ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯನೆ ತಿರುವಪ್ಪಿಂದ್ರ ಕೋದಂಡಮಂ ಕೊಂ
ಡು ನಿಜಸ್ಕಂಧಾಗ್ರದೊಳ್ ಕೇದಗೆಯೆಸಳಲಗೆಂಬಂಬು ಕೂರಂಬು ತೀವಿ
ರ್ದ ನಿಷಂಗಂ ಕರ್ಣ್ಗೊಳಲ್ ಪೊಗ್ಗೆಯ ನನೆಗಣೆಯುಂ ತೂಗುತುಂ ಕಂತುವೀ ಬಂ
ದನೆನುತ್ತಂ ಗರ್ಜಿಸುತ್ತಾದುದು ವಿರಹಿಗಳಂ ಕೇಕಿಭೇಕಪ್ರಣಾದಂ ೧೫೮

ಬಱಬಱನಾಗಿ ತಾಳಿಸುತಲುರ್ವರೆಯಂ ರವಿಸುಟ್ಟನೆನ್ಮನಿಂ
ತಱಿಂದಿಱಿಯೆಂದು ವಾರಿದಕೆ ಮುದ್ದಿಸಿ ಹುಯ್ಯಲನಿಕ್ಕುವಂದದಿಂ
ಯೆಱಿಯೆಱಿ ಟಿಂಕುಟಿಂಕುಟಿ ಟಟಟ್ರು ಬಱಟ್ಟನೆಂದು ಕೂಗಿ ತಾ
ಕೆಱೆಕೆಱೆ ಭಾವಿಬಾವಿ ತೊಱೆಸಿರ್ದೊಱೆದಪ್ಪುದೆ ದರ್ದುರವ್ರಜಂ ೧೫೯

ಅಡರ್ದೊಂಡೊಂದಱ ಬೆನ್ನಂ
ಗಡ ಪೊಗದಿಂ ಪತ್ತಿಕೊಂಡು ವಿಷಯಾತುರದಿಂ
ಗಡ ದಬಕುತಿಹ ಗಡಗೀಡ
ಗಡಕೆಂದಪ್ಪ ಕಾರಕಪ್ಪೆ ಕೆಱೆಗಳ ತಡಿಯೊಳ್ ೧೬೦

ಗಗನಸ್ತ್ರೀಯ ವಿಚಿತ್ರವಸ್ತ್ರವಿಲಸತ್ಸವ್ಯಾನವೆಂಬಂತೆ ಕಾ
ರ್ಮುಗಿಲೆಂಬಾನೆಯ ರನ್ನದಗ್ಗರಣೆಯೆಂಬಂತಬ್ಜಗರ್ಭಾಂಡಭೂ
ರಿಗೃಹದ್ವಾರದುದಾರತೋರಣವಿದೆಂಬಂತಭ್ರದೊಳ್ ನಾಡೆ ದಿ
ಟ್ಟಿಗೆ ಚೆಲ್ವಾಯ್ತು ಬಹುಪ್ರಭಾಸಬಳಿತಂ ಗೀರ್ವಾಣಬಾಣಾಸನಂ ೧೬೧

ನೊಳ್ಳೆ ಮುಂಗುಳ್ತುದೆಂದು ಗಿರಿಮಲ್ಲಿಗೆ ಮೆಲ್ಲನರಲ್ದುದೆಂದು ಕೆಂ
ಕೆಲ್ಲಿ ಪಸುರ್ತುದೆಂದು ಬಿದಿರೊಳ್ ಕುಡಿ ಮೂಡಿದುದೆಂದು ಕೆಂದಳಿರ್
ಪಲ್ಲಕೆಗಾದುದೆಂದು ರಸವೇಱಿದ ನೇಱಿಲ ಪೋರಿನಣ್ಣಳಂ
ತಲ್ಲಣಗುತ್ತಮೆಂದು ತಲೆಸೋಱಿದುದೆಂದು ಶಿಲೀಂಧ್ರಕಂದಳಂ ೧೬೨

(ಸೂಕ್ತಿಸುಧಾರ್ಣವಂ, ೧೦-೨೦೩)

ಕೆಂಗೊಸರಾಯ್ತು ಸಕ್ಕಿಕೆ ಕದಂಬಮರಲ್ದುದು ಜಂಬು ಪೋರೆಪ
ಣ್ಣಾಂಗಲಿಸಾಂತುದಸ್ತ್ರಮಳಿಕಂ ಪರಿಪೊತ್ತಿದುದಿತ್ತ ಕೇತಕಂ
ಪೊಂಗಱಂಗಟ್ಟಿದತ್ತು ಪರಿಪಕ್ವಮಯಿರ್ತ್ತಿಷುವಂತಿರಾದುದೆ
ತ್ತಂ ಗಿರಿಕುಂಜದೊಳ್ ನಲಿದು ಕೇಗುವ ಕೋಗಿಲು ಕಣ್ಣ ಪೀಲಿಗಳ್ ೧೬೩

(ಅನಂತನಾಥಪುರಾಣಂ, ೯-೬; ಸೂಕ್ತಿ, ೧೦-೧೫೧)

ಕಡವಲರ್ದುವು ಮೊಲ್ಲೆಯ ಪೂ
ಗುಡಿ ಸಿಡಿರ್ದುವು ಸೋಗೆ ಕೇಗಿದುವು ಕೇದಗೆ ಬಿ
ಳ್ಪೊಡೆಯೋದುವು ಚಾದಗೆಗಳ್
ಕಡಂಗಿ ನುಂಗಿದುವು ತೋರವನಿಯಂ ಕಾರೊಳ್ ೧೬೪
(ಪಂಪರಾಮಾಯಣಂ, ೨-೫೨; ಸೂಕ್ತಿ, ೧೦-೨೨೦)

ಎಱಗದೆ ತನ್ನೊಳ್ ಮಧುಕರ
ನೆಱಗಿರೆ ಕೇದಗೆಯೊಳೆಯ್ದೆ ಕಂಬನಿಸಪಱಿತಯುಂ
ಕಱಿತವಂತಿರೆ ಕಱಿವೂಗಳ್
ನೆಱತ ಬೀತುವು ಸುರಗಿ ಹೊನ್ನೆ ಪಲ್ಲಿಗೆ ವನದೊಳ್ ೧೬೫
(ಜಗನ್ನಾಥವಿಜಯಂ, ೪-೫; ಸೂಕ್ತಿ, ೧೦-೨೦೭)

ಮನದನುರಾಗದಿಂ ನೆಗೆದು ನೀಡಿದ ಕಂಠಮನಲ್ದು ತುಪ್ಪುಱಿ
ರ್ಜನಿಮಿಷನಾದ ಕಣ್ ತೆಱತವ ಚಂಚು ವಿಜೃಂಭಿಸೆಱಂಕೆ ರಂಜಿಸಿ
ತ್ತೆನೆ ನಲಪೇಱು ತೋರವನಿ ಕಣ್ಣನಿ ಮುಂಬನಿಯೆಂಬ ಕಾರ್ಮುಗಿ
ಲ್ಪನಿಗಳನಲಂಪಿನಿಂದಮಿದಿರ್ಗೊಂಡು ಕರ್ದುಂಕಿದುದುದ್ಘಚಾತಕಂ ೧೬೬
(ಜಗನ್ನಾಥವಿಜಯಂ, ೪-೧೭ ಸೂಕ್ತಿ, ೧೦-೧೮೨;)

ನೆಗೆದುದು ಪೊರ್ದಿ ಸಾರ್ದುದನುರಿತ್ತು ತುಳುಂಕಿತು ಬೆಂಗೆ ನೀರಧಾ
ರೆಗಳನೆಱತ ನಾಂಟಲೀಂಟಿದುದು ನೇಹದಿನೋಡಿದುದಂಚೆ ಚಂಚುವಿಂ
ದುಗಿದುದು ಪಕ್ಕದಿಂ ಪೊಡೆದುವಂಘ್ರಿಗಳಿಂದೊಪೆಯಿತ್ತು ನೆತ್ತಿಯಂ
ನೆಗಪಿದುದಪ್ಪಿ ತಳ್ತೆಱುದುದಂಬುಕಣಂಗಳನೊಂದು ಚಾತಕಂ ೧೬೭

ತೀಡುವ ಪಶ್ಚಿಮಾನಿಳನ ತೀಟದಿನುತ್ಕಟಮಾಗೆ ರಾಗಮಿ
ರ್ಪೋಡಿದ ಚಂಚುಮಂ ತೆಱತಪೆಱಂಕೆ ನೆಱಲ್ಪಿರೆ ಕಂಠನಾಳಮಂ
ನೀಡಿ ವಿಯತ್ತಳಕ್ಕೊಗೆದು ಕಾರಮುಗಿಲ್ಪನಿಯಂ ಮನಂ ಕುಳಿರ್
ಕೋಡುವಿನಂ ಕರ್ದುಂಕಿ ನಲಿದಾಡಿದುದೋಡಿದುದೊಂದು ಚಾತಕಂ ೧೬೮
(ಪಂಪರಾಮಾಯಣಂ. ೭-೧೪೬; ಮಲ್ಲಿನಾಥಪುರಾಣಂ, ೮-೮೮; ಸೂಕ್ತಿ, ೧೦-೧೮೦)

ಇದಿರ್ಗೊಂಡಾಯ್ಮುಳಿಗೊಂಡು ಕೊರ್ಬಿದ ನವಾಂಭೋಬಿಂದುವಂ ನುಂಗಿ ಪೆ
ರ್ಚಿದಲಂಪಿಂ ಜಲಧಾರೆಯಂ ಕರ್ದುಕಿದತ್ತೆಯ್ತಂದು ಮುಂಡಾಡಿದ
ತ್ತೊಗೆದತ್ತೀಡಿಱಿದತ್ತು ಚಂಚುಪುಟದಿಂ ಪೊಯ್ದತ್ತು ಪಕ್ಷಾಗ್ರದಿಂ
ಬಿದಿರ್ದತ್ತೋಕುಳಿಯಾಡಿದತ್ತು ನಿಜತೃಷ್ಣಾಘಾತಕಂ ಚಾತಕಂ ೧೬೯

ಜಲಧರಮುಕ್ತನವ್ಯಜಳಬಿಂದುಗಳಂ ನೆನೆದಾಯ್ದು ನುಂಗಿ ಕ
ಣ್ಮಲರ್ಗಳೊಳೊತ್ತಿಕೊಂಡು ಕುಣಿದಾಡಿದುದುಜ್ವಲಮಪ್ಪ ಧಾರೆಯೊಳ್
ಗಿಲಿಗಿಲಿಗಂಭವಾಡಿದುದೆಱಂಕೆಗಳಂ ಕೆದಱುತ್ತೆ ಮುದ್ದಿನಿಂ
ಕೆಲಕೆ ಸಿರಾಕುಳಂ ತೆಗೆದುದಪ್ಪಿದುದೊಪ್ಪಿದುದೊಂದು ಚಾತಕಂ ೧೭೦

ನವನೀಳಾಂಭೋದವಂಭೋದದಿನೆಱಗುವ ಧಾರಾಳಿ ಧಾರಾಳಿಗಳ್ ಸೂ
ಸುವಿನಂ ತಳ್ಪೊಯ್ವ ಜಂಝಾನಿಳನನಿಳನಿನಾಮೋದಮುಂ ಪೇಱೆ ಪೂವೇ
ಱುವ ಕೇದಂ ಕುಂದದೊಳ್ ತಳ್ತಳಿಗಳಳಿಗಳಂ ಪಣ್ಗಳಿಂ ಗೆಲ್ದ ಜಂಬೂ
ನಿವಹಂ ಚೆಲ್ವಾಗೆ ಚೆಲ್ವಾದುದು ಚಟುಲತಟಿಜ್ಜಾಲಮಂಭೋದಕಾಲಂ ೧೭೧
(ಜಗನ್ನಾಥವಿಜಯಂ, ೪-೨೭; ಸೂಕ್ತಿ, ೧೦-೧೯೦)

ನೆರೆದ ಮುಗಿಲ್ ಕಲಂಕುವುದನೀಕ್ಷಿಸಿ ತನ್ನ ಮನಂ ಕಲಂಕಿ ಕ
ಗ್ಗೆರೆ ಮಱಮಂಬಿವಿಂಡನೊಳಕೊಂಡಿರುಳೊಳ್ ಮುಗಿದಿರ್ದ ಪಾಂಡುಪಂ
ಕರುಹದ ಭಂಗಿಯಂ ತಳೆದು ವಿಸ್ಮಿತಮಾನಸರಾಗಿ ಮಾನಸರ್
ಪರಿಕಿಸೆ ಮಾನಸಕ್ಕೆ ನಡೆಗೊಂಡುದು ಕೂಡೆ ಮರಾಳಮಂಡಲಂ ೧೭೨
(ಸೂಕ್ತಿಸುಧಾರ್ಣವಂ, ೧೦-೧೯೧)

ಮುಗಿಲಿದಿರೇಱೆ ಕಾದಲಲರೇಱೆ ಪೊಲಂ ಪಸುರೇಱೆ ಕಾಡಮ
ಲ್ಲಿಗೆ ನನೆಯೇಱೆ ಪೊಲ್ಲೆ ನಯಮೇಱೆ ಬಿಸಿಲ್ ಕಡುದಣ್ಣನೇಱೆ ಕೇ
ದಗೆ ಸುಱಿಯೇಱೆ ಹಂಸೆ ಭಯಮೇಱೆ ನವಿಲ್ ನಲವೇಱೆ ಕಾಮುಬಾ
ಹುಗೆ ಜಯಮೇಱಿದತ್ತು ವಿರಹಿಪ್ರಕರಕ್ಕಟಲೇಱಿತಿರ್ದಿನಂ ೧೭೩
(ಜಗನ್ನಾಥವಿಜಯಂ, ೪-೪; ಸೂಕ್ತಿ, ೧೦-೧೫೩)

ನಿಳಿಂಪದ ಪೂರಿನೊಳ್ ತರದೆ ಮುತ್ತಿನಪೂಸಕದಂತೆ ನಂದನಂ
ಗಳ ತರುಪತ್ರದೊಳ್ ಮುಕುಳಮಂಜರಿಯಂತೆ ಚರತ್ಪುರಾಂಗನಾ
ವಳಿಯ ಕುರುಳ್ಗಳೊಳ್ ತಳೆದ ಪೇಸೆಗಳಂತೆಳೆವಲ್ಲಗಳೊಳ್ ಘನೋ
ಪಳಕುಳದಂತೆ ತೋಱಿದುವು ನವಘನಚ್ಯುತ ತೋಯಬಿಂದುಗಳ್ ೧೭೪

ಮರಕತರುಚಿಯೊಳ್ ದೂರ್ವಾ
ಕುರಮುಂ ನಿಶ್ಚೈಸದಿರ್ದ ಮೃಗಶಿಶುಗೆ ನಗಾಂ
ತರದಲ್ಲಿ ಹರಿಣನಿತ್ತುದು
ಕರುಣಿಸಿ ಸ್ವಕ್ಷ್ವೆಂಪೊಳು ದೂರ್ವೆಯುಂ ಕಾರ್ಮೊಗದೊಳ್ ೧೭೫

ದರಿಗೊಂಡೀಡಿಱಿದಾಡುತುಂ ಕೊಣಕುತುಂ ಬಾರುತ್ತ ಮೆಲ್ಗೋಡೊಳಾ
ದರದಿಂ ಪೋದೆಳೆವುಲ್ಗಳಿಂ ತೊಱೆದೊಡಂ ಪಾಲ್ಗೆಚ್ಚಲಿಂಪೆಚ್ಚು ಪಾ
ಯ್ತುರಪಟ್ಟಿರ್ದುಮೆಬಿಲ್ವ ಕರ್ಣಪರಿಮುಚ್ಚಿರ್ದಕ್ಷಿ ತಳ್ವಿಪ್ಪುವು ಸುಯ್
ಸೊರೆಯಿಂದುಣ್ಮುವ ಸೃಕ್ವಮಂಪೆಸೆಯೆ ಮೆಲ್ಕೊತ್ತಿತ್ತು ಕಾಡೆಮ್ಮೆಗಳ್ ೧೭೬

ಅವಿಶಾಲಾಂಬರಮುಪ್ರಸನ್ನದಿಶಮುಸ್ಪಷ್ಟಾಧ್ವಮುಸ್ವಚ್ಛತೋ
ಯವನುದ್ಯೋಗಜನೌಘಮುಸ್ಮದನಮುಸ್ಮೇರಾಬ್ಜಮುಶ್ಲಕ್ಷ್ಣಕೈ
ರವಮುಕ್ರೀಡಿತಹಂಸಮುಸ್ಫುರಿತ ಚಂದ್ರಾದಿತ್ಯಮುಶ್ಲಿಷ್ಟಕೋ
ಕವಯೂನಾಧ್ವಗಮುಸ್ವರಾನ್ಯಭೃತಮುಂದೊಪ್ಪಿರ್ದುದಭ್ರಾಗಮಂ ೧೭೭

(ಜಗನ್ನಾಥವಿಜಯಂ, ೪-೨೬; ಸೂಕ್ತಿ, ೧೦-೨೧೧)

ಬಲ್ಸರಿ ಬಿಱುಸರಿ ಪೆರ್ಮೞೆ
ಮೆಲ್ಸರಿ ತುಂತುಱ್ ತುಷಾರಮಿಡುಕುಂಬನಿ ತಂ
ದಲ್ ಸೋನೆ ನಟ್ಟಬಡಪಮೆ
ಸಲ್ ಸುರಿದುವು ಬಿಡದೆ ಮೞೆಗಳಿರುಳುಂ ಪಗಲುಂ ೧೭೮

(ಜಗನ್ನಾಥವಿಜಯಂ, ೪-೩೨; ಸೂಕ್ತಿ, ೧೦-೧೯೮)

ಕೆಱೆ ಕಾಟ್ಪುರದಿಂ ತೀವಿರೆ
ಕೆಱೆಗಳ ಕಡೆಗೋಡಿ ಪಳ್ಳಮಂ ಪಳ್ಳಂಗಳ್
ತೊಱೆಯಂ ತೊಱೆಗಳ್ ಬಾಂದೊಱೆ
ಯೆಱೆಯನನೊಲವಿಂದೆ ಕೂಡಲಳ್ಕುಱೆ ಪಥಿಕರ್ ೧೭೯

(ಜಗನ್ನಾಥವಿಜಯಂ, ೪-೩೩; ಸೂಕ್ತಿ, ೧೦-೨೨೩)

ಆ ಮಿಂಚಿನೊಳಗಿನಲ
ಷ್ಠಾವಮಾಂಬುದಸಿಕರದಿಂದೆ ರಸೆ ಜೆಸೆ ಗಗನಂ
ತಾನಱಿಯುಲ್ಕಾರವಪ್ರೋ
ಲ್ಲೇನೆಸೆದುದೊ ತೊರೆದುದಿಳೆಯ ಹರ್ಷಂ ವರ್ಷಂ ೧೮೦

ಮಿಗೆ ಕಾರರಸಂ ಪಗೆ ಬೇ
ಸಗೆಯಂ ಸುರಧನುವಿನಿಂದೆ ಮುಗಿಲಂಬುಗಳಿಂ
ತೆಗೆದೆಸೆಯಲ್ ಬಹುಸರಳವ
ಸಿಗೆ ಬೀೞ್ವಂತಿರ್ದುದಂಬುಧಾರಾಸಿಕರಂ ೧೮೧

ಜೆಂಗೆಟ್ಟೋಡುವ ಬೇಸಗೆ
ಯುಂ ಘರ್ಜಿಸುವಭ್ರಸಮುಯನ್ನೃಪಘನಮುದವಾ
ತಂಗಾಕುಲದಾನಧಾರಾ
ಭಂಗಿಯುಸೊಡರಿಸಿತು ಕಟ್ಟಿ ಕಱೆವಾಸಾರಂ ೧೮೨

ಗಗನದಿನೆೞೆಗುವ ಮುಱಿ ನೀ
ನಗಲದೆ ಸಲಹೆಂದು ವರುಷನರಪಂಗಿಳೆಯುಂ
ಮುಗಿಲಗಲದ ಹಸ್ತದಿನಾ
ಗಗನಾಂಗನೆ ಧಾರೆಂಪಿಱದ ತೆಱನಾಯ್ತಾಗಳ್ ೧೮೩

ಧಾರೆಗಳವನಿಯನೊಳಪೊ
ಕ್ಕೋರಂತುಜ್ಜ್ವಳಿಸಿ ಬೀಱುತಿರೆ ಸಭದೊಳ್ ಭೋ
ರ್ಭೋರ್ರೆನುತಿರುಳುಂ ಪಗಲುಂ
ಜೋಱೆನುತಂ ತೆಱಪುಗುಡದೆ ಕಱೆದುವು ಮುಱಿಗಳ್ ೧೮೪

ಒತ್ತರಿಸುತ್ತಂಬರಮಂ
ಮುತ್ತುತ್ತುಂ ದಿಕ್ಪ್ರಾತನಮುಂ ಧರಣಿಯ ತೀ
ವೃತ್ತುಂ ಕತ್ತಲಿಸುತ್ತಂ
ಸುತ್ತಂ ಜಿನುಗಿದುವು ಸೋನೆಯಿರುಳುಂ ಪಗಲುಂ ೧೮೫

ಮೇಘಂಗಳ್ ಪರಿಗತದ ನಿ
ದಾಘಂಗಳ್ ಕಮಳವಿಮಳಜೀವನಭರಿತಾ
ಮೋಘಂಗಳ್ ಶಿಖಿನಿಕರ
ಶ್ಲಾಘಂಗಳ್ ಕಱೆದುವತುಳ ಶೀತಳಜಲಮಂ ೧೮೬

ನೋಡುತ್ತಿರೆ ಸಕಲಜನಂ
ಕೂಡುತ್ತಿರೆ ಚಾತಕಂಗಳಳೆ ಜಲದೊಳ್ ತೇಂ
ಕಾಡುತ್ತಿರೆ ಶಿಖಿಕುಲವೆ
ಬ್ಬಾಡುತ್ತಿರೆ ತುಱುಗಿ ಕಱೆದು ನೆಱೆದುವು ಮೇಘಂ ೧೮೭

ವೃಷ್ಟಿಗಳವು ಶಿಖಿಚಾತಕ
ತುಷ್ಟಿಗಳವು ಘನತಟಾಕವಿಮಳನದೀಸಂ
ಘಟ್ಟಿಗಳವು ಜೀವರ್ಕಳ
ವೃಷ್ಟಿಗಳವು ಬಿಡದೆ ಕಱೆದವನಸಿತಳದೊಳ್ ೧೮೮

ಸುರಿದುದು ಮುಗಿಲ್ ತಣಿಯಿತ್ತಿಳೆ
ನೆರೆದುದು ಬೆಳೆ ಕಾನನಂಗಳೊಳ್ ನೆಱೆ ವಿಸಟಂ
ಬರಿದುದು ಹೊಳೆ ನಾಡುದು ಶಿಲೆ
ಧರಿಣಿಯುನೆಡಬಿಡದೆ ಪಿಡಿದರಳೆ ಮುಗಿಲ್ಗಾಲಂ ೧೮೯

ಒದವಿದ ಕಾರೊಳದ್ರಿಗಳ ಜೇಗೆ[1] ತೆರಳ್ಚಿ[1]ದುದು[2] ದೇಡಹು[2]ಂಡನಾ
ದುದು ಬಿಸಿಲೆಱಿಗ್ಗ ಕಟ್ಟಿದುದು ಸಂಬಳನುಂ ಕಳಹಂಸಮಾಲೆ ಮೆ
ಟ್ಟಿದುದು ತುಡುಂಕಿ ಸೋಗೆ[3]ಮುಗಿಲ್[3]ಯೊಳ್ ಮಿಡುಕುತ್ತೆಳಮಿಂಚು ಕೆತ್ತಲೆ
ತ್ತಿದುದು ಪಯೋಧಾರಾವಳಿ ತ[4]ಳರ್ನಡೆ[4]ಯಿಟ್ಟುದು ಪಶ್ಚಿಮಾನಿಳಂ ೧೯೦

(ಅನಂತನಾಥಪುರಾಣಂ, ೯-೫; ಸೂಕ್ತಿ, ೧೦-೧೪೫)

ಮುತ್ತುದು ನೇಸಱ ತೇಜಂ
ಸತ್ತುದು ದಾವಾಗ್ನಿ ಪಡುವಣಿಸೆ ಮುಗಿಲ್ಮುಗಿಲಂ
ಪೊತ್ತುದು [5]ಕಡಲಿನ ಕಂಪಂ[5]
ಪೆತ್ತುದು ಮಧುಕರಕುಳಕ್ಕೆ ಪಶ್ಚಿಮಪವನಂ ೧೯೧

(ಸೂಕ್ತಿಸುಧಾರ್ಣವಂ, ೧೦-೧೪೮)

ಎಱ್ದುದು ತಣ್ಣೆಲರ್ ವರುಣದಿಜ್ಮುಖದಿಂದದಱಿಂದೆ ಕಿಟ್ಟದಿಂ
ಬಱ್ದುದು ತೃಷ್ಣೆಯಿಂದಿಱಿದ ಚಾತಕ ಚಾತಕಚಿತ್ರಮೆಕ್ಕೆಯಿಂ
ಬಿಱ್ದುದು ಬಟ್ಟೆ ಸಂಬಳಿಕೆ ಬಾಳಮೃಣಾಳಮನಂಜೆ [6]ತಣ್ಪೊಲ[6]ಂ
ಬೀಱ್ದುದು ಕೂಡೆ ಧಾತ್ರಿ ಮೃಗಶೀರ್ಷವಿಭಾಗಮನರ್ಕನಾಳ್ವುದುಂ ೧೯೨

(ಸೂಕ್ತಿಸುಧಾರ್ಣವಂ. ೧೦-೧೪೯)

ಸ್ಫುರಿತ ತಟಿತ್ಪ್ರಭಾಪ್ರತತಿ ಕತ್ತಲೆಯಂ ಸುರಗೋಪಕಾಂತಿ ಪಾಂ
ಡುರತೆಯನಂಬುವಾಹತತಿ ಶೋಷಣಮಂ ಘನವಾರಿಧಾರೆ ನಿ
ಷ್ಠುರಪರಿ[7]ಕಾಲ್ಪೆಯಂ[7] ಕುಟಜಕುಂದ ನವೋದ್ಗಮರಾಜಿ ರಾಗಮಂ
ವಿರಹಿಜನಕ್ಕೆ ಮಾಡಿದುದು ನೋಡುವೊಡೆಯ್ದೆ ವಿರುದ್ಧಮೆಂಬಿನಂ ೧೯೩

(ಕಾದಂಬರಿ ಉ.ಭಾ, ೫೩೪; ಸೂಕ್ತಿ, ೧೦-೧೯೫)

---

[1]ತಗುಳ್ಚ(ಸ) [2]ಬೆಡುವುಂ(ಸೂ) [3]ಮೊಳೆ(ಸೂ) [4]ಳಿರ್ದಡೆಯಿಂ(ಸ) [5]ಕದಲಿನತಂಪಂ (ಸೂ) [6]ತಣ್ಣೆಲರ್(ಸೂ) [7]ತೋದಮಂ(ಸೂ)

ಪಸುರ್ವುಲ್ಲಂ ಮೇದು ಪಂಪೊಂಪಡೆಯೊಳನೊಡಲಿಂಬಿಲ್ಲೆನಲ್ ಕೊರ್ವಿ ಕೆಚ್ಚಲ್
ಕುಸಿವನ್ನಂ ಬೀಗಿ ಪಾಲಂಬಿರಿವಿಡೆ ಮೊಲೆಯಿಂ ವತ್ಸಪಿತಾವಶೇಷಂ
ಪೊಸಗಾರೊಳ್ ತಾಣಲೊಳ್ ಕಣ್ಮಲರ್ ಮುಗುಳ್ದಿರೆ ಸೃಕ್ವಂಗಳಿಂ ಸೂಸೆ ಫೇನ
ಪ್ರಸರಂ ಮೆಲ್ಲೊಕ್ಕತ್ತುಂ ನಿಂದುದು ವನಮಹಿಷೀವೃಂದಮಾನಂದದಿಂದಂ ೧೯೪
(ಪಂಪರಾಮಾಯಣಂ, ೭-೫೭; ಮಲ್ಲಿನಾಥಪುರಾಣಂ, ೮ ೯೯: ಸೂಕ್ತಿ ೧೦-೧೯೬)

ತಿರುವಿಲ್ಲದ ಸುರಧನುವಂ
ಸುರಭಿಶರಂ ಗೆಲ್ದು ಮತ್ತೆ ಕೂರಂಬುಗಳಿಂ
ಬರಹಿಗಳೆಸೆಂದು ರತಿಪತಿ
ನಿರುಕಿಸಿದಂತಿರ್ದುವೆಬ್ಬಿ ಕಳ್ಳನ ಕೊಡೆಗಳ್ ೧೯೫
(ಸೂಕ್ತಿ ಸುಧಾರ್ಣವಂ, ೧೦-೨೦೪)

ಬಡಪಂ ಜಿಂಬಳ್ತೆ ಮೇಸಂ ತೊೞೆದು ಬಿಡಮೊಡಲ್ ಕೂಡಿ ತನ್ನಿಚ್ಚೆಗೆಟ್ಟೊ
ಕ್ಕೊಡೆಯೊಳ್ ಬೆಚ್ಚಂತೆ ಜಾಲಂ ಸಿಲೆ ನವಿರೊಡೆದುರ್ವೆಬ್ಬಿ ಜೆಂಡಾಗಿ ಕಾಲೊಳ್
ನಡುಕಂ ಮೆಯ್ವೆರ್ಚೆ ಗಂಟಲ್ ಕುಸಿದು ಕಿವಿಯೆಱಲ್ದಂದು ನಿಂದಿರ್ದುದೋರೊಂ
ಪೆಡೆಯೊಳ್ ನಾನಲ್ಗಿಯೊತ್ತಂಬಿಡಿದು ಮೃಗಮೃಗೀವೃಂದಮೋರಂದದಿಂದಂ ೧೯೬
(ಚಂದ್ರಪ್ರಭಪುರಾಣಂ. ೪-೪೭; ಸೂಕ್ತಿ, ೧೦-೨೦೮)

ಹೆಱವುಗೊಳಿಸಿತ್ತು ಜನಮಂ
ಮೞೆಗಾಲಂ ತೀವ್ರಪವನನಿಂ ದುರ್ದಿನದಿಂ
ಮೊೞಗಿಂ ಸಿಡಿಲಿಂ ಮಿಂಚಿಂ
ಮೞೆಯಿಂ ಪೆಸೆಪೆಸೆಗೆ ಪರಿವ ಪೊನಲಿಂ ಕೆಸಱಿಂ ೧೯೭

ಅನಸಿದಿರೇೞ್ದ ಕಾರ್ಮುಗಿಲ ಬಾಧೆಗೆ ಬೀೞ್ದನೊ ತತ್ತ್ವ ಒಳ್ಳಿಮಿಂ
ಚಿನ ಬಲೆಯಲ್ಲಿ ಸಿಲ್ಕಿದನೊ ಪೊಯ್ವ ಸಿಡಿಲ್ಗೊಳಗಾಗಿ ನೊಂದನೋ
ಘನಜಲಧಾರೆಯೊಳ್ ಕರಗಿಪೋದನೊ ತನ್ನನೆ ಕಾಣನೆಂದು ಪ
ದ್ಮಿನಿ ನಲವೋಡಿ ತನ್ನ ಮಧುಕರದ್ವನಿಯಿಂದೆ ಪಲುಂಬಿ ಪಾಡಿದಳ್ ೧೯೮
(ಸೂಕ್ತಿಸುಧಾರ್ಣವಂ, ೧೦-೨೧೦)

ಕೆಸಱೊಳ್ ಜಾಱುವ ಜಾಱಿ ಬೀೞ್ವ ಮುೞಿಯೊಳ್ ಮೆಯ್ನಾಂಬ ನಾಂಪೊತ್ತುತಂ
ಬಿಸಿಯುತ್ತಿರ್ಪ ಜನಂಗಳಂ ಸುರತಲೀಲಾಗೇಹನಿಪ್ರಾಂತದು
ದ್ದೇಸದೊಳ್ ತಪ್ಪಿಸಿ ಸಂತಪಿರ್ದನಿಮಿರೋರೊವಾಗೆ ಕಣ್ಣೆತ್ತಿ ತೋ
ಱಿ ಪರೀಸಂಗತಹಾಸ್ಯದಿಂ ನಲಿಸಿ ರಮ್ಯಂ ತಪ್ಪಿಯೋದಾಗಮುಂ ೧೯೯
(ಸೂಕ್ತಿಸುಧಾರ್ಣವಂ, ೧೦-೨೧೨)

ಜಂಭಾರಿಯ ಮೇಘದೊಳಂ
ಕುಂಭಿಸಿಯುಂ ಸಲಹಲೆಂದು ಗಗನದಿಸಿಱಿಯಲ್
ಕುಂಭೀನಸಗಳ ಬಿಟ್ಟೊಲ್
ಕುಂಭದ್ರೋಣಂಗಳಾಗಿ ಸುರಿದುವು ಮೞೆಗಳ್ ೨೦೦

ನೆಗೆದು ಮುಗಿಲೆಂಬ ನೀಲಾ
ದ್ರಿಗಳಂ ನಿರ್ಝರಮೆ ಸೂಸಿ ಸುರಿದಪ್ಪುದೆಂಬ
ನ್ನೆಗಮಂತರಿದುವು ಪೆರ್ಮೞೆ
ಜಗಮೆಲ್ಲಂ ಸಲಿಲಪೂರದಿಂ ತೇಂಕುವಿನಂ ೨೦೧

ವಿಕಚಾಂಭೋರುಹಷಂಡಮುನ್ಮದಮರಾಳಾನೀಕಮುತ್ಫುಲ್ಲ ಚಂ
ಪಕಮಾಕಂದಮಹೀಜಮುಜ್ಜ್ವಳನಿಯುದ್ರಂಗಂ ಸ್ಫುಟತ್ಕೋಕಿಳ
ಪ್ರಕಟಾರಾವಪರಂಪರಾಪರಿಗತಾಶಾಕುಂಜಮುತ್ಕ್ಷೀಬಕೇ
ಕಿಕದಂಬಂ ಜಗತೀಜನಕ್ಕೆ ಪಡೆದತ್ತಭ್ರಾಗಮಂ ರಾಗಮಂ ೨೦೨

(ಕಾವ್ಯಾವಲೋಕನಂ, ೪೭೨)

ಸರಿದ ಕಚಂ ಮುಗಿಲ್ ಕರತಳಾಹತಿಯಿಂ ಪಱಿಯೊಕ್ಕ ಮೌಕ್ತಿಕಾ
ಭರಣದ ಮುಕ್ತಮಾಲಿಕರಲಾ ಸುಗಳಧ್ವನಿ ಮೇಘನಿಸ್ವನಂ
ಸುರಿವ ಬೆಮರ್ ತಗುಳ್ದ ಮೞೆ ಕಾಮರಸಂ ಪೊನಲಾಗೆ ಕಾದಲರ್
ನೆರೆದೆಡೆಯೊಳ್ ಮನೋಭವನ ಸೃಷ್ಟಿವೊಲಾದುದದೊಂದು ಕಾರ್ಪೊಗಂ ೨೦೩

(ಸೂಕ್ತಿಸುಧಾರ್ಣವಂ, ೧೦-೨೧೩)

ಬಂದಪೆನೆಂದು ಪೋದನಿನಿಯಂ ಜಲದಾಗಮನಕ್ಕೆ ಕಾರ್ಮುಗಿಲ್
ಬಂದುದು ಶಕ್ರಚಾಪಲತೆ ಬಂದುದು ಕೆಂಕಿನ ಸೋಗೆಯಿಂಚರಂ
ಬಂದುದು ಜೆಲ್ವುವೆತ್ತು ನಭದೊಳ್ ಪೊಳೆದೊಪ್ಪುವ ಬಳ್ಳಿಮಿಂಚು ತಾಂ
ಬಂದುದು ಬಂದನಿಲ್ಲ ಪತಿಯೆಂದು ಲತಾಂಗಿ ಪಲುಂಬಿ ಪಾಡಿದಳ್ ೨೦೪

(ಸೂಕ್ತಿಸುಧಾರ್ಣವಂ, ೧೦-೨೧೪)

ಎಳೆವುಲ್ ನೀರ್ವರ್ ನವಿರಾಲಿ ಲೋಲನಯನಂ ಗೀರ್ವಾಣಬಾಣಾಸನಂ
ನಳಿತೋಳಾಡುವ ಸೋಗೆ ಸೋರ್ಮುಡಿ ಪೊನಲ್ ರೋಮಾಳಿ ಮಿಂಚೋಲೆ ಪಲ್
ಜಕವಂ ಪೆರ್ಮೊಲೆ ಶಕ್ರಚಾಪವದನಂ ತಾನಾಗೆ ಕಾರೆಂಬನ
ಪ್ಪೆಳೆ ಬಪ್ಪಂತತಿಕಾಮುಕರ್ಗೆ ಮನಸೊಳ್ ಮಾಡಿತ್ತತಿಪ್ರೀತಿಯಂ ೨೦೫

ವಿಲಸಿತ ಕಂದಳಂ ವಿಸಿಪತತ್ಸ್ಮರಕಂ ಕ್ಷುಭಿತೋರುವಾಹಿನೀ
ಕುಳಸಿಸವಂ ಗಳತ್ ಸರಸಮುಗ್ರಮುದಗ್ರಸಪರ್ವಚಾಪಮುಂ
ಡಳಲಲಿತಾಂಬರಂ ವಿಹರಿತತ್ರಿ ಸಮುತ್ಕರದಂಡಗುರ್ವದೇಂ
ತಳೆದುಮೊ ಪ್ರೋಲ್ತು ಯುದ್ಧಸಮಯಾಂತರಮುಂ ಜಲದಾಗಮಕ್ರಮಂ (?) ೨೦೬

ವಿದಳಿತಮಾದ ಕಂಟಕಕದಂಬದಿನುರ್ವಿದ ವಾಹಿನೀಸಮೂ
ಹದಿನಭಿವೃದ್ಧಿವೆತ್ತ ಭುವನಾಶ್ರಯದಿಂ ಬಗೆಗೊಳ್ವ ಕುಂದದ
ಭ್ಯುದಯದಿನೇಟಿಕ್ಕೆಗೆಟ್ಟಳಿಱಿಪೋದ ಮಹೋದ್ಧತ ರಾಜಹಂಸತೇ
ಜದಿನೆಸೆದತ್ತು ರಾಜವಿಭವಂ ಜಳದಾಗಮ ಚಕ್ರವರ್ತಿಯಾ

ತೊರೆದಾಕಾಶಾಂಬರಂ ನೀರ್ವನಿ ಜಡೆಮುಱುಗಲ್ ಮುತ್ತದಂತಾಲಿಕಲ್ಲಾ
ಗಿರೆ ನೀಲಂ ಮೇಘವೇಷಂ ಸೋಱಿಗು ಡಮರುಗಂ ಮಿಂಚು ಚಂಚತ್ತ್ರಿಶೂಲಂ
ಸ್ಫುರಿತಂ ಕಣ್ಗೊಪ್ಪಿ ತೋರ್ಪಿರ್ವ ಸುರಧನು ಕಟಿಯಿಂ ಕಟ್ಟಿದಾ ವ್ಯಾಘ್ರಚರ್ಮಂ
ಬರ ತಾಂ ಕಾಲೂರಿ ನಿಂದಂ ಮಱಿತಯೆನಿಪಭವಂ ಧಾತ್ರಿಯಾಧಾರದಿಂದಂ ೨೦೮

ತನೆ ಮುಂ ತೀರ್ದ ಸಿದಾಘಪಲ್ಲಕಿಯನಾದಿತ್ಯೇಂದು ಪಿಂಡಂಗಳಂ
ಕವಳಂಗೊಂಡು ಸಿಡಿಲ್ಗಳೆಂಬ ಕಿಸುಗಣ್ ಬಿಟ್ಟಾಸುರಚ್ಚಾಪಮೆಂ
ಬ ವಿಚಿತ್ರಾಂಬರಮೆಂಬ ಚಿನ್ನವಿಳಿಯುಂ ಮಿಂಚೆಂಬ ಕೊಂಬಿಂ ಕರಾ
ಳಮೆನಲ್ ಘರ್ಜಿಸಿವತ್ತಗಲ್ದಿನಿಮಸಂ ಕಾರೆಂಬ ಮಾರದ್ವಿಪಂ ೨೦೯

ಉಗುಱುತ್ತುಂ ಸಿಡಿಲೆಂಬ ತೋರಗಿಡಿಯುಂ ಕಾಲೂಱೆ ಭೂಭಾಗದೊಳ್
ಗಗನಾಭೋಗಮನೆಯ್ದೆ ನೀಳ್ದ ಘನವೇಣೀಬಂಧಸಂಗೆಯ್ದು ಮಿಂ
ಚುಗಳೆಂಬುಳ್ಕುಪ ದಾಡೆಗಳ್ ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇ
ಸಗೆಯುಂ ಬೆರ್ಚಿಸಿ ಘರ್ಜಿಸುತ್ತಮೊಗೆದಂ ಕಾರೆಂಬ ಕಾಳಾಸುರಂ ೨೧೦

(ಪಂಪರಾಮಾಯಣಂ,೭-೧೫: ಮಲ್ಲಿನಾಥಪುರಾಣಂ, ೮-೯೪:ಸೂಕ್ತಿ, ೧೦-೧೮೮)

ಎಳಮಿಂಚಂ ತಳೆಯುಕ್ಕಿ ಚಾದಗೆಗಳಂ ಬಿಟ್ಟೋಡಿ ಬಳ್ಗೆಚ್ಚಲಿ
ಟ್ಟಳಿಸೀಕಾಂಬುದದಿಂ ಬಱಿಲ್ವಗಗನಶ್ರೀಧೇನುವಂ ಕೋಮಳಾ
ಮಳದೀರ್ಘಾಮೃತಧಾರೆಗಳ್ ಸುರಿಯೆ ಘೋರ್ ಘೋರೆಂಬಿನಂ ಶಕ್ರಚಾ
ಪಲತಾದಾಮಕದಿಂದೆ ಕಟ್ಟಿ ಕಱೆದಂ ಕಾರೆಂಬ ಗೋಪಾಲಕಂ ೨೧೧

(ಸೂಕ್ತಿಸುಧಾರ್ಣವಂ, ೧೦-೧೮೯)

ಸೂಡಿದ ಕೇತಕಂ ಪಱಿಯು ನೆಲ್ಲಿನ ಭೋಜನ ಪಟ್ಟುವಸ್ತ್ರ ಕಂ
ಪೂಡಿದಗಿಲ್ ಕದಂಬ ಬಿಸಿನೀರಿನ ಪಾನಕಮುಂ ಗವಾಕ್ಷಿಯೊಳ್
ಬೀಡು ಕುಮಜ್ಜಸಂ ಮಿಗಿಲು ಧೂಪ ಮಯೂರನ ನಾಟ್ಯವೀಕ್ಷಣಂ
ಕೂಡುವ ಮುಗ್ಧ ತಿಂಗಳೊಳು ಭೋಗಿಗಳಿರ್ಪರು ವರ್ಷಕಾಲದೊಳ್ ೨೧೨

## ಶರದೃತು ವರ್ಣನೆ :

ತೊಲಗದ ಮೋಡವೋಡಿದುದು ತಂಪಲಗುಂಪಲೆಯಾಯ್ತು ಮೇಘಮಂ
ಪಳಮಳಿಱುತ್ತು ಮಿಂಚುಮೆಳಗುಂ ಚಿರಮಾಯ್ತು ಶಿಖಂಡಿ ತಾಂಡವ
ಕ್ಕಲಸಿದುವೆಯ್ದೆ ಕುಂದಲತೆ ಕುಂದಲೊಡರ್ಚಿದುವಂಚೆ ಚಂಚುವಿಂ
ನಲಿದು ಮೃಣಾಳಮಂ ಸವಿದುದಾಯ್ತು ಶರತ್ಪ್ರವೇಶದೊಳ್ ೨೧೩

ಚಾದಗೆಯು ಸೊರ್ಕು ತೀರ್ದುದು
ಕೇದಗೆಯುಗೆಯೆತ್ತಿ ಪೋಯ್ತು ಗಿರಿಮಲ್ಲಿಗೆಯಾ
ಮೋದಂ ಕಱಿದುದು ದರ್ಬಿಸಿ
ಪೋದುದು ಸುಣ್ದನಿ ನವಿಲ್ಗೆ ಶರದಾಗಮದೊಳ್ ೨೧೪
(ಸೂಕ್ತಿಸುಧಾರ್ಣವಂ, ೧೦–೨೨೬)

ಮಱಿಯಿನ್ನೇತ್ರಣಪೆಂಬಿನಂ ಬೆಳಗುಗುಂ ಬಾನೊರ್ಮೆ ಮತ್ತೊರ್ಮೆ ಪೆ
ರ್ಮಱಿ ಕೊಳ್ಗುಂ ರವಿಕೂಡೆ ಮಾಣ್ದ ಮುಗಿಲಿಂ ಸೆಕ್ಕಂಡದಿಂದಂ ಬಿಸಿಲ್
ಕಳಿಗೊಳ್ಗುಂ ಗಿಳಿ ಸೋವ ಪಾಮರಿಯರಂ ಕೈಮೀಱಿ ಕೀರವ್ರಜಂ
ಸುಱಿಗುಂ ಶಾಡ್ವಳಮಾದ ಶಾಳಿವನದೊಳ್ ನೀರಾಜನಂ ಮಾಳ್ಪವೋಲ್ ೨೧೫

ನಱೆದುದು ಬಿಟ್ಟಿ ಒಟ್ಟಿಯ ಕೆಸಱ್ ಪಱಿದಿರ್ದುದು ನಂದನಂ ನಯಂ
ಒಡೆದುದು ಪೂಗೊಳಂ ತಿಳಿದುದಭ್ರಪಥಂ ಬೆಳಗಿತ್ತು ಪಕ್ಕಮು
ರ್ಕುಡಿದುದು ಕೂಡೆ ಕೊಂಜೆ ಸಸಿಯೋದುವು ಕೆಯ್ ಪಸುಪ್ಪೋವ ಪುಲ್ಗಳಿಂ
ಬಿಡಿದುವು ಶಾಳಿಗಾಪಿಯರ ಗಾವರಮುಬ್ಬರಮಾಯ್ತು ಸುತ್ತಲುಂ ೨೧೬

ಇಳೆ ಬೆಳಗಿತ್ತು ವಾಗಸಮುದಚ್ಛತೆಯಿಂ ತೊಳಗಿತ್ತು ದಿಕ್ಚಯಂ
ಕಳಕಳಿಸಿತ್ತು ಹಂಸೆ ಸುಱಿದತ್ತು ಜಱಿ ತುಂಬಿದ ತನ್ನದೀಜಲಂ
ಕೆಳಗಿಱಿದತ್ತು ತಣ್ಗೊಳರಸಂ ತಿಳಿದತ್ತು ಜನಾನುರಾಗದಾ
ಕೊಱೆ ಬೆಳೆದತ್ತು ನೋಡೆ ಶರದುನ್ನತಿಯೆಂದೊಡೆ ಚೆನ್ನದಾವುದೋ ೨೧೭

ಜನವನುರಾಗನೇಱಿ ಪೊಱಿನುಟ್ಟು ಕೃಷಿವ್ಯವಸಾಯವೃಂದಮಂ
ಮಸಪೊಲವಿಂದೆ ಮಾಡುತಿದೆ ಕೋಟರದಿಂ ನೆಗೆತಂದು ಪಕ್ಕಿಗಳ್
ಕೊಸೆವಳಿಗೊಂಬಿನೊಳ್ ಬಿಸಿಲನಾಂತಿವೆ ಹಂಸಕುಳಂ ಬನಂಗಳಂ
ನಸುವಿಸಿ ಕೂಡೆ ಪೊಣ್ಮುತಿವೆ ಪಾರ್ವತಿ ನೋಡು ಶರದ್ವಿಲಾಸಮಂ ೨೧೮

ತರದಿಂ ನಲಿನಲಿದಾಡುವ
ಶರದದ ಮಕ್ಕಳವೊಲಂಚೆಗಳ್ ಮಾನಸದಿಂ
ಬರೆ ಮೆಱೆದು ಶರದದವನಿಪ
ನರಮನೆಯಂಗಣಮಿದೆನಿಸಿ ಬೆಳಗಿತು ಗಗನಂ ೨೧೯

ಪಿಂದೆ ತಲೆಕೆಡದ ಕದಿರ್ಗಳ್
ಸಂದಣಿಗೊಂಡರ್ಕಬಿಂಬದಿಂ ಪೊಱಪೊಣ್ಮು
ತ್ತೊಂದೊಂದನೊಱಸಿ ಕಿಡಿವಿಡು
ವಂದದೆ ಕಡುವಿಸಿಲ ಪೊಳೆಪುವಡೆದುದು ಕಾಯ್ಪಂ ೨೨೦
(ಲೀಲಾವತಿ, ೫–೩೮ ಸೂಕ್ತಿ ೧೦–೨೦೨)

ಮುನ್ನಂಗಿ ದಹನನಂ ತಪ
ನನ್ನೆಲಕುಗುಟ್ವಿಂತೆ ಬಿಸುಗದಿರ್ಗಳ್ ನೆಱೆ ಕಾ
ಯ್ವನ್ನಂ ಸುಡುತಿರೆ ಪಥಿಕರ್
ಬೆನ್ನಂ ಕೊಂಡೋಡಿ ಮೆಳೆಯ ನೆೞಲಂ ಸಾರ್ದರ್ ೨೨೧
(ಲೀಲಾವತಿ, ೫–೪೦; ಸೂಕ್ತಿ, ೧೦–೨೩೩)

ತಿಂಗಳ ಜವ್ವನ ವಿಭವಮ
ನಂಗನ ಸಿರಿಹುಟ್ಟಿದಮೃತವಾರಾಶಿ ಚಕೋ
ರಂಗಳ ಕಂಗಳ ಹಬ್ಬಂ
ಶೃಂಗಾರಂಬಡೆದ ಸ್ಕೈಪು ಶರದದ ಜೊನ್ನಂ ೨೨೨

ಮಿಗೆ ತಂಗದಿರಬೆಡಂಗಂ
ಸೊಗಸುವ ಲೋಕೈಕಮಿತ್ರಸಂಗದ ಮಿಸುಗಂ
ತಗದಿರ್ದ ಘನದ ಕೇಡಿಗೆ
ನಗುತಿರ್ಪುವು ಕುಮುದ ಕಮಲವಿರುಳುಂ ಪಗಲುಂ ೨೨೩

ಹಿಂದೆಮ್ಮನಟ್ಟಿದಂಬುದ
ಬಂದು ಮಹಾಜಲದೊಳಡಗೆ ಬಿಡೆನೆಂದಱಸುವ
ಚೆಂದವೆನಲಂಚೆ ಮಾನಸ
ದಿಂದಾಗಸವಡರ್ದು ಸಾರ್ವುವಾ ಸರಸಿಗಳಂ ೨೨೪

ಸ್ಮರಕರಿಯಾಡುವಾ ವಿಪಿನಮಂಗಜಬಾಲಮರಾಳನೊಪ್ಪುವಾ
ವರನದಿ ಕಾಮಕೀರನೆರಪಪ್ರತಿಶಾಲಿಯನಂಗಕೋಕನಾ
ಸರಸಿ ರತೀಶನ ಕೋಕಿಳನ ಕೂಗುಗಹೋ ನೆಲವೀವ ಸದ್ವನಂ
ಶರವನಿನೊಪ್ಪುವಾಯತಮಪೇಂ ಮಧುರಾಜನೊ ಚಂದ್ರಶೇಖರಾ ೨೨೫

ಸ್ಥಿರಶರತ್ಕಾಲರಜಕಂ
ಮರುಷವೆ ಮಾಸಿರ್ದ ಮೇಘಪಟಮಂ ಬಾಂದೊಱೆ
ಯುರುಜಲದೊಳೊರಸಿ ತೊಳೆಯಲ್
ವರಸಿತಮಾದಂತೆ ಬೆಳ್ಮುಗಿಲ್ಗಳ್ ಮೆಱೆಗುಂ ೨೨೬

ನೋಡೆ ಮಹಾಬಿಲದೊಳ್ ತಿರು
ಗಾಡುವ ಘನಸರ್ಪರಾಜಿ ಪೊರೆಯುರ್ಚುವವೊಲ್
ಕೂಡೆ ಕಂಗೆಡ್ಡಮಾದುವೊ
ಸೀಡೊಡೆಯುದೆ ಬೆಳ್ಮುಗಿಲ್ಗಳಂಬರತಳದೊಳ್ ೨೨೭

ಉಂಡ ವಿಷಂಗಳೊಲ್ದುಗುಟಿಲಾ ವನ ಶುಭ್ರಮೆ ತೋಱುತ್ತೋ ಲಸ
ಚ್ಚಂಡಕರಸ್ಥಪಾದರಜವಾವರಿಸುತ್ತಿರೆ ಗಾಳಿಗೊಡ್ಡಲಾ
ಪಾಂಡುರಮಾಯ್ತೊ ನಾಡೆ ಶರಧೀಶ್ವರ ನಿಟ್ಟಿಸೆ ಪೂರ್ವಕರ್ಮಲಂ
ಖಂಡಿಸಿ ನಿಂದ ಪುಣ್ಯದಿರವೋಯೆನೆ ತೋಱುದುದಭ್ರದಾ ಸಿತಂ ೨೨೮

ಮುೞಿಗಾಲದಲ್ಲಿ ವಿಷಮಂ
ಜಲಧರತತಿ ಕಱೆಯೆ ಕೇಳ್ದು ಶರದದ ಮುಗಿಲ್ಗಳ್
ಇಳೆಗೆ ಕೇಡಾಗದಂದದೆ
ಗಱುಲನೆ ಸುಧೆಗಱೆವ ತೆಱದೆ ಬೆಳ್ಸರಿ ಸುರಿಗುಂ ೨೨೯

ರವಿಕಿರಣಂ ನೀರೂಡ್ಡು
ತ್ತಿಪೆ ತಣ್ಪಂ ಬೀಱುತಿಪೆ ರಥಾಂಗಕುಲಂಗಳ್
ತವೆ ತಣ್ಬಿಸಿಲೊಳ್ ನಿಂದಿ
ರ್ದಿಪೆ ಮೇಘಂ ಹಿಂಡಿ ಹರಹಿದಂತಿಪೆ ನಭದೊಳ್ ೨೩೦

ಪರಿವವು ಪಯೋಧರಂಗಳ್
ಬರುತಿವೆ ಕಳಹಂಸಮಾಲೆ ಬಿಸಿಲೊಳ್ ವಿಹಗಂ
ನೆರೆದಿವೆ ಮೃಗಸಂತತಿ ಗ
ಹ್ವರದಿಂ ಪೊಱಮಟ್ಟು ಪೋಪುತಿವೆಯೆಳವುಲ್ಲಿಂ ೨೩೧

ತಿಳಿದುವು ದೆಸೆಗಳ್ ಹಂಸಾ
ವಳಿ ಸಾರ್ದುವು ಪೂರ್ಣಸರಸಿಯಂ ಬಿಸಕಂದಂ
ಮೊಳೆಯೋದುವು ಸಲಿಲಂ ನಿ
ರ್ಮಳವಾದುವು ತಳಿದುದಾಗಸಂ ಧವಳತೆಯಂ ೨೩೨

ತುಱುಗಿರ್ದ ನೀಲಮೇಘದ
ತಱುಗಲ್ ಸೆಱೆ ಪೊಂಗಿ ಪೋಗೆ ತೆಱಪಾದುದಱಿಂ
ಬೆಱಗಿದಳಿಪಟಲ ಪೋಗಲ್
ತೆಱಪಾದುತ್ಪಲವನಂಬೊಲಿರ್ದುದು ಗಗನಂ ೨೩೩

ಲವಣಾರ್ಣವಮುಂ ದುಗ್ಧಾ
ರ್ಣವದೊಳ್ ತೆಱೆಮಾಲೆ ಮುಸುಕಿದಂ
. . . . ಯೆನಿಪ ಘನಧ್ವಾ
ನಮನಡರ್ದುವು ಶರದಮುಗಿಲ್ಗಳತಿಧವಳಂಗಳ್ ೨೩೪

ರವಿಹಯಲಾಲಾಪಿಂಡಂ
ದಿವಿಜನದೀಫೇನಮಾಲೆ ರಾಹುವ ಸಿರ್ವೋ
ಕವಿದೆಂಬಿನಮಲ್ಲಲ್ಲಿಗೆ
ಧವಳಾಂಬುದಪಟಲಮೆಸೆದುದಂಬರತಳದೊಳ್ ೨೩೫

ದರಿಯಂ ಮೀಱಿರ್ದ ನೀರೊಳ್ ತಿಳಿತೆಱೆ ತೊಱೆಗೆಲ್ಲಂ ಪುಟಿಲ್ವಜ್ಜೆ ಮೆಯ್ದೋ
ಱುರೆ ಶೈವಾಳಂ ಶಿಲಾಕೋಟಿಯೊಳೆಸೆಯೆ ಶರತ್ತಾಪಸಂಪತ್ತಿಯಿಂದಂ
ತರುಗಳ್ ನೀರ್ಪೊಕ್ಕವೊಲ್ ತೀರದ ತರುಪಟಲಚ್ಛಾಯೆ ನೀರೊಳ್ ಬೆಡಂಗಾ
ಗಿರೆ ತತ್ಪ್ರವಾಸಚಿತ್ರಕ್ಕೆಣೆಯೆನೆ ತಿಳಿದತ್ತಂದು ಸಿಂಧುಪ್ರತಾನಂ ೨೩೬

ಮಾನಸದಿಂ ಸಿತಾಂಬುಜಚಯಕ್ಕೆಳರ್ದಂತೆವೊಲೆಯ್ದೆ ನೀರದ
ಸ್ಥಾನದೊಳಿರ್ದ ಬೆಳ್ಮುಗಿಲಮಕ್ಕಳ ತಂಡದವೊಲ್ ನಿಜಪಾಂಡುದೇಹಸಂ
ತಾನಕದಭ್ರದೊಳ್ ಮಿಱುಗೆ ಬಂದೆಱಗಿತ್ತು ಕೊಳಂಗಳೊಳ್ ತಟೀ
ಫೇನಸಿತಾಸನಾತ್ತರುಚಿಯೊಳ್ ತೊಡವಾಗೆ ಮರಾಳಮಂಡಲಂ ೨೩೭

ಪಿಂಗಳವಾದ ನೆಲ್ಲತೆನೆಯಂ ಸಲಿಗರ್ಚಿದ ರಕ್ತಚಂಚು ಪ
ಕ್ಷಂಗಳ ಶಾಡ್ವಲಚ್ಛವಿ ಮನಂಗೊಳೆ ಪಾಱುವ ಕೀರ್ಣಮಾಲೆ ರೋ
ದೋಂಗಣವೆಂಬ ಪಟ್ಟಣದೊಳೊಪ್ಪುವ ಜೆಳ್ಮುಗಿಲೆಂಬ ಬಳ್ಳಿಮಾ
ಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ ೨೩೮

ವಾರಿಧಿಯೊಳುಳ್ಳ ನೀರಂ
ಕಾರಮುಗಿಲ್ ಕಱಿದು ಪೋಗಲುೞಿದಾ ಮುತ್ತಂ
ಶಾರದ ಮೇಘಾವಳಿ ತಂ
ದೋರಂತಿರೆ ಕಱಿದುದೆನಿಸಿದುವು ಜೆಳ್ಸರಿಗಳ್ ೨೩೯

ನೀರಧಿಯ ನೀರ್ಗೆ ದೋಷಾ
ಕಾರದ ಮುಗಿಲ್ ಮರಳೆಸೆಂದು ಶರದಭ್ರಂಗಳ್
ಸಾರಿರ್ದ ಗಗನಗಂಗೆಯ
ನೀರಂ ಕಱಿಸಂತಿರೆಜಿಗಿದುವು ಜೆಳ್ಸರಿಗಳ್ ೨೪೦

ಶರದಭ್ರಕುಸುಮತರುಗಳ್
ಮರುದಾಹತಿಯಿಂ ಪರಾಗಪಾಂಸುಪ್ರಸರಂ
ಬೆರಸಲರಂ ಸುರಿದಪವೆನೆ
ಸುರಿವ ಬಿಸಿಲ್ಮಱಿಗಳೆಸೆವುತಿರ್ದುವು ನಭದೊಳ್ ೨೪೧

ಮದಜಳೆಯಾಗಿ ನೀರ್ಮೊಗೆವ ಖೇಚರಕಾಂತೆಯ ಹಸ್ತದಿಂ ಕಱಿ
ಲ್ಜಿದ ನವರೌಪ್ಯಕುಂಭಮೆ ತರಂಗಿತಮಾಗಿ ತರಂಗಿಣೀಪ್ರವಾ
ಹದೊಳದೆ ಕಾಣಲಾದಪುದೆನಲ್ ನಿಱಿಗೊಂಡ ಶರದ್ಘನಾಳಿಯಿಂ
ಪುದಿದನಿಲಾಧ್ವದೊಳ್ ಪೊಳೆಯುತಿರ್ದುದು ಚಂಡಮರೀಚಿಮಂಡಲಂ ೨೪೨

ಪಾಲ್ಗಡಲೊಳುದಿಸಿ ಬಲ್ಲೆಂ
ಮೇಲ್ಗೆನೆಯಿಹಪಧಿಸಮುದ್ರನಂ ನೋಱಿಪ್ಪನೆನು
ತ್ತಲ್ಲುದಿಸಿದಿರವೊ ಪೇಱಿನೆ
ಸಲ್ಗೆಯ ಶರದಭ್ರದೆಡೆಯೊಳೆಸೆದಂ ಚಂದ್ರಂ ೨೪೩

ಶರದಭ್ರಮೆಂಬ ಬೆಳ್ದಾ
ವರೆಗಳ ಮಕರಂದರೇಣು ಪವನಾಹತಿಯಿಂ
ಪರೆದು ಪಸರಿಸಿದುದೆನೆ ಪಿಂ
ಜರರುಚಿ ರಂಜಿಸಿದುದಂದು ಕಂಜಪ್ರಿಯನಾ ೨೪೪

ರಾಜಿಸುತಿರ್ದಪಂದರುಣಪಂಕಜ ಪಾಂಡುಪಯೋಜ ನೀಲನೀ
ರೇಜ ಕದಂಬಕಂಗಳ ಪೊದಟ್ಟಿದ ಬಿತಬಂಬಲು ಮತ್ತಷಟ್ಪದೀ
ರಾಜಿಯು ವರ್ಣಸಂಕರತೆಯಿಂದೆ ಕೊಳಂಗಳನಂಗರಾಜನೀ
ರಾಜನಲೀಲೆಗೆಂದು ರತಿ ತೀವಿದ ಬಣ್ಣವ್ರರಂಗಳಂದದಿಂ ೨೪೫

ಅರಗಿಳಿಯ ಹಿಂಡು ಬಂದುಗೆ
ಯರಲಂದದ ಚಂಚುವಿಂದೆ ಕಟಿಪಿಯ ತೆನೆಯಂ
ಬರೆಕರ್ಚಿ ನೆಗೆದು ಪಾರ್ದುವು
ಶರದಂ ಪುಗೆ ಪಾಱುಪೋಪ ಸುರಚಾಪದವೊಲ್ ೨೪೬

(ಲೀಲಾವತಿ, ೫-೪೧)

ಸಾಲಿನ ಭೋಜನಂ ಮುಡಿದ ಪಡ್ಡಳಿ ತೀಡಿದ ಕುಂಕುಮೌಘ ಸ
ಲ್ಲೀಲೆಯ ಬಳ್ಳಿಮಾಡಪ್ರ ಹರಿದ್ರಸವಾಂಬರರತ್ನಭೂಷಣಂ
ಮೇಲಿಸಿದಪ್ಪ ಕರ್ಬುಜದ ಪಣ್ಣಿನ ಪಾನಕ ಕೇಳ್ವ ಗಾಣದಿಂ
ಲೋಲತೆವೆತ್ತು ಭೋಗಿಜನಮಿರ್ಕುಂ ಶರದೃತುವೊಳ್ ನಿರಂತರಂ ೨೪೭

## ಹೇಮಂತ ವರ್ಣನೆ :

ಅರೆವಸುರಾಯ್ತು ಹುಲ್ದೆನೆಯುಂ ನಿಂದವು ಕಾಯ್ ಪೊಡೆ ಕೊಯ್ಯಲಾಯ್ತು ಬಂ
ಧುರತರ ಶಾಳಿ ಸೀರಜಿಕೆ ತೊಟ್ಟನೆ ಮಾಣ್ದುದು ಚಂದನಕ್ಕೆ ಮೆ
ಯ್ಯರಸಿದುದಂಗಲೇಪ ಹೊಜಹಕ್ಕಿಗಳೋವರಿಯೊಕ್ಕವಾಸಗಂ
ಶರದದ ಮಾತು ಪಿಂಗಿದುದು ಪೊಕ್ಕುದು ಮಾಗಿ ಮಹೀವಿಭಾಗದೊಳ್ ೨೪೮

(ಸೂಕ್ತಿಸುಧಾರ್ಣವಂ, ೧೦-೨೩೭)

ಹಿಮಮುಸಲರ್ಚೆ ತೀಡೆ ಪವನಂ ವನಮಾಲಿಗೆ ಪೋಯ್ತು ವಿಭ್ರಮಂ
ಭ್ರಮರಸಿಷೇವ್ಯಮಾಯ್ತು ಕುಮುದಂ ಮುದಮಂ ಪಡೆದತ್ತು ಪಣ್ತು ಕ
ರ್ಣಮ್ಯತರಸಾವಿಳಂ ಪಿಳಿಯುಮೆಯ್ದುದುದಬ್ಜವನಾಳಿ ನಾಳಿಕೇ
ರಮುಮನಪಳಂಬಿಸಿರ್ದುವು ಫಲಂ ರಸಪೂರಿತಮಾಗಿ ಮಾಗಿಯೊಳ್ ೨೪೯

(ಜಗನ್ನಾಥವಿಜಯಂ, ೧೪-೫: ಸೂಕ್ತಿ, ೧೦-೨೪೩)

ಮಾಸರಮೆನೆ ಪಾರದದಿಂ
ಪೂಸಿದವೋಲ್ ಪೊನ್ನ ಮುಕುರಮುಂ ಹಿಮಲಿಪ್ತಂ
ನೇಸಱಬಿಂಬಂ ತಿಂಗಳ
ಕೂಸಿನವೋಲ್ ಮೂಡುತಿರ್ಪುದಂದಿನ ದಿನದೊಳ್ ೨೫೦
(ಲೀಲಾವತಿ, ೯-೮; ಸೂಕ್ತಿ, ೧೦-೨೪೨)

ಬಿಟ್ಟುದು ಸರೋಜಮಂ ಕುವಲಯಕ್ಕಡಿಯಿಟ್ಟುದು ತುಂಬಿ ಜಾತಿ ಕಂ
ಪಿಟ್ಟುದು ದಿಕ್ತಟಂಗಳನಶೇಷನದೀನದನಿರ್ಝರಾಂಬು ರೂ
ಪಿಟ್ಟುದು ಚಂದ್ರಕಾಂತ ಹಿಮವಾರಿಗೆ ಚಿಂತಿಸಿ ಜಕ್ಕವಕ್ಕಿ ಸಾ
ಲಿಟ್ಟುದು ಕಣ್ಣನೀರನೆನೆ ಮಾಗಿ ಬರಲ್ ಸೊದಲಿಟ್ಟುದೆಂಬಿನಂ ೨೫೧
(ಜಗನ್ನಾಥವಿಜಯಂ, ೧೪-೬: ಸೂಕ್ತಿ, ೧೦-೨೪೦)

ಓತಸೊಡಸಿರ್ದ ನಲ್ಲರ ಮುಖಾಂಬುರುಹಂ ಪೊ[1]ಱತಾಗಿ[1] ವೀಕ್ಷ ಕಂ
ಜಾತಮದಾವಲಿಕ್ಕಮುಸುರಾಱಿಯು ಪೊಕ್ಕುಳ ಪದ್ಮಮಂ ಖರ
ಜ್ಯೋತಿಯ ಕಂಪು ಕಂಜಮುಮ[2]ಸೀಳ್ದು ಸುರುಳ್ದು ಮುರುಳ್ದುತಂ[2] ಜಗ
ತ್ಕೌತುಕಮಾ[3]ಯ್ತು ಕೂಡೆ ಮಹಿಯೊಳ್ ಜನಸಂತತಿಗಂ ಹಿಮಂ[3]ಹಿಮಂ ೨೫೨
(ಪುಷ್ಪದಂತಪುರಾಣಂ, ೬-೪೬)

ಎಸೆವಿಂಪ್ರಾಶಾಸಮೀರಂ ತೊಲಗಿಸೆ ಕೆಲಸಾರ್ದಂತಿರತ್ಯಂತ ಶೀತ
ಪ್ರಸರಕ್ಕಳ್ಕಿ ಪೋಣಗ್ನಿಯ ದೆಸೆಗೆಳಸಿರ್ದಂತಿರಾಶ್ಚರ್ಯಮಂ ಪು
ಟ್ಟಿಸುತುಂ ತೆಂಕಣ್ಗೆ ಸಾರ್ದರ್ಕನ ಬಿಸುಗದಿರ್ಗಳ್ ಮಾಗಿಯೊಳ್ ತಣ್ಪನಾಳಲ್
ಬಿಸಿಲಂ ಬೆಳ್ದಿಂಗಳೆಂದೀಕ್ಷಿಸುವುವು ತರಳೋತ್ತಾಸತಾರಂ ಚಕೋರಂ ೨೫೩
(ಜಗನ್ನಾಥವಿಜಯಂ, ೧೪-೧೩: ಸೂಕ್ತಿ ೧೦-೨೬೭)

ತಳೆದರ್ ಕುಲಾಯದಿಂ ಬಿದಿರ್ದೆಱಂಕೆಯ ನೀರ್ವನಿಯಂ ತೆರಳ್ದು ತು
ಪ್ಪುಳಿಪೊಸೆದಂಟೆ ಚಂಚುಪುಟದಿಂ ಬಿಸಿಲತ್ತಿದಿರಾಗಿ ಸಿಂದು ಕ
ಣ್ಗಳನರೆಮುಚ್ಚಿ ತೋದಗಱೆಯುಂ ನಸುಜೋಲಿಸಿ ಪಕ್ಕಿಗಳ್ ಮರಂ
ಗಳ ತುದಿಗೊಡಮೇಲೆ ದನಿಗೆಯ್ಯುತಮಿರ್ದುವು ಮುಂಬಗಲ್ವರಂ ೨೫೪
(ಜಗನ್ನಾಥವಿಜಯಂ, ೧೪-೧೦; ಸೂಕ್ತಿ ೧೦-೨೪೫)

---

[1] ಜಗಾಗಿ(ಅ) [2] ಮಿಂದೆಸೆದ್ದು ಸುರುಳ್ದುಗುಮೆಂಬಿನಂ(ಅ) [3] ಯ್ತು ಮಾಘ ಮಹಿಮಂ ಜನಿ
ತೋತ್ಪಲ ಬಂಹಿಮಂ(ಅ)

ಇದಿರೊಳ್ ನಿಂದೆಡಗಾಲೊಳಿಟ್ಟು ಮಱಿಯಂ ಸಿಕ್ಕೇಷ್ಟೆಯಿಂ ಪೋಪ್ರಗೊ
ಳ್ಳದೆ ಕಣ್ಮುಚ್ಚಿ ಹಿಮಾನಿಯಿಂ ನಡುಗುತಿರ್ಪಾ ಪುಲ್ಲೆಯಂ ಕಂಡೆಸಲ್
ಪಪನೆಂಪೇಟಲೊಡರ್ಚಿಯುಂ ನಿಜವಪುಸ್ಸಂಕೋಚದಿಂ ಬಿರ್ಚಲಾ
ಜಪೆಪಟ್ಟಿರ್ದುದು ಕೂಡೆ ಬೇಡನಡೆ ದೇಹಸ್ತಂಭವಾದಂದದಿಂ ೨೫೫

(ಜಗನ್ನಾಥವಿಜಯಂ, ೧೪–೧೪)

ಜಲಜಲಸೊಕ್ಕುತಿರ್ದುದು ಸದೀಶತಿ ಲೋಧ್ರಲತಾಂತ ಸೌರಭ
ಕ್ಕಲವರಿಸಿರ್ದ್ದು ಮತ್ತಮಧುಪಾಳಿ ರತಿಪ್ರಿಯನಂ ಪ್ರಿಯಂಗು ತ
ನ್ನಲರ್ಗಣೆಯಿಂ ಜಗತ್ರಯಮುಮಂ ಗೆಲಿಸಿತ್ತೆಳಿಪೆಣ್ಣ ಮೆಯ್ಯ ಕೋ
ಮಲನಖರೇಖೆಯುಂತಿರೆಪಿಗೆಯ್ದ ಳೊಳಾದುವು ಕೂಡೆ ಬೀಡೆಗಳ್ ೨೫೬

(ಜಗನ್ನಾಥವಿಜಯಂ, ೧೪–೭)

ನಡುಗಿದನಿಂದ್ರನಾರ್ಪುಡುಗಿತಗ್ನಿಯುಮುಂಗೆಯತೀವಭೀತಿಯಿಂ
ಪಡಸಿತು ರಕ್ಕಸಂ ನರನನಪ್ಪಿದನಾ ವಡಬಂಗೆ ವಾರ್ಧಿಪಂ
ಪ್ರೊಡಲನೆ ತೆತ್ತನಾಶುಗನಮೋಡಿದನ್ನೈ ಧನರಾಶಿಯೊಕ್ಕನಾ
ಮುಡುಗಿದನೊಂದು ಗೆಂಟೊಳಭವಂ ಹಿಮಘಾನದ ಧಾಳಿ ತಪ್ಪಿಸಲ್(?) ೨೫೭

ಪೀತಾಂಬರಾಧಿವಾಸದೆ
ಶೀತಂ ತಾಂ ತೊಲಗದೆಂದು ಹೊಗೆಗಿಚ್ಚಿನ ನಡು
ವಾ ತನುವನಿಟ್ಟು ಕಾಸಲ್
ಮಾತೇನೊ ಕೃಷ್ಣನಾದನಾ ಹಿಮಮೆಂತೋ ೨೫೮

ಉಂಡ ಕೊಬ್ಬಿಂದೆ ನೋಡಾ
ಕೆಂಡಕೆ ನೊಣಮೆಱಗಬಲ್ಲುದೆಂಬರಮಾತಂ
ಖಂಡಿಸುವಂತಾ ನೊಣಗಳ್
ಕೆಂಡಮುನಾಖಂಡಮೆಂದು ಸಾರ್ದುವು ಹಿಮದೊಳ್ ೨೫೯

ಸೂರ್ಯಂಗೆ ಚಂದ್ರಮತ್ವಂ
ಸಾರೆ ಚಕೋರಾಳಿ ನಲಿಯಲೋಡಲ್ ಚಕ್ರಂ
ಸೇರದಂತಾಡುತಿರಲಾ
ಪ್ರೂರಿತ ಹಿಮದಿವಸದೊಳಗಮೇಂ ವಿಪರೀತಂ (?) ೨೬೦

ವರ ಜಘನಯುಗದ ಮಱೆಯೊಳ್
ಗುರುಕುಚಯುಗ್ಮಂಗಳೆಱಕಿನೊಳ್ ಕಜಮುಖದಾ
ಹೊರಳಿಯುಶಯುನದೆ ಭಳಿ ಮೆ
ಯ್ಗ್ಗರೆವಂತಾಗಿಸದ ಸರಸೇಜಾಣಂ ಸತಿಯಾ ೨೬೩

ಮುಂದೆ ಕಾಸಿದೊಡೆ ಭಳಿ ಮಿಗೆ
ಪಿಂದಿರೆ ಪೊಗೆಗಶ್ರುಗಱೆಯೆ ಕಿಚ್ಚಿಡೆ ಪಥಿಕರ್
ಪಿಂದೆ ಮುಂದಿಲ್ಲದಿರ್ಪೀ
ಕುಂದಿನ ಬದುಕೇತಕೆನುತಲಟುವವ್ರೊಲೆಸೆದರ್ ೨೬೪

ಹಿಮಕಂಜಿ ಮುಗ್ಧಕಪಿಗಳ್
ತಮತಮಗೆಯ್ತಂದು ಮುತ್ತಿದಲರಂ ಕಿಚ್ಚೆಂ
ದಮಮ ಬಱಗಾಸಲುಷ್ಣಂ
ಸಮನಿಸದಿರೆ ನಾಚಿ ಹೊಟಿಲನುಱೆಯಂ ಸಾರ್ಗುಂ ೨೬೫

ಸುಡಿಯ ಬೆಡಂಗು ಜೆಲ್ವಭುಜವಾ ಸೊಗದಾಯತ ಜೆಲ್ವನಪ್ಪ ಜಿಂ
ತ್ರೊಡಕಪೆ ವಸ್ತ್ರಮಂ ಮೊಳೆಯುಮೇಲುದು ಮಧ್ಯದ ಸಣ್ಣಬಣ್ಣದೊಳ್
ತುಡಿಗೆಯುಮುಳ್ಳ ಜೊಕ್ಕಸರಿಮಿಂಡಿಯರ್ಗಾ ಹಿಮವ್ರೊಲ್ದು ಶೀತದೊಳ್
ನಡುಗಿಪಿದಿಲ್ಲ ಸುಂದರಿಯರ್ಗಿಟ್ಟೆಡೆಯೀವವನೆನ್ನಕಷ್ಟನೋ(?) ೨೬೬

ಅರೆಮೀಸೆ ಕಣ್ಣೊಳೊಂದೆ ಮ್ಯೆ
ಯರೆಪುರ್ಬುರಿಯುರುಹಿಸಲ್ಕೆ ಕೆತ್ತಿದವೊಲ್ ಜಿಂ
ದಿರೆ ಪಥಿಕನಱಯದೊಡೆ ಹೋ
ಹರ ನಗೆ ಘನಮಾಯ್ತು ಕೇಡನಱಿಸಮತ್ತರಿಪಂ(?) ೨೬೭

ಕಿಡಿಗಳ್ ಕೆಜ್ಜನೆಯಾಲಿಕಲ್ಲುರಿಯ ಮೊತ್ತಂ ಕೆಂದಳಿರ್ ಕೆಂಡವ್ರೋ
ದಡಕಿಲ್ ಮಾಣಿಕದಂದ ಕಾಯ್ಸು ತಪನಂ ಚಂದ್ರಂ ಪೊದಬ್ದಾತಪಂ
ಗಡ ಜೆಳ್ಳಿಂಗಳೆನಿಪ್ಪುದೊಂದು ಪೆಸರಂ ತಾಂ ಮಾಡಿದಂತಿರ್ದುದಾ
ಕಡುಪಿಂ ತನ್ನಯ ಕಾಲದಲ್ಲಿ ಹಿಮರಾಜಂ ಧಾರುಣೀಚಕ್ರದೊಳ್(?) ೨೬೮

ಮಿಗೆ ಬೆಮರೞಿತುದು ನೀರಡಿ
ಕೆಗಳಿಂಗಿದವುಷ್ಣದುಸಿರಡಂಗಿತು ತಪನಂ
ಗೊಗೆದುದು ಪೆರ್ಚಿದ ತಂಪ
ಗ್ನಿಗೆ ಶೀತಂ ಪೆರ್ಚಿತೇನಸೆಂಜಿಂ ಹಿಮದೊಳ್ ೨೬೯

ಶೀತವ ಪರಿಹರಿಪನಲಂ
ತಾಂ ತನ್ನಯ ದೇಹದಲ್ಲಿ ಭಸಿತವ ಪೂಸಿದ
ಮಾತೇನು ಮಿಕ್ಕವರ್ಗಳ
ಸ್ಪೈತಿರಿಪನೆ ಹಿಮನೃಪಾಲನವನೀತಳದೊಳ್ ೨೭೦

ಈಕ್ಷಿಸಿದರೆಳಸಿ ಭಸಿತದ
ರಕ್ಷೆಯನೊಸೆದಿಟ್ಟು ಮಂಜಿನಿಂ ತೂಪಿರಿದುಂ
ಶಿಕ್ಷಿಸಿ ಬಲ್ಪಿಂದೊಡುತ
ರಕ್ಷಿಸಿದಳ್ ಶೀತಮಾತೆ ಶಿಖಿಬಾಲಕನಾ ೨೭೧

ಸಲೆ ರವಿ ತೇಜಂಗುಂದುತೆ
ನಿಲಲಂಜುತ್ತೋಡಿ ಪುಗುವನದ್ರಿಯ ಮಱೆಯಂ
ನಿಲೆಹರಿವ ಉರಿಯ ಕಿಚ್ಚುಂ
ಸಲೆ ನಂಮುಗು ಹಿಮನೃಪಾಲನಾಜ್ಞೆಗೆ ಧರೆಯೊಳ್ ೨೭೨

ಉದಯಂ ಶೀತೋದಯವ
ಗ್ಗದ ಮಧ್ಯಾಹ್ನಂಗಳಲ್ಲಿ ಬಿಸುಪುಱಿತೆ ಶೀತಂ
ಸದನದೊಳತಿ ಮಿಗೆ ಶೀತಂ
ಹೃದಯಂ ಗದಗದಿಸಿ ಮೊಱೆದುದಂದಿನ ಶೀತಂ ೨೭೩

ಇಳೆಗತಿಘನಶಿಶಿರಂ ಶಶಿ
ಬೆಳಗುವ ಜೊನ್ನಂ ಬಿಸಿಲ್ ಬಿಸಿಲುಂ ಜೊನ್ನಂ
ಚಳಿ ಬಿಸುಪು ಬಿಸುಪು ಚಳಿಯೆನೆ
ಬೆಳೆದುದು ಹಿಮರಾಜತೇಜವೀ ಜಗದೊಳ್ ೨೭೪

ಅಲ್ಪರಿಯೊಳು ಹೂಹೂಯೆಂ
ಬಲ್ಪುಗ್ಗಡಣೆಯೊಳೆ ಹಸ್ತದಂಡಿಗೆಯಿಂದಂ
ನೋಟ್ಪಿನ್ನಂ ಶಿಶಿರನಟಂ
ಸಾಲ್ಪನ್ನಂ ಜಗವನಾಡಿಸಿದನುಬ್ಬಿನಿಂ ೨೭೫

ಉಱಿತ ಶೀತಂ ಪತ್ತಿದೊಡಿರ
ಲಱಿಂಪುದೆ ಜೀವಂ ಬಿಗರ್ತು ಜಠರಾಗ್ನಿಯುಸಿ
ರ್ಚೈಱಿಸೆ ಹೊಗೆಯುಸುರಪಥದಿಂ
ಪೊಱಮಡುವುದು ಜನದ ಮುಖದೊಳಲ್ಲದೊಡುಂಟೇ ೨೭೬

ನುಡಿಯ ಹುಹು ನಡೆಯ ಮಾತೇ
ಕೊಡಲೆ ಪ್ರಾಣಂಗೆ ಛಳಿಯ ಕುಪ್ಪುಸಮಾಂಸ್ತಿಂ
ಡೊಡೆ ಹಿಮದ ಮಹಿಮೆಯಂ ಪೇ
ೞ್ವೊಡೆ ಕೇಳ್ವವನಾವನೋರ್ವನುರ್ವೀತಳದೊಳ್ ೨೭೭

ಒದವಿ ಧರಾತಳದೊಳ್ ಶೀ
ವಿದ ಶೀತಕ್ಕಂಜಿ ಕಂಪಿಸುತ್ತಂ ನಿಲಲಾ
ಱದೆ ಬಡವಾಗಿ ಕರಂ ಕಾ
ಷ್ಠದೊಳಂ ಪೊಕ್ಕಂ ಕೃತಾನುವೇನಂ ಪೇೞ್ವಂ ೨೭೮

ಮುಚ್ಚಿ ಮುಸುಕಿರ್ದ ಹಿಮಮಂ
ಕಿಚ್ಚಿಂದಂ ಕಳೆಯಲಾಱದಿಳೆಯ ಜನಂಗಳ್
ಬೆಚ್ಚಱದೆಯ್ತಂದೊಲವಿಂ
ದಚ್ಚರಿ ವಿರಹಿಗಳ ಕಾದು ಕಳೆವರ್ ಚಳಿಯುಂ ೨೭೯

ಪರಿಪೂರ್ಣತಟಾಕದ ಮೇ
ಲುರಿಯಿಲ್ಲದೆ ಧೂಮಮಾಗೆ ಉರಿ ಮಾಗೆಯೊಳ
ತ್ಯುರುತರಗುರುತರತಾಪ
ಕ್ಕಿರಲಾಱದೆ ಬಿರಯಿ ಪೊಕ್ಕು ಮುೞುಗದೆ ಮಾಣಂ ೨೮೦

ಪುಟ್ಟಿತು ಚಳಿ ಬೆಳೆದುದು ಚಳಿ
ಕೊಟ್ಟುದು ಚಳಿ ಕೊಂಡುದೆಲ್ಲಮುಂ ಚಳಿ ಚಳಿಯೆಂ
ದುಟ್ಟುದು ಚಳಿ ತೊಟ್ಟುದು ಚಳಿ
ಮೆಟ್ಟಿತು ಚಳಿ ಮೆಟ್ಟಿತೆಲ್ಲ ಚಳಿ ಹೊಸಚಳಿಯೊಳ್ ೨೮೧

(ಗಿರಿಜಾಕಲ್ಯಾಣಂ, ೯–೫೨)

ಉಡುಗೆಲೆ ಗರ್ಭಮುಂ ಕುಱಿಯ ಕಂಬಳಿ ಮಾಳಿಗೆ ಮಾಣು ದರ್ಪಮಂ
ತೊಡರದಿರೆನ್ನೊಳಬ್ಜಮೆ ತೃಣಾವಳಿಗೆಲ್ಲಿಯ ಮಾಗಿ ಪೋಗಿ ನೀಂ
ಮಿಡುಕದಿರಂಗನಸ್ತನಮೆ ನಿನ್ನನೆ ಮನ್ನಿಪೆನೆಂದು ನಿಚ್ಚಲುಂ
ಬಡಿದುವು ಡಂಗುರಂ ವಿಜಯಮಂದಿರದೊಳ್ ಹಿಮರಾಜರಾಜನಾ ೨೮೨

ಚಳಿಗಳ್ಕಿ ಕೞಿಯ ಪೊಸಕಂ
ಬಳಿಯಂ ಮುಸುಕಿದವೊಲಗ್ನಿಯುಪಗತ ತಾರ್ಣಾ
ನಳರಾಶಿಯೆಸೆದುವಂತ
ಜ್ವಳಿದುಲ್ಮುಕವೊಟ್ಟೆ ಪೋಗೆ ಪಥಿಕರ್ ಪಥದೊಳ್ ೨೮೩
(ಲೀಲಾವತಿ, ೯-೯)

ನಳಿತೋಳ್ ಸುತ್ತಿದ ಕೊಂಟೆ ಕೂರ್ಗಣೆ ನಖಂ ವೃತ್ತಸ್ತನದ್ವಂದ್ವವ
ಟ್ಟಳೆ ಬಿಲ್ ಪುರ್ಬು ಕಟೀತಟಂಗಳೆರಡುಂ ಬೆಂಗುಂಡು ಕರ್ಣಾಯತಂ
ಪೊಳೆಯುತ್ತಿರ್ಪಲರ್ಗಂಗಳೋಪನೆಮಗಾ ಸಾಮಂತನೀ ಕೋಟೆಯುಂ
ಕೊಳಲೇಂ ನಿನ್ನೊಳು ಸಾಧ್ಯಮಲ್ಲಮೆಲವೋ ಹೈಮಂತ ನೀಂ ಸಂತವಿರ್ ೨೮೪

ಅಂಬುಜಪತ್ರನೇತ್ರೆಯರ ತುಂಗಘನಸ್ತನಮಧ್ಯದಲ್ಲಿ ನೈ
ತಂಬದೊಳಿಂಬಿನಲ್ಲಿ ನಳಿತೋಳ ಮೊದಲ್ಗಳ ತಾಣದಲ್ಲಿ ಪೊ
ಕ್ಕಂ ಬದುಕಿರ್ದನಲ್ಲದೊಡೆ ಸತ್ತಪನೆಂಬುದು ನಿಶ್ಚಯಾರ್ಥಮುಂ
ಕಂಬಳಿ ದಡ್ಡಿ ಬೂರಿವಡೆಯೆಂಬಿವು ಕಾವುವೆ ಶೀತಗಾಲಮಂ ೨೮೫

ಗಗನಂ ದಿಗ್ವಳಯಂ ದಿನೇಶವಳಯಂ ಶೈಲಾಳಿ ತೋಯಾಳಿಯುಂ
ನಗರಂ ನಂದನಮೆಂಬ ವಸ್ತುಗಳನಾರುಂ ಕಾಣದಂತಾಗಿ ತೊ
ಟ್ಟಗೆ ಕಣ್ ವಂಚಿಸಿ ನುಂಗಿ ತೋರ್ಪ ಚಪಲಂ ಹೇಮಂತನೆಂಬಿಂದ್ರಜಾ
ಲಿಗನಿರ್ದೂದಿದ ಧೂಮದಂತಪದಳಂ ಪರ್ಬಿತ್ತು ಮಂಜೆತ್ತಲುಂ ೨೮೬
(ಸೂಕ್ತಿಸುಧಾರ್ಣವಂ, ೧೦-೨೩೯)

ಗಿರಿತಟದೊತ್ತುಗೊಂಡು ಮೃಗಸಂಕುಳಮಿರ್ದುವು ಜೀರ್ಣಕೋಟರಾಂ
ತರತಟದೊತ್ತುಗೊಂಡು ಖಗಸಂತತಿಯಿರ್ದುವು ಮಾಗಿಯೊಳ್ ಸರೋ
ವರತಟದೊತ್ತುಗೊಂಡು ಪೊಣರ್ವಕ್ಕಿಗಳಿರ್ದುವು ಕಾಮಿನೀಪಯೋ
ಧರತಟದೊತ್ತುಗೊಂಡು ವಿಟಪೇಟಕರಿರ್ದರು ಮುಂಬಗಲ್ವರಂ ೨೮೭
(ಸೂಕ್ತಿಸುಧಾರ್ಣವಂ, ೧೦-೨೪೪)

ಖಂಡಿಸೆ ಬಿಸಕಳಿಕೆಗಳಂ
ತುಂಡಂ ಕುತ್ತಿಱಿಯೆ ಬಿದಿರ್ದು ಬಳ್ಕಿಸಿ ತಲೆಯಂ
ಕೊಂಡೋಡಿ ಕೊಡಹಿಕೊಂಡವು
ಮಂಡಳಿಸಿದ ಪಕ್ಕದಿಂದೆ ಕಳಹಂಸಂಗಳ್ ೨೮೮
(ಲೀಲಾವತಿ, ೯-೧೫; ಸೂಕ್ತಿ ಸುಧಾರ್ಣವಂ, ೧೦-೨೪೬)

ಮಱಿದುಂಬಿಗಳಂಬುರುಹದ
ನಱುಗಂಪಿಂ ಬಳೆದುಮಪಱಿ ಸಿರಿತೊಲಗಲೊಡಂ
ಮಱಿತಪೆಱಗಿ ನೋಡಮುತ್ಪಲ
ಕೆಱಗಿದುವು ವಿಜಾತಿಯಲ್ಲಿ ಗುಣಮಱಿಸುವುದೇ ೨೮೯

(ಲೀಲಾವತಿ, ೯-೧೬)

ಪೊಸಪುಲ್ಲೊಳ್ ಕಿಚ್ಚನಿಟ್ಟೊದಿದೊಡುರಿದುರಿ ಕೂರ್ಚಾಗ್ರಮಂ ಪತ್ತಿ ಕಯ್ಯಂ
ಪೊಸೆದುಂ ಪಸ್ತ್ರಾಗ್ರದಿಂ ಪೋದಿಯುಮುಗುಳ್ವಬಿತಯಿಂ ನಾಂದಿಯುಂ ಪೊಕ್ಕಳಂ ಸಂ
ದಿಸಲೆಂತುಂ ಪಾಂಥನಂದಾಱಪೆ ನಡುನಡುವ ಪೋಗಿ ಬಿರ್ದ್ದಿಕಿಲಿಂ ಕಂ
ಪಿಸುತಿರ್ದಂ ಪುಲ್ಲ ಕಿರ್ಚುಂ ಪೊಲೆಯನ ಕೆಳೆಯುಂ ಮಾಡಪಾನಂಗೆ ಕೇಡಂ ೨೯೦

(ಲೀಲಾವತಿ, ೯-೨೦; ಸೂಕ್ತಿ ೧೦-೨೧೨)

ತಳಿರೊಳ್ ಮುಚ್ಚಿಟ್ಟು ಕೂಸಂ ತೆಗೆದು ಶಬರಿ ನಿಶ್ಚೇಷ್ಟಮಾಗಿರ್ದೊಡಂ ಕಂ
ಗಳನೀರಂ ತೀವಿ ಜೇಗಂ ತೊಡೆದು ಹಿಮಕಣಾನೀಕಮಂ ತೇಂಕುದಾಣಂ
ಗಳನಂಟಂಟಿಲ್ಲಿಯುಂ ಕಾಣಪೆ ಹರಣಮನತ್ಯುಷ್ಣದಿಂ ಸುಯ್ಯೆ ಸುಯ್ಲಿಂ
ಪೆಳಗೊಸೆಬ್ಬಿತ್ತು ಕಾಳ್ ಕಾಳೆನೆ ತೊರೆವ ಕುಚಾಗ್ರಂಗಳಂ ಸೀಡುತಿರ್ದಳ್ ೨೯೧

(ಲೀಲಾವತಿ, ೯-೨; ಸೂಕ್ತಿ ೩-೨೧೭)

ಕೃತಶೀಘ್ರಸ್ನಾನರಾಸರ್ತಿತನಿಕೃತಕರಾಕೃಷ್ಟವಸ್ತ್ರಾಂಚಳರ್ ವಿ
ಸ್ಮೃತದರ್ಭರ್ ಗದ್ಗದೋಚ್ಚಾರಿತ ಜಪರುಪಸಂಜಾತರೋಮಾಂಚರಾಕುಂ
ಚಿತಗಾತ್ರರ್ ವಹ್ನಿಸಂದೀಪನಪಟುನಟುದತ್ತೇ[1]ಕ್ಷಣರ್ ನೀರ[2] ತೀರ
ಸ್ಥಿತರಿರ್ದತ್ತಂಪು ಪ್ರಭಾತಿಕವಿಧಿವಿಹಿತಾಮೋಘಮಾಘಂ ದ್ವಿಜೌಘಂ ೨೯೨

(ಲೀಲಾವತಿ, ೯-೨೧೫, ಸೂಕ್ತಿ, ೧೦-೨೬೪)

ಕರಿಣೀಸೇಚಕನುಂ ತುಡುಂಕದು ವನೇಭಂ ಕಾಮುಕರ್ ಕಾಮಿನೀ
ಪರಿರಂಭಸ್ಪೃಹೆಗಾಸೆಗೆಯ್ಯರೆ ರತಿವ್ಯಾಪಾರದಿಂ ಹುಲ್ಲೆಯುಂ
ಹರಿಣಂಗಳ್ ನಡೆನೋಡಲಮ್ಮವು ಹಿಮವ್ಯಾಘಾತದಿಂ ಬಿಲ್ಗೆ ಕೈ
ದರಲೇನಾಱನೊ ಪೂವಿನಂಬು ತನಗಿಲ್ಲಾಗಿರ್ದನೋ ಮನ್ಮಥಂ ೨೯೩

(ಲೀಲಾವತಿ, ೯-೪; ಸೂಕ್ತ ೧೦-೨೫೪)

---

[1]ರಗ್ರೀವ(ಸ) [2]ವಿಂತುತುಹಿನ (ಸೂ)

ಪಿರಿದುಂ ಕಾರ್ತ್ಯತುರಂ ಮಾಣದೆ ಕರೆದೊಡಮೀ ಬಂದೆನೀ ಬಂದೆನೆಂದೊಂ
ದರೆಜಾವಂ ಕಾಮಿನೀಕರ್ಕಶನಿಬಿಡಕುಚಾಲಿಂಗಿತಂ ರಕ್ತವಸ್ತ್ರ
ಸ್ತರಣಂ ಕಾಶ್ಮೀರರಾಗಾವಿಳನತಿಮೃದುಶಯ್ಯಾತಳಂ ನಕ್ತಭೀತಾ
ತುರಚಿತ್ತಂ ಕಾಂತನಿರ್ದಂ ಸಹಚರಗಮನೋದ್ಯೋಗಭಂಗಂ ಭುಜಂಗಂ ೨೯೪
(ಸೂಕ್ತಿಸುಧಾರ್ಣವಂ, ೧೦-೨೫೬)

ಅಡಿಯಡಿಯೊಳ್ ತೊಡೆತೊಡೆಯೊಳ್
ನಡುನಡುವಿನೊಳುರಮುರೋಜದೊಳ್ ತೋಳ್ ತೋಳೊಳ್
ತೊಡರ್ದಿರೆ ಬಾಯೊಳ್ ಬಾಯ್ ಮನ
ದೊಡಕಿನೊಳಿರೆ ಮಾಗಿ[1]ಗೀಗಿಯೇ[1]ಗೆಯ್ದಪುದೊ ೨೯೫
(ಸೂಕ್ತಿಸುಧಾರ್ಣವಂ, ೧೦-೨೫೭)

ಗಳರವಮಾಗಿ ಮುದ್ದುಮೊಗವಾಗಿ ದರಸ್ಮಿತನೇತ್ರಮಾಗಿ ಕೋ
ಮಳಕಚಮಾಗಿ ಪೀನಕುಚಮಾಗಿ ಸಮುಚ್ಛ್ವಸಿತಂಬಮಾಗಿ ಸಂ
ಚಳಿತತನುಮಧ್ಯಮಾಗಿ ತನುಗಂಗಜರಾಗಮುಮಾಗಿ ನೀಱೆಯೊ
ಳ್ದೊಳಪುಗುವಂತೆ ಮಾಗಿಬರೆ[2] ಮಾಗಿಲಯೆನ್ನ[2]ರೆ ಭೋಗಭಾಗಿಗಳ್ ೨೯೬
(ಸೂಕ್ತಿಸುಧಾರ್ಣವಂ, ೧೦-೨೬೦)

ನೆನೆಯಲೊಡನೆತ್ತಿ ಮನದೊಳ್
ತನುಗಿಚ್ಚಂ ಹಿಮನನೋಡಿಸುವ ಸಮಯುಮತೀ
ಸ್ತನಭರಮುಂ ತೆಗೆದಪ್ಪಿದ
ಮನುಜರಿಗೇನರಿವುದರಿದೆ ಮಾಗಿಯ ಮೂಗಂ ೨೯೭
(ಸೂಕ್ತಿಸುಧಾರ್ಣವಂ, ೧೦-೨೬೨)

ನೆಲವಾಸುದಂಬುಲಂ ಪೆ
ರ್ಮೊಲೆಗಳ ಪಱುಮಿಂಡಿ ಸುಪ್ಪತಿಗೆ ಘನಳಾರಂ
ಕೆಲದ ಸೆಗಳಿಗೆಯನಿಂಬಿಂ
ಸಲೆ ಸವಿಸ್ತೊಡೆ[3] ಮಾಗಿಗೀಗಿಯೇ[3]ಗೆಯ್ದಪುದೋ ೨೯೮
(ಸೂಕ್ತಿಸುಧಾರ್ಣವಂ, ೧೦-೨೫೯)

---

[1] ಕಾನದೇಂ(ಸ) [2] ಬಾಗಿಲೆಯೆಂಬರೆ(ಸೂ) [3] ಮಾಗಿಗಿಸಯುದೇಂ(ಸ)

ಬಿಸಿಬಿಸಿಯೋಗರಂ ಕೆಲದ ಸೋಡಗೆ ತೆಳ್ಪೊಳುದುಪ್ಪನುಃಪ್ಪುಗಾಯ್
ಮೊಸರಿನಿದಪ್ಪ ಮಜ್ಜಿಗೆ ನಿವಾತದ ಶಯ್ಯೆ ಕದಂಬದಂಬುಲಂ
ರಸಿಕರ ಗೋಷ್ಠಿ ಬಟ್ಟಮೊಲೆಯೋಪಳ ತಳ್ತಮರ್ದಪ್ಪು ತಾವೆ ಬ
ಗ್ಗಿಸದೆ ಹಿಮಾಗಮೋಕ್ತಿಕ ಜಡೋದಯಮಂ ಸುಕೃತಾತ್ಮರಪ್ಪರಾ ೨೯೯
(ಸೂಕ್ತಿಸುಧಾರ್ಣವಂ, ೧೦-೨೬೫)

## ಶಿಶಿರ ಋತುವರ್ಣನೆ

ಒದವೆ ರಸಂ ವನಾವಳಿಕಸಂತತಿ ಕೋಮಳಮಾದುದೆತ್ತಲುಂ
ಬದರಿಫಲಾಳಿಯಿಂದಧರಮಾದುದು ಕಂಜವನಾಳಿ ನಂಜು ಮು
ಟ್ಟಿದ ತೆಜನಾಯ್ತುತ್ಪಲಕದಂಬ ಕದಂಬಕ ಹರ್ಷಕಾರಿಯಾ
ದುದು ಹಿಮಕಾಲವೀಗ ಶಿಶಿರಾಗಮವಾದ ಬೆಡಂಗಿದೆಂಬಿನಂ (?) ೩೦೦

ರವಿರುಚಿಯಂ ಹಿಮಾಂಶುರುಚಿಯೆಂದು ಚಕೋರಚಯಂಗಳೀಂಟುತಿ
ರ್ಪವು ಬಡಬಾಗ್ನಿಯಂ ಪವಳಮೆಂದಿರದಂಬುಚರಂಗಳೊಂದಿ ನಿ
ಲ್ಪವು ಹರಭಾಳಲೋಚನಮನಂಗಜನೀಕ್ಷಿಸಿ ರಕ್ತಚಂದನ
ದ್ರವದ ಲಲಾಮಮೆಂದೆಣಿಪನೇವೊಗಟಿಪ್ಪಂ ಶಿಶಿರಾತಿರೇಕಮಂ ೩೦೧
(ಜಗನ್ನಾಥವಿಜಯಂ, ೧೪-೧೮; ಸೂಕ್ತಿ, ೧೦-೨೬೬)

ಗಂಗೆಯಮೂಡನಂದುಬಿಡದು ಸೂಡಿದ ಚಂದ್ರಕಳಾವತಂಸಮಂ
ಪಿಂಗಿಸಿ ಸುಟ್ಟು ಮನ್ಮಥನೊಳಾದ ವಿಭೂತಿಯನೊಟ್ಟಿಕೊಂಡು ವಾ
ಮಾಂಗದೊಳಿಟ್ಟು ಪಾರ್ವತಿಯನೀಶ್ವರನಗ್ಗಳಗಣ್ಣ ಬೆಂಕಿಯಿಂ
ಭಂಗಿ[1]ಸಿ ಸೀಗುವಂ ಗಿರಿಯ[1]ಗಹ್ವರದೊಳ್ ಶಿಶಿರಾತಿರೇಕಮಂ ೩೦೨
(ಸೂಕ್ತಿಸುಧಾರ್ಣವಂ, ೧೦-೨೫೩)

ತಳೆದ ಸುವರ್ಣಭೂಷಣದ ಪೂಸಿದ ಕುಂಕುಮದಿಟ್ಟ ರೋಚನಾ
ತಿಳಕದ ರಾಗದಿಂ ಮನದನುರಾಗಮೆ ಮೂರ್ತಿಯನಾಂತವೊಲ್ ಮನಂ
ಗೊಳಿಸೆಳಮೆಂಡಿರಂಗಣದ ಹೇಮವಿತರ್ದಿಯೊಳಿರ್ದು ಕಾದರಂ
ಪೆಳವಿಸಿಲಂ ಮಸಂಬಯಸಿ ಕಾಯೆ ವಿಟಪ್ರಕರಕ್ಕೆ ಮನ್ಮಥಂ ೩೦೩
(ಜಗನ್ನಾಥವಿಜಯಂ, ೧೪-೯; ಸೂಕ್ತಿಸುಧಾರ್ಣವಂ, ೧೦-೨೫೫)

---

[1]ಸುವಂ ಕುಬೇರಗಿರಿ(ಸೂ)

ತುವಿಗೋಡಿಂಗೇಱಿ ಕೊಂಬಂ ಪಿಡಿದು ಜಡಿದು ಪುರ್ವಿಕ್ಕಿಯುಃಘೆಂದು ಮುನ್ನೇ
ಱಿವ ಕೊಂಬಂ ನೋಡಿ ಮೆಯ್ಯಂ ಸುಗಿದುಗಿದುರಮಂ ಪಿಕ್ಕಿ ಪೇಸ್ಸಿಂಡನಾಯ್ತು
ಬಿಸಿದ ಮೆಯ್ಯಂ ಕೆಂಪ್ಪಿನೆತ್ತಂ ತುಱುಗಿ ಮಱುಗಳಂ ಸಾರ್ಚಿ ಮುಂದಣ್ಗೆ ಕುಳ್ಳಿ,
ರ್ದಾದು ಕೋಡಂ ಕೊಡಿ ಹೇಮಂತದೊಳೆಳವಿಸಿಲಂ ಕಾಯುಲೆಂದೊಂದು ಘೂರ್ತಂ ೩೦೪
(ಸೂಕ್ತಿಸುಧಾರ್ಣವಂ, ೧೦-೨೪೭)

ಪಲ್ಗಿರಿದು ಪುರ್ವನುರ್ವಿ ಬೆ
ರಲ್ಗೆನೆಯಿಂ ತುಱುಗಿ ಬರಿಯು ಸೀರ್ದುಪ್ಪುಟಿ ಬಂ
ಬಲ್ಗಳನುಗುರಿಂ ಪಿಕ್ಕಿ ಬಿ
ಸಿಲ್ಗಾದುಪಡೊಂದು ಮುಪದ ಕೋಡೊಳ್ ಕೋಡಂ ೩೦೫
(ಜಗನ್ನಾಥವಿಜಯಂ, ೧೪-೧೧)

ಮಱುಗಳನಿಱುಂಕಿ ಮೋಹದಿ
ನೆಱಂಕೆಯಿಂ ಗೂಡುಗೊಂಡು ಗೂಡಿನೊಳಿರುಳೇ
ನೊಱಗಿರ್ದುವೊ ಕೊಗದೆ ಕಣ್
ತೆಱೆಯದೆ ಕುಕ್ಕುಟಕುಟುಂಬಿನೀನಿಕುರುಂಬಂ ೩೦೬
(ಜಗನ್ನಾಥವಿಜಯಂ, ೧೪-೧೫; ಸೂಕ್ತಿ, ೧೦-೨೪೯)

ಪೊಱಮುಟ್ಟು ತೊಱೆಯ ನಡುವಣ
ಕುಱುಪಂಗಳ ತಡಿಯೊಳಿರ್ದು ಕಾಯ್ದುವು ಬಿಸಿಲಂ
ಮಱುಗಳ್ ಪಕ್ಕಂ ಬೆಂಬಿಡ
ಪೊಱಗಿರೆ ಕುಂಭೀರಕಮಠಕರ್ಕಟಕಂಗಳ್ ೩೦೭
(ಜಗನ್ನಾಥವಿಜಯಂ, ೧೪-೧೨; ಸೂಕ್ತಿ, ೧೦-೨೫೦)

ಕಿಚ್ಚಿನ ಸೊಗಸಂ ಬಿಸಿಲೊಳ್
ಬೆಚ್ಚನೆಯಂ ಬಿಸುಪಿನುಣಿಸನೊಳ್ದಂಬುಲಮಂ
ಮೆಚ್ಚಿದಳಪ್ಪಂ ಮಾಡುವ
ನಚ್ಚಿನ ಶಿಶಿರಂಗೆ ಸರಿಯುದಾರ್ ಧಾರುಣಿಯೊಳ್ ೩೦೮

ಹಿಮವರ್ಷಬಿಂದುಗಳ್ ಸಂ
ಕ್ರಮಿಸಿದ ವನತರುನಿಕಾಯದೊಳ್ ನವಮುಕುಳಾ
ಗಮದಿಂದೆ ಸಿಂಧುವಾರಂ
ಭ್ರಮರಾಳಿಗೆ ಪರಿಮಳಾನುಮಿತೆಯಾಯ್ತೆತ್ತಂ ೩೦೯

ಬೆಳೆದುವು ಹಿಮವರ್ಷದಿ ರಾ
ತ್ರಿಲತೆಯೆನಲ್ ಬೆಳೆದುದಿರುಳ್ಗಳೊಳ್ ಸುರತಂಗಳ್
ಬೆಳೆದುವು ದಂಪತಿಶತದೊಳ್
ಬೆಳೆವಿಸೆಗಂ ಮದನಾಗ್ನಿಯಿಂ ಭುಜಬಲಮುಂ ೩೧೧

ಮೃಗಸಂತತಿಯುಂ ಕೊಳರ್ವ
ಕ್ಕಿಗಳುಂ ಪಕ್ಷಿಗಳನದ್ರಿತಟದೊಳ್ ಕೊಳಮೊ
ತ್ತುಗಳೊಳ್ ಮಿಗೆ ಕೋಟರದೊಳ್
ಪುಗಿಸುತ್ತುಂ ಬಂದನಮುನು ಶಿಶಿರನೃಪಾಲಂ ೩೧೨

ಇನಿಸುಗುರ್ಪೆಚ್ಚನಪ್ಪುಣಿಸು ಕುಂಕುಮದಣ್ಪು ಕದಂಬದಂಬುಲಂ
ಕನಕವಿಭೂಷಣಾಳಿ ಪೊಸಜಾದಿಯ ಪೂ ಧವಳಾರವಟ್ಟಿಜಂ
ಜನಿಯಿಸಲಂಜಿವಾಸುಗಳೊಳೋಪಳಸೆರ್ಪೊಲಿಸೆಂಕೆಯಿಂದದೇಂ
ತನತನಗಿಕ್ಕಿ ಸುಟ್ಟಿದುದೊ ಭೋಗಿಜನಂ ಶಿಶಿರಾತಿರೇಕಮುಂ ೩೧೩

(ಜಗನ್ನಾಥವಿಜಯಂ, ೧೪-೧೯; ಸೂಕ್ತಿ, ೧೦-೨೬೩)

ಓರಂತೆ ಮೆಚ್ಚಿದಂ ಕೃತಿ
ಸಾರಂ ಋತುವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ಪೋರಸಮುದ್ರಾಧಿನಾಯಕಂ ಸೋಮನೃಪಂ

ಇದು ಸರಸ್ವತೀಸರ್ವಾಂಗದರ್ಪಣಾಯಮಾನಪ್ರತಿಭಾಸನೂತನಪುರಾತನ
ಪ್ರಮಾಣ ಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಋತುವರ್ಣನಂ ದಶಮಾಶ್ವಾಸಂ

# ವನವಿಹಾರ ವರ್ಣನಂ

ವನಪಾಲರ್ ಪೇೞ್ವ ಭೂಪರ್ ತರುಣಿಯರೊಡನಾನಂದ[1]ದಿಂದೆಯ್ದಿ[1] ಪೋಪಾ
ಬನದೊಳ್ ಪೂಗೊಯ್ವ ಪೂವಿಂ ತೊಡುಗೆಯನೊಲವಿಂ ಮಾೞ್ಪ ತೂಗುಯ್ಯಲಂ ಪಾ
ವಿನೊಳಾಡುತಿರ್ಪ ಬೆಟ್ಟೇಱುವ ಮರ[2]ನಡರ್ವಾ[2]ಕಾವಣಕ್ಕೋಪ ತಂತಿಂ
ನ್ಮನಿರ್ಪರ್ ಸಯ್ತುಂಬುದಂ ವರ್ಣಿಸುಗೆ ಕವಿ ವನಕ್ರೀಡೆಯೊಳ್ [3]ನಾಡೆ ರಮ್ಯಂ[3]
(ಸೂಕ್ತಿಸುಧಾರ್ಣವಂ, ೧೧-೧)

ಆದಿಮೂರ್ತಿತ್ರಯ ನನೆಯಿಂ ಚೂ
ತದ ಕಳಿಕೆಯಿನೆಸೆವ ಕರ್ಣಿಕಾರದ ಪೂವಿಂ
ಕದಳಿಯ ಸುಳಿಯಿಂದೋಲಗಿ
ಸಿದನೋಲಗದೊಳ್ ನೃಪಾಲನಂ ವನಪಾಳಂ ೨
(ಸೂಕ್ತಿಸುಧಾರ್ಣವಂ, ೧೧-೨)

ಕುರುವಕದಂಕುರಂ ತಿಳಕದುಜ್ವಲಪುಷ್ಪಮಶೋಕದೊಳ್ದಳಿರ್
ಮರುಗದ ಸುಣ್ಗೊನರ್ ದವನದೊಳ್ಗುಡಿ ಮಾವಿನ ಕೆಂದಳಿರ್ ನವಾಂ
ಬುರುಹದ ಮೊಗ್ಗೆ ಸಂಪಿಗೆಯಲರ್ ಸುರಹೊನ್ನೆಯ ಪೂಗಳೆಂಬಿವಂ
[4]ಧರಣಿಪ[4]ಗಿತ್ತು ಮೆಚ್ಚುವಡೆದುತ್ಸವದಿಂ ನುಡಿದಂ ಪ್ರಿಯೋಕ್ತಿಯಂ ೩
(ಜಗನ್ನಾಥವಿಜಯಂ, ೧೪-೪೪; ಸೂಕ್ತಿಸುಧಾರ್ಣವಂ. ೧೧-೩)

ತೊಂಗಲ್ಗೊಂಡಿರ್ದಶೋಕಾತಳಿರನೊಲವಿನಿಂ ತುಂಬಿಗಿಂಪಾದ ಪೂವಂ
ಮಾಂಗಾಯಂ ಪಚ್ಚೆ ಪೊಂಬಾಳೆಯ ಮರುಗನುಸಿಂಪಾದ ಕಬ್ಬಾಳಿವಣ್ಣಂ
ಪೊಂಗಿರ್ದಾ ನೆಯ್ದಿಲೊಳ್ತಾವರೆಯ ಮುಗುಳ್ಗಳಂದದಾವಲಂ ಬೆಳ್ಪುವೆತ್ತಿ
ರ್ದಿಂಗೋಲಂ ಪಣ್ತ ದಾಳಿಂಬಗಳನೊಲವಿನಿಂ ತೋಟಿಗಂ ರಾಯಗಿತ್ತಂ ೪

ಸುರುಚಿರ ಚಂಪಕಪ್ರಸವ ಕಾಂಚನಪುಷ್ಪಚಯಂ ಕರಂ ಮನೋ
ಹರ ನವಮಲ್ಲಿಕಾಮುಕುಳ ಸಂಕುಳ ನಿರ್ಮಳಮೌಕ್ತಿಕಾಕ್ಷತೋ
ತ್ಕರಮನುಜೇಂದ್ರಪಾದದುಪಭೂಮಿಗೆ ಸೂಸಿದನುತ್ಸವಂ ಪೊದ
ಪ್ಪಿರೆ ವನಪಾಲಕಂ ನತಜಳಾಳಕನುದ್ಧತರೋಮಜಾಳಕಂ ೫

---

[1] ಪಕ್ಕೆಯ್ದಿ(ಸ) [2] ಪಡರ್ದಂ(ಸ) [3] ವರ್ಣನೀಯಂ(ಸ) [4] ಮುಂದಿಪ್ಪ(ಅ)

ವನಲಕ್ಷ್ಮಿಗೆ ಮಧುವಿಂ ಯು
ವ್ವನಲಕ್ಷ್ಮಿ ಪೊದಟ್ದು ರಂಜಿಸಿರ್ದಪುದಾ ನಂ
ದನಲಕ್ಷ್ಮಿಗೆ ಭೋಗಾನಂ
ದನಲಕ್ಷ್ಮಿಯನುಂಟುಮಾಡಿಕುಂ ನಿಜಗತಿಯುಂ ೬

ಎಸಗಿದುದೀಗಳೀಗಳೆನಿಸಿಪೊಯ್ವನೆ ತೆಂಗಣಗಾಳಿ ಕೋರಕ
ಪ್ರಸರದೊಳೀಗಳೀಗಳೆಸೆದಪ್ಪುದು ಚೂತಮಹೀಜಮೆಯ್ದೆ ರಾ
ಗಿಸೆ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ ಕಂತು ಬಿಲ್ಲನೀ
ಜಿಸಿನಪನೀಗಳೀಗಳಿದು ಸುಗ್ಗಿಯದೊಂದು ಪೊಡರ್ಪುಗಾಣ್ಬುದುಂ ೭
(ಕಾವ್ಯಾವಲೋಕನಂ, ೩೭೬; ಸೂಕ್ತಿಸುಧಾರ್ಣವಂ, ೧೧-೪)

ಅವಧರಿಸಂಗಜನ್ಮ ತನಿಗರ್ಬಿನ ಸೋರ್ವ ರಸಪ್ರವಾಹದಿಂ
ದವೆ ನನೆಪೊಯ್ದು ಕಾಯ್ ತುಱುಗಿ ಪಣ್ತುದು ಮಾಮರನೆಂದು ಬಂದು ಬಿ
ನ್ನವಿಸೆ ಬಸಂತಕಂ ಪಡೆದು ಭಾವುಸಕಾರಿಯೆನುತ್ತ ಚಿತ್ರನಂ
ಭವನಲರ್ಗಿಲ್ಲನಂತಿರಿಸಿ ಕರ್ಬಿನ ಬಿಲ್ವಿಡಿವಂ ಜನಂಗಳೊಳ್ ೮

ಎಕ್ಕಲದುಂಬಿಯುಂ ಜವಳಿದುಂಬಿಯಿನಟ್ಟುವ ಮಾಲಿದುಂಬಿಯುಂ
ದಿಕ್ಕುವ ಕುಂಚದಂತೆಸೆವ ಗೊಂದಣದುಂಬಿಯಿನಾವ ಮೆಯ್ಯೊಳಂ
ನೊಕ್ಕಳಮೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ
ತಿಕ್ಕನೆ ತೀವಿ ಕೂಡೆ ಬಗೆಗೊಂಡುದು [1]ಪ್ರೋತ್ರ[1]ಜನಂ ಬಸಂತದೊಳ್ ೯
(ಸೂಕ್ತಿಸುಧಾರ್ಣವಂ, ೧೧-೧೦)

ತರಳಾಪಾಂಗದ ಬೆಳ್ಪು ಕೆಂದಳದ ಕೆಂಪೋರೋರ್ವೆ ಪೊಣ್ಮಲ್ ತಳಿರ್
ಮರನಂ ಪೂಮರನಾಗೆ ಪೂಮರನುಮಂ ತಾಂ ಬೇಗದಿಂದಂ ತಳಿರ್
ಮರನಾಗುತ್ತಿರೆ . . ನ್ಮಸೃಷ್ಟಿವಡೆವುತ್ತಂ ಯಾನವಾಂದೊಳಿಕಾ
ಭರ[2]ಣಾ[2] ನಿನ್ನಬಲಾಳಿ ಪೂಡಿಜುವುದಂ ನೋಡೀ ವನಕ್ರೀಡೆಯೊಳ್ ೧೦

ವಸುಧಾಮಂಡಳಮುಂ ಮರುಳ್ಗೊಳಿಪ ರೂಪಾಶ್ಚರ್ಯದಿಂ ನುತ್ತಿನೆ
ಕ್ಸಸರಂ ಮಲ್ಲಿಗೆ ಚಂದನಂ ಮೆಱೆಯೆ ಬೆಳ್ಪಿಂ ಕಂಪು ಸೊಂಪಾದ ಮೆ
ಯ್ಸಿಸದಿಂ ಮನ್ಮಥ ಚಂದ್ರ ಚೈತ್ರರೆ ವನಕ್ರೀಡಾರ್ಥಮೋಲ್ವಂತಿರೇ
ಳ್ದು ಸಭಾಮಂಟಪದಿಂ ತ್ರಿವಿಷ್ಟಪಸಭಾಮಾಣಿಕ್ಯದೀಪಾಂಕುರಂ ೧೧
(ಅನಂತನಾಥಪುರಾಣಂ, ೬-೯೩; ಸೂಕ್ತಿಸುಧಾರ್ಣವಂ. ೧೧-೨೦)

---

[1] ಕೂಡೆ(ಸೂ) [2] ಣಂ(ಸ)

ತೆಗೆವುತ್ತುಂ ಮೇಲುದಂ ಪೆರ್ಮೊಲೆಗೆ ಪರಿಜೆಯುಂ ಹಸ್ತದಿಂಮೊತ್ತುತಂ ಸಾ
ವಗಿಸುತ್ತುಂ ಜೋಲ್ದ ಧಮ್ಮಿಲ್ಲಮನಳವಡಿಸುತ್ತುಂ ಕುರುಳ್ದೊಂಗಲಂ ನೀ
ವಿಗೆ ಕಾಂಚೀದಾಮಮಂ ಸಾರ್ಚುತಮಬಲೆಯರೋರೊರ್ವರೊಂದೊಂದು ಪಾಂಗಿಂ
ಬಗೆಗೊಂಡೇೞ್ಪಿನ್ನೆಗಂ ತನ್ನೊಡನೆ ನೃಪ ವನಕ್ರೀಡೆಗೆಂದೆದ್ದನಾಗಳ್ ೧೨

ಜಡಿವ ಪಡಿಯರರ ಸೊಗಯಿಪ
ನುಡಿಗಾರರ ಮೇಳದರಸುಗಳ ಮೆಲ್ಲನೆ ಕೈ
ಗುಡುವ ಸೊಬಗಿಯರ ನೆರವಿಗ
ಳೊಡನೆೞ್ದಂ ವನಮನೊಸೆದು ನೋೞ್ಪುಜ್ಜುಗದಿಂ ೧೩

ಪಣ್ಣುಗೆ ರತ್ನನಿಚಯದಿಂ
ಕಣ್ಣುಳ್ಳ ಜನಗಳ್ ತಟಿಲ್ಲತಾಭ್ರಭ್ರಮೆಯಿಂ
ಪಣ್ಣಿ ಗೃಹಾಂಗಣತಳದೊಳ್
ಪಣ್ಣಿರ್ದುದು ಪಟ್ಟವರ್ಧನಂ ಭದ್ರಗಜಂ ೧೪

ಅರಸಿ ಪೆಱಗೇಱೆ ಮದವ
ತ್ಕರಿಧವಳಮನೇಱೆ ಮೆಱೆದನವನಿಪಧವಳಂ
ಶರದಂಬುದಮಂ ರೋಹಿಣಿ
ವೆರಸೇಱುವ ಚಂದ್ರನಂತೆ ಪೆರ್ವಾಸನದೊಳ್ ೧೫

ಮಡದಿಂಪೊತ್ತಿದನಾ ಮದಾಂಧಗಜಮಂ ಪಿಂತಿರ್ದ ನಲ್ಲಳ್ಗೆ ಮೆಯ್
ಗೊಡುತಂ ಮೆಲ್ಲನಿೞಿಂಪಿ ಕೈಯುಲಗನತ್ತಲ್ ನೀಡಿ ಕುಂಭಾಗ್ರಮಂ
ಪೊಡೆಯುತ್ತುಂ ಪಿಡಿದಗ್ರಪಲ್ಲವಮನುದ್ದಂತಾಗ್ರಮಂ ಮೆಟ್ಟಿ ಕೈ
ಯೊಡೆಯಿಂ ಲಂಘಿಸಿದಂ ¹ಕೆಲ¹ಕ್ಕೆ ಜವದಿಂ ಸಾಹಿತ್ಯರತ್ನಾಕರಂ ೧೬

(ಅನಂತನಾಥಪುರಾಣಂ, ೬–೯೭; ಸೂಕ್ತಿಸುಧಾರ್ಣವಂ, ೧೧–೨೬)

ರದನದೊಳಿಟ್ಟ ಹೊಂಬಳೆ ಕೊಡಂಕೆಯ ಚಾಮರಮಂದಮಾದ ವ
ನ್ನದ ಮೊಗರಂಬಮಂಬರವನಳ್ಕೞಿವಗ್ರಪತಾಕೆ ಪಲ್ಲವಂ
ಪುದಿದಮುಖಾತಪತ್ರಮುಳಿನಟ್ಟಿರೆ ನಿಟ್ಟನೆ ಪಣ್ಣಿ ಬಂದ ಪ
ಟ್ಟದ ಕರಿಯಂ ನರೇಂದ್ರನೊಸೆದೇಱುವನೇಱೆ ಮುದಂ ಮುಖಾಬ್ಜಮಂ ೧೭

---

¹ನೆ(ಸೂ)

ತೊಡಿಗೆಯ ಬಂಬಲ್ವೆಳಗುಂ
ಬೆಡಂಗುವಡೆದಂಗಕಾಂತಿಯುಂ ತಳ್ಕುವಿನಂ
ಪಿಡಿಯಿಂದಿೞಿದಳ್ ಕಾರ್ಮುಗಿ
ಲೆಡೆಯಿಂ ಕುಡಿಮಿಂಚು ಫೞಿಲನಿೞಿವವೊಲೊರ್ವಳ್ ೧೮

ಕೆಂದಳಿರೇಱಿದ ನವಮಾ
ಕಂದದ ನೆಲೆಗೊಂಬು ಸೆಲಕೆ ಭರದಿಂ ಜೋ
ಲ್ವಂದದೊಳಿೞಿದಳ್ ಕುಚಭರ
ದಿಂದಂ ನಡು ಬಳ್ಕೆ ಪೊನ್ನಪಣ್ಣುಗೆ ಪಿಡಿಯಿಂ ೧೯

ತೆಂಗಾಳಿಯಿನಂಶುಕದ ಸೆ
ಱಂಗು ತೆಱಂಬೊಳೆಯೆ ಪಿಡಿಯನಿೞಿದಳದೊರ್ವಳ್
ತುಂಗಪುಳಿನಾಗ್ರದಿಂ ಧರೆ
ಗಂಗಜನಿೞಿಪುವ ಸಮೀನಕೇತನಶ್ರೀಯೊಲ್ ೨೦

ಸ್ಮರಕೃತಕಾಚಲಶಿಖರಾಂ
ತರಲತೆ ಪೋಲ್ವಾಯ್ದುವೊಂದು ಸೋಗೆಯ ಬಿಣ್ಪಿಂ
ಧರೆಗೆಱಗುವಂತದೊರ್ವಳ್
ಪರವಧು ಬಿಡುಮುಡಿಯನೆಸೆದು ಪಿಡಿಯಿಂದಿೞಿದಳ್ ೨೧

ಪಿಡಿಯಿಂದಿೞಿದಳ್ ಪೆಱವಳ್
ಪಿಡಿಯಿಂ ನಡು ಸಣ್ಣವೆನಿಪ ವಧು ಮದನನ ಕೈ
ಪಿಡಿಯಂತೆಸೆದೀಕ್ಷಿಪರಂ
ಪಿಡಿಯಂಬಿಂ ಕಾಮನಾರ್ದು ಸಾರ್ದಸೆವಿನೆಗಂ ೨೨

ಸರಸಿರುಹಂಗಳಿಂದಿೞಿವ ರಾಜಮರಾಳಿಗಳಂತೆ ಕೇಳಿಭೂ
ಧರಶಿಖರಂಗಳಿಂದಿೞಿವ ಸೋಗೆಯ ಗೊಂದಣದಂತೆ ಬಂದ ಮಾ
ಮರದೆಳಗೊಂಬಿನಿಂದಿೞಿವ ರಾಜಶುಕಾವಳಿಯಂತೆ ತೇರ್ಗಳಿಂ
ಕರಿಣಿಗಳಿಂದ[1]ಮಂದಣದಿ[1]ನೇನಿೞಿತಂದರೊ ವಾರನಾರಿಯರ್ ೨೩

(ಅನಂತನಾಥಪುರಾಣಂ, ೭–೩: ಸೂಕ್ತಿಸುಧಾರ್ಣವಂ, ೧೧.೨೭)

---

[1] ಮಾಂದೊಳ(ಸ)

ಸಮೆದ ಪಿಕಸ್ವನವಾದ್ಯಂ
ಭ್ರಮರೀರವಗೀತವನಿಲಲುಳಿತ ಲತಾನೃ
ತ್ಯಮನೊಡರ್ಚುವಿನಂ ಸಂಗೀ
ತಮನುಪವನರಂಗಮಂ ನೃಪೇಂದ್ರಂ ಪೊಕ್ಕಂ ೨೪

ಅನಿಲಾಂದೋಳಿತಪಾದಪಾಗ್ರವಿಲಸತ್ಪುಷ್ಪೋತ್ಕರಂ ಸೇಸೆಯಾ
ಗೆ ನವೋದ್ಭಿನ್ನ ಸರೋಜಮಂದಮಧುಗಂಧವ್ರಾತಂಭೃಂಗಾಂಗನಾ
ನಿನದಂ ಮಂಗಳಗೀತಮಾಗೆ ಪಿಕಕೋಕಾನೀಕನಾನಾವಿಧ
ಧ್ವನಿಗಳ್ ವಾದ್ಯನಿನಾದಮಾಗೆ ನಡೆದಂ ಸಂಗೀತಗಂಗಾಧರಂ ೨೫

ವನಕೇಳಿಗೆ ದಿಗ್ವನಿತಾ
ಜನಮುಂ ತಳರ್ವಂತೆ ಕಂತು ಭೋರೆನೆ ತೂರ್ಯ
ಸ್ವನಮಖಿಳಕಾಮಿನಿಯರ್
ಘನ[ದ೬]ಪರಪತ ಸಹಸ್ರದಿಂದಂ ತಳೆದರ್ ೨೬

ಅಂಗದರತ್ನಕೌಸ್ತುಭಮಣಿದ್ಯುತಿಪಲ್ಲವಿತಂ ಮುರಾರಿ ಬಂ
ದಂ ಗಮನಪ್ರಮಾಂಬು ರಣಭೂಷಣಮೌಕ್ತಿಕಕುಟ್ಮಳಪ್ರಸೂ
ಷಾಂಗವಧೂಜನಂ ಬರೆ ವಿಳಾಸದ ಜಂಗಮಕಲ್ಪಭೂರುಹಂ
ಜಂಗಮಕಲ್ಪವಲ್ಲರಿಗಳಿಂ ಪರಿವೇಷ್ಟಿತಮಾಗಿ ಬರ್ಪವೋಲ್ ೨೭

ಸಲ್ಲಲಿತಾಂಗಿಯರ್ ಮಣಿವಿಭೂಷಣಕಾಂತಿಯಿನೀಕ್ಷಣಾಂಶುವಿಂ
ಪಲ್ಲವಪುಷ್ಪಜಾಲಮನಪೂರ್ವಮನೆಯ್ದೆ ಕುಚಾಳಿಗಿತ್ತನಿ
ತ್ತಲ್ಲದೆ ಕೋಮಲಾಂಗರುಚಿಯಿಂ ನಖರೋಚಿಯಿನಧ್ವವಲ್ಲಿಗಂ
ಪಲ್ಲವಪುಷ್ಪಮಂಜರಿಯನಾಗಿಸುತಂ ನಡೆದರ್ ವನೋರ್ವಿಯೊಳ್ ೨೮

ಎಳಲತೆಗಳ್ಗೆ ಸೋಗೆಗೆ ಸರೋಜಕುಲಕ್ಕೆ ಪಿಕಕ್ಕೆ ತಮ್ಮ ತೋ
ಳ್ಗಳ ಕುಡಿ ನೀಳ್ದ ಸೋರ್ಮುಡಿ ಮೊಗಂ ಗುಡಿ ಮೆಲ್ನುಡಿ ಮತ್ಸರಂಗಳಂ
ಬಳೆಯಿಸಿ ಮುತ್ತುವಂತೆ ಬನಮಂ ನಡೆದರ್ ಮೃಗನೇತ್ರೆಯರ್ ಸಮು
ಜ್ವಳಮುಖಬಿಂಬೆಯರ್ ಕುಟಿಲಕುಂತಳೆಯರ್ ವಿಚಳಲ್ಲತಾಂಗಿಯರ್ ೨೯
(ಅನಂತನಾಥಪುರಾಣಂ, ೭-೭; ಸೂಕ್ತಿಸುಧಾರ್ಣವಂ, ೧೧-೨೯)

ನಡೆಗೊಳಲಂಜೆ ನುಣ್ಗುರುಳೊಳಾಜಿಡಿ ತೋಳ್ಗಳೊಳಳ್ಳೆಗೊಂಬು ಸೋ
ರ್ಮುಡಿಗಳೊಳಿಪ್ಪ ಸೋಗೆ ಪೊಸಪೆರ್ಮೊಲೆಯೊಳ್ ಪೊಣರ್ವಕ್ಕಿ ಸಿಚ್ಚಲುಂ
ಕಡುಮುಳಿಸುತ್ತಮಿರ್ಪಸನೆ ಮೇಲೊಳಕೊಂಡಪೆನುತ್ತ ಕಾಯ್ದು ಘಾ
ಳಿಮಾನವ್ರೋಲಾ ವನಕ್ಕೆ ನಡೆತಂದುದು ಸೆಂಡಿನ ತಂಡಮೇಟಿಕ್ತ್ಯಿಯಿಂ ೩೦

ಹಿಮಕೃತ್ಪಂಕ್ತಿಯೊ ಕಾರ್ಮುಗಿಲ್ಗಳೊ ರಥಾಂಗಶ್ರೇಣಿಯೋ ಕಾಮಬಾ
ಣಮೊ ಪೇೞೆಂಬಿನಮಾಸ್ಯಕೋಮಳತೆಯಿಂ ಭೃಂಗಾಳಕಾನೀಕದಿಂ
ದಮರ್ದುತ್ತುಂಗಕುಚಂಗಳಿಂ ಸದಾಪಾಂಗಜ್ಯೋತಿಯಿಂ ಚಿತ್ರವಿ
ಭ್ರಮಮಂ ಸಾಲಿಡುವಾ ವನಕ್ಕೆ ಮುದದಿಂದೆಯ್ದಿತ್ತು ಕಾಂತಾಜನಂ ೩೧

ಧ್ವನಿಯಂ ಕೋಗಿಲೆಗಳ್ಗೆ ಮೆಲ್ನುಡಿಗಳಂ ಕೀರಾಳಿಗಳ್ಗಾತ್ಮಕಂ
ಪನಮಂ ಕೋಮಲವಲ್ಲಿಗಳ್ಗಲಸಯಾನಪ್ರೌಢಿಯಂ ಹಂಸೆಗ
ಳ್ಗೆ ನವೀನಂ ಮಿಗೆ ನೋಟಮಂ ವನಮೃಗಕ್ಕಾನಂದಸೌಭಾಗ್ಯಗುಂ
ಘನಮಂ ತದ್ವನದೇವಿಯರ್ಗೆ ಸಲಿಸುತ್ತೆಯ್ದಿತ್ತು ಕಾಂತಾಜನಂ ೩೨

ಚಾಪಲದೃಷ್ಟಿಯಿಂ ಕೆಲವು ಶಾಖೆಗಳೊಳ್ ಕೆಲವಂಘ್ರಿಪಂಗಳೊಳ್
ತೂಪಿಱಿದುನ್ನತಸ್ತನದ ಸೋಂಕುಗಳಿಂ ಕೆಲವು ಕುಜಂಗಳೊಳ್
ನೂಪುರರಂಜಿತಾಂಘ್ರಿತಳಸಂಗಮದಿಂ ಕೆಲವೃಕ್ಷದೊಳ್ ಪಿಕಾ
ಳಾಪೆಯರೊಲ್ದು ಪಲ್ಲವಮನಿತ್ತೊಲವಿಂ ನಡೆತಂದರೞ್ತಿಯಿಂ ೩೩

ಸ್ಮರರಾಜಂ ವನಪಾಲನಾಗೆ ರತಿ ಲಾವಣ್ಯಪ್ರವಾಹೋತ್ಕರಂ
ಪರಿಸೀರಾಗೆ ನಿರಂತರಂ ಋತುಗಳಾಱುಂ ಕಾಪಿನಾಳಾಗೆ ಚೈ
ತ್ರರವೋದ್ಯಾನದ ಚೆಲ್ವನೊತ್ತರಿಸಿ ಕೇಳೀಶೈಲ ಕೇಳೀಸರೋ
ವರ ಕೇಳೀಗೃಹಮೆಂಬಿನಂ ತಳೆದು ಕೇಳೀನಂದನಂ ರಂಜಿಕುಂ ೩೪

ಕುಸುಮರಸಂಗಳೊದ್ದೆ ತನಿವಣ್ಣ ರಸಂಗಳ ಸೋನೆ ಸಾರಕೋ
ಳ್ಗೆಸಱೆಳನೀರ ಜೆಂಜೆ ಸೋನೆಯೊಳ್ಗೆಸಱೆಂಬಿವಱಿಂದಮೆಲ್ಲಯುಂ
ಬಸನದ [1]ಬಾೞ್ತೆ[1]ಯುಪ್ಪಿಡೆಗಳಿಲ್ಲದೆ ನಲ್ಲರನಂಗರಾಗಮು
ರ್ಬಿಸೆ ಭರದಿಂ ತೊೞಲ್ದಱಸುವರ್ ಬನದೊಳ್ ಕೃತಕಾಚಲಂಗಳಂ ೩೫
(ಮಲ್ಲಿನಾಥಪುರಾಣಂ, ೨–೩೫; ಸೂಕ್ತಿಸುಧಾರ್ಣವಂ, ೪–೪೦)

ಪುಳಿನತಮಾಲಕೋಮಲದ ಶಾಖೆಯ ಚೆಲ್ವುವನೆಯ್ದೆ ಗೆಲ್ದವಿ
ಪ್ಪುಲಘುಕಟೀತಟಂಗಳರುಣಾಂಘ್ರಿತಳಂಗಳ ದೋರ್ಲತಾಯುಗಂ
ಗಳ ಜಯತೂರ್ಯನಾದಮೆನೆ ಕಾಂಚಿಯ ಮೆಲ್ಲುಲಿಗೆಜ್ಜೆಯಿಂಚರಂ
ವಳಯದ ಸುಣ್ಣರಂ ನೆಗೞೆ ನಂದನದೊಳ್ ಸುೞಿವರ್ ಲತಾಂಗಿಯರ್ ೩೬

---

[1] ಮಾೞ್ಕೆ(ಸ)

ತಿಲಕಂ ನೋಡೆ ಪ್ರಿಯಂಗು ಮುಟ್ಟೆಯೊಳಿವೂವ್ ಕೊಂಡಾಡೆ ಪ್ರಕ್ಷೋತ್ಪಲಂ
ಮುಳಿಸಿಂ ಚಿಂತಿಸೆ ಲೊಕ್ಕಿ ಸುಯ್ಯೆ ಸುರಗಿ ಪ್ಕಂ ಪಾಡೆ ಸಜ್ಜಂಪಕಂ
ನಲವಿಂ ನಕ್ಕೊಡಶೋಕೆ ಮೆಟ್ಟೆ ಬಕುಳಂ ಗಂಡೂಷಿಸಲ್ ತೋರಣಂ
ಸಲೆಯುಪ್ಪಲ್ ತರು ಪೂತವಾ ಸತಿಯರಿಂದಿಂತುಂ ದಶಂ ದೋಹಳಂ ೩೭

ಎನ್ನಯ ನಲ್ಲನ ನೊಸಲಲಿ
ಚೆನ್ನಿನೊಳಿಪ್ಪುದಜ ನಾಮವಿದಕೆಂದು ಕರಂ
ಕನ್ನೆ ನಿರೀಕ್ಷಿಸೆ ಪೂ ತಳಿ
ರಿಂ ನೆಗೞ್ದುದು ವಿದುಷ್ಯೈಕತಿಲಕಂ ತಿಲಕಂ (?) ೩೮

ಮಾಕಂದಗಾಸೆಯಾದುದು
ಲೋಕಕೆ ಸುರಭೂಜವೆನಿಸಿತೆಂದಬ್ಜಾನನೆ
ಬೇಕೆಂಬೊಲು ಕೊಂಡಾಡಲ್
ಮಾಕಂದಂ ತಳಿತು ಪೂತು ಕಾಯ್ತುವುವೆತ್ತಂ ೩೯

ಬಂದಪನೆಂದಿನಿಯಂ ಪೋ
ಗಿಂದುಂ ಬರಲಿಲ್ಲ ಮಧುವೆ ಬಂದುದೆನುತ್ತಂ
ಇಂದುಮುಖಿ ಚಿಂತಿಸಲ್ ಪೂ
ವೊಂದಿದವಲ್ಲಲ್ಲಿ ಕರ್ಣಿಕಾರದ್ರುಮದೊಳ್ ೪೦

ಪರಿರಂಭ ಚುಂಬನಂಗಳ
ಸುರತದಿ ತನ್ನಿನಿಯ ಮಾೞ್ಪುದಂ ನೆನೆಯುತ್ತಂ
ವಿರಹೋನ್ಮಾದಿನಿ ಸುಯಿತರೆ
ಕರಮೆಸೆದುದು ಸಿಂಧುವಾರ ಪೂ ತಳಿರಿಂದಂ ೪೧

ಮಧುರಂ ಮಂದರ ತಾರಕ
ದೊದವಿಂದಂ ಶುದ್ಧ ಸಾಳಗಂ ಸಂಕೀರ್ಣದಿ
ಸುದತಿ ನೆಱೆ ಪಾಡೆ ಪೂ ತಳಿ
ರೊದವಿರ್ದುದು ಬೇಗದಿಂದೆ ಸುರಹೊನ್ನೆಯೊಳಂ ೪೨

ಇನಿಯನಿದಿರಲ್ಲಿ ಸುೞಿಯಂ
ಮುನಿಸಿದಾತಂ ಪೋಗೆ ತನ್ನ ಕೋಪಂ ತೀವ್ರಂ
ಎನುತುಂ ಬೇಡಿಯೆ ಮನ್ಮಥ
ನೆನುತಂ ಸತಿ ನಗಲು ಪೂತವಾ ಚಂಪಕಗಳ್ ೪೩

ತನ್ನರುಣದಳಿರ್ಗಳಿಂದಲಿ
ಯೆನ್ನಡಿಗೀಡಪ್ಪುದೆಂಬ ಕಿನಿಸಿಂದಂಗನೆ
ಪನ್ನತಿಕೆಯಿಂದಲೊದೆಯಲ್
ಸನ್ನುತ ಪಲ್ಲವವಶೋಕೆಯೊಳ್ ರಂಜಿಸುಗುಂ ೪೪

ವಾರುಣಿಯನೀಂಟೆ ದಣಿವುತ
ಸಾರಸಮುಖಿ ಮುಕ್ಕುಳಿಸಿಯುಗುಳಿಲ್ಕಾಗಳ್
ಪೂರೈಸಿ ಪೂತು ತಳಿತುದ
ಪಾರಂ ಬಕುಳದ್ರುಮಾಗ್ರದೊಳಗನವರತಂ ೪೫

ಎಡೆಯುಳವನಱಿಯದವನಂ
ಪಡೆದಮರ್ದಪ್ಪುವಡಱಿಂದಲಿಂತದನಾಲಿಂಗಿ
ಪ್ಪುದು ಲೇಸೆನುತಂ ತಳ್ಕಿಸೆ
ಪುದಿದೆಸೆದುವು ಪೂಗಳೆಯ್ದೆ ಕುರವಕ ಕುಜದೊಳ್ ೪೬

ಪರಿತಂದುತ್ಸಾಹದಿಂದರ್ಚಿಸಿದರೊಸೆದು ವಾಸಂತಿಯಂ ಸಾಂದಿನಿಂ ಮಾ
ಮರನಂ ಶ್ರೀಖಂಡದಿಂ ಮಲ್ಲಿಗೆಯನಗರುವಿಂ ಚಂಪಕಾನೀಕಮಂ ಕ
ಸ್ತೂರಿಯಿಂ ಕಂಕೆಲ್ಲಿಯಂ ಕಂಪಿಡಿದ ಕಮಳದಿಂ ನಾಗಮಂ ನೆಯ್ದಲಿಂ ಪಾ
ದರಿಯಂ ಕಾಶ್ಮೀರದಿಂ ಕೇಸರಮನಮಳ ಕರ್ಪೂರದಿಂ ಕಾಂತೆಯರ್ಕಳ್

(ಲೀಲಾವತಿ, ೧೩-೬೪)

ಬಂಬಲ್ಗುರುಳೊಡನಾಡಿಗೆ
ತುಂಬಿಗೆ ಪಗೆಯೆಂದು ಮುಳಿದು ಸಂಪಗೆಯೆಸಟಿಂ
ತುಂಬಿಗುರುಳ್ಗೊಪ್ಪಿಸಿದಪ
ಳಂಬಿನಮೊಸಟ್ಗಿಳನೆ ತಿಱಿದು ಸೂಡಿದಳೋರ್ವಳ್ ೪೭

(ಅನಂತನಾಥಪುರಾಣಂ, ೭-೧೪, ಸೂಕ್ತಿ ಸುಧಾರ್ಣವಂ, ೧೧-೩೭)

ಸಱಿಸುಯ್ಗೆ ತುಂಬಿಗಳ್ ಬಂ
ದೆಱಗೆ ಕರಾಂಬುಜದಿ ಕಮಳಮುಖಿ ಸೋವುತ್ತುಂ
ಮಿಱುಗುವ ನೀಲದ ಬಟ್ಟಿನ
ಕಿಱುಕಲ್ಗಳನಾಡುವಂತೆ ಸತಿ ಸೊಗಯಿಸಿದಳ್ ೪೮

ನೀರೇಜವದನೆ ತಿಱಿದಳ್
ತೋರಿದ ಮಲ್ಲಿಗೆಯ ಮುಗುಳನಾಗಳೆ ಕಾಶ್ಮೀ
ರಾರುಣ ಕರಪಲ್ಲವದಿಂ
ತಾರಗೆಯಂ ತಿಱಿವ ಪೂರ್ವಸಂಧ್ಯಾಂಗನೆವೋಲ್ ೫೦

(ಲೀಲಾವತಿ, ೧೩-೭೭; ಸೂಕ್ತಿ ಸುಧಾರ್ಣವಂ, ೧೧-೪೨)

ಮರುಳೊಡನಾಡಿದ ಕತದಿಂ
ಮರುಳಾದನದಲ್ಲದಂದು ಸೂಡನೆ ಶಶಿಶೇ
ಖರನೆಂದು ಕೊಯ್ದಳೊರ್ವಳ್
ಪರಿಮಳಮಂ ಬೀಱುತಿರ್ಪ ಹೊಂಗೇದಗೆಯಂ ೫೧

(ಜಗನ್ನಾಥವಿಜಯಂ, ೧೪-೮೪; ಸೂಕ್ತಿ ಸುಧಾರ್ಣವಂ, ೧೧-೪೬)

ಸುರಹೊನ್ನೆಯ ಮುಗುಳಂ ಕೊ
ಯ್ದರವಿಂದದ ನೂಲೊಳೊಪ್ಪೆ ಕಟ್ಟಿದಳೊರ್ವಳ್
ಪರಿಮಳಮುಳ್ಳೆಳೆಮುತ್ತಿನ
ಸರಮೆತ್ತಣಜೆಂದು ಮುಗ್ಧೆಯರ್ ಮುತ್ತುವಿನಂ ೫೨

(ಅನಂತನಾಥಪುರಾಣಂ, ೭-೨೦, ಸೂಕ್ತಿಸುಧಾರ್ಣವಂ, ೧೧-೪೮)

ಅರ್ಚಿಸದಾಯಲಾಗ ಪೊಸಪೂಗಳನಂದಿವೆ ಚಂದನಚ್ಛಟಾ
ಚರ್ಚೆಗಳೆಂಬವೋಲಡಸಿ ನೋಡಿ ನಖಾಂಕುರಕಾಂತಿದಾಮದಿಂ
ದರ್ಚಿಸುವಂತೆ ನೀಡಿ ನಳಿತೋಳನಲಂಪಿನೊಳಾಯ್ದು ಕೊಯ್ದು ಕೈ
ಮುರ್ಚಲ ತೋರಮಲ್ಲಿಗೆಗಳಂ ತಳಿರ್ವಟ್ಟಲೊಳೊರ್ವಳೊಟ್ಟಿದಳ್ ೫೩

(ಲೀಲಾವತಿ, ೧೩-೭೬)

ವದನದ ಕಂಪನೊಪ್ಪೆ ಸೆಳೆಗೊಂಬಿನ ಪೂಗಳನೊಪ್ಪೆ ಸೂಱುಸೂ
ಱಿಡೆ ಮುಸುಱುತ್ತಲಿರ್ಪ ಮಱಿದುಂಬಿಯನೀಯಡೆ ಸುಯ್ಯೆ ನಾಸಿಕಾ
ವಿದಳಿತ ಚಂಪಕಸ್ಪಸಿತ ಸೌರಭಸೊರ್ವಳಪೂರ್ವರೂಪಿನಾ
ಗ[1]ದ[1] ಸಗೆವೊಗಳಂ ಬಯಸಿ ಬೆಟ್ಟನೆ ಬಿಚ್ಚಿತನಾ[2]ಯ್ದು[2]ಳಟ್ತ್ರಿಯಿಂ ೫೪

(ಲೀಲಾವತಿ, ೧೩-೭೭)

---

[1]ದೆ(ಸ) [2]ದ(ಸ)

ಅಡರ್ದ ಮೊಲೆಗೊಂಡ ಬಿಣ್ಪಿಂ
ನಡು ಬಳಬಳ ಬಳ್ಕಿ ನಿಲ್ಕಲಾಱದೆ ತಳಿರಂ
ತುಡುಕುವ ಕೆಳದಿಯರ ಕುಚಂ
ಪಿಡಿದೆತ್ತಿದಳೊರ್ವಳಬಲೆ ಸಂಭ್ರಮದಿಂದಂ ೫೫

ಕಾವಲಿರಿವಯಸ್ಕಾಂತದ
ಪೂವಂ ಚುಂಬಿಸುವ ಪಚ್ಚೆವಟುಗಳವೊಲಿಂ
ದೀವರದಿನಬಲೆ ಗೊಂಚಲ
ಪೂವುಗಳಂ ಪೊಡೆಯೆ ಪತ್ತಿ ಮುತ್ತಿದವಳಿಗಳ್ ೫೬

ಗಾವಳಿಗೊಂಡೆಱಗಿದ ಭೃಂ
ಗಾವಳಿಯುಂ ಸೋವಳಿಂದುಬಿಂಬದ ಕಱತಯುಂ
ಸೋವ ಶರಲಕ್ಷ್ಮಿಯವೊಲಿಂ
ದೀವರದಳನಯನೆ ಮಲ್ಲಿಕಾಮಂಜರಿಯಂ ೫೭

ಮೃಗಲೋಚನೆಯೊರ್ವಳ್ ಸಂ
ಪಗೆಯೊಳ್ಸ್ರಗುಳ್ಗೊಯ್ದ ಮುಗುಟಿತ ಚಳಕ್ಕೆ ಕರಕಾಂ
ತಿಗಳಿಂ ಮಾಣ್ದಳ್ ಮುಯ್ವ್ವಂ
ಮುಗುಳಂ ಕೊಂಡರಲನೀವವೊಲ್ ಮಲ್ಲಿಗೆಯಂ ೫೮

ಎಳಲತೆಯನಂ[೧]ಗ[೧]ದಿಂ ಕೋ
ಕಿಳಮುಂ ಕಳರವದಿ[೨]ನಾಕೆ[೨] ಗೆಲೆಯುಲರ್ವಟಿತಯುಂ
ತಳಿದುದೆನೆ ನಿಟ್ಕಿಲಾಱದೆ
ಸೆಳೆಗೊಂಬಂ ಲಲನೆಯಲುಗೆ ಸೂಸಿದುವಲರ್ಗಳ್ ೫೯

(ಲೀಲಾವತಿ, ೧೩-೮೬ ; ಸೂಕ್ತಿಸುಧಾರ್ಣವಂ, ೧೧-೪೪)

ಕೂಡಿ ತೊಟಿಲ್ವಿನಿಯನೊಳ
ಟ್ಟಾಡಿದ ಕಣ್ಣಾ[೩]ಕೆ[೩] ಕೆಳದಿಯಾವಕ್ಕಿನಿಸಂ
ನೋಡಲೊಡನಲ್ಲಿಗಲ್ಲಿಗೆ
ಸೂಡಿದವೊಂದೆರಡು ಕಳಿಕೆ ತಿಳಕದ್ರುಮದೊಳ್ ೬೦

(ಲೀಲಾವತಿ, ೧೩-೯೪)

---

[೧]ದ(ಸ, ಅ) [೨]ನಿಕ್ಕಿ(ಸೂ) [೩]ಲಿ(ಸ)

ಸ್ತನಮುರದೊಳುರ್ಚಿತೆನೆ ಮಿಗೆ
ಮೊನಸಿದ ಮೆಯ್ನವಿರೆ ನಾಂಟಿತೆನೆ ಕೊಂಬಿನ ಪೂ
ವನೆ ತೋಱಿ ತಿಱಿಯಲೆತ್ತೆನೆ
ತನು ಬಿರಿವಿ[1]ನಮು[1]ಪ್ಪಿದಭಿನವಂ ನವವಧುವಂ ೬೧

(ಲೀಲಾವತಿ, ೧೩-೯೬)

ಅಲರ್ಗೊಂಬನೇಱಿಯಿಟಿಯದ
ಜಲಜಾನನೆ ಭೃಂಗಭಯಮನಿತ್ತಿನಿಯನ[2] ಪೋ
ಲಲಘುಕುಚೆ ಬೆರ್ಚಿ ಬೀೞ್ವಳ್
ಪೊಲೆಯುರಮಂ ನಾಂಟೆ ಬೆನ್ಗೆ ಬಳೆವಿನಮೊರ್ವಳ್ ೬೨

(ಲೀಲಾವತಿ, ೧೩-೧೦೧)

ಒಂದು ಕುಚಮುರದೊಳುರ್ಚಿರೆ
ಚಂದನಧವಳಿತನನಪ್ಪಿ ಪೂಗೊಯ್ದಳ್ ತ
ಳ್ತಿಂದುಧರನಂಗದಿಂ ಮುಳಿ
ಸಿಂದಂ ಮಿಗೆ ಮುರಿದು ಮುಗುಟ್ದಿ ಗಿರಿಜೆಯೊಲೊರ್ವಳ್ ೬೩

(ಲೀಲಾವತಿ, ೧೩-೧೦೨; ಸೂಕ್ತಿಸುಧಾರ್ಣವಂ, ೧೧-೨೦)

ಎಲೆ ಜಲಜಾಸ್ಯೆ ನಿನ್ನ ನಯನೋತ್ಪಲಮಂ ಮಱಿದುಂಬಿ ಪತ್ರವಿ
ತ್ತಲೆ ಕವಿತಪ್ಪುದೆಂದವಳ ಕಣ್ಗೆ ನಿಮೀಲನಮಂ ನಿಮಿರ್ಚಿ ಕಾ
ದಲಳಧರಾಗ್ರಮಂ ಸವಿದು ಪೀಡಿಸಿತೀಕೆಯ ವಕ್ತ್ರಪದ್ಮಮಂ
ನಲಿದಳಿಯೆಂದು ತಾಂ ಪುಸಿದನಾಕೆಗೆ ನಲ್ಲಳ ಸೀತ್ಕೃತಂಗಳಂ ೬೪

(ಲೀಲಾವತಿ, ೧೩-೧೦೩; ಸೂಕ್ತಿಸುಧಾರ್ಣವಂ, ೧೩-೨೫)

ಮೊಗಮೀಸೆ ಬಾರದೋಪರ್
ಸೊಗಯಿಸೆ ಪೆಣ್ಬಾರಿಜನಿಟ್ಟು ಬರೆ ಪೂದಿಱಿವ
ಚ್ಚಿಗದಿಂದಮೆಯ್ದೆ ಮೆಚ್ಚಿದ
ಬಗೆಯಿಂ ಸ್ಮರಕೇಳಿಗೆಳಸಿದರ್ ಪುಂಶ್ಚಲಿಯರ್ ೬೫

(ಲೀಲಾವತಿ, ೧೩-೧೦೪; ಸೂಕ್ತಿಸುಧಾರ್ಣವಂ, ೧೧-೬೬)

---

[1]ನೆಗ(ಸ) [2]ಮೊಗಕ(ಸ)

ಪೊಸತಿಕ್ಕುವಂತೆ ಕಾಮನೆ
ಪೊಸಸಿಧಿಯಂ ಕಾಮಕಾಳಸರ್ಪಂಗೊಲವಿಂ
ಪೊಸಮಲ್ಲಿಗೆಯುಮನಡಕೆಯ
ಸಸಿಯುಮನೊಸೆದೊರ್ವಳಿಕ್ಕಿದಳ್ ಸೋರ್ಮುಡಿಯೊಳ್ ೬೬
(ಲೀಲಾವತಿ, ೧೩-೧೦೮; ಸೂಕ್ತಿಸುಧಾರ್ಣವಂ, ೧೧-೫೧)

ಕವಿಧವಳಂ ಕುವಲಯಮಂ
ಕಿವಿಯೊಳ್ ಕುಡೆ ನೂಂಕಿದುದು ಕದಂಪಿನ ಪುಳಕಂ
ಯುವತಿಗೆ ಬೇಱಿತೇಕೆಯೊ ಕ
ನ್ನವುರಂ ಕಡೆಗಣ್ಗಳಿರ್ದವೋಲಿಂಬಿನೆಗಂ ೬೭
(ಲೀಲಾವತಿ, ೧೩-೧೦೯)

ಅಡಸಿ ಪೊದೞ್ದ ಪೆರ್ಮೊಲೆಗೆ ಕುಟ್ಮಳಹಾರಮನೞ್ತಿಯಿಂದೆ ತಾಂ
ಕುಡುವ ಪದಕ್ಕೆ ಮುನ್ನಮೆಸಗೀವುದು ಕಾಂಚಿಯನೆಂದು ಬಂದವೋ
ಲುಡೆಯನಡುರ್ತು ನೂಂಕಿ ನೆಗೆದಾ ರಮಣೀರಮಣಕ್ಕೆ ಮುನ್ನಮೇಂ
ಕುಡುವುದು ಪಂಗೆ ಬಲ್ಮುಗುಳ ಕಾಂಚಿಯನಾ ರತಿರಾಗಮೋಹಳಂ ೬೮
(ಲೀಲಾವತಿ, ೧೩-೧೧೦)

ಸುದತಿಯರಂಘ್ರಿಪಾತದೊಳೆ ಪಲ್ಲವಿಸಿರ್ದನುರಕ್ತವೃತ್ತಿ ಪೆ
ರ್ಚಿದ ಸುಮದಶ್ಶಿಳೀಮುಖವಿಕಾರಮದೇತರುರಾಜಿ ನಮ್ಮೊಳಿಂ
ತಿದು ಸಮವಾಗಲಾಂ ಸಲೆ ಸಶೋಕನೆನಾಪನಶೋಕನಾದನಿಂ
ತಿದು ವಿಪರೀತಮೆಂದು ಪೊಗೞ್ದಂ ಪರಿಹಾಸಕನಂದಶೋಕಮಂ ೬೯

ಆಸವಗಂಧದಿ ಒಳಮುಖ
ವಾಸನೆಯೊಳ್ ದೊರೆಯಿದೆಂದು ನೋಡಿದನೊಲವಿಂ
ಕೇಸರಮಂ ಕುಸುಮರಜೋ
ದೂಸರಮಂ ವನಮಹೀರುಹಾಗ್ರೇಸರಮಂ ೭೦

ಪುಳಿನತಮಾಲಪಲ್ಲವದ ಕೋಮಳ ಶಾಖೆಯ ಚೆಲ್ವನೆಯ್ದೆ ಗೆ
ಲ್ದ ಲಘುಕಟೀತಟಂಗಳರುಣಾಂಘ್ರಿತಳಂಗಳ ದೋರ್ಲತಾಯುಗಂ
ಗಳ ಜಯತೂರ್ಯನಾದಮೆನೆ ಕಾಂಚಿಯ ಮೆಲ್ಲುಲಿಗೆಜ್ಜೆಯಿಂಚರಂ
ವಳಂಬಿದ ಸುಣ್ಣಾರಂ ನೆಗೞೆ ನಂದನದೊಳ್ ಸುಳಿದರ್ ಲತಾಂಗಿಯರ್ ೭೧

ದರಹಾಸಶ್ರೀರುಚಿಯೊಳ್
ಬೆರಸಿದ ತನ್ನಧರಕಾಂತಿಯಿಂಪೊಪ್ಪುವುದಂ
ತರಳಾಕ್ಷಿ ಕೊಯ್ದಳರಳೊಳ್
ಬೆರಸಿದ ಮಾಂದಳಿರ ತೋರತೊಂಗಲನೊರ್ವಳ್ ೭೨

ಉಂಗುಟನುಂ ಮಹೀತಳದೊಳೂಱಿ ಮಡಂ ನಿಮಿರಲ್ಕೆ ಸಿಲ್ಕಿ ನಿಂ
ದಂಗದ ಭಂಗಿ ಕೆಂಗೊಳಿಸೆ ವಾಮಕರಾಂಚಿತ ಶಾಖೆ ಶೇಖರ
ಕ್ಕಂಗನೆ ಕೊಯ್ದಳಂದಸುಗೆಯೊಕ್ಕಳಿರಂ ನಖರಾವಳೀಮಯೂ
ಖಂಗಳನೊಡರ್ಚೆ ಸುಣ್ಪೆಸೆವಶೋಕದೊಳಂ ಸಿತಪುಷ್ಪಜಾಲಮಂ ೭೩

ವಳಯ ಝಣತ್ಕೃತಿ ಸೊಗಯಿಸೆ
ನಳಿತೋಳಂ ನೀಡಿ ನಯನರುಚಿ ರುಚಿರತ್ನೋ
ಜ್ವಲತಿಲಕದೊಳ್ ವರಸ್ತ್ರೀ
ತಿಲಕಂ ತಿಲಕಕ್ಕೆ ಕೊಯ್ದಳರಲನದೊರ್ವಳ್ ೭೪

ವಲ್ಲಭನ ತೋಳ ಸೋಂಕುಂ
ಮಲ್ಲಿಗೆಯುಂ ಕುಂದದಿರ್ಕೆ ಸಂತತಮೆನಗಾ
ನೊಲ್ಲೆಂ ಪೆಱತನೆನುತ್ತಂ
ಮಲ್ಲಿಗೆಯಂ ಪಿಕನಿನಾದೆ ಕೊಯ್ವಳದೊರ್ವಳ್ ೭೫
(ಸೂಕ್ತಿಸುಧಾರ್ಣವಂ, ೧೧-೪೫)

ಪರಿಮಳಮೆಂಬುದು ಕುಸುಮೋ
ತ್ಕರಿಮಳಮೆನಿಸಳಿಗಳೆಂಜಲಿಸಿದ ಪ್ರಸೂನೋ
ತ್ಕರಮೆನುತಲಬಲೆ ಕೊಂಬಂ
ಕರದೊಳ್ ತೆಗೆದಾಯ್ದಳೆಸೆವ ಸಂಪಗೆಯರಲಂ ೭೬

ಇರೆ ಕಂಪುಮೊಳವೆ ಸೌರಭ
ಮಿರದಸ್ಥಿರವರ್ಣಮಸ್ಥಿರಾಮೋದದ ಮಿ
ಕ್ಕರಲೇಬಂದಪೆನುತ್ತಂ
ಸುರಗಿಯ ಬಿರಿಮುಗುಳನಾಯ್ದು ಕೊಯ್ದಳದೊರ್ವಳ್ ೭೭

ಪಾಸಿನೊಳೆಸೆದಿರ್ದೊಡದುಂ
ಬೇಸಗೆ ಸೆಲೆ ಮುಡಿಗೀವುತೆ ತಾನಳಪಡುಗುಂ
ವಾಸನೆಯನೀಯುತೆಂದು ವಿ
ಳಾಸಿನಿ ಪರಳಾಯ್ದಳೆಸೆವ ಸೇವಂತಿಗೆಯುಂ ೭೮

ಈ ತರುವಿಂಗೆ ನುಂ ನಿಜಪೊಳಿಲ್ಲದ ಪಲ್ಲವಮಾದುದೀಕೆಯಿಂ
ಕೌತುಕಮೆಂಬಿನಂ ತುಱುಗಿ ಪೂತೆಲೆಯಿಕ್ಕಿದ ಪಾಟಳಾವನೀ
ಜಾತದೊಳಂ ನಿಜಾರುಣಪದದ್ಯುತಿಪಲ್ಲವಮುಂ ನೆಗೞ್ಚಿಲೇಂ
ಪ್ರೀತಿಯಿನೊರ್ವಳಾಯ್ದಳೊ ತನೂದರಿ ಪಾಟಲಿಯೊಳ್ ಲತಾಂತಮಂ ೭೯

ಜಾತಿಗೆ ಪುಷ್ಪಜಾತಿಗಳ ಜಾತಿಯುಮೇಂ ಸಮಜಾತಿಯಪ್ಪುವೇ
ಜಾತಿಯೆ ಜಾತಿ ಮಿಕ್ಕರಲಜಾತಿಯುಮೇತಱ ಜಾತಿಯೆಂದಣಂ
ಜಾತಿಯ ಜಾತಿಯಂ ಪೊಗೞ್ದು ಜಾತಿವಿಚಾರವಮೆಂದು ಕೊಯ್ದಳಾ
ಜಾತಿಯನಾ ವಿದಗ್ಧವಿಟಭೂರಿಯನಾ ರತಿರಾಗದೂತಿಯಂ ೮೦

ನಲವಿಂದಂ ಮುಡಿವಾಳದ
ನೆಲೆಗೆಯ್ತಂದಗತನೂಜೆ ಬೇರಂ ಬಲ್ಲ
ರ್ಗೆಲೆದೋಱಲೇಕೆ ನೀನೆನು
ತೊಲವಿಂ ಪರಿಮಳದ ಬೇರ್ಗಳಂ ಬರತೆಗೆದಳ್ ೮೧

ಮುಡಿ ಜಗುಳಲ್ ಕುರುಳ್ ಕುಣಿಯೆ ತುಂಗಕುಚದ್ವಯ ಜೋಡುಗುಂಪೆ ಕಂ
ಪಡರ್ದುರು ಕೆಕ್ಕನೊಪ್ಪಲಲರ್ಗಣ್ ಮುಗುಳೊಪ್ಪೆ ತೊಡರ್ಜೆ ಕಾಂಚಿ ಬಿ
ಟ್ಟುಡೆ ಸಡಿಲಲ್ ನಿತಂಬಯುಗಳಂ ನಡುಗಲ್ ಬಿಳಿವಪ್ಪ ತೆಳ್ವಿನೊ
ಳ್ಪಡು ಸೆಳೆಯಲ್ಕೆ ಕೈನೆಗಪಿ ಪೂದಿಱಿವಳ್ ಸತಿ ಸೌಕುಮಾರ್ಯದಿಂ ೮೨

ಅರಲಂ ಕಣ್ಮಿತ್ತಿ ಪೊತ್ತಂಗಿಡಪೆಳಪೆಳಗಿಂದೊಪ್ಪೆ ತುಂಗಸ್ತನಂ ಮಂ
ಜರಿಯೊಳ್ ವಕ್ತ್ರಾಬ್ಜಗಂಧಂ ವಿಕಸಿತಕುಸುಮಾಮೋದಮಂ ಮೋದೆ ಬಂಬ
ಲ್ಗುರುಳುನ್ಮತ್ತಾಳಿಯೊಳ್ ತಳ್ತಿಱಿಯೆ ಪೊದೆಯೆ ಹಸ್ತಾರುಣಚ್ಛಾಯೆ ಬಾಳಾಂ
ಕುರಮಂ ಪೂಗೊಯ್ವುಳೊರ್ವಳ್ ಪೊಸಲತೆಲತೆಯೊಳ್ ಕಪ್ಪಮಂ ಕೊಳ್ವ ಪಾಂಗಿ ೮೩

(ಲೀಲಾವತಿ, ೧೩-೬೯)

ಪರಭಾಗಂ ಪೊಣ್ಮುವನ್ನಂ ತನುಲತೆ ಲತೆಯೊಳ್ ಕೂಡೆ ತುಂಗಸ್ತನಂ ಮಂ
ಜರಿಯೊಳ್ ಮುಂಡಾಡೆ ಕಣ್ಗಳ್ ಬೆರಸೆ ಕುಸುಮದೊಳ್ ಕುಂತಳಂ ತುಂಬಿಯೊಳ್ ತ
ಳ್ತಿರೆ ಪುಷ್ಪಾಮೋದದೊಳ್ ಸುಯ್ ಕಲಸೆ ಕರತಳಚ್ಛಾಯೆ ತಱಿಕ್ಕ್ರ್ಯಸೆ ಬಾಲಾಂ
ಕುರಮಂ ಪೂಗೊಯ್ವುಳೊರ್ವಳ್ ಲತೆಲತೆಗೊಲವಿಂ ಬಿರ್ದನಂದಂತಿರಿರ್ದಳ್ ೮೪

(ಲೀಲಾವತಿ, ೧೩-೭೭)

ಪೊಱವಾರಂ ಪೆಟ್ಟುವಂತುಬ್ಬರಿಪ ಮುಗುಳ ಗೊಂಚಲ್ಗಳಂ ಪೆಟ್ಟಿ ಪೂವಂ
ತಿಱುವಚ್ಛಂದ್ರಬಿಂಬಾನನೆಯ ಘನಕುಚದ್ವಂದ್ವಮಂ ಪೊತ್ತು ಚೆಲ್ವಿಂ
ಪೆಱಗುತ್ತಿಪ್ಪುಜ್ವಲನ್ಮಾಧವೀಮಧುನೃಪನೆಟ್ಟಿಂದೊಡಾನಂದದಿಂದಂ
ಮಱುಗುತ್ತಿಪ್ಪನ್ನೆಗಂ ಕನ್ನಡಿ ಪೊಣರ್ಗಳಸಂಬೋಲ್ತ್ತುವೊಲ್ ಪೆತ್ತುದಿಂಬಂ ೮೫

ಕಚಬಂಧಂ ಬಿಡುವಂತು ನೀವಿ ಶಿಥಿಲತ್ವಂಬೆತ್ತು ನೀಲಾಳಕ
ಪ್ರಚಯಂ ಸೂಸೆ ಲತಾಂಗಲೇಖೆ ಬೆಮರಂ ತಾಳ್ದಿರ್ದ ಚೆಲ್ವಂಶುಕಂ
ಕುಚದೊತ್ತಿಂ ನಸುಜೋಲ್ದು ಕಂಗೆಸೆಯೆ ಬಂದರ್ ಮೂರ್ತಿಶೋಭಾಭರ
ಪ್ರಚಯಸ್ವಾಂತೆಯರಾದವೋಲ್ ವನವಿಹಾರಶ್ರಾಂತಯರ್ ಕಾಂತೆಯರ್ ೮೬

ಮೃದುಕಂಕೆಲ್ಲಿದಳಾದಿ ಪಲ್ಲವದೊಳಂ ಮಲ್ಲೀಲತಾಂತಾದಿ ಪು
ಷ್ಪದೊಳಂ ಚೂತಲತಾಭರಸ್ಥಿತಯುದಿಂಬಿಂ ಮಾಳ್ಪಿ ಮಂಜೀರ ಹಾ
ರದ ಕೇಯೂರದ ಕರ್ಣಪೂರದುಡೆನೂಲಂತಂಪದೊಳ್ ಪಚ್ಚಮಂ
ಮದನಂ ಮೋಹನಬಾಣಮಂ ತೊಡುವಿನಂ ತೊಟ್ಟರ್ ಲತಾತನ್ವಿಯರ್ ೮೭

ಎಳಸಿರೆ ಕಾಂತೆ ಪೊಚ್ಚಪೊಸಮುಲ್ಲಿಗೆಯಂ ಪಲವಂ ತುಱುಂಬಿ ಕೆ
ಜ್ಜೊಗ್ಗಳೆ ಸಿರಿಗಂಧದಣ್ಪನೊಸೆದಿಕ್ಕಿ ದುಕೂಲಮನುಟ್ಟು ಮೌಕ್ತಿಕಾ
ವಳಿಯನೊಱಲ್ದು ತೊಟ್ಟು ತಳಿರುಯ್ಯಲನಟ್ಟಿಯೊಳೇಱಿ ಪಾಡಿದಳ್
ಲಲನೆ ವಸಂತದೊಳ್ ಪಲವು ವರ್ಣಕದಿಂ ಕವಿಕಾಮದೇವನಂ ೮೮
(ಶೃಂಗಾರರತ್ನಾಕರಂ, ೧–೪೦ ಸೂಕ್ತಿಸುಧಾರ್ಣವಂ, ೧೧–೫೬)

ತೆರೆಮುಗಿಲನಡರ್ವ ವಿದ್ಯಾ
ಧರಿಯೆಂಬಿನಮೊರ್ವಳೇಱಿ ಕೃತಕಾದ್ರಿಯನೇಂ
ದೊರೆಯಾದಳೊ ರತಿಕಾಂತನ
ಕರುಮಾಡದ ಮದನಮೋಹಿನೀಪುತ್ರಿಕೆವೋಲ್ ೮೯
(ಅನಂತನಾಥಪುರಾಣಂ, ೭–೧೬, ಯಶೋಧರಚರಿತ್ರೆ. ೪–೯, ಸೂಕ್ತಿಸುಧಾರ್ಣವಂ, ೧೧–೫೭)

ಸಿಱು ಸೊಸಪ್ಪಿದುದು ಕೋಡಗಂ ಸೆಳಿದುಪೇ ವೃ ಬಾಸುಱತೇಟ್ಟಿವನ್ನೆಗಂ
ಪಱಿದತ್ತ್ರಕ್ಕಟ ಪೊಕ್ಕು ಕೇತಕಿಯ ಪೂಗೊಯ್ಯಲ್ಕೆ ಘರ್ಮಾಂಬುಗಳ್
ತಱುಗಲ್ಗೊಂಡುವು ತಂಗೆ ಬಲ್ಲಿತೆ ಬಿಸಿಲ್ ಪೂದೋಂಟದೊಳ್ ನಿನ್ನನೆಂ
ದಱುದುತ್ಸಾಹಿಪಳಂತೆಗೆಯ್ದು ಸಖಿಯಂ ತನ್ನಂಗಿ ಕಣ್ಬೇಱಿದಳ್ ೯೦
(ಸೂಕ್ತಿಸುಧಾರ್ಣವಂ, ೧೧–೬೦)

ಎಳಮಾವಿನ ತಳಿರ್ವೂವಿನ
ಗಿಳಿ ಚಿಲಿಪಿಲಿಯೆಂದೊಡಾ ಮನಂ ಜಗಳಕ್ಕೆ
ವ್ವಳಿಸಿದಪುದೆಂದು ಭಯದಿಂ
ತಳಿರ್ಗೊಯ್ಯದೆ ಪಿಂಗಿ ಮುಗ್ಧೆ ನಗಿಸಿದಳೊರ್ವಳ್ ೯೧

(ಸೂಕ್ತಿಸುಧಾರ್ಣವಂ, ೧೧-೬೧)

ಪಳಿತಾಂಭೋಜಾತವಕ್ತ್ರಸ್ಮಿತಪರಿಮಳಂ ಭ್ರೂಲತಾಕ್ಷೇಪಲೀಲಾ
ಪಳಿತಾಪಾಂಗಾನುರಾಗಂ ಮಧುರಫಳರಸಾಸ್ವಾದ್ಯಹೃದ್ಯಾಧರಂ ಕೋ
ಮಳೆಯೊಳ್ ಸಂಭೋಗಸೊಳ್ ಸಂಧಿಸೆ ನೃಪನ ಮನೋಜಾತಕೀರಂ ವಚಃಕೋ
ಕಿಳನಾಲೋಕದ್ವಿರೇಫಂ ತಣಿವುನೆಳಸೆ ತತ್ಪ್ರೇಮಕಾತಂ [1]ವಸಂತಂ[1] ?

(ಅನಂತನಾಥಪುರಾಣಂ, ೨-೧೩, ಸೂಕ್ತಿಸುಧಾರ್ಣವಂ. ೧೧-೬೫)

ಅನುವಿಸಿ ನನೆದಿಱಿದಪೆನೆಂ
ದಿನಿಯಂ ಬರೆ ಕಂಡು ತೋಳನೆತ್ತದೆ ಕುಚಕುಂ
ಭನಖಾಂಕದತ್ತ ಲಜ್ಜಾ
ವನತಾನನೆ ನಿಂದ ಭಾವಮಂ ಬಯಸದರಾರ್ ೯೩

(ಲೀಲಾವತಿ, ೧೩-೯೮, ಸೂಕ್ತಿಸುಧಾರ್ಣವಂ, ೧೧-೬೮)

ಪೊಯ್ದುದು ಮಾಯ್ದುಲರ್ತಿಱಿಯಲೀಯ್ಯದೆ ಧೂಳಿಯನೆಂದು ಗಾಳಿಯುಂ
ಬಯ್ದು ಪರಾಗಮಂ ತೊಡೆಯುತಂ ನಿಡುಗಂಗಳನೊತ್ತಿ ಮುಚ್ಚಿಕೊಂ
ಡೊಪ್ಪುತಿನಿಂದ್ರ ವಲ್ಲಭೆಯ ಕಣ್ಬೊಣರಂ ಪತಿ ತುಂಬಿ ಪೀರ್ವವೋ
ಲಿಪ್ಪಲರಾದಿಮೂದಿ ಪರಿಚುಂಬಿಸಿದಂ ನಗುತಂ ನಿಜೇಚ್ಛೆಯಿಂ ೯೪

(ಲೀಲಾವತಿ, ೧೩-೧೦೪, ಸೂಕ್ತಿಸುಧಾರ್ಣವಂ, ೧೧-೬೭)

ಮಿಸುಗುವ ಮುಡುಮಲ್ಲಿಗೆಯ ಹಾರಮನೊಪ್ಪಿರೆ ತಾಳ್ದು ಮಾಲತೀ
ಕುಸುಮದ ಜಾಲಿಯುಂ ತಳೆದು ಮೊಲ್ಲೆಯ ಕಂಕಣವಿಟ್ಟು ಚಂಪಕ
ಪ್ರಸವದ ಕರ್ಣಪೂರಕಮನಾಂತು ವಿಲಾಸಮನೆಯ್ದೆ ಬೀರುತ
ರ್ಚಿಸಿದ ಮನೋಜರಾಜನಧಿದೇವತೆ ಬರ್ಪವೊಲಾಕೆಯೊಪ್ಪಿದಳ್ ೯೫

ನವಹಾರಂ ನೇವುರಂ ಮೇಖಲೆ ಪೊಸಕಡಗಂ ಜಾಳಿಯುಂ ಸೂಸಕಂ ಚೆ
ಲ್ವವತಂಸಂ ಜಂಘೆಯುಂ ಮೂಗುತಿ ಚಳಕಿಗೆ ತೋಳ್ಬಂದಿ ಮಿಂಚೋಲೆ ಕರ್ಪೂ
ಪ್ಪುವಿನಂ ಗ್ರೈವೇಯಕಂ ಪೊಂಜಱಿಗೆಯೆನಿಸಿದಂ ವಾಡಿ ಚೆಲ್ವೆತ್ತು ನಾನಾ
ಯುವತೀ ಸಂತಾನಕಂ ಸಿಂಗರಿಸೆ ಪದಪಿನಿಂ ಕಾಂತೆ ಕಣ್ಗೆಡ್ಡಮಾದಳ್ ೯೬

---

[1] ನಿತಾಂತಂ (ಸೂ)

ಕರಿರಿಪುಪೀಠವಮಂ ತೊಡೆದು ಪಾಸುವ ಕತ್ತುರಿನೀರಧಾರೆಯುಂ
ಪರಪುವ ಮುತ್ತಿನಕ್ಕಸರಮಂ ಕಡೆಯಿಕ್ಕುವ ಪಾರಿಜಾತದೊ
ಳ್ದಲಸದಿರ್ಚುವಿರ್ತರವ ಗದ್ದುಗೆಯನಿಕ್ಕುವ ಸಂಭ್ರಮಂಗಳಿಂ
ಪರಿಪುರಿಯಾಡಿದರ್ ನವಲತಾಗೃಹಪಂಕ್ತಿಯೊಳಂಗನಾಜನಂ ೯೭

(ಅನಂತನಾಥಪುರಾಣಂ, ೪-೮೬; ಸೂಕ್ತಿಸುಧಾರ್ಣವಂ, ೧೧-೮೧)

ಪಿಪ್ಪಿಲಿ ಚಿಲ್ಲಕಾಯ್ ಮೆಣಸು ಮಾಗುಳಿವೇರ್ ಮೊಳೆಯೆಲ್ಲಮೋಳೆ ಕ
ಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆಯಂಬಟೆ ಸಿಂಜೆ ನೆಲ್ಲಿಗಾಯ್
ಕಪ್ಪುರಗಂಪನೊಪ್ಪಿಸುತಿರ್ಪ ರೆಮಾದುಫಲಂಗಳಾದಿಯಾ
ದುಪ್ಪಿನಕಾಯ್ಗಳಂ ಮಘಮಘಿಪ್ಪವನಿಕ್ಕಿದರಬ್ಜಪತ್ರದೊಳ್ ೯೮

(ಲೀಲಾವತಿ, ೫-೭೦; ಸೂಕ್ತಿಸುಧಾರ್ಣವಂ, ೧೧-೮೬)

ಬಗಿದಗುಳಿಯೊಂದದಂತೆ ತೆಗೆದಾರಿಸಿದೋಗರದೊಳ್ ಪೊದಟ್ಟಿ ಕ
ಮ್ಮಗೆ ಕೆನೆಗೊಂಡ ಗಟ್ಟಿವೊಸರಂ ಸುರಿದೇಲೆಯಚೂರ್ಣವಿಕ್ಕಿ ಕಾ
ಯ್ದೊಗುಮಿಗೆ ಜೀಳಿಗೆಯ್ದ ಮೆಣಸಂ ತಳಿದಲ್ಲದ ಚಲ್ಲಿಯುಂ ಪವ
ಣ್ಣಾಗೆ ಕಲಸಿರ್ದ ತಣ್ಗಲಸುಗೂಟಿನಿಳಾಪತಿಗಿತ್ತರಟ್ಟಿಯುಂ ೯೯

(ಲೀಲಾವತಿ, ೫-೭೦: ಸೂಕ್ತಿಸುಧಾರ್ಣವಂ, ೧೧-೮೫)

ತುಳಿಕಂ ಲಡ್ಡುಗೆಗಳೊಳಂ
ಫಳಗಳ ಕೂಟ್ಟೀವಡಿಗಳೆಪ ತೊಗರಿಯ ತೋಗೆ ಕಾ
ಯ್ದಿಳುಹಿದ ತುಪ್ಪಂ ಕೋಡುವ
ಕಳಲಲ್ಲದೆ ದಿವ್ಯಭೋಜನಂ ಪೆಱತುಂಟೆ ೧೦೦

ಸಿತಮಿಶ್ರಿತ ಘೃತಪೂರಂ
ಸಿತಮಿಶ್ರಿತ ಸುರಭಿಗಂಧ ಕದಳಂ ಸದಳಂ
ಸಿತದುಗ್ಧಪೂರಮುಮದಿರ್ರೆ
ಸಿತಸಿಪ್ಪಿಂಡಮನಭಂಡಮಂ ಮುಟ್ಟುವುದೇ ೧೦೧

(ಸೂಕ್ತಿಸುಧಾರ್ಣವಂ, ೧೧-೮೪)

ಓರಂತೆ ಮೆಚ್ಚಿದಂ ಕೃತಿ
ಸಾರವನಕ್ರೀಡನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೦೨

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾನೂತನ ಸನಾತನ ಪುರಾತನಪ್ರಮಾಣಸುಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರ ಮಹಾಪ್ರಬಂಧದೊಳ್ ವನಕ್ರೀಡಾವರ್ಣನಂ ಏಕಾದಶಾಶ್ವಾಸಂ

# ಜಲಕ್ರೀಡಾವರ್ಣನಂ

ಜೆಮರಂ ವಾರಿವಿಳಾಸಮುಂ ಸಲಿಲಧಾರಾಯಂತ್ರಮುಂ ವಾಃಪ್ರವೇ
ಶಮನಾಲೇಪನಕಂಪಮುಂ ಮುಳಿಸು ಲೀಲಾಯುದ್ಧಮುಂ ಕಾಮಿನೀ
ಪ್ರಮುಮುಂ ಮೂಡಿಮುೞುಂಗುತಿರ್ಪ ಪರಿಯುಂ ಮೆಯ್ಯುಬ್ಬರ್ಪಮುಂ ಚೆಲ್ವಮುಂ
ಕ್ರಮದಿಂದಂ ಪೊಱಮಟ್ಟು ನಿಂದ ನಿಲವಂ ಪೇೞ್ವರ್ ಜಲಕ್ರೀಡೆಯೊಳ್ ೧

(ಸೂಕ್ತಿಸುಧಾರ್ಣವಂ, ೧೨-೧)

ಮರುಗದ ಚೆಂಡು ಮಲ್ಲಿಗೆಯ ದಂಡೆ ಕುರಂಗದ ಕರ್ಣಪೂರವಂ
ಬುರುಹದ ನೀಳಕಂಚುಳಿಕೆ ಪಾದರಿಯುಂಡುಗೆ ಕುಂದಕುಟ್ಮಳೋ
ತ್ಕರದ ತುಱುಂಬು ಕರ್ಪುರದ ಮೂಗುತಿ ಚಂದನವಾರಿ ತಂಪುವ
ಚ್ಚರಿವಡೆದೊಪ್ಪಲಂದು ಜಲಕೇಳಿಗೆ ಬಂದುದು ಕಾಮಿನೀಜನಂ ೨

ನೆಲೆಮೊಲೆ ಪೊಣರ್ವಕ್ಕಿಗಳಂ
ಪಳಿ ವಳಿಗಳನಾಸ್ಯಬಿಂಬವಂಭೋಜಮನ
ಗ್ಗಳಿಸೆ ಕಲಹಂಸಯಾನೆಯ
ರಳವಡೆ ಕೊಳಕೊಳಕೆ ಬಿರ್ದುವಂದಂತಿರ್ದರ್ ೩

(ಅನಂತನಾಥಪುರಾಣಂ, ೭-೨೬; ಸೂಕ್ತಿಸುಧಾರ್ಣವಂ, ೧೨-೩)

ತಾವರೆ ವಕ್ತ್ರಮೂರ್ಮಿ ನಳಿತೋಳ್ ಪೊಣರ್ವಕ್ಕಿ ಪಯೋಧರದ್ವಯಂ
ಶ್ಶೈವಳಲೇಖೆ ಬಾಸೆ ಪುಳಿನಂ ಜಘನಂ ಜಲಶೀಕರಾಳಿ ಮು
ಕ್ತಾವಳಿ ಬಾಳೆಮೀನ್ ನಯನಮಾಗಿರ್ ಜಂಗಮಪದ್ಮಿನೀಕುಳಂ
ಸ್ಥಾವರಪದ್ಮಿನೀಸ್ಥಲಕೆ ಬರ್ಪವೊಲೊಪ್ಪಿದುದಂಗನಾಜನಂ ೪

ಬನದರಲಂ ಬರಿಕ್ಕೈಸುವ
ಬಿನದದ ಪೊಲ್ಲಮೆಯನಿಂದೆ ಕಳೆದೊಡೆ ನಿನ್ನೀ
ವನಿತಾಜನಮುಖವನರುಹ
ವನದಿಂದಮೆ ತಿಳಿವು ಕೆಳದಿ ಕೋಡುವ ಕೊಳನಂ ೫

ವನಕೇಳೀಶ್ರಾಂತಕಾಂತಾಜನದ ಮುಖಸರೋಜಂಗಳೊಳ್ ಪಾಯ್ದು ತುಂತು
ರ್ವನಿಯುಂ ಪೇಱುತ್ತೆ ಮತ್ತಶ್ರಮಸುರಭಿಪಯೋಬಿಂದುವಂ ತಂದು ನೀವೂ
ವಿನ ಕಂಪಂ ತೊಟ್ಟು ಕೊರ್ಬಿತ್ತಭಿನವಮಧುರಾಮೋದನಿಃಶ್ವಾಸದಿಂ ತ
ಣ್ಣನೆ ತೀಡಿತ್ತೊಂದು ಭೃಂಗದ್ವಿಗುಣಿತ ಗಣಿಕಾಕೇಶಭಾರಂ ಸಮೀರಂ ೬
(ಲೀಲಾವತಿ, ೧೩-೧೧೩; ಸೂಕ್ತಿಸುಧಾರ್ಣವಂ, ೧೨-೪)

ಇದು ಪಿರಿದುಂ ವಸಂತಸಖಯೌವನರತ್ನನಿಧಾನಮಂತದ
ಲ್ತಿದು ಕುಸುಮಾಸ್ತ್ರಶಸ್ತ್ರಚಯಕೋಶಮಹೀಗೃಹಮಂತಿದಲ್ತು ಮ
ತ್ತಿದು ರತಿನಾಥಕಲ್ಪಲತಿಕಾಪ್ರಮದೈಕಕೃತಾಲವಾಲಮೆಂ
ಬುದನೆನಿಸಿತ್ತು ಸಂದಣಿಸಿ ನಿಂದಬಲಾವಳಿಯಿಂದೆ ಪೂಗೊಳಂ ೭
(ಚಂದ್ರಪ್ರಭಪುರಾಣಂ, ೭-೧೨೬; ಸೂಕ್ತಿಸುಧಾರ್ಣವಂ, ೧೨-೧೬)

ನೇವುರದ ಮುದ್ರಿಕೆಯ ಹಾ
ರಾವಳಿಗಳ ಮಧುರನಾದವಬ್ಜಾಕರಮಂ
ತೀವುತ್ತಿರೆ ಸಲಿಲಕ್ರೀ
ಡಾವಾರಿಧಿಗೆಳಸಿ ಬಳಸಿ ಕೊಳನಂ ಪೊಕ್ಕಳ್ ೮

ತೊಳಗುವ ವಿಮಳಾಕಾಶದೊ
ಳೆಳವೆಱೆ ಪುಗುವಂತೆ ಮುಂತೆ ನಿರ್ಮಳ ಶಶಿಮಂ
ಡಲದಧಿದೇವತೆ ಬೆಳ್ದಿಂ
ಗಳೊಳಗೆ ಪುಗುವಂತೆ ಪೊಕ್ಕಳಂಬಿಕೆ ಕೊಳನಂ ೯

ಗಿರಿಜೆ ಶಶಿವದನೆ ಕೊಳದೊಳ್
ಭರದಿಂ ಪುಗೆ ನೆಯ್ದಿಲೆಯ್ದಿದವು ವಿಕಸನಮಂ
ವಿರಹಮನಾಂತುವು ಕೋಕಂ
ಸರಸಿರುಹಂ ಮುಗಿದುವರರೆ ಪಗಲೊಳ್ ಚಿತ್ರಂ ೧೦

ಪೊಳೆವನ್ನಂ [೧]ತಾ[೧]ರಹಾರಂ ಸೆಲೆಸೊಲೆ ಪೊಡರ್ವನ್ನಂ ಕುರುಳ್ ಸೂಸುವನ್ನಂ
ಸೆಳೆವನ್ನಂ ತೆಳ್ವಸಿರ್ ಪೋಲುವ ಮಿಳಿರ್ದೆಸೆವನ್ನಂ ಭುಜಾಂಮೋಳಗುಂಜ
ದ್ವಳಯಂ ವಿಕ್ಷೇಪಲೀಲಾಲಸಚರಣರಣನ್ನೂಪುರಂ ಯಾನಕೂಜ
ತ್ಕಳಕಾಂಚೀಭಾಜನಂ ಸ್ತ್ರೀಜನಮಿೞಿದುದು ತತ್ತೀರ ಸೋಪಾನದಿಂದಂ ೧೧
(ಜಗನ್ನಾಥವಿಜಯಂ, ೧೪-೯೪)

---

[೧]ತೋ(ಸ)

ಅಂಗನೆಯರ್ ಜಲದೊಳ್ ಪುಗೆ
ಮೀಂಗಳಡಂಗುವುದುಮವರ ನಯನಪ್ರತಿಬಿಂ
ಬಂಗಳೆ ಪೊಳೆವೆಳಮೀಂಗಳ
ಭಂಗಿಯನನುಕರಿಸಿ ಪೊಳೆಯುವಾ ತಿಳಿಗೊಳದೊಳ್ ೧೨
(ಜಗನ್ನಾಥವಿಜಯಂ, ೧೪-೯೬)

ಮೃದುತರ ಶಾಲಿಯುತ್ತಮದ ವಸ್ತ್ರಮನುಟ್ಟು ಸುಕೇಶಭಾವಮಂ
ಪುದಿದಮುಗೆ ಪೆಣೆಯಂ ಬಲಿದು ಕತ್ತುರಿಮಿಶ್ರಿತಗಂಧಸಾರಮಂ
ಪದಮಲಮಪ್ಪ ಮೆಯ್ದೊಱೆಯಮೊಯ್ಯನೆಯೊರ್ವರನೋರ್ವರೀಕ್ಷಿಸು
ತ್ತೊದವಿದ ರಾಗದಿಂ ಕೊಳನ ಪೊಕ್ಕರು ಚಾಪಲ ಚಾರುನೇತ್ರೆಯರ್ ೧೩

ಗಣಿಕೆಯರ ಗಡಣದಿಂ ನಾ
ಗಿಣಿಯರ್ ನೀರಾಟಮಾಡಲೊರ್ದಪ್ಪೋಲಿರೆ ಕುಂ
ತಣ ಕುಟಿಲಂಗಳ್ ತರುಣೀ
ಗಣಪಸಿಯ ನೆಟಿಲ್ಗಳೆಸೆದುವಬ್ಜಾಕರದೊಳ್ ೧೪
(ಲೀಲಾವತಿ, ೧೩-೧೧೪)

ಜಳಪಕ್ಷಿವ್ರಾತಕೋಲಾಹಲಮೊಗೆವಿನೆಗಂ ಪಕ್ಕವಾದ್ಯಂಬೊಲುದ್ಯ
ನ್ಮಳಿನೀಕಿಂಜಲ್ಕಪುಂಜಾವೃತ ಜವನಿಕೆವೋಲ್ ಪಿಂಗೆ ಸುಯ್ಗಾಳಿಯಿಂ ಪ್ರಾ
ಗೊಳನಂ ಪೊಕ್ಕೆತ್ತಂ ರಂಗಂಬುಗುವ ತೆಱದೆ ನೇತ್ರಪ್ರಭಾಜಾಳಪುಷ್ಪಾಂ
ಜಳಿಯಂ ಸೂಸುತ್ತೆ ಕಾಂತಾಜನಮದು ಜಲಕೇಳೀಜ್ವಲಲ್ಲಾಸ್ಯಲೋಲಂ ೧೫
(ಲೀಲಾವತಿ, ೧೩-೧೧೫; ಸೂಕ್ತಿಸು, ೧೨-೧೩)

ತೆರೆಗಳ್ ವಕ್ಷೋಜಘಾತಕ್ಕಗಿದು ನೆಗೆವವೋಲ್ ಮೀಱಿ ಮರ್ಯಾದೆಯಂ ವಾ
ರಿರುಹಂಗಳ್ ವಕ್ತ್ರಚಂದ್ರಪ್ರಭೆಗೆ ಬೆಗಡುಗೊಂಡಂತೆ ನೀರೊಳ್ ಮುಳುಂಗು
ತ್ತಿರೆ ಹಸ್ತಾಬ್ಜಂಗಳಿಂದುತ್ಪಲದಳಿಕುಳಮಂ ಸೋವುತಂ ಪೊಕ್ಕುದಬ್ಜಾ
ಕರಮಂ ಕಾಂತಾಜನಂ ಪೆರ್ಚಿಸುತಮುಲಘು[1]ಕಾಂಚೀಪದಾ[2]ಪೂರದಿಂದಂ ೧೬
(ಲೀಲಾವತಿ, ೧೩-೧೧೬; ಸೂಕ್ತಿಸುಧಾರ್ಣವ. ೧೨-೨೨)

---

[1]ಪದಾಹಾರದಿಂ(ಸ) [2]ಪಕ್ಕ(ಅ)

ಸುದತಿಯರೊಡವುಗೆ ಮೆಯ್ಗ್ಗಡ
ವಱದ ಭಾರಂ ಬರ್ಪ ಕುಚರಥಾಂಗಚಯಕ್ಕಂ
ವದನವನೇರುಹವಿತತಿಗ
ಮಿದಿರ್ವಱ್ಪಂತಾಯ್ತು ಪೂಗೊಳಂ ಸಂಭ್ರಮದಿಂ ೧೭

(ಲೀಲಾವತಿ, ೧೩-೧೧೮)

ಪುದಿದಿರೆ ವಕ್ಷದವೋಲ್ ಮೃಗ
ಮದಪತ್ರಂ ಕಾಂತಕರಜಕುಲಿಶಕ್ಷತಿಗ
ಟ್ಕಿದವೋಲ್ ಪೊಕ್ಕವು ಕೊಳನಂ
ಬುಧದಿಯಾನಬಲೆಯರ ಕಠಿನಕುಚಕುಲಗಿರಿಗಳ್ ೧೮

(ಲೀಲಾವತಿ, ೧೩-೧೧೯)

ಸಿಱಿಯುಂ ಸೂಸಿ ಕಲಂಕಿ ನುಣ್ಣೊಡೆಗಳೊಳ್ ಕೈಯಿಕ್ಕಿ ಮೆಯ್ವೆರ್ಚುತಂ
ಪೊಱವಾಱಂ ಪರಿದೇಱಿ ಪೊಕ್ಕು ಪೊಕ್ಕೊಟಿಱೊಳಪೊಕ್ಕೆಯ್ತಂದು ಸವ್ಯಾನಮಂ
ತೆಱೆದುತ್ತುಂಗ ಕುಚಾಗ್ರಮಂ ತುಡಿಕಿ ಗಾಢಾಲಿಂಗನಂಗೆಯ್ದು ಕೈ
ಸೆಱೆಗೊಂಡತ್ತು ತರಂಗಸಂಹತಿ [1]ವಿಟಾಂಗಂಬೊಲ್ ಜಲಕ್ರೀಡೆಯೊಳ್[1] ೧೯

(ಸೂಕ್ತಿಸುಧಾರ್ಣವಂ, ೧೭-೧೯)

ತುಡಿಸುತ್ತುಂ ನೀರಸಂಗದ್ಯುತಿಯಿನವಯವಚ್ಛಾಯೆಯಿಂ ತಮ್ಮನಂದಿ
ಮಱಡಿಸುತ್ತುಂ ನೇತ್ರನೀಲೋತ್ಪಲದ ನೆಟಿಲ ಬಂಬಲ್ಗಳಿಂ ನೆಯ್ದಿಲಂ ಸೂ
ಮಱಡಿಸುತ್ತುಂ ವಕ್ತ್ರಕಂಜಂಗಳೊಳಿ ಕಮಲಪುಂಜಂಗಳಂ ಕೂಡೆ ಸಾಸಿ
ಮಱಡಿಸುತ್ತುಂ ಪೊಕ್ಕುದಬ್ಜಾಕರಮನೊಲವಿನಿಂದಂದು ಕಾಂತಾಕದಂಬಂ ೨೦

(ಲೀಲಾವತಿ, ೧೩-೧೧೬; ಸೂಕ್ತಿಸುಧಾರ್ಣವಂ, ೧೭-೨೦)

ಕಳನೂಪುರನಿನದಂಗಳ
ನೆಳವೆಂಡಿರ್ ಜೈಕೆಗೊಟ್ಟರಕ್ಕುಮೆ ಹಂಸಾ
ವಳಿಗೆನೆ ಕೊಳನಂ ಪೊಕ್ಕಾ
ಗಳೆ ಮಾಣ್ದುವು ಗಾಳಿವಡೆದ ನೇವುರವನಿಗಳ್ ೨೧

(ಸೂಕ್ತಿಸುಧಾರ್ಣವಂ, ೧೭-೨೬)

---

[1]ವಿಟಾನಂಗೋದ್ಭವಕ್ರೀಡೆಯುಂ(ಸೂ)

ಲಲಿತೂರ್ಮಿಕರದಿ ಕಾಲ್ವಿಡಿ
ದೊಳಪೊಕ್ಕೊಳ್ದೊಡೆಯ ಕೆಣಕಿ ಕಾಂಚೀಪದಮುಂ
ಬಳಸಿ ವಿಟನಂತೆ ನಾಭಿ
ಸ್ಥಳದೊಳ್ ನೆಲಗೊಂಡು ನಿಂದುದಾ ಕಾಸಾರಂ ೨೨

ಅಳಿಕಾಳಿಗಳಿಂ ನಯನೋ
ತ್ಪಳದಿಂ ಮುಖಕಮಲದಿಂದೆ ಕುಚಚಕ್ರದಿನು
ಜ್ವಳಕಾಂತಿಸಲಿಲದಿಂದಾ
ಕೊಳನೋಳ್ ಕೊಳನಾಡುವಂತಿರೊಪ್ಪಿದರಾಗಳ್ ೨೩

ಮಳಯೋರ್ವೀಧ್ರಸಮೀರಸಂಚಳಲತಾಸಂತಾನ ತಂತಮ್ಮೊಲ
ಗ್ಗಳಸೊಂದೊಂದಱ ಪೇಲೆ ಕೆಂದಳಿರ್ಗಳಿಂ ಸೂಸಿತ್ತೆನಲ್ ಕೇಳಿಸಂ
ಚಳೆಯರ್ ತುಳ್ಕಿದರೋರ್ವರೋರ್ವರೊಲವಿಂ ಸ್ವಚ್ಛಾಂಬುವಿಂ ಕೆಂದಳಿಂ
ಗಳನೀಯಲ್ ಪಳಯಸ್ಸಸಂ ವಿಹರಣಪ್ರಸ್ಥಾಪನಾತೂರ್ಯಮುಂ ೨೪

ಓರೊರ್ವರೊಳೋರೊರ್ವರ್
ವಾರಿಗಳಂ ಚೆಲ್ಲುವಲ್ಲಿ ಜಲದೇವತೆಯರ್
ಕಾರೊಳಗಾಡುವವೋಲಿರೆ
ಹಾರೈಸುತೆ ನಲಿವುತ್ತಾಡಿದರೋಕುಳಿಯುಂ ೨೫

ಮೃದುಕರತಳದಿಂದಬಲೆಯ
ರುದಕಂಗಳನೆತ್ತಿ ಸುತ್ತಸೂಸುವ ಪಥದೊಳ್
ಮುದದಿಂ ಕೊಡುವಂತಿರ್ದುವು
ಮೊದಲೊಳ್ ಮದನಂಗೆ ಮೆಱೆವ ಪುಷ್ಪಾಂಜಳಿಯುಂ ೨೬

ಕಮಲದಳಂಗಳೊಳಗೆ ಕುಂ
ಕುಮಜಲಮುಂ ತೀವಿ ಚಕ್ರಕುಚೆಯರ್ ಭರದಿಂ
ವಿಮಳೇಂದುಮುಖಿಯರಂ ವಿ
ಭ್ರಮದಿಂ ನಡೆದಿಟ್ಟು ಕೆಱೆವರೆಳವಿಸಿಲೊಳ್ಪಂ ೨೭

ಇಡೆ ಶಶಿಮುಖಿಯರ್ ಕಂಡಾ
ಕಡುಘನಳೋತ್ಪಲದ ನಡುವೆ ಚಂದನರಸಮುಂ
ಬಿಡೆತೀವಿಕೊಂಡು ನಡೆನಡೆ
ದೊಡನೊಡಸಿಟ್ಟಿಟ್ಟು ಜೊನ್ನಮುಂ ಪಸರಿಸಿದರ್ ೨೮

ಮಡದಿಯರಾಡುವ ಪದದೊಳ್
ಸಡಲಿದರ್ ಕುಂತಳಾಳಿ ಪೋಲ್ತುದು ಚಲದಿಂ
ದುಡುಪತಿಬಿಂಬಂಗಳ ಬೆಂ
ಬಿಡದೆಯ್ದುವ ರಾಹುಮಂಡಲಂಗಳ ತೆಜನಂ ೨೯

ಅಂಬುವಿನೊಳಗೆ ನಿಜಪ್ರತಿ
ಬಿಂಬಮನೀಕ್ಷಿಸುತೆ ತರುಣಿ ಹೋಗದಿರೆನುತಂ
ಬೆಂಬತ್ತಿ ನಡೆದು ಕಾಣದೆ
ಡಂಬಲನಂ ನೋಡಿ ಮುಗ್ಧೆ ನಗಿಸಿದಳೊರ್ವಳ್ ೩೦

ಉರವಣಿಸಿ ಚೆಲ್ಲೆ ಸತಿಯರ್
ಕರಂಗಳಿಂ ವದನವೃಂದಮಂ ಮುಚ್ಚುತೆ ತ
ಳ್ತರವಿಂದಂ ಶಶಿಬಿಂಬೋ
ತ್ಕರಮಂ ಪುತ್ತಿರ್ಪುದೆನಿಸಿಪ ತೆಜನಾಯ್ತಾಗಳ್ ೩೧

ಜಲರುಹನೇತ್ರೆ ಮೀನವಿರಳಾಕ್ಷಿ ಜಲಂಗಳನಂಜುಳಿಂಪಲಾ
ಜಲದೊಳು ತನ್ನ ನೇತ್ರಯುಗ ಚಂಚಲದಿಂ ಪ್ರತಿಬಿಂಬಿಸುತ್ತಲುಂ
ಪೊಳೆಯಲು ಮೀನ ನಾಂ ಪಿಡಿವೆನೆಂದು ಭಯಂ ಮಿಗುತೆಯ್ದಿ ನೀರನಾ
ಗಳೆ ಬಿಸುಡುತ್ತಮಿರ್ದಳು ವಿದಗ್ಧೆಯೊ ಮುಗ್ಧೆಯೊ ಚಂಚಲಾಕ್ಷಿಯೋ ೩೨

ಇದು ಜಲಜಾತವೆಂಬಿದು ಸಖೀಜನವೆಂಬಿನಿತುಂ ವಿವೇಕಮಿ
ಲ್ಲದೆ ಜಲಮಂ ತುಳುಂಕುವಬಲಾಜನದೊಂದಲೆ ಪಕ್ಕೆ ಪೆರ್ಚಿದಂ
ದದೆ ಜಲಜಾಳಿಗಳ್ ಮುಳಿದು ಪಿಂಗಿದುವಾಕೆಗಳುರ್ಚಿ ಪರ್ಚಿ ಕೊ
ರ್ಚಿದ ಕುಚಕುಂಭಮಾವರಿಸೆ ತೀವಿ ತುಳುಂಕುವ ಪದ್ಮಷಂಡದೊಳ್ ೩೩

ರಂಭೋರು ಜಗದ್ವಿಜಯಾ
ರಂಭಿ ಮನೋಭವಕರೇಣುವಂತೊರ್ವಳ್ ಕಿ
ಟ್ರಿಂಭೋಜದಲರ್ಗಳಂ ಕುಚ
ಕುಂಭಂಗಳೊಳೊಟ್ಟಿಕೊಳ್ವಳೇನೊಪ್ಪಿದಳೋ ೩೪

(ಲೀಲಾವತಿ, ೧೩-೧೨೬)

ಧೂರ್ತಂ ತುಳುಂಕೆ ಕತ್ತುರಿ
ನೀರ್ತುಳುಕಿದ ಮೊಗದಿನಲೆದುವಬಲೆಯ ಪೊಲೆಗಳ್
ಸಾರ್ತಂದಗಲ್ಚಲುರ್ಚಿದ
ಕಟ್ಟಿಲೆಯಂ ಕುಟುಕುಗೊಳ್ವ ಕೋಕದ್ವಯಮಂ ೩೫

(ಲೀಲಾವತಿ, ೧೩–೧೩೪, ಸೂಕ್ತಿಸುಧಾರ್ಣವಂ, ೧೨–೫೭)

ಅಲಿಪಸ್ಕಂ ಚೌರಿವೋಲ್ ಬಿರ್ಚಿದ ಬಹಳಕಚಂ ಸಾರ ಕಸ್ತೂರಿಕಾಪಂ
ಕಿಲಸುಂ ನೀರ್ಧಾರೆ ಕೊಪ್ಪಿಂದಿಳಿದು ಬಳೆವಿನಂ ಕಾಂತನಂದೊತ್ತೆ ರಾಗಾ
ಕುಲೆ ಬೇಗಂ ಬಾಗಿದಳ್ ತುಂಬಿಮು ತಿರುಗೊಲೆಯೊಳ್ ಕೋದ ಕಂದರ್ಪಕೋದಂ
ಡಲತಾಸೌಭಾಗ್ಯಮಂ ಸೂಸುವ ತನುಲತೆ ಬೆಲ್ವಾಗೆ ತನ್ವಂಗಿಯೊರ್ವಳ್ ೩೬

(ಲೀಲಾವತಿ, ೧೩–೧೩೮; ಸೂಕ್ತಿಸುಧಾರ್ಣವಂ, ೧೨–೫೯)

ಸುಲಲಿತ ಕಿಂಕಿರಾತ ನವಮಂಜರಿಯಂತಿರೆ ಕರ್ಣಪಾಳಿ ಕೆಂ
ಪಳಿದ ತುಱುಂಬಿನಂತೆಸೆಯೆ ಸೋರ್ಮುಡಿ ಮೂಡುವ ಚಂದ್ರನಂತೆ ಪ
ಜ್ಜಳಿಸೆ ಮುಖೇಂದು ಪೊಂಗಳಸದಂತಿರೆ ಪೆರ್ಮೊಲೆ ಕಾಂತೆ ಪೊನ್ನಪು
ತ್ಥಳಿಕೆಯೊಲೊಪ್ಪಿನಂ ತಳಿದಳೋಪನನೊಪ್ಪುವ ಕುಂಕುಮಾಂಬುವಿಂ ೩೭

(ಲೀಲಾವತಿ, ೧೩–೧೪೧; ಸೂಕ್ತಿಸುಧಾರ್ಣವಂ, ೧೨–೫೫)

ಪರವಧುವ ಪೆಸರೊಳೋಪಂ
ಕರೆಯೆ ಸುಖೀಜನದ ಮುಂದೆ ಲಜ್ಜಾರೋಷ
ಜ್ವರವೊದವೆ ಕರಗಿ ನೀರೊಳ್
ನೆರೆವಂತೆ ಬೆಮರ್ತಳೊರ್ವಳಬ್ಜಾಕರದೊಳ್ ೩೮

(ಲೀಲಾವತಿ, ೧೩–೧೪೪)

ಮೃಗಮದಜಲಮಂ ಸವತಿಯ
ಮೊಗದೊಳ್ ಪತಿ ಸೂಸೆ ಸತಿಯ ಮೊಗದೊಳ್ ಕ
ರ್ಪೊಗೆದು ಪೊಗೆ ಮಗುಳ್ದುದಾಕೆಯ
ಮೊಗಮುಜ್ವಳಮಾಯ್ತು ಬಗೆವೊಡೇನಚ್ಚರಿಯೋ ೩೯

(ಲೀಲಾವತಿ, ೧೩–೧೪೫)

ತುಳ್ಕೆ ಸಪತ್ನಿ ಕುಂಕುಮಜಲಂಗಳನೋಪನಮೇಲೆ ಜೆಲ್ಲಮಂ
ತುಳುಕುವ ಕಂಗಳೊಳ್ ನಿಮಿರ್ದು ನೀಟ್ಟಿ ವಿಲೋಕಿಸುವಾಕೆಯಕ್ಷಿಗಳ್
ನಿಟ್ಟಿ ಸರೋಜಮಂ [1]ಗೆಲುವ ಕಂಗಳಮಾರ್ಪೊಳಪಿಂದ[1] ಸೂಯಕರ್
ಮಾಟ್ಕೆ ಮದೂಷಣಂ ಮಧುಪದರ್ಶಿಗೆ ಭೂಷಣಮಾಗದಿರ್ಕುಮೇ ೪೦

(ಲೀಲಾವತಿ, ೧೩–೧೫೩)

---

[1]ಸರಜಮಂ ಗೆಲೆವಂದುವುಮಾಯ್ದ (ಅ)

ಅಲರ್ದಂಭೋಜವಿಲಾಸಮಂ ಗೆಲೆ ಮುಖಾಂಭೋಜಂ ಸುಖಸ್ಮೇರಮು
ತ್ಪಲಮಂ ಸೂರ್ಯಮರೀಚಿಕುಟ್ಮಲಿತಮಂ ನೇತ್ರೋತ್ಪಲಂ ಭೀತಿಕು
ಟ್ಮಲಿತಂ ತಾಂ ಗೆಲೆ ಪ್ರೋನ್ನ ಜೀರ್ಕೋಟಿವಿಯಿಂ ಪ್ರಾಣೇಶ್ವರೀವಕ್ತ್ರದೊಳ್
ನಲವಿಂದೊತ್ತಿದನೊರ್ವನುಜ್ವಳಜಳವ್ಯಾಮಿಶ್ರಕಾಶ್ಮೀರದಿಂ ೪೧

(ಲೀಲಾವತಿ, ೧೩-೧೫೪)

ಅಲರ್ಗಣೆಯುಂ ಬೆಳ್ದಿಂಗಳು
ಮೊಲಿಸುವ ಸೆಣಸಿಂದಮೊಡನೆ ನಡುವಂತಿರೆ ತ
ಲ್ಲಲನೆಯಲರ್ಗಣ್ಣುಮೊಪ್ಪಿದ
ಮಲಯಜಮುಂ ನಟ್ಟವೊಡನೆ ಚಂದ್ರೋದಯಮುಂ ೪೨

(ಲೀಲಾವತಿ, ೧೩-೧೫೭)

ಇಟ್ಟಳವಿಟ್ಟಯಿಂಮುಳಿಸಿಂ
ದಿಟ್ಟಳ್ ಕವಿರಾಜಮಲ್ಲನಂ ಕಡೆಗಣ್ಗಳ್
ನಟ್ಟ ಬಟಿಂವಿಡಿದು ನನೆಗಣೆ
ನಟ್ಟವೊಲಿರೆ ತಳಮೊಳಡಸಿ ತೀವಿದ ನನೆಯುಂ ೪೩

(ಲೀಲಾವತಿ, ೧೩-೧೫೮; ಸೂಕ್ತಿಸುಧಾರ್ಣವಂ, ೧೨-೪೨)

ಸ್ಮೇರಮುಖನೆತ್ತಿ ಸರಸೀ
ತೀರಕ್ಕೆಂತಾನುಮೆಯ್ದಲಾಗಳ್ ನೆವದಿಂ
ನೀರಂ ಕೊಳ್ವ ಮುಟಿಂಗುವ
ನೀರೇಜಲೋಚನೆಯುಮಪ್ಪಿ ಭಾವಕಮುಕುರಂ ೪೪

(ಲೀಲಾವತಿ, ೧೩-೧೫೯)

ಎಲೆ ಚಿತ್ತೇಶ್ವರಿ ನಿನ್ನ ವಕ್ತ್ರಹಿಮಕೃದ್ಬಿಂಬಂ ಕಲಂಕಿರ್ದೊಡಂ
ಜಲದೊಳ್ ತಾಂ ತೆಗೆದಪ್ಪುದೆನ್ನ ಬಗೆಯಂ ನೋಡೆಂದು ಕಣ್ಣಿಂದೆ ಕಾ
ವಲಿಸುತ್ತಂತೆ ಮುಟಿಂಗಿ ಬಂದಬಲೆಯಾ ವಕ್ತ್ರಾಬ್ಜಮಂ ಪೀರ್ದನಂ
ತೊಲಿನಿಂದೇಂ ಸ್ಮರಕೇಳಿಶೀಲನೊ ಕರಂ ಶೃಂಗಾರಕಾರಾಗೃಹಂ ೪೫

(ಲೀಲಾವತಿ, ೧೩-೧೬೦)

ಚಳಚಕ್ಷೂರಾಗದಿಂ ಜೆಂದೊಳಗೊಳಗೆರ್ದೆವೊತ್ತುತ್ತಮಿರ್ಪಂಗನಾಸಂ
ಕುಳಮಂ ತಱಿಸ್ಸೈಸಿ ನೀರೊಳ್ ಮುೞುಗಿ ಪೊಲೆಗಳಿಂ ಮೋದುನೆತ್ತ್ರಂಗಮಂ ತಾಂ
ಜಳಕೇಳೀವ್ಯಾಜದಿಂದಂ ತಳಿವನೆ ಜಳದಿಂಮೊಂದಱಿಂ ಚಿತ್ರಮಂ ತಾಂ
ತಳೆದಂ ಸಂಭೋಗಸೌಖ್ಯಾಮೃತರಸಭರದಿಂ ಭಾರತೀಚಿತ್ರಚೋರಂ ೪೬

(ಲೀಲಾವತಿ, ೧೩-೧೬೧)

ಬಲ್ಗೊಡಪನ್ನವೀ ಮೊಲೆಯ ಬಿಣ್ಪೊದವಲ್ ಸುಕುಮಾರಿಯರ್ಗೆ ನೀ
ರ್ಗಲ್ಗಳ ಹಾರದೊಂದು ಹೊಱೆಯೇಕೆನುತ್ತುಂ ಜಲದೇವಿ ಕೊಟ್ಟವೋಲ್
ಕಲ್ಗಳನಾವಗಂ ಬಲಿದು ಬೆಟ್ಟಿದುವಾಗಡ ಬಿಂದುಮೌಕ್ತಿಕಂ
ವಲ್ಗದುರೋಜಮಂಡಲದೊಳೇಂ ತುಱುಗಿರ್ದುವೊ ಕಾಂತೆಯರ್ಕಳಾ ೪೭

(ಲೀಲಾವತಿ, ೧೪-೧೫)

ನಾರೀವಿಕೀರ್ಣನವಕಾ
ಶ್ಮೀರಂ ಕಿಂಜಲ್ಕಮಂಗರಾಗವಿಮಿಶ್ರಂ
ವಾರಿ ಮಧುವಾಗೆ ಕೊಳನಂ
ಭೋರುಹಮಂ ಪೋಲ್ತುಮೆಂದು ಪರಿದಳಿಪಟಲಂ ೪೮

(ಲೀಲಾವತಿ, ೧೪-೧೯)

ಕಡಲೊಳ್ ಪುಟ್ಟಿದೊಡೇನಮಂ ಕೊಳಮೊಳಾನುಂ ಪುಟ್ಟಿನೇ ವೈರಮಂ
ಬಿಡನೆಂದುಂ ಖಳನಬ್ಜನೆನ್ನೊಳಪನಂ ನೀಂ ಗೆಲ್ದು ಸರ್ವಸ್ವಮಂ
ಪಡೆವೆಮ್ಮಿಬ್ಬರೊಳಾರೊ ಮಿತ್ರರುಗಳೆಂದಂಭೋರುಹಂ ಕೂರ್ತು ಕಾ
ಲ್ವಿಡಿದಿತ್ತಂತಿರೆ ತನ್ನ ಚೆಲ್ವನೆಸೆವತ್ತಾಸ್ಯಂ ಸರೋಜಾಸ್ಯೆಯಾ ೪೯

(ಲೀಲಾವತಿ, ೧೪-೨೧)

ಕರತಳವಾರಿ ತಳ್ತು ನಖರದ್ಯುತಿವಾರಿಯೊಳೊಂದಿ ಹಾರಬಾ
ಧುರರುಚಿವಾರಿಯೊಳ್ ಬೆರಸಿ ಸುಸ್ಮಿತದೀಧಿತಿವಾರಿಯೊಳ್ ತಸೂ
ದರಿಯುರಲಂಪಿನಿಂ ತುಳುಕೆ ಕೃಷ್ಣನ ಮೇಲೆ ಪೊದಬ್ಬಿದಂದು ಕ
ಪ್ಪುರನಱಿಯುಂತಿರಾಲಿಪಱಿಯುಂತಿರಪಲ್ಲಱಿಯುಂತಿರೆತ್ತಲುಂ ೫೦

(ಜಗನ್ನಾಥವಿಜಯಂ, ೧೪-೯೮)

ಅಲರ್ದಂಭೋಜವಿಲಾಸಮಂ ಗೆಲೆ ಮುಖಾಂಭೋಜಂ ಸುಖಸ್ಮೇರಮು
ತ್ಪಲಮಂ ಸೂರ್ಯಮರೀಚಿಕುಟ್ಮಲಿತಮಂ ನೇತ್ರೋತ್ಪಲಂ ಭೀತಿಕು
ಟ್ಮಲಿತಂ ತಾಂ ಗೆಲೆ ಪೊನ್ನ ಜೀರ್ಕೊಳವಿಯಂ ಪ್ರಾಣೇಶ್ವರೀವಕ್ತ್ರದೊಳ್
ನಲವಿಂದೊತ್ತಿದನೊರ್ವನುಜ್ಜ್ವಳಜಳವ್ಯಾಮಿಶ್ರಕಾಶ್ಮೀರದಿಂ ೪೧

(ಲೀಲಾವತಿ, ೧೩-೧೫೪)

ಅಲರ್ಗಣೆಯುಂ ಬೆಳ್ದಿಂಗಳು
ಮೊಲಿಸುವ ಸೆಣಸಿಂದಮೊಡನೆ ನಡುವಂತಿರೆ ತ
ಲ್ಲಲನೆಯಲರ್ಗಣ್ಣುಮೊಪ್ಪಿದ
ಮಲಯಜಮುಂ ಸಟ್ಟಮೊಡನೆ ಚಂದ್ರೋದಯಮುಂ ೪೨

(ಲೀಲಾವತಿ, ೧೩-೧೫೭)

ಇಟ್ಟಳವಿಟ್ಟೞುಮುಳಿಸಿಂ
ದಿಟ್ಟಳ್ ಕವಿರಾಜಮಲ್ಲನಂ ಕಡೆಗಣ್ಗಳ್
ನಟ್ಟ ಬೞುವಿಡಿದು ನಸೆಗಣೆ
ನಟ್ಟವೊಲಿರೆ ತಳಮೊಳಡಸಿ ತೀವಿದ ನನೆಯುಂ ೪೩

(ಲೀಲಾವತಿ, ೧೩-೧೫೮; ಸೂಕ್ತಿಸುಧಾರ್ಣವಂ, ೧೨-೪೨)

ಸ್ಮೇರಮುಖನೆತ್ತಿ ಸರಸೀ
ತೀರಕ್ಕೆಂತಾನುಮೆಯ್ದಲಾಗಳ್ ನೆವದಿಂ
ನೀರಂ ಕೊಳ್ವ ಮುೞುಂಗುವ
ನೀರೇಜಲೋಚನೆಯುಮಪ್ಪಿ ಭಾವಕಮುಕುರಂ ೪೪

(ಲೀಲಾವತಿ, ೧೩-೧೫೯)

ಎಲೆ ಚಿತ್ತೇಶ್ವರಿ ನಿನ್ನ ವಕ್ತ್ರಹಿಮಕೃದ್ಬಿಂಬಂ ಕಲಂಕಿರ್ದೊಡಂ
ಜಲದೊಳ್ ತಾಂ ತೆಗೆದಪ್ಪುದೆನ್ನ ಬಗೆಯಂ ನೋಡೆಂದು ಕಣ್ಣಿಂದೆ ಕಾ
ದಲಿಸುತ್ತಂತೆ ಮುೞುಂಗಿ ಬಂದಬಲೆಯಾ ವಕ್ತ್ರಾಬ್ಜಮಂ ಪೀರ್ದನಂ
ದೊಲವಿಂದೇಂ ಸ್ಮರಕೇಳೀಶೀಲನೊ ಕರಂ ಶೃಂಗಾರಕಾರಾಗೃಹಂ ೪೫

(ಲೀಲಾವತಿ, ೧೩-೧೬೦)

ಚಳಚಕ್ಷೂರಾಗದಿಂ ಬೆಂದೊಳಗೊಳಗೆರ್ದೆವೊತ್ತುತ್ತಮಿರ್ದಂಗನಾಸಂ
ಕುಳಮಂ ತಬಿಚ್ಚೈಸಿ ನೀರೊಳ್ ಮುಳುಗಿ ಪೊಲೆಗಳಿಂ ಪೋದುಪೆತ್ತ್ರಂಗಮಂ ತಾಂ
ಜಳಕೇಳೀವ್ಯಾಜದಿಂದಂ ತಳಿವಸೆ ಜಳದಿಂಪೊಂದಜಿಂ ಚಿತ್ರಮಂ ತಾಂ
ತಳೆದಂ ಸಂಭೋಗಸೌಖ್ಯಾಮೃತರಸಭರದಿಂ ಭಾರತೀಚಿತ್ರಚೋರಂ ೪೬

(ಲೀಲಾವತಿ, ೧೩-೧೬೧)

ಬಲ್ಗೊಡಪನ್ನವೀ ಪೊಲೆಯ ಬಿಣ್ಪೊದವಲ್ ಸುಕುಮಾರಿಯರ್ಗೆ ನೀ
ರ್ಗಲ್ಗಳ ಹಾರದೊಂದು ಹೊಱೆಯೇಕೆನುತುಂ ಜಲದೇವಿ ಕೊಟ್ಟವೋಲ್
ಕಲ್ಗಳನಾವಗಂ ಬಲಿದು ಬೆಟ್ಟಿದುವಾಗದ ಬಿಂದುಮೌಕ್ತಿಕಂ
ವಲ್ಗದುರೋಜಮಂಡಲದೊಳೇಂ ತುಱುಗಿರ್ದುವೊ ಕಾಂತೆಯರ್ಕಳಾ ೪೭

(ಲೀಲಾವತಿ, ೧೪-೧೫)

ನಾರೀವಿಕೀರ್ಣನವಕಾ
ಶ್ಮೀರಂ ಕಿಂಜಲ್ಕಮಂಗರಾಗವಿಮಿಶ್ರಂ
ವಾರಿ ಮಧುವಾಗೆ ಕೊಳನಂ
ಭೋರುಹಮಂ ಪೋಲ್ತುದಂದು ಪರಿದಳಿಪಟಲಂ ೪೮

(ಲೀಲಾವತಿ, ೧೪-೧೯)

ಕಡಲೊಳ್ ಪುಟ್ಟಿದೊಡೇನವಂ ಕೊಳದೊಳಾನುಂ ಪುಟ್ಟಿನೇ ವೈರಮಂ
ಬಿಡನೆಂದುಂ ಖಳನಬ್ಜನೆನ್ನೊಳವನಂ ನೀಂ ಗೆಲ್ದು ಸರ್ವಸ್ವಮಂ
ಪಡೆದೆಮ್ಮಬ್ಬರೊಳಾರೊ ಮಿತ್ರರುಗಳೆಂದಂಭೋರುಹಂ ಕೂರ್ತು ಕಾ
ಲ್ವಿಡಿದಿತ್ತಂತಿರೆ ತನ್ನ ಜೆಲ್ವನೆಸೆದತ್ತಾಸ್ಯಂ ಸರೋಜಾಸ್ಯೆಯಾ ೪೯

(ಲೀಲಾವತಿ, ೧೪-೨೧)

ಕರತಳವಾರಿ ತಳ್ತು ನಖರದ್ಯುತಿವಾರಿಯೊಳೊಂದಿ ಹಾರಬಂ
ಧುರರುಚಿವಾರಿಯೊಳ್ ಬೆರಸಿ ಸುಸ್ಮಿತದೀಧಿತಿವಾರಿಯೊಳ್ ತನೂ
ದರಿಯುರಲಂಪಿನಿಂ ತುಳುಕೆ ಕೃಷ್ಣನ ಮೇಲೆ ಪೊದಪ್ಪಿದಂದು ಕ
ಪ್ಪುರನಱಿಯುಂತಿರಾಲಿನಱಿಯುಂತಿರಪಲ್ಪಱಿಯುಂತಿರೆತ್ತಲುಂ ೫೦

(ಜಗನ್ನಾಥವಿಜಯಂ, ೧೪-೯೮)

ವನರುಹಲೋಚನಂ ನಿಜಕರಾಂಜಲಿವಾರಿಯನೊರ್ಮೆ ಪಾರ್ಶ್ವವ
ರ್ತಿನಿಯ ಸಮುನ್ನತಸ್ತನಯುಗಕ್ಕಭಿಷೇಕಮನೀಯೆ ಕಂಡು ಮಾ
ನಿನಿ ತನಗೀರ್ಷ್ಯೆ ಪುಟ್ಟೆ ಮನದೊಳ್ ನಯನಾಂಜಲಿವಾರಿಯಿಂ ಪುನಃ
ಪುನರಭಿಷೇಕಮಂ ನಿಜಸುವೃತ್ತ ಕುಚಕ್ಕೆ ಪೆಱಳ್ ನೆಗೞ್ಚಿದಳ್ ೫೧

(ಜಗನ್ನಾಥವಿಜಯಂ, ೧೪–೯೯)

ಮತ್ತೊರ್ವಳ್ ಮೇಳದ ವಧು
ವಿತ್ತಳ್ ಪರಿಹಾಸಕಾಂತಿಯಿಂ ಕೃಷ್ಣನ ಮೇ
ಲೊತ್ತುವ ನಿಜಕರಯಂತ್ರದ
ಕತ್ತುರಿನೀರ್ಗಮಳಮಲಯಜದ್ರವರುಚಿಯುಂ ೫೨

(ಜಗನ್ನಾಥವಿಜಯಂ, ೧೪–೧೦೪)

ತುಳ್ಕೆ ದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ
ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ ಲತಾಂಗಲೇಖೆಯಿಂ
ತುಳ್ಕೆ ವಿಳಾಸಮಂಗಜನ ಬಾಳ ಪೊಗರ್ ನಿಜಬಾಹುದಂಡದಿಂ
ತುಳ್ಕೆ ತುಳುಂಕಿದಳ್ ಹರಿಯಮೇಲೆ ಪೆಱಳ್ ತರಳಾಕ್ಷಿ ತೋಯಮಂ ೫೩

(ಜಗನ್ನಾಥವಿಜಯಂ, ೧೪–೧೦೩, ಸೂಕ್ತಿಸುಧಾರ್ಣವಂ. ೧೨–೭೧)

ಸ್ಫುರಿತಾಂಗಂ ಸೂಸೆ ಲಾವಣ್ಯಮನೆಸೆವಲರ್ಗಣ್ಣ್ ಚೆಲ್ಲಿಮಂ ಸೂಸೆ ಲೀಲಾ
ದರಹಾಸಂ ಸೂಸೆ ಬೆಳ್ದಿಂಗಳನಲಘುಕುಚಂ ಪೇಲುದಂ ಸೂಸೆ ಚಾಮೀ
ಕರಕಾಂಚೀಮಂಜುಗುಂಜಧ್ವನಿ ಕಿವಿಗಮರ್ದಂ ಸೂಸೆ ತಳ್ಪೊಯ್ವ ಸುಯ್ಯ್ ಕ
ತ್ತುರಿಗಂಪಂ ಸೂಸೆ ಲಕ್ಷ್ಮೀಪತಿಯ ತನುವಿನೊಳ್ ಸೂಸಿದಳ್ ನೀರನೊರ್ವಳ್ ೫೪

(ಜಗನ್ನಾಥವಿಜಯಂ, ೧೪–೧೦೪, ಸೂಕ್ತಿ ೧೨–೭೦)

ಸ್ತನಲಕ್ಷ್ಮ್ಯಾಲೋಕನಂ ಸಿಂಪಿಸೆ ಮುರರಿಪು ತನ್ವಂಗಿ ತಾರುಣ್ಯಭಾರಾ
ತಿನಿರೋಧಾಲಸ್ಯದಿಂ ಮೈ ಮುಱಿಂದಳೆನೆ ಪೆಱಳ್ ಶೋಭೆಯಿಂದುಚ್ಚ ಪೀನ
ಸ್ತನಪಾರ್ಶ್ವೋದ್ಭಿನ್ನವಸ್ತ್ರಾಂಚಳೆ ಹರಿಕರಯಂತ್ರಾಂಬುಧಾರಾವಳಿಸ್ಪ
ರ್ಶನಸೌಖ್ಯಾಪೇಕ್ಷೆಯಿಂ ಭೋಂಕನೆ ಮೊಲೆವೆಱಸಂ ಪತ್ತುವೋಲ್ ಶೋಭೆವೆತ್ತಳ್ ೫೫

(ಜಗನ್ನಾಥವಿಜಯಂ, ೧೪–೧೦೫)

ಮುಡಿಯೊಳ್ ಜೋಲ್ದಿರ್ದುದಂ ಮಲ್ಲಿಗೆಯ ಕಿಱುಮುಗುಳ್ಮಾಲೆಯುಂ ಸನ್ಮೃಣಾಳಂ
ತೊಡರ್ದತ್ತೆಂದಂತದರ್ಕನ್ನಳಿಸಿ ಮುಡಿಗೆ ಪಾಯ್ವಂಜೆಗಂ ಜೆರ್ಚೆ ಸಾಸಿ
ರ್ಮಡಿಪೆರ್ಚಲ್ ಭೋಂಕೆನಲ್ ಸ್ವೈಮುಱಿದು ಪಿಡಿವ ಲೀಲಾಬ್ಜದಿಂ ಪೊಯ್ವ ಪಾಂಗಿಂ
ಕಡೆಗಣ್ ಕೆಂಪಿಂದೆ ಸೂಸುತ್ತಬಲೆ ಹರಿಯೊಳಾನಂದನುಂ ತಂದಳೊರ್ವಳ್ ೫೬

(ಜಗನ್ನಾಥವಿಜಯಂ, ೧೪-೧೦೯)

ಸೆವನದಿಸಂಗರಾಗಮುಮಲಕ್ತಕರಾಗಮುಮೆಯ್ದೆ ಪೋಗಲಂ
ದವಯವದಲ್ಲಿ ತೋಱುವುಗು[1]ರ್ಗೂರ್ಯ್ಗಳು ತೊಟ್ಟ ತೊಡಂಗಳುಂ [2]ವಧೂ
ನಿವಹದೊಳಾವ ಮಂಡನಮುಮಂ ಗೆಲಸಂದುವು ಮಿಕ್ಕ ಮಂಡನಂ
ಯುವತಿಜನಕ್ಕದೇವುದೊ ರತೋತ್ಸವ ಚಿಹ್ನಮೆ ದಿವ್ಯಮಂಡನಂ ೫೭

(ಜಗನ್ನಾಥವಿಜಯಂ, ೧೪-೧೧೦)

ಪರಿದೊಳಪೊಕ್ಕು ಜೀರ್ಕೊಳಿಮೆಯುಂ ತೆಗೆದೊತ್ತಿದ ಕಯ್ಯೊಳೊರ್ವರೊ
ರ್ವರನಿರದೊತ್ತೆ ಸಂಚರಿಸಿ ಮೇಲೆ ಮುಸುಂಕುವ ಕುಂಕುಮಾಂಬುಗಳ್
ಕರದಳದೊಂದು ಕೆಮ್ಮುಗಿಲ ಕಾವಣದೊಳ್ ಕುಡುಮಿಂಚುಗಳ್ ತಡಂ
ಬರಿವವೊಲೇಂ ಬೆಡಂಗನುರ್ದರೋ ರುಚಿರದ್ವಿಜಳಲ್ಲತಾಂಗಿಯರ್ ೫೮

(ಅನಂತನಾಥಪುರಾಣಂ. ೭-೭೮, ಸೂಕ್ತಿಸುಧಾರ್ಣವಂ, ೧೨-೩೧)

ಮಿಸುಪಂ ತೋಳಸೊದಲ್ ತುಳುಂಕೆ ಪೊಲೆ ಮುಯ್ವಂ ಮೀಱೆ ಗಾತ್ರಾಪರ
ಪ್ರಸರಂಜೆತ್ತಿರೆ ಕೊಂಕಿ ಬಳ್ಳಿನಡು ಕೊಂಬಂ ತೀವಿಕೊಂಡೆತ್ತಿ ಪೂ
ಣಿಸಿ ತನ್ನಂ ಬಿಡೆಪೊಯ್ದು ಪೋಪವಳ್[1]ನಿಂದೊಡ್ಡೊಡ್ಡೆನು[2]ತ್ತೊರ್ವಳೊ
ಡ್ಡಿಸಿ ಪೊಯ್ಯಲ್ ನಿಮಿರ್ದೊಂದೆಭಾವದೊಳೆ ಭಾವೋದ್ಭೂತನಾದಂ ಸ್ಮರಂ ೫೯

(ಅನಂತನಾಥಪುರಾಣಂ, ೭-೫೯; ಸೂಕ್ತಿಸುಧಾರ್ಣವಂ, ೧೨-೩೨)

ಜಳಜಾತದ್ವಯಮೇತಮೆತ್ತಿದಪುದಂಭೋಜಾಳಿಗೆಂಬಂತೆ ಕೆಂ
ದಳಿರ್ಗಳ್ಗೊಂದಳಮುಷ್ಣಮಿತ್ರಪುವು ಶೀತದ್ಯೋತಿಗೆಂಬಂತೆ ಕೋ
ಮಳೆಯರ್ ಕೆಂದಳದಿಂ ಮೊಗಕ್ಕೆ ಜಳಮಂ ತುಳ್ಕಾಡಿ ಮುಟ್ಕಾಡಿದರ್
ಪ್ರಳಯಕ್ಷುಬ್ಧಮನೋಜವಾರ್ಧಿಗಳೊಳೆತ್ತಲ್ ನೋಡೆ ಚಿತ್ರಪ್ರಿಯರ್ ೬೦

(ಅನಂತನಾಥಪುರಾಣಂ, ೭-೩೬, ಸೂಕ್ತಿಸುಧಾರ್ಣವಂ, ೧೨-೩೫)

---

[1] ಪೂರ್ಣಯ್ಗಳಪಟ್ಟಪ್ರಣಂಗಳುಂ (ಅ) [2] ನೋಡು ನೋಡು ನೊಡೆ(ಸ)

ತ್ರೊಟ್ಟನೆ ಮಂಗಳಾನಕರವಂ ನೆಲೆವೆರ್ಚೆ ಸರಿತ್ತ್ರಟಂಗಳೊಳ್
ಕಟ್ಟೆದಿರಾಗಿ ಸಾರ್ಚೆ ನೃಪವಲ್ಲಭನಂ ಪೊಸಪೂವಿನಿಂದವಾ
ಯ್ದಿಟ್ಟೊಡನಾರ್ದು ವಾರವಧುವರ್ ಜಳಯಂತ್ರದಿನೊತ್ತೆ ಚಿತ್ರಮಂ
ನಿಟ್ಟಿಸಿ ಬಂದು ಪತ್ತಿದುವು ಸಂಧಿಸಿ ಕುಂಕುಮವಾರಿಧಾರೆಗಳ್ ೬೧

(ಸೂಕ್ತಿಸುಧಾರ್ಣವಂ, ೧೨-೩೫)

ಸುರದೀರ್ಘಿಕೆಯೊಳ್ ಕರಪು
ಷ್ಕರದಿಂದಭ್ರಮುಮನಭ್ರಮೂಪತಿ ತಳಿವಂ
ತಿರೆ ಜಳಯಂತ್ರದೆ ತಳಿದಂ
ಸರಸಿಯೊಳರಸಂ ಶಶಿಪ್ರಭಾವಲ್ಲಭೆಯಂ ೬೨

(ಸೂಕ್ತಿಸುಧಾರ್ಣವಂ, ೧೨-೩೬; ಚಂದ್ರಪ್ರಭಪುರಾಣಂ, ೭-೧೨)

ಜಳಧರಯಂತ್ರಮನೊತ್ತೆ ನೃಪಂ
ಲಲನೆಯ ಕುಚಯುಗಳಮಧ್ಯದಿಂದಿೞಿಯಲ್ ತ
ಜ್ಜಳಕೆ ತೆಱಪೀಯದಿರ್ದ
ತ್ತ್ರೊಳಕೊಂಡ ಪಯೋಧರಾಖ್ಯೆಯಂ ಪ್ರಕಟಿಪವೋಲ್ ೬೩

(ಚಂದ್ರಪ್ರಭಪುರಾಣಂ, ೭-೧೩೦; ಸೂಕ್ತಿಸುಧಾರ್ಣವಂ, ೧೨-೩೭)

ತರಳಾಪಾಂಗಲಸದ್ವಿಲಾಸರಸದಿಂದೋರೊರ್ವೆ ಲೀಲಾಪ್ರತಿ
ಸ್ಫುರಿತಭ್ರೂಯುಗವಿಭ್ರಮೈಕರಸದಿಂದೋರೊರ್ವೆ ಸಸ್ನೇಹಭಾ
ಸುರಚಿತ್ರಪ್ರಭವೋತ್ಥಭಾವರಸದಿಂದೋರೊರ್ವೆ ಮಾದೇವಿ ಭೂ
ವರನೊಳ್ ಸಿಂಪಿಸಿದಳ್ ಸುಗಂಧರಸದಿಂದೋರೊರ್ವೆ ತತ್ಕೇಳಿಯೊಳ್ ೬೪

(ಚಂದ್ರಪ್ರಭಪುರಾಣಂ, ೭-೧೩೨; ಸೂಕ್ತಿಸುಧಾರ್ಣವಂ. ೧೨-೪೦)

ಪ್ರಮದೆಯರಂ ಮನೋಭವನೆ ಸೂಱೆಗೊಳ್ವಪನಗ್ನಿಬಾಣದಿಂ
ಹಿಮಕರಬಾಣದಿಂ ತಿಮಿರಬಾಣದಿನೆಂಬಿನಮಿಂಬುವೆತ್ತದೇಂ
ನಿಮಿರ್ದುವೋ ಲೀಲೆಯಿಂದೆ ಜಳಯಂತ್ರಮನಂದು ಮಹೀಶನೊತ್ತೆ ಕುಂ
ಕುಮಜಳ ಚಂದನೋದಕ ಮೃಗೋದ್ಭವವಾರಿನಿಯುಕ್ತಧಾರೆಗಳ್ ೬೫

(ಚಂದ್ರಪ್ರಭಪುರಾಣಂ, ೭-೧೩೩; ಸೂಕ್ತಿಸುಧಾರ್ಣವಂ. ೧೨-೪೧)

ಬರತೆಗೆಪೊತ್ತ್ರೆ ಜೀರ್ಕೊಳವೆಯಂ ಪ್ರಿಯನೊತ್ತಿದ ವಾರಿಧಾರೆ ನೀ
ಳ್ದಿರೆ ¹ಚಳಚೂಚಕಾಗ್ರದೊಳೆಬಿಲ್ತರೆ ಕರ್ಚಿ¹ ಮೃಣಾಳನಾಳನುಂ
ಬೆರಸಿದ ಜಕ್ಕವಕ್ಕಿ ಕುಣಿದಾಡುವವೋಲ್ ಕುಚಯುಗ್ಮ²ನರ್ತನಂ²
ತರಳತರಂಗರಂಗದೊಳಿದೇನೆಸೆದಿರ್ದುದೊ ದೀರ್ಘನೇತ್ರೆಯಾ ೬೬

(ಲೀಲಾವತಿ, ೧೩-೧೪೬; ಸೂಕ್ತಿ, ೧೨-೪೪)

ಬಿರಿವಿಸವೆನ್ನ ಚಿತ್ತಮಿರುಳುಂ ಪಗಲುಂ ಖಳ ನಿನ್ನ ದೂಸಱಿಂ
ಸ್ಮರನಿಸೆ ತಳ್ತು ತಾಗುವರಲಂಬುಗಳೆಯ್ದವೆ ನೀನದೇಕೆ ನಿ
ಷ್ಠುರಮಣಿ ಕರಾಬ್ಜಯಂತ್ರಮುಖಮುಕ್ತಸಿತಾಂಬುಗಳಿಂ ಬೆಗಟ್ಟಿನಂ
ಸುರಿದಿನಿಸಿಲ್ಲದೆನ್ನೆರ್ದೆಯನೋವದೆ ನೋಯಿಸುವೈ ಮನಃಪ್ರಿಯಾ ೬೭

(ಲೀಲಾವತಿ, ೧೩-೧೫೫; ಸೂಕ್ತಿ, ೧೨-೪೫)

ಕಿಂಜಲ್ಕಕೆ ಕೆದಱುವಿನಂ
ಕಂಜದಿನುಱೆ ಮೋದುವಂತೆ ಕೆಂದಳದಿಂದಂ
ನಂ³ಜಿರೆ³ ನವರಜನೀರಜ
ಮಂಜರಿಯಂ ಪೊಗೆದು ಮೋದಿದಳ್ ನೃಪವರನಂ ೬೮

(ಲೀಲಾವತಿ, ೧೩-೧೫೬; ಸೂಕ್ತಿಸುಧಾರ್ಣವಂ, ೧೨-೪೬)

ಕತ್ತುರಿನೀರಿಂ ಕರ್ಪಂ
ಪೆತ್ತಂಗಂ ಕುಂಕುಮಾಂಬುವಿಂ ಕಡುಗೆಂಪಂ
ಪೊತ್ತು ನೆಱೆ ಪೆಱೆಯೆ ತಳಿರಂ
ಸುತ್ತಿದ ವನಚರಿಯನೊರ್ವಳನುಕರಿಸಿರ್ದಳ್ ೬೯

(ಚಂದ್ರಪ್ರಭಪುರಾಣಂ, ೭-೧೩೪; ಸೂಕ್ತಿಸುಧಾರ್ಣವಂ, ೧೨-೪೭)

ಘುಸೃಣರಸಂ ಮೊಲೆಯೆಡೆಯಿಂ
ದಸಿಯಳ ಬಾಸೆವಿಡಿದಿೞಿದು ಸೊಗಯಿಸಿದುದು ತೆ
ಳ್ಪಸಿಱ ಪೊಱಗಣ್ಗೆ ಮಿಸುಗುವ
ವಿಸರತ್ತಾಂಬೂಲರಾಗರಸರೇಖೆಯವೋಲ್ ೭೦

(ಚಂದ್ರಪ್ರಭಪುರಾಣಂ, ೭-೧೩೫; ಸೂಕ್ತಿಸುಧಾರ್ಣವಂ, ೧೨-೪೮)

---

¹ಜಳನಾಕುಚಾಗ್ರದೊಳೆಳಿತ್ತರೆಗರ್ಚಿ(ಸ) ²ಮುಂಡನಂ(ಸ) ³ಲಂಜಿಕೆ(ಅ)

ನೀರ್ ಪೊಗಸಿ ಪೊಯ್ಯೆ ಬಿರ್ಚಿದ
ಸೋರ್ಮುಡಿಯೊಳ್ ಮುಸುಕೆ ನಿಜಮುಖಾಬ್ಜಮನಿನಿಸಂ
ಕಾರ್ಮುಗಿಲೆಳಸಿದ ಹಿಮರೋ
ಚಿರ್ಮಾಲೆವೊಲೆಸೆದುದಸಿಯಳಾನನಬಿಂಬಂ ೭೧

(ಅನಂತನಾಥಪುರಾಣ, ೭–೪೭; ಸೂಕ್ತಿಸುಧಾರ್ಣವಂ, ೧೨-೫೩)

ಜಳಿವಂ ಕಾಂತನ ಮೊಗದೊಳ್
ತುಳುಂಕಲೆಂದಗಿದು ಪೊಗೆವ ಕಾಮಿನಿ ಕಯ್ಯಿಂ
ಕಳಸಂ ಜಗುಟ್ಟುತ್ತೊಡೆ ಮುಳುಗಿದ
ಕೆಳದಿಯ ಪೆರ್ಮೊಲೆಗೆ ಪಾಯ್ದುಳಬ್ಜಾಕರದೊಳ್ ೭೨

(ಲೀಲಾವತಿ, ೧೩–೧೩೧; ಸೂಕ್ತಿಸುಧಾರ್ಣವಂ. ೧೨–೫೬)

ಮುರಿದೆಲರೆತ್ತೆ ಪಯ್ಸರಿದು ತೋರಮನಾಳ್ದು ಪೊದಟ್ಟು ನೀಕ್ಟೆ ಪಂ
ಕರುಹಪರಾಗಮಂ ಜನದೆ ಸುಂದರಮಾಗೆ ಸರೋವರಾಬ್ಧಿಯಂ
ಸ್ಮರಸುರನಸ್ಲಿಭಂ ಪೊಸೆದು ಪುಟ್ಟಿಸುವಿಂದುಗಳಂದದಿಂದಮೇಂ
ಕರಮೆಸೆದಿರ್ದುವೋ ಮುಳುಗಿ ಮೂಡುವ ಮುಗ್ಧೆಯರಾನನೇಂದುಗಳ್ ೭೩

(ಲೀಲಾವತಿ, ೧೩–೧೭೩; ಸೂಕ್ತಿಸುಧಾರ್ಣವಂ, ೧೨–೬೭)

ಸುರ್ಕಟ್ಟು[1]ಮುರುಳಿಗುರುಳ್[1] ನೆಱೆ
ಸುರ್ಕಿದ ಕುಚಚೂಚುಕಂ ಜಿಳಿರ್ತಧರಂ ನೀರ್
ಪೊರ್ಕುಟ್ಟಿಯೊಳೆ ಜೋಲ್ದುಳ್ಳುಡೆ
ಸಾರ್ಕೆಯೊಳೇಂ ನೃಪನ ಮನಮನಳವಡಿಸಿದುದೋ ೭೪

(ಆದಿಪುರಾಣಂ, ೧೧-೧೪೯; ಸೂಕ್ತಿಸುಧಾರ್ಣವಂ, ೧೨–೮೨)

ತೊಳಗುವ ನಾಗಪಟ್ಟಣಿಗೆ ನಾಂದು ಶರೀರಮನೆಯ್ದೆ ಪತ್ತೆ ಬ
ರ್ಪೆಳೆಯಳನೋವಿದೇಸೆಲೆಗೆ ಬತ್ತಲೆ ಬಂದಪೆಯೆಂದು ಪತ್ತೆ ಪ್ರೊ
ಗೊಳಪೊಳಗೋಡಿಪ್ರೊಕ್ಕೊಡದನೀಕ್ಷಿಸಿ ಚಾಪಳೆಯರ್ ಪ್ರಮತ್ತಕೋ
ಕಿಳಕಳನಾದದಿಂ ನಗುತಲಿರ್ತ್ತರಿಳಾಪತಿಗಾದನುಟ್ಟಿಯುಂ ೭೫

(ಸೂಕ್ತಿಸುಧಾರ್ಣವಂ, ೧೨–೮೫)

---

[1] ಪಸೀಕ್ಕುರುಳ್ (ಸ)

ದಂತಚ್ಛದಾತಿರಾಗಂ
ಕುಂತಳಕೌಟಿಲ್ಯವೃತ್ತಿ ಪಿಂಗಿದುವಬಲಾ
ಸಂತತಿಗೆ ಪಯಃಕೇಳಿಯೊ
ಳೆಂತುಂ ನಿರ್ಮಳರಸಂಗದಿಂದಾಗದುದೇಂ ೭೬
(ಚಂದ್ರಪ್ರಭಪುರಾಣಂ, ೭-೪೫: ಸೂಕ್ತಿಸುಧಾರ್ಣವಂ, ೧೨-೭೬)

ನೀರಾಟವಾಡಿ ಪೊಱಮಡು
ವೈರಾವತದಂತೆ ದಿವಿಜದೀರ್ಘಿಕೆಯಿಂ ಕಾ
ಸಾರದಿನೇಂ ಪೊಱಮಟ್ಟನೊ
ವಾರವಧೂಸಹಿತಮನವನಿಪತಿ ಸಂತಸದಿಂ ೭೭
(ಅನಂತನಾಥಪುರಾಣಂ, ೭-೫೦; ಸೂಕ್ತಿಸುಧಾರ್ಣವಂ, ೧೨-೭೭)

ಪರಿದಾ ನೀಲಾಳಕಂ ಜೋಲ್ದಲೆದ ಕಚಭರಂ ಕೆಂಪುವೆತ್ತಿರ್ದ ಕಣ್ಗಾ
ವರೆ ಬೆಳ್ಪೇಱಿರ್ದ ಬಿಂಬಾಧರಮಣಿ ತನುವಂ ನಾಂದು ಪತ್ತಿರ್ದ ಚೀನಾಂ
ಬರಮಿಂಬಾಗಿರ್ಪಿನಂ ಬಂದುದು ಮೃದುತರಲೀಲಾಪದನ್ಯಾಸಮುದ್ಯ
ದ್ಧರಹಾಸಂ ಪೆಂಡವಾಸಂ ವಿಜಿತರತಿವಿಳಾಸಂ ಸುಖಶ್ರೀನಿವಾಸಂ ೭೮
(ಜಗನ್ನಾಥವಿಜಯಂ, ೧೪-೧೧೩; ಸೂಕ್ತಿಸುಧಾರ್ಣವಂ, ೧೨-೭೮)

ಕರಜಕ್ಷತದಶನಕ್ಷತ
ಸರಸಾಂಗುಲಿ ಪಾಣಿಪೀಡನ ಪ್ರತತಿಗಳಂ
ಪರಪುವ ಮಿಂಗಗಿದು ಭೀತೆ
ಪರತರಳೆ ಸರೋಜಪಂಡದಿಂ ಪೊಱಮಟ್ಟಳ್ ೭೯

ಮದಕಲಹಂಸಯಾನದ ರಥಾಂಗಕುಚಂಗಳ ವಾರಿಜಾತವ
ಕ್ತ್ರದ ಸಿರಿಯಿಂದಮೆನ್ನ ಸಿರಿ ತಾಂ ಮೆಱೆದಿರ್ದುದು ನಿಮ್ಮ ವಾರ್ಧಿನೋ
ಪದಿಸಲೆ ವಾರನಾರಿಯರಿರೆನ್ನನೆ ಬಿನ್ನನೆಮಾಡಿ ಪೋಗಲಾ
ಗದು ನಿಮಗೆಂದು ಕಾಲ್ವಿಡಿವವೋಲ್ ತೆರೆ ಪೊಣ್ಮಿದುದಬ್ಜಷಂಡದೊಳ್ ೮೦
(ಅನಂತನಾಥಪುರಾಣಂ, ೭-೫೧; ಸೂಕ್ತಿಸುಧಾರ್ಣವಂ, ೧೨-೮೦)

ಸ್ತನಕುಂಭದ್ವಿತಯಂಗಳೊಳ್ ನೆಱೆದಿರ್ಪ ಹಸ್ತಸ್ಪೃಷ್ಟಿಕಂ ಕುಂತಳಾ
ಗ್ರನಿವೇಶೇತ್ಕೃಷ್ಟಸಮಾಸ್ಯದರ್ಪಣದ ಮೇಲಿಂಬಾಗೆ ನಾಂದಂಬರಂ
ತನುವಂ ಪತ್ತೆ ದಿಗಂಬರೀಸುಚಿನಿಯುಂ ತಂದಿಟ್ಟನೆಂದಿರ್ದ ಕಾ
ಮಿನಿಯರ್ ಮಂಗಳಮಂತ್ರದೇವಿಯರೆನಲ್ ಕಣ್ಗೇಂ ಬೆಡಂಗಾದರೋ ೮೧
(ಅನಂತನಾಥಪುರಾಣಂ, ೭-೫೩; ಸೂಕ್ತಿಸುಧಾರ್ಣವಂ, ೧೨-೮೧)

ವೃಗಲೋಚನೆಯರ್ ಸಲಿಲಾ
ವಗಾಹವಂ ಮಾಣ್ದು ಪೋಱಗೆ ಸಿಲೆ ಕಜ್ತ್ರಿಲೆ ತಾ
ರಗೆಯನುಗುಟ್ದಿಪುದೆಂಬಿನ
ಪೊಗೆತಂದುವು ಸಲಿಲಬಿಂದುಗಳ್ ಸೋರ್ಮುಡಿಯೊಳ್ ೮೨

(ಮಲ್ಲಿನಾಥಪುರಾಣಂ, ೬-೩೧; ಸೂಕ್ತಿಸುಧಾರ್ಣವಂ, ೧೨-೯೪)

ಬಸಿಯೆ ಜಳಬಿಂದು ಕೇಶ
ಪ್ರಸರಮನೆಡಗಯ್ಯೊಳಡಸಿ ಪಿಡಿದೆಸೆದುದು ಕಾ
ರಿಸುವೊಲನಂಗನ ಫಣಿಯು
ಬ್ಬಸಮಾಗಿರೆ ಪೀರ್ದ ವಿರಹಿಜನಜೀವನಮಂ ೮೩

(ಲೀಲಾವತಿ, ೧೪-೭; ಸೂಕ್ತಿಸುಧಾರ್ಣವಂ, ೧೨-೯೫)

ಜಲಕೇಳಿಯ ಪೋರ್ಕುಳಿಯೊಳ್[1]
ಪೊಳೆವಾಱಂ[1] ಪಱಿಯೆ ಸೂಸಿ ಕಂಟಕಮೊಳ್ ಕೋ
ದೆಳೆಮುತ್ತುಗಳೆನೆ ನಿಂದವು
ಜಳಬಿಂದುಗಳಂಗನಾಪಯೋಧರತಟದೊಳ್ ೮೪

(ಲೀಲಾವತಿ, ೧೪-೧೪; ಸೂಕ್ತಿಸುಧಾರ್ಣವಂ, ೧೨-೯೬)

ಸಲಿಲವಿನೋದದೊಳ್ ಪರಿ ತುಳುಂಕಿದ ಕುಂಕುಮವಾಃಕಣೋತ್ಕರಂ
ಮಲಯಜವಾಃಕಣಾವಳಿ ಮೃಗೋದ್ಭವವಾಃಕಣಬೃಂದಮಾಕ್ಷಣಂ
ಲಲನೆಯುರಂಗದೊಳ್ ತೊಡರ್ದು ಪೋಗದೆ ನಿಂದುವೆನಲ್ ವರಾಂಗನಾ
ವಳಿಗೆಸೆದತ್ತು ಮಾಣಿಕದ ಮುತ್ತಿನ ನೀಲದನರ್ಘ್ಯಮಂಡನಂ ೮೫

(ಜಗನ್ನಾಥವಿಜಯಂ, ೧೪-೧೧೪; ಸೂಕ್ತಿಸುಧಾರ್ಣವಂ, ೧೨-೯೯)

ವನಮದು ಸುರಕುಜದಾರವೆ
ವನಜಾಕರಮದುವೆ ಸಿದ್ಧರಸಕೂಪಂ ತಾ
ನೆನೆ ನೃಪನೇ ವನಕೇಳಿಜ
ನನಿಮಿತ್ತದಿನರ್ಥಿಗೀಪ್ಸಿತಾರ್ಥಮನಿತ್ತಂ ೮೬

(ಚಂದ್ರಪ್ರಭಪುರಾಣಂ, ೭-೧೫೨; ಸೂಕ್ತಿಸುಧಾರ್ಣವಂ, ೧೨-೧೦೧)

---

[1] ಳೈಳಿಹಾರಂ(ಸ)

ಕೆಳದಿಯಾಲೋಕನ ಚುಂಬನಪ್ರಸವದಿಂ ಹಸ್ತಾಬ್ಜವಿನ್ಯಾಸದಿಂ
ಕೆಳದಿಯಾಂದೋಳಿತವಸೌಳಿಯಿಂ ಕೆಳದಿಯ ತಾಂಬೂಲಪ್ರದಾನಂಗಳಿಂ
ಕೆಳದಿಯಾನಮ್ರಶಿರಃಕರಾಂಜುಳಿಪುಟವ್ಯಾಲಗ್ನಭಾಳಂ ಜಗ
ತ್ಕೆಳದಿಯುಂ ಬೀಳ್ಕೊಡೆ ಪೋಯ್ತು ರಾಜಗೃಹದಿಂ ರಾಜನ್ಯಕಾಂತಾಜನಂ ೮೭

(ಅನಂತನಾಥಪುರಾಣಂ, ೭–೫೭; ಸೂಕ್ತಿಸುಧಾರ್ಣವಂ, ೧೨–೧೦೨)

ಘುಸೃಣರಸಾವಗಾಹಭರಮಂ ರದನಚ್ಛದರಾಗಭೋಗವಾ
ಗಿಸೆ ಘನಸಾರಚಂದನಜಳಪ್ಲವಮುಂ ದರಹಾಸಕಾಂತಿಗಳ್
ಪಸರಿಸೆ [1]ಮನ್ಮಥೋತ್ಸವರಸಾಮೃತದೊಳ್[1] ಮುಳುಗಾಡಿ ಮೂಡಿ ಸಂ
ದಿಸೆ ಪುಳಕಂ ನೃಪಂ ನೆಱೆದನಂಗನೆಯೊಳ್ ಜಲಕೇಳಿಲೀಲೆಯಂ ೮೮

(ಅನಂತನಾಥಪುರಾಣಂ, ೨–೧೯; ಸೂಕ್ತಿಸುಧಾರ್ಣವಂ, ೧೨–೧೦೩)

ಉಟ್ಟ ಘನಜವಳಿ ನಾಂದಳ
ವಟ್ಟಿರೆ ಮೆಯ್ಪತ್ತಿ ತೋಱೆ ಸರ್ವಾಂಗಮುಮಂ
ದುಟ್ಟುದು ಪೋಯ್ತೆಂದೊರ್ವಳ್
ಬಿಟ್ಟಿರ್ದ ಕಚಾಗ್ರದಿಂದೆ ಮುಸುಕಿದಳುಡೆಯಂ ೮೯

(ಸೂಕ್ತಿಸುಧಾರ್ಣವಂ, ೧೨–೬೯)

ಲಲನಾಸಂತತಿ ಪಲ್ಲವಾಧರದ ಕೆಂಪಂ ಕಣ್ಮಲರ್ಗಿತ್ತು ಕ
ಣ್ಮಲರ್ಬೆಳ್ಪಿಂ ನಿಜಪಲ್ಲವಾಧರಕೆ ಕೊಟ್ಟಂದೀಗ ಮಾಱಾಡಿದರ್
ಸಲಿಲಕ್ರೀಡೆಯೊಳೆಂಬಿನಂ ವನಿತೆಯರ್ ನೀರಾಟದಿಂದಾದ ಕ
ಣ್ಮಲರ್ಗೆಂಪಿಂ ನಿಜಪಲ್ಲವಾಧರದ ಬೆಳ್ಪಿಂ ನಾಡೆ ಕಣ್ಗೊಪ್ಪಿದರ್ ೯೦

(ಜಗನ್ನಾಥವಿಜಯಂ, ೧೪–೧೧೨)

ಭೂವರನಿತ್ತಂಬರ ಭೂ
ಷಾವಳಿಯುಂ ತೊಳಪ ತೋರಮುತ್ತಿನ ಪೊತ್ತಂ
ಪೂವಡಿಗೆವಡೆದುದೆಂಬಿನ
ಮಾ ವನಿತೆಯರಾಗಳೆಂ ಮನಂಗೊಳಿಸಿದರೋ ೯೧

(ಸೂಕ್ತಿಸುಧಾರ್ಣವಂ, ೧೨–೯೮)

---

[1] ತನ್ಮನೋತ್ಸವ ರತಾಜಲದೊಳ್ (ಸ)

ಸರಸಂ ಪೆಲ್ಲಿಸೆ ತೋಜಂದಾಕ್ಷಿಣ ಕರಾಂಭೋಜಾತದಿಂ ಸ್ನಿಗ್ಧಕೇ
ಸರಸಂ ನೇರ್ಪಡೆ ನೀವಿ ಕಂಧರಕೆ ಕರ್ಪುಂ ನೀಡಿ ರತ್ನಾಂಶುಭಾ
ಸುರಸಂ ಲಾಘವದಿಂದಲಂಕವಣೆಯುಂ ಪಾದಾಗ್ರದಿಂ ಮೆಟ್ಟಿ ತ
ತ್ತುರಗಾಧೀಶನ [1]ಬೆನ್ನೆ ಬಂದಸನವದ್ಯಂ ರಾಜವಿದ್ಯಾಧರಂ[1] ೯೨

(ಮಲ್ಲಿನಾಥಪುರಾಣಂ, ೮-೧೭೦; ಸೂಕ್ತಿಸುಧಾರ್ಣವಂ, ೧೮-೩೮)

ಕವಿವೃಂದ ಸ್ಫುಟನಾದದಿಂ ತಳಿದ ಕಾಶ್ಮೀರಾಂಬುವಿಂದೆತ್ತಿಯು
ಚರ್ಚವ ಚೀನಧ್ವಜದಿಂ ಪೊಡರ್ವ ಪಟಹಪ್ರಧ್ವಾನದಿಂ ಮಾಸಿನೀ
ನಿವಹಂ ಸೂಸುವ ಸೇಸೆಯುಂ ಪೊಳೆವ ನಾನಾತೋರಣಾನೀಕಪ
ಲ್ಲವದಿಂ ಪಲ್ಲವಿಸಿತ್ತು ಶೋಭೆ ನಗರಕ್ಕಂಭೋಜನಾಭಂ ಬರಲ್ ೯೩

(ಜಗನ್ನಾಥವಿಜಯಂ, ೧೬-೨೬)

ಅರುಣನಾತ್ಮವಿಭ್ರಮಮನುಡಿರ್ಪ್ಪುವಿನಂ ನಡೆತಂದು ಮಂಗಳ
ಶ್ರೀರಮಣೀಯಮೀಜನಮೆನಲ್ಕಿದಿರ್ಗೊಂಡು ನಿಜೇಕ್ಷಣಾಮೃತಾ
ಸಾರದ ಚಿಪ್ಪನಿರ್ಮಡಿಸಿ ಮುಕ್ತಸುಮೌಕ್ತಿಕಾಕ್ಷತಾ
ಸಾರಮನಂದು ಸೂಸಿದುದುಪೇಂದ್ರನಮೇಲೆ ಪುರಾಂಗನಾಜನಂ ೯೪

(ಜಗನ್ನಾಥವಿಜಯಂ, ೮-೨೬)

ತರಳವಿಲೋಚನದ್ಯುತಿ ದರಸ್ಮಿತಕಾಂತಿ ನವೀನಮೌಕ್ತಿಕಾ
ಭರಣಮರೀಚಿ ಕಂಗೊಳಿಸೆ ಮಂಗಳಲಕ್ಷ್ಮಿಯ ಮೇಳದಾಕೆಯರ್
ನೆರೆದವೊಲಾಗಳಂತಪುರದಂಗನೆಯರ್ ನಡತಂದು ಬಾಹುವ
ಲ್ಲರಿ ಕುಡೆ ಸೇಸೆಯುಂ ತ್ರಿಭುವನಪ್ರಭುಗಿಕ್ಕಿದರೊಲ್ದು ಸೇಸೆಯುಂ ೯೫

(ಜಗನ್ನಾಥವಿಜಯಂ, ೧೫-೬೯)

ವಿಗಳದ್ಧಮ್ಮಿಲ್ಲದಿಂ ಮಾಲೆಗಳುಗೆ ತೊಡವಿಂ ಮಂಜುಗುಂಜಾರವಂ ಕೈ
ಮಿಗೆ ಬಂದಾನಂದದಿಂ ನೋೞ್ಪಿಬಲಿಪುರ ವಿಲೋಲತ್ಕಟಾಕ್ಷಚ್ಛಟಾಶ್ರೀ
ಣಿಗಳಂ ಕೈಕೊಂಡಳುಂಬಂ ತೆರೆದುಪಗಿದನಂಗಾಮೃತಾಂಭೋಧಿಯೊಲ್ ತ
ನ್ನಗರಂ ಬೇಱೊಂದು ಚೆಲ್ವಂ ಕುಡೆ ನೃಪಗೃಹಮುಂ ಬಂದು ಪೊಕ್ಕಂ ನೃಪೇಂದ್ರಂ ೯೬

(ಜಗನ್ನಾಥವಿಜಯಂ, ೧೦-೯೨)

---

[1] ಬೆಂಗೆವಾಯ್ದು ಜಗದ್ವಂದ್ಯಂ ಸತ್ಯ ಭೂಪಾಲಕಂ(ಸೂ)

ಪ್ರತಿಗೃಹಕುಂಕುಮಚ್ಛಟೆಗಳಿಂ ಪ್ರತಿಮಂದಿರರಂಗವಲ್ಲಿಯಿಂ
ಪ್ರತಿನಿಲಯಪ್ರರೂಢಮಣಿತೋರಣದಿಂ ಪ್ರತಿಸದ್ಮವಾದ್ಯದಿಂ
ಪ್ರತಿಭವನೋತ್ಸವಧ್ವಜದಿನಾ ಪೊೞಲೊಪ್ಪಿರೆ ಸೂಸುವಂಗನಾ
ತತಿಗಳ ಸೇಸೆಯುಂ ತಳೆದು ಪೊಕ್ಕನುಪೇಂದ್ರನಿಳೇಂದ್ರಗೇಹಮಂ ೯೭

(ಜಗನ್ನಾಥವಿಜಯಂ, ೧೨-೫೮)

ತಳಿಯಿಸುತ್ತುಂ ಪೌರನಾರೀಜನದ ತಳಿವಶೇಷಾಕ್ಷತಾನೀಕಮಂ ಕೈ
ಕೊಳುತಂ ಬಂಧುವ್ರಜಾಶೀರ್ವಚನನಿಚಯಮಂ ಕೇಳುತಂ ತೂರ್ಯಘೋಷಂ
ಗಳನೊಲ್ದಾಲೋಕಿಸುತ್ತುಂ ಪುರದ ಸಿರಿಯನಂತಃಪುರಸ್ತ್ರೀಯರಿಂ ಮಂ
ಗಳವಸ್ತುಸ್ತೋಮದಿಂ ರಂಜಿಸುವರಮನೆಯಂ ಬಂದು ಪೊಕ್ಕಂ ನೃಪೇಂದ್ರಂ ೯೮

(ಜಗನ್ನಾಥವಿಜಯಂ, ೧೪-೩)

ಕ್ವಣಿತಾನೇಕಪ್ರಧಾನಂ ಸರಭಸಮಹಾಮಾತ್ಯಸಾಮಂತಯೂಥಂ
ಗಣಿಕಾಸಂತಾನನಾನಾನವಮಣಿಗಳ ವಿಸ್ತೀರ್ಣಮಂಜೀರಮುದ್ರಾ
ರಣಿತಂ ತದ್ವೇತ್ರಹಸ್ತಪ್ರಮುದಿತಮುಖರಪ್ರೋದ್ಗತಾಭೀಳಘೋಷಂ
ಪ್ರಣತಾಸಕ್ತಾವನೀಶಂ ಪ್ರಕಟನಿಕಟಮುಕ್ತಂ ಸಭಾವಾಸವಕ್ತ್ರಂ ೯೯

ಓರಂತೆ ಮೆಚ್ಚಿದಂ ಕೃತಿ
ಸಾರಜಲಕ್ರೀಡನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ವೀರಸಮುದ್ರಾಧಿನಾಯಕಂ ಸೋಮನೃಪಂ ೧೦೦

ಇದು ಸರಸ್ವತೀಸರ್ವಾಂಗವರ್ಣನಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವ ಮಲ್ಲಿನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಜಲಕ್ರೀಡಾವರ್ಣನಂ ದ್ವಾದಶಾಶ್ವಾಸಂ

# ಮಧುಪಾನವರ್ಣನಂ

ಮದಿರಾಪಾನವಿಕಾರಮುಂ ನವವಯಸ್ಸಂಪತ್ತಿಯುಂ ಬಂದು ನೋ
ಡದವೋಲ್ ನೋಡುವ ನಲ್ಲನಿರ್ಪಿರವುಮುತ್ಯುತ್ಸಾಹಮುಂ ಮೂಡೆ ಚಿ
ತ್ರದೊಳಾಗಳ್ ತನುಮಧ್ಯೆಗೇನೆಸೆದುದೋ ನೃತ್ಯಂ ಚತುರ್ಭಂಗಿ ಭೇ
ದದ ಲೀಲಾಭಿನಯಪ್ರಧಾನವಿಧಿಯಿಂ ಕಾದಂಬರೀಗೋಷ್ಠಿಯೊಳ್ ೧

(ಶೃಂಗಾರರತ್ನಾಕರಂ, ೨-೭೧; ಸೂಕ್ತಿಸುಧಾರ್ಣವಂ, ೧೩-೧)

ಇರೆ ನವಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋ
ಹರ ತಳಿರ್ಗೊಂಗಲಂ ತಳೆದ ಕೋಮಲವಲ್ಲರಿಯಂತೆ ರಕ್ತಪಂ
ಕರುಹಮನಾಂತ ಪಂಕಜಿನಿಯಂತೆ ನವೋದಿತಚಂದ್ರಬಿಂಬಮಂ
ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ ೨

(ಜಗನ್ನಾಥವಿಜಯಂ, ೧೬-೧೧೫; ಸೂಕ್ತಿಸುಧಾರ್ಣವಂ, ೧೩-೪)

ಪಚ್ಚಿ ಪರಕಲಿಸಿ ಬೆನ್ನೊಳ್
ಬಿಚ್ಚಿರೆ ಮುಡಿ ಕಳ್ಳಬೆಳ್ಳವಟ್ಟಲ್ ಬಾಯೊಳ್
ಬೆಚ್ಚಂತಿರೆ ಸತಿ ಶಶಿಯಂ
ಕಚ್ಚಿ ನೆಲಕ್ಕಿೞಿವ ರಾಹುವಂ ನೆಱೆ ಪೋಲ್ತಳ್ ೩

(ಸೂಕ್ತಿಸುಧಾರ್ಣವಂ, ೧೩-೬)

ತೊಡರೆ ಕೊದಳ್ ಪೊದಟ್ಟು ತುದಿನಾಲಗೆಯೊಳ್ ನಸುಗೆಂಪಿನಿಂದೆ ಕ
ಣ್ಣೊಡೆದು ಪಳಂಚಿ ಪುರ್ವನೆಸೆಯಿಕ್ಕುವ ತಗ್ಗುವ ತೂಗಿ ಬೀಗುತೊ
ರ್ಗುಡಿಸುವ ಜೋಲ್ವ ಡೊಂಪಿಸುವ ಭಂಗಿ ಮನಂಗೊಳೆ ತಕ್ಕಿನೆಕ್ಕೆಯೊಳ್
ತಡತಡಮೆಟ್ಟಿ ಪಾಡಿ ಪೊಸಕಳ್ಗಳನೀಂಟಿದುದಂಗನಾಜನಂ ೪

(ಸೂಕ್ತಿಸುಧಾರ್ಣವಂ, ೧೩-೭)

ಮುಡಿ ಮಕರಧ್ವಜಂಬೊಲೆಬಿಲುತ್ತಿರೆ ಬೆಂಬಿಡದೊಯ್ಯನೊಯ್ಯನು
ಳ್ಪುಡೆ ಕಟಿಸೂತ್ರದೊತ್ತಿನೊಳೆ ಜೋಲ್ದಿರೆ ನಾಣ್ ತಲೆದೋಱೆ ಕೂಡೆ ಕೂ
ಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ ತನ್ನ ತೊಡಂಕಪ್ಪೆದೆ ನೂ
ರ್ಮಡಿ ಮನದೊಳ್ ಪಳಂಚಲೆಯೆ [1]ತೆಕ್ಕೆಯಿನೆಕ್ಕೆಯಿನೊರ್ಗಳಾಡಿದಳ್[1] ೫

(ಪಂಪಭಾರತಂ, ೪-೯೦; ಸೂಕ್ತಿಸುಧಾರ್ಣವಂ, ೧೩-೮)

---

[1] ಥಕ್ಕೆಯೊಳಟ್ಕಿಜವಾಗೆಯಾಡಿದಳ್ (ಸೂ)

ತೋರಮುಡಿ ಬಿಟ್ಟಲೆಯೆ ಧಾರಿಣಿಯೊಳಗ್ರಕಚಮಾಲತಿಗಳೆತ್ತೆ [1]ಕರವಾರಿಜಚ
ಯಂಗಳ್[1]
ತೋರಮಾಲೆ ಹಾರಮಣಿ ಕಾರಮುಱಿತಿಯುಂ ಕಳಿತಿಯೆ ಸೀರೆ ನಸುಜಾಱಿತಿ ಪ್ರೋಜವಾ
ಱಿ[2]ಲೆಪದಿಂದಂ
ದಾರ[3]ಮನವುಂ ಸ್ಮರವಿಕಾರಮನೆ [4]ತಾಳೆ ಲಲಿತೋರು ಭರದಿಂದೊಲೆದು ಮೆಟ್ಟಿ[5]
ಕುಣಿದಳ್ ಶೃಂ
ಗಾರರಸ[6]ದೇವತೆಯು ವೀಱಿ ಮಿಗೆ ಸೊರ್ಕಿತ ಮದಿರಮನೀಂಟಿದರಪಾರಮಧುವೃದಂ[6] ೬

(ಸೂಕ್ತಿಸುಧಾರ್ಣವಂ, ೧೩-೯)

ಕುಡಿವುರ್ವಂ ನಸುನೀವುತುಂ ತಿಲಕಮುಂ ತಿರ್ದುತ್ತುಮಾಸ್ಯಾಬ್ಜಮುಂ
ತೊಡೆವುತ್ತುಂ ಕುಟಿಲಾಳಕಾವಳಿಗಳಂ ಸೈತೊತ್ತಿ ಚೆಲ್ವಾಗೆ ನೇ
ರ್ಪಡಿಸುತ್ತುಂ ಮದಿರಾಲಪೇಕ್ಷಣೆ ಮದಸ್ತಂಬೇರಮಾಕಾರದಿಂ
ನಡಪಾಡುತ್ತುಮುಪಾಂಗಣಪ್ರಘಣದೊಳ್ ತನ್ನಂಗಿ ಕಣ್ಗೊಪ್ಪಿದಳ್ ೭

(ಶೃಂಗಾರರತ್ನಾಕರಂ, ೨-೫೯, ಸೂಕ್ತಿಸುಧಾರ್ಣವಂ, ೮-೪೧೧)

ಮನಮುಸೊಱಲ್ಗೆ ನೂಪುರದ ಮೆಲ್ಲುಲಿ ಕಾಂಚಿಯ ಮಂಜುಳಸ್ವನಂ
ತನಗಿಸಿದೀಯೆ ಕಂಕಣಝಣತ್ಕೃತಮೊಪ್ಪಿರೆ ತೋರಹಾರಮೊ
ಯ್ಯನೆ ಪೊಲೆಯುಂ ಪಳಂಚಲೆಯೆ ರಾಗರಸಂ ಕರೆಗಣ್ಮೆ ವಾರಕಾ
ಮಿನಿ ನಯದಿಂ ಕರಂ ನಲಿದು ನರ್ತಿಸಿದಳ್ ಮಧುಪಾನಗೋಷ್ಠಿಯೊಳ್ ೮

(ಶೃಂಗಾರರತ್ನಾಕರಂ, ೧-೪೫. ಸೂಕ್ತಿಸುಧಾರ್ಣವಂ, ೧೩-೨)

ಕಡಗಣ್ಣ ಕೆಂಪು ಬೆಳ್ಪಿಂ
ಗೆಡೆಗುಡೆ ಬೆಳರ್ವಾಯ್ ಪಳಂಚಿ ಸೊಗಯಿಪೆ ಮುದ್ದಿಂ
ಗೆಡೆಗುಡೆ ಕೆಯ್ತುಂ ಸೊರ್ಕಡ
ಸಡಿಮಂತೆ ತೊದಳ್ ಪ್ರೌಢೆಯಿಡಂಬಿ ನುಡಿದಳ್ ೯

(ಸೂಕ್ತಿಸುಧಾರ್ಣವಂ, ೧೩-೧೬)

---

[1]ನನೆಸೆಜನು ನಲಗರ್ಣಿಣ್ಗಳ್(ಸೂ) [2]ಮುಂದದಿಂಕಂಡಾ(ಸ) [3]ತಾಳ್ದ ನರನೂರುಬಲದಿಂ ಮೊಲೆಮುಯ್ಗೆಱೆ(ಸ) [4]ವಾರಿಧಿ ಮೇರೆಯು ನಿಕ್ರಮಿಪ ವಾರಮಧುಗಳ್ ನುಡಿಸು ಸೊರ್ಕಿ ದೆಸೆವಿಟ್ಟರ್(ಸೂ)

ತುಂಬಿಗುರುಳೊಳ್ ತಡತಡಂಬಡೆದು ದುಂಬಿಗಳ ಬಿಂಬಮೆಳಸುತ್ತಿರೆ ಮುಖಾಂಬುಜದ ಕಂಪಂ
[೧]ಪೊಂ[೧]ಬಳೆಯ ಸೋರ್ಮುಡಿ ವಿಡಂಬಿಸೆ ಮನೋಜನಲರಂಬು ಮಱಿತಿಯುಂ ಕಱಿತ[೨]ಯೆ ಕಾರಮುಗಿಲಂ[೨] ಬ
ಕ್ಕಂಬಯಲೊಳೆಂಬವೊರ್ಮ ವೀಂಜೊಣಗರ್ಗಳಂತಿರೆ ತೆಱಂಜೊಳೆವ ನೀಳ್ದ ನಿಡುಗಣ್ [೩]ಬೆಳಗೆ ತೊಂ[೩]
ಡಂ ಜೆಳಗೆ [೪]ತೊಂಡರವ[೪] ಸಾಱಿತ್ತಯಿನೊಡಂಬಡುತಲಾಡಿದಳು [೫]ಜೆಂಬಱಿಯು [೫]ಸಂಭ್ರಮದಲೊರ್ವಳ್ ? ೧೦

(ಸೂಕ್ತಿಸುಧಾರ್ಣವಂ, ೧೩-೧೦)

ಸಕಲಸುಗಂಧಸಾರಮೊದವಿಂ ಪೊರೆಯೇಱುತೆ ಗಂಧದಿಂದೆ ಕೌ
ತುಕಮೆನಲೊತ್ತು[೬]ತೊಪ್ಪಿ[೬] ತಿಳಿಗಳ್ಗಳಸೊಪ್ಪುವ ಹೇಮಪಾತ್ರೆಯೊಳ್
ಸುಕರಮೆನಲ್ಕೆ ತುಂಬಿ ಸಖಿಯರ್ಮರಸುತ್ತುಮದಿಂದೆ ಪೀರ್ವಳ
ಚ್ಚುಕಮೆನೆ ರಾಜಮಂಜರಿಯದೊಂದುದಿನಂ ಪೆಸರ್ವೆತ್ತ ಜೊನ್ನಮೊಳ್ ೧೧

ಕಡುಹುಳಿಗಳ್ಕೆ ಪೊಂದುವರೆವಟ್ಟಲನಿಟ್ಟೆಣೆಯಲ್ಕೆ ಮೂಱುಸೂಱಿರ್
ಮಿಡಿಮಿಡಿವರ್ಗಮುಂ ಕುಡಿಮ ಚಪ್ಪಱದಿಕ್ಕಿದ ಸಣ್ಣಮೀನ್ಗಳಂ
ಮಿಡಿಗರಮಂ ಕುಱುಂಕಿ ಮುಗುಳೊಟ್ಟಿಲು ಪಜ್ಜಿಸೆ ತೇಗಿ ಬಾಱಿತ್ಗಡೆ
ಸ್ಸೊಡಯನೆನುತ್ತಮೇಂ ಮೆಱೆದರೋ ಸುಖಿಗಳ್ ಮಧುಪಾನಕೋವಿದರ್ ೧೨

ಹುಳಿ ಘನವಾಗೆ ಕೊಕ್ಕರಿಸಿ ಗುಗ್ಗುರಿಯಿಕ್ಕಿರೆ ಮುಕ್ಕಿ ಮಿಕ್ಕುದಂ
ಕೆಲದವರ್ಗಿತ್ತು ಮತ್ತೆ ತಿಳಿಗಳ್ಗೆಱೆದಿಯಲ್ ಕುಡಿವಳ್ಳಿ ಹಿಗ್ಗಲಾ
ಗಳೆ ಪಣಿಪಿದ್ದು ಪೆಂಡಣಿಸಿ ಬೀಬ್ಬಿ ನೆಬಿಲ್ ಸುಱಿಯಲ್ಕೆ ನಕ್ಕು ಕಂ
ಗಳನಲೆಮುಚ್ಚಿ ಮತ್ತೆ ತೆಱತಪ್ಪಿತೆಸೆದರ್ ಮಧುಪಾನಗೋಷ್ಠಿಯೊಳ್ ೧೩

ಅಲರ್ಗಣ್ ಕೆಂಪಡರಲ್ಕೆ ಪೊಂಗಿದಧರಂ ಬೆಳ್ಪೇಱತ ರೋಮೋದ್ಗಮಂ
ತಲೆದೋಱಲ್ ಬೆಮರುಣ್ಮೆ ಲಜ್ಜೆ ತೊಲಗಲ್ ನಿತ್ರಾಣವಾಗಲ್ ಮದಂ
ಬಲಿಯಲ್ ಕಣ್ ಮುಗಿವುತ್ತೆ ಮೂರ್ಛೆ ಮಿಗೆ ತೋಱಲ್ಕಂದು ಚೆಲ್ವಾದುದ
ಗ್ಗಳಮೆಂಬಂತಿರಲಿನ್ನದೇಂ ಪೊಗೞ್ತೆನೋ ಕಾದಂಬರೀ ಸಂಗಮಂ ೧೪

---

[೧]ಪುಂ(ಸ) [೨]ಯಲಂಬುದಮಿದೆಂ(ಸ) [೩]ಬಳಸೆತೊಂ(ಸ)
[೪]ಬೆಂಬೊಪರ(ಸ) [೫]ಜೊಂಬುಳಿಯಜೆಂಬಱಿಯು(ಸ) [೬]ತೋಪ (ಸ)

ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ತೆಗೆದೀಂಟುವಲ್ಲಿ ತ
ನ್ನಧರದಳಾಗ್ರಮಂ ಪೊರೆಮಮಂ ಮಧುವಂ ಬೆಳಗಾಗಿ ನೋಡುತಂ
ಮಧುರಸಮಲ್ತು ಕುಂಕುಮರಸಂ ದಿಟಮೆಂದು ಬಟಿಕ್ಕೆ ಶಂಕೆ ತ
ನ್ನಧುಮದಗಂಧದಿಂ ತೊಲಗೆ ಸಲ್ಲಿಸಿದಳ್ ಮಧುವಂ ನಿಜೇಚ್ಛೆಯಿಂ ೧೫
(ಜಗನ್ನಾಥವಿಜಯಂ, ೧೬–೧೧೬, ಸೂಕ್ತಿಸುಧಾರ್ಣವಂ, ೧೩–೨೫)

ತನುಲತೆಗಂಕುರಂ ತಳಿರಲರ್ ಮಧುಸಂಗಮೊಳಾಯ್ತು ಚೋದ್ಯಮೆಂ
ದೆನೆ ಮಧುಪಾನಜಾತಪುಳಕೇಕ್ಷಣಶೋಣಿತ ಘರ್ಮಬಿಂದುಗಳ್
ತನಗೆಸೆಯಲ್ ಮಹೋತ್ಸವದೆ ಕೋಗಿಲೆವೇಣ್ ಗಟಿಸಂ ನೆಗಬ್ಚಿವಂ
ತನುವಿಪ ಸೊರ್ಕಿನಿಂ ಪಿಕನಿನಾದೆ ಪೆಜಳ್ ಗಟಿಸಂ ನೆಗಬ್ಚಿದಳ್ ೧೬
(ಜಗನ್ನಾಥವಿಜಯಂ, ೧೬–೧೧೬, ಸೂಕ್ತಿಸುಧಾರ್ಣವಂ, ೩–೨೬)

ಎನ್ನ ಕೆಲಂಗಳೊಳ್ ಮೆಱತವೃತಿರ್ದಪುವೀ ಪ್ರತಿಪೂರಕೈರವಂ
ತನ್ನ ಬೆಡಂಗನೆಂದು ಪೆಣಸುತ್ತಮಱತೊಳ್ ತೊಡರ್ದಿಂತವಲ್ತೆ ಕೆಂ
ಪಂ ಮುಳಿಸಿಂದವಾಂತವೆನೆ ಕೆನ್ನೆವರಂ ನಿರ್ಮಿರ್ದಕ್ಷಿಗಳ್ಗೆ ರಾ
ಗಂ ಮಧುಸೇವೆಯಿಂ ನೆಗೆಟ್ಚಿ ರಂಜಿಸಿದರ್ ಮಧುಮತ್ತಕಾಂತೆಯರ್ ೧೭
(ಜಗನ್ನಾಥವಿಜಯಂ, ೧೬–೧೧೮; ಸೂಕ್ತಿಸುಧಾರ್ಣವಂ, ೧೩–೨೭)

ಮದಿರಾಪಾನವಿಕಾರದೊ
ಳೊದವಿದಸಭ್ಯೋಕ್ತಿ ಬೇಱತ ಬಗೆಗೊಳಿಸೆ ಕದ
ಕ್ಕದಿಸೆ ಪೊಲೆ ನಳಿಯೆ ನಡು ಮಿಳಿ
ರ್ದದಿರೆ ಕುರುಳ್ ಸುದತಿ ಜತಿಗೆ ಮೆಟ್ಟಿದಳೊರ್ವಳ್ ೧೮
(ಶೃಂಗಾರ ರತ್ನಾಕರಂ, ೧–೪೭: ಸೂಕ್ತಿಸುಧಾರ್ಣವಂ, ೧೩–೩)

ಮುದದಿಂದುಣ್ಮಿದ ಪಾಟಲಚ್ಛವಿಯ ವಕ್ತ್ರಂ ಘೂರ್ಣಿತಾಕ್ಷಿದ್ವಯಂ
ಪದಪಂ ಬೀಱಲ ಲತಾಂಗಿ ತನ್ನೊಳೆ ತೊದಲ್ಮಾತಾಡುತಂ ಪಾಡುತೊಂ
ದಿದ ತನ್ನ ನೆಱಲ್ಗೆ ಪೆಚ್ಚಿ ತೊಲಗುತ್ತಂ ಮುಗ್ಗಿ ಪ್ರಿವೃತ್ತೆ ನೂಂ
ಕದಿರೆಂದಿಂಗದಿರ್ಗಂಡು ನಕ್ಕು ನಲಿದಳ್ ಕಾದಂಬರೀಗೋಷ್ಠಿಯೊಳ್ ೧೯

ಅಱಿಸಿದತ್ತರೊತ್ತೆಯಸುರಾಗಿಗಳೆಲ್ಲಿಯುದಲ್ಲಿ ರಾಗಿ ಪೆ
ಸನ್ಸರಿಯ ಭಾರತಸ್ಪಲಿ ನೀಲಿನೆ ಕೋಮಳೆ ಬಿಚ್ಚಬಿಚ್ಚ ಬಿಂ
ಜಾರಿಯ ಕವ್ಯದಿಕ್ಕಟಿಂಪೊಳರ್ಪವನಾವಗೆ ಜೋಪರಣಂ ಸಂ
ಸಾರನೆಮತ್ತ ನಕ್ಕು ಕುಣಿದಾಡಿತು ಮದ್ಯಪಿಬಂತ ನಾರಿಯರ್ ? ೨೦

ಆರಿವಸುಟ್ಟ ಹೂವೆಲೆಗೆ ನಿನ್ನಯ ಬಾಯದು ಸಮ್ಮ ತಮ್ಮನಾ
ದಾರಿಯೊಳಿರ್ದ ಚಪ್ಪರದ ಮೇಲೊಗೆತಂದಸುಯಿಂದು ನಾಳೆ ಕೇ
ಳಾರಿಯರಮ್ಮ ಕಟ್ಟಿದಳು ಹೆಬ್ಬುಲಿಯಂ ಕರೆಯಲ್ಕೆ ನೋಡು ಹೆ
ಮ್ಮಾರಿಯೆ ಬಲ್ಲುದೆಂದೆನುತಲೊರ್ವಳು ಸೊರ್ಕಿಯೆ ನೃತ್ಯವಾಡಿದಳ್ ? ೨೧

ಆನೆಯಿದಲ್ಲಿ ಬೆಕ್ಕು ಮುಡಿಗೋಡಗದಂತಿದೆ ಸಾದುಹೂತೊಡಂ
ದಾನವಕೊಟ್ಟನಯ್ಯನೆಸೆನಾಗರಬಾವಿಯಕೊಂಡು ಪೋದೊಡಂ
ಮಾನಕೆ ಮಾವಖಂಡುಗದ ಗೊಂಗಡೆಯೆಂದು ವಿಕಾಳಗೊಂಡು ಸು
ಮ್ಮಾನದಿ ಕೈಗಳಂ ಮುಗಿದು ನಕ್ಕದು ಮಿಕ್ಕ ಪಿಬಂತನಾರಿಯರ್ ? ೨೨

ತಂಗಿಯ ಹಣ್ಣ ಕೈಮುಗಿದು ಮಂಗಳವಾದ ನಾಳೆ ಕಂಡನಾ
ತಿಂಗಳ ಮಾವನಣ್ಣ ಬೆಳುದಿಂಗಳ ರಕ್ಕಸಿ ಛಾನ ನೋಡವಂ
ಸಂಗಕೆ ಹೂವ ಹೂಳಿರಿಸಿದಂಗುಟದಲ್ಲಿಮ ಮೆಚ್ಚಿ ಮೆಚ್ಚನೀ
ಯಂಗಕೆನುತ್ತ ನಕ್ಕು ಕುಣಿದಾಡಿತು ಮದ್ಯಪಿಬಂತನಾರಿಯರ್ ! ೨೩

ಏಗುವೆನೇಗುವೆಂ ಮುಗಿಲು ಬಿದ್ದಿದೆ ಮಂಡೆಯಮೇಲೆ ಹಾವು ಹಾ
ನಾಗಯಸಾಮಿ ಜೋಯೆಸುತೆ ಕತ್ತಿಗೆ ಕೈಮುಗಿವಕ್ಕ ಬಲ್ಲೆನಾಂ
ಬಾಗಿಲಕಂತಿಯಂಣಗೆಱ ನೋದರ ನಾದಿನಿ ದಿಮ್ಮದಿಮ್ಮತೋ
ಕೋಗಿಲೆಗೂರು ಸಾರೆಯೆನುತೊರ್ವಳು ಸೊಕ್ಕಿಯೆ ನೃತ್ಯವಾಡಿದಳ್ ? ೨೪
(ಸೂಕ್ತಿಸುಧಾರ್ಣವಂ, ೧೩-೨೧)

ಬೆಟ್ಟವಿದಿರಾಗಿ ಬರುತಿದೆ
ಮುಟ್ಟುತ್ತಿದೆ ಮುಗಿಲು ತಳಿಯ ಧರಣಿಯು ಬೆನ್ನಱ
ಯಟ್ಟುತಿದೆ ಕೇಳು ಕೇಳದೀ
ಕೊಟ್ಟಿಗೆಯಂ ನೆರೆದು ಪೂಸೆ ಮಾಣ್ಬುದು ಬೇಗಂ ? ೨೫

ಓರಂತೆ ಮೆಚ್ಚಿದಂ ಕೃತಿ
ಸಾರಂ ಮಧುವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೨೬

ಇದು ಸರ್ವಾಂಗದರ್ಪಣಾಯಮಾನ ಪ್ರತಿಭಾಸಮೋತ್ತನ ಪುರಾತನ
ಪ್ರಮಾಣಿಕವಿಪುಂಗವ ಮಲ್ಲಿನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಮದ್ಯಪಾನವರ್ಣನಂ ತ್ರಯೋದಶಾಶ್ವಾಸಂ||

# ಸುರತಕ್ರೀಡೆ

ಪರಿರಂಭಂ ಚುಂಬನಂ ಸೀತ್ಕೃತಿ ಗಳರುತಿ ದಂತಕ್ಷತಂ ರೇಖೆ ಹೊಯ್ಗುಳ್
ಕರಣಾಂಗಳ್ ಪಲ್ಲಟಂ ನಚ್ಚಿನ ಮುಖರತಿ ಸುಯ್ ಕಂಪನಂ ಸ್ವೇದಮಂಗಾಂ
ತರಪೂರಂ ರೋಮಹರ್ಷಂ ನಯನಮುಕುಳನಂ ಮಂಚಚಂಚಚ್ಛಕುಂತೀ
ಸ್ವರಮೊಪ್ಪಲ್ಕೊಪ್ಪುವನ್ನಂ ಪೆಱತಗೆ ಕವಿತೆಯೊಳ್ ನಾಡೆ ಸಂಭೋಗದೊಳ್ಪಂ ೧
(ಸೂಕ್ತಿಸುಧಾರ್ಣವಂ, ೧೪-೧)

ರತಿಗೇಹಂ ಹಾಸುಮಂಚಂ ಪಡಿಗನಡಪವಿಂಗೆಜ್ಜೆಯುಂ ಪಾನಕಂ ಧೂ
ಪಿತವಸ್ತ್ರಂ ಮಂಡನಂ ಲೇಪನಮುಲಸ್ವಸೆ ಪೂ ದರ್ಪಣಂ ವೀಜನಂ ಸ
ತ್ಕೃತಿಚಿತ್ರಂ ವೀಣೆ ನೇತ್ರಂ ಸಹಚರಿಯನುಳ್ಳಂಗವರ್ಗೈಕರೂಪಾ
ಸ್ಥಿತೆ ಜಾಣಾಳ್ಕಾಕೆ ವಸಾಬ್ಧಿಂ ವಿಟಗಭಿಮತಮುಂ ಕಾಮಸಾಮ್ರಾಜ್ಯಮೊಪ್ಪಂ ೨
(ಸೂಕ್ತಿಸುಧಾರ್ಣವಂ, ೧೪-೨)

ನೆಲೆಮೊಲೆಯೊತ್ತೆ ವಾತಮಧುರಾಮೃತಸೇವನೆಯಿಂದೆ ಪಿತ್ತಮು
ಗ್ಗಲಿಸಿದಲಂಪಿನಿಂದಮಿರುಳಿಂಟು ಪಗಲ್ ಪದಿನಾಱುಗೊಳ್ವ ಕೋ
ಟಲೆಯೊಳೆ ಪೋಗುಗುಂ ಕಫಮದಕ್ಕೆಱಿಸಿಜ್ಜರ ಕೇಳ್ದಿ ಶುಂಠಿ ಪಿ
ಪ್ಪಲಿ ಮೆಣಸೇಂ ತ್ರಿದೋಷಹರಣಕ್ಕಬಲಾಜನಸೇವೆ ಸಾಲದೇ ೩
(ಸೂಕ್ತಿಸುಧಾರ್ಣವಂ, ೧೪-೪)

ಹಾರಮನೊಯ್ಯನೋಸರಿಸುವಂತೆ ಕುಚಂಗಳ ಮೇಲೆ ನಾಂಟಿಪಂ
ಕೂರುಗುರಿಂದೆ ಮತ್ತೆ ಪಣೆಗತ್ತುರಿಬೊಟ್ಟು ಕಲಂಕಿತೆಂದು ತಾ
ನೋರೆಮನೊಮ್ಮೆ ತಿದ್ದುವವೊಲೊಯ್ಯನೆ ಚುಂಬಿಸನಕ್ಕ ನೋಡೆ ಚಿ
ತ್ತಾರಮನೆಲ್ಲಿ ಕಲ್ತನೆ ಮನೋಜನ ಸತ್ಕವಿ ಕಾಮಭೂಪನಂ ೪

ಬೆರಲೊಳ್ ಮುದ್ರಿಕೆಯಂ ತೊಡರ್ಚುವ ಕಪೋಲಸ್ಥಾನದೊಳ್ ಪತ್ರವ
ಲ್ಲರಿಯಂ ಚಿತ್ರಿಪ ಹಾರಮಂ ಪಿಡಿದು ಸೋಟ್ಪಿಸ್ಥ್ಯಾಂಬುಜುಸ್ವೇದನಂ
ಕರದಿಂದಂ ತೊಡೆದೊಯ್ಯನುಳ್ಳುಡೆಗೆ ಕಾಂಚೀದಾಮಮಂ ಸಾರ್ಚುವೊ
ಳ್ಪುಗಳಂ ನೇಪರ್ದೆ ಶೀರ್ದುವೀ ನೆನಪೆ ಕೃಷ್ಣಂ ಪೊರ್ದಿದಂ ನಲ್ಲಳಂ ೫
(ಜಗನ್ನಾಥವಿಜಯಂ, ೧೦-೩೯, ಸೂಕ್ತಿಸುಧಾರ್ಣವಂ, ೬-೯೭)

ನುಡಿಯಲ್ ಕೇಕಿ ಶುಕಾಳಿಯೊಳ್ ನುಡಿವ ಸೋಂಕಲ್ ಪಿಂಗೆ ಸಾರ್ದಿರ್ದ ಕೌ
ಳುಡೆಯುಂ ಸೋಂಕುವ ವಕ್ತ್ರಮುಂ ಪಡೆದು ನೋಡಲ್ ಪಾರ್ಶ್ವವಿದ್ಯಂಗಳಿಂ
ನಡೆನೋಟಿತ್ರಪೆಪಳಪೊಂದು ಭಾವರಸಗರ್ಭಕ್ರೀಡೆಯುಂ ನಾಡೆಯುಂ
ಪಡೆವನ್ನಂ ಮುದಮುಂ ನೃಪೇಂದ್ರಸತಿರಾಗೋದ್ರೇಕಮುಂ ತಾಳ್ದಿದಂ ೬

ಒಲವಿಂ ನೋಡುವ ನೋಟದಿಂ ಪಡೆದು ಸೋಂಕುತ್ತಿರ್ಪ ಸೋಂಕಿಂ ಮನಂ
ಗೊಲೆ ಮಾತಾಡುವ ಮಾತಿನಿಂ ಕಳೆದು ಲಜ್ಜಾಸಾಧ್ವಸೋದ್ರೇಕಮುಂ
ಜಲಜಾತಾಕ್ಷನೊಳಾಕೆ ಬಿಚ್ಚತಿಕೆಯುಂ ಮಾಡಲ್ ಬಳಿಕ್ಕಂ ಕಳಾ
ನಿಲಯಂ ಮಾಡಿನನೊಲ್ದು ಚುಂಬನಪರಿಷ್ವಂಗಪ್ರಪಂಚಂಗಳಂ ೭

(ಜಗನ್ನಾಥವಿಜಯಂ, ೧೦-೧೪೦; ಸೂಕ್ತಿಸುಧಾರ್ಣವಂ, ೬-೧೧೬)

ಉರದಿಂ ಪೆರ್ಮೊಲೆ ಜೆಂಗೆ ಬೀಗೆ ಜಿಮುಮುಂ ಬಲ್ವಜ್ರಲೇಪಂಬೊಲಾ
ಗಿರೆ ಕೀಲ್ಗೊಟ್ಟು ಬೆಡಂಗನೀಯೆ ಪುಳಕಂ ತೋಳ್ ತಳ್ತು ಗಂಟಿಕ್ಕಿದಂ
ತಿರೆ ಮೆಯ್ಮೆಯ್ಯೊಳಡಂಗೆ ತಳ್ತಮರೆ ಗಾಢಾಲಿಂಗನಂಗೆಯ್ದು ನ
ಲ್ಲರಪೇನಿರ್ದರೊ ಕಾಸಿ ಬೆಚ್ಚತೆಱದಿಂ ಶ್ರೀಸತ್ಯಭಾಮಾಚ್ಯುತರ್ ೮

(ಜಗನ್ನಾಥವಿಜಯಂ, ೧೧-೬೦)

ಮಾನಿನಿಯ ಸುರತರತ್ನನಿ
ದಾನಂ ಚಾತುರ್ಯದೀಪವರ್ತಿಯು ತಾನುಂ ದಲ್
ತಾನೇಂ ಕೋಳ್ಪೋಯ್ತೆನಲಾ
ಮಾನಿನಿಯೊಳ್ ಕ್ರೀಡಿಸಲ್ಕೆ ವಧುಮನವಡೆದಂ ೯

ಶಕುನೀಪಕ್ಷ್ಮಾರವಂ ಮನ್ಮಥರಸಬಹುಳಂ ಸೀತ್ಕೃತಂ ಕಂಠನಾದಂ
ಮಕರಾಂಕಜ್ಯಾಲತಾಟಂಕರರುತಿ ದೃಢಹಸ್ತಪ್ರಹಾರಸ್ವನಂ ದ
ರ್ಪಕಭೇರೀಭಾಂಕೃತಂ ತಾನೆನೆ ಯುವತಿರತಾರಂಭಕೋಳಾಹಳಧ್ವಾ
ನಕಮಂತಾ ಕಂತುಸೇನಾಕಳಕಳವೊಲಾಶ್ಚರ್ಯಮುಂ ತಂದುದಾಗಳ್ ೧೦

(ಜಗನ್ನಾಥವಿಜಯಂ, ೧೬-೧೨೩; ಸೂಕ್ತಿಸುಧಾರ್ಣವಂ, ೮-೪೭೯)

ಮದನಸುಖಕ್ಕೆ ತಾನೆ ನೆಲೆ ಪಂಡಿದೊಳೆಂಬಿನಮುಂತುಟೊಂದು ನೋ
ಟದ ತೆಱನಂತುಟೊಂದು ತನಿಸೋಂಕಿನ ಸಮ್ಮದವಂತುಟೊಂದು ಮೇ
ಳದ ಚದುರಂತುಟೊಂದು ಪರಿರಂಭದ ಸಂಭ್ರಮಮುಂತುಟೊಂದು ಕೂ
ಟದ ಪರಿ ಸತ್ಯಭಾಮೆಯೊಡಗೂಡೆ ಮುರಾರಿಗೆ ಕೂಡಿತುತ್ಸವಂ ೧೧

(ಜಗನ್ನಾಥವಿಜಯಂ, ೧೧-೫೬)

ಕರಕೃಷ್ಟಾಳಕಮುತ್ಪ್ರದಾರ್ಪಿತನಖಂ ನಿಷ್ಪೀಡಿತೋಷ್ಠಂ ಸನು
ತ್ಪುರಹಸ್ತಾಹತಿ ಹೂಂಕೃತಾನ್ವಿತಪದಾಘಾತಂ ಯಥೇಚ್ಛಾವಚ
ಸ್ಫುರಣಂ ಸಭ್ರುಕುಟೀಕ್ಷಣಂ ದೃಢಪರಿಷ್ವಂಗಂ ವಿಮುಕ್ತಾಂಗಸಾ
ಕರಣಂ ಕೈತವವೃತ್ತಮೇಂ ನೆಗೞ್ದುದೋ ಸಂಭೋಗಕೋಲಾಹಲಂ ೧೨

(ಜಗನ್ನಾಥವಿಜಯಂ, ೧೧-೫೭; ಸೂಕ್ತಿಸುಧಾರ್ಣವಂ, ೬-೧೦)

ಅವಲುಪ್ತಾಂಗವಿಲೇಪನಂ ಚ್ಯುತಲಲಾಮಂ ಸ್ರಸ್ತಮಾಲಾಳಿ ವ
ಕ್ತ್ರನತಂಸಂ ಶ್ಲಥಮೇಖಲಂ ತ್ರುಟಿತಹಾರಂ ಮುಕ್ತಮಂಜೀರಕಂ
ಪ್ರವಿಕೀರ್ಣಾಳಕಮಸ್ತಬದ್ಧಕಬರೀಸ್ವಿನ್ನಾಂಗಮಾರಕ್ತನೇ
ತ್ರಮರಾಗಾಧರಮಾಯ್ತು ಕಾಮಕಲಹಂ ಸತ್ರಾಜಿತಾದೇವಿಯೊಳ್ ೧೩

(ಜಗನ್ನಾಥವಿಜಯಂ, ೧೧-೫೮; ಸೂಕ್ತಿಸುಧಾರ್ಣವಂ, ೬-೧೦೮)

ಸ್ರೋದವರ್ಣತ್ರ್ಯಂಗಸ್ತನಂ ಕೊಂಕಱಿದು ನಿಮಿರ್ದ ನೀಲಾಳಕಂ ಜೋಲ್ದು ಬಂಬ
ಲ್ಪುಡಿ ಜಿಕ್ಕೀಱಿರ್ದ ಬಿಂಬಾಧರಮಣಿ ನಸುಸೋಂಕಿರ್ದ ಕರ್ಣೋತ್ಪಲಂ ಕೆಂ
ಪಡರ್ದಾಲೋಲೇಕ್ಷಣಂ ಕೆಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ
ಕುಡೆ ನೆಮ್ಮಿರ್ದೋಪನಂ ಮೆಯ್ಮೆ ಮರನೆಲರೊಳಂದಾಱಿಸುತ್ತಿರ್ದಳೊರ್ವಳ್ ೧೪

(ಜಗನ್ನಾಥವಿಜಯಂ, ೧೬-೧೨೪: ಸೂಕ್ತಿಸುಧಾರ್ಣವಂ, ೮-೪೮೦, ೧೪-೩೮)

ಅಲರ್ಗಣ್ ಬೆಂಡೇಱಿ ರೋಮಾಂಚದ ಜಲವನಿತಂ ತಾಱುತಟ್ಟಾಗೆ ಬಾಯೊಳ್
ಸಲವಂ ಸುಣ್ಣಾತುಗಳ್ ಲಾವುಗೆಯ ಕೊರಳಸಲ್ಲಾಡಿದಂತಾಗೆ ಜುಮ್ಮೆಂ
ದೊಲೆದಂಗಂ ತೂಗೆ ಸುಪ್ಲಂತೊಳಗಿಱಿಯೆ [1]ಗಳಂ ಬೀಗೆ[1] ನಾಣ್ ಸೂಸೆ ಕಾಮಂ
ಚಲದಿಂ ಕೈಮಿಕ್ಕಮಳ್ಗಂತ್ರಮನೆ ಕೆಡಪಿದಂತಿರ್ದರುಂ ಮೂರ್ಛೆವೋದರ್ ೧೫

(ಸೂಕ್ತಿಸುಧಾರ್ಣವಂ, ೧೪-೭೬)

ಅತಿಮುಗ್ಧಾಪಾಂಗಭೃಂಗಂ ಮುಖಸರಸಿಜದೊಳ್ ತನ್ನ ಬಾಹಾಭುಜಂಗಂ
ಸುತನುಶ್ರೀಖಂಡಶಾಖಾಂತರದೊಳಧರಸದ್ವಿದ್ರುಮಂ ದಂತಮುಕ್ತಾ
ತತಿಯೊಳ್ ಪಾಣಿಪ್ರವಾಲಂ ಕುಚಕಲಶದೊಳಿಂಬಾಗೆ ತಳ್ತಿರ್ದನಿಂಪ್ರ
ಪ್ರತಿಮಂ ಲೀಲಾವತೀದೇವಿಯ ಹೃದಯದೊಳಾ ರೂಪಕಂದರ್ಪದೇವಂ ೧೬

(ಲೀಲಾವತಿ, ೧೪-೯೭)

---

[1] ಬೆಮರ್ ಪೊಣ್ಮೆ (ಸ)

ಪದುಳಿಸದಂಗಮೆಚ್ಚಱದ ಕಣ್ಮಲರಾಱದ ಸೇದೆ ಮುಗ್ಗುಲಿ
ಕ್ಕಿದ ಪುಳಕಂಗಳಿಂಗವ ಜೆಮರ್ ಮಿಡುಕೋಡದ ಪುರ್ವು ಬೀಗಿ ಬೀ
ಯದ ತುಟಿ ಕೆತ್ತುಗುಂದದ ಕುಚಂ ನಡುಕಂಗೆಡದೂರು ಗಂಡೆಯೇ
ೞದ ಕರಘಾತಮೊಪ್ಪೆ ಸುಸಿಲಿಂ ತಣಿಸೊಯ್ಯನೆ ಜಾರೆ ಜಾಱದಳ್ ೧೭

(ಲೀಲಾವತಿ, ೩–೧೫; ಸೂಕ್ತಿಸುಧಾರ್ಣವಂ. ೮–೧೬೨)

ಪೊಸಸುಸಿಲೊಳ್ ನೃಪಾತ್ಮಜೆ ವಿದಗ್ಧೆಯವೊಲ್ ಪ್ರಿಯನೊಲ್ದು ಪೇೞಿಪೊಂ
ದೆಸಕದೆ ನಾಣನೊಕ್ಕು ಗತಭೀತಿಯುಮಪ್ಪುವ ಲಲ್ಲೆಗೆಯ್ವ ಚುಂ
ಬಿಸುಪ ಮರಳ್ವ ನ್ಕೆಗೊಡುವ ಮೆಯ್ಮಱೆವಕ್ಕಱುಮಾಸೆಗೆಯ್ವುತಿ
ರ್ಪಸಿಯುಳಿದೇಂ ಮನಂಬಡೆದಳೋ ಚದುರಿಂ ಮುದದಿಂದೆ ಭೂಪನಾ ೧೮

ಪದಯಿಸಿ ಸೋಂಕಿ ಸೋಂಕಿನೆಡೆ ಪೇಳಿಸಿ ನೀರೆಯ ನೀರ್ದೆ ತೋಳತ
ಟ್ಟಿದಿರ್ಗೊಳೆ ಪೆರ್ಚಿನಪ್ಪಿ ಮೊಗಮೆತ್ತಿರೆ ಚುಂಬಿಸಿ ಸೋಲ್ತು ನಾಣನೊ
ಕ್ಕದನಱಿದಿರ್ಚೆ ಗಾರ್ತನದ ಲಲ್ಲೆಗಳಂ ನುಡಿದಂತಲಂಪಿನು
ಬ್ಬಿದಿಗಮನಾ ಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್ ೧೯

(ಕಾವ್ಯಾವಲೋಕನಂ, ೮೮೦; ಸೂಕ್ತಿಸುಧಾರ್ಣವಂ, ೧೪–೧೩)

ಬಗೆಯೊಳ್ ಪೊಣ್ಮುವಲಂಪು ಕಾತರತೆಯುಂ ತಂದೀಯೆ ಮೆಯರ್ ಮೆಯ್ಗೆ ಸಂ
ದುಗಳ್ತೀಸಪ್ರೌಢಮಿಲ್ಲದಂತಮರ್ದಿನಂ ತಳ್ತಪ್ಪಿ ಬಾಯ್ಗೂಡಿದೊಳ್
ಮಿಗೆ ಪೀರ್ದಂತೆ ಮನೋಜರಾಗರಸಮಂ ಮೆಯ್ಪೆರ್ಚೆ ಕಾದಲ್ರ್ಕೆ ಕೆ
ಯ್ಮಗುಮನ್ನಂ ನೆರೆದರ್ ಮನಃಪ್ರಿಯತಮರ್ ನಾನಾಕಲಾಪ್ರೌಢಿಯಂ ೨೦

(ಕಾವ್ಯಾವಲೋಕನಂ, ೮೦೧)

ತೆಱಪಱಿಯೋಪನಪ್ಪಿದೊಡೆ ಮೆಯ್ಮಱೆವಪ್ಪು ಸಡಿಲ್ದುದಕ್ಕೆ ಮೆ
ಯ್ಮಱಿಪ ಪೊಡಟ್ಟಿ ಬಾಯ್ದೆಱೆಗೆ ಮೆಯ್ಮಱೆವಂತದು ಮೆಲ್ಲನಾಗೆ ಮೆ
ಯ್ಮಱಿಪ ಜಪಂ ಜಪಂಗಿಡಿಸೆ ಮೆಯ್ಮಱೆವಾಸನಪಲ್ಲಟಕ್ಕೆ ಮೆ
ಯ್ಮಱಿಪಡೆ ಸಾವ ಹುಟ್ಟುವೆಡೆಯಾದುವವಳ್ಗೆ ರತಾತಿರೇಕದೊಳ್ ೨೧

(ಲೀಲಾವತಿ, ೧೨–೨೦; ಸೂಕ್ತಿಸುಧಾರ್ಣವಂ, ೧೪–೩೮)

ಕಾದಲನೀಂಟೆ ತಿಂದ ತುಟಿಯುಣ್ ಮಿಗೆ ಚುಂಬಿಸಲೆಂದು ಬಾಯ್ಗೆ ಬಾ
ಯಾದವೊಲೊಪ್ಪೆ ನೋಟ್ಟಿರಕೆಯಿಂ ಪೊಱಪೊಣ್ಮುವ ಜೆಕ್ಕ ಕಣ್ಗೆ ಕ
ಣ್ಣಾದವೊಲೊಪ್ಪೆ ತೋಳ ನೆಟಿಲೋಪನ ಮೆಯ್ಯೊಳಗಾಗೆ ತೋಳ್ಗೆ ತೋ
ಳಾದವೊಲೊಪ್ಪೆ ತಳ್ತು ಮನಕಂ ಮನವಾದವೊಲಾಕೆ ಕೂಡಿದಳ್ ೨೨

(ಲೀಲಾವತಿ, ೧೩–೨೩)

ಗಳನಾದಂ ತಳ್ತ ನೀರ್ವಕ್ಕಿಗಳುಲಿಪ್ರಸುಕೀರ್ಣಾಳಕಂ ಭ್ರಾಂತಭೃಂಗಾ
ವಳಿ ಸಸ್ವೇದಪ್ರಕಂಪಂ ಪೊಲೆ ನೆಗೆವ ರಥಾಂಗಂಗಳಾಗಲ್ಕೆ ಸಂಭೋ
ಗಲಸತ್ಕಾಂತಾಸ್ವರೂಪಂ ಸೊಗಸಿನ ಕೊಳನಂ ಪೋಲೆ ತಾಂ ಪೀರ್ದನೊಲ್ದು
ಳ್ಪಲದಾಸ್ಯಾಂಭೋಜದಿಂ ಫುಲ್ಲಧರದಳಮನಾನಂದದಿಂ ರಾಜಹಂಸಂ ೨೩

ಸವಿ ತವದಾದುದೀಯಧರಮುಂ ಪ್ರಳಕಾಂಕುರ ಮಾಯಮಾಯ್ತು ಪ್ಸ್ಕೆ
ಗವಳ ಕುಚಕ್ಕೆ ಕರ್ಣತತೆ ಜೀವನಮಾಯ್ತು ಟೀಡಂತಿರೆನ್ನ ಬಾ
ಯ್ಸ್ವವರದೊಳೆನ್ನ ತೋಳ್ಪರಣ ತೊತ್ತುಳಿಯೊಳ್ ಕಡಿಕ್ಕೆದನಿಂತು ಬಾ
ಳ್ವಪೆ ಪೊಡರ್ಪಿನ್ನರೋಹತಿಯೊಲೆಂಬವೊಲೀಕ್ಷಿಸುತಿರ್ದನಲ್ಲನಾ (?) ೨೪

ಕೆದಱಿದ ಕುಂತಳಂ ಕುಸಿದು ಕೊರ್ಬಿದ ಪೆರ್ಮೊಲೆ ದೊಂಡೆ[1]ವೊಂಡಿದಂ[1]
ಗಿದ ತುಟಿ ತಳ್ವಿಸಿಂ ಮುಱಿದ ಪ್ಸೈನವಿರೋಪನ ತಬ್ಬಿ ತೋಳ್ಗಳೊ
ತ್ತಿದ ಬಳೆ ಮೆಯ್ಯ ಕೂರುಗುರ ಬಾಸುಳೆ ಭೂಷಣವಾಗಳುಂ ರತಾಂ
ತದೊಳೆನಗೆಂಬವೊಲ್ ತೊಡವೆಯುಂ ತೊಡವಂ ಕರನೊಪ್ಪುತಿರ್ದಳಂ ೨೫
(ಲೀಲಾವತಿ, ೧೩-೩೫)

ಸತಿಯು ಕೃತೋಪರಿಷ್ಟರತಿಸಂಭ್ರಮದೊಳ್ ಸರಳಾಂಗುಲಿಚಟ
ತ್ಕೃತಿ ಪಟುತಾಲುಟತ್ಕೃತಿ ಗಳೋತ್ಥಿತಹೂಂಕೃತಿ ಚಾರುಮಂಚಚೀ
ತ್ಕೃತಿ ಶಕುನಿಪ್ರತಾನ ಕುಹರತ್ಕೃತಿ ಕಂಕಣಶೃಂಖಲ ಝಣ
ತ್ಕೃತಿ ಸಮಪಾದಝಂಕೃತಿ ಸಚುಂಬನಸೀತ್ಕೃತಿ ಪೊಣ್ಮೆತೆತ್ತಲುಂ ೨೬
(ಶೃಂಗಾರರತ್ನಾಕರಂ, ೪-೩೬; ಸೂಕ್ತಿಸುಧಾರ್ಣವಂ. ೧೪-೨೫)

ಗಳರವನಾದ ಪೃತ್ತಕುಚದಂಗುಲಮಧ್ಯನಿನಾದ ಹಸ್ತದಿಂ
ಮೊಳಗುವ ನಾದಮುನ್ನತ ಪದಂಗಳ ನೂಪುರನಾದ ಮಂಚದಿಂ
ದಲುಗುವ ನಾದವಾಪರಿಸೆ ಪಂಚಮುಹಾಸಬುದಂಗಳಿಂದೆ ಕೋ
ಮಲೆ ರವಿಕಾಂತನರ್ತನೆಯ ಮಾಡಿದಳಾ ಸುರತದ್ವಿನೋದದಿಂ ೨೭

ಬಿಸಿಜಿಮರಿಂಗುಮಂತಗಲ್ದ ಮತ್ತಮದಪ್ಪುವ ಮಾಣ್ದು ಮಾಣ್ದು ಚುಂ
ಬಿಸಿಯಧರಾಗ್ರಮುಂ ಸವಿವ ಸೌಮ್ಯಸುಖಂ ತಲೆದೋಱೆ ಮೂರ್ಛೆಯಿಂ
ದೆಸೆವ ಮನೋಮುದಂ ಮಿಗುವ ಕೂಟದ ತೋಟಿಗೆ ಮೇಲೆಮೇಲೆ ರಂ
ಜಿಸುವ ಮನೋಜಕೇಳಿಯಮನೇನೆಸೆದಿರ್ದುದೋ ನಿತ್ಯಕಾಮಿಗಂ ೨೮

———

[1] ದೊಂಗವೊಂ(ಅ)

ಅಡಿಗಡಿಗಪ್ಪಿಕೊಳ್ವ ಚುಬುಕಾಗ್ರಮನೊತ್ತಿ ಸುಧಾಧರೋಷ್ಠಮಂ
ಪಿಡಿದೊಲವಿಂದೆ ಚುಂಬಿಸುವ ಘಾಸಿಗೆ ನೊಂಕಿದ ಕೇಶಪಾಶಮಂ
ಮುಡಿಸುವ ಸಾಣ್ಮೆ ನಾಚದೆ ವಿನೋದವಿಚಿತ್ರದ ಕೂಟದಿಂ ಸುಖಂ
ಬಡೆವ ಲತಾಂಗಿ ಮನ್ಮಥನಮಂದಿರಮಂಗಳಲಕ್ಷ್ಮಿಯಲ್ಲವೇ ೨೯

ಪೊಸತೆನಿಪೊಲ್ಮೆಯಗ್ಗಲಿಸೆ ಕಣ್ಬೆಳಗೋವನವಕ್ತ್ರಪದ್ಮದೊಳ್
ಪಸರಿಸೆ ಸಣ್ಣಸುಯಿ ನರುಗಂಪು ಪೊದಟ್ಟಿರೆ ಸುಣ್ಗೊರಳ್ ವಿರಾ
ಜಿಸೆ ಜಲಪಕ್ಷಿಯಂ ಜಜೀತದು ಸಾಣ್ಮೆರಿ ಡಿಳ್ಳಮನೆಯ್ದೆ ನಲ್ಮೆಯಿಂ
ಮಿಸುಪಧರಾಗ್ರಮಂ ಸವಿದಳಂಗನೆ ಜಾಣ್ ಮಿಗುತಂ ನೃಪಾಲನಾ ೩೦

ಕೆದಱಿದ ಕುಂತಳಂ ಪರೆದ ಕಜ್ಜಳಮುಣ್ಮಿದ ಸುಣ್ಬೆಮರ್ ಕರಂ
ಪ್ರದಿದ ವಿಲೋಚನಂ ಬಱಯಿಸಿನಟ್ಟುವ ಸುಯ್ ಕಡು ಜೋಲ್ದ ವೇಣಿ ಬ
ತ್ತಿದ ಬೆಳರ್ವಾಯರ್ ಬಱಿಲ್ದ ಲುಳಿತಾಂಬರಮೊಪ್ಪೆ ರತಾಂತಕಾಲದೊಳ್
ಮುದಮನೊಡರ್ಚಿನಂಗನೆಯ ರೂಪು ವಿಚಿತ್ರಮನುಂಟುಮಾಡದೇ ೩೧

ಒಡಗೂಡಿರ್ದ ಮನೋಜನೊಳ್ ಸುರತಸಂಗ್ರಾಮಂಗಳಂ ಗೆಲ್ದವಂ
ಗುಡಲಿತ್ತಳ್ ಜಘನಕ್ಕೆ ವಸ್ತ್ರವ ಕುಚಕ್ಕಂ ಹಾರಮಂ ಹಸ್ತಕಂ
ಕಡಗಂ ಮುದ್ರಿಕೆಯಂ ಕರಾಂಗುಲಿಗೆ ಸತ್ತಾಂಬೂಲಮಂ ಬಾಯ್ಗೆ ಸೋ
ರ್ಮುಡಿ ಬೆಂಗೊಟ್ಟುದೆನುತ್ತೆ ಕಟ್ಟಿದಳು ಕೋಪಾಟೋಪದಿಂ ಕೇಶಮಂ ೩೨

ಭರದಿಂ ಬಂದಚ್ಚಟಱಯದೆ
ಸಿರಿಮಂಚದಮೇಲೆ ಲೀಲೆ ಮಿಕ್ಕಾದರದಿಂ
ತರದಿಂ ಪುಳಕಂ ನೆಗೆವು
ತ್ತಿರೆ ಸುರತಾಂಬುಧಿಯ ಸುಧೆಯ ಸುಱಯೊಳಗಿರ್ದಳ್ ೩೩

ಮನವರಳೆ ಮುಖವರಳೆ ಲೋ
ಚನವರಳೆ ಕಪೋಲವರಳೆ ಕಂಠವರಳೆ ಸು
ಯ್ಯನುವರಳೆ ತನುವರಳೆ ಮಿ
ಕ್ಕನುಭವಸುಖವರಳೆ ಸುರತಸುಖದಿಂದಿರ್ದರ್ ೩೪

ಪುದಿದಾಲಿಂಗನದೊಳಗಾ
ವುದು ಸೋಂಕಿತ್ತದೆ ಮುಖೋತ್ಸವದೆ ಸುಖವದೆ ಕಾ
ಮದವದೆ ವೀಳಾಸಾಸ್ಪದ
ವದೆ ತಾಂ ಸರ್ವಾಂಗಹರ್ಷವದೆ ಸಮಯೋಗಂ ೩೫

ನಡತರೆ ಕಂಡುಕಂಡು[ಬಿರ್ದು]ವಂದವ್ರೊಲೊರ್ವರನೊರ್ವರೀಕ್ಷಿಸು
ತ್ತಡಿಯಿಡುತ್ತೊಂದು ಮುಂದುವರಿವಿಂದ್ರಿಯದಿಂ ನಡೆಮುಂಚೆ ಮೀಱಿ ಬಂ
ದೆಡೆಗುಡದಪ್ಪಿಯಪ್ಪಿ ಸಿರುತಂ ಸುರತಾಬ್ಧಿಯೊಳಾೞುತೇೞುತಂ
ಕಡೆಮೊದಲಿಲ್ಲದೆಟ್ಟಿರದ ಕಾಮಿಗಳಿರ್ದರನೂನಸಂಗದಿಂ ೩೬

ಘನಗಾಢಾಲಿಂಗನಂ ಚಾಪಳಗಳರುತಿ ದೈನ್ಯೋಕ್ತಿಯುಕ್ತಾಧರಂ
. . . . . . . .ಮುಕುಳಿತನಯನಂ ಲಾಸ್ಯಲೀಲಾಳಕಂ ಕಂ
ಪನಹಸ್ತಂ ಸ್ವೇದಗಂಡಂ ಪುಳಕಪರಿತಗಾತ್ರಂ ಸುಖಶ್ವಾಸಮಾನಂ
ದನಿವಾಸಂ ಲೀನಚಿತ್ತಂ ಗುರುತರಸುರತಂ ಕೂಡೆ ಕೂಡುತ್ತಮಿರ್ದರ್ ೩೭

ನಯನಶ್ರುಷಾವಳಿಯಿಂದತಿ
ಶಯದಧರೋದ್ಯತ್ಪ್ರವಾಳದಿಂದಂ ದ್ವಿಜಸಂ
ಚಯದಿಂ ಮೌಕ್ತಿಕದಿಂ(?) ಸುರತಾ
ಬ್ಧಿಯ............................ ೩೮

ಸೆಳೆಮಂಚದ ಕಳನಿನದಂ
ಬಳಸಿದ ಶಕುನಿಗಳ ನುಣ್ಚರಂ ನೇವುರದು
ಜ್ವಲನಾದಂ ಲಲನಾಗಳ
ಗಳಿತಧ್ವನಿ ಜಿರಸಿ ಜಿಳಿಮ ನೆರಸಿದುವಾಗಳ್ ೩೯

ಕರಘಾತಂ ಸೌಖ್ಯಜಾತಂ ಕಳಮಣಿತಸಮೇತಂ ಲಸತ್ಕರ್ಣಪೂತಂ
ಸ್ಮರಯಂತ್ರಂ ಸಾರತಂತ್ರಂ ಘನಗಳರವಮಂತ್ರಂ ಪ್ರಮೋದಸ್ವತಂತ್ರಂ
ಸ್ಫುರಿತಾಂಗಂ ಸ್ವೇದಸಂಗಂ ಸುರತರಸತರಂಗಂ ಪ್ರರೋಮಾಂಚಲಿಂಗಂ
ಗುರುನೇತ್ರಂ ಬಾಷ್ಪಪಾತ್ರಂ ಸುಖರವಮುದಿತಶ್ರೋತ್ರವಾನಂದಗಾತ್ರಂ ೪೦

ಗಳರವದಿಂದಪ್ಪಿಂ ಕೋ
ಮಳರೂಪಿಂದಧರರಸದಿ ಸುಯ್ಗಂಪಿಂದಾ
ಗಳೆ ಕಿವಿ ಮೈ ಕಣ್ ನಾಲಗೆ
ವಿಲಸನ್ನಾಸಿಕಮನಲ್ಲಿ ತಣಿಪುತ್ತಿರ್ದಳ್ ೪೧

ಮದನೋಪ್ರೇಕ್ಷನಖಾಗ್ರಘಾತಕುಚಕುಂಭೀಕುಂಭದಿಂ ಹೂಂಕೃತಂ
ಮೊದಲಿರ್ದಪ್ಪಿದ ನಾದದಿಂದಧರಮಂ ಪೀರ್ದಪ್ಪುವಾ ಸಂಗದಿಂ
ಮುದಮುತ್ತಂ ಸಲೆ ಮುಚ್ಚಿದಕ್ಷಿಯುಗದಿಂ ರತ್ಯಂತದಾ ಕಾಮಿನೀ
ವದನಂ ಪ್ರೋಲ್ಲಸಿದು ಸಿಂಹನುಂ ಶರಭನುಂ ಭೇರುಂಡಮಂ ರುಂಡಮಂ ೪೨

ಸುರತೋದ್ರೇಕದೊಳೊಂದಿ ಬಾಲಕಿ ಗಡಾ ಕಂದರ್ಪನಂ ರಾಜನು
ಉರಗಾಧೀಶನ ಜಿಹ್ವೆಯುಂ ತ್ರಿದಶಸಾಲಾಗಾರಮುಂ ಪೋಲ್ತಳಾ
ನಿರತತ್ವಂತದೊಳಂದು ಕಾರುಕನಸಪ್ತಾನೇಕಸಾಸಾದಮುಂ
ಹರಿಯುಂ ಪೋಲ್ತುರೆ ತೋಱಿ ಮೀಱಿ ಮೆಱೆದಳ್ ನೋಡಲ್ಕಿದೇಂ ಚೋದ್ಯಮೋ ೪೩

ಎಸೆವಸಿಯಳ ನಿಷ್ಠುರರತಿ
ಮುಸಗಲ್ ಬಱಲಿಕೆಯ ತೋರ್ಪ ಬೆಮರಿನಿಯುಂಗಳ್
ಪಸಿಯಡಕೆಯ ಪೊಂಬಾಳೆಯ
ಪಸುಗರ್ಣಿಕೆಯು ಪೋಲ್ತುವವಳ ತ್ರಿಸ್ಥಾನಂಗಳ್ ೪೪

ಉಸಿರ್ವೆಡೆಯೊಳ್ ಬೆಸರ್ವೆಡೆಯೊಳ್
ಒಸರ್ವೆಡೆಯೊಳ್ ಯುವತಿಯಾದಿಮಧ್ಯಾಂತದೊಳಂ
ಪಸಿಯಡಿಕೆಯ ಪೊಂಬಾಳೆಯ
ಪಸುಗರ್ಣಿಕೆಯು ಪೋಲ್ತುವವಳ ತ್ರಿಸ್ಥಾನಂಗಳ್ ೪೫

ಉಟ್ಟ ದುಕೂಲದೊಳ್ ಬೆಮರ ಬೀಸುತ ಮೋಱೆಯನೆತ್ತಿ ಗಲ್ಲಮಂ
ತಟ್ಟುತ ನಲ್ಲನಲ್ಲಯೆನುತೆಬ್ಬಿಸಿ ಚುಂಬಿಸಿ ಚುನ್ನವಾಡುತಂ
ದಿಟ್ಟಿಸಿ ನೋಡುತಂ ಕುಟುಕುಮಂಬುಲವೀವುತ ಕೂಡಿ ಸೌಖ್ಯದಿಂ
ಮುಟ್ಟಿದ ಮೋಹದೊಳ್ ಸುರತಖೇದೆಯನಾಱಿಸಿದಳ್ ಮನಃಪ್ರಿಯಳ್ ೪೬

ನಸುಸೊಪ್ಪಾದಧರಂ ಸಡಿಲ್ದ ವಸನಂ ಕಂಪಂ ಪೊದಳ್ದೂರುಗಳ್
ಮುಸುಕಂಗುಂದಿದ ಘರ್ಮಬಿಂದುಗಡಣಂ ಮುಗ್ಧತ್ವದಿಂ ನೋಳ್ಪ ಸಾ
ರಸನೇತ್ರಂ ಪರಿತಪ್ತ ಮನ್ಮಥರಸಂ ಚೆಲ್ವಾಗೆ ರತ್ಯಂತದೊಳ್
ಮುಸಿದುಂ ಲಜ್ಜಿತೆಯಾದ ಕಾಂತೆಯ ಮಿಗಿಲ್ ತಳ್ತಪ್ಪುವನೇಂ ಪುಣ್ಯನೋ ೪೭

ಸ್ತನಶೈಲೋದ್ಭೂತಗಂಗಾನದಿಯೆನಿಸುವ ಹಾರಾಳಿ ಕಾಳಿಂದಿಯಾದ
ತ್ರಿನೆ ಸ್ಫಲ್ಕಂಜಿತ್ತ ರೋಮಾವಳಿಯುಭಯನದೀಸಂಗದಿಂ ಪಾಪವಿಚ್ಛೇ
ದನಮೂಸಂಜಿತ್ತ ದೋಷಾಕರನಿದಱೊಳೆ ತಾಂ ಮಜ್ಜನಂಗೆಯ್ವನೆಂದೆಂ
ಬಿನೆಗಂ ಚೆಲ್ವಾಯ್ತು ಕಾಂತಾಘನಕುಚಯುಗಳೋನ್ಮಧ್ಯಸ್ಥಂ ನಖಾಂಕಂ ೪೮

ರಾಜಶುಕಂ ಕೆಂದಳಿರ್ಗಳ
ನೋಜೆಯಿನೊಕ್ಕಿಸೆಯೆ ಕರ್ದುಂಕುವಂದದಿನಾಗಳ್
ಕೂಜಿತರವದಿಂ ಕರ್ದುಕಿದ
ನಾ ಜಂಗಮಕಲ್ಪಲತೆಯ ಬಿಂಬಾಧರಮಂ ೪೯

ನಿಯತಸ್ಥಾನಮನೀಂಟೆ ಸತ್ಸ್ವರೋದಮಂ ಮುಂ ನ್ನೋಡಿ ಕಾಲಪ್ರಬೋ
ಧೆಯನಾರ್ಕೆದು ನಿರಂತರಂ ಪ್ರಕೃತಿಯುಂ ಭಾವೇಂಗಿತಜ್ಞಾನನಿ
ರ್ಣಯದಿಂ ಭಾವಿಸಿಯಾತ್ಮಶುಕ್ಲಭರಮಂ ಶ್ವಸ್ನಾಯುತವ್ಯಾಪ್ತಿಯೋ
ಟಿಲ್ಗಯನಾಂತಂಗನೆಯುಚ್ಚೆಯಂ ಸಲಿಸಿದಂ ಸಂಭೋಗರೋಳ್ ಯೋಗರೋಳ್ ೫೦

ಸಹಜಪ್ರೀತಿಮನೋಹರಾಧರಮಣಿಪ್ರಾಂಶುಚುಂಬನಂ ಕುಂತಳ
ಗ್ರಹಣಂ ಕೋಮಲದೀನಚಾಟುವಚನಂ ಜಿಹ್ವಾಂಕುರೋಚ್ಚಾಟನಂ
ವಿಹಗಾನೀಕಲಸನ್ನಿಹಾಗಳರವಂ ಲಜ್ಜಾಭಿಭಂಗಂ ಮುಹು
ರ್ಮುಹುರಾಲಿಂಗನಮಂತವೇಂ ನೆಱೆದುದೋ ಸಂಭೋಗಕೋಲಾಹಳಂ ೫೧

ನೆಲಸಿದ ಲಜ್ಜೆಯೋಸರಿಸೆ ಘರ್ಮಜಲಂ ಪೊಱಪೊಣ್ಮೆ ಬುದ್ಧಿ ಸಂ
ಚಲಿಸೆ ಪೊದಟ್ಟಿ ಲಲ್ಲಿ ಮಿಗೆ ಸುಯ್ದು ಸುಯಲ್ಮಿಮಿರ್ವತ್ತೆ ಲೋಚನೋ
ತ್ಪಲವರಮುಚ್ಚೆಯುಪ್ಪುಗೆ ಸಡಿಲ್ದು ಮನಂ ಬೆಱಗಾಗಿ ಪೃಷ್ಟಕೋ
ಮಲೆ ಮಱಪಟ್ಟಿರಲ್ ನೆಱೆದುದಾ ರತಿಕಾಂತನ ಕೇಳಿಗಾಳಗಂ ೫೨

ವಿಲಸದ್ರಕ್ತವಿಲೋಚನಂ ಶ್ರಮಜಲಂ ವ್ಯಾಕೀರ್ಣಗಾತ್ರಂ ಮತಿ
ಸ್ಖಲನಂ ಕೀರ್ಣ ಚಲಾಲಕಂ ಶಿಥಿಲವೇಣೀಬಂಧಮುತ್ತುಂಗನಿ
ರ್ಮಲಜಂಬಾಧರವಾಸ್ಯಸಂಭವಮುದಂ ಚಿತ್ತಪ್ರಸನ್ನಂ ಮನ
ಕ್ಕೊಲವಂ ಪೊತ್ತುದು ಕಾಂತೆಯಾಕೃತಿ ಕರಂ ರತ್ಯಂತದೊಳ್ ಸಂತತಂ ೫೩

ನೆಗಟ್ದ ಕುಚಂಗಳೊಡ್ಡಱಿದು ಜಪ್ಪಲದರ್ಪಿನಮಂಗಮಂಗದೊಳ್
ಸೊಗಸುವಿನಂ ಪೊಗರ್ವಿಗುವ ತೋಳ್ ನಳಿತೋಳ್ಗಮರಲ್ಮಿಮಿತ್ತ ಬ
ಲ್ಮಿಗಿದಮರ್ದಪ್ಪಿಕೊಂಡು ಸುರತಾಂತ್ಯಮದೊಳ್ ಸುಖನಿದ್ರೆಗೆಯ್ವ ಕಾ
ಮಿಗಳೆಸೆದರ್ ಮನೋಭವನ ನಾಟಕದಿಂಬಿನ ಬೊಂಬೆಯಂದದಿಂ ೫೪

ತವೆಯದ ನಲ್ಮೆ ತೋರ್ಕೆಗೆದದಾಸೆ ಮಗುಟ್ದ ನೆವಟ್ಟಿಯುಚ್ಚೆವೆ
ಚ್ಚುವ ಮನದೇಟ್ಟಿ ಕೂಡಿ ತಣಿವಿಲ್ಲದ ಕೂರ್ಮೆ ನವೀನಮಾಗೆ ನು
ಣ್ಪಿವಿರಳಮಪ್ಪಿನಂ ನಲಿದು ಕೂಡೆ ಸುಖಾಂಬುಧಿಯೊಳ್ ಮುಳುಂಗಿದೋ
ಪ್ಪುವರಾವಗಂ ಸುರತಕಾಲಮೆ ಕಾಲಮೆನಿಪ್ಪ ಮಾಟಿಕ್ಕೆಯಿಂ ೫೫

ಸ್ಥಿರಗಾಢಾಲಿಂಗನಂ ಹೂಂಕೃತಗಳರವಮನ್ಯೋನ್ಯಸಲ್ಲಾಪನಾದಂ
ಕರಘಾತಂ ಚುಂಬನಂ ಸೀತ್ಕೃತಿ ಕುಟಿಲಕಚಾಕರ್ಷಣಂ ಸೂಕ್ಷ್ಮಜಿಹ್ವಾ
ಸಿರುತಂ ಚಿತ್ತಾನುಮೋದಂ ಪರಿಪಡಿಯು ಮನೋರಾಗದಿಂ ಕಾಮಕೇಳೀ
ತರಣಪ್ರಾರಂಭಮುಂ ಕೂರ್ತೆಸಗಿದಳೊಲವಿಂ ಕಾಂತೆಯುತ್ಕರ್ಷದಿಂದಂ ೫೬

ಸಡಿಲದ ತೋಳತೆಕ್ಕೆ ಸವಿಬೀಯುವ ಬಾಯ್ಗಳ ಕೊಟವಕ್ಕಜಂ
ಕಡೆಯಿಡದಿರ್ಪ ಕಾತರಿಕೆ ಕುಂದದ ಸಲ್ಕಸೆಯಿಂಪು ತೆಳ್ಪದಂ
ಬಿಡುಗಡೆಯಾಗದಿರ್ಪೊಜಿಸು ನಿಲ್ಲದ ಮೆಯ್ಮಱತವಾಱದಿಚ್ಛೆ ಸಂ
ಗಡಿಸಿರೆ ಕಾದಲರ್ ಕಡೆಯನಾ ಕಡೆಗಾ ರತಿಗಿಟ್ಟು ಕೂಡಿದರ್ ೫೭

ಉಗುರ್ಗಳ ಸೋಂಕು ಸೋಂಕು ಮಿಗೆ ಸೋಂಕು ಮನಂ ಮನಸೆಯ್ದೆ ಝುಮ್ಮೆನಾ
ಸೊಗಸುವ ಜೋಡು ಝುಮ್ಮು ಪುಳಕಂ ಪುಳಕಾತನುದ್ವಯಂ
ಮಗಲದ ಕೂಟದಿಂಪು ಸವಿಗೂಟಮೆ ಜೀವನಲೀಲೆ ಲೀಲೆಯಾ
ಸೊಗಗಡಲಾಗಲಾ ಕಡಲನೀಸುತೆ ಜೆಲ್ಪಿನ ನಲ್ಲರೊಪ್ಪಿದರ್ ೫೮

ನಾಣೆಡೆಗೊಂಡಿರಲ್ ನಯುಡೆ ನೂಂಕಿ ಭಯಂಗಳನೊಲ್ದು ಮುದ್ದಿನಿಂ
ದಾಣೆಯನಿಟ್ಟವೊಲ್ ನಿಲಿಸಿ ಮೆಯ್ ಸದರಕ್ಕೆಡೆಗೊಟ್ಟು ಬಾಲ್ಯಮಂ
ಕಾಣಿಸುತೊಪ್ಪುವೊಳ್ನುಡಿಗಳಿಂ ಹುದುಹೊಕ್ಕು ಹದಕ್ಕೆ ತಂದ ಹೋ
ಜಾಣನಪೂರ್ವ ಮುಗ್ಧೆಗೆ ವಿದಗ್ಧತೆಯಾಗಿಸಿ ಪೇಣ್ ಸುಭೋಗಿಪಂ ೫೯

ನಸೆಮಸೆಪ್ರಬ್ಬಸಂ ತುರಿಪಸಂತದು ತಲ್ಲಣಸೇಟ್ಟಿ ಬೀಟ್ಪಿದೊಂ
ದಸವಸಸೆಯ್ದೆ ಕಂಠದ ಚಮತ್ಕೃತಪೊಂದು ಕಠಾರಿಗಾಳೆಗ
ಕ್ಕಸಮರೆ ಪೊಕ್ಕವೊಲ್ ಜಡಿವ ಜಾಱುವ ಜಂಕಿಪ ಪೊತ್ತುವೊತ್ತುವಾ
ಬಸಿವ ಬಟಿಲ್ಪ ಬಾಜಿಸುವ ಕೂಜಿಪ ರಾಜಿಪ ನಲ್ಲರೊಪ್ಪಿದರ್ ೬೦

ಕರಹತಿ ಕಾಮುಕ್ಯನ್ಯಸಿನದಂ ಕೃತಕಪ್ರತಿತರ್ಜನಂ ಲಸತ್
ಸರಸನಿನಾದಮುನ್ನತಗಳಧ್ವನಿ ಸೀತ್ಕೃತಿ ಸೇವ್ಯರಾವಮು
ದ್ಧುರನಖಸಾಗ್ನಿಕಾಕೃತಮುಹಾರತತೀಪ್ರರವಂ ಸಚುಂಬನ
ಸ್ಪುರಮುರು ಹೂಂಕೃತಾರನಮುವಾಸಗಮುಣ್ಮಿರೆ ನಲ್ಲರೊಂದಿದರ್ ೬೧

ಕನಲ್ದುಡಿಯೊಳ್ ಬಿಸುಟ್ಟು ಕಟಿಯಂ ಮಿಗೆ ಮೆಟ್ಟಿ ನಖಾಗ್ರದಂತದಿಂ
ಘನತರಸೇಮಮಂ ತಿನಿಪು ಸೀತ್ಕೃತಫೂತ್ಕೃತಮಾ ವರಾಂಗಮೊಳ್
ತನಿಮವಪುರ್ಕೆ ಪೀನಕುಚಕುಂಭದೊಳಂ ಸೆಳೆದಿಟ್ಟು ನಲ್ಲಜೋ
ದನಸುರೆ ಸಾಯದಂತೆ ರತಿಯೊಳ್ ಪೊರೆವಾಸೆಯೊಳೊರ್ವಳೊಂದಿದಳ್ ೬೨

ಉರುಪಿಂ ಭಾವದ ಭರಕಾ
ಶರಿರಂ ಬೆಮರಿಟ್ಟು ಸೂಸಲಾಕೆಯ ದೇಹಂ
ವರ ಕನಕದ ಪುತ್ಥಳಿಯಂ
ಪರಿಮಳಜಲದಿಂದೆ ತೋದವೋಲ್ ಕಂಗೆಸೆಗುಂ ೬೩

ಕಡೆಗಣ್ ಕುಂಕುಮವೀಯೆ ಬಾಯ್ದೆಱೆ ಕರಂ ಕರ್ಪೂರಮಂ ಸೂಚಿಸೆ
ಲ್ಪಿಡೆಗೊಂಡಾ ಮೊಗದೊಳ್ ರಸಂ ಬಳಿಸೊಡಂ ಕೈಪ್ಪೆಗೆ ಪಾಯ್ದೆಲ್ಲರಂ
ತೊಡರ್ವಂತೊಪ್ಪಿರೆ ದೇಹದಾಕೃತಿ ನಯಂ ಪೊಂಬಣ್ಣಕಂ ಮುತ್ತುಗಂ
ಕಡರ್ನೀವಂತಿರೆ ಕಾಂತೆ ಕೂಟಗಡೆಯಾ ಸೌಭಾಗ್ಯಮಂ ಸಾರಿದಳ್ ೬೪

ಮನಸಜಱಿಂಟೆಱಿಜ್ಜೆಯಱನಪ್ಪಿ ಕಡಂಗಱಿಪೊಲ್ದು ಚುಂಬಿಸು
ತ್ತನುನಱಿಂದಾಸೆನಟ್ಟು ನಸೆನುಣ್ಪಱಿಂದಾ ಪುಟವೇಱ್ದು ಕೂಟದೊಂ
ದಿಸಿದಱಿಸೆಂಪ್ಪಿ ಬರ್ಪ ಸುರತಾಂತ್ಯದ ಸೋಲಮನೊಲ್ಲದಾವಗಂ
ಮನಸಿಜಸೂತ್ರಪುತ್ರಿಕೆಯವೋಲ್ ಕೆಡೆದರ್ ಮಿಗೆ ದಿವ್ಯವಲ್ಲಭರ್ ೬೫

ಸೊಗದಿಟ್ಟೆಡೆಯೊಳ್ ಸಿಕ್ಕಿರೆ
ಬಗೆ ಮೆಯ್ಗಳ್ ತಮ್ಮ ನಿಱಕಿನೊಳ್ ಜೋಂಪಿಸಲಾ
ತಗೆ ದಱಿದಱಿಪುಸಮನದೊಳ್
ಮಿಗೆ ಕೀಲಿಸೆ ದೇವವಲ್ಲಭರ್ಕಳ್ ನೆರೆದರ್ ೬೬

ಮೊಗಮದು ಮುತ್ತೊಂದಂದಂ
ಬಗೆ ನಲ್ಲಳ್ ಮನದೊಳಱಮು ನಲ್ಲನ ಮೊಗಮಂ
ಸೊಗಸಿಯೆ ಚುಂಬಿಸಿ ರತಿಯಾ
ತಗಹಂ ತಡೆಗಡಿದ ಜೆಲ್ಪದೇಂ ಚದುರಿಕೆಯೋ ೬೭

ಮಾಡುವ ರತಿ ಕೂಡುವ ರತಿ
ಬೇಡುವ ರತಿ ಬೆಳೆವುತಿರ್ಪ ರತಿ ರತಿ ರತಿಯಂ
ಮಾಡುವ ರತಿ ನೋಡುವ ರತಿ
ಬಾಡದ ರತಿ ಬಱಲದಾರ್ಪ ರತಿ ರತಿ ರತಿಯೊಳ್ ೬೮

ನೋಡುವ ನೋಡಿ ಸೋಲಿಸುವ ಸೋಲ್ವಱಿದಪ್ಪುವ ನಪ್ಪಿ ಚುಂಬನಂ
ಮಾಡುವ ಮಾಡಿ ತಲ್ಲಣಿಪ ತಲ್ಲಣದಿಂ ನಿಲಲಾಱದಕ್ಕಱಿಂ
ಕೂಡುವ ಕೂಡಿ ಮೆಯ್ಮಱೆವ ಮೆಯ್ಮಱೆದೆಚ್ಚಱಿವೆಚ್ಚಱಿತ್ತು ಮಾ
ತಾಡುವ ಮಾತಿನೊಳ್ ನಿಮಿಷಕಂ ಬೆಳಗಾಯ್ತು ವಿಚಿತ್ರ ಕೇಳ್ ಸಖೀ ೬೯

ಪಡೆದಮರ್ದಪ್ಪಿದಪ್ಪುಗಳ [1]ಕಾಂಕ್ಷೆಗಳುಂ[1] ಸಮಸಂದು ವಜ್ರಲೇ
ಪದೊಳಿಣೆಯಾಗಿ ಪತ್ತಿ ಸುರತಪ್ರಮುಮುಂ [2]ಕೆ[2]ಳೆವಲ್ಲಿ ನಾಂದು ಪ
ತ್ತಿದ ಸಿರಿ[3]ತಳ್ತ[3]ಪ್ಪೋಲೆಗಳನೊಯ್ಯನಗಲ್ಚುವ ಮಾಟಿಕ್ಕೆಯಾದುದೇ
ನೊದವಿದಲಂಪು ದಂಪತಿಗೆ ಪೊಂಪುಳಿಯೋಯ್ತು ರತಿಪ್ರಬಂಧದೊಳ್ ೭೦

ಕದಪಿನ ಕಣ್ಣ ಸಾರ್ಕೆಯನಲಂಕೃತಿವೆತ್ತ ಗಳಪ್ರದೇಶಮುಂ
ಪದಕದ ತಾಣಮುಂ ಕುಚತಟಾಂತರಮುಂ ನಿಜಬಾಹುಮೂಲಮುಂ
ಮೃದುರಸನಾಗ್ರದಿಂ ಬಳಸಿ ಚುಂಬಿಸಿದರ್ [4]ಸವಸೀಳ್ದ ನಾಂ[4]ಗುಲೀ
ಕದ ಕುಸುಮಂಗಳಂ ಪಱಿದು ಪತ್ತಿಸಿದಂತೆವೊಲೊಪ್ಪಿ ತೋರ್ಪಿನಂ ೭೧

(ಶೂದ್ರಕಕಾವ್ಯಸಾರಂ, ೬೬೬, ಸೂಕ್ತಿಸುಧಾರ್ಣವಂ, ೧೪-೬)

ಪಂಕರುಹವದನೆಗೆಸೆದುವು
ಕುಂಕುಮದಿಂ ತೊಯ್ದು ಚಮರಿಯಂ ಮೋದಿದವೊಲ್
ಕೊಂಕಿ ನಖರೇಖೆ ಕೊರಲೊಳ್
ಕಂಕುಳ [5]ಜೆನ್ಸ್ರಿಯ[5] ಮೊಲಿಗೆಲಂಗಳೊಳೆತ್ತಂ ೭೨

(ಸೂಕ್ತಿಸುಧಾರ್ಣವಂ, ೧೪-೨೯)

ಶೆಗೆದಮರ್ದಪ್ಪಿ ಬಾಯ್ಪಿಡಿದು ಚುಂಬಿಸಿ ನಂಬಿಸೆ ಪೋದಜವ್ವನಂ
ಮಗುಳ್ವುದು ಪೇಪರಾಯು ದೊರೆಕೊಂಬುದು ಕೋಮಳ ಗಾತ್ರೆಯರ್ಕಳೋ
ಲಗದ ಪಿಸೋದವಿಲ್ಲದರಸಂ ವಿರಸಂ ಮರದಿಂದೆ ಕಷ್ಟಮಾ
ಕೆಗಳತನುಪ್ರಸಂಗದೊಳೆ ಜಾಟ್ಟಿ ನರಂ [1]ಮರನಲ್ತೆ ಧಾತ್ರಿಯೊಳ್[1] ೭೩

(ಸೂಕ್ತಿಸುಧಾರ್ಣವಂ, ೧೪-೧೧)

ತಂಬೆಲರಂತೆ ಸೋಂಕಿ [2]ಮೃ[2]ಗದಂತಿರೆ ಮೇಳಿಸಿ ತುಂಬಿಯಂದದಿಂ
ಚುಂಬಿಸಿ ಸೊಕ್ಕನಿಕ್ಕಿ ಮಱಿಪಿಕ್ಕಿ ಪದಂಬಿಡೆ ಚಿತ್ತಮೆಯ್ದೆ ನಾ
ಣಂಬಿಡೆ ಬಿಟ್ಟಮುಯ್ಯುಱಿದು ಪ್ಯೆನವಿರುರ್ವಿ ಪೊದಟ್ಟಿಲರ್ಚೆ ಮೆ
ಯ್ಯಂ ಬಿಗಿಯಪ್ಪಿ ಬಾಲೆಯ ಭಯಂಗಳೆದಂ ನವಸಂಪ್ರಯೋಗದೊಳ್ ೭೪

(ಲೀಲಾವತಿ, ೧೩-೧೬; ಸೂಕ್ತಿಸುಧಾರ್ಣವಂ, ೧೪-೧೨)

---

[1] ಕಾಳಸೆಗಳ್ (ಸೂ) [2] ತ (ಸೂ) [3] ತಾೞ್ (ಸೂ) [4] ಸ್ಮರಸಮರ್ನಾ (ಕಾವ್ಯಸಾರ)
[5] ಮುಯ್ಯುಗಳ (ಸೂ)

ಮೃದುಗಳನಾದಮಂ [1]ಸಲಿಸಿ ಸನ್ಮದಪಲ್ಲಟಮಂ ನಿಮಿ[2]ರ್ಚಲೀ
ಯುವೆ ನಿಜಮುಗ್ಧಮಂ ತಳೆದ ಕಾಲದೊಳಾದನುರಾಗದಿಂದೆ ಸಾ
ರ್ಚಿದ ಬೆಳರ್ವಾರ್ಯಸೇಂ ನೃಪತಿ ಪೀರ್ದನೊ ಚಿತ್ರದ ಮೆಚ್ಚುನಿಚ್ಚೆಯಂ
ಮುದಮನಲಂಪಿನಿಂಪಿನೊಲಮಂ ಸುಖಮಂ ಬರೆಪೀರ್ವ ಮಾಟಿಕ್ಕೆಯಿಂ ೭೫

(ಸೂಕ್ತಿಸುಧಾರ್ಣವಂ, ೧೪-೧೯)

ಜಾಯಿಲನಂತೆ ಲಜ್ಜೆ ತೆಜಪೋಡೆ ಜಡಂಗಿ ನೃಪಂ ಕಡಂಗಿ ವಾ
ತ್ಸ್ಯಾಯನನಂತೆ ಮರ್ಮವಜಾಂದಾಕೆಗೆ ತೀೞ ಮಸೆಪಾಸನಂಗಳಿಂ
ಪಾಯೆ ತಗುಳ್ದು ಪಾಯ್ದು ಭರದಿಂದೊಡವಾಯ್ದು ಜುಲುಮ್ಮನೊಟ್ಟಿಗುಂ
[2]ಪೀ[2]ಯೆನೆ ಕಮ್ಮಗಿಂಪಿನೆಳವೆಂಗಿನಕಾಯೊಡೆದಂತೆ ತೆಳ್ವದಂ ೭೬

(ಸೂಕ್ತಿಸುಧಾರ್ಣವಂ, ೧೪-೨೦)

ಮಂಚದ ಪಿಂಚದಂಚೆಗಳೊಳಿಂಚರದಂಚರನಾಗದಂಚೆ ಪೆ
[3]ಚ್ಚಂಚರವೀಟಮುಂಚದಿದು ಪಿಂಚದಿರಿಂ[3] ಚಮರೆಂಬ ದೂಸಜಂ
ದಿಂಚರಮಂಚೆಯಿಂಚರದ ಪಿಂಚದ ಚಂಚಳ ಚಂಚರೀಕದೊಂ
ದಿಂಚರದೊಳ್ ಪಳಂಚಲೆಯೆ ಮಂಚರವಂ ಮೊಜಿಂದೇಟಿಂ ಕೂಡಿದರ್ (?) ೭೭

(ಸೂಕ್ತಿಸುಧಾರ್ಣವಂ, ೧೪-೨೧)

ಗಳರುತಿಮಂತ್ರನಾದ[4]ವಲಘು[4]ಸ್ತನತಾಡನ ಮುಷ್ಟಿಮುದ್ರೆ ಕೋ
ಮಳ ನಖರೇಖೆ ಯಂತ್ರಲಿಖಿತಂ ಸಮಬಿಂದುವೆ ನಿಗ್ರಹಾಕ್ಷರಂ
ತಳಹತಿ ವೇತ್ರದಂಡಹತಿಯಾ ನಬಿಸುವರ್ ನವಘೂಸನಾಗೆ ಕಾ
ದಿರ ಮನೋಭವಗ್ರಹಮನಲ್ಲಿ [5]ಕಟಿಲ್ಚು[5]ವರಿಚ್ಚೆಗಾರ್ತಿಯರ್ ೭೮

(ಸೂಕ್ತಿಸುಧಾರ್ಣವಂ, ೧೪-೨೨)

ಸುರತದ ಶಿಕ್ಷೆಶಿಕ್ಷೆ ಪಡೆಯಂತೆ ತಗುಳ್ದಿರೆ ನಲ್ಮೆಯೆಂಬ ಪೊ
ನ್ನೊರೆಯೊರೆದಂತೆ ರಾಗರಸದಿಂ ಪರಿಪೂರಿತಮಾದ ದೇಹ ತಾಂ
ಬಿರಿದೆಡೆಯಂತೆ ಕಾಮಿನಿಯ ಕೋಮಲಮಪ್ಪ ಶರೀರದೊಳ್ ತರಂ
ತರದೊಗೆದೊಪ್ಪಿ ತೋಱುವುವು ಕಾಮುಕದಂತನಖಕ್ಷತಾದಿಗಳ್ ೭೯

(ಸೂಕ್ತಿಸುಧಾರ್ಣವಂ, ೧೪-೨೮)

---

[1]ಸಲಿಸಲಿಸನ್ಮದಪಲ್ಲಟಮಂಪೊಣ(ಸೂ) [2]ಸಿ(ಸೂ) [3]ಚರಂಚರವೀಯೆಮಂಚಮಲಿಪಿಂಚದುರಿಂ(ಸೂ) [4]ಮಳಕ(ಸೂ) [5]ತಳಚರ್ಮ(ಸೂ)

ನವಲಜ್ಜಾಭಾರಸಮ್ರಾನನೆಯನುರದೊಳೊತ್ತಂಬದಿಂದೊತ್ತಿ ಸರ್ವಾಂ
ಗವನೆಸ್ನಂಗಂಗಳೊಳ್ ಪುಯ್ಗರೆದುವೆನಿಸಿ ಪುಯ್ಯಾರೆ ತಕ್ಕೈಪ್ಪಿ ದೇವ
ರ್ಗನಣಂ ಕೈಸಾರದಂತಪ್ಪವಳಧರಮುಮಂ ತೃಪ್ತಿರಾಗಾಬ್ಧಿಪರ್ಸ್ನಂ
ತವಲಂಪಿಂ ಪೀರ್ದು ಪುದ್ವಲ್ಲಿಭೆಯು ಸುಸಿಲಸ್ವೈಪಿಂ ಕೃತಾರ್ಥಾತ್ಮನಪ್ಪೆಂ ೮೦

(ಕಾದಂಬರಿ, ಉ. ಭಾ. ೫೨೨; ಸೂಕ್ತಿಸುಧಾರ್ಣವಂ, ೧೪-೩೦)

ಪ್ರತಿಘಾತಾಯತಲೋಲ ಕಂಕಣಝಣಜ್ಝೇಂಕಾರ ಚಂಚತ್ಕಳಾ
ಹತಿ ಮಂಜಾಗ್ರಶಕುಂತಿಕಾ ಪಟುತರಪ್ರೋದ್ಧ್ವಾನನಾಸಾಗಳಾ
ರುತಿ ಮಧ್ಯಾಂಗುಳೀ ತಾಡನೋಚಿತಲಯಪ್ರವ್ಯಕ್ತಜಿಹ್ವಾಟಳ
ತ್ಕೃತಿ ಪೊಣ್ಮುತ್ತಿರೆ ರಮ್ಯಮಾಯ್ತು ಸುರತಪ್ರಾರಂಭಕೋಳಾಹಳಂ ೮೧

(ಸೂಕ್ತಿಸುಧಾರ್ಣವಂ, ೧೪-೩೧)

ಪೊಱ ತಡವಾಗೆ ನಾಣಗಲೆ ತೆಳ್ವಿದನೊಳ್ಪದನಾಗಿ ಪಾಯೆ ಮೆಯ್
ಪಱಿಪಱಿಯಾಗಿ ತೀರ್ ಪಸಗೆ ಸೋಲಮುಗುಂದಲೆಯಾಗೆ ಕೂಡುವ
ಬ್ಬಿಱು ಮಿಗೆ ನೀಳ್ದಲಂಪೊದವೆ ಬೇಡಿಸುವಪ್ಪಿನಿತೆಂಬ ಲೆಕ್ಕಮುಂ
ಮಱಿಯಿಸೆ ನಾಡೆ ಸೂಟ್ಗಳನೊಡಂಬಡೆ ಕೂಡಿದರೊಂದುಜಾವಮುಂ ೮೨

(ಸೂಕ್ತಿಸುಧಾರ್ಣವಂ, ೧೪-೩೨)

ಮಲ್ಲಿಗೆ ಜೊಲ್ಲೆಹಂ ಕುಣಿವ ಕುಂಡಲಮಂಡಲಮಾಡೆ ಕಂಕಣಂ
ಮೆಲ್ಲುಲಿಯಂ ಪಳಂಚೆ ಮೃದುಕಂಠರವಂ ಪ್ರಸತಾಗೆ ಮಾತುಗಳ್
ಲಲ್ಲೆಯನಪ್ಪುಕೆಯ್ಯೆ ಬೆಮರುಣ್ಮೆ ಸುಖಂ ತಲೆದೋಱಿ ಸುಣ್ಣವಂ
ಝಲ್ಲನೆ ಪಾಯ್ದು ಚೆಲ್ಲೆ ಪುರುಷಾಯಿತಮೇನತಿಚಿತ್ರಮಾದುದೋ ೮೩

ನೆಲೆಮೊಲೆಯಂ ತಗುಳ್ದಡಸಿ ತಾಗುವ ಹಾರಮನೇಱನೂಂಕಿ ಮುಂ
ದಲೆಯ ಕುರುಳ್ಗಳಂ ಕವಿಯುವಂತೆ ಮುಖಾಂಬುಜದಿಂ ಮುಗುಳ್ಚಿ ಸೂಟಿರ್
ಸಲೆ ಸಿಲೆ ಬೆನ್ನಸಪ್ಪಳಿಪ ಸೋರ್ಮುಡಿಯಂ ಕಲಿಗಂಟನಿಕ್ಕಿ ಕಾ
ದಲನೊಳೆ ಕೂಡೆ ಕೋಮಲೆಗೆ ಬಿಚ್ಚತಮೊಪ್ಪಿದುದೌಪರಿಷ್ಟಕಂ ೮೪

(ಸೂಕ್ತಿಸುಧಾರ್ಣವಂ, ೧೪-೩೬)

ತಳಿರಡಿಯೇಱಿ ಚೆಲ್ವ ಕಣೆಕಾಲ್ ಮಣಿವುತ್ತಿರೆ ತೋರದೂರುಗಳ್
ತಳಪೊಳನಾಗೆ ಸಾರಜಘನಂ ಜಡಿವುತ್ತಿರೆ ಸಲ್ಪ ತೆಳ್ಪಸುರ್
ಪೊಳಪುಗೆಯೊಡ್ಡಿ ಪಾಯ್ವ ಮೊಲೆ ಸಲ್ಲಿನ ಕಂಗಳೊಳಾಡೆ ನಲ್ಮೊಗಂ
ಕಳಿಯಿಡೆ ದೀಪ್ತಕೇಶ ಕುಣಿಪುಲ್ ಪುರುಷಾಯಿತದಾಕೆಯೊಪ್ಪಿದಳ್ ೮೫

ರತಿಯಿಂದಂ ವಿಪರೀತಮಪ್ಪ ರತಿಯಿಂ ಪ್ರಾಣೇಶನೊಳ್ ಕೂಡಿ ಘೂ
ರ್ಣಿತೆಯಿಂ ಕಣ್ಣರೆಮುಚ್ಚಿ ಮೆಯ್ಮಱಿದು ಕೇಶಂ ಬಿಟ್ಟು ಗೋಣ್ ಜೋಲ್ದು ಪ್ರ
ಸ್ಪಿತೆಯಾಗಿರ್ದವಳೊಪ್ಪಿದಳ್ ಮನಸಿಜಂ ತನ್ನಾಜ್ಞೆಯಂ ಮೀಱಿದಾ
ಸತಿಯಂ ಶೂಲಮೊಳಿಕ್ಕಿದಂತೆ ಮೆಱಿದಳ್ ತತ್ಕಾಂತೆ ಲಿಂಗಾಗ್ರದೊಳ್ ೮೬

ನೆಗೆದುವು ಕಂಪನಂ ಪುಳಕಮುಂ ಬೆಳರ್ವಾಯ್ತೆಱಿ ಬತ್ತೆ ಘರ್ಮವಾ
ರಿಗಳೊಗೆತಂದುವಂಗಜರಸಂ ಪೊನಲೆೞ್ದುದು ಬಿಟ್ಟ ಕೇಶದಿಂ
ನೆಗೞ್ದುದು ದುರ್ದಿನಂ ಮದನಮಾಂತ್ರಿಕಸೃಷ್ಟಿಯಿನಿಂತು ಮಾಗಿ ಬೇ
ಸಗೆ ಮಱಿಗಾಲಮೆಂಬಿವೊಡನಾದುವು ನಲ್ಲರ ಸಂಪ್ರಯೋಗದೊಳ್ ೮೭

(ಸೂಕ್ತಿಸುಧಾರ್ಣವಂ, ೧೪-೪೦)

ಹರನಸಮೊಯ್ಯನಾಱಿ ಮುಗುಳ್ದಕ್ಷಿಗಳೆಚ್ಚಱಿ ಮೆಯ್ಯೊಳಾಗಳು
ಬ್ಬರಿಸಿದ ರೋಮರಾಜಿ ನಸುನಕ್ಕೆಗೆ ಸಾರೆ ಬೞಲ್ದ ಮೆಯ್ಗೆ ಜೇ
ತರಣಮೊಡರ್ಚೆ ಬಾಯ್ಗೆ ಬಱಿಪಂ ಬರಿಸುತ್ತಿರೆ ಪ್ರೋದಕೂಟನುಂ
ಪರಿವಿಡಿಗೆಯ್ಯೆ ಚಿತ್ರಮೆಳಸಿತ್ತು ರತಾಂತಸುಖಂಗಳೋಪರಾ ೮೮

(ಚಂದ್ರಪ್ರಭಪುರಾಣಂ, ೮-೭೦; ಸೂಕ್ತಿಸುಧಾರ್ಣವಂ, ೧೪-೪೨)

ಕಿಚ್ಚಿನಳುರ್ಕೆಯಿಂ ಬಿದಿರ ಗಂಟೊಡೆವಂತಿರೆ ತಾಲುರತ್ಸೃತಂ
ಬಿಚ್ಚತಮುಣ್ಮೆ ಪೊಣ್ಮೆ ಕಡುತಾಡನದಿಂ ನವರಕ್ತಧಾರೆಗಳ್
ಬೆಚ್ಚರಮೆಚ್ಚು ಪಾಯ್ತರೆ ಪಮಂಗಳ ನಾದದ ಸುಯ್ಯಲೊಪ್ಪೆ ಕ
ಟ್ಟೆಚ್ಚರಿಯಾದುವೋರ್ವನ ಮಹಾರತಸಂಭ್ರಮವೊಂದು ತಾಣದೊಳ್ ೮೯

(ಸೂಕ್ತಿಸುಧಾರ್ಣವಂ, ೧೪-೪೫)

ಪೆರ್ಮೊಲೆಗಳ್ ಕದಕ್ಕದಿಸೆ ನರ್ತಿಸೆ ಕುಂಡಲಮಾಡೆ ಕುಂತಳಂ
ಸೋರ್ಮುಡಿ ಬೆನ್ನನಪ್ಪಳಿಸೆ ಸಂಚಳಿಸುತ್ತಿರೆ ಮಧ್ಯಮುಣ್ಮೆ ಸುಯ್
ಘರ್ಮನವೋದಬಿಂದು ಬಿಡುತಂದುಗೆ ಭೂಷಣಮಂಜುಳಸ್ವನಂ
ನೆರ್ಮಡೆ[1] ಪೆರ್ಚೆ ತನ್ನಿ ಪುರುಷಾಯತದೊಳ್ ಪ್ರಿಯನಂ ಮುಗುಳ್ಚಿದಳ್ ೯೦

(ಸೂಕ್ತಿಸುಧಾರ್ಣವಂ, ೧೪-೫೧)

ಮದನಸ್ವೇದಾಂಬುವಿಂ ಕೊನೆನನೆದ ಕುರುಳ್ ಪಾಟಲಚ್ಛಾಯೆಯಿಂ ಬೀ
ಗಿದ ಬಾಯ್ ಕೆಂಪಾದ ಕಣ್ಣುಂ ನಖಮುಖಹತಿಯಿಂ ಸೂಕ್ಷ್ಮರೇಖಾಳಿಗಳ್ ತೀ
ವಿದ ವಕ್ಷೋಜಾತಪಾರ್ಶ್ವಂ ತೊಳಸವಡೆದ ಮೆಯ್ ನೀಳ್ದ ಸುಯ್ ಜೆಂಗೆ ಬಿಸ್ಪೇ
ಱಿದ ಕೇಶಂ ಮಂದಯಾನಂ ನೆಱಿ ಮೆಱಿದುವು ರತ್ಯಂತದೊಳ್ ಕಾಂತೆಯರ್ಗಂ ೯೧

(ಸೂಕ್ತಿಸುಧಾರ್ಣವಂ, ೧೪-೬೩)

---

[1] ನೆರ್ಗಡೆ(ಸೂ)

ಮೊಲೆ ಮಲೆಯೆ ಭಾಳಪಟ್ಟಮ
ನಲೆಯೆ ಕುರುಳ್ ತಾರಹಾರಮಂಡಲಮುರದೊಳ್
ನಲಿಯೆ ಶಕುನಿಗಳ ತೆಱದಿಂ
ದುಲಿಯೆ ಕೊರಲ್ ಕಾಂತೆ ಕೂಡಿದಳ್ ಪ್ರಿಯತಮನೊಳ್ ೯೨

(ಸೂಕ್ತಿಸುಧಾರ್ಣವಂ, ೧೪-೬೫)

ಒಡೆದು ಕಲಂಕಿ ಪಾಯ್ವ ಪದದೊಳ್ ಪದವೆತ್ತು ಪುಡುಂಕನೀರನ
ದ್ದಿದಳುಱಿ ಪೋದಿ ಮುಂದಲೆಗೆ ಪಾಯ್ದು ಪೊರಳ್ಚಿದಳುರ್ಬಿ ಬಾಹುಪಾ
ಶದೊಳೆ ತೊಡರ್ಚಿದಳ್ ಕರದ ಕೂರುಗುರಿಂದಮೆ ಜಿನ್ನ ಬಾರನೆ
ತ್ತಿದ[1]ಳವಳಾಱಿದೋಪನವನಂ[1] ವನಿತಾಜನಚಿತ್ತಚೋರನಂ ೯೩

(ಲೀಲಾವತಿ, ೧೩-೨೨. ಸೂಕ್ತಿಸುಧಾರ್ಣವಂ, ೧೪-೬೮)

ಎತ್ತಿ ಮುಖಾಬ್ಜಮಂ[2] ಚದುರಿಸೊತ್ತಿ[2] ಕುರುಳ್ಗಳನೊಪ್ಪಿ ನೀವಿ ಮೆ
ಯ್ವೆತ್ತು ಕದಂಪಿನೊಳ್ ಕದಪನಿಟ್ಟು ತೊಡಂಕಿದ ಭೂಷಣಂಗಳಂ
ಬಿತ್ತರದಿಂದೆ ತಿದ್ದಿ ರಸದಂಬುಲಮಂ ಸವಿಮಾಡಿ ನೀಡಿ ಸು
ಯ್ವೆತ್ತ ರತಾಂತದೊಳ್ ಸುರತಖೇದಮನಾಱಿಸಿದಂ ಮನಃಪ್ರಿಯಂ ೯೪

(ಸೂಕ್ತಿಸುಧಾರ್ಣವಂ, ೧೪-೭೩)

ಪರೆವಳರ್ಪ್ರಜಂ ಕೆದಱಿ ಸೂಸಿದ ಮುಂದಲೆ ಗುಜ್ಜುಗೊಂಡ ಪೀ
ನರಕುಚಮಂಡಳಂ ತುಱುಕಲಾದೆರ್ದೆ ಬಿಚ್ಚಿದ ಕೇಶಪಾಶಮು
ಬ್ಬರಿಸಿದ ರೇಖೆಗಳ್ ಸುಗಿದು[3]ರಂ ಕಡು[3]ಜರ್ಝರಮಾದ ಬೊಟ್ಟು ಸೌಂ
ದರತರಮಾಗೆ ದಂಪತಿಗಳಿಂತೆಸೆದರ್ ಸುರತಾವಸಾನದೊಳ್ ೯೫

(ಸೂಕ್ತಿಸುಧಾರ್ಣವಂ, ೧೪-೭೧)

ನಲಿಗಚರ್ಣಂ ನಖರೇಖೆಯುಂ ಸುಲಿದುರೋಜೋನ್ಮುಖ್ಯಮುಂ ಸ್ವೇದವಾ
ರಿಲವಂಗಳ್ ಸ್ರೋಳೆವಾಸ್ಯಮುಂ ಪರೆವ ಚಂಚತ್ಕುಂತಳಾನೀಕಮುಂ
ಸಲೆ ಸ್ಪೈದೋಱಿ ರತಾಂತದೊಳ್ ಸುದತಿ ಸಸ್ವೇದಾಂಬುವಂ ತೀರ್ಚಿ ಬ
ತ್ತಲೆ ನಿಂದಿರ್ದಕೆಲರ್ಗೆ ತೀರ್ದ ರತಖೇದಶ್ರಾಂತಿಯಿಂ ಬಿಚ್ಚತಂ ೯೬

(ಸೂಕ್ತಿಸುಧಾರ್ಣವಂ, ೧೪-೭೪)

---

[1] ಕಂಪಿಂ(ಪಲಾ)ಜಿಪವನಂ(ಸ) [2] ಕಪಬಾಜಿಚೊಲ್ಲಿಪವನಂ(ಸೂ) [3] ಚಮರನೂಡಿ(ಸೂ)
[4] ಪೋಗದ (ಸೂ)

ಬೆಮರ್ಗಳನೂದಿ ನುಣ್ದೊಡೆಗಳಂ ಪಿಡಿದೌಂಕಿ ಬೆರಲ್ಗಳಿಲ್ಲಿನುಂ
ಕ್ರಮದೊಳೆ ಕೋದು ತಳ್ತು ಚಿಟುಕಿತ್ತು ತೊಡಂಕಿದ ಕುಂತಳಂಗಳಂ
ಸಮುದಮಮೊಪ್ಪೆ ನೀವಿ ರಸದಂಬುಲಮಂ ಸವಿಮಾಡಿ ನೀವಿ ಮೇ
ಲಮರೆ ಬೞಲ್ದ ತನ್ನಿನಿಯಳಂ ನೃಪನಾಱಿಸಿದಂ ರತಾಂತದೊಳ್ ೯೭

(ಸೂಕ್ತಿಸುಧಾರ್ಣವಂ, ೧೪-೭೫)

ಬೆಮರಂ ಬೀಸಿ ತೊಡಂಕಿದೊಳ್ಗುರುಳನಾದಂ ನೀವಿ ಪಚ್ಚಂಗಳಂ
ಕ್ರಮದಿಂ ತಿದ್ದಿ ಕದಂಪಿನೊಳ್ ಕದಪನಿಟ್ಟೋರೋರ್ಮೆ ಕೊಂಡಾಡಿ ಸಂ
ಭ್ರಮದಿಂದಂ ಪಿಡಿಕೆಯ್ಸಿ ನುಣ್ದೊಡೆಗಳಂ ಕಾದಲ್ಮೆ ಕೈಮಿಕ್ಕು ನೇ
ರ್ಪಮರ್ವನ್ನಂ ರತಖೇದಮಂ ಮಱಿಸಿದಂ ನಲ್ಲಂ ಸರೋಜಾಸ್ಯೆಯಾ ೯೮

(ಸೂಕ್ತಿಸುಧಾರ್ಣವಂ, ೧೪-೭೭)

ನಿತ್ಯಂ ಚಿತ್ತಪ್ರಸನ್ನಂ ನಿರತಿಶಯಸುಖಂ ಜಾಡ್ಯವಿದ್ರಾವಣಂ ಮ
ತ್ತ್ಯಂತಪ್ರೀತಿಕಾಂತಪ್ರದಮಭಯಮನಂತೋತ್ಸವಂ ಸರ್ವಲೋಕ
ಸ್ತುತ್ಯಂ ಚಾತುರ್ಯಪೂರ್ವಂ ನಿರುಪಮವಿಭವಂ ಕಾಮಕೇಳೀವಿಲಾಸಂ
ಸತ್ಯಂ ಕೇಳ್ ಯೋಗಿವೃಂದಾರಕಪಶುಮೃಗಪಕ್ಷಿಪ್ರತಾನಕ್ಕೆ ಸಾಧ್ಯಂ ೯೯

ಓರಂತೆಮೆಚ್ಚಿದಂ ಕೃತಿ
ಸಾರಂ ರತಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೦೦

(ಸೂಕ್ತಿಸುಧಾರ್ಣವಂ, ೧೪-೮೨)

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ
ಪುರಾತನಪ್ರಮಾಣಸುಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾ
ಪ್ರಬಂಧದೊಳ್ ಸುರತಕೇಳೀವರ್ಣನಂ ಚತುರ್ದಶಾಶ್ವಾಸಂ

# ವಿಪ್ರಲಂಭವರ್ಣನಂ

ಪುರುಡಿಂ ಮ್ಲಾನದಿನನ್ಯದೇಶಗಮನವ್ಯಾಸಂಗದಿಂ ಸುವ್ರತಾಂ
ತರದಿಂ ಕೂಡಿದ ವಲ್ಲಭರ್ಗೆ ವಿರಹಂ ಪೂರ್ವಾನುರಕ್ತರ್ಗೆ ತಾಂ
ವಿರಹಂ ಸಂಧಿಸೆ ಪಾಱಿಯಿಂದೆ ಪಿರಿದುಂ ಬರ್ಕುಂ ದಶಾವಸ್ಥೆಗಳ್
ಹರಿಣಾಂಕಾದಿಗಳಂಜಿಕುಂ ಸರಸಸೇವ್ಯಂ ವಿಪ್ರಲಂಭಸ್ಥಳಂ ೧

(ಸೂಕ್ತಿಸುಧಾರ್ಣವಂ, ೧೫-೧)

ಸ್ಮರವಶದಿ[೧]ನನ್ಯ[೧]ಜನ್ಮಾಂ
ತರಕೃತಸಂಸ್ಕಾರದಿಂ ವಿಭೋಗಸ್ಪೃಹೆಯಿಂ
ವರಚಾತುರ್ಯ ಕಳಾಗಮ
ಪರಿಣತಿಯಿಂ ಸ್ನೇಹ[೨]ಪ್ರೀತಿ[೨]ಗಳ್ ಸಂಭವಿಕುಂ ೨

(ಶೃಂಗಾರರತ್ನಾಕರಂ, ೪-೨೦; ಸೂಕ್ತಿಸುಧಾರ್ಣವಂ, ೧೫-೨)

ಪರಿಭಾವಿಸುವುದು ಪೂರ್ವಾ
ನುರಾಗ ಮಾನಾಖ್ಯ[೩]ಕಂ ಪ್ರ[೩]ವಾಸಾಖ್ಯಾನಂ
ಕರುಣಾತ್ಮಕವೆಂದಿಂತವ
ತರಿಸೆ ಚತುರ್ಭಂಗಿ ವಿಪ್ರಲಂಭದ ಭೇದಂ ೩

(ಶೃಂಗಾರರತ್ನಾಕರಂ, ೪-೩೯; ಸೂಕ್ತಿಸುಧಾರ್ಣವಂ, ೧೫-೩)

ನಳಿತೋಳಂ ನೀಡಿ ಕಾಲಂ ಮಡಿದು ಪೆಱಗಣಿಂ ಬಾಗಿ ಬಂಬಲ್ಗುರುಳ್ಸಂ
ಚಳಿಪನ್ನಂ ನೀವಿಬಂಧಂ ಸಡಿಲೆ ನಿಱಿಯನೇಱಿತೂತ್ತಿ ಸೌರಂಭದಿಂ ಕೆಂ
ದಳಮಂ ಸಂಚಾರಿಕಾಸ್ಕಂಧದೊಳವಯವದಿಂದೂಱಿ ನಿಮಿರ್ದು ಮೆಯ್ಯಂ
ಕಳೆಯುತ್ತಂ ನೋಡಿ[೪]ದೆನ್ನೊಪ[೪]ಳ್ ತೆಱನೆನಗಂ ಭ್ರಾಂತಿಯುಂ ಮಾಱ್ಪುದಿನ್ನುಂ ೪

(ಶೃಂಗಾರರತ್ನಾಕರಂ, ೪-೪೨; ಸೂಕ್ತಿಸುಧಾರ್ಣವಂ, ೧೫-೪)

---

[೧]ಸರಿಕೆ(ಸ) [೨]ವೃತ್ತಿ(ಸೂ) [೩]ತತ್ಪ್ರ(ಸ) [೪]ದಾ ಕಾಂತೆಯಾ(ಸೂ)

## ಪೂರ್ವಾನುರಾಗಂ

ಇನಿಯಂ ಪ್ರಾಣಮನುಗಲ್ಚಿಪೋಪ ತೆಱದಿಂದೆನ್ನಿಂದಗಲ್ದಿರ್ದನಾ
ತನಪೋಗಿಂಗೆನಗಕ್ಕ ನೋವಿಸಿಸುವಿಲ್ಲೇಕೆಂಬೊಡೊಂದುಂಟು ನ
ಲ್ಲನ ಚಿತ್ತಂ ಪೆಱಪಿಂಗೆ ಪಿಂಗಪೆ ತಗುಳ್ದೋರಂತೆ ನಿಷ್ಕಾರಣಂ
ನೆಸೆವೀ ಚಿತ್ತದ [1]ಪೂಾಪ್ಪು[1] ನಾಣಿಲಿತನಕ್ಕಾಂ [2]ನೋಂತೆ[2]ನಬ್ಜಾನನೇ ೫
(ಶೃಂಗಾರರತ್ನಾಕರಂ, ೪–೪೫; ಸೂಕ್ತಿಸುಧಾರ್ಣವಂ, ೧೫–೫)

## ಮಾನಾಖ್ಯೆ

ಪ್ರಿಯೆಯೊಡನಾದ ಕೂಟಮೊಳಗಲ್ಕೆಯೊಳಾರೆಯೆ ಕೂಟದಿಂದಗ
ಲ್ಕೆಯೆ ಕರಮೊಳ್ಳಿತೆನ್ನಬಗೆಗೆಂತೆನೆ ನೆಟ್ಟನೆ ನೋಟಿತ್ರ್ಪಡಂತೆ ಮ
ತ್ಪ್ರಿಯೆಯನೆ ಕಾಣ್ಗೆನೊರ್ವಳನೆ ಭಾವಿಪ್ಪೊಡೀಗ ಕಣ್ಗೆ ತ
ನ್ಮಯಮೆನಗೀ ಜಗತ್ರಿತಯಮೆಲ್ಲಮಗಲ್ಕೆಯೊಳೆನ್ನನಲ್ಲಳಾ ೬
(ಶೃಂಗಾರರತ್ನಾಕರಂ, ೪–೪೮; ಸೂಕ್ತಿಸುಧಾರ್ಣವಂ, ೧೫–೬)

ಶಿಥಿಲಂಗಾಣದೆ ಪೋರ್ದು ಪಕ್ಕೆಪಡದೀಗಳ್ ಮತ್ಪ್ರಿಯಂ ಪೋಗೆ ಮ
ನ್ಮಥನಾಕ್ಷೇಪದಿನೆಚ್ಚು ಕೊಂದಪನದಿನ್ನೇತಕ್ಕೆ ಚಿತ್ತಕ್ಷತ
ವ್ಯಥೆಯಂ ಸೈರಿಪೆನೆಂದು ದೀನವದನಾಂಭೋಜಸಂತಾಪದಿಂ
ಶ್ಲಥಧಮ್ಮಿಲ್ಲೆ ಮನೋಭವಪ್ರಥಿತಬಾಣಾಘಾತದಿಂ ಬಿರ್ದಿದಳ್ ೭
(ಶೃಂಗಾರರತ್ನಾಕರಂ, ೪–೪೭)

## ಪ್ರವಾಸಂ

ಇವನಿಂತೀಕೆಗೆ ಗಂಡನೆಂಬೊಡೆನಗಾಗಳ್ ರಾಜ್ಯಮಾದಂತೆ ತೋ
ಱುವುದೆತ್ತಾನುಮಗಲ್ದು ಪೋದೊಡವನಿನ್ನುಂ ಬರ್ಕುಮೋರೊರ್ಮೆ ನೋ
ಡುವೆನೆಂಬಾಸೆಯನೆಂತು ಮಾಣ್ಬೆನಗಿನ್ನಾರಾಸೆಯೆಂದಾಗಳಾ
ಡುವೆನಾರಂ ಬರಪಾರ್ವೆನೆಂತು ಕಳೆವೆಂ ಪೊತ್ತಂ ವಿಲೋಲೇಕ್ಷಣೇ ೮
(ಶೃಂಗಾರರತ್ನಾಕರಂ, ೪–೫೦)

ಕೆಳದೀ ಕೀರಾಳಿಗಳ್ ಕ್ಕೆಯೆಡೆ ನಿನಗೊಡಲಂ ತಾಳಲಾರ್ತಪ್ಪೆನಿಲ್ಲೀ
ಗಳಿಪ್ಪೊಂದುಂ ಬೇಡ ಕಾಂತಂ ತಳರ್ದನೆನಗಿರಲ್ ತಕ್ಕುದಲ್ಲೆಂದು ಕೈಗೆ
ಯ್ದಿಳೆಯುಳ್ ತನ್ನಂ ಪರಿಚ್ಛೇದಿಸಿ ಬಗೆಯುಪೆ ಬಂದುಣ್ಕೆ ಪರ್ವಿರ್ದ ಬೆಳ್ಪಿಂ
ಗಳ ಕೋಳ್ಗಂ ತೆಂಬೆಲರ್ಗಂ ಪ್ರಿಯ ಶರಣೆನುತುಂ ಸಾರ್ಚಿದಳ್ ಮೆಯ್ಯನೊರ್ವಳ್ ೯
(ಶೃಂಗಾರರತ್ನಾಕರಂ, ೪–೫೧; ಸೂಕ್ತಿಸುಧಾರ್ಣವಂ, ೧೫–೭)

———

[1]ಮೋಹ(ಸೂ) [2]ನೋವೆ(ಸೂ)

## ಕರುಣಾತ್ಮಕಂ

ಅಭಿಲಾಷೆ ಚಿಂತೆ ಸಂಸ್ಮೃತಿ
ವಿಭುಗುಣಸುತಿ ತಾಪಸಂ ಕ್ರಿಯಾದ್ವೇಷಂ ಸಂ
ದಭಿಮಾನಚ್ಯುತಿ ಗಮನಂ
ಕ್ಷುಭಿತಾತ್ಮಾವಸ್ಥೆ ಮರಣಮಿವು ದಶ[1]ಭೇದಂ[1] ೧೦
(ಶೃಂಗಾರರತ್ನಾಕರಂ, ೪-೬೯; ಸೂಕ್ತಿಸುಧಾರ್ಣವಂ, ೧೫-೮)

ನೋಟಂ ಚಿಂತೆ ಸುಯಿಲ್ ಜಟಿ
ದೂಟಂ ಬಿಡುವಂಗ ಬಡವು ವಿಕಳಂ ಮೌನಂ
ನಾಂಟಿಸಿದ ಮೂರ್ಛೆ ಪರಣಂ
ದಾಂಟಲ್ಕಂ ಪತ್ತವಸ್ಥೆಗಳ್ ಸೊಗಯಿಸುಗುಂ ೧೧

ಅರವಿಂದಮಶೋಕಂ ಮಿಗೆ
ವರ ಚೂತಂ ಮಲ್ಲಿಕಾಖ್ಯೆ ನೀಲೋತ್ಪಲಮೆಂ
ದೊರೆದೈದಲರಂಬಿಂದಂ
ವರ ನಾರಿಯುರಿಂಪೆ ನೋಡಲಾರ್ತೆನೆನಿಕ್ಕುಂ ೧೨

ಮೆಲ್ಲೆರ್ದೆಗೆ ಕಮಲ ಬಲ್ಮೊಲೆ
ಯಲ್ಲಿಗೆ ಚೂತಂ ಸುನೇತ್ರದೆಡೆಗೆಯಶೋಕಾ
ಪಲ್ಲವ ಮಸ್ತಕದೆಡೆಗಂ
ಮಲ್ಲಿಗೆ ನಾಣೆಡೆಗೆ ಮದನ ನೆಯ್ದಿಲನೆಸುವಂ ೧೩

ವನಜ ನೆಸಯಿಪುದು ಚೂತಂ
ತನುವಂ ಕಂದಿಪುದಶೋಕೆ ನುಡಿಪುದು ಮಲ್ಲಿಗೆ
ನನೆ ಮಲಗಿಸುವುದು ನೆಯ್ದಿಲೆ
ಮೊನೆಯಂಬು ಸತೀಜನಂಗಳಸುವಂ ಕಳೆಗುಂ ೧೪

ನಳಿನಕ್ಕೀಕ್ಷಣಚಿಂತೆ ಕೇಸರಕೆ ಸುಯುಲ್ತಾಪ ಚೂತಕ್ಕೆ ಕಂ
ಗೊಳಿಸ್ರೂಟಂ ಬಿಡುವಂಗಮುಂ ಕೃಶತೆ ಮಲ್ಲೀಪುಷ್ಪಕಂ ವಿಭ್ರಮಂ
ಕಳಮೌನಂ ಕುಮುದಕ್ಕೆ ಮೂರ್ಛೆ ಮರಣಂ ಶೋಕರ್ಗಂ ರತೀಕಾಂತನ್ನೆ
ದಲರಂಬಿಂ ದಸವಸ್ಥೆ ಪಾಂಥತತಿಗಂ ಕಂದರ್ಪತತ್ತ್ವಜ್ಞರಿಂ ೧೫

---

[1]ಮೊನಿಕುಂ(ಸ)

ಉಂಟೆಲ್ಲವಸ್ಥೆ ಮುಳಿಸಿಂ
ನಂಟಿಂಪೊಂಪೆರಡು ಮೂಱು ನಾಲ್ಕೈದಾಱಿಂ
ಏೞೆಂಟೊಂಬತು ಪತ್ತೊಂಬ
ತ್ತೆಂಟೇೞಾಱಯ್ದು ನಾಲ್ಕು ಮೂಱೆರಡೊಂದುಂ ೧೬
(ಸೂಕ್ತಿಸುಧಾರ್ಣವಂ, ೧೫-೯)

ಪರವಶದರುಶನದಿಂದಮೆ
ಪರಿದುದು ಮನಮೆನಗೆ ಕೂಟಬೇಟದೊಳೆ ಮನಂ
ಬರಲಱಿಗುಮಱಿಯನೆನಗಂ
ಮೊರಕೊಳ್ಗುಮೊ ಕೊಳ್ಳದೆಂದವಳ್ ಚಿಂತಿಸಿದಳ್ ೧೭
(ಶೃಂಗಾರರತ್ನಾಕರಂ, ೪-೭೮; ಸೂಕ್ತಿಸುಧಾರ್ಣವಂ, ೧೫-೧೧)

ಇಂತು ನುಡಿಯಲ್ಕೆ ಬಲ್ಲನ
ನಿಂತಿಂಬಱಿವವನನಿಂತು ಚೆಲ್ವನನಿಂತ
ತ್ಯಂತ ಗುಣಗಣಸಮೇತನ
[೧]ನಿಂತಪ್ಪನನನ್ಯ ಗಂಡರೊಳ್[೧] ಕಂಡಱಿಯೆಂ ೧೮
(ಶೃಂಗಾರರತ್ನಾಕರಂ, ೪-೮೧; ಸೂಕ್ತಿಸುಧಾರ್ಣವಂ, ೧೫-೧೩)

ಕದಳೀಶಯ್ಯಾತಳಮುಂ
ಕದಳೀಗರ್ಭಾವಗೂಹನ ಮುಣ್ಣುಂ ಶೈತ್ಯಮ
ನೊದವಿಸುಗುಮೆಂದು ಮಾಡಿದೊ
ಡದೆ ಘಟಪಾಕದವೊಲಾಯ್ತುದವಳ್ಗಂಗಜನಿಂ ೧೯
(ಶೃಂಗಾರರತ್ನಾಕರಂ, ೪-೮೧)

## ಸಂತಾಪ

ಇಂಬಱಿದು ನುಡಿವ ನುಡಿಯುಮೊ
ಡಂಬಡಿಪೆನಿಸಿದ ವಿಲಾಸಮುಂ ವರರೂಪಾ
ಡಂಬರಮುಮಾರ ಬಗೆಯಂ
ನಂಬಿಸಿ ಪತ್ತಿಸವೆ ಚತುರಚತುರಾನನಾ ೨೦
(ಶೃಂಗಾರರತ್ನಾಕರಂ, ೪-೭೭; ಸೂಕ್ತಿಸುಧಾರ್ಣವಂ, ೧೫-೧೦

---

[೧] ನಿಂತೀ ಲೋಕದೊಳು ಕಂಡರೊಳು(ಸ)

## ಚಿಂತೆ

ಪಲತೆಱದ ವಿನೋದಂಗಳ್
ಚಲಿಯಿಸುತಿರೆ ಮನಮನೆಂತುಮಾಕೆಯ ಮನದಿಂ
ಚಲಿಯಿಸದಿರ್ಪನವಂ ಸಂ
ಚಲಿಸುವ ಕೇತನದ ಪಟದ ರೂಪಿನ ತೆಱದಿಂ ೨೧

(ಶೃಂಗಾರರತ್ನಾಕರಂ, ೪–೭೯; ಸೂಕ್ತಿಸುಧಾರ್ಣವಂ, ೧೫–೧೨)

ಆಲೇಪನ ಕಜ್ಜಲ ತಾಂ
ಬೂಲಂ ಸ್ರಗ್ಭೂಷಣಾದಿ ವಿಭವಂಗಳನಾ
ಬಾಲೆ ಸಖೀಪ್ರಾರ್ಥನೆಯೊಳ್
ಮೇಳಿಸಿ ನಿನ್ನನೆ ಪಲುಂಬಿ ಪಂಬಲಿಸಿದಪಳ್ ೨೨

(ಶೃಂಗಾರರತ್ನಾಕರಂ, ೪–೮೨; ಸೂಕ್ತಿಸುಧಾರ್ಣವಂ, ೧೫–೧೫)

## ಕ್ರಿಯಾದ್ವೇಷ

ಬಗೆಯದೆ ತಾಯಂ ತಂದೆಯ
ಮೊಗಕಂಜದೆ ಬಂಧುವರ್ಗಮಂ ಮೀಱಿ ಕೆಲ
ಕ್ಕಗಿಯದೆ ನಿನ್ನೊಳ್ ನೆರೆಯಲ್
ಮೃಗಶಾಬೇಕ್ಷಣೆ ತಗುಳ್ದು ಪಂಬಲಿಸಿದಪಳ್ ೨೩

(ಶೃಂಗಾರರತ್ನಾಕರಂ, ೪–೮೩; ಸೂಕ್ತಿಸುಧಾರ್ಣವಂ, ೧೫–೧೬)

## ಅಭಿಮಾನಚ್ಯುತಿ

ಕಳವಳಿಸಿದಪಳ್ ಬಾಯಱಿ
ದೆಳಸಿದಪಳ್ ಬೀದಿಬೀದಿಯೊಳ್ ನಿನ್ನಂ ಕೋ
ಮಳೆ ಪಿಡಿಯಲೆಂದು ಸಾರ್ದಳ
ವಳಿಸಿದಪಳವಳ್ಗೆ ನೀನೆ ಕರುಣಿಸವೇಳ್ಕುಂ ೨೪

(ಶೃಂಗಾರರತ್ನಾಕರಂ, ೮–೮೪; ಸೂಕ್ತಿಸುಧಾರ್ಣವಂ, ೧೫–೧೭)

## ಮರಣಾವಸ್ಥೆ

ಅನವರತಮೆಸುವ ಕಾವನ
ನನೆಯ ಸರಲ್ ಸವೆಯೆ ಸಱಿಯಿದಾಕೆಯ ಪದ್ಮಾ
ನನದಿನೆಡೆಗುಡದೆ ಪೊಣ್ಮುವ
ಘನಸಾರಾಮೋದ[1]ಮುಖ್ಯ[1] ಮಂದಶ್ವಾಸಂ ೨೫

(ಶೃಂಗಾರರತ್ನಾಕರಂ, ೪-೮೬; ಸೂಕ್ತಿಸುಧಾರ್ಣವಂ, ೧೫-೧೯)

## ಮರಣ

ತಳಿರ್ಗೊಂಬಂ ಬಲಗೊಂಡು ಚಂದ್ರಬಲಮಂ ಕೈಕೊಂಡು ತೆಂಗಾಳಿಯಂ
ಕೆಳೆಗೊಂಡಾಮ್ರಮನೊತ್ತಗೊಂಡು ಮಧುವಂ ಮುಂದಿಟ್ಟು ಪುಷ್ಪಾಸ್ತ್ರಸಂ
ಕುಳಮುಂ ತೀವಿರೆ ತೊಟ್ಟು ನಲ್ಲರಟ್ಟಿವಂ ಪಾರ್ದೆಚ್ಚನಿಂತೀಗಳೀ
ಖಳನೀ ಪಾತಕನೀ ಬಹುವ್ಯಸನನೀ ಚಂಡಾಲನೀ ಮನ್ಮಥಂ ೨೬

(ಸೂಕ್ತಿಸುಧಾರ್ಣವಂ, ೧೫-೨೦)

ಉಭಯಾನುರಾಗಮೆ ಮನ್ಮಥನ ರೂಪಂ
ಕ್ಷುಭಿತಾರ್ಥಮಾನಸಂ ತಾನೆ ಕುಸುಮಾಸ್ತ್ರಂ
ಅಭಿಲಾಷೆಗೂಡಿದಾ ನೋಟಮದು ತಾನೆ
ಯಿಭಯಾನೆ ಕೇಳ್ ದಶಾವಸ್ಥೆಯೆನಿಸಿರ್ಕುಂ ೨೭

## ಮನ್ಮಥಾಗಮನ

ಧನುವುಂ ಕರ್ಬಿನ ಬಿಲ್ ಗಡಂ ಗೊಣೆಯುಮುಂ ನೀರೇಜಸೂತ್ರಂ ಗಡಂ
ನನೆಗಳ್ ಬಾಣಚಯಂ ಗಡಂತ್ರತನು ತಾಂ ಮತ್ತಂ ಮನಂನೊಂದು ನಿ
ಬ್ಬನಿಸಂತ್ರಾರ್ದಿಸುತಿರ್ಪನುರ್ಚಿದರ್ದೆಯೊಳ್ ಪುಣ್ ನೆತ್ತರೆಂದಿಂತಿದ
ಕ್ಲೆನಿಸಂ ಮನ್ಮಥಶಸ್ತ್ರಕಲ್ಪಮಿದು ದಲ್ ಚೋಜಮೊಂದು ಶಿಕ್ಷಾಕ್ರಮಂ ೨೮

(ಕಾವ್ಯಾವಲೋಕನಂ, ೭೫೨)

---

[1] ಪೂರ(ಸೂ)

ಬಿರಿದಪುದೆರ್ದೆ ಪೋೞಾಗದು
ಶರೀರಮುರಿದಪುದು ಭಸ್ಮಮಾಗದು ತನುವುಂ
ಸ್ಮರನೆಚ್ಚಪಸರ್ೞಾಗದು
ಮುರಹರ ನಿನ್ನೊಂದಗಲ್ಕೆಯಿದು ಚಿತ್ರತರಂ ೨೯

(ಸೂಕ್ತಿಸುಧಾರ್ಣವಂ, ೧೫-೨೧)

ಗಣಿತಸುದೇವುದಿಕ್ಷುಧನುವುಂ ಕುಸುಮಾಸ್ತ್ರಮುಮೆನ್ನ ಕೈಗೆ ಸಂ
ದಣಿಸೆ ಬೞಿಕ್ಕಮೆತ್ತಣ ತಪೋಮಯರೆತ್ತಣ ಶಾಂತಿಭೂಪರೆ
ತ್ತಣ ಜಿತಕಾಮರೆತ್ತಣ ದಿಗಂಬರರೆತ್ತಣ ಕರ್ಮನಿಷ್ಠರೆ
ತ್ತಣ ಬುಧರೆತ್ತಣಾತ್ಮವಿದರೆತ್ತಣ ನಿಸ್ಪೃಹರೆತ್ತಣುತ್ತಮರ್ ೩೦

(ಗಿರಿಜಾಕಲ್ಯಾಣಂ, ೭-೬೯)

ಮಿಳಿ ಲತೆ ಗುೞಮೋ ಪತ್ರಂ
ಫಳರಸಮೆ ಮದಾಂಬು ನೀಳ್ದ ಕೊಂಬೆ ಕರಂ ಪೂ
ತೆಳಗೊಂಬುಗಳೇ ದಂತಂ
ಕಳಕಂಠನಿನಾದಮೆಸೆವ ಬೃಂಹಿತನಾದಂ ೩೧

(ಗಿರಿಜಾಕಲ್ಯಾಣಂ, ೭-೪೪)

ವಿಪುಳೋನ್ನತ ಪಲ್ಲವಮು
ಗ್ರಪಲ್ಲವಂ ಡಿಂಡಿಮಸ್ವನಂ ಮತ್ತಾಳೀ
ಚಪಳಸ್ವನಮನೆ ಚೂತ
ದ್ವಿಪಘಟೆಯುಂ ತೋಱಿದಂ ಸಮಂತು ವಸಂತಂ ೩೨

(ಗಿರಿಜಾಕಲ್ಯಾಣಂ, ೭-೪೫)

ನರವೊಗರಾಗದ ಮೊಗವಡ
ಮುರುಕಾಂತಿಯ ಪಾಘೆ ಚರಣದಂಕಣಿಗಳ್ ಭಾ
ಸುರ ಪಕ್ಷದ ಪಚ್ಚೆಯ ಪ
ಕ್ಕರಿಯೆಸೆವ ಶುಕಾಶ್ವವೀಥಿಯುಂ ಕಾಣಿಸಿದಂ ೩೩

(ಗಿರಿಜಾಕಲ್ಯಾಣಂ, ೭-೪೬)

ಎರಡುಂ ಪಕ್ಷಂ ಚಕ್ರಂ
ಪ್ರೊರೆದಾಲಿಂಗನಮೆಯಚ್ಚು ಚಂಚುಪುಟಂ ಬಿ
ತ್ತರಿಸುವ ಮುಂಕಣಿಯಾ
ಗಿರೆ ಸೆರೆದಿರ್ದ ರಥಾಂಗರಥಮನೊಪ್ಪಿರೆ ಕಂಡಂ ೩೪

(ಗಿರಿಜಾಕಲ್ಯಾಣಂ, ೭-೪೭)

ತಳಿರ್ಗಳೆ ಚಕ್ರದ ಕದಳೀ
ದಳಫಲಕದ ಸುರಗಿಯುರಲ ಕೌಕ್ಷೇಯದ ಪ
ಡ್ಡಳಿಗಳ ಸಬಳದ ಬಂದುಗೆ
ಗಳ ತಿಸುಳದ ಪೊಲ್ಲೆಯುರಳ ಕಾಲಾಳುಗಳಂ ೩೫

(ಗಿರಿಜಾಕಲ್ಯಾಣಂ, ೭-೫೩)

ಸಳನಳಿವಿಕ್ಷುದಂಡದ ಧನುನ್ಪ್ರಜದಿಂ ಶತಪತ್ರಸೂತ್ರದಿಂ
ತೊಳಗುವ ನಾರಿಯಿಂ ತಳಿರ ಕೈಪೊಡೆಯಿಂ ಕುಸುಮಾಸ್ತ್ರಮಾಲೆಯಿಂ
ವಳವಡೆ ಸಿಂದು ನೀಡಡಿಗೆ ನೀಡಡಿ ಸಾರ್ದಿರೆ ಸಾರ್ದು ಬೊಬ್ಬೆಗೊ
ಟ್ಟಿಳೆ ಜೆಙಗಾನೆ ಸಾರಿಸುವ ಬಿಲ್ವಡೆ ತೋಱತು ಮೀಱ ಲೋಕಮಂ ೩೬

(ಗಿರಿಜಾಕಲ್ಯಾಣಂ, ೭-೭)

ಕೀರತುರಂಗಸಂಘಮುಯುಮೀ ಧರೆ ಪುಷ್ಪಚಯಾಸ್ತ್ರಶಸ್ತ್ರವಿ
ಸ್ತಾರಸುಗಂಧವೃಂದಮುಯುಮೀ ಕಕುಭಂ ಮಕರಂದಸಾಂದ್ರವಿ
ಸ್ತಾರರಜೋನಿಕಾಯಮುಯುಮೀ ನಭಮೆಂದೆನೆ ಕೌತುಕಪ್ರದಂ
ಮಾರನೃಪಾಲಸೇನೆ ನಡೆದತ್ತು ಜಿತೇಂದ್ರಿಯಚಿತ್ತಶೋಷಣಂ ೩೭

(ಗಿರಿಜಾಕಲ್ಯಾಣಂ, ೮-೨)

ಮುನಿಚಿತ್ತಾಕರ್ಷಣನೀ ಬಂದನೆ ಋಷಿವಿಮಳಾಚಾರಸಂಹಾರನೀ ಬಂ
ದನೆ ಧರ್ಮಜ್ಞಾರಿಯೀ ಬಂದನೆ ಜಿತವಿಷಯವ್ರಾತವಿಧ್ವಂಸನೀ ಬಂ
ದನೆ ಶಾಂತಾರಾತಿಯೀ ಬಂದನೆ ಯತಿಹರನೀ ಬಂದನೀ ಬಂ
ದನೆಯೆಂದಲ್ಲಲ್ಲಿ ಭೃಂಗೀಬಹುವಿಧಕಹಳಾನಾದಮುಣ್ಮಿತ್ತದೆತ್ತಂ ೩೮

(ಗಿರಿಜಾಕಲ್ಯಾಣಂ, ೮-೪)

ಕೊರಗಿದರಾ ಯತಿಪತಿಗಳ್
ಹರಣಂಗಳೆದರ್ ವಿಯೋಗಿಗಳ್ ಮನುಮುನಿಗಳ್
ಶರಣೆಂದರ್ ಜಿತಕಾಮರ್
ಮರುಳಾದರ್ ಪುಷ್ಪಶರನ ಪಡೆ ನಡೆವಾಗಳ್ ೩೯

(ಗಿರಿಜಾಕಲ್ಯಾಣಂ, ೮-೮)

ಮುನಿಗಳ ಧೈರ್ಯಭೂಮಿ ರಜಮುಪ್ಪಿಸೆಗಂ ಮನುಚೇತನಾದ್ರಿ ಭೋಂ
ಕನೆ ಪುಡಿಯಪ್ಪಿನಂ ಯತಿಚರಿತ್ರತರಂಗಿಣಿ ಪಂಕಮಪ್ಪಿನಂ
ಘನವಿಮಳವ್ರತೀಂದ್ರರ ತಪೋವಿಪಿನಂ ಬಯಲಪ್ಪಿನಂ ರತೀ
ಶನ ಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರಮಪ್ಪಿನಂ ೪೦

(ಗಿರಿಜಾಕಲ್ಯಾಣಂ, ೮-೭)

ಅಳಿಗಳ್ ಸೇನಾಬ್ಧಿ ಮಂದಾನಿಲಪತಿ ನಡೆವಾ ರಾಜಹಂಸಾಳಿಯುಶ್ವಾ
ವಳಿಗಳ್ ಮಾಕಂದ ದಂತಿವ್ರಜರಥತತಿಯಂತಾ ರಥಾಂಗಂಗಳುಂ ಕೋ
ಕಿಳನಾದಂ ನಿಸ್ವನಂ ಪಾಠಕರುಲಿವ ಶುಕಾನೀಕಮುಂ ರಾಜಮಿತ್ರಂ
ಚೆಲುವಿಂ ಪಿಂದೈದಲುಂ ಭೂಪತಿರತಿಪತಿಯೆಟ್ಟಿಂದನಂತಾ ಜನಕ್ಕಂ ೪೧

ಮುನಿತತಿಯೆಂಬ ವೈರಿನೃಪರೊಗ್ಗೊಡೆಯೋಡೆ ವಿಯೋಗದೇಶ ಬೆ
ಚ್ಚನೆ ತೆಗೆವೆಯ್ದೆ ಪೋಗಿ ಕೃತಕಾದ್ರಿಯನೆಯ್ದೆ ವಿರಕ್ತರೆಂಬ ಪೆಂ
ಪಿನ ಪುರ ಸೂಱೆವೋಗೆ ವಿಟಜೀವನಮೆಂಬ ನಿಧಾನದೇಟಿಗ್ಗಯಂ
ತನತನಗೆಯ್ದೆ ಕಟ್ಟಿತು ರತೀಶನ ಸೈನ್ಯಬಳಾದಿಸಂಕುಳಂ ೪೨

ಜಿಳಿಜಿಳಿನಲ್ಕಿಯೊಳ್ ಪುದಿದು ತೋಱುವ ಮಾವಿನ ತೋರಗಂಭದಿಂ
ತಳಿರ್ಗಿಳಿನಿಂಪುವೆತ್ತ ಪೊಸಲೋವೆಗೆಳಿಂ ನಸು ಬಾಗಿ ಕೊಂಬಿನಿಂ
ಪೊಳೆವೆಳಕಾಯ ನುಣ್ಗೊನರಿನಿಂಪೆಲರಿಂದೆ ನೆಲಕ್ಕೆ ಬೀಟ್ವ ಪೂ
ಗಳ ಕಡೆಯಿಂ ಕರಂ ಸೊಗಯಿಪೋಲಗಶಾಲೆಯೊಳಿರ್ದ ಕಾವನುಂ ೪೩

ನಡೆ ಕೆಲಕಂಜೆ ಬಿನ್ನವಿಸು ಜೇಗದಿ ಕೋಗಿಲೆ ಪಾಡಿನೋಜೆಯಂ
ಗಡಣಿಸು ತುಂಬಿ ಸೋಗೆ ದನಿಯೆತ್ತಿರಮೊಯ್ಯನೆ ಬಂದು ಕುಳ್ಳಿರೀ
ಯೆಡೆಗೆ ಬಸಂತಯೆಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ
ಪಡಿಯರರಾಗಿ ಚಪ್ಪರಿಪ್ಪೋಲಗಮೊಳ್ ಸಲೆ ಕರ್ವುವಿಲ್ಲನಾ ೪೪

ತೊಲಗದೆ ಪಕ್ಕದೊಳ್ನಡಿ [ವ ಪಂಡಿತ] ವಕ್ಕಿಗಳೋಳಿ ಬಿಂಕದಿಂ
ಬಲಗೆಲದೊಳ್ ನೆಗೞ್ತೆವಡೆದಿರ್ಪರಸಂಚೆಯಪಿಂಡು ಬೀಟನ
ಗ್ಗಲಿಸಿದ ಜಕ್ಕವಕ್ಕಿಗಳ ವಂಗಡವಿಂಬಱದಿಪ್ಪ ಗಂಡುಗೋ
ಗಿಲೆಗಳ ತಂಡವೊಪ್ಪೆ ಬಗೆದೋಱುವುದೋಲಗವಂದು ಕಾವನಾ ೪೫

ಕಿವಿಗಿಂಪಂ ಕಱಿವಂತೆ ನುಣ್ಚರದಿ ಪಾಡುತ್ತಿರ್ಪ ಪೆಣ್ದುಂಬಿಗೊ
ಪ್ಪುವ ಬಂಡಂ ಬಿಡದೀವುತಂ ಗಿಳಿಗಳೋದಂ ಕೇಳ್ದು ಮೆಲ್ಪೊಂದಿ ತೋ
ಱುವ ಪಣ್ಣಂ ತಿಱದಿಚ್ಚೆಯಿಂದೆ ಕುಡುತಂ ಚೆಲ್ವಿಂದೆ ಸಾರ್ದಂದು ಬೇ
ಡುವ ಮುದ್ದಂಚೆಗೆ ಕಯ್ಯ ತಾವರೆಯ ಕಾವಂ ಚೆಲ್ಲದಿಂ ನೀಡುತಂ ೪೬

(ಕಬ್ಬಿಗರಕಾವಂ, ೧೩೬)

ತೊಡೆಯೊಳ್ ಕಾದಲಳಿರೆ ಬಲ
ಗಡೆಯಲ್ಲಿ ಬಸಂತನೊಲವಿನಿಂ ಕುಳ್ತಿರೆ ತ
ನ್ನೆಡದೆಸೆಯೊಳ್ ಸೊಬಗಿಯರಿರೆ
ಕೆಡುಚೆಲ್ವಂ ಪಡೆದನಾವಗಂ ನನೆಗಣೆಯಂ ೪೭

ಮಡದಿಯರ ಮೆಯ್ಯ ಕಂಪುಂ
ಕಡುಮೆಱೆವಿನಮಿಟ್ಟ ಕತ್ತುರಿಯ ಪೊಸಗಂಪುಂ
ಮುಡಿಯಲರ್ಗಳ ನಱುಗಂಪುಂ
ಗಡಣಿಸಿ ಕಡೆಗೋಡಿವರಿದುವೊಡ್ಡೋಲಗದೊಳ್ ೪೮

ಮುಂತಿರ್ದಂ ಪುಷ್ಪಮಾಲಾನಿಚಯವಿರಚಿತಸೌರಭ್ಯಲೋಲುಪ್ತ ಭೃಂಗೀ
ಸಂತಾನಂ ಬದ್ಧಧಾರಾವಳಯನಿಳಯಮಧ್ಯಪ್ರದೇಶಪ್ರರತ್ನಾ
ನಂತಪ್ರದ್ಯೋತವೀಥೀಪ್ರಯುತಸಿಯತಸಿಂಹಾಸನಾರೂಢತಾನಿ
ಶ್ಚಿಂತಂ ಶೃಂಗಾರಕಾಂತಂ ಜನವಿನುತ ರತೀನಾಥನಾನಂದಯೂಥಂ ೪೯

(ಗಿರಿಜಾಕಲ್ಯಾಣಂ, ೭-೧೧)

ಅಲರಂಬ್ಬಿಡೊಂದೆಬಿಲ್ಲಿಂದಿವಱಿಂದಾಳೆ ನೆಗೞ್ದೀ ದ್ವೀಪವೇಟಿಂ ತ್ರಿಲೋಕಂ
ಗಳನೆಂತಾಂ ಗೆಲ್ವೆನೆಂದಂಜುವೆನೆಲೆಯೆನಗಿಂದೀಕೆಯಕ್ಷಿದ್ವಯಾಸ್ತ್ರಂ
ಗಳನೇಱುಂತೀಕೆಯುದ್ಯದ್ಭ್ರುಕುಟಿಧನುಗಳಿಂತೀತ್ರಿಚಾಪಂ ಕಣಾ ಕೋ
ಮಳೆಯಿಂದಂದಾರ್ದು ಕಾಮಂ ರತಿಯುವತಿಯ ಕೈವೊಯ್ದು ಮಾತಾಡುತಿರ್ದಂ ೫೦

ಸಲೆ ಸೌಗಂಧಮನೀಂಟಿ ಗಟ್ಟಿಸವಿಯಂ ಸಾಲಿಟ್ಟು ತೆಂಗಾಳಿಯಂ
ಮಿಲಿದಾಕಾಶಮನಪ್ಪಿ ವಾರಿವಿಪಿಯಂ ತಳ್ತೋದಿ ವಿದ್ಯುಲ್ಲತಾ
ವಳಿಯಂ ಬಂಧಿಸಿ ಜೊನ್ನಮಂ ಪಿಡಿಯಲಕ್ಕುಂ ನಿನ್ನಕಟ್ಟಾಳ್ಗಳಿಂ
ಬ ಲತಾಂಗಿಪ್ರಜದಿಟ್ಟಿಯಿಂ ಗೆಲುವನಾರ್ಪೈ ಧಾತ್ರಿಯೊಳ್ ಮನ್ಮಥಾ ೫೧

ಕಲಿಯಾವಂ ಬಲವಂತನಾವನಧಿಕಸ್ವಾತಂತ್ರನಾವಂ ಸಮು
ಜ್ವಲನಾವಂ ಮುನಿಯಾವನೂರ್ಜಿತಕಳಾಸಂಪನ್ನನಾವಂ ಮಹಾ
ಚಲಿಯಾವಂ ಗುಣಿಯಾವನಿಂದ್ರಿಯಜಯಪ್ರಾಗಲ್ಭ್ಯನಾವಂ ಭವ
ದ್ವಿಲಸನ್ಮೋಹನಬಾಣಮಾಡುವ ಸಮೀಪಾಸ್ಥಾನದೊಳ್ ೫೨

ನನೆವಿಲ್ಲಿಂ ತಿರುವೊಪ್ಪು ಭೃಂಗಕುಳಮೌರ್ವೀನಾದಮಂ ಗೆಯ್ದು ಚಂ
ದ್ರನ ಮುಂದಿಟ್ಟರಲಂಬ ಜೂಣೆಯುದಳಂ ಮೆಯ್ದೋಱಲುಂ ಕೂಡಿ ಗ
ರ್ಜನಮಂ ಮಾರಿಸೆ ಕೋಕಿಲಂ ಜಡಿಯೆ ಜೊಬ್ಬಿಟ್ಟಂಗಜಂ ನಿಂದು ಪೂ
ಗಣೆಯಿಂದಂ ತೆಗೆದೆಚ್ಚನಕ್ಕಟ ವಿಯೋಗಂಚಿತ್ತ ನಿಸ್ತ್ರಾಣರಂ ೫೩

ಪುರುಷರ್ ಸ್ತ್ರೀಯರ್ಗಾ ಸ್ತ್ರೀ
ಯರ್ ಪುರುಷರ್ಗಂತು ಸೋಲ್ವುದುಚಿತಮಲ್ತೇ
ಧರೆಯೊಳು ಬಿಡದೆ ವರಸ್ತ್ರೀ
ಯರು ಮದನೆಗೆ ಸೋಲ್ವರೆಂಬುದಿದು ಚಿತ್ರತರಂ ೫೪

## ವಿರಹ

ಪೋದವರಾರುಮೇಂ ಮಗುೞ್ದು ಬಾರರೆ ಪೋದಪೆನೆಂದೊಡೇಕೆಯಿಂ
ತಾದಪೆಯೆಂದೊಡಂತುಗುವ ಕಣ್ಬನಿಯುಂ ನೆಗೆವುತ್ತರಂಗಳಂ
ಕಾದು ಪೊದಟ್ಟು ನಾಣ್ಚೆರಸು ಮೆಲ್ಲನೆ ನೋಡಿ ವಿಯೋಗದುಃಖದಿಂ
ಕಾದಲಕಂದು ನಕ್ಕಳದು ಮುಂದಣ ಸಾವಿನೊಳಾದನಿಶ್ಚಯಂ ೫೫
(ಸೂಕ್ತಿಸುಧಾರ್ಣವಂ, ೧೫–೨೨)

ಮಿಡುಕೞಿಽ ಪೊಯ್ದು ತನ್ನೆರ್ದೆಯನೊತ್ತಿ ಕರಾಗ್ರದೊಳಾದೊಳಪ್ಪಡಂ
ನುಡಿಯದೆ ಚಿಂತಿಸುತ್ತಮಿಸಿಯಿಕ್ಕುವುದಂ ಮಱಽದೊಂದು ಜಾವಮುಂ
ಮಿಡುಕದೆ ಸಾಲಭಂಜಿಕೆಪೊಲಿರ್ದ ಲತಾಂಗಿಯ ರೂಪು ಕಣ್ಗೆ ಕೊಳ್
ತೊಡರ್ದಿರೆ ಪೋಗುಗೆಟ್ಟಿನಿಸುಬೇಗಮನಲ್ಲಿಯೆ ನಿಂದು ನೋಡಿದಂ ೫೬
(ಸೂಕ್ತಿಸುಧಾರ್ಣವಂ, ೧೫-೨೩)

ಸುರಚಾಪಂ ಕುಡಿವುರ್ಬು ಕುಂತಳಕುಲಂ ಧಾರಾಧರಂ ರೋದನ
ಸ್ವರಮುಂ ಘೋಷರನಿಸ್ವನಂ ಪೊಳೆವಪಾಂಗಂ ನೀಳ್ದ ವಿದ್ಯುತ್ತು ಘೋ
ರತರಿಯೋರಂತುಗುವಶ್ರು ವೃಷ್ಟಿ ದಿಟದಿಂ ತಾನಾಗೆ ಕಾರ್ಗಾಲಮುಂ
ಸಿರುತಂ ಪೋಲ್ತುಸು ನಲ್ಲಳಾಸ್ಯನಿನಿಯಂ ಪೋದಪ್ಪೆನೆಂದಿರ್ಪುದುಮುಂ ೫೭

(ಸೂಕ್ತಿಸುಧಾರ್ಣವಂ, ೧೫-೨೫)

ಪೋದಪು ಕೂಡೆ ಕಂಪ್ಪು ಬಳಿ ಕಣ್ಣನಿ ವಂಗಡವಾಗೆ ಜೆಚ್ಚರಂ
ಪೋದುದು ಚಿತ್ತಮಂಗನೆಯ ಸ್ವೈರಣೆ ಸಂಗಡವಾಗೆ ಕಾದಲಂ
ಪೋದಪೆನೆಂದು ಪೋಗುತಿರೆ ತಕ್ಕುದದಾತ್ಮಸಖಂ ಸ್ವಕೀಯ ಕಾ
ರ್ಯೋದಯದಿಂದೆ ಪೋಗಲಿರೆ ಮುಂದೆ ಸುಹೃತ್ತತಿ ಪೋಗದಿರ್ಕುಮೇ ೫೮

(ಸೂಕ್ತಿಸುಧಾರ್ಣವಂ, ೧೫-೨೬)

ಚಲದಲಕಾಳಿಯೊಡ್ಡಿದ ಮುಗಿಲ್ ಕುಡಿವುರ್ಬಮುರೇಂದ್ರಚಾಪಮು
ಚ್ಚಳಿದಪನಾಂಶು ಮಿಂಚು ಸುರಿತ ಬಾಷ್ಪಜಲಂ ಮೊಱಗಟ್ಟಿಯಾಗೆ ಕೋ
ಮಳೆ ಮಱಗಾಲದಂತೆಱಗಿ ಕಜ್ಜಲ ಕರ್ದಮಮಂಘ್ರಿಮೂಲದೊಳ್
ಪೊಳೆವಿನಮೊರ್ವಳಾಚರಿಸಿದಳೋಪನೆ ಕೋಪಸಿದಾಘತಾಪಮಂ ೫೯

(ಸೂಕ್ತಿಸುಧಾರ್ಣವಂ, ೧೫-೨೭)

ಬಿಸಿಯುಸಗಲ್ದು ಪೋಗುತಿರೆ ನಿಂದೆಮೆಯಿಕ್ಕದೆ ನೋಡುತಿರ್ದ ಕಾ
ಮಿನಿಯುಸು ಪೋದುದಾತನೊಡನಾತನುಮಾಗಳೆ ಪೋಗಿ ಬಂದು ಮೆ
ಲ್ಲನೆ ತಿಗೆವಪ್ಪಿಕೊಂಡು ಬಿಸುಸುಯ್ವುಡೆ ಸುಯ್ಯಲರಾತ್ರಿದಿಲ್ಲ ತ
ತ್ತನುಗೆ ಬಱಿಕ್ಕದಂತು ಬಿದಿ ನಲ್ಲರನೊಯ್ದ ಸಪೇಕೆ ನಿರ್ದಯಂ ೬೦

(ಸೂಕ್ತಿಸುಧಾರ್ಣವಂ, ೧೫-೨೮)

ತೊಡಿಗೆಗಳೆಲ್ಲಮಂ ತೊಡುವಳೊಲ್ಲದೆ ಮೇಣ್ ಕಳೆದಿಕ್ಕಿ ಪಾಸಿನೊಳ್
ಪಡುವಳ ಪೇನನಕ್ಕೆ ಮಱದಂತಿರಿಗೆಯ್ದ ಜಾದಂತೆಪೋಲ್ ಜಿರಲ್
ಪಿಡಿವಳೊಡರ್ಚಿ ಸುಯ್ಯುಗಿವಳಾಗುಳಿಪಳ್ ದನಿಯೆತ್ತಿ ಪಾಡುವಳ್
ನಡೆದು ತೊಡಂಕುವಳ್ ನುಡಿದು ತಪ್ಪುವಳುಣ್ಮೆ ವಿಯೋಗವೇಗೆಯಿಂ ೬೧

(ಸೂಕ್ತಿಸುಧಾರ್ಣವಂ, ೧೫-೨೯)

ಅದನೇವೇಳ್ವುದೊ ಮನ್ಮಥಾಗ್ನಿಪರಿತಾಪೋದ್ರೇಕಮಂ ಕನ್ನೆ ಕ
ಟ್ಟಿದ ಮುಕ್ತಾವಳಿ ನೀಲಕಂಠಿಕೆವೊಲಿಂಬಾಗಿರ್ದುದಾಪ್ಯಾಯನ
ಪ್ರದಮಪ್ಪಣ್ಪಿನ ಚಂದನಂ ಮೃಗಮದಶ್ರೀವೊಲ್ ತಗುಳ್ದಿರ್ದುದು
ಟ್ಟ ದುಕೂಲಂ ಕರಿವಾಟಿಯಂತೆಸೆದುಕೊಂಡಿರ್ದತ್ತು ಮೆಯ್ವೆಂಕೆಯಿಂ ೬೨

(ಸೂಕ್ತಿಸುಧಾರ್ಣವಂ, ೧೫-೩೨)

ಪಡೆದನುತಾಪದಿಂ ತನು ಬೆಳರ್ತುದು ನಾಣಭರಂ ತೆರಳ್ಚಿ ಪೊ
ಣ್ಮಿದ ಘನಘರ್ಮವಾರಿ ತೊಱೆಯಾದುದು ಚಿತ್ರದ ಕೂಟದಿಂದೆ ಬ
ತ್ತಿದುದು ಬೆಡಂಗುವೆತ್ತ ಬೆಳರ್ವಾಯ್ದಿರೆ ಕನ್ನೆಯ ಸಲ್ಮೆ ಮಾಗಿಯಾ
ದುದು ಮಱಗಾಲಮಾದುದುಱೆ ಬೇಸಿಗೆಯಾದುದನಂಗಸೃಷ್ಟಿಯಿಂ ೬೩

(ಸೂಕ್ತಿಸುಧಾರ್ಣವಂ, ೧೫-೩೪)

ಉರದೊಳ್ ಪೊತ್ತಿದೆವೊತ್ತಿ ಪೊತ್ತಿ ತಳಿರ್ವಾಸಂತಂತೆ ಮೆಯ್ಸೋಂಕಿನಿಂ
ಕರಿವೋಯತ್ತಲರ್ವಾಸು ಕಾಯ್ದು ಕುಡಿವೋಲ್ ಕಾದತ್ತದೇಸೆಂಬೆನ
ಚ್ಚರಿ ನೀರ್ವಾಸು ಮೃಣಾಳನಾಳ ಕದಳೀಕಾಂಡಾದಿಗಳ್ ತಪ್ಪನಾಂ
ತರದೊಳ್ ತೀರ್ದುವು ತೀರದೆನ್ನದೆಸೆಯಿಂ ಸಂತಾಪಮಾ ಕಾಂತೆಯಾ ೬೪

(ಸೂಕ್ತಿಸುಧಾರ್ಣವಂ, ೧೫-೩೭)

ಪೆಱಸಾರ್ವಳ್ ಬಿಸುಸುಯ್ದು ಪೋಗುಳಿಸುವಳ್ ಸಂಸಾರಮಂ ಬೈದು ಬೇ
ಸಱುವಳ್ ಮೂರ್ಛೆಗೆಸಲ್ವಳುಮ್ಮಳಿಸಿ ಕೋಪಂ ತಿರ್ಪುಗುಂದಿರ್ದ ಬಾ
ಯ್ದೆಱೆಯಂ ನಾಲಿಗೆಯಿಂದೆ ನಾಂದುವಳವಳ್ಗೀ ತಾಪಮೀಯಂದಮಿಂ
ದಱಿಂದಿಂ ಸಂತವಿಸಲ್ ಜನಾರ್ದನವಿಯೋಗಾಕ್ರಾಂತೆಯಂ ಕಾಂತೆಯಂ ೬೫

(ಸೂಕ್ತಿಸುಧಾರ್ಣವಂ, ೧೫-೪೨)

ನಾಡೆ ಬಱಿಲ್ದುಱಿಲ್ದು ನಿಲಲಾಱದೆ ಸೆಜ್ಜೆಗೆವಂದು ಮೆಯ್ಯನೀ
ಡಾಡಿ ನಿಜೋತ್ತರೀಯ ವಸನಾಂಚಲದಿಂ ಮುಸುಕಿಟ್ಟು ಚಿಂತೆಯೊಳ್
ಮೂಡಿ ಮುಱುಂಗಿ ತನ್ನ ಮನದನ್ನನೊಳಂ ತನ್ನ ಮಾ
ತಾಡದೆ ಜಾನಿಸುತ್ತಮಿರೆ ಪಿಂಗಿದುದಂದಿನದೊಂದಹರ್ನಿಶಂ ೬೬

(ಕಾದಂಬರಿ, ಉ.ಭಾ ೩೬೬; ಸೂಕ್ತಿಸುಧಾರ್ಣವಂ, ೧೫-೪೬)

ಮೃಗಶಾಬಾಕ್ಷಿಗೆ ಮಾಧವಂ ಮಧುಕರಂ ಮಂದಾನಿಲಂ ಮಾಪ್ರ ಮ
ಲ್ಲಿಗೆ ಮಾದ್ಯತ್ಪಿಕನಿಸ್ವನಂ ಮನಸಿಜಂ ಮುಗ್ಧೇಂದುವೆಂಬೆಲ್ಲಮುಂ
ಬ್ಬೆಗಮಂ ಮಾಡಿದುವೊಂದೆ ಪೇಟೆನೆಡೆ ಪೇಟ್ ಮೇಣ್ ಮೂಜಿತ ನೋಡೊಂದು ಹು
ಲ್ಲೆಗೆ ನೂರ್ವರ್ ನೆರೆದಂಬುತೊಟ್ಟೆ ತೆಜಿನಾಯ್ತಾನಿನ್ನದೇನೆಂದಪೆಂ ೬೭

(ಸೂಕ್ತಿಸುಧಾರ್ಣವಂ, ೧೫-೫೩)

ಸರಸಿಜನಾಭನಿಂದುಱಿದ ವೇದನೆಯಿಂದಮಶೋಕಪಲ್ಲವಾ
ಧರೆ ನವಜೂತಪಲ್ಲವಕರಾಂಬುಜೆ ಕುಂತಲತಾಂತದಂತೆ ವಿ
ಸ್ಫುರಿತ ತಮಾಲನೀಲಕಬರೀಭರೆ ಪಾಟಲಗಂಧಿ ಕೇತಕೀ
ಕರರುಹೆ ಚೇಷ್ಟೆಗೆಟ್ಟು ಮರನಟ್ಟೆಳೆನಿಪ್ಪುದದಾವವಿಸ್ಮಯಂ ೬೮

(ಸೂಕ್ತಿಸುಧಾರ್ಣವಂ, ೧೫-೬೪)

ಸುದತೀ ಮತ್ಪತಿ ಕಣ್ಣೊಳಿಂ ಮನದೊಳಿಂ ತಾನಿರ್ಪನಿರ್ದುಂ ಮುಟಿಂ
ಗಿದನಲ್ಲಶ್ರುಜಲಂಗಳೊಳ್ ಪುದಿದ ಹೃತ್ಕಾಮಾಗ್ನಿಯಿಂ ಬೆಂದನಿ
ಲ್ಲಮ ಚಿತ್ರಂ ಬಗೆವಾಗಳೆಂದಿನವನೋ ಮಾಯಾವಿಯೋಯೆಂದುಪ್ರ
ಷ್ಟೈನನೆಂದೋದಿವನೆಂದು ಕಲ್ತನೋ ಜಲಾಗ್ನಿಸ್ತಂಭಮಂತ್ರಗಳಂ ೬೯

(ಸೂಕ್ತಿಸುಧಾರ್ಣವಂ, ೧೫-೬೭)

ಅನಿಮಿಷನಪ್ಪೆಂ ಕಂಡೊಡೆ
ನೆನೆದಂದಸ್ವಪ್ನನಪ್ಪೆಂನೊಡನಿರೆ ಕಮಳಾ
ನನೆ ಸುಮನನಪ್ಪೆನದಱಿಂ
ದೆನಗಾದುದು ನಿನ್ನ ದೂಸಱಿಂ ದೇವತ್ವಂ ೭೦

(ಸೂಕ್ತಿಸುಧಾರ್ಣವಂ, ೧೫-೬೮)

ಹೃದಯದೊಳಿರ್ದ ವಲ್ಲಭನನಾಕ್ಷತಭೀತಿಯನೀಕ್ಷಿಸಂತೆ ಮು
ಚ್ಚಿದಳಿಲಿರ್ಗಂಗಳೊತ್ತಡವಿನೋಡುವವ್ರೋಲ್ಕುಚಮಧ್ಯದಲ್ಲಿಗಾ
ಮದು ಕರಪಲ್ಲವಂ ಸರಸನಾಗಿಸುವಂತೆ ಮೊಗಂ ಮಲಂಗೆಯುಂ
ತದೊಳಿರ್ಪ ಶೂನ್ಯಮಾಗಜಸುಪಂತಸು ಪ್ರೊಯ್ದುಸಿತಾಬ್ಜನೇತ್ರೆಯಾ ೭೧

ಅನಲಸಹಾಯನಪ್ಪ ಮಮದಿಜ್ಜುಖದಿಂ ಪರಿತರ್ಪ ತೆಂಬೆಲರ್
ಮನಸಿಜವಹ್ನಿಯಂ ಬಿಡದೆ ಪೆರ್ಚಿಪ್ಪುದುಂಕೆ ಡುನೋವನೀವುದುಂ
ವನರುಹನಕ್ತ್ರೆ ವಿಸ್ಮಯಮೆ ತಾಪಹರಂ ಜನಸೌಖ್ಯಕಾರಿ ಸಂ
ವನನೆನಗುಂಗತಾಪಮುಮನೋವದೆ ನೋವುನೀವುದೊಂದದ್ಭುತಂ ೭೨

(ಜಗನ್ನಾಥವಿಜಯಂ, ೧೧-೯೨: ಸೂಕ್ತಿಸುಧಾರ್ಣವಂ. ೧೫-೬೩)

ಇನಿಯನ ಕಾಣದಾ ತರುಣಿ ಸೈರಿಸಲಾಱದೆ ಕಾಮತಾಪವಂ
ಘನತರಶೈತ್ಯಮೆಂದು ಕೊಳನೊಳ್ ಪುಗಲಾ ಕೊಳನುರ್ಕಿ ಬೇಯೆ ಕೀ
ರನು ಜಲವೀಂಟೆ ವಿದ್ರುಮವನೊಂದ ಕರ್ದುಂಕತೆ ಭೂಜವೇಱಲಾ
ವನತರು ಜೆಂಪು ನಿಂದುರಿಯುತಿರ್ದುದು ನೋೞ್ಪೊಡಮೇಂ ವಿಚಿತ್ರಮೋ ೭೩

ಅಂಗಜತಾಪದಿಂ ಕೊರಗಿದಬ್ಜಮುಖಂ ಪರೆದಿರ್ದ ನುಣ್ಗುರುಳ್
ತುಂಗಕುಚಂಗಳೊಳ್ ತಗುಳಿಕೊಂಡ ಲಸನ್ಮಲಯೋದ್ಭವಂ ಬೆಳ
ರ್ತಂಗಮುರಾಂತರದೊಳ್ ತೊಳಪ ಕರ್ಪುರದಣ್ಣೆಯರೇಣು ರಂಜಿಸಿ
ಪ್ಪಂಗನೆ ಕಾಮದೇವನೆಡೆಯಾಡುವ ಪುತ್ರಿಕೆಯಂತಿರೊಪ್ಪಿದಳ್ ೭೪

ಮಲ್ಲಿಗೆಯಲ್ಲಿ ತುಂಬಿ ಮೊಱೆವುತ್ತಿದೆ ತಂಪಿನೊಳೊಂದಿ ತೆಂಕಣಿಂ
ಮೆಲ್ಲನೆ ಗಾಳಿ ತೀಡುತಿದೆ ಕೋಗಿಲೆಗಳ್ ಪೊಸಮಾಮರಂಗಳೊಳ್
ಬಲ್ಲುಲಿಯಿಂದೆ ಬಗ್ಗಿಸುತಲಿಂತಿವೆ ಬಂದುದು ಸುಗ್ಗಿ ತಳ್ವದಂ
ನಲ್ಲನೆನುತ್ತಲೊರ್ವ ಕಿಱುಪೆಣ್ ಸುರಿದಳ್ ಮಿಗೆ ಕಣ್ಣನೀರ್ಗಳಂ ೭೫

ಎಲೆ ತಂಗಾಳಿಯೆ ನೀನೇ
ಕಲೆದಪೆ ಮಱಿದುಂಬಿಯೇಕೆ ಪಲ್ಮೊಱೆದಪೆ ಕೋ
ಗಿಲೆಯೇಕೆ ಕಿನಿಸಿದಪೆ ಕಾ
ದಲನಿಲ್ಲದ ಪೆಱಗೆ ನೋಯಿಪರೆ ನೀವೆನಗಂ ೭೬

ತರದಿಂದುಣ್ಮುವ ಕಣ್ಣನೀರ್ವನಿಗಳಂ ಕೈಕೊಂಡು ಮೇಣ್ ಮುತ್ತಿಸೊ
ಚ್ಚರಮಂ ಪೆರ್ಮೊಲೆ ಜುನ್ನವಾಡೆ ಸೆಳೆಮಾವಂ ನೆಮ್ಮಿ ಪೂಗೊಂಚಲೊಳ್
ಪೊರೆದಳ್ಳಾಡುವ ತುಂಬಿವಾಡ ನಲವಿಂ ಕೇಳ್ದಂದದೊಳ್ ನಿಂದು ಪಾ
ದರಿಯಳ್ [ಕಾದಲ] ಪೋದುದಕ್ಕೆ ಬಗೆಗೆಟ್ಟಿರ್ದಾಕೆ ಕಂಗೊಪ್ಪಿದಳ್ ೭೭

ಎಳೆಮಾವೇ ತಳಿರುಯ್ಯಲೇ ಕೊಳೆತಗುಳ್ದಿಂದೋಳಮೇ ಕೋಗಿಲೇ
ಗಿಳಿಯೇ ತುಂಬಿಯ ಬೆಂಬಲೇ ಪುಳಿನಮೇ ಬೆಳ್ದಿಂಗಳೇ ಚಂದ್ರನೇ
ಕೊಳನೇ ನಂದನಮೇ ಲತಾಭವನಮೇ ಸುಗ್ಗಿಂ ಕರಂ ಬರ್ದಿಡೆಂ
ಗಳ ನೀಮೆಲ್ಲರುಮೆನ್ನ ಬರ್ದುಗೆಯನಾ ನಲ್ಲಂಗೆ ಪೇೞಿಂ ಗಡಿಂ ೭೮

(ಕಾವ್ಯಾವಲೋಕನಂ, ೧೨೯)

ಮದನನ ಕೆಯ್ದುವೆಲ್ಲಿದನನಂಗನ ಕೆಯ್ಪಿಡಿಯೆಲ್ಲಿದಂ ವಿಲಾ
ಸದ ಕಣಿಯೆಲ್ಲಿದಂ ಚದುರಿನೊಳ್ಪೊಗನೆಲ್ಲಿದನೆಲ್ಲಿದಂ ವಿನೋ
ದದ ಪೊದಲೆಲ್ಲಿದಂ ಸೊಬಗಿನಾಗರನೆಲ್ಲಿದನಿಚ್ಚೆಯಾಣ್ಮನೆ
ಲ್ಲಿದನೆರ್ದೆಯಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ ೭೯

(ಆದಿಪುರಾಣಂ, ೩-೧೫; ಕಾವ್ಯಾವಲೋಕನಂ, ೧೨೩)

ವಿರಹದೊಳೇಕೆಗಕ್ಕೆ ಬಿಸಜಂ ವಿಷಜಂ ಹಿಮರೋಚಿ ಸೂಚಿ ಪಾ
ದರಿ ದರಿ ಮಾವು ಪಾವು ಕುಮುದಂ ಕುಮುದಂ ತನಿಗರ್ಬು ಮರ್ಬು ಕ
ಸ್ತುರಿಯುರಿ ಗಾಳಿ ದಾಳಿ ಕುಸುಮಂ ವಿಷಮಂ ಪೊಸಬಾಳೆ ಬಾಳೆ ವನೋ
ತ್ಕರಿಪುರಿ ಹಂಸೆ ಹಿಂಸೆ ವೊಳಲ್ವಾಳಿಡಿಯಾಳಿಡಿ ತಿಂಗಳಿಂಗಳಂ ೮೦

(ಗಿರಿಜಾಕಲ್ಯಾಣಂ ೪-೧೪೧)

ತಾಳ್ದೀ ವಿರಹದೊಳೇಕೆಗೆ
ಬೆಳ್ದಿಂಗಳು ಬಿಳಿಯ ಕಿಚ್ಚು ಸಸಿ ಬಸಿ ಕಾವಂ
ತೂಳ್ದುವ ದಾವಂ ಚೈತ್ರಂ
ಸೀಳ್ದಿಕ್ಕುವ ಕುಂಭಿ ಕದಳಿಕ ದಳೀಘಾತಂ ೮೧

(ಗಿರಿಜಾಕಲ್ಯಾಣಂ, ೪-೧೧೭)

ಅತಿವಿರಹದೊಳೀ ಲಲನೆಗೆ
ಮತಿ ದುರ್ಮತಿ ವೀಣೆ ಸಾಣೆ ಸೋಮಂ ಭೀಮಂ
ಲತೆಯುಸಿಲತೆ ಸಂಪಗೆ ಪಗೆ
ನುತ ಕೀರಂ ಘೋರಮನ್ಯಪುಷ್ಟಂ ಕಷ್ಟಂ ೮೨

(ಗಿರಿಜಾಕಲ್ಯಾಣಂ, ೪-೧೪೨)

ಒತ್ತುವ ಪದ್ಮಪತ್ರ ಕದಳೀಸಂಕುಳಮೆಯ್ದೆ ಬೆಂದು ಸೀ
ಪ್ಪತ್ತಿವೆ ದೂರದಿಂದೆ ಸಖಿಯರ್ ತವೆ ಚೆಲ್ಲುವ ಶೀತವಾರಿಯು
ಕ್ಕುತ್ತಿವೆ ಬೀಸುತಿರ್ಪ ಕುಸುಮಾವಳಿವೀಜನದ್ವಂದವೋವೋ ಹೊ
ತ್ತುತ್ತಿವೆ ತನ್ವಿಯೋ ವಿರಹವಹ್ನಿಗೆ ಪುಟ್ಟಿದುದೊಂದು ಮೂರ್ತಿಯೋ ೮೩

ಕುಸುಮಂ ತುಂಬಿಗಳೆಂಬದೊಂದು ಭಯದಿಂದಂ ತಿದ್ದಲಮ್ಮಳ್ ನಿಜ
ಸ್ವಸನಂ ಕೋಕಿಲನಾದಮೆಂದುಮುನಿತುಂ ಮಾತಾಡಲಮ್ಮಳ್ ಮುಖಂ
ಪರಿಪೂರ್ಣೇಂದುವಿನಂದಮೆಂದು ಮುಕುರಕ್ಕಾಲೋಕನಕ್ಕಂಜುವಳ್
ವಿರಹಭ್ರಾಂತಿಯಿ ತನ್ನ ಮೆಯ್ಯ್ ತನಗೆ ನಂಜಾಗಿರ್ದುದಾಕಾಂತೆಯ ೮೪

ಸಕಳಂಕಂ ಶಶಿ ಕಾಮನೀಶನುರಿಗಣ್ಣಿಂ ಬೆಂದನಂ ವಾಯು ಸ
ರ್ಪಕದಂಬಾಶನಶೇಷಮುಂಗಜನ ಮಿತ್ರಂ ರಾಗಿ ಮತ್ತಾಳಿಗಳ್
ವಿಕಳಂಗಳ್ ಪಿಕನನ್ಯಪುಷ್ಟನಿವರ್ಱೊಳ್ ಸೌಜನ್ಯಮಂ ಮಾಪ್ಪಿದ
ಕ್ಕೆ ಕರಂ ಕಷ್ಟಮೆನುತ್ತೆ ಕಾಂತೆ ನುಡಿದಳ್ ಸಾಲಿಟ್ಟ ಸಂತಾಪದಿಂ ೮೫
(ಗಿರಿಜಾಕಲ್ಯಾಣಂ, ೪-೧೪೭)

ಕನಸಿನೊಳೊಮ್ಮೆ ಭಾವರತಿಯೊಳ್ ಮಱೆದೊಮ್ಮೆ ನಿರಾಸೆಯೆಂಬ ಕಂ
ಬನಿಗಳೊಳೊಮ್ಮೆ ಮುನ್ನಿನ ವಚೋಮಧುರೋಕ್ತಿಯಲೊಮ್ಮೆ ತತ್ಸಖೀ
ಜನಗಳೊಳೊಮ್ಮೆ ಪೇಟ್ಟಿ ಗುಣಮಂ ನೆನೆದೆಯ್ದೆ ಲತಾಂಗಿ ತನ್ನಿಜೇ
ಪನಕತ್ರದಿಂದಲೆಯ್ದೆ ಜಱಿವಳ್ ನವಶಾಳಿಯ ರಾಶಿಯಂದದಿಂ ೮೬

ಮುಡಿಯಂ ಕಟ್ಟಳು ಮುದ್ದುಗೆಯ್ಯ ಮೊಗಮಂ ನಿರ್ದೋಷಳಿಂಬಿಂ ಕಳ
ಲ್ದುಡೆಯಂ ಸಾರ್ಚಳು ಕಣ್ಗೆ ಕಪ್ಪಿಡಳು ನುಣ್ಕೈಯರ್ಚಳೊಯೆಂದು ತಾಂ
ನುಡಿಯಳ್ ಪ್ರೊಂದೊಡವಂ ತೊಡಳ್ ಪಸಿವುದೋಱಳ್ ಕಾಮನಂಬಿಂಗೆ ಸಂ
ದಡಿಯಾದಳ್ ಲಲಿತಾಂಗಿಯೆಂದು ಸಖಿಯರ್ ಕಣ್ಣೀರ್ಗಳಂ ತುಂಬಿದರ್ ೮೭

ಬೀಸಿದರಾಲವಟ್ಟದೆಲರಿಂ ನವಕುಂಕುಮಗಂಧಸಾರಮಂ
ಪೂಸಿದರಬ್ಜಪುತ್ರಕುಲಮಂ ಘನಸಾರದಲೂಡಿ ಬೆನ್ನಿಗಂ
ಪಾಸಿದರಿಂದುಕಾಂತಜಲಮಂ ನೆಱೆ ಸೂಸಿದರೆಯ್ದೆ ಕಂಗಳೊಳ್
ಭಾಸುರ ನಸ್ಯಪುಷ್ಟರಸಬಿಂದುಗಳಂ ತಳಿದರ್ ಲತಾಂಗಿಯರ್ ೮೮

ಅಲರಿದ ವಕ್ತ್ರಕಂಜ ನೆಱೆ ಸೀದುದು ಕುಂತಳ ಭೃಂಗರಾಜಿಗಳ್
ಬಳಲಿದುವೆಯ್ದೆ ವೃತ್ತಕುಚಚಕ್ರಯುಗಂಗೆಳೆಕಲ್ದ ತೋಳ್ಗಳಿಂ
ಬೆಳಲತೆ ಬಾಡಿತೆಪ್ಪನಮರಾಳ ಕಲಂಕಿತಮತ್ಸವಂ ತ್ರಣಾವ
ಳಿ ಲಯಮಾಯ್ತು ಕಾಂತೆಯ ವಿಯೋಗದ ಕಾಲಮೆ ಮಾಗಿಯೆಂಬಿನಂ ೮೯

ಗರ್ವದ ಪರ್ವತಂ ಜಱಿಯೆ ನಿಟ್ಟುಸಿರೆಂಬ ಮೃಗಂಗಳೋಡಲುಂ
ಪುರ್ವಿನ ಪುಲ್ಲುಗಳ್ ಸಿಮಿಯೆ ವೃತ್ತಕುಚಂಗಳ ಗುಂಡು ಜಾಱಲಾ
ಕೊರ್ವಿದ ಜುವ್ವನಾಪಸಿಜಮಂ ಕಳೆಯಲ್ ನವರಕ್ತಚಂದನಂ
ಪರ್ವಿದ ಕೆಂಡವಾಗೆ ಸಖೀಸ್ಪಂದದಿ ಚಂಪ್ರದವಾಗ್ನಿ ತೀಡುಗುಂ ೯೦

ಅಂಬುಜವಕ್ತ್ರೆ ನಿನ್ನ ಮೊಗಮಂ ಕವಿವೀ ಕುರುಳೋಳಿ ದೂಸರ
ತ್ವಂಬಡೆದೀ ಕುಚಂ ಕೊಱಗಿದೀ ಕಮಳಾನನವಿರ್ಪುಗುಂದಿದೀ
ಬಿಂಬಫಲಾಧರಂ ಸ್ಖಲಿತಮಂ ತಳೆದೀ ನುಡಿ ಬಾಡಿದೀ ಲತಾಂ
ಗಂ ಬಿಸುಪೇಱುವೀ ಶ್ವಸಿತಮಿಂತಿವು ಪೇಳ್ವವೆ ನಿನ್ನ ಚಿಂತೆಯಂ ೯೧

ಬಗೆಯೊಳ್ ಬೆಚ್ಚವೊಲಾಗೆ ಮಾತು ಕಿವಿಗೆಯ್ದಲ್ಲಿಂಬೊಣಕ್ಕೋರ್ವನು
ತ್ಸುಗಳಂ ಕಾಱುವ ಮಾಟಕ್ಕಿಯಂತನಳ ನೇತ್ರದ್ವಂದ್ವದಿಂ ಬಾಷ್ಪಬಿಂ
ದುಗಳಂ ಸೂಸೆ ಲತಾಂಗಿ ಭಂಗಿವಡೆದಿರ್ದಳ್ ಬೇಟಮೆಂಬೊಂದು ಬ
ಳ್ಳಿಗೆ ಪೊಯ್ನೀರೆಱೆವಂದದಿಂ ನುಡಿವಳಿಲ್ಲೇನೆಂದುಮಾ ಕಾಂತೆಯೊಳ್ ೯೨

ನೆನೆಯಿಸಿ ಕಾಡುಗುಂ ಸತತಮಾತನುದಗ್ರಲಲಾಟಪಟ್ಟಮಾ
ತನ ಮಱಸಕ್ಷಮಾತನ ತನೂದರಮಾತನ ಜೆಲ್ಲಿಗಂಗಳಾ
ತನ ಬಗೆಗೊಳ್ವ ಪೆರ್ದೊಡೆಗಳಾತನ ನಿಂದಕಟೀತಟಂಗಳಾ
ತನ ಸಿಡುಮೋಳ್ಗಳಾತನ ಅಳಿಕಾಳಿಗಳಾತನ ನೀಳ್ದ ಪುರ್ಬುಗಳ್ ೯೩

ಕೆಳದಿ ತರವೇಟ್ಟಪೆನಗಂ
ನಳಿನಾಕ್ಷನನಲ್ಲದಂದು ಪೋದಪುದಸುವೀ
ಗಳೆ ಮದನನಿಸುವ ಪೊಸಕೆಂ
ದಳಿರ್ಗಳ ಮಂಜರಿಯ ಕಿಱುಯ ನೆನೆಯಂಬುಗಳಿಂ ೯೪

ಅಳುರ್ವ ತುಷಾರವರ್ಷದೊದವಿಂದಮಿಂದಿಸಿ ಕಂದಿ ಕುಂದಿ ಪಾಂ
ಗೞಿದವೊಲಾವಗಂ ಕಱೆವ ಕಾಮಶರಾವಳಿಗಳ್ಕಿ ಬಳ್ಕಿ ಕೋ
ಮಳೆ ನಡೆತಂದು ಪೊಕ್ಕು ಬನಮಂ ಸಖಿಯರ್ ತಳಿವಾಲಿನೀರ್ಗಳಿಂ
ಕುಳಿರ್ವಲವಾಸಿನೊಳ್ ಪೊರಳುತಿರ್ದಳಗುರ್ವಿನ ಬೇಟದೇೞ್ಗೆಯಿಂ ೯೫

ಲಲನೆ ಹಿಮೋಲ್ಲಸದ್ಭವನದೊಳ್ ವನದೊಳ್ ವನದೊಳ್ ಪೊರಳ್ದು ನಿ
ಶ್ಚಲುಮಿಸೆ ಕಂತು ನಿಪ್ಪಸರದಿಂ ಸರದಿಂ ಸರದಿಂಪುದೋಱೆ ಕೋ
ಗಿಲೆ ವಿಧು ಬೀಱೆ ಭೀತಿ ಕರಮುಂ ಕರಮುಂ ಕರಮುಂ ಕಪೋಲದೊಳ್
ನಿಲಿಸುವಳೆಯ್ದೆ ನೋವಳಧಿಸಾಂಗದ ಪಾಂಗದ ಪಾಂಗದಗ್ಗಳಂ ೯೬
(ಜಗನ್ನಾಥವಿಜಯಂ, ೧೧-೧೯; ಸೂಕ್ತಿಸುಧಾರ್ಣವಂ, ೧೫-೬೬)

ಪಾಸುವ ಪಲ್ಲವಾಸ್ತರಣಮೊಟ್ಟುವ ಬಾಲಮೃಣಾಳಸಂಕುಳಂ
ಸೂಸುವ ಚಂದ್ರಕಾಂತಜಲಮೊತ್ತುವ ಶೀತಳಿಕಾಕದಂಬಕಂ
ಬೀಸುವ ಪುಷ್ಪವೀಜನಮಚುರ್ವ ಕರ್ಪುರವಚ್ಚಪೂಗಳಿಂ
ಪೂಸುವ ಚಂದನಂ ಬಿಸುಪನಾಱಿಸಲಾಱವು ಕೋಮಲಾಂಗಿಯಾ ೯೭

ಮೇಳಿಸಿ ಪೊರ್ದಿದಾಳಿಯರ ಮೆಯ್ ಬಿಸುಸೇಱೆ ಬೆಮರ್ತುದಂಗದೊಳ್
ಜಾಲಮೃಣಾಳಿಕಾಸಮಿತಿ ಜುಯ್ಯೆನುತಂ ನೊರೆಯಿಟ್ಟುದಶ್ರುಧಾ
ರಾಳಿ ಕದಂಪಿನೊಳ್ ಕುಡಿದು ಬತ್ತಿದುದೊಯ್ಯನೆ ಬೀಸುತಿರ್ದ ಪೊಂ
ಜಾಱೆಯ ಚಾಮರಂಗಳೞೆ ಕೀಮುವು ತನ್ನಿಯ ದೇಹದಾಹದಿಂ ೯೮

ತೊಲಗಿಸಿ ಭೂಷಣಪ್ರತತಿಯಂ ಸುತಿಯಂ ಪತಿಯಂಗಶೋಭೆಯೊಳ್
ನಿಲಿಸಿ ಮನೋಭವಾಗ್ನಿಸುಘವಿಂ ವಿಭವಿಂ ವಧುವಿಂಗೆ ಪೆರ್ಜೆ ತ
ಣ್ಣೆಲರ ಕೊಳಕ್ಕೆ ವಂದ ಕಳಿಸಂ ಪುಳಿಸಂ ನಳಿನಂ ನಿಜಾರ್ತಿಯಂ
ಪೆಳಿವಡೆಯಲ್ ಬಱಿಕ್ಕನಳಬಿಲ್ಲು ಬಬಿಲ್ದು ಕಬಿಲ್ದು ಜಾನಿಪಳ್ ೯೯

ಸೋಂಕಿದ ಗಾಳಿ ದಳ್ಳುರಿಯೊಲಾದುದು ಪೊಕ್ಕ ಸರೋವರಾಂಬು ಕಾ
ಯ್ದುಕ್ಕಿದುದಿರ್ದ ನಂದನವನಂ ಕಱಿಕೆದ್ದುದು ನೋಡಿ ಸುಯ್ಯ ಸು
ಯ್ಯೆಂಕೆಯಿನೆಯ್ದೆ ಚಂದ್ರಿಕೆ ಬಿಸಿಲ್ಗೆಣೆಯಾದುದು ಕಾಮತಾಪದಿಂ
ಪಂಕಜಹಾಕ್ಷಿ ಕಾಮಶಿಖಿ ಪೆಣ್ಣುರಿಜಂ ತಳೆದಂತೆ ತೋಱಿದಳ್ ೧೦೦

ಅವಯವದ ಸಾರಸರ್ವ
ಸ್ವವನಾಹುತಿಗೆಯ್ದುಳಂಗಜಾಗ್ನಿಯೊಳುಱಿದಂ
ತವಳೊಳಸುಪೊಂದೆ ಸಲೆಮಾ
ಡುವುದದನಾ ಕಾಮಶಿಖಿಗೆ ಸರ್ವಾಹುತಿಯಂ ೧೦೧

ಯುವತಿಯ ಬಾಡಿದಂಗಲತೆ ಬತ್ತಿದ ಬಾಯ್ ಕೊರಗಿರ್ದ ವಕ್ತ್ರಮಂ
ಜಿನಿಸಿದಕ್ಕ ಕೋಮಳತೆಯಿಂದರುಣಚ್ಛವಿಯಿಂ ಸುಕಾಂತಿಯಿಂ
ನವಲತೆಗಂ ಪ್ರವಾಳಮಣಿಗಂ ಹಿಮರೋಚಿಗಮಾಯ್ತು ಪೋಲಲೊಂ
ದವಸರದಿಂತದಕ್ಕೆ ಮಿಗೆ ಬೇಟಮೆ ಜಿಂಬಲವಾದುದೆಂಬಿನಂ ೧೦೨

ಕಳಸುವನಾಸ್ತ್ರಪುಂಜದಪೊಲಪ್ಪಲರ್ವಜ್ಜಮುಮಂಗಸಂಭವಾ
ನಳನಪೊಳಿಪ್ಪ ಕೆಂದಳಿರ ಪಾಸಿಕೆಯುಂ ವಿಷನಾಮಮುಳ್ಳ ಶೀ
ತಳಜಲಮುಂ ವಿಷಾಹಿಕುಳವೊಂದಿದ ಚಂದನದಣ್ಪುಮಕ್ಕೆ ಕೇ
ವಲಮೆನಗಾಘಚಾರಮುಪಚಾರವಿದೇಂ ಶಿಶಿರೋಪಚಾರಮೋ ೧೦೩

ತನುತಾಪಂ ಚೈತ್ರನಿಂ ಚಂದ್ರನಿನತಿಶಯಮಾಗಿರ್ದುದಾ ಚೈತ್ರನಿಂ ಚಂ
ದ್ರನನಿಸಕ್ಕುತ್ತಮಿಂ ನಂದನದಿನೊಗೆದುದಾ ಚೈತ್ರನಿಂ ಚಂದ್ರನಿಂ ನಂ
ದನದಿಂ ತಳ್ಪೊಯ್ವ ತೆಂಗಾಳಿಯಿನೊದವಿದುದಾ ಚೈತ್ರನಿಂ ಚಂದ್ರನಿಂ ನಂ
ದನದಿಂ ತೆಂಗಾಳಿಯಿಂ ಪೆರ್ಚಿದುದಿವಳಾ ತಾಪಮಂ ಪೇಱ್ವೆನೇನಂ ೧೦೪

ಕೆಂದಳಿರ್ವಾಸಿನೊಳ್ ಕಡುಬೆಳರ್ತುದು ಕರಂ ಬಡವಾದ ತನ್ವಿ ತ
ನ್ನೊಂದಿರವೆಂದೆ ಸಂಜೆಮುಗಿಲೊಳ್ ನಸುದೋರ್ಪ ಕಳಾವಶೇಷನು
ಣ್ಬಿಂದುವರ್ಪಿದುದೆಂತೆನೆ ಪೊಳ್ದಿದೆಯುಂ ನಡುನಂಗಜಾಸ್ತ್ರದಿಂ
ನೊಂದು ಕನಲ್ದಿಬಿಲ್ದ ಸಖಿಯುಂ ನೃಪ ಕಂಡೆರ್ದೆಯಾಱಿ ನೋಡಿದಂ ೧೦೫

ಒಡವೋದರ್ ಬಂದರೆಂಬೀ ನುಡಿಯನೆ ಪೆಱರಿಂ ಕೇಳ್ದು ಕೇಳ್ದಂತೆ ಸಾಸಿ
ರ್ಮಡಿ ರಾಗಂ ತನ್ನೊಳಾಗಲ್ ಪುದಿದಿರೆ ನಿಜಚಿತ್ತೇಶ್ವರಂ ಬಾರನೆಂಬೀ
ಪಡಿಮಾತಂ ಕೇಳ್ದು ಝಲ್ಲೆಂದೆರ್ದೆವಡಿಪೆಱದಂತಾಗೆ ಬೆಂಬಿೞ್ದವಳ್ ಸೂ
ರ್ಮಡಿ ಮುನ್ನಂ ಕುಂದಿದಳ್ ತತ್ಕ್ಷಣದೊಳೆ ಮದನಾಗ್ನಿಪ್ರಸಂತಾಪದಿಂದಂ ೧೧೩

ಎಳೆಮಿಂಚಿಲ್ಲಕ್ಕೆ ನಾಖಂಡಲಲಲಿತ ಧನುರ್ದಂಡಮಿಲ್ಲಕ್ಕೆ ಮಭ್ರಾ
ವಳಿಯಿಲ್ಲಕ್ಕುಂ ಕದಂಬಾನಿಲನೆಸಗುವುದಿಲ್ಲಕ್ಕೆ ಮುದ್ಯನ್ಮಯೂರೀ
ಕುಳಲೀಲಾತಾಂಡವಾಡಂಬರವಿಲಸನಮಿಲ್ಲಕ್ಕೆ ಮಂತಾ ಮಹೀಮಂ
ಡಲದತ್ತಲ್ಲಿಲ್ಲನಂತಲ್ಲದೊಡೆ ತಡೆದದೇಕಿರ್ಪನಿಂದಲ್ತೆ ಬರ್ಪಂ ೧೧೪

ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾ
ವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಮಂತೆ ನೀನುಮಾ
ಮ್ಮನೆ ನಡೆನೋಡುತಂ ಸಭೆಯೊಳಿರ್ದಪೆಯಪ್ಪುದಱಿಂದೆ ನಿನ್ನನಾ
ನನುಮಿಪೆನೆನ್ನ ಮೆಯ್ ಬಡವೋ ನಲ್ಲನ ಮೆಯ್ ಬಡವೋ ನಿಶಾಕರಾ ೧೧೫

(ಆದಿಪುರಾಣಂ, ೧೨-೪೨)

ಪತಿಚಿಂತಾಸಕ್ತೆ ನಿದ್ರಾವಿರಹಿತೆಯಿರುಳೆಯ್ತೆ ಪುರ್ದುಂ ಸುಪ್ತಸಾರಾ
ವತಮುಂ ಬಂದೆತ್ತುವಳ್ ಹಂಸೆಗಳೆಸೆಯೆಱಿಸೊಂದಾಗಲೀಯಳ್ ನವಿಲ್ ಬಾ
ಣತಿಯುಂ ಕಣ್ಮುಚ್ಚಲೀಯಳ್ ಗಱಿಪುವ ಗಿಳಿಯುಂ ತೂಕಡಂಗಾಣಲೀಯಳ್
ಕತೆಯುಂ ಪೇೞಿಂದವಳ್ ಸಾರಿಕೆಯುಮನಿನಿಸುಂಗೆಯ್ದು ಕಣ್ಮುಚ್ಚಲೀಯಳ್ ೧೧೬

ನಡನಡಪಿಂತು ತನ್ನನೆನೆ ಮೆಯ್ ಬಡವಾದುದು ಲೋಚನಾಂಶುಗಳ್
ಬಿಡೆ ತೊಡರ್ದಂತೆ ಗಂಡಯುಗಳಂ ಬಿಳಿದಾದುದು ತೋಳ್ಗಳೊಳ್ ಸರಂ
ಬಿಡಿದವೊಲೆಯ್ದೆ ಸುಯ್ ಸರಳವಾದುದು ಭಾವರಸಪ್ರವಾಹದೊಳ್
ಗಡಣಿಸಿದಂತೆ ಬಾಷ್ಪಜಲಸಂತತಿ ಕಾಳ್ಪುರಮಾದುದಾಕೆಯಾ ೧೧೭

ಸುದತಿ ಲತಾಂಗನೇಕೆ ಬಡವಾದಪುದೆಂದೆನೆ ಮಿಕ್ಕಮಿಕ್ಕ ಭಾ
ವದೊಳಣುಭೇದಮಿಲ್ಲೆನಿಸಿ ಮತ್ಪತಿಯಿರ್ದೊಡೆ ದೊಡ್ಡಿತಾಗಿ ತೋ
ಱಿದುದೆನಗೀಗಲರ್ಧಪೊಡವೋದುದು ವಲ್ಲಭನಲ್ಲಿಗರ್ಧಮಿ
ರ್ದುದು ತನುವೊಂದ ನಿಟ್ಟಿಸಿದೊಡೇಂ ಬಡವಾಗದೆದೊಡ್ಡಿತಕ್ಕುಮೇಂ ೧೧೮

ಗಿಳಿಗಿನ್ನುಂ ಕುಟುಕಿಕ್ಕೆನೆಂಬಳಿಲೆ ನೀನಾರೋಗಿಸೆಂದೆಂದು ಕೋ
ಕಿಳನಿನ್ನುಂ ತಳಿರ್ಗಚ್ಚಪೆಂಬಳಿಲೆಯುಂ ಪೆಲ್ಲೆಂಡೋಡೇಟ್ಮಜ್ಜನಂ
ಗೊಳಲೆಂದಂದೆಲರಿಂಪೆ ಪೆಯ್ ಸಡುಗಿತೆಂಬಳ್ ಚಂದನೋದ್ವರ್ತನಮೀ
ಗಳಿಪೇಕಿಲ್ಲೆನೆ ಪಾಪ್ರ ಕಾವುದನೆ ಕೇಳ್ದಂಜಿರ್ಪೆನೆಂಬಳ್ ಸಖೀ ೧೧೯

(ಲೀಲಾವತಿ, ೭-೮೪)

ಅಲರ್ಗಣ್ಣಿಂ ಪೂವಿನಂಬಂ ಸಸೆದನೊ ಮದನಂ ಕೊಂಡು ಪೋಣ್ ಪ್ರಾಣಮುಂ ಕೋ
ಕಿಲನೆಲ್ಲಿಂ ಕೂಡಿಕೊಂಡುಂ ಗಳರವರವಮುಂ ವಕ್ತ್ರಶೀತಾಂಶುನಂ ಪೆಣ್
ಗೊಲೆಗೆಂದುಂ ಚಂದ್ರಮುಂ ಕೊಂದನೊ ಖಳನುಬಿಡಂತೇಕೆ ಪೆಣ್ ನೋಡಳೇಕಿಂ
ತೆಲೆಗೇ ಮಾತಾಡಳೇಕೆಪ್ಪೊಳ್ಳು ಸಖಿ ಮುಖದಿಂ ಹಾಸಮುಂ ಸೂಸಳೆಪ್ಪೊಳ್ ೧೨೦

ನೂತ್ನವಿಹಂಗಸಂಕುಳಸಮುತ್ಥಿತನಾದಮನೆಯ್ದೆ ಕೇಳ್ದು ಕಾ
ಮಾತುರೆ ನಲ್ಲನಾಪೆಡೆಯೊಳಿರ್ಪೆಡೆಗೆಯ್ದಿರಪೆಯ್ದೆ ಬಂದು ಸಂ
ಕೇತನಮಾಧವೀ ಸದನದೊಳ್ ನಿಜಕಾಂತನ ರೂಪುಗಾಣದು
ತ್ಪಾತವಿಷಾದೆ ಬೆಚ್ಚನುಸುರೊತ್ತಿದಳೊಯ್ಯನೆ ಕಣ್ಣನೀರ್ಗಳಂ ೧೨೧

ಎಲರಿಂಪೆಟ್ಟಿತ್ತು ಲೀಲಾವತಿ ನಿಜಪತಿಯುಂ ಮಂಚದೊಳ್ ಕಾಣದಾಗಳ್
ಚಲಿಪಾದಳ್ ಚಂಡಿಯಾದಳ್ ಮಱತಪಳೊಱಗಿದಳ್ ಕಂದಿದಳ್ ಕುಂದಿದಳ್ ಕೋ
ಟಲೆಗೊಂಡಳ್ ಸಾವುಗಂಡಳ್ ಕಳವಳಿಸಿದಳಾಸತ್ರಳಿಟ್ಟಳ್ ಬೆಮರ್ತಳ್
ನೆಲೆಯಿಂದಂ ಬೀಟ್ಟಿಳೇಟ್ಟಿಳ್ ವಿರಹದುರಿಯೊಳಾ ಕಾಂತೆ ವಿಭ್ರಾಂತೆಯಾದಳ್ ೧೨೨

(ಲೀಲಾವತಿ, ೧೦-೬೬)

ಅಳುರ್ವರಳಂಬುಗಿಚ್ಚು ನಿಜಕೋಮಲದೇಹಮನೆಯ್ದೆ ಪರ್ವೆ ತ
ಣ್ಣೊಳದ ಮೃಣಾಳಮಂ ತೆಗೆದು ಬೇಗದಿನಿತ್ತವೊಲಾಗೆ ನೊಂದುಬಂ
ಪೀಡಳಿರ್ವಾಲಿನೀರ್ ಕುದಿಯೆ ಚಂದನದಣ್ಪೆಯೆ ಬೆಂಕೆಯಾಗುತಾ
ಕುಳಿರ್ವಲರ್ವಾಸಿನೊಳ್ ಪೊರಳುತಿರ್ದಳಗುರ್ವಿನ ಬೇಟದೇಟಿಗಂ ೧೨೩

ಮೂರಿಸಿ ಸುಯ್ದು ಕೈತಳಮುಮಂ ಕದಪಿಂಗಿರದೊಯ್ದು ಧಾತ್ರನಂ
ಸ್ಸೈರಪೆ ಬಯ್ದು ಕಣ್ಪನಿಯನಂಶುಕದಿಂ ನೆಱೆ ತೊಯ್ದು ತಾಯದಂ
ಸ್ಸೈರಸಳೆಂದು ಕಾಯ್ದು ನನೆಗೊಂಡಿರೆ ಪೂಗಣೆಗೈದುಮೊರ್ವಳಿಂ
ತಾರಿದನಿಂಬುಕೆಯ್ದು ಕೊಡವಂದದೆ ನುತ್ತ್ರಸಮುಂ ಪಲುಂಬಿದಳ್ ೧೨೪

ಸುರಿದಬಲೆ ಕಣ್ಣನೀರ್ಗಳ
ಸರಿಯಂ ಸ್ತನಮಂಡಲಂಗಳೊಳ್ ವಿರಹಮಹಾ
ಜ್ವರಜನಿತಪುಳಕರತ್ಯಾಂ
ಕುರಂಗಳಂ ಬಳೆಯಿಪಳ್ ನಭೋಲಕ್ಷ್ಮಿಯವೋಲ್ ೧೨೫

ಪುರುಳಂ ಮರುಳಂ ಮಾಳ್ಪಿಂ
ಶರನಿಧಿಯಂ ಜಿಂಜಿಮಾಡುವಂ ಕೇಸರಿಯಂ
ನರಿಮಾಣ್ಪನಣಕಮಲ್ಲಿದು
ವರಸಲ್ಲನೆ ಕಾಮಿಜನಕೆ ಕುಸುಮಪತಾಕಂ ೧೨೬

(ಲೀಲಾವತಿ, ೪–೨೭)

ಅತನು ಗಡಾ ಭಟಂಗೆ ನಸೆವಿಲ್ಲಡ ಪೂವೆ ಸರಲ್ಗಡಂ ಹಿಮ
ದ್ಯುತಿ ಗಡ ಬಂದ ಮಾವು ಗಡ ತೆಂಬೆಲರುಂ ಗಡ ತುಂಬಿಗಳ್ಗಡಂ
ಲತೆ ಗಡ ಸೈನಿಕಂ ಗಡಮನಂಗೆಯಕ್ಕೆಟವ ಸೋಲ್ತು ತಾಂ ಗಡು
ದ್ಧತರುಮನಿಕ್ಕುವಂ ಗಡ ನೃಪಂ ಗಡ ಪೇೞಿದು ತಕ್ಕುದೇಂ ೧೨೭

ಹರನುರುಪಿದೊಡುರಿಪಮನೆ
ಲ್ಲರ ಮ್ಯೆಗಂ ಪಚ್ಚುಗೊಡುವವೋಲ್ ಪುಗುತಿರ್ಪಾ
ಸ್ಮರನಂ ಪುಗಲಿತ್ತಡೆ ಮನ
ವುರಿವುದುಮಂಗಂಗಳುರಿವುದೇಂ ವಿಸ್ಮಯಮೋಂ ೧೨೮

ಅಸಿಯಳೆ ಸಣ್ಣನಪ್ಪ ನಡುವಪ್ಪುವಿನಂ ಮಿಗೆ ಸಣ್ಣನಾಗೆ ಬೆ
ಳ್ಪಿಸೆಯೆ ಮುಖೇಂದುಮಂಡಲಕೆ ಮೆಯ್ಮಿೞುಗುತ್ತಿರೆ ಚಿತ್ರದಗ್ನಿ ಧ
ಳ್ಳಿಸೆ ಬಲಿದಂತೆ ಕರ್ಕಶಕುಚಂ ಬಡವಾಗದೆ ತಾನೆ ತೋಱಿನೆ
ತ್ತಸದಳಮಾಯ್ತು ಚೆಲ್ವು ಕಮಲಾಸ್ಯೆಗೆ ಕಾಮುಕಲಾವತಾರಮೊಳ್ ೧೨೯

(ಲೀಲಾವತಿ, ೯–೧೨೪)

ಪೊಸತಳಿರಿಂದೆ ಬೀಸೆ ಕಳೆದಂತಿರೆ ಕಾಂತೆಯ ಕಾಯಕಾಂತಿಯುಂ
ಬಿಸುಡೆ ಪಸುರ್ಪು ಸೂಸಿ ಮಳಯೋದ್ಭವಮುಂ ಸಲೆ ಪ್ರಾವಿನೊಳ್ ಪೊರ
ಳ್ದಸದಳಮಾಗೆ ಮಾಡಿದವೊಲುಜ್ವಳಮಪ್ಪೆಳೆವೆಳ್ಪು ಪೊರ್ದೆ ಮೆಯ್
ಮಸೆದಸಮಾಸ್ತ್ರನೊಪ್ಪುವಸಿಯುಂತಸಿಯಾದುದನಂಗತಾಪದಿಂ ೧೩೦

(ಲೀಲಾವತಿ, ೯–೧೨೫)

ಕದಪಿನೊಳಿಟ್ಟ ಕೆಯ್ಯ ಪೊಸಪಚ್ಚೆಯನಂಗನ ಪೊಯ್ದ ಬಾಸುಟಿಂ
ದದಿನಿರೆ ಪೂವಿನೊಳ್ ಪೊರಳೆ ಪತ್ತಿದ ಪೂಗಳೆ ಕೊಂಡ ಕಾಮಬಾ
ಣದ ಡೊರೆಯಾಗೆ ಮೆಯ್ಯ ಮಲಯೋದ್ಭವದಣ್ಪುಗಳೇಱಿ ಬಾಯೊಳ್
ಕ್ಕಿದ ಕವಳಂಬೊಲಾಗೆ ಲಲಿತಾಂಗಿ ಬೞಲ್ದಳನಂಗತಾಪದಿಂ ೧೩೧

(ಲೀಲಾವತಿ, ೯-೧೨೬)

ಹಾರಮೆ ಭೂಷಣಂ ಮಳಯಜಾತಮೆ ಮೆಯ್ಗೆ ಸೆವಣ್ಪು ಸಾರಕ
ರ್ಪೂರಮೆ ತಂಬುಲಂ ತಳಿರ ಜೊಂಪಮೆ ಬಾೞ್ವನೆ ಕಲ್ಪನಾಮೃತಾ
ಹಾರಮೆ ಜೀವನಂ ಸಲಿಲಕೇಳಿಯೆ ಕೇಳಿ ನವಪ್ರವಾಳ ಸಂ
ಸ್ತಾರಮೆ ಸೆಜ್ಜೆಯಾಯ್ತು ತರಳಾಕ್ಷಿಗೆ ತದ್ವಿರಹಾತಿರೇಕದೊಳ್ ೧೩೨

(ಲೀಲಾವತಿ, ೯-೧೨೭)

ಬಿಸುಸುಯಿರ್ ಮೆಯ್ವರ್ಚೆ ಕಂದಿರ್ದಧರಮಣಿ ಲಸತ್ಪಲ್ಲವಂ ಕಾಯ್ತು ಕಣ್ಣೀ
ರೆಸಱಿಕೂೞ್ ತುಳ್ಕಾಡೆಯುಂ ಬಾಡಿದ ನಯನಯುಗೇಂದೀವರಂ ಚಿತ್ತಜಾಗ್ನಿ
ಪ್ರಸರಂ ತಳ್ತೞ್ಕಿಯುಂ ಸೀಯದ ಗುರುಕುಚಕೋಕದ್ವಯಂ ಶೋಭಿಕುಂ ಸೂ
ಚಿಸುವಂತಾ ಕಾಮಿನೀದುರ್ಧರವಿರಹತಪಃಪ್ರೌಢಸಾಮರ್ಥ್ಯದುರ್ಬಂ ೧೩೩

(ಲೀಲಾವತಿ, ೯-೧೨೯)

ಮೊಲೆಗಳೊಳಿಕ್ಕಲಬ್ಜದ ವಿಶಾಲದಳಂಗಳನಾಳ್ದು ನೀಳ್ದ ಕ
ಣ್ಮಲರ್ಗಳೊಳೊತ್ತಲುತ್ಪಲದ ನಿಟ್ಟೆಸಳಿಂ ಕುಚಕುಂಭಮಧ್ಯದೊಳ್
ಸಲಲಿದ ಶಂಕೆಯಿಂದಸಿಯ ಬಾಲಮೃಣಾಳಮನಾವದೀರ್ಘಿಕಾ
ಜಲದೊಳಮೆಯ್ದೆ ಪೊಕ್ಕಱಸಿ ಕಾಣದೆ ಕಾಯ್ದುದು ತತ್ಸಖೀ ಕುಲಂ ೧೩೪

(ಲೀಲಾವತಿ, ೯-೧೩೦)

ನೀರೊಡುವಂತೆ ಮದನನ
ಕೂರಸಿಯುಂ ಚುಮ್ಮಿಸುತ್ತೆ ಪೊಗೆ ಪಾಯ್ವಿನೆಗಂ
ನೀರೇಜವನದೊಳಿರ್ದುವ
ರೋಲಂತಿರೆ ವಿರಹದಹನದಗ್ಧೆಯನವಳಂ ೧೩೫

(ಲೀಲಾವತಿ, ೯-೧೩೧)

ಪವನಂ ಸವನಂ ಕೃತಕುಂ
ಜವನಂ ಜವನಂತೆ ವನಿತೆಗಾಯ್ತು ಕೊಲಲ್ ಬ
ರ್ಪವನಂ ಪವನಂ ಪೋಲ್ತುದು
ದವನಂ ದವನಂತೆ ವಿಷಮುನಾಯ್ತನವರತಂ ೧೩೬

(ಲೀಲಾವತಿ, ೯–೧೩೨)

ಕುಸುಮಾಸ್ತ್ರೋದಯದಿಂ ಬೆಳರ್ತನಿಯುಸಂಗಚ್ಛಾಯೆ ತಳ್ತಂತೆ ಮೆಯ್
ಬಿಸುಪಿಂ ಬೆಂದು ಕರಂಗಿವಂತಿರೆರ್ದೆಯುಂ ನಟ್ಟುರ್ಚೆ ರಕ್ತಾಂಬುವಂ
ಬಸಿವಂತುಬ್ಬಸವಾದ ಕಣ್ಬೊಣರ ಬೆಳ್ಪುಂ ಕರ್ಪುವೊಳ್ಗೆಂಪುಮೇಂ
ಪೊಸತಾಗಿರ್ದುವೊ ನೋೞ್ಪ ಕಾಯ್ಪುಡುಗದಿರ್ದಂಭೋಜಪತ್ರಾಕ್ಷಿಯಾ ೧೩೭

(ಲೀಲಾವತಿ, ೧೦–೪೫)

ಪೊಸಮುತ್ತಂ ತೊಟ್ಟವೋಲ್ ಪೊಣ್ಮುವ ಬೆಮರ್ವನಿಯಿಂ ತಳ್ತ ರೋಮಾಂಚಮುರ್ವಿಂ
ದಸಮಸ್ನೇಹಾಕುಳಾಲೋಕದಿನಲಸಲೆಸಲ್ ಸಂದ ನಿಶ್ವಾಸದಿಂ ಕಂ
ಪಿಸುತಂ ಕಣ್ಗೊಪ್ಪಿದಳ್ ಕುಟ್ಮಳಕುಳಕಳಿಕಾಪುಷ್ಪಚಾರಂ ಕರಂ ಶೋ
ಭಿಸುವನ್ನಂ ತಂಬೆಲರ್ ತೂಗುವ ಪೊಸಲತೆವೋಲ್ ಕಾಂತೆ ಕಣ್ಸೋಲದಿಂದಂ ೧೩೮

(ಲೀಲಾವತಿ, ೧೦–೪೭)

ಬಗೆವೊಡೆ ಗಂಡರಂ ಹರೆಯುವಾಳ್ವುದು ಪೇೞಿತೊಡೆ ಪೆಣ್ಣಜನ್ಮಮಂ
ಮುಗಿಲದನಂತೆ ನಚ್ಚಿ ಪತಿಗಿಲ್ಲದ ತೋಟಿಯನಿಟ್ಟು ತೋಟಿಯಿಂ
ತೆಗೆವ ಜೆಲಕ್ಕೆ ಮೆಯ್ದೆಗೆವ ಮೀಱುವ ಕಣ್ದೆಗೆವಾರ್ದು ಕಂತು ಬಿ
ಲ್ದೆಗೆಯೆ ಬಱಿಕ್ಕೆ ಕೈದೆಗೆವ ಗಾವಿಲರೇವುದೋ ಜೇಟವಚ್ಚಿಗಂ ೧೩೯

ಮಲ್ಲಿಗೆಯಲ್ಲಿ ಸ್ಪೂತಲತೆಯಲ್ಲಿ ಮುಗಿಲ್ಗಡಲಲ್ಲಿ ಮಾಲತೀ
ವಲ್ಲರಿಯಲ್ಲಿ ಸೋಗೆನವಿಲಲ್ಲಿ ಸುಗಂಧಸಮೀರನಲ್ಲಿ ಮಾ
ವಲ್ಲಿ ಮದಾಳಿಯಲ್ಲಿ ಗಿಳಿಯಲ್ಲಿ ಪಿಕಾವಳಿಯಲ್ಲಿ ವಲ್ಲಿಕಾ
ರಲ್ಲಿ ಬಸಂತವಲ್ಲಿಯೆನೆ ಕೊಲ್ಲದೆ ಕಾಮಿನಿಯುಸಾ ವನಂ ವನಂ ೧೪೦

(ಲೀಲಾವತಿ, ೧೧–೨

ವಿರಹದೊಳಾದ ವೇದನೆಯನಾರಿಸಲಾ ಮರನೊಳ್ಕಿತೆಂದು ಮಾ
ಮರದ ನೆೞಲ್ಗೆ ಪೋದೆ ಗಡ ಕಾಮನ ಡಾವರವಲ್ಲಿ ಕೋಕಿಳೋ
ತ್ಕರರವಮಲ್ಲಿ ಚಪ್ಪರಿಪ ರಾಜಶುಕವ್ರಜಮಲ್ಲಿ ಕಾಯ್ದು ಪ
ಲ್ಮೊರೆವ ಮದಾಳಿಯಲ್ಲಿ ಸತಿ ಸಾರದಿರಾ ಮರನಂ ಬಸಂತದೊಳ್ ೧೪೧

ಸನೆ ಮಸಿವಣ್ಣವಾದುವು ಮುಗುಳ್ ಮಿಗೆ ಸೀದುವು ಬಂಡು ಸೋರ್ವ ಪೂ
ವಿನ ಪೊಸಗೊಂಚಲುಂ ಕೊರಗಿಪೋದುವು ಕೋರಕಪಲ್ಲವಂಗಳುಂ
ಪೊಸೆಪೊಗೆಯುತ್ತಮಿರ್ದಪುವು ಬೀಸುವೆಲರ್ ಬಿಸುಸುಯ್ಯೆ ನೆತ್ತಿಸೋಂ
ಕಿನೊಳಕುರ್ದಪ್ಪುದೀ ಬನದೊಳಿರ್ದಪರಕ್ಕುಮನಂಗತಾಪದರ್ ೧೪೨

(ಲೀಲಾವತಿ, ೧೧-೬)

ಎಳೆದಳಿರೆಂಬ ಕೊಂಬಿನೊಳಿ ಪಾಯ್ದೆಳಸೇಸರ ಕಾಂತಿಗಳ್ಗೆ ಪೂ
ಗೊಳದೊಳಗೊಬ್ಬಳೆಂದಡರೆ ಮಾಪ್ರೇಳಿವಾತ್ಮಮುಖಾಂಬುಜಕ್ಕೆ ಕೋ
ಮಳ ಬಿಸಕಾಂಡಮೆಂದೆಸೆವ ತಮ್ಮಯ ತೋಳ ನೆಟಿಲ್ಗೆ ಕ್ಷೈಯುಸೊ
ಯ್ದೆಳಸಿ ಒಟಿಲ್ದರಾರ್ತವಿತತಾನಳಿದಗ್ಧೆಯರಲ್ಲಿ ಮುಗ್ಧೆಯರ್ ೧೪೩

ಒದವಿ ಘನಾಗಮಂ ಪಿಡಿದ ಕೌಮುದಿಯಂತೆ ಬಿಸಿಲ್ಗೆ ಮೆಯ್ಯನೊ
ಡ್ಡಿದ ಲತೆಯಂತೆ ಜೇಸಗೆಗೆ ಸಿಲ್ಕಿದ ನಿಮ್ನಗೆಯಂತೆ ಮಾಗೆ ಮು
ಟ್ಟಿದ ದಿನಲಕ್ಷ್ಮಿಯಂತೆ ಮಿಗೆ ಮುಂಜಿಜುಂಪಬ್ಬಿನಿಯಂತೆ ಕನ್ನೆಪೇ
ಟದ ಪೊಡೆಗಿಚ್ಚಿನೊಳ್ ಪೊರಳುತಿರ್ದು ಕರಂ ಕೊರಗಿರ್ದ ಕಾಂತೆಯುಂ ೧೪೪

(ಲೀಲಾವತಿ, ೧೨-೩೫)

ಸುದತಿಯ ಸುಯ್ಯಲಿಂ ಬನಮೆ ಬೆಂದುದೊ ಜೇಯುಪೊಡೇಕೆ ಕೆಚ್ಚನಾ
ದುದೊ ತನಿವಣ್ಣಳಿಂ ಸವಿದ ಕೀರನ ಚಂಚುವದೇಕೆ ಮೂಗುವ
ಟ್ಟಿದೊ ಮಧು ಪೋಪುದಂ ತಳಿರುಗರ್ಚದೆ ಕೋಗಿಲೆಯೇಕೆ ಪಾಜುಪೋ
ದುದೊ ಶಶಿರಾಂಬುಜಾಕರಕೆ ತುಂಬಿ ತುಡುಂಕಿ ನವಪ್ರಸೂನಮಂ ೧೪೫

ಮಗಮಗಮಿಸುತ್ತೆ ಪೊತ್ತಿ ಪೊಗೆ[1]ವಂಗದ ಚಂದನದಣ್ಪು[1] ಧೂಪಮಂ
ತೆಗಳಿಸೆ ತಾಪದಿಂದುರಿವ ಕಪ್ಪುರದೊಪ್ಪುವ ದೀಪದಂಡಮಂ
ಪೊಗಬಿಸೆ ರಾಸಿಗೆಯ್ದು ನನೆ ಕೇ[2]ಸಡಿಗಿಂದೆ[2]ಣೆಯಾದ ಕೆಂದಳಿರ್
ಸೊಗಯಿಸೆ ಮೋಹದೇವತೆಗೆ ತನ್ನನೆ ತಾಂ ಬಲಿಗೊಟ್ಟಳೆಂಬಿನಂ ೧೪೬

(ಲೀಲಾವತಿ, ೧೧-೪೨)

ಸರಸಮೆನಿಪ್ಪ ಮಾನಸದೊಳಲ್ಲಿದೆ ಪುಟ್ಟಿದು ದರ್ಶನಾಮೃತ
ಸ್ಮರಣಸರಿತ್ಪ್ರವಾಹದೊಳೆ ಪೊತ್ತುಪುದಂತೆ ಹಿಮಾಂಸುಬಿಂಬದಿಂ
ಮುರಿವುದು ತಣ್ಪುಗೆಯ್ಯೆ ತನಿಪೆರ್ಚುವುದಾಳಿಯುರಂತರಂಗಮಂ
ಕೊರಗಿ ಕನಲ್ವುದೀ ವಿರಹವಹ್ನಿಯಿದೇಂ ವಿಪರೀತವೃತ್ತಿಯೋ ೧೪೭

(ಲೀಲಾವತಿ, ೧೧-೪೯)

---

[1] ಚಂದನಬಣ್ಪುದುಕೂಲ(ಸ) [2] ರನಿನ್ನೆ(ಸ)

ಹರನೇತ್ರಜ್ವಾಲೆಯಿಂ ಬೇವತನುವನುಮೆ ಕಾಣುತ್ತೆ ತನ್ಮೌಳಿಯೊಳ್ ಸಂ
ದರಲೇಖಾಮಾತ್ರಮಿರ್ಪಂತಮೃತಕಿರಣನಂ ಕೊಂಡು ಪೂರ್ವಪ್ರಭಾವಂ
ಜರಿ ಮೆಯ್ಯೊಳ್ ಪತ್ತುವನ್ನಂ ಪಿಡಿದು ತಳಿದು ಮತ್ತೆತ್ತಿದಂತಿರ್ದ ಶೋಭಾ
ಕರರೂಪಾಕಾರನಂ ತತ್ತರುಣಿ ಕನಸಿನೊಳ್ ಕಂಡು ಸೋಲ್ತಳ್ ಮೃಗಾಕ್ಷೀ ೧೪೯

ಘನಶಿಶಿರೋಪಚಾರವಿಷದಿಂ ಹೃದಯಸ್ಥಿತನಾದ ದೇವ ನಿ
ನ್ನನೆ ಕುಮುದಾಬ್ಜಚಂದನದಳಂಗಳಿನರ್ಚಿಸಿ ನಿನ್ನ ರೂಪ ಭಾ
ವನೆಯೊಳೆ ಕೂಡಿ ನಿನ್ನತುಳನಾಮಜಪಕ್ರಿಯೆಯಲ್ಲಿ ನೈಷ್ಠೆ ಬ
ಟ್ಟನತಿಶಯಾಂಗಿ ಸಾಧಿಸಿದಪಳ್ ನಿಜದೇಹವಿದಾಹಮುಕ್ತಿಯಂ ೧೫೦

ಕಾಮಿಸಿ ಪಂಚಬಾಣಕವಿ ನಿಮ್ಮೊಳೆ ತಾಂ ಮುನಿದಿರ್ಪನೆಂದೆನಲ್
ಕೋಮಲೆ ದಂದಶೂಕವಧುವಾದಳಮರ್ತ್ಯವಧೂಟಿಯಾದಳು
ದ್ದಾಮ ಪುಳಿಂದಿಯಾದಳಂಜಿ ಕಿನ್ನರಿಯಾದಳಡರ್ತು ಯೋಗಿಣಿ
ನಾಮೆಯುಮಾದಳೊಲ್ದು ಕಮಲಾಲಯೆಯಾದಳಿದೇಂ ವಿಚಿತ್ರಮೊ ೧೫೧

ಕಣ್ಣಿಂದಂದಿೞಿತಂದ ನೀರ್ಗೆ ಪೊಲೆಗಳ್ ಕಂದಿರ್ದವಾ ಕಾಮನಾ
ತಿಣ್ಣಂ ಬಿತ್ತ್ರಲಗೋರ್ಲ್ಗಳಿನ್ನಿರ್ದಯಮುಚರ್ಲ್ಕಿಗಳಂತೊಪ್ಪೆ ಕೆಂ
ಬಣ್ಣಂ ಬೂವಿಡಿ ತೀವಿದಿರ್ಕೆಯೊಳೆ ಬಂದಾ ಚಿತ್ರದೊಳ್ ಬೆಂಕೆಯಿಂ
ನುಣ್ಣಂ ಕೂಡುವ ನಲ್ಲನಿನ್ನುಮುೞಿಯುಲ್ಕೆಂತಪ್ಪನೋ ಕಾಮಿನೀ ೧೫೨

ಅತಿಬಿಸುಪೇರ್ದು ತಾನೞಿದುದಿಲ್ಲೆನವೇಡತಿಯೋಗಕಾಂತೆಯಾ
ಕೃತಿಯೊಳೆ ನಲ್ಲನೊಲ್ದಿರೆ ಮಹೋಷ್ಣಮದೆಂತುಟು ಕೊಲ್ಲಬಲ್ಲದೆ
ನ್ನುತತನುವುಂಡು ಪಾರವಮೆಯಾ ಪರಮಾಯುಧದಿಂದ ರಕ್ಷಿಸಂ
ತತಿಶಯದಿಂ ವಿಯೋಗಿಜನವಾ ನೆನಸಿಂದವೆ ಬಾೞ್ವುದಾವಗಂ ೧೫೩

ವಿಕೃತಿಯ ರೂಪು ವಿಭ್ರಮಣಚಿತ್ತದ ವಿಪ್ರತಿಪತ್ತಿ ಭಾವದಾ
ವಿಕಸನಮಾಗದಾಸ್ಯದ ವಿಕಾರದ ನೋಟದ ವೀತಚೇಷ್ಟೆಯಾ
ವಿಕಳತೆಗೊಳ್ವ ಜಿಹ್ವೆಯತಿವಿಹ್ವಳಬುದ್ಧಿಯ ವಿಶ್ವಭೇದದಾ
ವಿಕಲಿಸಿದಾತ್ಮನಾ ವಿರಹಿಯೆಂದಡೆ ನೋಡಿತು ತತ್ಸಖೀಜನಂ ೧೫೪

ಮೋಹದೊಳಾಕೆ ಸಾಕಿದ ಶುಕಂ ಸಲೆ ಪಂಜರವಲ್ಲಿ ಶೋಕಿಸು
ತ್ತಾಹ ಜಗತ್ಪ್ರವೀಣೆ ಜಡಭಾವಮಿದೇಕೆಲೆಯಕ್ಕ ಸಾರ್ದುದಿಂ
ದೂಹಿಸಿ ಕೂಡೆಕೂಡೆ ಕರೆಯಲ್ ಬೆದರ್ದಂತವಳೆದ್ದು ಕಣ್ಬಿಡು
ತ್ತಾ ಹಸದಲ್ಲಿ ಮೂರ್ಛಿಸಿರೆ ಬಾೞಿಲೆಯಿಂದಣವೊಯ್ದರಾಳಿಯರ್ (?) ೧೫೫

ಲೇಸಿಗೆ ಲೇಸು ಸಕ್ಕಸರಿಯಾಗಿರೆ ನಲ್ಲರೊಳೆಲ್ಲ ಸೌಖ್ಯಮುಂ
ಸಾಸಿರ . . . . . ದುದು ತಾಂ ವಿಪರೀತಮುದಾಗೆ ಕಾಮುನಾ
ಪೂಸರಲ್ಪೈದಕಂ ಶರೀರಮುಂ ಡೊಣೆಮಾಡುತ ಚಿತ್ರಪುಷ್ಪಮುಂ
ಪ್ರೂಸಿಗೆ ತಂದು ಜೀವನ ಕುಟೀರಕೆಂದೆನಲ್ ನೆಱೆ ಕಿಚ್ಚನಿಕ್ಕಿದಂ ೧೫೬

ಸಸಿ ಹಿತನೆಂದು ಪೇೞ್ಪೊಡೆ ಕಿಚ್ಚಿನ ಪೊಟ್ಟಣಮಾಗಿ ಬಂದಪಂ
ಮಿಸುಪ ವಸಂತನಂ ಕರೆದು ಪೇೞ್ಪೊಡಂ ಮೊಗಕೆಚ್ಚನಾದಪಂ
ಎಸೆವೆಲರಿಂದೆ ಪೇೞ್ಪೊಡೆ ನೋಡದೆ ನಿಲ್ಲದೆ ಪೋದಪಂ ಕನ
ಲ್ದಸಮಶರಂಗೆ ಸೈರಿಸುವುದೆಂದೆನಗಾಗಿಯು ಪೇೞ್ವರಿಲ್ಲಹೋ ೧೫೭

ಅಲರ್ಗಣೆಯೇನು ಕೂರವೊ ಕಱುತ್ತೆಸಲೊಳ್ದೊಡೆ ಕಂಪವಾಗೆಯಾ
ಬಲುವಗೆವೆತ್ತ ಪಾರವವರ್ಪೊಲ್ಕಿದರ್ಪೊಪ್ಪಿರೆ ನೊಂದ ತನ್ನಟಿಲ್
ನೆಲದನಿತಾಗೆ ಧೈರ್ಯಮದು ಸರ್ವದಿಶಾಳಿಯೊಳೋಡೆ ಲಜ್ಜೆ ತಾಂ
ತೊಲಗಿರೆ ಮೌನಮುಂ ತಳೆದಳಾ ವಿರಹಾಗ್ನಿಗೆ ಕರ್ಪುವಿಲ್ಲನಾ ೧೫೮

ಕೋಗಿಲೆ ಕೋಕನೊಂದಿಸುಪೆನಾ ಗಿಳಿಯಂಚೆಯ ತೊಂಡುಮಾತುಸೈ
ತಾಗಿರೆ ಹಾಡಿಪೆಂ ಸರಸಗಾನಮನೀ ಸಖಿಯರ್ಕಳೆಲ್ಲರಂ
ಮಾಗಗ........ ಡಲ್ಲರಳಿಪೆಂ ಕಮಲಾಕರಕಿಕ್ಕಿ ಚೈತ್ರನಂ
ರಾಗಿಸುಮಂತೆ ಸುಟ್ಟುರಿಪುಪೆಂ ಮನದನ್ನನ ದಿಟ್ಟದಣ್ಪಿನಿಂ ೧೫೯

ತೊಲಗುತೆ ಜೀವಮುಂ ಬಿಡುವ ಕಾಂತೆಯುರಂ ನುಡಿಯಲ್ಕೆ ಬೇಡಹೋ
ತೊಲಗಿದ ಕಾಂತನಂದುಣಿಸಿದಿಂಪು ಸೊಗಂ ತನು ಜೀವಮಾಗಿರಲ್
ಜಲಕನೆ ಕಂಗಳಂ ತೆಱೆಯೆ ನಲ್ಲನೆ ತನ್ಮಯಮಾಗಿ ತೋಱುವೀ
]ಯಲಘು] ಸುಖಕ್ಕೆ ದೇವ ಜಗತೀತಳಸೌಖ್ಯಮುಮೇಂ ಸಮಾನಮೇ ೧೬೦

ಮದನನ ಪೂಜೆಗೆಯ್ದವಳನಲ್ಲನನಾಗಿಸುಮಂತೆ ಮಾಡುಮೆಂ
ಹೃದಯ ಕುಟೀರದೊಳ್ ಸ್ಮರಶರಾಗ್ನಿಯನಿತ್ತಿವನಾತ್ಮನೆಲ್ಲಮುಂ
ಬೆದಱಿಸುಮೆಂ ಸಮಾನಮುಹಸೋಮನೆ ಕಾಣಿಸುತೀಕೆಗೊಪ್ಪುವಾ
ಪದದೊಳೆ ತಂದು ಬೀೞ್ಸುವೆನಾನವೆಳೆೞ್ಗಿಯ ಬಲ್ಲೆನಾವಗಂ ೧೬೧

ಇಸಿಯುನ ರೂಪು ಮಾಸಿನಿಯು ಸಾಗರಕಂ ನೆಱೆ ಕುಂಭಸಂಭವಂ
ತನುಕೃಶರೋಗಕೊಲ್ಲನನ ತೆಕ್ಕೆಯೆ ದಿವ್ಯಮಹೌಷಧಂ ಸದಾ
ಮನದಟಿಲೆಂಬ ಪರ್ವತಕೆ ನಲ್ಲನದಿಟ್ಟೆ ಸಹಸ್ರಲೋಚನಂ
ತ[ನುವಿನಲಿಕ್ಕ] ಚಾರದನ ಬಂದನೆನಲ್ಕೆ ವೃಥಾಯಮಾಗವೇ ೧೬೨

ಉರಿಯೆಲ್ಲಂ ಘನಸ್ಮೈತ್ರ್ಯವಂಗದ ಕೃಶಂತಾನುಬ್ಬು ನೋವೆಲ್ಲಮುಂ
ಪರಮಾನಂದಮನೇಕದ್ವೈನ್ಯ ನಿನದಂ[ಗಳ್ತಾಂ] ರಸಧ್ವಾನಮೊ
ಪ್ಪಿರಲಂಡೊಲ್ಲದೆ ಗಾಡಿ ಸಿಂಗರಮುದುದ್ವೃತ್ತಪ್ರೊರ್ಣಸಿಂಗಾರಕಾ
ಗರಮೊಲ್ದಾಣ್ಮನ ಬಿರ್ಚಿ ಕೂಡುವ ಸುಖಕ್ಕಾ ಸೌಖ್ಯಮೇಂ ಸಾಟಿಯೇ ೧೬೩

ಮುಚ್ಚುವುದೇಕೆ ಮುಚ್ಚಿದೊಡೆ ಬೆಚ್ಚಿವೊಲಿರ್ಪುದು ಹೀನಪುಣ್ಯದಿಂ
ಬೆಚ್ಚಶರೀರಯುಗ್ಮಮವು ಬಿಚ್ಚಲ್ಕಸುವಾಯ್ತಿದೆಂಬಿನಂ
ತಚ್ಚರಿಯಾದ ಜೀವಮುದೆ ಬಿರ್ಚುವುದೊಳ್ಪಿತು ಬಿರ್ಚದಿರ್ದೊಡಾ
ಕಿಚ್ಚಿಗೆ ಮೆಯ್ಯನಿತ್ತು ಮನಮಂ ಪೊಗೆಸುತ್ತಿಪಳೇಂ ಸುಜಾಣೆಯೋ ೧೬೪

ಬಿಸಿಲ ಚಕೋರಂಗೆ ಚಂದ್ರಂ
ಪಸಿದ ಮರಾಳಂಗೆ....ಡಲು ಬಪ್ಪಂದದೊ
ಳಸಮಾನ ಸುಖಾಲೀಲಂ
ರಸಮಯಗುಣಜಲಧಿವಲ್ಲಭಂ ನಡೆತಂದಂ ೧೬೫

ಆಗಳೆಚ್ಚರಲಬಾಣಂ
ತಾಗದೆ ಹಿಮ್ಮೆಟ್ಟಿ ಸೆಡೆದು ಕಡೆದವು ತಾಂ ಭೂ
ಭಾಗದೊಳಿನಿಯನ ನಾಮಂ
ಕೂಗಲದೇನೆಂಬೆ ಕಟ್ಟಿದೌಷಧಮುತ್ತೇ ೧೬೬

ವಿರಹಮದೆತ್ತಲೋಡಿದುದೊ ವಿಹ್ವಳಭಾವಮದೆತ್ತ ಸಾರ್ದುದೋ
ಶರೀರದ ಬೆಂಕೆಯೆತ್ತ ಸುಟುದೆಲ್ಲಿಗೆ ದಾಂಟಿತೊ ನಲ್ಲನೆಂಬವಂ
ಸ್ಮರಸಘಟಿಂಗೆ ತೋರ್ಪ ನಯನತ್ರಯನೋಯೆನೆ ಕಾಂತೆಗಾಗಳೇ
ಪರಮ ಸುಖಾಸ್ಪದಂ ನೆಗಟಿತ ಕಾಂತನನಾ ಬಿಡದಪ್ಪಲಪ್ಪಿದಳ್ ೧೬೭

ಶಿವಶಿವ ಕೂರ್ತುದೊಂದು ಸೊಗಸೆಂತುಟೋ ಸೋಂಕುತಲಾದಸೌಖ್ಯಮೇ
ತವಗೆ ರತೀಶನಾಶರಿರಮೆಸುರತದ್ರವಮಾದ್ರವಂಗಳೇ
ಕವಿತತ ಕಾಮವಾರ್ಧಿ ಸಲೆ ವಾರ್ಧಿಯೊಳಾಟುವ ಮಾನಸಂಗಳಿಂ
ತವಕಿಸನಲ್ಲರೊಂದಿ ಸೇಜತದರ್ ಮಧುಮಾಸವಸಾಂತರಂಗಳೊಳ್ ೧೬೮

## ಪುರುಷವಿರಹ

ಅಳಿಕುಳಮಂ ಕುರುಳ್ಗಳಿವರೆಂದು ತುಡುಂಕಿ ನವೋತ್ಪಲಂಗಳಂ
ಚಳನಯನಂಗಳೆಂದಿವರೆ ಚುಂಬಿಸಿ ವಕ್ತ್ರಸರೋಜವೆಂತಿರಲ್
ಜಳಜಮನೊಕ್ಕಲಿಕ್ಕಿ ಪಡೆವಂತಿರೆ ಪಲ್ಲವದೊಳ್ ಪೊರಳ್ದು ಸ
ತ್ಪುಳಕಕುಚಂಗಳೆಂದು ಕಳಶಂಗಳನಪ್ಪಿದನಾ ನೃಪಾಲಕಂ ೧೬೯

ಎಳಲತೆಯಲ್ಲಿ ನಿಂದು ನಿಲಲಾಱದೆ ಕೇಳಿಗೃಹಾಂತರಾಳದೊಳ್
ಕೆಳವಳದಿಂದ ಪೊಕ್ಕು ಪೊಗಲಾಱದೆ ನಂದನದಲ್ಲಿ ಸಂತತಂ
ತೊಳಲಿ ಕೊಳಂಗಳೊಳ್ ಬಱಲಿ ಕಾಮಶರಾವಳಿಗಳ್ಕಿ ಸೋಗೆ ಕೋ
ಗಿಲೆ ಗಿಳಿಗಳ್ಗೆ ಬಳ್ಕಿ ಕುದಿದುಂ ನೆಱೆ ತಳ್ಕಿದನಾ ನರೇಶ್ವರಂ ೧೭೦

ಎರೆಸೆಂ ಮತ್ಸಖಿ ತಂದು ಕೂಡು ಗುಣವೃಂದಾರಾಮೆಯುಂ ರಾಮೆಯುಂ
ನವಪುಷ್ಪಾಯುಧಚಾಪಸಂಯುತಮೆನಿಪ್ಪಾನಾರಿಯುಂ ನಾರಿಯುಂ
ಸ್ಮರನಾಳೋಚನೆಗಾಸ್ತ್ರಿಯಾಗಿ ನೆಲಸಿರ್ಪೀಕಾಂತೆಯುಂ ಕಾಂತೆಯುಂ
ತರುಣೀಸಂಘಶಿರೋಮಣಿಪ್ರಬಳಕೀರ್ತ್ಯಾಶಾಂತೆಯುಂ ಶಾಂತೆಯುಂ ೧೭೧

ಇರು ನೀಂ ಪೋದಪೆ ನಾಂ ಮೃಗಾಕ್ಷಿಯೆನೆ ಕೇಳೆನ್ನೋಪಳಾ ಕಂದಿದಾ
ಯಿರವಂ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಷ್ಪದೊಳ್
ಪೊರೆದಾಲೋಕನವಾಬಲತ್ವತೆಜನಂ ಸುಯ್ ತೋಱುವಂಗಸ್ಮರ
ಜ್ವರಮುಂ ತಾಳ್ದುವ ಭಂಗಿ ತಾನಿರದಿದೇಂ ಬೆಚ್ಚತ್ತೊ ಮಚ್ಚಿತ್ತದೊಳ್ ೧೭೨

ನೆನೆನೆನೆದೆನ್ನ ಚಿತ್ತವಱಿದಪ್ಪುವಳಂ ಪದಪಿಂದೆ ಬಂದು ಬಂ
ದನುಮಿಸೆ ತನ್ನ ಕಂಪ್ಪಿಲೆಯೊಳೊಂದೆಲೆಯುಂ ಪಿಡಿದೆನ್ನ ಬಾಯೊಳಿ
ಟ್ಟನಿಸುಱಿವರ್ಧಮುಂ ಕಡಿದುಕೊಂಬವಳಂ ನಳಿತೋಳ ನಲ್ಲಳಂ
ಮನಸಿಜಾನನೆಯುಂ ನೆನೆದು ಸಾಯುಮೊಡಂ ಬಡವಾಗಲೀಯರೇ ೧೭೩

ಬಿಡು ತೊಲಗೆಂದು ಹಿಂಗಿ ಹೆಱಸಾರ್ದೊಡೆ ನಿಲ್ಲದೆ ಬಂದು ಕೋಪದಿಂ
ಪಿಡಿದೆಳೆದೊಯ್ದು ಪೆರ್ಮೊಲೆಗಳಿಂದಿಱಿದೊತ್ತುವ ಪುಷ್ಪಮಾಲೆಯಿಂ
ಪೊಡೆದಧರಾಮೃತಂಗೊಡುವ ಮರ್ಮಮನೊತ್ತುವ ನಾಣದಾಣದಿಂ
ತುಡುಕುವ ನಲ್ಲಳಂ ನೆನೆದು ಸಾಯದೊಡಂ ಬಡವಾಗಲೀಯರೇ ೧೭೪

ವಸನಮುಂ ಕೋಗಿಲೆ ಜಕ್ಕವಕ್ಕಿ ಪಗಲುಂ ಪೂಗೊಂಚಲುಂ ತುಂಬಿ ಚಂ
ದ್ರನಸಂಭೋನಿಧಿ ಬಂಧದಾನೆ ಮಳೆಯುಂ ಕಾರ್ಗಾಲನುಂ ಸೋಗೆ ಮುಂ
ಬನಿಯುಂ ಚಾತಕಪಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯನಂ
ನೆನೆವಂತಾಂ ನೆನೆವೆಂ ಸರೋಜಮುಖಿಯುಂ ಶ್ಯಾಮಾಂಗಿಯುಂ ನಲ್ಲಳಂ ೧೭೫

ಪಸದನಮಾಂಪವೇಳೆಯೊಳೆ ರಾಗದಿನಾಂ ಬರೆ ಕಾಮಮುರ್ಚೆ ತಾ
ನಸವಸದಿಂ ಕೊರಳ್ಗೆ ಕಳಕಾಂಚಿಯೊಪ್ಪುವ ತಾರಹಾರಮುಂ
ಮಿಸುಪ ನಿತಂಬಕಂದುಗೆಯನೊಳ್ಳಳಿತೋಳ್ಗೆ ರದಿಟ್ಟು ನಲ್ಮೆಯಿಂ
ಶಶಿಮುಖಿಯೆನ್ನನಪ್ಪಿ ಮನಮಂ ನಗಿಸಿರ್ಪಳನೆಂದು ಕಾಣ್ಬೆನೋ ೧೭೬

ಪಡೆದಿರ್ದಿರ್ಬ್ಬರ ಜೀವಮೊಂದೊಡಲೆ ಬೇೞ್ತಂಬಂತುಟಂ ಮಾಡಿದಾ
ಮದನಂಗಾವುದು ದೋಷಮುಂತೆ ಸುಡಿಯಲ್ಕೇನಕ್ಕುಮೇಂ ಪಾಪಮುಂ
ಬಿದಿಯೆಂಬಾಜಡಿಗಳ್ಳನಿಂದೆ ಮುಳಿ[ಸಿಂ ಸಾ]ವರ್ಗೆಯಿನ್ನೊಮ್ಮೆ ದೈ
ವದಿನೆತ್ತಾನುಮದಿಂದುಬಿಂಬಮುಖಿಯುಂ ಕಾಣ್ಬೊಂದು ಸೈತಕ್ಕುಮೋ ೧೭೭

ನಸುಬಿಸುಪೇಱಿ ಮೆಯ್ಯ್ ಮುಗುಱಿ ಕೆತ್ತುವ ತಾಣಮೆ ಕೆತ್ತುವಂದಮಾ
ದುಸುರ್ಗಳೆ ನಾಸಿಕಾಮುಕುಳದಿಂದಿನಸುಂ ಪೊಱಪೊಣ್ಮೆ ತಳ್ತು ಸಂ
ಧಿಸಿದೆಮೆ ಬಿರ್ಚೆ ಕಣ್ಮಲರ್ಗಳುಳ್ಳಲರುತ್ತಿರೆ ಜಾನಕೀಯೆನು
ತ್ತು[1]ಸಿರ್ದುಸಿರ್ದಿಟ್ಟಿನಾ[1] ರಘುಕುಲಾಂಬರಚಂಡಮರೀಚಿ ಮೂರ್ಛೆಯಿಂ ೧೭೮

(ಪಂಪರಾಮಾಯಣಂ, ೯-೧೧೭)

ಕಲಹಂಸಾಲಸಯಾನೆಯುಂ ಮೃಗಮದಾಮೋದಾಸ್ಯನಿಶ್ವಾಸೆಯುಂ
ತಳಿರೇ ತಾವರೆಯೋ ಮದಾಳಿಕುಲಮೋ ಕನ್ನೆಯ್ದಿಲೇ ಮತ್ತಕೋ
ಕಿಳಮೋ ಕಂಡಿರೆ ಪಲ್ಲವಾಧರೆಯುಮಂಭೋಜಾಸ್ಯೆಯುಂ ಭೃಂಗಕುಂ
ತಳೆಯುಂ ಕೈರವನೇತ್ರೆಯುಂ ಪಿಕರವಪ್ರಖ್ಯಾತೆಯುಂ ಸೀತೆಯುಂ ೧೭೯

(ಪಂಪರಾಮಾಯಣಂ, ೯-೧೧೮)

ಕೊಳಗಳೊಳೊರ್ಮೆ ಕೊಡುವೆಳಮಾವಿನ ಝೊಂಪದೊಳೊರ್ಮೆ ಜಾದಿಯೊ
ಕ್ಕೈಳಿಗಳೊಳೊರ್ಮೆ ತಣ್ಬುೞಿಲೊಳೊರ್ಮೆ ತಮಾಲದ ಸಾಲೊಳೊರ್ಮೆ ಶೀ
ತಳಕದಳೀಗೃಹಾವಳಿಯೊಳೊರ್ಮೆ ಕುಳಿರ್ಕೊಳುತಿಪ್ಪ ಕೇತಕೀ
ವಳಗಳೊಳೊರ್ಮೆ ಪೊತ್ತುಗಳೆವಂ ಕವಿತಾಕಳಿಕಾಮ್ರಕೋಕಿಳಂ ೧೮೦

(ಲೀಲಾವತಿ, ೪-೧೪)

---

[1] ಸಿರ್ದುಸಿರ್ದನಾ(ಕ)

ತವಳಾಲೋಕನಚಂದ್ರಿಕಾವಿರಹಿತಂ ವ್ಯೋಮಂ ಸಖೀನೂಪುರಾ
ರವಲಾವಣ್ಯತರಂಗಿಣೀವಿರಹಿತಂ ದಿಗ್ವಾಳಮಾಳೀಪದ
ಚ್ಛವಿಪಂಕೇಜವಳಾರ್ಜನಾವಿರಹಿತಂ ಧಾತ್ರೀತಳಂ ಬಿನ್ನನಾ
ದವ್ರೊಳೊಪ್ಪಂಗಿಡೆ ವಲ್ಲಭಾವಿರಹಿತಂ ಬೆಂಬೀಳ್ದಿನುರ್ವೀನವಂ ೧೮೧

(ಲೀಲಾವತಿ, ೧೪-೫೩)

ಲತಿಕಾಮಂಟಪದೊಳ್ ಮನೋಜಗೃಹದೊಳ್ ಪಂಕೇಜಿನೀಕುಂಜದೊಳ್
ರತಿಶಿಕ್ಷಾವನದೊಳ್ ತಮಾಳತಳದೊಳ್ ಪದ್ಮಾವತೀಕೂಟದೊಳ್
ನುತಪುಷ್ಪಾಟವಿಯೊಳ್ ನದೀಪುಳಿನದೊಳ್ ಕ್ರೀಡಾದ್ರಿಯೊಳ್ ಮಲ್ಲಿಕಾ
ಲತೆಯೊಳ್ ವಲ್ಲಭೆಯಂ ಸಮಂತಱಸಿದಂ ವಿದ್ಯಾವಧೂವಲ್ಲಭಂ ೧೮೨

(ಲೀಲಾವತಿ, ೧೪-೫೪)

ಅರಸಂ ಪ್ರೊಕ್ಕವಿನಾಣದಿಂದಱಸಿದಂ ಪದ್ಮಾಸ್ಯೆಯಂ ಪದ್ಮಿನೀ
ಸರದೊಳ್ ಬಾಳಲತಾಂಗಿಯಂ ಸ್ಮಿತಲತಾಸಂದೋಹದೊಳ್ ಪಾಟಲಾ
ಧರೆಯಂ ಪಾಟಲಸಂಕ್ತಿಯೊಳ್ ಮಧುರಚೂತಾಮೋದೆಯಂ ಚೂತವ
ಲ್ಲರಿಯೊಳ್ ಚಂಪಕಪುಷ್ಪನಾಸಿಕೆಯನುದ್ಯಚ್ಚಂಪಕೋದ್ಯಾನದೊಳ್ ೧೮೩

(ಲೀಲಾವತಿ, ೧೪-೫೫)

ಸುರತಕ್ಕೆಂದೊಲ್ದು ಸೋಂಕಲ್ ಸತಿ ಮುಳಿದವೊಲಾಗಿಪ್ಪುದಂ ತನ್ನ ಬೆನ್ನೊಳ್
ಪೊರೆದೊಪ್ಪಲ್ ಕೇಶಪಾಶಂ ಕಟಿಯ ಚಮರಿಯಂ ಕಟ್ಟಿದೊಂವತ್ಯಪೂರ್ವಂ
ಸ್ಮರಚಾಪಶ್ರೀಯ ಚೆಲ್ವಂ ತಳೆದು ಸೆಱಗುಗೆಯ್ದಿರ್ದಳಂ ಸೋಂಕೆ ಸಾರಂ
ತಿರೆನುತ್ತಂ ನೂಂಕಿ ಸುಯ್ವೆನ್ನಿನಿಯಳ ತೆಱನೆನ್ನಂ ಮನಂಗೊಳ್ವುದಿನ್ನುಂ ೧೮೪

ಪೊಂದಗಡಂದದೊಂದೆ(?)ಲೆಯಂ ಮಡಿದಂಗನೆಯೊಂದನಲ್ತು ಮ
ತ್ತೊಂದನೊಡಂಬಡಂ ಮುಡಿಸಿ ಮೆಲ್ಲನೆ ತಾನರೆಗರ್ಚಿ ನೀಡಿ ಪೆಂ
ಪಿಂದದನಾಂತುಕೊಂಬತೆಱದಿಂದಧರಾಮೃತಮಂ ಕದುರ್ಂಕಿ ಚೀ
ಕೆರ್ಂದೆಸುತಿರ್ಪಳಂ ನೆನೆದು ಸಾಯದೊಡಂ ಬಡವಾಗಲೀಯರೇ ೧೮೫

ಕಾವನ ಪೂವಿನಂಬ ನಗೆಗೊಣ್ಗೊನೆಯಿಂದಸಿತೇಕ್ಷುಚಾಪಮಂ
ಬಾವಿಸಿ ಪುರ್ಬಿನಿಂ ನೆಱತ ತುಂಬಿಗಳಂ ಕುರುಳೋಳಿಯಿಂದೆ ರಾ
ಜೀವನ ಮೊಗ್ಗೆಯಂ ಕುಚದಿ ಪೂರ್ಣಶಶಾಂಕನ ವಕ್ತ್ರದಿಂದೆ ತ
ದ್ಭಾವದಿ ಗೆಲ್ದಳಂ ನೆನೆದು ಸಾಯದೊಡಂ ಬಡವಾಗಲೀಯರೇ ೧೮೬

ಪದುಮದಳಾಯತಾಕ್ಷಿಯಳಿವೇಣಿ ಪಿಕಸ್ವನಿ ಕೀರವಾಣಿ ನಿ
ನ್ನೊದವಿದ ರೂಪಿನಂತೆಸೆವಳೋರ್ವಳಕಾಣುತಲಲ್ಲಿಗೆಯ್ದಿ ಜೇ
ಗದಿ ಬೆಸಗೊಂಡೆ ನಿನ್ನ ಗುಣಗಾಣೆನು ಕಬ್ಬಿನ ಪೋಲ್ವೆಗಕ್ಕಟಾ
ಬಿದಿರಸೆ ಪೆದ್ದದೊಂದು ತೆಱನಾಯಿತು ಚಂಪಕದಾಮಕೋಮಲೇ ೧೮೭

ಭಾವಕಿ ನಿನ್ನೊಳೊಗ್ಗಿಪುದು ವಾಳವ(?)ದನ್ಯರೊಳೇತಱಿಟ್ರಿ ಕೇಳ್
ಕೋವಿದೆ ಚಂದನದ್ರುಮಕೆ ಸಾಮ್ಯವೆ ಕಾಟ್ಕಿರ ಮುತ್ತು ರತ್ನಕಂ
ತೀವಿದ ಗಾಜದೇಂ ಪಡಿಯೆ ಪೇಟಿಲಿ ಜಿಲ್ಲಿವ ಪೆದ್ದ ಬಾಯಿಗಂ
ಜೀವಿನಿದಪ್ಪುದೇ ರಮಣಿ ಬಾ ನವಚಂಪಕದಾಮಕೋಮಲೆ ೧೮೮

ಇಂಚರಪೂಗದಂತೆ ಮಣಿಮೇಖಲೆಯುಂ ನಿರಿಯೊಳ್ ತೊಡರ್ಚೆ ತಾಂ
ಮಿಂಚುವ ರತ್ನನೂಪುರವನಂತೆರಡುಂ ಕಣಕಾಲೊಳೊತ್ತಿ ಮೇ
ಲ್ವಂಚಿಸಿ ಪಿಂತೆ ಬಂದು ಬಿಗಿಯಪ್ಪುವಲಂಪಿಗೆ ಘುಮ್ಮನೆಳ್ವ ರೋ
ಮಾಂಚನಗಾತ್ರಿಯುಂ ರತಿರಸಾಯನಪಾತ್ರೆಯನೆಂದು ಕಾಣ್ಬೆನೋ ೧೮೯

ಕುರುಳ ಬೆಡಂಗಿತುಂ ಘನಕುಚಂಗಳ ಮುಗ್ಧೆಯುಂ ಗೌರವರ್ಣದಾ
ತರಳಕಟಾಕ್ಷಮಾಲಿಕೆಯ ಸೌಂದರಕಸ್ತುರಿಬೊಟ್ಟಿನಾಕೆಯಾ
ನೆರೆಯದೆ ನಿಂದುನೋಡದೆ ವಿಲಾಸದೊಳಪ್ಪದೆ ಚಾರುವಕ್ತ್ರಪಂ
ಕರುಹಮನೊಲ್ದು ಚುಂಬಿಸದೆ ಸುಮ್ಮನೆ ಪೋಪವ ಪಾಪಿಯಲ್ಲವೇ ೧೯೦

ನುಡಿವರೆ ಕಾಣೆನಾಪ್ತರನು ನೋಡುವರುತ್ತಮ ಪೆಣ್ಗಳಿಲ್ಲ ನಿ
ನ್ನಡಿಗಳ ಕಂಡು ಸೈರಿಪಡೆ ನೀನಿಹ ಊರತಿದೂರ ದುಷ್ಕರಮಂ
ತೊಡಗುವೆನಾರಕೊಡೆ ಕಮಲಾಂಬಕಿ ಕೋಕಿಲವಾಣಿಯೆಂದು ಬಂ
ಡೆಡರದು ನಿನ್ನ ಕಂಡು ನಿಮಿಷಾರ್ಧದಿ ಪೋಪುದೆಲೇ ಗುಣಾವತೀ ೧೯೧

ನೆಟ್ಟನೆ ಕೂರ್ತ ನಲ್ಲಳಗಲಂ ತಳೆದಪ್ಪುದಱಿಂದೆ ದೈವದಿಂ
ಪುಟ್ಟಿದ ಪೋಪುದೊಳ್ಳಿತು ಶರೀರಮನಾಂತು ಧರಾತಳಾಗ್ರದೊಳ್
ಪುಟ್ಟಿದೊಡೇನು ಕೂರದಿಹುದೊಳ್ಳಿತು ಕೂರ್ತಡೆ ಮೇಣಗಲ್ಕೆಯುಂ
ತೊಟ್ಟನೆ ಸಾವುದೊಳ್ಳಿತು ತೊಡಂಕದೆ ಕಾವನ ಡಾವಂಗಳೊಳ್ ೧೯೨

ಒದವಿದ ಜೀರ್ಣರಿದ ನೋಹಮನಕ್ಕಟ ಕಾಣುತನ್ಯರೊ
ಲ್ದೊದೆ ಬಿಡದಿಂಬುನೆಪ್ಪು ಒಱುವಾತಗಳಂ ನೆಱೆ ಕೇಳಿಂನ್ನ ನಿಂ
ಬಿಡುವದೆ ಸತ್ಕುಲಾಕುಲರನ್ನಳೆ ಕೋವಿದೆಯಿಂದದೊಂದು ಪ
ಚ್ಚಡಡೆಣೆಗೀಳುತೊಂದು ಪೋದೆಯಲ್ಲದು ಸೈರಿಪುದೇ ಮನಃಪ್ರಿಯೇ ೧೯೩

ಮನವನೆ ಮಾಱುಗೊಂಡೆ ವನಜಾತವಿಲೋಚನೆ ನಿನ್ನ ಚೇಟದಿಂ
ದನುದಿನಮುಗ್ನನಾದೆನಿದಕೌಷಧಿಮಂತ್ರಮು ನಿನ್ನೊಳಿರ್ದು ಸ
ನ್ನನಕುಚಮುದ್ರೆಯೊತ್ತಿಯಧರಾಮೃತಪಾನಮನೀಂಟಿಸುತ್ತ ಪಾ
ವನವನು ಮಾಡು ಬಾ ವಿಕಸಪಂಕಜನೇತ್ರೆ ಮರಾಳಗಾಮಿನೀ ೧೯೪

ತುಷಕೆ ಸಮಾನಮಪ್ಪ ಕಸ ಕಣ್ಣಲಿ ಬಿರ್ದಡೆ ಸೈರಿಸಿರ್ಪಡು
ಬ್ಬಸಮದು ಮಾಣ್ಗೆ ನೀಲಗುರುಳೋಳಿಯ ಬಂದುಗೆಬಾಯ ಬೆಳ್ಪಿನಿಂ
ಪೆಸೆವಲರ್ಗಣ್ಣ ಪೀನದ ನಿತಂಬದ ಚಂಪಕಕಾಂತಿವೆತ್ತ ತೆ
ಳ್ಪಿಸಿರಲತಾಂಗಿ ಕಣ್ಣೊಳು ಸಿಲುಂಕಿ ತೊಳಲ್ದೊಡಮೆಂತು ಸೈರಿಪೆಂ ೧೯೫

ಕುಸುಮಸುಗಂಧಿ ಸತ್ಕಲೆಯ ಕಾಮಿನಿ ಕಾಮನ ಪಟ್ಟದಾನೆಯೆ
ನ್ನಸುಗೊಳದಂಜಿ ಚಂದ್ರಮುಖಿ ರನ್ನದಪುತ್ಥಳಿ ಕೋಮಲಾಂಗದಿಂ
ಪೆಸೆವ ಸುಜಾಣೆ ಕೇಳೆರಡು ಕಂಗಳು ಸಾಲವು ನಿನ್ನ ರೂಪನೀ
ಕ್ಷಿಸುವಡೆ ಸಾವಿರಕ್ಷಿಗಳ ನಿರ್ಮಿಸದಾದನು ಪದ್ಮಸಂಭವಂ ೧೯೬

ಅಲಸಂಜಾಕೆಯ ಚಂದದಿಂ ಸುಳಿದುದೋ ಮಿಂಚಂಗನಾಭಂಗಿಯಿಂ
ನೆಲಸಿತ್ತೋ ತ್ರಿಜಗನ್ಮನೋಹರಸುಖಂ ಸ್ತ್ರೀವೇಷದಿಂ ಬಂದು ಸಂ
ಚರಿಸಿತ್ತೋ ಮಲಯಾನಿಲಂ ಸತಿಯರೂಪಂ ತಾಳ್ದುದೋ ಕಾಮಿನೀ
ಚಲದಿಂ ಚಂದ್ರಿಕೆ ಮೂರ್ತಿವೆತ್ತುದೊ ದಿಟಂ ಪೇೞಿಂದನಾ ಭೂಭುಜಂ ೧೯೭

ಇನ್ನೊನ್ಮೆಯ್ತಪ್ಪಳೊ ಬಾರಳೊ ಒನಕೆನುತಂ ಸುಯ್ಯ ಸಂತಾಪದಿಂದಂ
ತನ್ನಂಗಂ ಕಾಯ್ಪು ಕಾಮಜ್ವರನೊಗೆತರೆ ಬೆಂಡಾಗಿಯಾಹಾರಮಂ ಬಿ
ಟ್ಟಿನ್ನೊಳ್ ಮಾತೇನೆನುತ್ತಾ ನುಡಿಯನುಳಿದತಿ ಭ್ರಾಂತಿಯಂ ಕೊಂಡು ಕಾಮಾ
ಸ್ತ್ರಂ ನೆಟ್ಟಂತಂದು ಮೂರ್ಛಾಗತಿಗೆ ತನುವನೊಲ್ದಿತ್ತನಾ ರಾಜಪುತ್ರಂ ೧೯೮

ಪಲ್ಲವತಲ್ಪದೊಳ್ ಮಲಯಜದ್ರವಮಂ ತಳಿದೂರ್ಧ್ವಕೇಶನಂ
ಮೆಲ್ಲನೆ ಸೈತುಕುಳ್ಳಿರಿಸಿ ಕೋಮಳಬಾಲಮೃಣಾಳನಾಳಮಂ
ಮೆಲ್ಲಿರ್ದೆಯೊಳ್ ಪದಂಗೊಳಿಸಿಯುತ್ಪಲಪತ್ರದೊಳೊಲ್ದು ಬೀಸಿ ತ
ತ್ಫುಲ್ಲಶರಾಗ್ನಿಯಂ ತವಿಸುವಜ್ಜಗನುಂ ತಳೆದರ್ ಮನಃಪ್ರಿಯರ್ ೧೯೯

ಆರೊಡನಾಡುವೆಂ ಪ್ರಿಯಳೆಯಾರೊಡಗೂಡುವೆನಾರಕೂಡೆ ಸಂ
ಸಾರದ ಸೌಖ್ಯಮಂ ಸವಿವೆ ನಿನ್ನೊಳಮರ್ಚಿದನೆಂದು ಕಾಂತೆಯರ್
ಸೇರುವಮುಂಪೆ ಸೇರಿದಡದೇತಕೆ ಕನ್ನಡಿಗಿಡಿ ಹಂಚು ನೀಂ
ಜಾರಿಸಿಬಿಟ್ಟು ಪಾರಿಗೆಮನಾಥನ ಪಾಲಿಸು ಪಂಕಜಾನನೇ ೨೦೦

ಆಡುವರಾಪ್ತರಿಲ್ಲವಕೆ ನಿನ್ನೊಳಗೊಂದಿನಿಸಿಲ್ಲ ಸೌಖ್ಯದೊಳ್
ಕೂಡುವೆನೆಂದೊಡಂಬುಜವಿಲೋಚನೆ ನೀನೆನಗಿಲ್ಲ ದುಷ್ಕರಂ
ತೋಡುವೆನಾರಕೂಡೆ ತೃಣದಿಂಲಘುವಾದೆನಿದಕ್ಕೆ ನಲ್ಲ ನೀಂ
ಬೇಡವತೀವಭೀತಿಯೆನುತಂ ನೆಱೆ ರಕ್ಷಿಪುದಬ್ಜಲೋಚನೆ ೨೦೧

ಮುಗ್ಧೆಯ ಕೈರವನೇತ್ರ ವಿ
ದಗ್ಧೆಯವೋಲ್ ಮುಳಿಸನಾಂತೊಡಾನೆಂತುೞಿವೆಂ
ದಗ್ಧಾಂತರಂಗನಾದೆಂ
ದುಗ್ಧಂ ವಿಷಮಾದೊಡಿಳೆಯೊಳಾನೆಂತಿರ್ಪೆಂ ೨೦೨

ದೂರಪಥಕ್ಕೆ ಪೋಪೆನೆನುತಂ ಪ್ರಿಯಳಲ್ಲಿಗೆ ಬಂದು ಕೇಳಲಾ
ನಾರಿಯು ಚಿತ್ತದೊಳ್ ತವಕದಿಂದುಸಿರುಂ ತಳರೆಂಬ ವಾಕ್ಯಮುಂ
ಪೋರಿದುವೊಂದನೊಂದಿರದೆ ಮುಂಚುವ ಬೆಚ್ಚರದಿಂದೆ ನುಣ್ಗೊರ
ಲ್ದಾರಿಯೊಳಾಂತವಲ್ಲದೊಡೆ ಪೇೞಿರ್ ಸಖಿ ತಾಂ ಮಱುಮಾತನೀಯಳೆ ೨೦೩

ಬಸದೆಡೆಯೊಳ್ ಕುಳಿರ್ವ ಕೊಳನೊತ್ತಿನಲರ್ವಸೆಯಲ್ಲಿ ಕಾಂತೆಯೊಳ್
ಬಿನಿವಿಷುತಿರ್ದ ಮೆಯ್ಗರೆಯಲೊಯ್ಯನೆ ಕರ್ಪುರವಾೞೆಯೊಳ್ ಬೞಿ
ಕ್ಕಿನಿಯಳೆಱಂಕೆಯಿಂದರಸಿ ಕಾಣದೆ ಮಾಂದಳಿರಂ ತುಡುಂಕಿ ಮೇ
ಲ್ತೊನೆದುಱೆ ಜೊಲ್ಲನೊಲ್ದು ಮೊಱೆಯಿಟ್ಟಳನಾಂ ಪರಿದಪ್ಪುವೆಂ ಸಖೀ ೨೦೪

ಮುನಿಸಿಂ ಕಾಂತೆಯಗಲ್ದಡಿಕ್ಕೆವನೆಯಂ ಸಾರ್ದಾನಿರಲ್ ಸಾರಿಕಾ
ಧ್ವನಿ ಪೊಣ್ಮಲ್ಕದನೋಪಳಿಂಚರಮಿದಲ್ತೆಂದಾಲಿಸಲ್ ಕಂತು ಮ
ತ್ತನಿಲಾಂದೋಳನದಿಂದೆ ತೋರಣದಳಿರ್ ಮಾತಾಡುವಂತಾದುದೆಂ
ದಿನಿಯಳ್ ಬಂದಪಳೆಂದು ಬಾಗಿಲೆಡೆಯೊಳ್ ನಟ್ಟಿರ್ಪೆನಾಂ ದಿಟ್ಟಿಯಂ ೨೦೫

ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣಸುಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ವಿಪ್ರಲಂಭವರ್ಣನಂ ಪಂಚದಶಾಶ್ವಾಸಂ ಸಂಪೂರ್ಣಂ *

* ಇಲ್ಲಿಗೆ ಗ್ರಂಥಸಮಾಪ್ತಿಯಾಗಿದೆ. 'ಸೂಕ್ತಿಸುಧಾರ್ಣವ'ದ ಪ್ರಕಾರ ಅಷ್ಟಾದಶವರ್ಣನ
ಗಳಿಗೆ ಸೇರಿದ ಮಂತ್ರ, ದೂತ, ಆಗಮನ, ಜಿಪ್ರಕರಣಗಳು ಉಪಲಬ್ಧವಲ್ಲ. ಪೂರ್ಣ
ಗ್ರಂಥವು ಪೀಠಿಕಾಪ್ರಕರಣವೊಂದಿಗೆ ಹತ್ತೊಂಬತ್ತು ಆಶ್ವಾಸಗಳಿಂದ ಕೂಡಿದ್ದಿರ
ಬಹುದೆಂದು ಊಹಿಸಬಹುದಾಗಿದೆ.

# ಕಾವ್ಯಸಾರದ ಪದ್ಯಗಳ ಅಕಾರಾದಿ ಸೂಚಿ.

| | | |
|---|---|---|
| ಆಬ್ರಿ ಕೊಳುತ್ತ ನಿರ್ಜ ಕರಿಕುಂಭ | ಲೀಲಾವತಿ, ೬-೯೬; | ೩-೩೪೨-೮೭ |
| *ಆಕಾಶಕೇಶನೆಯ್ದು | | ೩-೩೬೯-೯೧ |
| *ಆಕಾಶವೆಂಬ ಗಜನುಂ | | ೩-೩೮೦-೯೩ |
| *ಆಕೆಯ ಚಂದ್ರಮನನಾಗ್ರಹದಿಂ | | ೬-೨೨೭-೨೮೨ |
| ಆಕೆಯ ಲಾವಣ್ಯಾಮೃತ | ಲೀಲಾವತಿ, ೬-೬೩; | ೪-೧೩೪-೧೧೭ |
| *ಆಗದೆ ಪೋದಡನ್ಯಶಿಶುವಂ | | ೧೫-೧೦೯-೫೮೫ |
| *ಆಗಸದೇಗುಲಂ ಕುಮುದಬಾಂಧವ | | ೮-೩೦೭-೩೮೧ |
| *ಆಗಸವೆಂಬ ಬಚ್ಚು ದಿವರಾತ್ರೆ | | ೮-೩೫೮-೩೯೧ |
| *ಆಗಸವೆಂಬಾ ಭೂಮಿಯ | | ೮-೧೯೧-೩೬೩ |
| ಆಗಳುಮಾ ತಳೋದರಿಗೆ ಮೇಖಲೆ | ಅನಂತನಾಥ, ೧೧-೭೬; ಸೂಕ್ತಿ, ೮-೧೩೮, | ೮-೧೬೭-೩೫೯ |
| ಆಗಳುಮುಳ್ಳೆಲರ್ದಲರ್ವ | ಜಗನ್ನಾಥವಿಜಯಂ, ೯-೯೩; | ೪-೪೦೯-೧೬೭ |
| *ಆಗಳಿಚ್ಚೆರಲಬಾಣಂ | | ೧೫-೬-೫೯೪ |
| *ಆ ಜನನಾಯಕನ ನಿಧಾ | | ೫-೯೮-೭೩೧ |
| *ಆಡುವ ಹಕ್ಕಿ ವಾಜಿಸುವ | ಸೂಕ್ತಿ, ೪-೧೪೯; | ೪-೫೯೫-೧೯೧ |
| *ಆಡುವರಾಪ್ತರಿಲ್ಲದಕೆ ನಿನ್ನೊಳೆ | | ೧೫-೭೦೧-೬೦೦ |
| *ಆಡೆ ಕುರುಳ್ ನೊಸಲ್ವಿಡಿದು | | ೮-೫೯೫-೪೭೯ |
| *ಆತನ ರಾಜಮಂದಿರದ ದೂರದ | | ೫-೫೧-೭೭೪ |
| ಆದರಿಸಂತೆ ಸಾರ್ವನುಪಚಾರಮ | ಗಿರಿಜಾಕಲ್ಯಾಣಂ, ೪-೧೫೭; | ೮-೩೭೪-೩೯೪ |
| *ಆರ್ದ್ರವನಿತಂಬವನಿ ಶಂ | | ೮-೪೪೪-೪೦೬ |
| ಆದುದು ನವಮಾಸಂಪು | ಗಿರಿಜಾಕಲ್ಯಾಣಂ, ೩-೪೧; | ೭-೧೫೩-೩೭೩ |
| ಆ ದೇವಿಯ ಬಡನಡುವಿನೊಳ್ | ಅನಂತನಾಥ, ೧೭-೩; | ೭-೧೩೯-೩೭೧ |
| ಆನಂದಮೂರ್ತಿ ಸುಖಿ ಲ | ಜಗನ್ನಾಥವಿಜಯಂ, ೩-೫೮; | ೬-೧೭೪-೩೭೭ |
| ಆ ನಗದಲ್ಲಿ ಪುಣ್ಯತತಿಯೊ ಪ್ರಭೆ | ಗಿರಿಜಾಕಲ್ಯಾಣಂ, ೧-೫೯; | ೩-೫೪-೩೮ |
| ಆನತ ಭೂಮಿಪಾಲಕುಲಂಗೆ | ಜಗನ್ನಾಥವಿಜಯಂ, ೨-೬೮; | ೭-೧೫-೩೦೦ |
| *ಆ ನೆಗಬ್ದಿಂದ್ರನಾ ಮದನನಾ | | ೫-೧೭೫-೨೩೪ |
| ಆನೆಗಬ್ದಿ ಮಹಾವಾರಿಧಿ | ಜಗನ್ನಾಥವಿಜಯಂ, ೧-೨೪; | ೨-೩೯-೨೮ |
| ಆನೆ ಮದಸಂಗೆ ಪೊಸಮದ | ಲೀಲಾವತಿ, ೯-೧೧೨; | ೧೦-೭೭-೪೫೮ |
| *ಆನೆಯುಮಲ್ಲಿ ಮುಂದಿಗೋಡಗದಂತಿಪೆ | | ೧೩-೨೨-೫೪೮ |
| ಆನೆಯನೆತ್ತಿಯುಂ ಬಿರಿವಿನಂ | ಲೀಲಾವತಿ, ೮-೩೭; | ೩-೨೨೨-೬೭ |
| *ಆನೇಂ ಕಾಂತೆಯುರೂಪನೇನುಸುವ | | ೬-೧೧೨-೨೬೫ |
| *ಆನೊಳಗಾಗಿರೆ ಕೇಳಿಲಿ ಭಾಮಿನಿ | | ೭-೬೫-೩೦೯ |

| | | |
|---|---|---|
| ನಿರುಪಮರೂಪನುಪ್ರತಿನು | ಜಗನ್ನಾಥವಿಜಯಂ, ೧೧-೬೫ | ೫-೧೬-೨೧೮ |
| ನಿರುಪಮ ಸುಕುಮಾರತೆಯಂ | ಲೀಲಾವತಿ, ೩-೮<br>ಸೂಕ್ತಿ ೯-೩ | ೯-೩-೪೩೧ |
| *ನಿಱು ನಸುಪಾಱಿತ ಕಂಪಿನಿಸು | | ೮-೧೪೫-೩೫೫ |
| *ನಿಱುಯಂ ಸೂಸಿ ಕಲಂಕಿ | ಸೂಕ್ತಿ ೧೨-೧೯ | ೧೨-೧೯-೫೨೮ |
| *ನಿಱುಯ ಸೆಱಂಗನೆತ್ತಿ | ಸೂಕ್ತಿ ೪-೧೪೨ | ೪-೨೧೦-೧೩೦ |
| *ನಿಱುಸೊಪ್ಪಾದುದು ಕೋಡಗಂ | ಸೂಕ್ತಿ ೧೧-೬೦ | ೧೧-೯೦-೫೨೧ |
| *ನಿಲ್ಕೆ ಶಬರಾಳಿಯೆಚ್ಚ ಸ | | ೩-೨೮೮-೭೭ |
| *ನಿಲ್ಲದೆ ತಮೋಗಜಂ ಕಿಱು | ಸೂಕ್ತಿ ೯-೫ | ೯-೬-೪೩೨ |
| *ನಿಲ್ಲದೆ ಕಣ್ಗಳೊಳ್ ಪೊಳೆದು | | ೬-೨೪೭-೨೮೫ |
| *ನಿಶಿ ಬಿಟ್ಟೋಡೆ ಶಶಾಂಕನು | ಸೂಕ್ತಿ, ೯-೭೫ | ೯-೧೧೧-೪೫೧ |
| *ನಿಳಯದ ಸೂರಿನೊಳ್ ತರಜೆ | | ೧೦-೧೭೪-೪೮೩ |
| ನಿಳಯಕ್ಕೋರೊಂದು ಕೇಳೀ | ಜಗನ್ನಾಥವಿಜಯಂ, ೯-೯೬ | ೪-೬೦೬-೧೯೩ |
| *ನೀತಿಯೆ ರೂಪುಗೊಂಡ ತೆಱದಿಂ | ಸೂಕ್ತಿಸುಧಾರ್ಣವಂ, ೫-೨೧ | ೫-೩೬-೨೨೧ |
| ನೀನೆಱಗಿರ್ದ ಮನ್ಮನನುನಿನ್ನೆಱಗಿ | ಜಗನ್ನಾಥವಿಜಯಂ, ೧೬-೧೩೨ | ೮-೩೮೬-೩೯೬ |
| ನೀರ್ ಮೊಗಸಿ ಪೊಯ್ಯೆ ಬಿರ್ಚಿದ | ಅನಂತನಾಥಪುರಾಣಂ, ೭-೪೭<br>ಸೂಕ್ತಿ, ೧೨-೫೩ | ೧೨-೭೧-೫೩೮ |
| ನೀರದೋತ್ಪಲವರ್ಣನಾಡಿದ | ಜಗನ್ನಾಥವಿಜಯಂ, ೩-೫೪ | ೭-೧೬೩-೨೩೫ |
| *ನೀರಧಿಯ ನೀರ್ಗೆ ದೋಷಾ | | ೧೦-೨೪೦-೪೯೪ |
| ನೀರಾಟವಾಡಿ ಪೊಱಮಡು | ಅನಂಥನಾಥಪುರಾಣಂ ೭-೫೦<br>ಸೂಕ್ತಿ. ೧೨-೮೭ | ೧೨-೭೭-೫೩೯ |
| *ನೀರಿಲ್ಲದ ಬಱುಸಾಣೆಯ | | ೪-೬೪೨-೨೦೨ |
| ನೀರೂಡುವಂತೆ ಮದನನ | ಲೀಲಾವತಿ, ೯-೧೩೧ | ೧೫-೧೩೫-೫೮೯ |
| *ನೀರೆಱೆದುಪಕಾರಕ್ಕೆಳೆ | | ೪-೨೫೬-೧೩೭ |
| ನೀರೇಜವದನೆ ತಿಱಿದಳ್ | ಲೀಲಾವತಿ, ೧೩-೭೭<br>ಸೂಕ್ತಿ. ೧೧-೪೦ | ೧೧-೫೦-೫೧೫ |
| *ನೀರೊಳೆ ಗಂಧದಿಂದರೆವು | | ೪-೬೬೦-೨೦೧ |
| ನೀಱಿ ನಿರೀಕ್ಷಿಸುತ್ತೆ ಮಣಿ | ಲೀಲಾವತಿ, ೧೨-೨೨ | ೮-೪೦೦-೩೯೯ |
| *ನೀಱಿಯನಂಬುಜದೊಳ್ ನೀ | | ೮-೭೨-೩೪೨ |
| *ನೀಲದ ಕಂಪನೊಟ್ಟ | | ೪-೨೩೫-೧೩೪ |
| ನೀಲದ ಕೋಡುಂಗಲ್ಗಳ | ಲೀಲಾವತಿ, ೯-೩೪.<br>ಸೂಕ್ತಿಸು. ೩-೨೦ | ೩-೧೮೩-೬೦ |

| | | |
|---|---|---|
| *ಪಲವುಂ ರತ್ನಾಂಶು ತಳ್ತೊಪ್ಪಿದ್ದ | ಸೂಕ್ತಿ ೨-೭ | ೨-೨೬-೨೫ |
| *ಪಲ್ಲವತಳ್ಪದೊಳ್ ಮಲಯಜ | | ೧೫-೧೯೯-೫೯೯ |
| ಪಸರಿಸಿ ಕಟ್ಟಿ ಚೂತ ಗುಡಿಯಂ | ಲೀಲಾವತಿ ೯-೧೦೫ | ೪-೩೪೦-೧೫೦ |
| | ಸೂಕ್ತಿ ೧೦-೬೦ | |
| *ಪಸಿದ ಚಕೋರಿಗಳ್ ದ್ವಿಜ | ಸೂಕ್ತಿ ೮-೨೫೩ | ೮-೨೯೨-೩೮ |
| *ಪಸಿದ ಚಕೋರಿಗಳೆಲ್ಲಕೆ | | ೮-೨೦೩-೩೬೫ |
| *ಪಸಿದೞುತಿರ್ಪ ಬಾಲಕನ ನಾದ | ಸೂಕ್ತಿ ೭-೬ | ೭-೧೮-೩೦೧ |
| *ಪಸಿದು ದಿನೇಶನೆಂಬ ಪಿಶಿತಾಮಣ | ಸೂಕ್ತಿ ೮-೨೫೯ | ೮-೨೭೭-೩೭೭ |
| ಪಸಿಮೊಡೆ ಸಲ್ಲಕೀಕಿಸಲಯಂ | ಚಂದ್ರಪ್ರಭಪುರಾಣಂ ೫-೬೪ | ೩-೧೬೦-೫೬ |
| | ಸೂಕ್ತಿ ೩-೫೦ | |
| ಪಸಿವಿಂ ದಾವಾನಳಂ ಸುಟ್ಟುರಿಪ | ಗಿರಿಜಾಕಲ್ಯಾಣಂ ೯-೨೮ | ೧೦-೧೦೪-೪೭೨ |
| ಪಸುರೊಳಸಾರೆ ಬೆಳ್ಪು | ಲೀಲಾವತಿ ೯-೧೦೫ | ೪-೪೫೦-೧೬೮ |
| ಪಸುರ್ವುಲ್ಲಂ ಮೇದು ಸಂದೊಂದೆಡೆ | ಪಂಪರಾಮಾಯಣಂ ೭-೫೭ | ೧೦-೧೯೪-೪೮೭ |
| | ಮಲ್ಲಿನಾಥಪುರಾಣಂ ೮-೯೯ | |
| | ಸೂಕ್ತಿ ೧೦-೧೯೬ | |
| *ಪಳಸಿನ ಜಂತೆ ಚಂದನದ | | ೪-೨೫೧-೧೩೬ |
| *ಪಳುಕಿನ ಕೋಂಟೆ ಬಟ್ಟಪೆನೆ | | ೪-೫೪೮-೧೮೩ |
| *ಪಳುಕಿನ ಬಟ್ಟುಗಳ್ ಗಗನದಿಂದು | | ೧೦-೧೪೭-೪೭೯ |
| ಪಳುಕಿನ ಭೃಂಗಾರದ ಜಿ | ಚಂದ್ರಪ್ರಭಪುರಾಣಂ ೬-೫೧ | ೬-೧೭-೨೫೦ |
| | ಸೂಕ್ತಿ ೬-೧೪ | |
| *ಪ್ರತಿಬಿಂಬಿಸಿದರ್ಧೇಂದುವ | | ೮-೫೫೩-೪೨೨ |
| *ಪ್ರತಿಮೆಯ ಪೂಜೆ ದೇವತೆಯ | | ೮-೧೬೧-೩೫೮ |
| ಪ್ರಮದೆಯರಂ ಮನೋಭವನೆ | ಚಂದ್ರಪ್ರಭಪುರಾಣಂ ೭-೧೩೩ | ೧೨-೭೫-೩೫೬ |
| | ಸೂಕ್ತಿ ೧೨-೪೧ | |
| ಪಾಡುವರೊಂದು ದಿಕ್ಕು ಪರಿಪಾಸಕ | | ೫-೩೨-೨೨೧ |
| ಪಾದಱಿಗೆ ಪುಷ್ಪವತಿಗೊಳ | ಲೀಲಾವತಿ ೯-೧೧೪ | ೪-೪೪೨-೧೬೭ |
| *ಪಾದರಿನವೆಸರ ನಿಂದೆಗ | | ೪-೪೯೨-೧೭೪ |
| ಪಾದರಿಯ ಸಿಂಧುವಾರದ | ಲೀಲಾವತಿ ೧೧-೫೨ | ೬-೩-೨೪೭ |
| ಪಾಪ್ಪ ಕುಚಂಗಳಂ ಮಿಡಿದು | ಲೀಲಾವತಿ ೭-೫೦ | ೭-೭೩-೩೦೦ |
| | ನೇಮಿನಾಥಪುರಾಣಂ ೨-೧೦ | |
| | ಸೂಕ್ತಿ ೭-೨೫ | |
| ಪಾರದೆ ಕಾಮುಕಪ್ರಜಮನಾರ್ದ | ಜಗನ್ನಾಥವಿಜಯಂ ೨-೧೧ | ೪-೩೯೯-೧೬೭ |

| | | |
|---|---|---|
| ಸ್ತನಕುಂಭದ್ವಿತಯಂಗಳೊಳ್ | ಅನಂತನಾಥಪುರಾಣಂ ೭-೫೩ | ೧೨-೮೧-೫೩೯ |
| | ಸೂಕ್ತಿ ೧೨-೯೧ | |
| ಸ್ತನಚೀರಾಂಶುಕಭಾರವುಂ | ಲೀಲಾವತಿ ೧೭-೪೦ | ೪-೧೧೯-೧೩೧ |
| *ಸ್ತನದತಟೋಪಳಸ್ಫುರಿತ ಮನ್ಮಥ | | ೧೦-೧೪೪-೪೭೮ |
| *ಸ್ತನದಿಂ ಮುಖದಿಂದೊಪ್ಪುವ | | ೭-೧೩೮-೩೨೦ |
| *ಸ್ತನಪುಳಿನದಲ್ಲಿ ಸೂಸಿದ | | ೬-೨೫೯-೨೮೭ |
| *ಸ್ತನಮಂ ಮಾಡಿ ಕಪೋಲವುಂಡ | | ೬-೧೦೨-೨೬೪ |
| *ಸ್ತನಮಂ ಮಾಡುತೆ ಮಾಡಿ ಶಂಕಿ | | ೬-೧೦೦-೨೬೪ |
| ಸ್ತನಮುರಪೊಳುರ್ಚಿತೆಸೆ ಮಿಗೆ | ಲೀಲಾವತಿ ೧೩-೯೬ | ೧೧-೬೧-೫೧೭ |
| ಸ್ತನಲಕ್ಷ್ಮಿ ತ್ರೈಲೋಕನಂ ಸಿಂಪಿಪೆ | ಜಗನ್ನಾಥವಿಜಯಂ ೧೪-೧೦೫ | ೧೨-೫೫-೫೩೪ |
| *ಸ್ತನಶೈಲೋದ್ಭೂತಗಂಗಾನದಿಯೆನಿ | | ೧೪-೪೮-೫೫೬ |
| *ಸ್ತನಸಂಗಮಿರಲ್ ಸದ್ಯ | | ೬-೧೩೦-೨೬೮ |
| ಸ್ತನಿತಘನ ಬೃಂಹಿತಂ ದು | ಚಂದ್ರಪ್ರಭಪುರಾಣಂ ೪-೩೨ | ೧೦-೧೩೨-೪೭೬ |
| ಸ್ಫಟಿಕದ ಕುಟ್ಟಿಮಂ ಶಶಿಶಿಲಾಮಯ | | ೪-೭೩೯-೨೧೪ |
| *ಸ್ಮರಕರಡಿಂಡಿಮಸ್ವನಮನೇಳಿಸೆ | | ೫-೨೯-೨೨೦ |
| *ಸ್ಮರಕರಿಣೀ ಹಸ್ತಾಗ್ರಂ | | ೬-೨೬೧-೨೮೭ |
| *ಸ್ಮರಕರಿಯಾಡುವಾ ವಿಪಿನ | | ೧೦-೨೨೫-೪೯೨ |
| *ಸ್ಮರಕೃತಕಾಚಲಶಿಖರಾಂ | | ೧೧-೨೧-೫೧೦ |
| *ಸ್ಮರಗೆ ವಸಂತಚಮೂಪಂ | | ೪-೪೭೪-೧೭೨ |
| *ಸ್ಮರನೆಂಬ ತೋಂಟವಾಳಿಗ | | ೬-೧೪೫-೨೭೦ |
| *ಸ್ಮರಪರಿತಾಪದಿಂ ಕರಗಿ ಕೋಟಲೆ | ಸೂಕ್ತಿ ೯-೭೪ | ೯-೧೦೯-೪೫೦ |
| *ಸ್ಮರರಾಜಂ ವನಪಾಲನಾಗೆ ರತಿ | | ೧೧-೩೪-೫೧೨ |
| ಸ್ಮರರಾಜಕೇಳಿ ಕಮಲಾ | ಕಾದಂಬರಿ ಪೂ. ಭಾ. ೩೩೩ | ೭-೪೪-೩೦೫ |
| *ಸ್ಮರರಾಗಕ್ಕಂತರಾಯಂ ಜಲನಿಧಿ | ಸೂಕ್ತಿ ೧೦-೧೨೭ | ೧೦-೮೦-೪೬೮ |
| *ಸ್ಮರರಾಮಂ ಲಾವಣ್ಯದ | | ೬-೧೬೧-೨೭೩ |
| *ಸ್ಮರನರಲಂಬಿನಿಂದೆರಡು ಲಕ್ಷ್ಯಮ | | ೩-೨೯೩-೭೮ |
| ಸ್ಮರವಶದಿನನ್ಯಜನ್ಮಾಂ | ಶೃಂಗಾರರತ್ನಾಕರಂ ೪-೭೦ | ೧೫-೨-೫೬೬ |
| | ಸೂಕ್ತಿ ೧೫-೨ | |
| *ಸ್ಮರಶರಶಾಸ್ತ್ರವಲ್ಲದುಟೀದಾಡುವ | | ೮-೫೧೮-೪೧೭ |
| ಸ್ಮರಶಿಖಿಯಂ ವಿಯೋಗಿಹೃದಯ | ಪಾರ್ಶ್ವನಾಥಪುರಾಣಂ ೧೭-೨೧ | ೮-೨೫೪-೩೭೩ |
| | ಸೂಕ್ತಿ ೮-೨೦೦ | |
| *ಸ್ವರ್ಗಫಲಮಂ ಸ್ವಕೀಯಭು | | ೩-೯೮-೪೫ |

# ಕಾವ್ಯಸಾರದಲ್ಲಿ ಆಕರಗಳು ಸಿಕ್ಕದಿರುವ ಪದ್ಯಗಳ ಅಕಾರಾದಿ

**ಸೂಚನೆ:** ಒಂದು ನಕ್ಷತ್ರ ಚಿಹ್ನೆ ಇರುವ ಪದ್ಯಗಳು ಸೂಕ್ತಿ ಸುಧಾರ್ಣವದಲ್ಲಿಯೂ ಎರಡು ನಕ್ಷತ್ರ ಚಿಹ್ನೆಗಳಿರುವವು ಕಾವ್ಯಾವಲೋಕನದಲ್ಲಿಯೂ ಉಪಲಬ್ಧವಾಗುವ ಆಕರವಿಲ್ಲದ ಪದ್ಯಗಳು

ಅಂಗಜತಾಪದಿಂ ಕೊರಗಿದಬ್ಜ
ಅಂಗಡಿಗಳ್ ಪಲವವಱತೊಳ್
ಅಂಗದ ರತ್ನಕೌಸ್ತುಭಮಣಿ
ಅಂಗನೆಯಲ್ಲಿಗೊರ್ವವಿರಹಾ
ಅಂಗಭವಾಗಮಾಂಕುರನೊ
ಅಂಗೈಯುಗಲದ ಜೊಟ್ಟಂ
ಅಂತು ಬೆಡಂಗನಾಳ್ದ ಕಳಿಕಂ
ಅಂದಂಬರಾಂಗನೆಯ ಮುಳಿ
ಅಂಬರಗಂಗಾತೀರದೊಳ್
ಅಂಬರದಿಂದೆಯ್ತಂದೀ
ಅಂಬುಜದಳನೇತ್ರನ
ಅಂಬುಜಪತ್ರಕ್ಕೆಱಗಿದ
ಅಂಬುಜಪತ್ರನೇತ್ರೆಯರ
ಅಂಬುಜಮಿಲ್ಲಿ ಬಾಲಶಶಿಯಿಲ್ಲಿ
ಅಂಬುಜವಕ್ತ್ರೆ ನಿನ್ನ ಮುಖಮ
ಅಂಬುಜ ಸೂತ್ರಮೆಂಬ ಪೆಣೆ
ಅಂಬುವನೆಱೆತಿವಾಗಲ್ ಪ್ರತಿ
ಅಂಬುವಿನೊಳಗೆ ನಿಜಪ್ರತಿ
ಅಕ್ಕಱು ಮಿಗೆ ತಾರಗೆಗಳ್
ಅಕ್ಷರದೊಳಗಾವುದು ಸುಖ
*ಅಗತಟಮನೆ ಸಾರ್ಚಿ ಮುಗಿಲ್
ಅಗಲಂಬೆತ್ತುರುವಕ್ಷದಿಂ
ಅಗಲದ ಚಕ್ರಮುಂ ಕರಿಣಮಲ್ಲ
ಅಗಲಿ ಶರೀರದಿಂದುಱಿಸನಲ್ಲ
ಅಗಿಲುಂ ಚಂದನ ಕುಂಕುಮ
ಅಗಿಲುರೆ ಪಾಟಲೀಕುಸುಮ
ಅಗ್ಗಳನೆಂಬಾನಾಯ
ಅಚ್ಚರಿಯಿದು ಪೊಗಟ್ವರ ಬಗೆ
ಅಡರ್ದ ಮೊಲೆಗೊಂಡ ಬಿಣ್ಪಿಂ
ಅಡರ್ದೆಲೆವಳ್ಳಿಗಳೆಲೆಯಂ
ಅಡರ್ದೊಂಡೊಂದಱ ಬೆನ್ನಂ
*ಅಡವಿಯ ಹುಲ್ಲೆಗಳ್ ಬರೆದ
ಅಡವಿಯೊಳಾರ್ದು ಜೇಡವಡೆ
*ಅಡಸಿದೊಡೆಕ್ಕಲಂ ತಗುಳ್ದು
ಅಡಿಮುಡಿ ಜಂಘೆ ನುಣ್ಗೊರಳು
*ಅಡಿಯಡಿಯೊಳ್ ತೊಡೆ ತೊಡೆ
*ಅಡಿಯೊತ್ತುವ ಬೇಸಗೆಯೊಳ್
ಅಣಿಯದದಿನತನು ತನುಲತೆ
ಅತನು ಗಡಾ ಭಟಂಗೆ
ಅತನು ಪುರಾಧಿಪಂ ತಳವರಂ
ಅತಿಘೋರಧ್ವಾಂತಪೂರಂ ಬಹು
ಅತಿಬಿಸುಪೇರ್ದು ತಾನಱಿದು
ಅತಿರಾಗಂಬೆತ್ತುಂ ಗತಾ
ಅತಿಶಯ ಶುಕ್ಲಪಕ್ಷ ಶುಭದಂ
ಅದನೇನೆಂಬೆನಜಂ ಸಮಂತವಳ
*ಅದನೇವೇಟ್ವುದೊ ಮನ್ಮಥಾಗ್ನಿ
ಅದಱೊಳ್ ಪುಟ್ಟಿದ ಗಂಡರೆಲ್ಲಂ
*ಅದಿಮೂರ್ತ್ತಿಯ ನನೆಯಿಂ
ಅದು ಕಂದಿಲ್ಲದ ಚಂದ್ರಬಿಂಬಂ
*ಅದು ಜಂಬೂದ್ವೀಪಮುಂ

ಅದು ಮತ್ತೆಂತನೆ ನೀರ್ಗಳೆ
ಅದು ಪೂರ್ವಾಂಗನೆಯಿಡೆ
ಆ ಧ್ವನಿ ಪೊಣ್ಮೆ ಪೊಯ್ಯಲುದಿರ್ದ
ಅನಿಮಿಷದೃಷ್ಟಿಯಾಗಿಯುಂ
ಅನಿಮಿಷದೃಷ್ಟಿಯೂರ್ಧ್ವಮುಖ
ಅನುದಿನವೆಯ್ದೆ ತನ್ನಿನಿಯ
ಅನ್ನೆಯುಮುಂಟೆಯಾ ಭೂಪನ
ಅಮರಾಸುರರ್ಕಳೀರ್ವರ್
ಅಮೃತಕರಸಂಗಮಂ ಮಾ
ಅರಗಿಳಿ ತೇಜಿಯನಡಱಿಯೆ
*ಅರಲಸರಲ್ ಸರಲ್ಗಿಡೆ
ಅರಸಂಗೈವುದೆ ಪೇಟಿ ಪೆಣ್ಗೊಲೆಗೆ
ಅರಸಿ ಪೆಱಗೇಱಿ ಮದವ
ಅರಳದ ಪುಷ್ಪದಂತೆ ಮುಗುಳಂ
ಅರಿಗಳ ನೊಸಲಕ್ಕರವೇಂ
ಅರಿಗಳ ಶೂನ್ಯಮಂದಿರದ ಸೌಧ
ಅರಿನೃಪರಂಗ ರಕ್ತ ಜಲಕೇಳಿಯ
ಅರುಣಾಂಶುಗಳಿಂ ಪಶ್ಚಿಮ
*ಅರುಣಾಧರೆ ಶಶಿಮುಖಿ
**ಅರೆ ಎಡೆ ಹಸ್ತಿ ಶಿಕ್ಷಣವಿಚಕ್ಷಣ
ಅರೆನೇರಿಲ್ ತಾರೆ ತುಂಬುರ್ತದಿ
ಅರೆಮುಗಿನಬ್ಜಮುಳ್ಳಲರ್ವ ಕೈರವ
ಅಱತೆಯೆರ್ದೆಯಾಱಿ ಪೀರ್ದು
ಅಱಿಪಿ ಸುಱಿಸುಱಿದು ನಲ್ಲಳ
ಅಲರ್ಗಣ್ ಕೆಂಪಡರಲ್ಕೆ ಪೊಂಗಿದ
ಅಲರ್ಗಣ್ಣಿಂ ಪೂವಿನಂಬಂ
ಅಲರ್ಗಳ್ ಗಂಧಕ್ಕಲ್ಲದೆ
ಅಲರ್ಗಳ ಬಂಡು ಪೂಸಿದ
ಅಲರ್ದಿರ್ದಂಭೋಜಷಂಡಂಗಳ
ಅಲರಂಬಿಂಗಣಸಂ ಮಣಿ
ಅಲರಂಬೈದೊಂದೆ ಬಿಲ್ಲಿಂತಿವ
ಅಲರ್ವಿಲ್ಲನೆಂಬ ಬಾಲಂ

ಅದು ಸರಿಸದಱಿವನಾಗರ
*ಅದಟರ್ನಳುರ್ಕೆಯಿಂ ಮೆಱಿವೆ
ಅನವಧಿಕಾಲಾಸನದಿಂ
*ಅನಿಮಿಷನಪ್ಪೆಂ ಕಂಡೊಡೆ
ಅನಿಲಾಂದೋಳಿತ ಪಾದಪಾಗ್ರ
ಅನುರಾಗರಸವಿಳಾಸಿನಿ
ಅಪ್ಪಪ್ಪೆನುತ ಪರಿತಂ
ಅಮಳೋತ್ಪಳಿನಿಗೆ ಮಧ್ಯದೊ
ಅಮೃತ ವಿಷಂಗಳತೆಱದಿಂ
*ಅರಗಿಳಿ ದರ್ಭೆ ಪೂತರಳ್ವೆ
ಅರವಿಂದನುಶೋಕಂ ಮಿಗೆ
ಅರಸಿನವಿಲ್ಲೆಂಬರಸಂ
ಅರಸೆನಲೀಯದೆ ಕರುವಂ
ಅರಳುತಿರೆ ನಯನಕುಮುದಂ
ಅರಿಗಳ ರುಧಿರಮೆ ಪೊಯ್ನೀರ್
ಅರಿಚಮೆ ಪೋ ಮಾರೆಂಬೆಡೆ
ಅರಿಭೂವರರ ಶಿರಂಗಳ
ಅರುಣಾಕ್ಷಂ ರೌದ್ರರೂಪಂ
ಅರುಣಿಮ ರೋಮಽದಿಂ ಕಡು
ಅರೆಗಿಳಿ ಪಾರಿವಂ ಕುರಲಿ ಲಾವುಗೆ
ಅರೆಮೀಸೆ ಕಣ್ಣೊಳೊಂದೆ ಮ್ಮೆ
*ಅರೆವಸುರಾಯ್ತು ಹುಲ್ದೆನೆಯು
ಅಱವಟ್ಟಿಗೆಯೊಳ್ ಕುಡಿನೀರ್
*ಅಱಿಯದರವಿಂದದಲರಂ
*ಅಲರ್ಗಣ್ ಬೆಂಡೇಱಿ
ಅಲರ್ಗಣೆಯೇನು ಕೊರಮೊ
ಅಲರ್ಗಳನಾಂತ ಪಾದಂಗಳೊಳ್
ಅಲಘುಕುಚದ್ವಯಂ ಕಚಭರಂ
*ಅಲದೊರ್ಂಗಲ್ಗಳಿ ನೂಪುರಾಳಿ
ಅಲರಂಬಾಕೆಯ ಚಂದದಿಂ ಸುಱಿ
ಅಲರಿದ ವಕ್ತ್ರಕಂಜ ನೆಱಿ ಸೀದು
ಅಲ್ಪರಿಯೊಳ್ ಹೂಹೂಯೆಂ

